



ಬೆಳೆಯುವ ಪೈರನ್ನು ಮೊಳಕೆಯಲ್ಲಿಯೇ ಸಂರಕ್ಷಿಸಬೇಕು – ನಾಡಿನ ಅಭಿವೃದ್ಧಿಗೆ ಇಂದಿನ ಮಕ್ಕಳನ್ನು ಸುಶಿಕ್ಷಿತರನ್ನಾಗಿ ಸಜ್ಜುಗೊಳಿಸಬೇಕಾಗಿದೆ.

ಹಿಂದುಳಿದ ವರ್ಗ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಅಲ್ಪಸಂಖ್ಯಾತ ವರ್ಗಗಳ ಮೆಟ್ರಿಕ್ ನಂತರದ ಹಾಸ್ಟೆಲ್ ವಂಚಿತ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಮುಂದುವರೆಸಲು ಊಟ ಮತ್ತು ವಸತಿಗಾಗಿ ಮಾಸಿಕಭತ್ಯೆ ನೀಡುವ ಯೋಜನೆಯೇ **"ವಿದ್ಯಾಸಿರಿ"**.

**ಶ್ರೀ ಸಿದ್ದರಾಮಯ್ಯ**
ಸನ್ಮಾನ್ಯ ಮುಖ್ಯಮಂತ್ರಿಗಳು

**ಶ್ರೀ ಎಚ್. ಆಂಜನೇಯ**
ಮಾನ್ಯ ಸಮಾಜ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು




## ಯೋಜನೆಯ ಪ್ರಮುಖ ಅಂಶಗಳು

- ಊಟ ಹಾಗೂ ವಸತಿ ಸೌಕರ್ಯಕ್ಕಾಗಿ ಮಾಸಿಕ ಭತ್ಯೆ
- ಮಾಸಿಕ ರೂ.1,500/- ರಂತೆ ಹತ್ತು ತಿಂಗಳಿಗೆ ರೂ.15,000/- ಭತ್ಯೆ
- ಕಳೆದ ಮೂರು ವರ್ಷಗಳಲ್ಲಿ ಸುಮಾರು 2.20 ಲಕ್ಷ ವಿದ್ಯಾರ್ಥಿಗಳಿಗೆ ಅನುಕೂಲ
- ಕಳೆದ ಮೂರು ವರ್ಷಗಳಲ್ಲಿ ಯೋಜನೆಯ ಒಟ್ಟು ವೆಚ್ಚ ರೂ. 228.80 ಕೋಟಿ

ಪ್ರಕಟಣೆ : ನಿರ್ದೇಶಕರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

 ಕರ್ನಾಟಕ ವಾರ್ತೆ




ಜಾಗತಿಕ ಸ್ವರ್ಣ ಕೌನ್ಸಿಲ್‌ನ ಸದಸ್ಯರು

ಭಾರತದ ಏಕೈಕ ಚಿನ್ನದ ಉತ್ಪಾದಕರು

# ಶಿಲೆಯೊಳಗೆ ಅರಳಿದ ಕಾಂತಿಭರಿತ ಚಿನ್ನ

ಹಟ್ಟಿ ಚಿನ್ನದ ಗಣಿಯಲ್ಲಿ ಅಶೋಕನ ಕಾಲಕ್ಕಿಂತಲೂ ಮೊದಲೇ ಇಲ್ಲಿ ಗಣಿಗಾರಿಕೆ ನಡೆದಿರುವುದು ಪತ್ತೆಯಾಗಿದೆ. ದಾಖಲಾತಿಯ ಪ್ರಕಾರ ಹೇಳುವುದಾದರೆ, 1880-1920ರಲ್ಲಿ ಹೈದರಾಬಾದ್ ಡೆಕ್ಕನ್ ಕಂಪನಿಯೊಂದಿಗೆ ಜಾನ್ ಟೈಲರ್ಸ್ ಮತ್ತು ಮಕ್ಕಳು ಆಧುನಿಕ ಗಣಿಗಾರಿಕೆಯನ್ನು ಕೈಗೊಂಡರು. 1947ರಲ್ಲಿ ಹೈದರಾಬಾದ್ ಚಿನ್ನದ ಗಣಿ ಕಂಪನಿ ನಿಯಮಿತವನ್ನು ಸಂಘಟಿಸಿ ಕೆಲಸ ಮುಂದುವರೆಸಿತಾದರೂ, 1956ರಲ್ಲಿ ರಾಜ್ಯಗಳ ಪುನರ್ ವಿಂಗಡಣೆಯಿಂದ ಮೈಸೂರು (ಈಗಿನ ಕರ್ನಾಟಕ) ರಾಜ್ಯ ಉದಯವಾದಾಗ ಅದರ ಹೆಸರನ್ನು ಅದಿ ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ ಎಂದು ಮರುನಾಮಕರಣ ಮಾಡಲಾಯಿತು. 1971ನೇ ವರ್ಷದಲ್ಲಿ ಉತ್ಪಾದನೆಯನ್ನು 300 ಟನ್ನುಗಳಿಂದ 910 ಟನ್ನುಗಳಿಗೆ ಹೆಚ್ಚಿಸಲಾಯಿತು. ಇಂದು ಹಟ್ಟಿ ಗಣಿಗಾರಿಕೆಯು 528.35 ಹೆಕ್ಟೇರ್ ಭೂ ಪ್ರದೇಶವನ್ನು ಆವರಿಸಿದ್ದು, 84,670ಕೆ.ಜಿ.ಯಷ್ಟು ಚಿನ್ನವನ್ನು ಉತ್ಪಾದಿಸುತ್ತಿದೆ. ಇಂದು ಹಟ್ಟಿ ಗಣಿಗಾರಿಕೆಯು 1,341 ಹೆಕ್ಟೇರ್ ಭೂ ಪ್ರದೇಶವನ್ನು ಆವರಿಸಿದ್ದು, 86,252ಕೆ.ಜಿ.ಯಷ್ಟು ಚಿನ್ನವನ್ನು ಉತ್ಪಾದಿಸುತ್ತಿದ್ದು ಇಲ್ಲಿಯವರೆಗೆ ಒಟ್ಟು 21.93 ಮಿಲಿಯನ್ ಟನ್‌ಗಳಷ್ಟು ಅದಿರು ಗಣಿಗಾರಿಕೆ ಮಾಡಿದೆ.

## ನಮ್ಮ ಪರಿಸರ ಕಾಳಜಿ



### ಭಾರತದಲ್ಲೇ ಪ್ರಮುಖ ಜೈವಿಕ-ಇಂಧನ ಆರಂಭಿಕದಾರರಾಗಿದ್ದೇವೆ

- ಚಿತ್ರದುರ್ಗ ಚಿನ್ನದ ಘಟಕದಲ್ಲಿ 11.40 ಮೆ.ವ್ಯಾ. ಸಾಮರ್ಥ್ಯದ ಗಾಳಿ ಯಂತ್ರವನ್ನು ಸ್ಥಾಪಿಸಿದೆ
- ಪರಿಸರ ನಿರ್ವಹಣೆಗಾಗಿ ಉದ್ಯಾನವನಗಳ ಅಭಿವೃದ್ಧಿ, ಅರಣ್ಯೀಕರಣ, ಪರಿಸರ ಪ್ರಯೋಗಾಲಯಗಳ ಸ್ಥಾಪನೆ ಮತ್ತು ಸೆಲ್‌ಗಳು
- ನೀರು, ಇಂಧನ, ಅರಣ್ಯ, ತ್ಯಾಜ್ಯ ನಿರ್ವಹಣೆ, ಮಳೆ ನೀರು ಕೊಯ್ಲು, ಇವುಗಳ ಬಗ್ಗೆ ಶಾಲಾಕಾಲೇಜುಗಳಲ್ಲಿ ಜಾಗೃತಿ ಅಭಿಯಾನವನ್ನು ನಡೆಸುವುದು
- ಉತ್ತರ ಕರ್ನಾಟಕಕ್ಕಾಗಿ 43.21 ಹೆಕ್ಟೇರಿನಲ್ಲಿ ಜೈವಿಕ ಇಂಧನ ಪಾರ್ಕ್‌ನ್ನು ಸ್ಥಾಪಿಸಿದೆ
- ಪಳೆಯುಳಿಕೆ ಇಂಧನಗೆ ಪರ್ಯಾಯವಾಗಿ ತ್ಯಾಜ್ಯವನ್ನು ಬಳಸಿ ಜೈವಿಕ ಡೀಸೆಲ್ ಉತ್ಪಾದನಾ ಸ್ಥಾವರವನ್ನು ಸ್ಥಾಪಿಸುವುದು

## ನಮ್ಮ ಸಾಮಾಜಿಕ ಜವಾಬ್ದಾರಿ



### ತೃಣಮೂಲದಿಂದಲೂ ಅಭಿವೃದ್ಧಿಯನ್ನು ಸಾಧಿಸುತ್ತ ಬಂದಿದೆ

- ಶೈಕ್ಷಣಿಕ ವಿದ್ಯಾಕೇಂದ್ರಗಳನ್ನು ನಿರ್ಮಿಸುವುದರೊಂದಿಗೆ 10,500 ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸವನ್ನು ಒದಗಿಸಿದೆ
- ಹಟ್ಟಿ ಸುತ್ತಮುತ್ತಲಿನ ಗ್ರಾಮಗಳಿಗೆ ಕುಡಿಯುವ ನೀರಿನ ಸೌಕರ್ಯವನ್ನು ಒದಗಿಸಿದೆ
- ಹಟ್ಟಿಯಲ್ಲಿ ಸಮುದಾಯ ಶೌಚಾಲಯಗಳನ್ನು ನಿರ್ಮಿಸುವುದು ಮತ್ತು ಉಟಿ ಹಾಗೂ ಹಿರಾ-ಬುದ್ದಿನಿ ಗ್ರಾಮಗಳಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ
- ಹಟ್ಟಿಯಲ್ಲಿ ಬಸ್ ನಿಲ್ದಾಣವನ್ನು ಸ್ಥಾಪಿಸಿದೆ
- ಪ್ರವಾಹ ಪೀಡಿತ ಸಂತ್ರಸ್ತರಿಗಾಗಿ 900 ಮನೆಗಳನ್ನು ನಿರ್ಮಿಸಿಕೊಟ್ಟಿದೆ
- ಹಟ್ಟಿಯಲ್ಲಿ ಕೇಂದ್ರೀಯ ವಿದ್ಯಾಲಯ ಶಾಲೆಯನ್ನು ಸ್ಥಾಪಿಸಿದೆ
- 250 ಕೋಟಿ ವೆಚ್ಚದಲ್ಲಿ 3 ತಾಲ್ಲೂಕುಗಳ ಅಭಿವೃದ್ಧಿಗೆ ಮಾಸ್ಟರ್ ಪ್ಲಾನ್ ರೂಪಿಸಿದೆ

India's only producer of Gold

**ದಿ ಹಟ್ಟಿ ಚಿನ್ನದ ಗಣಿ ಕಂಪನಿ ನಿಯಮಿತ**

(ಕರ್ನಾಟಕ ಸರ್ಕಾರದ ಒಂದು ಉದ್ಯಮ)

ಹಟ್ಟಿ 584115, ರಾಯಚೂರು ಜಿಲ್ಲೆ, ಕರ್ನಾಟಕ, ಭಾರತ.

ದೂರವಾಣಿ: +91-8537-275022

ನೋಂದಣಿ ಕಛೇರಿ:

3ನೇ ಮಹಡಿ, ಕೆಹೆಚ್‌ಬಿ ನ್ಯೂ ಶಾಪಿಂಗ್ ಕಾಂಪ್ಲೆಕ್ಸ್,

ರಾಷ್ಟ್ರೀಯ ಕ್ರೀಡಾ ಗ್ರಾಮ, ಕೋರಮಂಗಲ (ಅಂಚೆ),

ಬೆಂಗಳೂರು - 560047, ಭಾರತ.

ದೂರವಾಣಿ: +91-80-25705723/25705725

ಇ-ಮೇಲ್: hgml@vsnl.com

www.huttigold.co.in

# ಶಬ್ದಮಾಲಿನ್ಯ ನಿಯಂತ್ರಣಕ್ಕೆ ಎಲ್ಲರೂ ಕೈಜೋಡಿಸೋಣ



## ಶಬ್ದಮಿತಿಯ ಪ್ರಮಾಣ (ಡೆಸಿಬೆಲ್‌ಗಳಲ್ಲಿ)

| ಪ್ರದೇಶ | ಹಗಲು (ಗರಿಷ್ಠ) | ರಾತ್ರಿ (ಗರಿಷ್ಠ) |
|---|---|---|
| ಕೈಗಾರಿಕಾ ಪ್ರದೇಶ | 75 | 70 |
| ವಾಣಿಜ್ಯ ಪ್ರದೇಶ | 65 | 55 |
| ವಸತಿ ಪ್ರದೇಶ | 55 | 45 |
| ಶಬ್ದ ಸೂಕ್ಷ್ಮ ಪ್ರದೇಶ | 50 | 40 (ಶಾಲೆ, ಕೋರ್ಟ್ ,ಆಸ್ಪತ್ರೆ ಇತ್ಯಾದಿ) |

### ಶಬ್ದಮಾಲಿನ್ಯ (ನಿಯಂತ್ರಣ) ಕಾಯಿದೆಯ ನಿಯಮಗಳು

- ಆಸ್ಪತ್ರೆ, ಶೈಕ್ಷಣಿಕ ಸಂಸ್ಥೆ, ಕೋರ್ಟ್ ಪ್ರದೇಶಗಳ ಸುತ್ತಮುತ್ತಲಿನ 100 ಮೀಟರ್ ವ್ಯಾಪ್ತಿ ಶಬ್ದರಹಿತವಾಗಿರಬೇಕು.
- ಸಾರ್ವಜನಿಕ ಸ್ಥಳದಲ್ಲಿ ಧ್ವನಿವರ್ಧಕಗಳನ್ನು ಅಳವಡಿಸಿಕೊಳ್ಳಬೇಕಾದರೆ ಸಂಬಂಧಿಸಿದ ಪೊಲೀಸ್ ಅಧಿಕಾರಿಗಳಿಂದ ಲಿಖಿತರೂಪದಲ್ಲಿ ಅನುಮತಿ ಪಡೆದುಕೊಳ್ಳಬೇಕು.
- ರಾತ್ರಿ 10 ಗಂಟೆಯಿಂದ ಬೆಳಗ್ಗೆ 6 ಗಂಟೆ ಸಮಯದಲ್ಲಿ ಸಾರ್ವಜನಿಕ ಪ್ರದೇಶದಲ್ಲಿ ಧ್ವನಿಯಂತ್ರಕಗಳನ್ನು ಬಳಸಬಾರದು.

### ಹಾರ್ನ್ ಮಾಡಲೇಬೇಡಿ

ಪಾದಚಾರಿಗಳ ಹಿಂದೆ ದಿಢೀರನೆ ಹಾರ್ನ್ ಮಾಡಿ ಅವರನ್ನು ಗಾಬರಿಪಡಿಸಬೇಡಿ. ಕೆಲವೇ ಗಳಿಗೆಗಳಲ್ಲಿ ಖಂಡಿತ ಅವರು ಸರಿಯುತ್ತಾರೆ. ಒಂದರ ಹಿಂದೆ ಒಂದರಂತೆ ಚಲಿಸುವಾಗಲೂ ಹಾರ್ನ್ ಮಾಡಬೇಡಿ. ಡಿಮ್–ಡಿಪ್ ದೀಪ ಬಳಸಿ.

### ತಾಳ್ಮೆ ಇರಲಿ

ಟ್ರಾಫಿಕ್ ಸಿಗ್ನಲ್‌ಗಳಲ್ಲಿ ವಾಹನಗಳು ಚಲಿಸಲು ಹಸಿರು ದೀಪದ ಸೂಚನೆ ಬಂದಾಗ ಹಿಂದಿರುವ ವಾಹನ ಸವಾರರು ಮುಂದಿರುವ ವಾಹನ ಸವಾರರರಿಗೆ ಅನವಶ್ಯಕವಾಗಿ ಹಾರ್ನ್ ಮಾಡುವ ಬದಲು ಕೆಲ ಸೆಕೆಂಡುಗಳ ಕಾಲ ತಾಳ್ಮೆಯಿಂದ ವರ್ತಿಸಬೇಕು.

### ಕಡಿಮೆ ಶಬ್ದದ ಹಾರ್ನ್, ಯಂತ್ರ ಬಳಸಿ

ವಾಹನ ಸವಾರರು ಹೆಚ್ಚಿನ ಶಬ್ದ ಮಾಡುವ ಅಥವಾ ತಮಗಿಷ್ಟ ಬಂದ ಹಾರ್ನ್‌ಗಳನ್ನು ಅಳವಡಿಸಿಕೊಳ್ಳಬಾರದು. ಬದಲಿಗೆ ಕಡಿಮೆ ಸದ್ದು ಮಾಡುವ ಹಾರ್ನ್ (ಗರಿಷ್ಠ 65 ಡೆಸಿಬೆಲ್) ಹಾಗೂ ಸರ್ಕಾರ ನಿಗದಿಪಡಿಸಿರುವ ಹಾರ್ನ್‌ಗಳನ್ನು ಅಳವಡಿಸಿಕೊಳ್ಳಬೇಕು.

### ಜನ ಜಾಗೃತಿಯಲ್ಲಿ ಪಾಲ್ಗೊಳ್ಳಿ

ಸ್ವಯಂಸೇವಾ ಸಂಘಸಂಸ್ಥೆಗಳು, ವಿದ್ಯಾರ್ಥಿಗಳು ಸರ್ಕಾರ ಹಾಗೂ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಹಮ್ಮಿಕೊಳ್ಳುವ ಶಬ್ದಮಾಲಿನ್ಯ ನಿಯಂತ್ರಣ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸಬಹುದು.

### ಸ್ವಯಂ ನಿಯಂತ್ರಣ ಇರಲಿ

ಕೈಗಾರಿಕೆಗಳ ಮಾಲೀಕರು ಸಹ ಕಡಿಮೆ ಶಬ್ದ ಮಾಡುವ ಯಂತ್ರಗಳನ್ನು ಅಳವಡಿಸಿಕೊಳ್ಳಬೇಕು.

### ಧ್ವನಿವರ್ಧಕ ಶಬ್ದದ ಮಟ್ಟ ಕಡಿಮೆ ಮಾಡಿ

ಸಾರ್ವಜನಿಕ ಸಭೆ ಸಮಾರಂಭಗಳಲ್ಲಿ ಧ್ವನಿವರ್ಧಕದ ಶಬ್ದ ಮಿತಿಯನ್ನು ಪಾಲಿಸಿರಿ. ಅತಿಶಬ್ದ ಖಂಡಿತ ಅನಾರೋಗ್ಯ ಉಂಟು ಮಾಡುತ್ತದೆ.

### ಮಿತಿ ಮೀರಿದರೆ ದಂಡ ಸಂಗ್ರಹ

ಟ್ರಾಫಿಕ್ ಸಿಗ್ನಲ್‌ಗಳು ಹಾಗೂ ಸಂಚಾರ ದಟ್ಟಣೆ ಹೆಚ್ಚಿರುವ ಪ್ರದೇಶಗಳಲ್ಲಿ ಅನಾವಶ್ಯಕವಾಗಿ ಹಾರ್ನ್ ಮಾಡುವವರನ್ನು ಮೋಟಾರು ವಾಹನಗಳ ಕಾಯಿದೆ ಅನ್ವಯ ಆರ್‌ಟಿಒ ಅಧಿಕಾರಿಗಳು ಪತ್ತೆ ಹಚ್ಚಿ ದಂಡ ವಿಧಿಸುವ ಅಧಿಕಾರ ಪಡೆದಿರುತ್ತಾರೆ.

## ಶಬ್ದಮಯ ದಿನಚರಿ ನಮಗೆ ಬೇಡ




**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ**

ಪರಿಸರ ಭವನ, ಚರ್ಚ್ ಸ್ಟ್ರೀಟ್ ಬೆಂಗಳೂರು 560001

ವೆಬ್‌ಸೈಟ್: www.kspcb.gov.in

ಫೇಸ್‌ಬುಕ್ ಪುಟ: kspcbofficial



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೮ ಸಂಚಿಕೆ-೬ ಜನವರಿ ೨೦೧೭

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಕೆ. ಎಲ್. ಗೋಪಾಲಕೃಷ್ಣಯ್ಯ

ರಾಮಲಿಂಗಪ್ಪ ಟಿ. ಬೇಗೂರು

ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ರಮೇಶ ಉಡುಪ

**ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦ ೦೧೦

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೫೯೨೪೭೩, ೨೨೨೦೩೫೮೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಈ ತಿಂಗಳು



ನೋಟುಗಳ ರದ್ದತಿಯ ಯೋಜನೆಯನ್ನು ಘೋಷಿಸಿದಾಗ ಡಿಸೆಂಬರ್ ೩೧ರ ಗಡುವನ್ನು ನೀಡಲಾಗಿತ್ತು. ೨೦೧೬ ಮುಕ್ತಾಯವಾದಾಗ "ಹೊಸ ವರ್ಷದ ಶುಭಾಶಯ" ಹೇಳಿದರೆ ವ್ಯಂಗ್ಯವಾಡುತ್ತಿದ್ದಾರೆಂದು ಸ್ನೇಹಿತರು ಮುನಿಸಿಕೊಳ್ಳುವ ಸಂದರ್ಭ ಬಂದಿದೆ! ಒಂದು ಸರಳ ಯೋಜನೆಯನ್ನು ಇಷ್ಟು ಹೊಲಸಾಗಿ ಕಾರ್ಯಗತಗೊಳಿಸಲಾಗುತ್ತದೆಂದು ನಂಬುವುದೇ ಕಷ್ಟ. ರದ್ದತಿಯ ತರುವಾಯದಲ್ಲಿ ೫೦ಕ್ಕೂ ಹೆಚ್ಚು ಆಜ್ಞೆಗಳನ್ನು ಹೊರಡಿಸಿ ದೇಶದ ಆರ್ಥಿಕತೆಯೊಡನೆ ಚೆಲ್ಲಾಟವಾಡುತ್ತಿರುವುದು ಈಗ ಎಲ್ಲರ ಅನುಭವಕ್ಕೂ ಬಂದಿದೆ. ದೇಶಪ್ರೇಮವೆಂದರೆ ಅದು ಮೋದಿ ಪ್ರೇಮವನ್ನು ಒಳಗೊಳ್ಳಬೇಕೆಂದು ಭ್ರಮಿಸಿರುವವರು ಯೋಜನೆಯನ್ನು ಮಕ್ಕಳಾಟಿಕೆಯನ್ನಾಗಿ ಮಾಡಿದ ಕೇಂದ್ರ ಸರ್ಕಾರವನ್ನು ಕರ್ತವ್ಯಬದ್ಧರಂತೆ ಸಮರ್ಥಿಸುತ್ತಿದ್ದಾರೆ. ಅದನ್ನು ದೂಷಿಸುವುದು ಬೇಡ. ಆದರೆ ಇಡೀ ದೇಶದಲ್ಲಿ ಅತಿಸಾಮಾನ್ಯ ಜನರ ಜೀವನ ಎಷ್ಟು ಹೃದಯವಿದ್ರಾವಕವಾಯಿತೆಂದು ಕಣ್ತೆರೆದು ನೋಡಲು ಸಿದ್ಧವಿಲ್ಲದವರ ಹೃದಯವೆಲ್ಲಿದೆ ಎಂಬ ಗುಮಾನಿ ಗಾಢವಾಗಿದೆ. ನೋಟು ರದ್ದತಿಯ ಮುನ್ನ ಇದ್ದ ಜೀವನ ಹಸನಾಗಿರಲಿಲ್ಲ, ನಿಜ; ಆದರೆ ಆ ಸ್ಥಿತಿಗಾದರೂ ಹಿಂದಿರುಗಲು ಇನ್ನೆಷ್ಟು ಕಾಲ ಕಾಯಬೇಕೋ! ಅದಕ್ಕಿಂತಲೂ ಉತ್ತಮವಾದ ವ್ಯವಸ್ಥೆಯು ಮೂಡಿಬಂದು ಸ್ವರ್ಗವು ಧರೆಗಿಳಿದು ಬರುತ್ತದೆಯೆಂಬ ಆಶ್ವಾಸನೆ ಈಡೇರುತ್ತದೆಯೆ, ಹಾಗಿದ್ದರೆ ಎಂದು ? ವಿದೇಶಗಳಲ್ಲಿರುವ ಕಪ್ಪುಹಣವನ್ನು ವಾಪಸ್ಸು ತಂದು ನಮಗೆಲ್ಲಾ ತಲಾ ೧೫ ಲಕ್ಷ ರೂ.ಗಳನ್ನು ಧಾರಾಳವಾಗಿ ಹಂಚಿದಂತೆಯೇ ? ಸರ್ಕಾರದ ಆಡಳಿತ ಯಂತ್ರಕ್ಕೆ ಎಪ್ಪತ್ತು ವರ್ಷಗಳ ಅನುಭವವಿದೆ, ಆದರೆ ಅನಕ್ಷರಸ್ಥ ಅರ್ಥಶಾಸ್ತ್ರಜ್ಞರಂತೆ ನಮ್ಮ ಸರ್ಕಾರಿ ಅರ್ಥಶಾಸ್ತ್ರಜ್ಞರು ಬಾಲಿಶ ಕ್ರಮಗಳನ್ನು ಒಂದಾದ ನಂತರ ಇನ್ನೊಂದರಂತೆ ಸೂಚಿಸುತ್ತಾ ಬಂದಿದ್ದಾರೆ. ರಿಸರ್ವ್ ಬ್ಯಾಂಕ್‌ನ ಪರಿಣತರು ಇಷ್ಟು ಅಜಾಗರೂಕತೆಯಿಂದ ವರ್ತಿಸಬಹುದೆಂದು ಯಾರೂ ನಿರೀಕ್ಷಿಸಿರಲಿಲ್ಲ. ಮಂತ್ರವಾದಿಗಳಂತೆ "ಇಗೋ ಈಗ" ಎಂದು ತಮ್ಮ ಕೈಚಳಕದ ಪ್ರದರ್ಶನವನ್ನು ಮುಂದೂಡುತ್ತಾ ಸಹನೆಯನ್ನು ಬೋಧಿಸುವುದೊಂದನ್ನು ಅವರು ಚೆನ್ನಾಗಿ ಕಲಿತಿದ್ದಾರೆ. ರಿಸರ್ವ್ ಬ್ಯಾಂಕ್‌ನ ಗವರ್ನರರ ಹೆಸರಿನಲ್ಲಿ "ಊರ್ಜಿತ" ಎಂಬ ಪದವೇನೋ ಇದೆ, ಆದರೆ ಅವರ ನೇತೃತ್ವದಲ್ಲಿ ದೇಶದ ಆರ್ಥಿಕತೆ ಊರ್ಜಿತವಾಗುವ ಸೂಚನೆಯೇ ಇಲ್ಲ. ನೋಟುಗಳ ಮೇಲೆ ಅವರ ಸಹಿ ಇರಲೆಂಬ ಕಾರಣಕ್ಕೆ ಹೊಸ ನೋಟುಗಳ ಮುದ್ರಣದ ಕೆಲಸವನ್ನು ಸಾಕಷ್ಟು ಮುಂಚೆ ಕೈಗೊಳ್ಳಲಿಲ್ಲ ಎಂದು ತೋರುತ್ತದೆ. ಉತ್ತರ ಭಾರತದ ರಾಜ್ಯಗಳ ಪ್ರತಿಭಟನಾ ಮೆರವಣಿಗೆಗಳಲ್ಲಿ ಸಾಮಾನ್ಯವಾಗಿ ಕೇಳಿ ಬರುವ ಘೋಷಣೆ "ಜೋ ಸರ್ಕಾರ್ ನಿಕಮ್ಮೀ ಹೈ, ವೋ ಸರ್ಕಾರ್ ಬದಲ್ನೀ ಹೈ" (ನಿಷ್ಕ್ರಿಯ ಸರ್ಕಾರವು ತೊಲಗಬೇಕು, ಎಂದರ್ಥ) ಎಂಬುದು. ಆ ಹಿಂದಿ ಘೋಷಣೆಯು ನಮ್ಮ ಪ್ರಧಾನಿಯವರಿಗೆ ಕೇಳಿಸಬೇಕು. ದೇಶದ ಪ್ರಜೆಗಳ ಕಾನೂನು ಸಮ್ಮತವಾದ ಹಣ ಸಹ ಅವರಿಗೆ ಬ್ಯಾಂಕುಗಳಿಂದ ಪಡೆಯಲಾಗುವುದಿಲ್ಲವೆಂದರೆ ಅದೆಂತಹ ಆರ್ಥಿಕತೆ ಮತ್ತು ಅದೆಂತಹ ನೋಟು ರದ್ದತಿಯ ಯೋಜನೆ ? ಇಷ್ಟು ಅಪಕ್ವವೂ ಬೇಜವಾಬ್ದಾರಿಯೂ ಆದ ಸರ್ಕಾರ ನಮ್ಮ ದೇಶದಲ್ಲಿದೆ ಎಂದು ನಂಬಬೇಕಾಗಿ ಬಂದಿದೆಯಲ್ಲ !

ಆದಾಯ ತೆರಿಗೆ ಇಲಾಖೆಯು ತ್ವರಿತಗತಿಯಿಂದ ಖದೀಮರು




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ವಿಜಯಾ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಸಂಚಿಕೆ | ₹ ೫೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ - ೫೮೫ ೧೦೨
✆ : ೦೮೪೭೨-೨೨೪೩೦೨

ಬಚ್ಚಿಟ್ಟ ಮತ್ತು ಮುಚ್ಚಿಟ್ಟ ಸಂಪತ್ತನ್ನು ಯಶಸ್ವಿಯಾಗಿ ಹೊರಗೆಳೆಯುತ್ತಿರುವುದು ಅಭಿನಂದನಾರ್ಹ ಕ್ರಮವೆಂಬುದರಲ್ಲಿ ಸಂಶಯವಿಲ್ಲ. ಆದರೆ ಅದನ್ನು ಮಾಡಲು ಹಳೆಯ ನೋಟುಗಳ ರದ್ದತಿ ಬೇಕಾಗಿರಲಿಲ್ಲ. ರದ್ದತಿ ಇಲ್ಲದಿದ್ದಾಗಲೂ ಆ ಕೆಲಸ ಮಾಡಬಹುದಿತ್ತು. ಹೊಸ ನೋಟುಗಳ ಬದಲಾಗಿ ಹಿಂದಿನ ನೋಟುಗಳ ಚೀಲಗಳು ಸಿಗುತ್ತಿದ್ದುವೆಂಬುದಷ್ಟೇ ವ್ಯತ್ಯಾಸ. ಆಗಲೂ ಹೀಗೆ ಮುಚ್ಚಿಟ್ಟಿದ್ದವರ ಯಾದಿ ಆದಾಯ ತೆರಿಗೆಯ ಅಧಿಕಾರಿಗಳ ಬಳಿ ಇತ್ತು; "ನಾಗರಿಕ ಮಾನ್ಯ"(!!) ಚಿಕ್ಕರಾಯಪ್ಪನವರಂತಹ ವ್ಯಕ್ತಿಗಳ ನೀಚಸಂಹಿತೆ ಯಾರಿಗೆ ಗೊತ್ತಿರಲಿಲ್ಲ? ರಿಯಲ್ ಎಸ್ಟೇಟ್ ಡೆವಲಪರ್ಸ್ ನೋಟು ರದ್ದತಿಯ ನಂತರ ಹುಟ್ಟಿಕೊಂಡವರೇನಲ್ಲ, ಆದ್ದರಿಂದ ಈಗಿನ "ರೇಡ್"ಗಳು ನೋಟು ರದ್ದತಿಯ ಪರಿಣಾಮವಲ್ಲ. ರೇಡ್‌ನಲ್ಲಿ ಸಿಕ್ಕಿಹಾಕಿಕೊಂಡವರು ಇನ್ನೊಬ್ಬ "ಮಾನ್ಯ" ಜನಾರ್ದನ ರೆಡ್ಡಿಯವರಂತೆ ಮತ್ತೆ ಕಂಗೊಳಿಸುವುದಿಲ್ಲವೆಂದು ನಂಬೋಣವೆ? ಕಾನೂನು ರೀತ್ಯಾ ಮೊಕದ್ದಮೆಗಳನ್ನು ಹೂಡಿ, ಅವನ್ನು ಗಂಭೀರವಾಗಿ ಮುನ್ನಡೆಸಿ, ನ್ಯಾಯಾಲಯದ ತೀರ್ಪು ಗಳಿಸಿ, ಅಕ್ರಮ ಸಂಪತ್ತನ್ನು ಮುಟ್ಟುಗೋಲು ಹಾಕಿಕೊಂಡು ಈ "ಸಭ್ಯ"ರನ್ನು ಜೈಲಿಗೆ ಕಳಿಸುವ ದಿನಗಳನ್ನು ಕಾಣಲು ನಾವೆಲ್ಲಾ ಕಾತುರರಾಗಿರೋಣ.

ನೋಟು ರದ್ದತಿಯ ಹಿಂದೆಯೇ "ನಗದು ರಹಿತ ವ್ಯವಹಾರ"ವೆಂಬ ಹುಚ್ಚು ಕೂಗು ಹಬ್ಬಿದೆ. ಅದು ಭ್ರಷ್ಟಾಚಾರದ ವಿರುದ್ಧದ ಬ್ರಹ್ಮಾಸ್ತ್ರವೆಂದು ಹೇಳಲಾಗುತ್ತಿದೆ. ಜನತೆಯು ವರ್ಗರಹಿತ ಸಮಾಜದ ನಿರೀಕ್ಷೆಯಲ್ಲಿರಬೇಕು, ಬದಲಿಗೆ ನಗದು ರಹಿತ ಸಮಾಜದ ವಿಶ್ವಾಮಿತ್ರ ಸೃಷ್ಟಿ ಆರಂಭವಾಗುತ್ತಿದೆ. ಮೊದಲೇ ಬಡತನ, ಈಗ ನಗದು ರಹಿತ ವ್ಯವಹಾರ ನಡೆಸಲು ಎರಡು–ಮೂರು ಸಾವಿರ ಖರ್ಚು ಮಾಡಿ ಹೊಸ 'ಗ್ಯಾಜೆಟ್'ಗಳನ್ನು ಕೊಳ್ಳಬೇಕು, ಅದನ್ನು ಬಳಸುವುದನ್ನು ಕಲಿಯಬೇಕು, ಆಮೇಲೆ ಮಸಾಲೆ ದೋಸೆ ತಿಂದು ಹಣ ಪಾವತಿಸುವಾಗ ಗ್ಯಾಜೆಟ್ ಕಂಪನಿಗೆ ಕಮಿಷನ್ ಕೊಡಬೇಕು. ಸುಖೀ ಭಾರತ ಅಂದರೆ ಇದಲ್ಲವೆ! ಚೀನಾದ "ಪೇಟಿಎಂ" ಕಂಪನಿಗೆ ಬೇಕಾದಷ್ಟು ಕಮಿಷನ್ ದೊರೆಯುತ್ತದೆ. ಅದೂ "ಮೇಕ್ ಇನ್ ಇಂಡಿಯ"ದ ಒಂದು ಭಾಗವಿರಬೇಕು. ಅನ್ನಭಾಗ್ಯವಿದ್ದಂತೆ "ಹೊಸ ಮೊಬೈಲ್ ಭಾಗ್ಯ" ಆಕಾಶದಿಂದ ಸುರಿಯುತ್ತದೇನೋ!

ಈ ಮಧ್ಯೆ ಜಾಹಿರಾತುಗಳಿಗೆ ಕೇಂದ್ರ ಸರ್ಕಾರವು ಸಹಸ್ರಗಟ್ಟಲೆ ಕೋಟಿಗಳನ್ನು ವ್ಯಯಿಸುತ್ತಿದೆ. ಕಾರ್ಯಾಗಾರಗಳನ್ನು ನಡೆಸಿ ನೂತನ ಪ್ರಕ್ರಿಯೆಗಳನ್ನು ಜನರಿಗೆ ಕಲಿಸುವ ಯೋಜನೆಗಳೂ ಇವೆ. ಝಾರ್ಖಂಡ್‌ನಲ್ಲಿ ರಾಜ್ಯದ ಉದ್ದಗಲಕ್ಕೂ ಪ್ರಚಾರಕರು ಹರಡಿ ಹೋಗಿದ್ದಾರಂತೆ. ಆ ರಾಜ್ಯವನ್ನು ದೇಶದ ಮೊದಲ ನಗದು ರಹಿತ ರಾಜ್ಯವಾಗಿಸುತ್ತಾರಂತೆ. ಆ ರಾಜ್ಯದಲ್ಲಿ ಎಷ್ಟೋ ಕಾಲದಿಂದ ಆದಿವಾಸಿಗಳನ್ನು ನಗದುರಹಿತರನ್ನಾಗಿಯೇ ಇರಿಸಿರುವುದು ಯಾರಿಗೆ ಗೊತ್ತಿಲ್ಲ? 'ದಿ ಹಿಂದು' ಪತ್ರಿಕೆಯ ಡಿಸೆಂಬರ್ ಕಡೆಯ ವಾರದ ಒಂದು ಸಂಚಿಕೆಯಲ್ಲಿ ಝಾರ್ಖಂಡ್ ಗ್ರಾಮಾಂತರ ಪ್ರದೇಶಗಳಲ್ಲಿ ಇಂದೂ ಪ್ರಚಲಿತವಾಗಿರುವ ಒಂದು ಹಿಂಸಾತ್ಮಕ ಮೌಢ್ಯದ ಆಚರಣೆಯನ್ನು ಪುರಾವೆ ಸಹಿತ ದಾಖಲಿಸಲಾಗಿತ್ತು. ಯಾವುದೋ ಊರಿನಲ್ಲಿ ಬೆಳೆ ಚೆನ್ನಾಗಿ ಆಗಲಿಲ್ಲ; ಸರಿ, ಊರಿನ ಒಬ್ಬ ಮುದುಕಿಯನ್ನು ಹಿಡಿದು 'ಮಾಟಗಾತಿ' ಎಂಬ ನಾಮಧೇಯ ನೀಡುವುದು. ನಂತರ ಆಕೆಯನ್ನು ಊರಾಚೆಗೆ ನೂಕುವುದು, ವಿವಸ್ತ್ರಗೊಳಿಸುವುದು, ಕಡೆಗೆ ಕೊಂದುಹಾಕುವುದು. ಇದು ೨೦೧೭ರಲ್ಲಿ ಸಹ ಜಾರಿಯಲ್ಲಿರುತ್ತದೆ. ಅಂತಹ ರಾಜ್ಯದಲ್ಲಿ ನಗದುರಹಿತ ವ್ಯವಹಾರವನ್ನು ಕುದುರಿಸಲಾಗುತ್ತದೆ. ಇದೆಂತಹ ಆದ್ಯತೆ? ಯಾರೋ ಅಮಾಯಕಳನ್ನು ಮಾಟಗಾತಿಯೆಂದು ಥಳಿಸುವುದು ಮೌಢ್ಯವೋ ಅಥವಾ ಹಣವನ್ನೇ ಕಾಣದ ಆಕೆಗೆ ನಗದುರಹಿತ ವ್ಯವಹಾರ ಕಲಿಸ ಹೊರಡುವುದು ಮೌಢ್ಯವೋ? ಇದನ್ನು ಸಿನಿಕತನದಿಂದ ಹಂಗಿಸುವುದು ಬೇಡ, ಆದರೆ ಆರ್ಥಿಕತೆಯ ಯಾವ ಹಂತದಲ್ಲಿದ್ದೇವೆಂಬ ಪರಿವೆ ಬೇಡವೆ?




✶ ✶ ✶

ಮಡಿಕೇರಿ–ಚಿಕ್ಕಮಗಳೂರು ಸುತ್ತಮುತ್ತ ಕಾಫಿ ತೋಟಗಳ ಒಡೆಯರು ಭೂಮಿ ಒತ್ತುವರಿ ಮಾಡಿಕೊಂಡಾಗ ಅರಣ್ಯಾಧಿಕಾರಿಗಳು ಸಮಾಧಿ ಸ್ಥಿತಿಯಲ್ಲಿರುತ್ತಾರೆ. ಒತ್ತುವರಿ ಅವರ ಕಣ್ಣಿಗೆ ಕಾಣುವುದಿಲ್ಲ, ಕಂಡರೆ ವಿಷ್ಣುಚಿತ್ತ ಎಂದು ಪೂಜಾಮಂತ್ರ ಪಠಿಸುತ್ತಾರೆ. ಆದರೆ ದಿಡ್ಡಳ್ಳಿಯಲ್ಲಿ ಗುಡಿಸಲು ಹಾಕಿಕೊಂಡವರು ಇವರ ಕಣ್ಣಿಗೆ ಧೂರ್ತರಂತೆ ಕಾಣುತ್ತಾರೆ, ಆದ್ದರಿಂದ ಅವರ ನೆಲೆಗಳನ್ನು ಯಂತ್ರಗಳಿಂದ ನೆಲಸಮ ಮಾಡುತ್ತಾರೆ. ರಾಜ್ಯದ ಸರ್ಕಾರಿ ಜಮೀನಿನ ರಕ್ಷಣೆಗೆ ಅವರು ಎಷ್ಟು ಕಟಿಬದ್ಧರಾಗಿದ್ದಾರೆ ಎಂಬುದಕ್ಕೆ ಇದೊಂದು ಚಿಕ್ಕ ಉದಾಹರಣೆ. ಸಂಘಟಿತ ಹೋರಾಟದ ಪರಿಣಾಮವಾಗಿ ನೆಲೆ ಕಳೆದುಕೊಂಡವರಿಗೆ ಬೇರೆಡೆ ಅನುಕೂಲ ಕಲ್ಪಿಸಿ ಕೊಡುವುದಾಗಿ ಸರ್ಕಾರದ ಸಚಿವರೊಬ್ಬರು ಹೇಳಿದ್ದಾರೆ. ಅದು ಸ್ವಾಗತಾರ್ಹ, ಆದರೆ ಮರೆಗುಳಿ ಸರ್ಕಾರಕ್ಕೆ ಪದೇಪದೇ ಜಿಗುಟಿ ಜ್ಞಾಪಿಸುತ್ತಿರುವುದು ಪ್ರತಿಭಟನಾಕಾರರ ಕೆಲಸವಾಗುತ್ತದೆ. ಈ ಪ್ರಸಂಗದ ಹಿನ್ನೆಲೆಯಲ್ಲಿ ಕೆಲವು ಸ್ವಾರಸ್ಯಗಳಿವೆಯೆಂದು ಹೇಳುತ್ತಾರೆ: (ಅ) ಅರಣ್ಯಾಧಿಕಾರಿಗಳು "ಕ್ರಿಯಾಶೀಲ"ರಾಗಲು ಪ್ರೇರಣೆ ಬಂದಿದ್ದು ಎಲ್ಲಿಂದ? (ಆ) ಗುಡಿಸಲುಗಳ ಧ್ವಂಸ ಮಾಡಿದ ಮುನ್ನಾ ದಿನಗಳಲ್ಲಿ ಕಾಫಿತೋಟಗಳ ಕೆಲಸಗಾರರು ಕೂಲಿಯ ಮೊತ್ತದ ಬಗ್ಗೆ ತಕರಾರುಗಳನ್ನೇನಾದರೂ ಎತ್ತಿದ್ದರೆ? ಅಂದರೆ, ಅವರು ಕೂಲಿಯ ಹೆಚ್ಚಳಕ್ಕೆ ಒತ್ತಾಯಿಸಿದಾಗ ಅವರ ಬಾಯಿ ಮುಚ್ಚಿಸಲು ಈ ಕ್ರಮ ಕೈಗೊಳ್ಳಲಾಯಿತೆ? (ಇ) ಕೂಲಿಯ ಹೆಚ್ಚಳಕ್ಕೂ ಅರಣ್ಯಾಧಿಕಾರಿಗಳಿಗೂ ಎತ್ತಣಿಂದೆತ್ತ ಸಂಬಂಧವಯ್ಯ? ಕಾಫಿ ತೋಟದ ಮಾಲೀಕರು ಅಧಿಕಾರಿಗಳನ್ನು 'ನೋಡಿಕೊಂಡಿರಬಹುದೆ'? (ಈ) ಸರ್ಕಾರಕ್ಕೆ ಇಂತಹ ಹಿನ್ನೆಲೆ ತಿಳಿದಿರುವು ದಿಲ್ಲವೆ? (ಉ) ಇದ್ದಕ್ಕಿದ್ದಂತೆ ನಕ್ಸಲರು ದಿಡ್ಡಳ್ಳಿ ಬಳಿ ಪ್ರತ್ಯಕ್ಷರಾಗಿಬಿಟ್ಟರೆಂಬ ಕಾಫಿ ಪ್ಲಾಂಟೇಷನ್‌ಗಳಿಂದ ಬಂದ "ಪ್ಲಾಂಟೆಡ್ ವರದಿ" ಎಷ್ಟು ವಿಶ್ವಾಸಾರ್ಹವಾದ್ದು? (ಊ) "ಸ್ಥಳೀಯ" ರೆನ್ನಲಾದ ಭಾರತೀಯ ಜನತಾ ಪಕ್ಷದ ಪ್ರತಿನಿಧಿಗಳು ಪ್ರತಿಭಟನೆಗೆ ಸಹಕಾರ ನೀಡಿದವರ ಬಗ್ಗೆ ನಿಂದನೆಯ ಮಾತುಗಳನ್ನಾಡಿದರೆಂದು ವರದಿಯಾಗಿತ್ತು. "ಹೊರಗಿನವರು" ದಿಡ್ಡಳ್ಳಿಯ ಸಂತ್ರಸ್ತರಿಗೆ ಸಹಾಯಹಸ್ತ ನೀಡಲು ಮುಂದಾಗುವ ಮುನ್ನವೇ ಈ "ಸ್ಥಳೀಯ" ಮಹಾನ್ ನಾಯಕರು ಮಧ್ಯಪ್ರವೇಶ ಮಾಡಲು ಅಡಚಣೆ ಏನಿತ್ತು? – ಅಂದರೆ, ಒಂದು ಘಟನೆಯ ಹಿಂದೆ ಏನೆಲ್ಲಾ ಕೈಚಳಕಗಳು ಕೆಲಸ ಮಾಡಿರುತ್ತವೆಯಲ್ಲವೆ?

✶ ✶ ✶

ಜಮೀನು ಒತ್ತುವರಿಯು ಕಾಫಿ ಪ್ಲಾಂಟೇಶನ್ ಇಲ್ಲದ ಬೆಂಗಳೂರಿನಲ್ಲಿ ನಡೆಯುವುದು ಕಡಿಮೆಯೇನಲ್ಲ. ತಪ್ಪಿಸಿಕೊಳ್ಳಲು ತಂತ್ರಗಳನ್ನು ಕರಗತ ಮಾಡಿಕೊಂಡಿರುವವರೂ ಹೆಚ್ಚು. ಆಗೊಮ್ಮೆ ಈಗೊಮ್ಮೆ ವರದಿಗಳು ಬರುತ್ತವೆ. ಜಿಲ್ಲಾಧಿಕಾರಿ ವಿ. ಶಂಕರ್ ಒಳ್ಳೆಯ ಮುತುವರ್ಜಿ ವಹಿಸಿ ಹಿಂದೆಲ್ಲಾ ಲಪಟಾಯಿಸಿದ್ದ ಭೂಮಿಯನ್ನು ಆಗಾಗ್ಗೆ ಸರ್ಕಾರಕ್ಕೆ ಹಿಂಪಡೆಯುತ್ತಾರೆ. ಸ್ವಾಮಿ ಶ್ರೀ ರವಿಶಂಕರ, ಮಂತ್ರಿ ಮಾಲ್, ಮುಂತಾದ ಪ್ರಖ್ಯಾತರು ಅವರ ಕೈಗೂ ಸಿಗುವುದಿಲ್ಲ. ಡಿಸೆಂಬರ್ ಮೂರನೆಯ ವಾರದಲ್ಲಿ ಸುಮಾರು ೪೦ ಎಕರೆ ಜಾಗ ಸ್ವಾಧೀನಪಡಿಸಿಕೊಳ್ಳಲಾಯಿತು. ಯಾರಿಂದ ಎಂಬ ಮಾಹಿತಿ ನೋಡಿ: ಕೃಷ್ಣದೇವರಾಯ ಎಜುಕೇಶನ್ ಟ್ರಸ್ಟ್, ಎನ್‌ಒಎಎಚ್ ಟೆನಿಸ್ ಅಕಾಡೆಮಿ, ಶ್ರೀರಾಮ ಸೇವಾಮಂದಿರ ಮತ್ತು ಲಯನ್ಸ್ ಕ್ಲಬ್. ಎಲ್ಲಾ ಭಾರಿ ಕುಳಗಳೇ ಮತ್ತು ಎಲ್ಲರೂ ಸಮಾಜದ "ಸೇವೆ" ಮಾಡುವವರೇ. ಈ ಸಮಾಜಘಾತುಕರ ದಾಯಾದಿಗಳು ರವಿಶಂಕರನಂಥವರು. ಇವರಾರಿಗೂ ಶಿಕ್ಷೆಯಾಗುವುದಿಲ್ಲ, ಇಷ್ಟು ಕಾಲ ಸರ್ಕಾರದ ಭೂಮಿಯನ್ನು ಬಳಸಿದ್ದಕ್ಕೆ ಕನಿಷ್ಠ ಶುಲ್ಕವೂ ಇಲ್ಲ. ಶಿಕ್ಷೆಯೆಲ್ಲಾ ಗುಡಿಸಲು ವಾಸಿಗಳಿಗೆ ಮಾತ್ರ!

✶ ✶ ✶

ದೇಶದ ಕೀರ್ತಿಗೆ ಅಪಾರ ಕಾಣಿಕೆ ಸಲ್ಲಿಸಿದ್ದ ನಲಂದಾ ಕ್ಷೇತ್ರದಲ್ಲಿ

ಆಧುನಿಕ ವಿಶ್ವವಿದ್ಯಾಲಯವೊಂದನ್ನು ಸ್ಥಾಪಿಸಲಾಗಿತ್ತು. ಹಿಂದಿನ ನಲಂದಾ ವಿಶ್ವವಿದ್ಯಾಲಯದಂತೆ ಇದೂ ಅಂತರರಾಷ್ಟ್ರೀಯ ಖ್ಯಾತಿಯದೇ. ಅಮರ್ತ್ಯ ಸೇನ್ ಮೊದಲಿಗೆ ಅದರ ಗೌರವ ಚಾನ್ಸಲರ್ ಆಗಿದ್ದರು. ನಂತರ ಕೊರಿಯಾದ ಒಬ್ಬ ವಿದ್ವಾಂಸರನ್ನು ಆ ಸ್ಥಾನಕ್ಕೆ ನೇಮಿಸಲಾಗಿತ್ತು. ಆರೆಸ್ಸೆಸ್ ಕವಾಯತಿನಲ್ಲಿ ನಿಷ್ಣಾತರಾದ ಪ್ರಕಾಶ ಜಾವಡೇಕರ್ ಮಾನವ ಸಂಪನ್ಮೂಲ ಮಂತ್ರಿಯಾದ ನಂತರ ಆಡಳಿತ ಮಂಡಲಿಗೆ ಕೆಲವು ಹೊಸಬರನ್ನು ಸೇರಿಸಿದರು. ಆ ಬಗ್ಗೆ ಚಾನ್ಸಲರ್ ಅನುಮತಿ ಇರಲಿಲ್ಲ ಮತ್ತು ಅವರಿಗೆ ಹೊಸಬರ ಸೇರ್ಪಡೆಯ ಬಗ್ಗೆ ಮಾಹಿತಿಯೂ ಇರಲಿಲ್ಲ. ನೇಮಕಗೊಂಡವರೆಲ್ಲಾ ಜಾವಡೇಕರ್ ಅವರಂತಹ ಪ್ರಭೃತಿಗಳೇ. ಈ ಅಕ್ರಮವನ್ನು ಅಸಹ್ಯವೆಂದು ಭಾವಿಸಿದ ಚಾನ್ಸಲರ್ ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿ ಸ್ವದೇಶಕ್ಕೆ ಹಿಂದಿರುಗಿದರು. ಹೀಗಿದೆ ನಮ್ಮ ಅಂತರ ರಾಷ್ಟ್ರೀಯ ಖ್ಯಾತಿಯ ನಲಂದಾ ವಿಶ್ವವಿದ್ಯಾಲಯವನ್ನು ಪೋಷಿಸುವ ಪರಿ. ಈಗ ಆಡಳಿತ ಮಂಡಲಿಗೆ ನೇಮಕಗೊಂಡಿರುವವರ ಪೈಕಿ ಒಬ್ಬರು ಅರವಿಂದ ಶರ್ಮ. ಈತ ಕೆನಡಾದ ಮ್ಯಾಕ್‌ಗಿಲ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕ; ಪ್ರಾಚೀನ ಭಾರತದ ಸಂಸ್ಕೃತಿಯಲ್ಲಿ ಪರಿಣತನೆಂಬ ವದಂತಿ ಇದೆ. ಆತನ ಬರಹಗಳ ಪರಿಚಯ ಇರುವವರಿಗೆ ಪರಿಣತಿಗಿಂತಲೂ ಮೂರ್ಖತನಕ್ಕೆ ಮತ್ತು ಬೊಗಳೆ ಪಾಂಡಿತ್ಯಕ್ಕೆ ಈತ ಪ್ರಸಿದ್ಧ. ಪ್ರಾಚೀನ ಭಾರತದ ವರ್ಣಪದ್ಧತಿಯನ್ನು ಸಮರ್ಥಿಸುವ ಪಕ್ಕಾ ಸಂಪ್ರದಾಯವಾದಿಯಾದ ಈ ವ್ಯಕ್ತಿ ವರ್ಣವಿಭಜನೆಯನ್ನು ದುಡಿಮೆಯ ವಿಭಜನೆಯೆಂದೂ, ಅದರಲ್ಲಿ ಶ್ರೇಣೀಕರಣವೇನೂ ಇಲ್ಲವೆಂದೂ ಉಪದೇಶಿಸುತ್ತಾನೆ. ಗಟ್ಟಿಯಾದ ಸಂಶೋಧನೆಗೆ ಹೆಸರಾದ ಒಂದು ಲೇಖನವನ್ನೂ ಆತ ಬರೆದಿಲ್ಲ, ಆದರೆ ನಲಂದಾ ವಿಶ್ವವಿದ್ಯಾನಿಲಯವನ್ನು ರೂಪಿಸಲು ನೇಮಕಗೊಂಡಿದ್ದಾನೆ! ಜಾವಡೇಕರ್ ಕಣ್ಣಿಗೆ ಬೀಳುವವರು ಇಂಥ ಗೊಡ್ಡು ಸಂಪ್ರದಾಯವಾದಿಗಳು ಮಾತ್ರ.

✳ ✳ ✳

ಆಕಾರ್ ಪಟೇಲ್ ಗೊತ್ತು ತಾನೆ? ಕ್ಯಾರವಾನ್ ಮುಂತಾದ ನಿಯತಕಾಲಿಕೆಗಳಲ್ಲಿ ಪ್ರಸಕ್ತ ವಿದ್ಯಮಾನಗಳನ್ನು ಕುರಿತು ಬರೆಯುತ್ತಾನೆ ಮತ್ತು 'ಪ್ರಜಾವಾಣಿ'ಯಲ್ಲಿ ಆತನಿಗೆ ವಾರಕ್ಕೊಮ್ಮೆ ಆಹ್ವಾನಿತ ಲೇಖನ ಬರೆಯುವ ಅವಕಾಶವಿದೆ. ಗೋಸುಂಬೆ ದೃಷ್ಟಿ ಈತನಲ್ಲಿ ಬಹಳ ಚುರುಕಾಗಿದೆ. ಅಮೆರಿಕಾ, ಬ್ರಿಟನ್, ಮುಂತಾದ ದೇಶಗಳ ಪ್ರಚಾರ ಸಾಧನವಾದ ಆಮ್ನೆಸ್ಟಿ ಇಂಟರ್‌ನ್ಯಾಷನಲ್‌ನಲ್ಲಿ ಈತನಿಗೆ ಉನ್ನತ ಸ್ಥಾನವಿದೆ. ಮಾನವಿಕ ಹಕ್ಕುಗಳಿಗಾಗಿ ಹೋರಾಡುವುದು ಅವರ ಧ್ಯೇಯವಂತೆ. ಈಚಿನ ದಿನಗಳಲ್ಲಿ ಮೋದಿ ಸರ್ಕಾರವು ಸ್ವಯಂಸೇವಾ ಸಂಸ್ಥೆಗಳನ್ನು ಕಾಕದೃಷ್ಟಿಯಿಂದ ಕಾಣಲು ಆರಂಭಿಸಿದ ನಂತರ ಈತನ ಬರವಣಿಗೆಯಲ್ಲಿ ಗಮನಾರ್ಹ ಬದಲಾವಣೆ ಉಂಟಾಗಿದೆ. ಮೊದಲಿಗೆ ಮೋದಿ "ಕೀರ್ತಿ"ಯನ್ನು ಹಾಡಿ ಹೊಗಳುತ್ತಿರದ ಆಕಾರ್ ಈಗ ಮೋದಿಯವರಿಗೆ ಅಪಾರ ಗೌರವಯುತ ಪದವಿಗಳನ್ನು ನೀಡಿ ಬರೆಯುವುದನ್ನು ಆರಂಭಿಸಿದ್ದಾನೆ. ಎನ್‌ಜಿಓಗಳಿಗೆ ಕಡಿವಾಣ ಹಾಕುವುದಾಗಿ ಬೆದರಿಕೆ ಒಡ್ಡಿದ್ದರಿಂದ ಈ ಪರಿವರ್ತನೆಯಾಗಿರುವುದು ಖಚಿತ. ಮಾನವ ಹಕ್ಕುಗಳನ್ನು ಕುರಿತು ಎಂದೂ ವಿಶೇಷ ಕಾಳಜಿ ತೋರಿಸಿಲ್ಲದ ಪ್ರಧಾನಿ ಈಗ ಪಟೇಲ್‌ಗೆ ವಿಶ್ವಾಸಾರ್ಹ ವ್ಯಕ್ತಿಯಂತೆ ಕಾಣುತ್ತಿದ್ದಾರಂತೆ. ಒಟ್ಟಿನಲ್ಲಿ ಆಮ್ನೆಸ್ಟಿ ಇಂಟರ್ ನ್ಯಾಷನಲ್ ಮೋದಿ ಸರ್ಕಾರದಿಂದ ಆಮ್ನೆಸ್ಟಿ ಪಡೆಯಲು ಕಾತುರತೆ ತೋರಿದೆ.

✳ ✳ ✳

ಮುಂಬೈ ನಗರದ ಅದೃಷ್ಟವೋ ಅದೃಷ್ಟ: ಸಲ್ಮಾನ್ ಖಾನ್ ಎಂಬ ಕೇಡಿ ಈಗ "ಸ್ವಚ್ಛ ಮುಂಬೈ"ಗೆ ರಾಯಭಾರಿಯಾಗಿ ಆಯ್ಕೆಯಾಗಿದ್ದಾನೆ. ಅವನ ಕೈಯೆಲ್ಲಾ ರಕ್ತಕೆಂಪು; ಹಾಗಿರುವಾಗ ಅವನು ಹೇಗೆ ಸ್ವಚ್ಛತೆಗೆ ರಾಯಭಾರಿಯಾಗಲು ಅರ್ಹನಾದ? ಬೀದಿಯಾಚೆ ರಸ್ತೆಯ ಬಳಿ ಮಲಗಿದ್ದ ಕೂಲಿಕಾರರ ಮೇಲೆ ಕಾರು ಹಾಯಿಸಿ ಅವರನ್ನು ಕೊಂದುಹಾಕಿದ ಸಲ್ಮಾನ್ ತನ್ನ ಹಣದ ಮದದಿಂದ ಏನನ್ನು ಬೇಕಾದರೂ ಕೊಳ್ಳಬಲ್ಲ. ಅವನು ರಾಜಸ್ತಾನಕ್ಕೆ ಹೋಗಿ ಅಲ್ಲೊಂದು ಕೃಷ್ಣಮೃಗವನ್ನು ಕೊಂದ. ಏನು ಮಾಡಿದರೂ ಜೀರ್ಣಿಸಿಕೊಳ್ಳಬಲ್ಲ ವ್ಯಕ್ತಿ ಅವನು. ಈವರೆಗೆ ಅವನಿಗೆ ಶಿಕ್ಷೆಯಾಗಿಲ್ಲ. ಒಂದು ನ್ಯಾಯಾಲಯವು ಶಿಕ್ಷೆ ವಿಧಿಸಿದರೆ ಮೇಲಿನ ಇನ್ನೊಂದು ನ್ಯಾಯಾಲಯಕ್ಕೆ ಹೋಗುತ್ತಾನೆ, ಅಂಥವನಿಗೆಲ್ಲಿಯ ಶಿಕ್ಷೆ! ಅವನನ್ನು ಸ್ವಚ್ಛತೆಯ ರಾಯಭಾರಿ ಮಾಡಿಕೊಂಡಿರುವ ಮುಂಬೈ ಮಹಾನಗರ ಪಾಲಿಕೆಯಲ್ಲಿ ಎಂಥ ಕೊಳಕು ತುಂಬಿದೆಯೆಂಬುದಕ್ಕೆ ಇದೊಂದು ಪುರಾವೆ.

✳ ✳ ✳

ಕೇಂದ್ರ ಆರೋಗ್ಯ ಮಂತ್ರಿ ನಡ್ಡಾ ಅಖಿಲ ಭಾರತ ಪ್ರವೇಶ ಪರೀಕ್ಷೆಯೊಂದನ್ನು ಕನ್ನಡ ಮಾಧ್ಯಮದಲ್ಲೂ ನಡೆಸಲು ಒಪ್ಪಿರುವುದಾಗಿ ವರದಿಯೊಂದು ಹೇಳಿದೆ. ಅದು ವೈದ್ಯಕೀಯ ಶಿಕ್ಷಣಕ್ಕೆ ಪ್ರವೇಶ ಬಯಸುವವರಿಗೆ. ಕನ್ನಡದಲ್ಲಿ ನಡೆಸಲು ಒಪ್ಪಿರುವ ನಡ್ಡಾ ಉದಾರ ದಾನವನ್ನೇನೂ ನೀಡಿಲ್ಲ, ಕರ್ನಾಟಕದ ಹಕ್ಕನ್ನು ಗುರುತಿಸಿದ್ದಾರೆ, ಅಷ್ಟೆ. ಈ ವಿಷಯದಲ್ಲಿ ಮೂಲಭೂತವಾದ ಪ್ರಶ್ನೆ ಯಾವ ಮಾಧ್ಯಮದಲ್ಲಿ ಅಖಿಲ ಭಾರತ ಪ್ರವೇಶ ಪರೀಕ್ಷೆ ನಡೆಯಬೇಕು ಎಂಬುದಲ್ಲ; ಬದಲಾಗಿ, ಎಲ್ಲವನ್ನೂ ಕೇಂದ್ರದ ಉಸ್ತುವಾರಿಗೆ ಬಿಡಬೇಕೆ ಎಂಬುದೇ ಆಗಿದೆ. ಮೈಸೂರಿನಲ್ಲಿ ವೈದ್ಯಕೀಯ ಶಿಕ್ಷಣ ಪಡೆಯ ಬಯಸುವ ವಿದ್ಯಾರ್ಥಿನಿಗೆ ಷಿಲಾಂಗ್‌ನಲ್ಲಿರುವ ಕಾಲೇಜಿನಲ್ಲಿ ಸೀಟು ದೊರೆತರೆ ಆಕೆ ಅಲ್ಲಿಗೆ ತೆರಳಿ ವ್ಯಾಸಂಗ ಮಾಡಬೇಕೆ? ಪ್ರಜಾಪ್ರಭುತ್ವವಾದಿ ಒಕ್ಕೂಟವಾದ ಭಾರತದಲ್ಲಿ ಶಿಕ್ಷಣವು ಇಡಿಯಾಗಿ ಕೇಂದ್ರದ ಒಡಲಿಗೆ ಬೀಳುವುದು ಆರೋಗ್ಯಕರವಲ್ಲ ಮತ್ತು ಶೈಕ್ಷಣಿಕವಾಗಿ ಅದು ಹೀನ ಸಂಪ್ರದಾಯವಾಗುತ್ತದೆ. ವೈದ್ಯಕೀಯದಂತಹ ಶಿಕ್ಷಣಕ್ಕೆ ಉತ್ತರದ ಮತ್ತು ಪೂರ್ವದ ಕೆಲವು ರಾಜ್ಯಗಳು ಹೆಚ್ಚುಮಂದಿ ವಿದ್ಯಾರ್ಥಿಗಳನ್ನು ತುಂಬಲು ಈ ಉಪಕ್ರಮವು ಸಹಾಯಕ. ನಮ್ಮ ರಾಜ್ಯದ ವಿದ್ಯಾರ್ಥಿಗಳ ಸಂಖ್ಯೆ ಇಳಿಮುಖವಾಗುತ್ತದೆ. ಸೌಲಭ್ಯ ಕಲ್ಪಿಸುವವರು ನಾವು, ಸೌಲಭ್ಯ ಪಡೆಯುವವರು ಬೇರೆ ರಾಜ್ಯಗಳವರು. ಇದು ಸಮರ್ಥನೀಯವಲ್ಲ. ರಾಜ್ಯಗಳ ಹಕ್ಕುಗಳನ್ನು ಮೊಟಕುಮಾಡಿ ಏಕಪ್ರಕಾರದ ಶಿಕ್ಷಣವೆಂದು ಹೇಳುತ್ತಾ ಹಿಂದಿಯನ್ನು ಹೇರುವ ಹುನ್ನಾರಕ್ಕೆ ನಾವು ಬೆಂಬಲ ನೀಡಬಾರದು. ನಮ್ಮ ಕಾಲೇಜುಗಳಲ್ಲಿ ಪ್ರವೇಶ ನಮ್ಮ ರಾಜ್ಯದವರಿಗೆ ಎಂಬ ಸೂತ್ರವನ್ನು ಮಾನ್ಯ ಮಾಡಬೇಕೆಂದು ಕೇಂದ್ರ ಸರ್ಕಾರವನ್ನು ಒತ್ತಾಯಿಸಬೇಕು. ಅದನ್ನು ಬಿಟ್ಟು ಕನ್ನಡಕ್ಕೆ ಕಿರೀಟ ತೊಡಿಸುತ್ತಾರೆಂಬ ಭ್ರಮೆಯಿಂದ ಶಿಕ್ಷಣದ ಪ್ರಕ್ರಿಯೆಗಳನ್ನು ಕೇಂದ್ರಕ್ಕೆ ಬಿಟ್ಟುಕೊಡುತ್ತಾ ಹೋಗುವುದು ಸ್ವಯಂಹತ್ಯೆಗೆ ಹಾದಿಮಾಡಿ ಕೊಡುತ್ತದೆ. ಈ ಬಗ್ಗೆ ವ್ಯಾಪಕ ಚರ್ಚೆಯ ಅಗತ್ಯವಿದೆ.

✳ ✳ ✳

'ತುಟಿಗೆ ತುಪ್ಪ ಸವರಿದ ಹಾಗೆ' ಎಂಬ ನುಡಿಕಟ್ಟಿದೆ ಕನ್ನಡದಲ್ಲಿ. ಹಾಗೆ ಪ್ರಧಾನಿ ಮೋದಿಯವರ ಮಾತಿನ ಮೋಡಿ. ೨೦೧೬ರ ಕೊನೆಯ ದಿನ ಮಾಡಿದ ಅವರ ಭಾಷಣದಲ್ಲಿ ಐವತ್ತು ದಿನಗಳಿಂದ ಜನ ತಮ್ಮ ಹಣಕ್ಕಾಗಿ ತಡಕಾಡಿದ್ದರ ಬಗ್ಗೆಯಾಗಲೀ, ಸಾಲಿನಲ್ಲಿ ನಿಂತು ಸಾವನ್ನಪ್ಪಿದ ಜೀವಗಳಿಗಾಗಲಿ ಸ್ವಲ್ಪವೂ ಪಶ್ಚಾತ್ತಾಪವಿಲ್ಲದೆ ಉದ್ದಕ್ಕೂ ಭರವಸೆಗಳ ಮಹಾಪೂರವೇ ಹರಿಯಿತು. ಸುಮಾರು ಅರ್ಧಗಂಟೆಗಳಿಗಿಂತ ಹೆಚ್ಚು ಕಾಲದ ಅವರ ಭಾಷಣದಲ್ಲಿ ಜನರ ತಾಳ್ಮೆ ಮತ್ತೊಮ್ಮೆ ಪರೀಕ್ಷಿಸಿದಂತಿತ್ತು. ಜನರ ತಾಳ್ಮೆಗೆ ಕೃತಜ್ಞತೆ ಸಲ್ಲಿಸಿದ ಅವರು ಸ್ವಲ್ಪವೂ ಅಳುಕಿಲ್ಲದೆ ತಮ್ಮ ಬೆನ್ನು ತಟ್ಟಿಕೊಂಡಿದ್ದು, ಕಾಳಧನಕೋರರನ್ನು ಬಡಿದು ಹಾಕುವ ಸಂಕಲ್ಪ ತೋರಿದ್ದು, ವಿಚಿತ್ರವಾಗಿತ್ತು. ಎಷ್ಟು ಕಾಳಧನ ಪತ್ತೆಯಾಯಿತು ಎಂಬ ಬಗ್ಗೆ ಯಾವ ಸುಳಿವೂ ನೀಡದೆ ಬಡಜನರ ಬಗ್ಗೆ ಕಾಳಜಿ ತೋರಿಸಲು ಅವರು ನೀಡಿರುವ ಕೆಲ ರಿಯಾಯಿತಿಗಳು, ಹಿರಿಯ ನಾಗರಿಕರಿಗೆ ನೀಡಿರುವ ಬಡ್ಡಿ ಎಲ್ಲವೂ ಕನ್ನಡಿಯಲ್ಲಿ ಚಂದ್ರಬಿಂಬ ತೋರಿಸಿದಂತಿತ್ತು.

ಕಪ್ಪುಹಣ ಇರಿಸಿಕೊಂಡಿರುವವರು ಮೋದಿಗಿಂತ ಬುದ್ಧಿವಂತರು. ತಮ್ಮ ಹಣವನ್ನು ಸುರಕ್ಷಿತವಾಗಿ ಕಾಪಾಡಿಕೊಳ್ಳಲು ಅವರಿಗೆ ಚೆನ್ನಾಗಿ ಗೊತ್ತು. ಮೋದಿ ಸರಕಾರ ಚಾಪೆ ಕೆಳಗೆ ತೂರಿದರೆ ಅವರು ರಂಗೋಲಿ ಕೆಳಗೆ ತೂರುವವರು. ಎಲ್ಲವೂ ಹಣದ ವಿನಿಮಯವಿಲ್ಲದ ವಹಿವಾಟಾಗಬೇಕು ಎನ್ನುವುದು ಮೋದಿ ಕನಸು. ಅದು ಅಸಾಧ್ಯ ಎಂದು ಅವರ ಸಂಪುಟದ ಸಚಿವರುಗಳೇ ಹೇಳುತ್ತಾರೆ. ರಕ್ಷಣಾ ಸಚಿವ ಮನೋಹರ ಪರಿಕ್ಕರ್ ಪೂರ್ಣವಾಗಿ ಹಣದ ವಹಿವಾಟಿಲ್ಲದೆ ವ್ಯವಹಾರ ನಡೆಸುವುದು ದುಸ್ಸಾಧ್ಯ ಎಂದು ಹೇಳಿದ್ದಾರೆ. ಈಗಾಗಲೇ ಆದಾಯ ತೆರಿಗೆ ಇಲಾಖೆಯವರು, ಬೇರೆ ಬೇರೆ ಸರಕಾರಿ ಸಂಸ್ಥೆಗಳು ನಡೆಸುತ್ತಿರುವ ದಾಳಿಗಳಲ್ಲಿ ಸಾಕಷ್ಟು ಕೋಟಿ ಹೊಸ ನೋಟುಗಳ ಕಂತೆ ಪತ್ತೆಯಾಗಿವೆ. ೨೦೦೦ದ ನೋಟುಗಳು ಬಂದಿರುವುದರಿಂದ ಕಪ್ಪುಹಣ ಬಿಳಿ ಮಾಡುವವರಿಗೆ ಮತ್ತಷ್ಟು ಅನುಕೂಲವಾಗಿದೆ. ಈ ದಾಳಿಗಳಲ್ಲಿ ಕೂಡ ಮೋದಿ ಸರಕಾರ ತಾರತಮ್ಯ ತೋರುತ್ತಿದೆ ಎಂಬ ಅಪವಾದವಿದೆ. ಅದು ನಿಜವೂ ಕೂಡ. ಅಂತೂ ೨೦೧೭ರಲ್ಲೂ ನೋಟು ರದ್ದತಿಯಿಂದ ಜನರ ಬವಣೆ ಮುಂದುವರಿಯಲಿದೆ.

(೧೩ನೇ ಪುಟಕ್ಕೆ)

ಸಂಪಾದಕೀಯ

# ಪ್ರಶ್ನೆ ಕೇಳಬೇಕಾದ ಪ್ರಜೆ

ಪ್ರಜ್ಞಾವಂತ ಲೇಖಕರ, ಓದುಗರ ನಿರಂತರ ಸಹಭಾಗಿತ್ವ ಮತ್ತು ಬೆಂಬಲದಿಂದ 'ಹೊಸತು' ಪತ್ರಿಕೆ ಹದಿನೆಂಟನೇ ವರ್ಷಕ್ಕೆ ಕಾಲಿಟ್ಟಿದೆ. ಜನಪರ ಕಾಳಜಿ ಮತ್ತು ಜನಪರ ಚಿಂತನೆಗಳನ್ನೇ ಪ್ರಧಾನವಾಗಿಟ್ಟುಕೊಂಡು ಒಂದು ಪತ್ರಿಕೆ ಉಳಿದು ಬೆಳೆಯುವುದು ಇಂದಿನ ಸಂದರ್ಭದಲ್ಲಿ ಒಂದು ಸಾಹಸವೇ. ಕಳೆದ ಹದಿನೇಳು ವರ್ಷಗಳಿಂದ ಇಂಥ ಸಾಹಸ ಮಾಡಲು ಸಾಧ್ಯವಾಗಲು 'ಹೊಸತು'ವಿನ ಲೇಖಕರ ಬಳಗ, ಓದುಗರು, ಜಾಹೀರಾತುದಾರರು, ನವಕರ್ನಾಟಕ ಸಿಬ್ಬಂದಿ ಎಲ್ಲರೂ ಕಾರಣಕರ್ತರಾಗಿದ್ದಾರೆ. ಈ ಎಲ್ಲರಿಗೂ 'ಹೊಸತು' ಸಂಪಾದಕೀಯ ಬಳಗದಿಂದ ಹೊಸ ವರ್ಷದ ಶುಭಾಶಯಗಳು.

೨೦೧೭ ನಮ್ಮೆಲ್ಲರ ನೆಮ್ಮದಿಯ ಬದುಕಿಗೆ ಪೂರಕವಾಗಿರಲಿ, ಕಂಡ ಕನಸುಗಳು ನನಸಾಗಲಿ. ಪ್ರಭುತ್ವಗಳು ಹಕ್ಕುಗಳನ್ನು ಕಸಿಯಬಹುದು, ಕನಸುಗಳನ್ನು ಕಸಿಯಲಾರವು.

✳ ✳ ✳

೨೦೧೬ರ ಆರಂಭದಿಂದಲೇ ನಮ್ಮ ದೇಶದ ಕೇಂದ್ರ ಸರಕಾರ ಶೈಕ್ಷಣಿಕ ಕ್ಷೇತ್ರದ ಸ್ವಾಯತ್ತ ಸಂಸ್ಥೆಗಳ ಮೇಲೆ ದಾಳಿ ಮಾಡಿತು. ಆ ದಾಳಿ ಬಹುತೇಕ ಕ್ಷೇತ್ರಗಳನ್ನು ವ್ಯಾಪಿಸಿ ವರ್ಷದ ಕೊನೆಗೆ ಭಾರತೀಯ ರಿಸರ್ವ್ ಬ್ಯಾಂಕನ್ನೂ ಒಳಗೊಂಡಿತು. ಸ್ವಾಯತ್ತ ಸಂಸ್ಥೆಗಳ ಹಕ್ಕು ಮತ್ತು ಅಸ್ತಿತ್ವವನ್ನು ನಾಶಮಾಡುವುದು ಸರ್ವಾಧಿಕಾರಿ ಪ್ರಭುತ್ವದ ಲಕ್ಷಣ. ಭಾರತದ ಪ್ರಭುತ್ವ ಸರ್ವಾಧಿಕಾರಿ, ಫ್ಯಾಸಿಸ್ಟ್ ಧೋರಣೆಯತ್ತ ಸಾಗುತ್ತಿರುವುದಕ್ಕೆ ಹಲವಾರು ಉದಾಹರಣೆಗಳು ಕಳೆದ ವರ್ಷದ ಅವಧಿಯಲ್ಲಿ ಕಾಣಿಸಿಕೊಂಡವು. ಕಳೆದ ತಿಂಗಳ ಸಂಚಿಕೆಯ ಸಂಪಾದಕೀಯದಲ್ಲಿ ಪ್ರಧಾನಿ ಮೋದಿಯವರ ನೋಟು ರದ್ದತಿಯ ಕುರಿತು ಎತ್ತಿದ ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿದಿವೆ. ಪ್ರಧಾನಿ ಮೋದಿಯವರು ಕಳೆದ ನವೆಂಬರ್ ೮ರಂದು ಮಾಡಿದ ನೋಟು ರದ್ದತಿಯ ಹಿನ್ನೆಲೆ ಅವರು ಹೇಳಿದ ಕಾರಣಕ್ಕೇ ಆಗಿದ್ದರೆ ಖಂಡಿತ ಸ್ವಾಗತಿಸಬಹುದಿತ್ತು. ಆದರೆ ಅವರು ಹೇಳಿದ ಕಾರಣಗಳು ಇಂದು ಪ್ರಶ್ನೆಗಳ ರೂಪದಲ್ಲಿ ತಿರುಗುಬಾಣವಾಗಿವೆ. 'ಕಪ್ಪುಹಣ ಮಟ್ಟಹಾಕಲು, ಭಯೋತ್ಪಾದನೆ ನಿಯಂತ್ರಿಸಲು, ನಕಲಿ ನೋಟು ನಾಶಮಾಡಲು ನೋಟು ರದ್ದತಿ' ಎಂಬ ಮೋದಿಯವರ ಭಾಷಣ ಸಾಮಾನ್ಯ ಪ್ರಜೆಗಳನ್ನು ರೋಮಾಂಚನಗೊಳಿಸಿತ್ತು. ಆದರೆ ನವೆಂಬರ್, ೮ರಂದು ಮಾಡಿದ ಭಾಷಣಕ್ಕೆ ಡಿಸೆಂಬರ್ ೩೧ರಂದು ಮೋದಿಯವರು ಉತ್ತರ, ಪುರಾವೆ, ಸಾಧನೆಗಳನ್ನು ತಮ್ಮ ಭಾಷಣದಲ್ಲಿ ಹೇಳಬೇಕಾಗಿತ್ತು. ದೇಶವೇ ಕಾಯುತ್ತಿತ್ತು. ಕೂಗಿ ಹೇಳಿ ಎಂದರೆ ನಮ್ಮ ಕೆಲವು ಮಾಧ್ಯಮಗಳು ಕುಣಿದಾಡಿ ಕೂಗಿ ಹೇಳುವ ಮಟ್ಟಕ್ಕಿಳಿದಿವೆ. ಡಿಸೆಂಬರ್ ೩೧ರಂದು ಪ್ರಧಾನಿ ಮೋದಿಯವರು ದೇಶವನ್ನುದ್ದೇಶಿಸಿ ಮಾಡಿದ ಭಾಷಣ ಅವರೇ ಎತ್ತಿದ ಪ್ರಶ್ನೆಗಳನ್ನು ಮರೆಮಾಚಿತು. ಅವರ ಪರವಾಗಿ ಪುಂಗಿ ಊದಿದ ಮಾಧ್ಯಮಗಳೇ ಬೆಚ್ಚಿಬಿದ್ದವು. ಪ್ರಧಾನಿಯವರು ಮುಂಬರುವ ಕೆಲವು ರಾಜ್ಯಗಳ ಚುನಾವಣೆಯನ್ನು ಗಮನದಲ್ಲಿಟ್ಟುಕೊಂಡು ಒಂದು ಮಿನಿ ಬಜೆಟ್ ಘೋಷಿಸಿದರು. ಅದರಲ್ಲಿ ಕೆಲವು ಬಡ್ಡಿ ರಿಯಾಯಿತಿಗಳನ್ನು ಹೊರತುಪಡಿಸಿದರೆ ನೋಟು ರದ್ದತಿಯ ವಿಷಯವೇ ಇರಲಿಲ್ಲ. ಆದರೆ ದೇಶದ ಜನತೆ ಸರತಿ ಸಾಲಿನಲ್ಲಿ ನಿಂತು ಅನುಭವಿಸಿದ ಕಷ್ಟಗಳ ಕುರಿತು ಮಾತ್ರ ಪ್ರಸ್ತಾಪವಿತ್ತು. ಹಾಗಿದ್ದರೆ ಮೂಲ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾದವರಾರು; ಕಪ್ಪು ಹಣ ಎಷ್ಟು ಬಯಲಿಗೆ ಬಂತು ? ನಕಲಿ ನೋಟುಗಳ ಪ್ರಮಾಣ ಎಷ್ಟು ? ಭಯೋತ್ಪಾದನೆಯ ಬೆನ್ನೆಲುಬು ಮುರಿಯಿತೇ ? ನಮ್ಮ ಆರ್ಥಿಕತೆಗೆ ಅದರಿಂದ ಏನು ಪ್ರಯೋಜನವಾಯಿತು ? ಸರತಿಯಲ್ಲಿ ನಿಲ್ಲದೆ ಕೆಲವು ಜನ ಕೋಟ್ಯಂತರ ಹೊಸ ನೋಟುಗಳನ್ನು ಸಂಗ್ರಹಿಸಿದ್ದು ಹೇಗೆ ? ಹೊಸ ನೋಟು ಪಡೆದೂ ಸಿಕ್ಕಿಹಾಕಿಕೊಳ್ಳದಿರುವವರೆಷ್ಟು ಜನ ? ನೋಟು ರದ್ದತಿಯ ಹಿಂದಿನ ಮೋಸವನ್ನು ಮರೆಮಾಚಲು ಪ್ರಧಾನಿಗಳು ಹೇಳುವ ನಗದುರಹಿತ ವ್ಯವಸ್ಥೆ ನಮ್ಮ ದೇಶದಲ್ಲಿ ಎಷ್ಟು ಸುರಕ್ಷಿತ ? ಈ ಎಲ್ಲ ಬೆಳವಣಿಗೆಗಳಲ್ಲಿ ರಿಸರ್ವ್ ಬ್ಯಾಂಕ್‌ನ ಪಾತ್ರವೇನು ? ಈ ಪ್ರಶ್ನೆಗಳನ್ನು ಪ್ರಜೆಗಳು ಕೇಳಬೇಕಿದೆ. ಪ್ರಧಾನಿ ಮೋದಿಯವರಿಗೆ ಸರತಿ ಸಾಲಿನಲ್ಲಿ ನಿಂತು ತಮ್ಮ ಹಣವನ್ನು ತಾವೇ ಪಡೆಯಲಾಗದೆ ಸಾಮಾನ್ಯ ಜನ ಅನುಭವಿಸಿದ ನೋವಿನ ಬಗ್ಗೆ ಗೌರವವಿದ್ದರೆ ಮೇಲಿನ ಪ್ರಶ್ನೆಗಳಿಗೆ ಉತ್ತರ ಕೊಡಬೇಕು. ದೇಶದ ಉನ್ನತ ಜನಪ್ರತಿನಿಧಿ ವೇದಿಕೆಯಾದ ಸಂಸತ್ತಿನಲ್ಲಿಯೇ ಉತ್ತರಿಸದ ಪ್ರಧಾನಿ ಪ್ರಜೆಗಳ ಪ್ರಶ್ನೆಗೆ ಉತ್ತರಿಸುವರೇ, ಪ್ರಜೆಗಳೇ ತೀರ್ಮಾನಿಸಬೇಕು.

ದೇಶ ಕಂಡ ಅಸಹಜ ಬೆಳವಣಿಗೆ ಎಂದರೆ ಪ್ರಶ್ನೆ ಕೇಳಿದವರನ್ನೇ ಲೇವಡಿ ಮಾಡುವ, ಅಪರಾಧಿಗಳನ್ನಾಗಿ ಬಿಂಬಿಸುವ ಪ್ರವೃತ್ತಿ. ಇಂಥ ಪ್ರಧಾನಿಯನ್ನು ದೇಶ ಕಂಡಿರಲಿಲ್ಲ. ದೇಶದ ಪ್ರಧಾನಿ ಒಂದು ಪಕ್ಷದ ಪ್ರಧಾನಿಯಾಗಿ ವರ್ತಿಸಿದ್ದು ಪ್ರಜಾಸತ್ತೆಯ ಅವನತಿಯ ಸ್ಥಿತಿಯನ್ನು ತೋರಿಸುತ್ತದೆ. ಇಂಥ ಸಂದರ್ಭವನ್ನು ಸಮರ್ಥವಾಗಿ ಎದುರಿಸಿ ಜನತೆಯ ನೋವಿಗೆ ಸ್ಪಂದಿಸಬೇಕಾದ ವಿರೋಧ ಪಕ್ಷಗಳು ಕೇವಲ ಟೀಕೆಗೆ ಸೀಮಿತಗೊಂಡದ್ದು ಪರಿಸ್ಥಿತಿಯ ವ್ಯಂಗ್ಯ. ಎಡಪಕ್ಷಗಳನ್ನು ಹೊರತುಪಡಿಸಿದರೆ ಸಂಸತ್ತಿನಲ್ಲಿರುವ ವಿರೋಧ ಪಕ್ಷಗಳು ಆಳುವ ಪಕ್ಷವನ್ನು ಪ್ರಶ್ನಿಸುವ ನೈತಿಕತೆಯನ್ನು ಕಳೆದುಕೊಂಡಿವೆ. ಕಾಂಗ್ರೆಸ್ ಪಕ್ಷದ ನಾಯಕತ್ವದ ಯುಪಿಎ ಸರ್ಕಾರ ಭ್ರಷ್ಟಾಚಾರದ ಭಾರದಿಂದಲೇ ಕುಸಿದು ಜನಮನ್ನಣೆಯನ್ನು ಕಳೆದುಕೊಂಡಿದ್ದರಿಂದ ಆ ಪಕ್ಷದ ನಾಯಕರ ಮಾತುಗಳನ್ನು ಜನ ಗಂಭೀರವಾಗಿ ಪರಿಗಣಿಸುವುದಿಲ್ಲ. ಪ್ರಾದೇಶಿಕ ಪಕ್ಷಗಳು ಆಂತರಿಕ ಸಂಘರ್ಷದಿಂದಾಗಿ ತಮ್ಮ ಅಸ್ತಿತ್ವಕ್ಕಾಗಿ ಪರದಾಡುತ್ತಿವೆ. ಇಂಥ ಸಂದರ್ಭದಲ್ಲಿ ದೇಶದ ಜನತೆಯೇ ದೇಶ ಎದುರಿಸುತ್ತಿರುವ ಈ ಸಂಕಟದ ಸವಾಲುಗಳಿಗೆ ಉತ್ತರ ಕಂಡುಕೊಳ್ಳಬೇಕಾಗಿದೆ. ಭಾರತದ ಜನತೆಗೆ ಇಂಥ ಸವಾಲುಗಳನ್ನು ಎದುರಿಸಿದ ಅನುಭವ ಇದೆ. ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿಗೆ ತಕ್ಕಂತೆ ಕುಣಿಯುವ ಸರಕಾರಗಳನ್ನು ಜನತೆ ಕಿತ್ತೆಸೆಯುತ್ತಾರೆಂಬ ಭರವಸೆಯನ್ನು ಕಳೆದುಕೊಳ್ಳಬೇಕಾಗಿಲ್ಲ. ೨೦೧೭ ಅಂಥ ಪ್ರಕ್ರಿಯೆಗೆ ಚಾಲನೆ ನೀಡಲಿ ಎಂದು ಆಶಿಸೋಣ.

ನೋಟು ರದ್ದತಿಯ ವಿಷಯವನ್ನು, ಅದಕ್ಕೆ ಜನತೆ ತೋರಿದ ಪ್ರತಿಕ್ರಿಯೆಯನ್ನು ಜನತೆಯ ದೃಷ್ಟಿಯಿಂದಲೇ ನೋಡಿದರೆ ಇನ್ನೊಂದು ವಿಷಯ ಸ್ಪಷ್ಟವಾಗುತ್ತದೆ. ಜನತೆಗೆ ಕಾಳಧನಿಕರ ಮೇಲೆ ಅಪಾರವಾದ ಸಿಟ್ಟಿದೆ. ತಮ್ಮ ಬಡತನ, ನೋವುಗಳಿಗೆ ಕಾಳಧನಿಕರು, ಭ್ರಷ್ಟಾಚಾರಿಗಳು ಕಾರಣ ಎಂಬ ವಾಸ್ತವದ ಅರಿವಿದೆ. ಆ ಕಾರಣದಿಂದಾಗಿಯೇ ಈ ನೋಟು ರದ್ದತಿಯಿಂದಾಗಿ ಉಂಟಾದ ಅಪಾರ ನೋವುಗಳನ್ನು ಸಹಿಸಿಕೊಂಡಿದ್ದಾರೆ. ಆದರೆ ಇದು ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿಗಾಗಿ ನಡೆದ ನಾಟಕ, ಜನತೆಗೆ ಪ್ರಭುತ್ವ ಬಗೆದ ಮಹಾವಂಚನೆ ಎಂದು ಅರ್ಥವಾದಾಗ ಖಂಡಿತ ಸಿಡಿದೇಳುತ್ತಾರೆ. ಅವರ ಸಾತ್ವಿಕ ಸಿಟ್ಟು ನಮ್ಮ ಪ್ರಜಾಸತ್ತೆಯನ್ನು ಕಾಪಾಡುತ್ತದೆ. ಇದಕ್ಕಾಗಿ ಜನಪರ ಚಳುವಳಿಕಾರರು ಕ್ರಿಯಾಶೀಲರಾಗಿ ಜನರ ಮಧ್ಯೆ ಕೆಲಸ ಮಾಡಬೇಕು. ಈ ಹಿನ್ನೆಲೆಯಲ್ಲಿ ೨೦೧೭ರ ಈ ವಿಶೇಷ ಸಂಚಿಕೆಯಲ್ಲಿ ಜನಪರ ಚಳುವಳಿಗಳ ಸ್ಥಿತಿಗತಿಯ ಕುರಿತು ವಿಶೇಷ ಲೇಖನಗಳನ್ನು ಪ್ರಕಟಿಸಲಾಗಿದೆ. ದೇಶದ ಎಲ್ಲ ಜನಪರ ಚಳುವಳಿಗಳ ಮಧ್ಯೆ ಐಕ್ಯತೆ ಮೂಡಿ ಸಾಮಾನ್ಯ ಕಾರ್ಯಕ್ರಮದ ಅಡಿಯಲ್ಲಿ ಜನಾಂದೋಲನ ನಡೆಯಬೇಕಾದ ಅವಶ್ಯಕತೆ ಹಿಂದೆಂದಿಗಿಂತಲೂ ಇಂದು ಹೆಚ್ಚಿದೆ. ಎಲ್ಲ ಜನಪರ ಚಳುವಳಿಗಳ ನಾಯಕರು, ಕಾರ್ಯಕರ್ತರು ಆಂತರಿಕ ಭಿನ್ನಾಭಿಪ್ರಾಯಗಳನ್ನು ತೊರೆದು ಜನತೆಯ ಹಿತಾಸಕ್ತಿಗಾಗಿ, ಪ್ರಜಾಸತ್ತೆಯನ್ನು ಬಲಪಡಿಸಲು ಎಲ್ಲ ರಂಗಗಳಲ್ಲಿ ಹೋರಾಡಬೇಕಿದೆ.

ವಿಶ್ವದಲ್ಲಿ ಜಾಗತೀಕರಣ ಪ್ರೇರಿತ ಅರ್ಥವ್ಯವಸ್ಥೆ ಕುಸಿದುಬಿದ್ದಿದೆ. ಸಮಾಜವಾದಕ್ಕೆ ಬಂಡವಾಳವಾದವೇ ಪರ್ಯಾಯ ಎಂಬ ಅಥವಾ ಬಂಡವಾಳವಾದಕ್ಕೆ ಪರ್ಯಾಯವೇ ಇಲ್ಲವೆಂಬ ನವ ಉದಾರೀಕರಣದ ಪರವಾದ ಘೋಷಣೆ ಹುಸಿಯಾಗಿದೆ. ಜನತೆಗೆ ಉದ್ಯೋಗ, ನೆಮ್ಮದಿಯ ಬದುಕನ್ನು ನೀಡುವಲ್ಲಿ ಉದಾರೀಕರಣದ ಮಾರ್ಗ ತುಳಿದ ಪ್ರಭುತ್ವಗಳು ವಿಫಲವಾಗಿವೆ. ಯಂತ್ರಜ್ಞಾನ, ತಂತ್ರಜ್ಞಾನಗಳನ್ನು ಹೆಚ್ಚು ಹೆಚ್ಚು ಸೇವಾ ಮತ್ತು ಉತ್ಪಾದನಾ



ವಲಯದಲ್ಲಿ ಬಳಸಿಕೊಂಡು ಉತ್ಪಾದನಾ ಪ್ರಕ್ರಿಯೆಯಿಂದ ಮಾನವ ಸಂಪನ್ಮೂಲವನ್ನು ದೂರವಿಡಲಾಗುತ್ತಿದೆ. ಸಂಪತ್ತಿನ ಕ್ರೋಢೀಕರಣದಲ್ಲಿ ಬೃಹತ್ ಕಾರ್ಪೊರೇಟ್ ಕಂಪನಿಗಳ ಮಧ್ಯೆ ಪೈಪೋಟಿ ನಡೆದಿದೆ. ಉದ್ಯೋಗಾವಕಾಶಗಳು ನಶಿಸುತ್ತಿರುವ ಇಂಥ ಸಂದರ್ಭದಲ್ಲಿ ಪ್ರಜೆಗಳಿಗೆ ಕೊಳ್ಳುವ ಶಕ್ತಿ ಇಲ್ಲದೆ ವಿಶ್ವದ ಹಲವಾರು ಶ್ರೀಮಂತ ದೇಶಗಳಲ್ಲಿ ಆರ್ಥಿಕ ವ್ಯವಸ್ಥೆ ಕುಸಿಯುತ್ತಿದೆ. ಇದನ್ನು ತಡೆಯಲು ಕೆಲವು ಪ್ರಭುತ್ವಗಳು ಉದ್ಯೋಗಕ್ಕೆ ಬದಲಾಗಿ ಜನತೆಗೆ ವಾರ್ಷಿಕ, ಮಾಸಿಕ ಕಂತುಗಳಲ್ಲಿ ನಿರ್ದಿಷ್ಟ ಪ್ರಮಾಣದ ಹಣ ಕೊಟ್ಟು ಅವರ ಆಕ್ರೋಶ ತಣಿಸುವ ಪ್ರಸ್ತಾವವನ್ನು ಮಾಡಿವೆ. ಆದರೆ ಜನತೆ ಅಂಥ ಭಿಕ್ಷೆ ರೂಪದ ಪ್ರಸ್ತಾವಗಳನ್ನು ತಿರಸ್ಕರಿಸಿ ಉದ್ಯೋಗಕ್ಕಾಗಿ ಹೋರಾಡುತ್ತಿದ್ದಾರೆ. ಜಾಗತಿಕ ಇತಿಹಾಸದಲ್ಲಿ ದುಡಿವ ಜನರೇ ಅಧಿಕಾರ ಕೈಗೆತ್ತಿಕೊಂಡು ಸಾಮ್ರಾಜ್ಯಶಾಹಿಯ ಶೋಷಣೆಗೆ ಪರ್ಯಾಯ ರೂಪಿಸಿದ ಅಕ್ಟೋಬರ್ ಮಹಾಕ್ರಾಂತಿಯ ಶತಮಾನದ ವರ್ಷವಿದು. ಸಂಪತ್ತಿನ ಕ್ರೋಢೀಕರಣಕ್ಕೆದುರಾಗಿ ಸಂಪತ್ತಿನ ಸಮಾಜೀಕರಣಕ್ಕಾಗಿ ಹೋರಾಡುವ ಕಾಲ ಸನ್ನಿಹಿತವಾಗಿದೆ. ವಿಶ್ವದ ಜನತೆ ತಮ್ಮ ಸರ್ವತೋಮುಖ ಅಭಿವೃದ್ಧಿಗಾಗಿ, ನೆಮ್ಮದಿಗಾಗಿ ನಡೆಸುತ್ತಿರುವ ಹೋರಾಟ ಯಶಸ್ವಿಯಾಗಲಿ ಎಂದು ‘ಹೊಸತು’ ಈ ಹೊಸ ವರ್ಷದ ಸಂದರ್ಭದಲ್ಲಿ ಹಾರೈಸುತ್ತದೆ.

ಸಿದ್ಧನಗೌಡ ಪಾಟೀಲ.

*(ಈ ತಿಂಗಳು – ೧೧ನೇ ಪುಟದಿಂದ)*

ನಗರಗಳಲ್ಲಿ ಹೊಸ ನೋಟುಗಳ ಚಲಾವಣೆ ಸ್ವಲ್ಪ ಸುಧಾರಿಸಿದ್ದರೂ ಗ್ರಾಮಾಂತರ ಪ್ರದೇಶಗಳಲ್ಲಿ ತೊಂದರೆ ಇದ್ದೇ ಇದೆ. ಹಣ ಪಡೆದುಕೊಳ್ಳುವ ಮಿತಿಯ ನಿರ್ಬಂಧಗಳಿಂದಾಗಿ ಜನವರಿ ತಿಂಗಳಲ್ಲೂ ಸಂಬಳಕ್ಕಾಗಿ ತಡಕಾಟ ಮುಂದುವರಿಯಲಿವೆ. ಈಗಾಗಲೇ ಉದ್ಯೋಗ ಕಳೆದುಕೊಂಡಿರುವವರು ಏನು ಮಾಡಬೇಕು ಎನ್ನುವುದನ್ನು ಮೋದಿ ಉತ್ತರಿಸಲಿ. ಸರಕಾರಿ ಅಂಕಿಅಂಶಗಳಿಗೂ ನಿಜಸ್ಥಿತಿಗೂ ಅಜಗಜಾಂತರ ವ್ಯತ್ಯಾಸ.

* * *

ನಮ್ಮ ಜನರಲ್ಲಿ ಮಾನವೀಯತೆ ಎಂಬುದು ಹೊರಟು ಹೋಗಿದೆಯೇ ಎನ್ನುವ ಅನುಮಾನ ಬರತೊಡಗಿದೆ. ಕೆಲದಿನಗಳ ಹಿಂದೆ ಬ್ಯಾಂಕು ಒಂದರ ಮುಂದೆ ಸಾಲಿನಲ್ಲಿ ನಿಂತಿದ್ದ ವ್ಯಕ್ತಿಯೊಬ್ಬ ಕೌಂಟರಿನ ಬಳಿ ಬಂದಾಗ ಕುಸಿದುಬಿದ್ದ. ಆದರೆ ಸಾಲಿನಲ್ಲಿದ್ದವರು ಹಣ ಪಡೆಯಲು ಕಾತುರರಾಗಿದ್ದರೇ ಹೊರತು ಯಾರೂ, ಬ್ಯಾಂಕ್ ಸಿಬ್ಬಂದಿಯು ಕೂಡ, ಆತನ ನೆರವಿಗೆ ಬರಲಿಲ್ಲ. ಆತ ಸತ್ತೇಹೋದ. ಸಕಾಲದಲ್ಲಿ ನೆರವು ಸಿಕ್ಕಿದ್ದರೆ ಯಾರಾದರೂ ಆಂಬ್ಯುಲೆನ್ಸ್‌ಗೆ ಫೋನ್ ಮಾಡಿದ್ದರೆ ಬದುಕುತ್ತಿದ್ದನೇನೋ ಆತ. ಈ ದೃಶ್ಯವನ್ನು ಇಡೀ ದಿನ ಎಲ್ಲ ದೃಶ್ಯಮಾಧ್ಯಮಗಳೂ ಪ್ರದರ್ಶಿಸಿದುವೇ ಹೊರತು ಕಿಂಚಿತ್ತೂ ಅಳುಕು ಇರಲಿಲ್ಲ. ಟಿಆರ್‌ಪಿ ಮೇಲೇ ಕಣ್ಣಿರಿಸಿರುವ ದೃಶ್ಯಮಾಧ್ಯಮದಿಂದ ಇನ್ನೇನು ನಿರೀಕ್ಷಿಸಲು ಸಾಧ್ಯ! ಅಂಥದೇ ಪ್ರಕರಣ ಈಚೆಗೆ ಬೆಂಗಳೂರು ನಗರದ ಸಸ್ಯಕಾಶಿ ಎನ್ನಿಸಿಕೊಂಡಿರುವ ಲಾಲ್‌ಬಾಗ್‌ನಲ್ಲಿ ಸಂಭವಿಸಿತು. ಚಿಕ್ಕ ಬಾಲಕನೊಬ್ಬ ಕಳಪೆ ಕಾಮಗಾರಿಯ ಕಂಬ ಮುರಿದುಬಿದ್ದು ಗಾಯಗೊಂಡು ಮೃತಪಟ್ಟ. ಇದು ಈ ಉದ್ಯಾನವನದಲ್ಲಿ ಸಂಭವಿಸಿದ ಮೂರನೇ ಸಾವು. ಮೂವರೂ ಎಳೆಯರೇ. ಇದರಲ್ಲಿ ತಪ್ಪು ಯಾರದೆಂದು ತಿಳಿಯುವ ಮೊದಲು ಸುತ್ತಲೂ ಇದ್ದ ಜನ ನಡೆದುಕೊಂಡದ್ದು ಅಮಾನವೀಯ ರೀತಿಯಲ್ಲಿ. ಗಾಯಗೊಂಡ ಬಾಲಕನ ಶುಶ್ರೂಷೆಗಾಗಲಿ, ಪ್ರಾಣ ಉಳಿಸಲು ತಕ್ಷಣ ಆಂಬ್ಯುಲೆನ್ಸ್‌ಗಾಗಲಿ ಫೋನಾಯಿಸುವ ಬದಲು ಒದ್ದಾಡುತ್ತಿದ್ದ ಬಾಲಕನ ಫೋಟೋ ತೆಗೆದುಕೊಳ್ಳಲು ಕಾತುರ ತೋರಿದ್ದೀಗ ಬೇಸರದ ಸಂಗತಿ. ಕಿಂಚಿತ್ತಾದರೂ ಮಾನವೀಯತೆ ತೋರಿದ್ದರೆ ಬಾಲಕ ಬದುಕುಳಿಯುತ್ತಿದ್ದನೋ ಏನೋ. ಏಕೆ ಹೀಗಾಯಿತು ? ನಾವು ಮಾನವೀಯತೆಯನ್ನೇ ಕಳೆದುಕೊಂಡು ಮೋಜಿಗೆ ಶರಣಾಗಿದ್ದೇವೆಯೆ ? ಈ ಪ್ರಶ್ನೆಗಳು ಸಹಜವಾಗಿ ಏಳುತ್ತವೆ. ಇನ್ನು ಈ ಉದ್ಯಾನದ ಸಿಬ್ಬಂದಿಯವರು ನಡೆದುಕೊಳ್ಳುವ ರೀತಿಯೇ ಒಂದು ತರಹ. ಹಿಂದೊಮ್ಮೆ ಎಳೆಯನೊಬ್ಬ ಜೇನುನೊಣದ ದಾಳಿಗೆ ಬಲಿಯಾದ. ಆಗಲೂ ಅಷ್ಟೆ, ಸಕಾಲದಲ್ಲಿ ನೆರವು ಬರಲೇಇಲ್ಲ. ಲಾಲ್‌ಬಾಗ್‌ನ ಅಧಿಕಾರಿಗಳು ಮಾತ್ರ ಇಂಥೆಲ್ಲ ಘಟನೆಗಳು ನಡೆಯುತ್ತಿದ್ದಾಗ್ಯೂ ಆರಾಮವಾಗಿರುವುದು ಸೋಜಿಗದ ಸಂಗತಿ. ಇನ್ನು ವಿಚಾರಣೆ ನಡೆದು ಅದರ ವರದಿ ಯಾವಾಗ ಬರುತ್ತದೋ ಕಾದು ನೋಡಬೇಕು. ಸುರಕ್ಷತಾ ಕ್ರಮಗಳಿಗೆ ಲಾಲ್‌ಬಾಗ್‌ನಲ್ಲಿ ಆದ್ಯತೆ ನೀಡಬೇಕು.

* * *

ಮೋದಿ ನೇತೃತ್ವದ ಭಾಜಪ ಸರಕಾರ ಅಸ್ತಿತ್ವಕ್ಕೆ ಬಂದು ಎರಡೂವರೆ ವರ್ಷ ಕಳೆಯಿತು. ಈ ಅವಧಿಯಲ್ಲಿ ಚುನಾವಣೆಗಳ ಕಾಲದಲ್ಲಿ ನೀಡಿದ್ದ ಯಾವುದೇ ಒಂದು ಭರವಸೆಯೂ ಈಡೇರಲಿಲ್ಲ. ಸ್ವಿಸ್ ಬ್ಯಾಂಕ್ ಹಾಗೂ ಹೊರದೇಶಗಳಲ್ಲಿಟ್ಟಿರುವ ಕಪ್ಪುಹಣ ಇದುವರೆಗೆ ಹೊರಬರುವ ಸೂಚನೆಯೇ ಇಲ್ಲ. ಅಭಿವೃದ್ಧಿ ಮಂತ್ರ ಜಪಿಸಿದ್ದೇ ಒಂದು ಭಾಗ್ಯ, ವಾಸ್ತವವಾಗಿ ಅಂಥದ್ದೇನೂ ಕಂಡು ಬರಲಿಲ್ಲ. ಬದಲಾಗಿ ಎರಡೂವರೆ ವರ್ಷಗಳಲ್ಲಿ ಜನಸಾಮಾನ್ಯರಿಗೆ ಬಿದ್ದ ಹೊಡೆತ ಎಂದರೆ ೫೦೦ ರೂ., ೧೦೦೦ ರೂ. ನೋಟುಗಳ ದಿಢೀರ್ ರದ್ದತಿ ತಂದ ಸಂಕಷ್ಟ. ಮೋದಿ ಕಪ್ಪುಹಣ ಇರಿಸಿಕೊಂಡಿರುವವರ ನಿದ್ರೆ ಕೆಡಿಸಿದ್ದೇನೆ, ಅವರು ನಿದ್ರೆ ಮಾತ್ರೆ ಹುಡುಕುತ್ತಿದ್ದಾರೆ ಎಂದು ಹೇಳಿಕೊಂಡರೂ ನಿಜವಾಗಿ ನಿದ್ರೆ ಕೆಡಿಸಿಕೊಂಡವರು ಬಡಜನರು ಮತ್ತು ಕೆಲಸ ಕಳೆದುಕೊಂಡು ಬ್ಯಾಂಕು, ಎಟಿಎಂಗಳ ಮುಂದೆ ಸಾಲುಗಟ್ಟಿ ನಿಂತ ಜನಸಾಮಾನ್ಯರು. ಇನ್ನು ಅಧಿಕಾರ ವಹಿಸಿಕೊಂಡ ಮೇಲೆ ಮೊದಲ ಸ್ವಾತಂತ್ರ್ಯ ದಿನಾಚರಣೆಯ ಸಂದರ್ಭದಲ್ಲಿ, ಬಹಳ ಅಬ್ಬರದಿಂದ, ಅದ್ದೂರಿಯಿಂದ ಘೋಷಿಸಿದ ‘ಭಾರತದಲ್ಲೇ ತಯಾರಿಸಿ’ (ಮೇಕ್ ಇನ್ ಇಂಡಿಯ) ಘೋಷಣೆಯೂ ಕೂಡ ಟುಸ್ ಎಂದಿದೆ. ಮುಖ್ಯವಾಗಿ ರಕ್ಷಣಾ ಕ್ಷೇತ್ರದಲ್ಲಿ ಇದನ್ನು ಜಾರಿಗೊಳಿಸಲು ಆದ್ಯತೆ ನೀಡಲಾಗಿತ್ತು. ಆದರೆ ಆಗಿರುವುದೇ ಬೇರೆ.

ಮೋದಿ ತಮ್ಮ ವಿಶ್ವಪರ್ಯಟನೆಯಲ್ಲಿ ಸಾಕಷ್ಟು ಒಪ್ಪಂದಗಳಿಗೆ ಸಹಿ ಹಾಕಿ ಬಂದಿದ್ದಾರೆ. ಇದರಲ್ಲಿ ಜೊಳ್ಳೆಷ್ಟೋ ಕಾಳೆಷ್ಟೋ ಎಂದು ಈಗಲೇ ಗೊತ್ತಾಗುವುದಿಲ್ಲ. ಭಾರತದಲ್ಲೇ ತಯಾರಿಸಿ ಘೋಷಣೆ ಹೋದಲ್ಲೆಲ್ಲ ಉಚ್ಚರಿಸುತ್ತಿದ್ದರೂ ರಕ್ಷಣಾ ಸಾಮಗ್ರಿಗಳ ಖರೀದಿಗೆ ದೊಡ್ಡ ಪ್ರಮಾಣದಲ್ಲಿ ವಿದೇಶೀ ಕಂಪೆನಿಗಳೊಂದಿನ ಒಪ್ಪಂದ ಮಾಡಿಕೊಂಡಿದ್ದಾರೆ. ಅಮೆರಿಕದೊಂದಿಗೆ ರಕ್ಷಣಾ ಕ್ಷೇತ್ರದಲ್ಲಿ ಪಾಲುದಾರವಾಗಲು ಭಾರತ ಸರಕಾರ ಒಪ್ಪಿಕೊಂಡಿದೆ. ದೊಡ್ಡ ಪ್ರಮಾಣದಲ್ಲಿ ರಕ್ಷಣಾ ಸಾಮಗ್ರಿಗಳ ಸರಬರಾಜಿಗೆ ಆರ್ಡರುಗಳನ್ನು ನೀಡಿದೆ. ೨೦೧೬ರ ಸೆಪ್ಟೆಂಬರ್‌ನಲ್ಲಿ ಫ್ರಾನ್ಸ್‌ನಿಂದ ೩೬ ರಾಫೇಲ್ ಯುದ್ಧ ವಿಮಾನಗಳನ್ನು ಖರೀದಿಸಲು ಒಪ್ಪಂದ ಮಾಡಿಕೊಳ್ಳಲಾಗಿದೆ. ಇದರ ಮೊತ್ತ ೭.೮೭ ಬಿಲಿಯ ಯೂರೋಗಳು (ಒಂದು ಯೂರೋಗೆ ಸುಮಾರು ೭೦ ರೂ.ಗಳು). ಅಕ್ಟೋಬರ್ ತಿಂಗಳಲ್ಲಿ ರಷ್ಯಾದಿಂದ ರಕ್ಷಣಾ ಸಾಮಗ್ರಿಗಳ ಖರೀದಿಗೆ ೧೦ ಬಿಲಿಯ ಡಾಲರುಗಳನ್ನು ವಿನಿಯೋಗಿಸಲಿದೆ. ಈ ಒಪ್ಪಂದದಲ್ಲಿ ಕೂಡ ಯುದ್ಧ ವಿಮಾನಗಳ ಖರೀದಿಗೇ ಆದ್ಯತೆ. ಒಟ್ಟಿನಲ್ಲಿ ಮೋದಿ ಸರಕಾರಕ್ಕೆ ಭಾರತದಲ್ಲೇ ತಯಾರಿಸುವುದಕ್ಕಿಂತ ಖರೀದಿಸುವುದೇ ಮೇಲು ಎಂಬುದಾಗಿ ತೋರುತ್ತಿದೆ. ●





















# ಪರಿವಿಡಿ

# ಪರಿವಿಡಿ



---


***ಮುಖಪುಟ ಚಿತ್ರ :*** ಫಿಡೆಲ್ ಕ್ಯಾಸ್ಟ್ರೊ

***ವಿನ್ಯಾಸ :*** ನವಕರ್ನಾಟಕ ವಿನ್ಯಾಸ

***ಈ ಸಂಚಿಕೆಯ ಚಿತ್ರಗಳ ಕಲಾವಿದರು :***
ಸುನಿಲ್ ಮಿಶ್ರಾ, ನಾಮದೇವ ಕಾಗದಗಾರ, ಕಮಲಂ ಅರಸು, ತನು, ವಿ. ಗೋಪಾಲ್

***ಕಚೇರಿ ಸಹಕಾರ :*** ಜಿ. ವಿ. ತೇಜೋವತಿ






















'ಹೊಸತು' ೨೦೧೬ರ ಡಿಸೆಂಬರ್ ಸಂಚಿಕೆಯಲ್ಲಿ ಪ್ರೊ॥ ಎನ್. ಬೋರಲಿಂಗಯ್ಯ ಅವರು ಕವಿ ಅಡಿಗರ 'ಪ್ರಾರ್ಥನೆ' ಕವನದ ನಾಯಕ ಯಾರು ? ಎಂಬ ಬಹು ಉಪಯುಕ್ತ ಪ್ರಶ್ನೆ ಎತ್ತಿದ್ದಾರೆ. ಕವನದ ಮೊದಲಿಗೇ ಸಂಬೋಧಿಸಲ್ಪಟ್ಟ 'ಪ್ರಭೂ' ಯಾರು ? – ಎಂಬ ಪ್ರಶ್ನೆಗೆ ಹಲವು ಕವನಗಳ ಸಹಯೋಗದೊಂದಿಗೆ ತಮ್ಮ ಉತ್ತರ ಸೂಚಿಸಿದ್ದಾರೆ. ಸಾದೃಶ್ಯದ ಈ ಸೂಚನೆಗಳು ಬಹು ಉಪಯುಕ್ತ.

ಇದರೊಡನೆ ಕವಿಯೇ ಸೂಚಿಸುವ ವೈದೃಶ್ಯದ ಮೂಲಕವೂ ಈ ನಾಯಕನನ್ನು ಇನ್ನಷ್ಟು ಸ್ಪಷ್ಟಪಡಿಸಿಕೊಳ್ಳಬಹುದೆಂದು ಪ್ರೊ॥ ಬೋರಲಿಂಗಯ್ಯನವರ ಲೇಖನ ಓದಿದಾಗ ಅನಿಸಿತು. 'ಕೂಪ ಮಂಡೂಕ' ಕವನ 'ನೀನೆಲ್ಲಿ ಈಗ' ಎಂದು ಪ್ರಾರಂಭವಾಗುತ್ತದೆ. ಪ್ರಾರ್ಥನೆಯಲ್ಲಿ ಹೊರಗಿದ್ದಂತೆ ಭಾಸವಾಗುವಾತ ಈಗ ತನ್ನೊಳಗೆಯೇ ಇರುವ ಅನುಭವವಾಗಿ ಹೊಂದಿರುವ ಬೆಳವಣಿಗೆ ಇದುವೆ ? ಕೂಪ ಮಂಡೂಕದಲ್ಲೂ ಇರುವ ರತಿ ಪ್ರತಿಮೆ ಭಾಗ ಮೂರರ ಕೊನೆಯಲ್ಲಿ ಹೀಗಿದೆ : "ಒಣಗುವುವು ಕುಡಿ ಹೊರಗೆ ಗಾಳಿ ತಾಗಿದ ನಿಮಿಷ/ಸೇರಿಕೊಳ್ಳದೆ ನಿನ್ನ ಮೂಲ ಧಾತು."

ನೀನೆಲ್ಲಿ ಈಗ ಎಂದು ತನ್ನ ಒಳಗಿದ್ದವ, ಬಳಿಯಿದ್ದವ ಈಗ ಇಲ್ಲದಿರುವ ಸ್ಥಿತಿ. ಕೂಪ ಮಂಡೂಕದ ಅಂತರಂಗ ವೀಕ್ಷಣೆ 'ಪ್ರಾರ್ಥನೆ'ಯಷ್ಟು ನಾಟಕೀಯತೆಗೆ ಅವಕಾಶ ನೀಡುವುದಿಲ್ಲ. ಪ್ರಾರ್ಥನೆಯಲ್ಲೂ ಅಂತರಂಗ ವೀಕ್ಷಣೆ ಹೆಚ್ಚಾದಂತೆ ನಾಟಕೀಯತೆ ಕಮ್ಮಿಯಾಗುತ್ತದೆ ಎಂಬುದನ್ನು ಗಮನಿಸಬಹುದು. ಅಡಿಗರ ಕಾವ್ಯದ ಮೂಲಧರ್ಮಗಳಲ್ಲಿ ನಾಟಕೀಯತೆಯೂ ಒಂದು. 'ಸ್ವಗತ' ಅಂತಹ ನಾಟಕೀಯತೆಗೆ ಅನುವು ಮಾಡಿಕೊಡುತ್ತದೆ. ಆದ್ದರಿಂದಲೆ ಅಡಿಗರು ಕನ್ನಡ ಕಾವ್ಯವನ್ನು ಹಾಡಿನಿಂದ ಸ್ವಗತದ ಕಡೆಗೆ ಒಯ್ದರು ಎಂದು ಹೇಳಬಹುದು.

ನಮ್ಮ ರಸ, ಧ್ವನಿ ತತ್ವಗಳನ್ನು ಅಭ್ಯಾಸ ಮಾಡುವಾಗ ಕಾವ್ಯಾರ್ಥವೇ ರಸ ಎಂಬುದು ಅಭಿನವಗುಪ್ತನ ಪೂರ್ವ ಪಕ್ಷ. ಕೊನೆಗೂ ಅವ ತಲುಪುವುದು ನಾಟ್ಯಾರ್ಥವೇ ರಸ ಎಂಬ ನೆಲೆಗೆ. ಕಾವ್ಯೇಪಿ ನಾಟ್ಯಾಯ ಮಾನ ಏವ ರಸಃ ಎಂಬುದು ಅವನದೇ ಮಾತು. ಕಾವ್ಯದಲ್ಲಿ ಅರ್ಥವನ್ನು ನಾಟಕೀಕರಣಗೊಳಿಸುವುದರಿಂದ ರಸ ಹುಟ್ಟುತ್ತದೆ ಎಂಬುದು ಸಿದ್ಧಾಂತ. ಅಡಿಗರು ರಸ ಸಿದ್ಧಾಂತ ಪ್ರತಿಪಾದಕರಲ್ಲ. ರಸವೆಂದರೆ ಅನುಭವದ ಮೂಲಕವಾಗಿ ತಿಳುವಳಿಕೆಯನ್ನು ನೀಡುವ ಸಾಧನವಾಗಿದೆ ಎಂಬುದಾಗಿಯೂ ಪ್ರೊ॥ ಕೀರ್ತಿನಾಥ ಕುರ್ತಕೋಟಿಯವರು 'ಪ್ರತ್ಯಭಿಜ್ಞಾನ'ದಲ್ಲಿ ಹೇಳುತ್ತಾರೆ. ಅಡಿಗರು ಅನೇಕ ಸಲ ಅರ್ಥಾನುಸಾರಿ ಲಯಕ್ಕಾಗಿಯೂ ನಾಟಕೀಯತೆಯನ್ನು ಬಳಸಿದ್ದಾರೆ.

ಈ ಹಿನ್ನೆಲೆಯಲ್ಲಿ ಅಂತರಂಗ ವೀಕ್ಷಣೆ ಹಾಗೂ ಶೋಧನೆಗಳ ನೆಲೆಗಳಲ್ಲಿ – ಕನಿಷ್ಠ ನಾಟಕೀಯತೆ 'ಪ್ರಾರ್ಥನೆ' ಹಾಗೂ 'ಕೂಪ ಮಂಡೂಕ' ಎರಡೂ ಕವನಗಳಲ್ಲಿ ಇವೆ. ಕೂಪ ಮಂಡೂಕದಲ್ಲಿ "ಹದ ಬಿಸಿಲಿನ ಸಾರಾಯಿ ನೆತ್ತಿಗೇರಿದ" ಅನುಭವ ಆಗಿದೆ. ಆದುದರಿಂದ ನೆಲಮುಗಿಲುಗಳ ಆಕರ್ಷಣೆಯಲ್ಲಿ ಇರುವ ಮಿತಿಯ ಅರಿವಾಗಿದೆ. ಆದರೆ ನಿನ್ನ ನಗೆ, ನಲ್ಮೆಯನ್ನು ಒಪ್ಪಿಯೂ ನೆಲದಲ್ಲಿ, ಕೊಳದ ತಳಕೆಸರಿಗೆ ಇಳಿದು ಅಲ್ಲಿ ಆಡುವ ಹೊಸ ಠರಾವು ಮಾಡಿದ್ದಾಗಿದೆ. ಅದು ನೆಲದ ಸಂಪೂರ್ಣ ಅಪ್ಪುಗೆ. ಮುಗಿಲು ಹಾಗೂ ಸೂರ್ಯರಿಂದ ಬಿಡುಗಡೆ. ಹೊರಗಿನ 'ಪ್ರಭು' ಒಳಗಿನ 'ನೀನು' ಆದ್ದರಿಂದ ಈ ಬದಲಾವಣೆ.

– ಹೀಗೆ ಸೂರ್ಯನ ವೈದೃಶ್ಯದಲ್ಲೂ 'ಪ್ರಭೂ'ವಿನ ಇನ್ನೊಂದು ಮುಖ ಕಾಣಲು ಸಾಧ್ಯ ಎಂದು ಪ್ರೊ॥ ಎನ್. ಬೋರಲಿಂಗಯ್ಯ ಅವರ ಲೇಖನ ಓದಿದಾಗ ಅನಿಸಿತು.

*ಬೆಂಗಳೂರು* **ಎಸ್. ಆರ್. ವಿಜಯಶಂಕರ**




ಗಾಂಧೀಜಿ ಮೇಲೆ ವಿವೇಕಾನಂದರ ಪ್ರಭಾವದ ಬಗ್ಗೆ ಇದೊಂದು ವಿವರಣೆ ಗಮನಿಸಬೇಕು : ಗಾಂಧೀಜಿ ೬.೨.೧೯೨೧ರಲ್ಲಿ ಬೇಲೂರು ಮಠಕ್ಕೆ ಹೋದಾಗ ವಿವೇಕಾನಂದರ ಬಗ್ಗೆ ಗಾಂಧೀಜಿಯವರನ್ನು ಕೇಳಿದಾಗ ಗಾಂಧೀಜಿ ಮಹಡಿಯ ವರಾಂಡಕ್ಕೆ ಹೋಗಿ ಹುಲ್ಲಿನ ಮೇಲೆ ಕುಳಿತಿದ್ದ ಜನರಿಗೆ ತಮ್ಮ ಮೇಲೆ ಆದ ವಿವೇಕಾನಂದರ ಪ್ರಭಾವ ಕುರಿತು, "ಇಂದು ವಿವೇಕಾನಂದರ ಜನ್ಮ ದಿನಾಚರಣೆಯನ್ನು ಆಚರಿಸಲಾಗುತ್ತಿದೆ. ನಾನು ನನ್ನ ಗೌರವಾರ್ಪಣೆ ಮಾಡಲು ಬೇಲೂರು ಮಠಕ್ಕೆ ಬಂದಿದ್ದೇನೆ. ನಾನು ಅವರ ಸಮಗ್ರ ಕೃತಿಗಳನ್ನು ಸಂಪೂರ್ಣವಾಗಿ ಅಧ್ಯಯನ ಮಾಡಿದ್ದೇನೆ. ಅವುಗಳ ಅಧ್ಯಯನದ ನಂತರ ನಾನು ನನ್ನ ದೇಶದ ಬಗ್ಗೆ ಹೊಂದಿದ್ದ ಪ್ರೀತಿ ಸಾವಿರಪಟ್ಟು ಹೆಚ್ಚಾಯಿತು. ಯುವಕರೆ, ಸ್ವಾಮಿ ವಿವೇಕಾನಂದರು ಬದುಕಿ ಇಹಲೋಕ ತ್ಯಜಿಸಿದ ಈ ಪವಿತ್ರ ಸ್ಥಳದಿಂದ ಸ್ಫೂರ್ತಿಗೊಳ್ಳದೆ ಬರಿಗೈಯಲ್ಲಿ ಹೋಗಬೇಡಿರೆಂದು ನಾನು ನಿಮ್ಮನ್ನು ಕೇಳಿಕೊಳ್ಳುತ್ತೇನೆ." (ಕೃತಿ "ಸ್ವಾಮಿ ವಿವೇಕಾನಂದ" ಬರೆದವರು ಸ್ವಾಮಿ ಜ್ಯೋತಿರ್ಮಯಾನಂದ, ೨ನೇ ಮುದ್ರಣ, ೧೯೮೮ ಪುಟ ೨೫೨–೫೩).

ದಿ ಡೈಯರಿ ಆಫ್ ಮಹದೇವ ದೇಸಾಯಿ (೧೯೫೩, ಪು. ೨೦೭–೮) ಎಂಬಲ್ಲಿ ಗಾಂಧೀಜಿಯವರು ವಿವೇಕಾನಂದರ ಬಗ್ಗೆ ಸ್ವಾಮಿ ಆನಂದ್ ಅವರಿಗೆ ಹೇಳಿದ್ದ ಮಾತುಗಳು ದಾಖಲಾಗಿವೆ. ವಿವೇಕಾನಂದರ ಬಗೆಗಿನ ಪೂಜ್ಯಭಾವನೆಯು ತಮ್ಮನ್ನು ಅನೇಕ ವಿಪತ್ತುಗಳಿಂದ ರಕ್ಷಿಸಿದೆಯೆಂದು ಸಹ ಗಾಂಧೀಜಿ ಹೇಳಿದ್ದಾರೆ. ಗಾಂಧೀಜಿಯವರ ಮೇಲೆ ವಿವೇಕಾನಂದರ ಪ್ರಭಾವದ ಪರಿಚಯ ಇದರಿಂದ ವ್ಯಕ್ತವಾಗುತ್ತದೆ.

*ಹಾಸನ* **ಜ. ಹೊ. ನಾರಾಯಣಸ್ವಾಮಿ**

ಡಿಸೆಂಬರ್ ೨೦೧೬ನೇ 'ಹೊಸತು' ಪತ್ರಿಕೆಯ ವಿವಿಧ ಶೀರ್ಷಿಕೆ ಲೇಖನ, ಕಾವ್ಯಲೋಕ, ಕವನ, ಕಥೆ, ಸಂದರ್ಶನ ವರದಿ ಮುಂತಾದ ಚಿತ್ರಕಲೆ ಓದುಗರಿಗೆ ಆಕರ್ಷಣೆಯಾಗಿ ಮುದ ನೀಡಿದೆ. ಆಸಕ್ತಿ, ಶ್ರದ್ಧೆ, ಉತ್ಸಾಹ, ಪ್ರೇರಣೆ ಮೂಡಿದೆ.

ಡಾ॥ ಎನ್. ಗಾಯತ್ರಿ ಹಾಗೂ ಡಾ॥ ಸಿದ್ದನಗೌಡ ಪಾಟೀಲ್ ಇವರ ಸಂದರ್ಶನದ ವರದಿ ಬರಗೂರು ರಾಮಚಂದ್ರಪ್ಪನವರ "ಬದುಕು ಜೀವನದ ಬಗ್ಗೆ" ಅರ್ಥಗರ್ಭಿತವಾಗಿ ವರ್ಣಿಸಿ ಓದುಗರಿಗೆ ಚೇತನ ನೀಡಿದ್ದಾರೆ.

ಕರ್ನಾಟಕ ಏಕೀಕರಣ "ಅರವತ್ತರ ಸಂಭ್ರಮ" ಎಂಬ ಲೇಖನ ಕನ್ನಡಿಗರಿಗೆ ನೆಲ, ಜಲ ಮತ್ತು ಭಾಷೆಯ ಬಗ್ಗೆ ಅರಿವು ಮೂಡಿಸಿದೆ.

ಅಖಂಡ ಕರ್ನಾಟಕವಾಗಿ ಈ ವರ್ಷಕ್ಕೆ ಏಕೀಕರಣಕ್ಕೆ ೬೦ರ ಸಂಭ್ರಮ ! ಆದರೆ ಕರ್ನಾಟಕ ಏಕೀಕರಣದ ಅಳಿವು–ಉಳಿವು ರಾಜ್ಯದ ಜನತೆಯಲ್ಲಿದೆ. ಕನ್ನಡ ಭಾಷೆ ನುಡಿಯುವುದು, ಕಲಿಯುವುದು, ಅಭಿವೃದ್ಧಿಪಡಿಸುವುದು ರಾಜ್ಯದಲ್ಲಿ ವಾಸಿಸುವ ಜನರ ಮೇಲೆ ಅವಲಂಬಿಸಿದೆ. ಕರ್ನಾಟಕ ಏಕೀಕರಣ ಲೇಖನ ಬರೆದ ಪ್ರಕಾಶ ಗಿರಿಮಲ್ಲಪ್ಪನವರು ರಾಜ್ಯದ ಜನತೆಗೆ "ಜಾಗ್ರತೆ ಅರಿವು" ಮೂಡಿಸಿರುವುದು ಶ್ಲಾಘನೀಯ.

*ಚೌಡಾಪುರ* **ಮರಿದೇವರ ಸಿದ್ದಪ್ಪ ಮೇಷ್ಟ್ರು**

## ಏಕವಚನ ಪ್ರಯೋಗ : ಸರಿ ಅಲ್ಲ

ಡಿಸೆಂಬರ್ 'ಹೊಸತು' 'ಈ ತಿಂಗಳು' ವಿಭಾಗದಲ್ಲಿ ಉಡುಪಿಯ ಪೇಜಾವರ ಮಠದ ಶ್ರೀ ವಿಶ್ವೇಶ್ವರ ತೀರ್ಥರನ್ನು ಕುರಿತು ಆರಂಭದಲ್ಲಿ ಅವರ ಬಗ್ಗೆ ಏಕವಚನ ಪ್ರಯೋಗ ಮಾಡಲಾಗಿದೆ. ಮುಂದಿನ ವಾಕ್ಯಗಳಲ್ಲಿ ಅವರ ಬಗ್ಗೆ ಬಹುವಚನ ಬಳಸಿದ್ದೀರಿ.

ಪೇಜಾವರ ಪೂಜ್ಯರನ್ನು, ಅವರ ಅಭಿಪ್ರಾಯಗಳನ್ನು, ಖಂಡಿಸುವುದರಲ್ಲಿ ನಿಮಗೆ ಸ್ವಾತಂತ್ರ್ಯ ಇದೆ – ಆದರೆ ಅಗೌರವದ ಭಾಷೆ ಸರಿಯಲ್ಲ.

*ಬೆಂಗಳೂರು* **ಎಂ. ಚಿದಾನಂದಮೂರ್ತಿ**



# ೨೦೧೬

# ಅನಿಶ್ಚಿತತೆ, ಅನಿರೀಕ್ಷಿತಗಳ ಆಗರ



೨೦೧೬ರ ವರ್ಷ ಅನಿರೀಕ್ಷಿತ, ಅನಿಶ್ಚಿತತೆಯ ವರ್ಷ. ಮುಂದಿನ ವರ್ಷ ಕೂಡ ಪರಿಸ್ಥಿತಿ ಹೆಚ್ಚು ಬದಲಾಗುವಂತೆ ಕಾಣುವುದಿಲ್ಲ. ನೆಮ್ಮದಿಯನ್ನು ಅರಸುವುದು ನಮ್ಮ ಹಂಬಲ.

– ಸಿ. ಆರ್. ಕೃಷ್ಣರಾವ್

---



**ಕ್ರಾಂತಿಕಾರಿ ಫಿಡೆಲ್ ಕ್ಯಾಸ್ಟ್ರೊಗೆ ನಮನ**

ಇಪ್ಪತ್ತನೇ ಶತಮಾನದ ಜನರ ಚಿಂತನೆಯ ಮೇಲೆ ಗಾಢವಾದ ಪ್ರಭಾವ ಬೀರಿದ ಮಹಾನ್ ವ್ಯಕ್ತಿಗಳು ರಷ್ಯಾದ ಅಕ್ಟೋಬರ್ ಮಹಾಕ್ರಾಂತಿಯ ರೂವಾರಿ ವ್ಲಾದಿಮಿರ್ ಇಲ್ಯಿಚ್ ಲೆನಿನ್, ಅಹಿಂಸಾವಾದಿ, ಸರ್ವೋದಯ ಪ್ರತಿಪಾದಕ ಮಹಾತ್ಮ ಗಾಂಧಿ, ವರ್ಣದ್ವೇಷದ ವಿರುದ್ಧ ಸಿಡಿದೆದ್ದ, ದಕ್ಷಿಣ ಆಫ್ರಿಕಾದ ಜನನಾಯಕ ನೆಲ್ಸನ್ ಮಂಡೇಲ, ಕ್ಯೂಬಾದ ಕ್ರಾಂತಿಕಾರಿ ನಾಯಕ ಫಿಡೆಲ್ ಕ್ಯಾಸ್ಟ್ರೊ ಇವರುಗಳು. ಇವರು ಯಾವತ್ತೂ ಸ್ಫೂರ್ತಿಯ ಸೆಲೆ. ಮಾರ್ಕ್ಸ್‌ವಾದಿ ಚಿಂತಕ, ಕ್ರಾಂತಿಕಾರಿ ನಾಯಕ, ದಕ್ಷಿಣ ಅಮೆರಿಕದ ದೇಶಗಳಲ್ಲಿ ಸಂಚಲನ ಉಂಟುಮಾಡಿದ, ಕ್ಯೂಬಾದಲ್ಲಿ ಐವತ್ತು ವರ್ಷಗಳು ಆಡಳಿತ ನಡೆಸಿ, ಬಲಾಢ್ಯ ಅಮೆರಿಕದ ನೆರೆಯಲ್ಲಿ ಸಮಾಜವಾದಿ ಸಮಾಜದ ಸ್ಥಾಪನೆಯತ್ತ ಅಡಿಯಿರಿಸಿ, ಎಲ್ಲ ಅಡ್ಡಿ–ಆತಂಕಗಳನ್ನು ಎದುರಿಸಿ ನಿಂತ ಮೇರುವ್ಯಕ್ತಿ ಫಿಡೆಲ್ ಕ್ಯಾಸ್ಟ್ರೊ ೨೦೧೬ರ ನವೆಂಬರ್ ೨೬ರಂದು ತಮ್ಮ ತೊಂಬತ್ತನೇ ವಯಸ್ಸಿನಲ್ಲಿ ನಿಧನ ಹೊಂದಿದ್ದು ಅಂತರರಾಷ್ಟ್ರೀಯ ಸಮಾಜವಾದಿ ಚಳವಳಿಗೆ ತುಂಬಲಾರದ ನಷ್ಟ. ಅಗಲಿದ ಮಹಾನ್ ಕಮ್ಯುನಿಸ್ಟ್ ನಾಯಕನಿಗೆ 'ಹೊಸತು' ಅಂತಿಮ ನಮನ ಸಲ್ಲಿಸುತ್ತದೆ.



ಅಮೆರಿಕದ ಭಂಟ ಸರ್ವಾಧಿಕಾರಿ ಬಟಿಸ್ಟಾ ಆಡಳಿತದ ವಿರುದ್ಧ ಸಶಸ್ತ್ರ ಹೋರಾಟ ನಡೆಸಿ ೧೯೫೯ರಲ್ಲಿ ಕೆರಿಬಿಯನ್ ಸಮುದ್ರದ ಪುಟ್ಟ ಕ್ಯೂಬಾ ದ್ವೀಪದಲ್ಲಿ ಅಧಿಕಾರಕ್ಕೇರಿದ ಫಿಡೆಲ್ ಕ್ಯಾಸ್ಟ್ರೊ ಅನಾರೋಗ್ಯ ಕಾರಣದಿಂದ ೨೦೦೮ರಲ್ಲಿ ಅಧಿಕಾರ ತ್ಯಜಿಸಿದರು. ಸಮಾಜವಾದಿ ಸಮಾಜದ ನಿರ್ಮಾಣದತ್ತ ಅಡಿಯಿರಿಸಿದ ಕ್ಯೂಬಾ ಅಮೆರಿಕದ ಕೆಂಗಣ್ಣಿಗೆ ಗುರಿಯಾಗಿ ಅನೇಕ ಸಂಕಷ್ಟಗಳನ್ನು ಅನುಭವಿಸಿದರೂ ದಿಟ್ಟತನದಿಂದ ಮುನ್ನಡೆಯಿತು. ೧೯೬೨ರಲ್ಲಿ ಮೂರನೇ ಮಹಾಯುದ್ಧದ ಸಂಭವವನ್ನು, ಅಮೆರಿಕ ವಿಧಿಸಿದ ಆರ್ಥಿಕ ದಿಗ್ಬಂಧನವನ್ನು, ಸೋವಿಯೆತ್ ಒಕ್ಕೂಟದ ಪತನಾನಂತರ ಉಂಟಾದ ಆರ್ಥಿಕ ಬಿಕ್ಕಟ್ಟನ್ನು ಎದುರಿಸಿದ ಧೀಮಂತ ನಾಯಕ ಕ್ಯಾಸ್ಟ್ರೊ ಅಲಿಪ್ತ ಚಳವಳಿಯ ಅಗ್ರಪಂಕ್ತಿಯಲ್ಲಿದ್ದವರು. ಅವರ ಅಗಲಿಕೆಯಿಂದ ಜಗತ್ತು ಒಬ್ಬ ಅತ್ಯಂತ ಶ್ರೇಷ್ಠ ದರ್ಜೆಯ ಮುತ್ಸದ್ದಿಯನ್ನು ಕಳೆದುಕೊಂಡು ಬಡವಾಗಿದೆ.

✶ ✶ ✶



**ಅಮೆರಿಕ : ಉಗ್ರ ಬಲಪಂಥೀಯರ ಮೇಲುಗೈ**

ತೀವ್ರ ಕುತೂಹಲ ಮೂಡಿಸಿದ್ದ ಅಮೆರಿಕದ ಅಧ್ಯಕ್ಷೀಯ ಚುನಾವಣೆಗಳಲ್ಲಿ ರಿಪಬ್ಲಿಕನ್ ಪಕ್ಷದ ಡೊನಾಲ್ಡ್ ಟ್ರಂಪ್‌ನ ಅನಿರೀಕ್ಷಿತ ಜಯ ತೀವ್ರ ಬಲಪಂಥೀಯರಿಗೆ ದೊರೆತಿರುವ ವಿಜಯದ ಸಂಕೇತ. ರಿಯಲ್ ಎಸ್ಟೇಟ್ ದಂಧೆಯ ಶ್ರೀಮಂತ ಟ್ರಂಪ್‌ನ 'ಟ್ರಂಪ್' ಕಾರ್ಡು ಅಮೆರಿಕದ ಶ್ರೇಷ್ಠತೆಯನ್ನು ಪುನರ್‌ಸ್ಥಾಪಿಸುವುದು, ದೇಶದ ಸರ್ವಾಂಗೀಣ ಅಭಿವೃದ್ಧಿ, ಅಮೆರಿಕನ್ನರಿಗೇ ಉದ್ಯೋಗ ಕಲ್ಪಿಸುವುದು,





ಅಕ್ರಮ ವಲಸೆಗಾರರನ್ನು ಹೊರಹಾಕುವುದು, ಮೆಕ್ಸಿಕನ್ನರ ವಲಸೆ ತಪ್ಪಿಸುವುದು, ಭಯೋತ್ಪಾದಕ ಮುಸ್ಲಿಮರನ್ನು ಮಟ್ಟಹಾಕುವುದು ಇತ್ಯಾದಿ, ಇತ್ಯಾದಿ. ಚುನಾವಣೆಯ ಕಾಲದಲ್ಲಿ ಆತನ ಭಾಷಣಗಳನ್ನು ಆಲಿಸಿದವರಿಗೆ ಥೇಟ್ ಹಿಟ್ಲರ್ ಜರ್ಮನಿಯ ರಾಷ್ಟ್ರಾಭಿಮಾನವನ್ನು ಕೆರಳಿಸಿದಂತೆಯೇ ಇತ್ತು. ಫ್ಯಾಸಿಸಂ ಜರ್ಮನ್ ಯುವಜನರ ದುರಭಿಮಾನವನ್ನು ಪೋಷಿಸಿದಂತೆಯೇ ಅಮೆರಿಕದ ಬಿಳಿಯ ಯುವಕರನ್ನು ಟ್ರಂಪ್ ಬಡಿದೆಬ್ಬಿಸಿದ ಉದ್ಯೋಗದ ಆಮಿಷ ಒಡ್ಡಿ. ಎರಡೂವರೆ ವರ್ಷಗಳ ಹಿಂದೆ ಭಾರತದಲ್ಲೂ ಬಲಪಂಥೀಯ ಭಾರತೀಯ ಜನತಾ ಪಕ್ಷದ ನಾಯಕತ್ವ ವಹಿಸಿಕೊಂಡ ನರೇಂದ್ರ ಮೋದಿ ಅಭಿವೃದ್ಧಿ ಮಂತ್ರ, ಉದ್ಯೋಗ ಸೃಷ್ಟಿಯ ಭರವಸೆ ನೀಡಿ ಅಧಿಕಾರಕ್ಕೇರಿದ್ದು ನೆನಪಿಗೆ ಬರುತ್ತದೆ. ಟ್ರಂಪ್ ಮತ್ತು ಮೋದಿ ಇಬ್ಬರೂ ಅಧಿಕಾರಕ್ಕೇರಿದ್ದು ಬಹುಮತದಿಂದೇನಲ್ಲ. ಮೂರನೇ ಒಂದು ಭಾಗಕ್ಕಿಂತ ಕಡಿಮೆ ಮತ ಪಡೆದು ಜಯ ಗಳಿಸಿದ್ದು ದೇಸಿ ಚುನಾವಣಾ ವ್ಯವಸ್ಥೆಯಿಂದ. ಚುನಾವಣೆಗಳಲ್ಲಿ ಟ್ರಂಪ್ ಹಿಲರಿ ಕ್ಲಿಂಟನ್‌ಗಿಂತ ಒಂದು ಮಿಲಿಯ ಕಡಿಮೆ ಜನಮತ ಗಳಿಸಿದರೂ ಜಯ ಗಳಿಸಿದ್ದು ಎಲೆಕ್ಟೋರಲ್ ಕಾಲೇಜ್ ನಿಯಮದ ವೈಪರೀತ್ಯದಿಂದ.

ಚುನಾವಣೆ ಪ್ರಚಾರ ಕಾಲದಲ್ಲಿ ಕೊಚ್ಚಿಕೊಳ್ಳುವ ಎಲ್ಲ ಬಡಾಯಿಗಳನ್ನೂ ಅಭ್ಯರ್ಥಿಗಳು ಕಾರ್ಯಗತ ಮಾಡುತ್ತಾರೆ ಎಂದೇನಲ್ಲ, ಭಾರತೀಯರಾದ ನಮಗೆ ಸಾಕಷ್ಟು ಅನುಭವವಾಗಿದೆ. ಅಮೆರಿಕ ಅದಕ್ಕೆ ಹೊರತಾದ್ದೇನಲ್ಲ. ಅಮೆರಿಕದಲ್ಲಿ ಯಾರೇ ಅಧಿಕಾರಕ್ಕೆ ಬಂದರೂ ಸೂತ್ರಧಾರರು ಕಾರ್ಪೊರೇಟ್ ವಲಯ, ಎಫ್.ಬಿ.ಐ., ಸಿ.ಐ.ಎ. ಕಳೆದ ಎಂಟು ವರ್ಷಗಳಲ್ಲಿ ಬರಾಕ್ ಒಬಾಮಾ ಆಡಳಿತದಲ್ಲಿ ಅದನ್ನು ಸ್ಪಷ್ಟವಾಗಿ ಕಂಡಿದ್ದೇವೆ. ಮೊದಲ ಬಾರಿಗೆ ಆಫ್ರಿಕನ್ ಅಮೆರಿಕನ್ ಪ್ರಜೆ ಒಬ್ಬ ರಾಷ್ಟ್ರಾಧ್ಯಕ್ಷ ಪದವಿಗೇರಿದ ಎಂಬುದನ್ನು ಬಿಟ್ಟರೆ ಬೇರೇನಿಲ್ಲ. ಡೆಮಾಕ್ರಟಿಕ್ ಪಕ್ಷದ ಅಭ್ಯರ್ಥಿ ಹಿಲರಿ ಕ್ಲಿಂಟನ್ ಆಯ್ಕೆಯಾಗಿದ್ದರೆ ಕನ್ಸರ್ವೇಟಿವ್ ಅಮೆರಿಕದಲ್ಲಿ ಪ್ರಥಮ ಮಹಿಳೆ ಆಡಳಿತ ಸೂತ್ರ ಹಿಡಿದಂತೆ ಆಗುತ್ತಿತ್ತು, ಹಿಲರಿ ಮತ್ತು ಟ್ರಂಪ್ ಮಧ್ಯೆ ಹೆಚ್ಚು ವ್ಯತ್ಯಾಸವೇನಿಲ್ಲ ಅನುಸರಿಸುವ ನೀತಿಗಳಲ್ಲಿ. ಟ್ರಂಪ್‌ಗೆ ಸರ್ವಾಧಿಕಾರಿಯಾಗುವ ಗುಣಗಳಿವೆಯಷ್ಟೇ ಅಲ್ಲ, ಅದಕ್ಕೆ ಪೂರಕವಾಗಿ ಸೆನೆಟ್ ಮತ್ತು ಕಾಂಗ್ರೆಸ್ ಎರಡೂ ಸದನಗಳಲ್ಲಿ ರಿಪಬ್ಲಿಕನ್ನರಿಗೆ ಬಹುಮತವಿದೆ. ಅದಲ್ಲದೆ, ಅಮೆರಿಕದ ಸಂವಿಧಾನದ ಪ್ರಕಾರ ಅಮೆರಿಕದ ಸುಪ್ರೀಂ ಕೋರ್ಟಿನ ನ್ಯಾಯಾಧೀಶರನ್ನು ನೇಮಕ ಮಾಡುವ ಹಕ್ಕು ಅಧ್ಯಕ್ಷರಿಗೆ ಇದೆ. ಭಾರತದಲ್ಲಿ ಮೋದಿ ಸರಕಾರ ಇದೇ ಬಗೆಯ ಹಕ್ಕು ಸಾಧಿಸುವುದಕ್ಕೆ ಪ್ರಯತ್ನಿಸುತ್ತಿದೆ. ಜನವರಿ ೨೧ರಂದು ಅಧಿಕಾರ ವಹಿಸಿಕೊಂಡ ನಂತರ ಟ್ರಂಪ್ ಆಡಳಿತದ ವೈಖರಿಯನ್ನು ಕಾಣಬಹುದು. ಭಾರತದ ಮಟ್ಟಿಗೆ ಮುಂದಿನ ದಿನಗಳಲ್ಲಿ ಐಟಿ ವಲಯಕ್ಕೆ ಬಿಸಿ ತಟ್ಟೀತು, ಬಂಡವಾಳದ ಹರಿವು ಕುಂಠಿತವಾದೀತು. ಹೆಚ್ಚಿನ ಬದಲಾವಣೆಗಳನ್ನೇನೂ ನಿರೀಕ್ಷಿಸಲಾಗದಿದ್ದರೂ ಟ್ರಂಪ್ ದುಸ್ಸಾಹಸಗಳಿಗೆ ಇಳಿಯುವ ಸೂಚನೆ ಬಲವಾಗಿದೆ.

* * *

**ಯೂರೋಪಿನ ಒಕ್ಕೂಟದಿಂದ ಬ್ರಿಟನ್ ನಿರ್ಗಮನ**

ಮಧ್ಯಪ್ರಾಚ್ಯದಿಂದ ದೊಡ್ಡ ಸಂಖ್ಯೆಯಲ್ಲಿ ನಿರಾಶ್ರಿತರ ವಲಸೆ, ಆರ್ಥಿಕ ಸಂಕಷ್ಟಗಳು, ನಿರುದ್ಯೋಗ, ಭಯೋತ್ಪಾದನೆಯಿಂದ ಪರಿತಪಿಸುತ್ತಿರುವ ಯೂರೋಪಿನ ಒಕ್ಕೂಟಕ್ಕೆ ಬ್ರಿಟನ್‌ನ ನಿರ್ಗಮನ ಭಾರೀ ಹೊಡೆತ. ಶೀತ ಯುದ್ಧದ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಈ ಒಕ್ಕೂಟ ಮುಂದುವರಿಯುವುದು ಅನುಮಾನ. ಅನಿರೀಕ್ಷಿತವಾಗಿ ಅಲ್ಪಮತದ ವ್ಯತ್ಯಾಸದಿಂದ 'ಬ್ರೆಕ್ಸಿಟ್'ಗೆ ದೊರೆತ ವಿಜಯ ಬ್ರಿಟನ್‌ನಲ್ಲಿ ಬಲಪಂಥೀಯ ಕನ್ಸರ್ವೇಟಿವ್ ಪಕ್ಷಕ್ಕೆ ಮೇಲುಗೈ. ಲೇಬರ್ ಪಕ್ಷದ ಪ್ರಧಾನಿ ಡೇವಿಡ್ ಕ್ಯಾಮರೂನ್ ತಲೆದಂಡ. ಆರು ತಿಂಗಳ ಹಿಂದೆ ಜನಮತ ಗಣನೆಯಲ್ಲಿ ತೀರ್ಮಾನವಾಗಿದ್ದರೂ ಬ್ರಿಟನ್ ಒಕ್ಕೂಟದಿಂದ ಹೊರಬರುವ ಪ್ರಕ್ರಿಯೆ ಸುಲಭವಾಗಿಲ್ಲ. ಬ್ರಿಟನ್‌ನ ಸರ್ವೋಚ್ಚ ನ್ಯಾಯಾಲಯದ ಮುಂದೆ 'ಬ್ರೆಕ್ಸಿಟ್' ಪ್ರಕರಣ ದಾಖಲಾಗಿದೆ. ಜನಮತ

ಗಣನೆಯಲ್ಲಿ ಸ್ಕಾಟ್ಲೆಂಡ್ ಬಹುಮತದಿಂದ 'ಬ್ರೆಕ್ಸಿಟ್' ಅನ್ನು ವಿರೋಧಿಸಿದೆ. ಅದು ಬ್ರಿಟನ್ನಿನಿಂದ ಪ್ರತ್ಯೇಕಗೊಳ್ಳುವ ಸಾಧ್ಯತೆಗಳೂ ಉಂಟು. ಈ ಮಧ್ಯೆ ಯೂರೋಪಿಯನ್ ಯೂನಿಯನ್ನಿನ ದೇಶಗಳಲ್ಲಿ ನಡೆದ ಚುನಾವಣೆಗಳಲ್ಲಿ ಬಲಪಂಥೀಯರ ಪ್ರಾಬಲ್ಯ ಹೆಚ್ಚಾಗಿರುವುದು ಕಂಡುಬಂದಿದೆ. ಈಗಾಗಲೇ ಆರ್ಥಿಕ ಬಿಕ್ಕಟ್ಟು ಎದುರಿಸುತ್ತಿರುವ ಒಕ್ಕೂಟದ ದೇಶಗಳಲ್ಲಿ ಜರ್ಮನಿಯೊಂದೇ ಸುಭದ್ರ. ಒಕ್ಕೂಟದ ಭವಿಷ್ಯ ಜರ್ಮನಿಯ ನಡೆಯ ಮೇಲೆ ಅವಲಂಬಿಸಿದೆ. ಒಮ್ಮೆ ಬ್ರಿಟನ್ ಹೊರಬಿದ್ದನಂತರ ಒಕ್ಕೂಟದಲ್ಲಿ ಬದಲಾವಣೆಗಳಾಗುವ ಸಂಭವ ಹೆಚ್ಚು.

✷ ✷ ✷

**ಅಮೆರಿಕ ಸಖ್ಯ – 'ನಾಮ್', 'ಸಾರ್ಕ್'ಗಳು ಅವಸಾನದ ಹಾದಿಯಲ್ಲಿ**

ಅಮೆರಿಕದೊಂದಿಗೆ ಸಹಭಾಗಿತ್ವ ಎಲ್ಲ ಬಗೆಯಲ್ಲೂ ಎನ್ನುವುದು ಮೋದಿ ಸರಕಾರದ ಸಿದ್ಧಾಂತ. ಕಳೆದ ಜೂನ್ ತಿಂಗಳಲ್ಲಿ ಅಮೆರಿಕಕ್ಕೆ ಭೇಟಿ ನೀಡಿದಾಗ ಪ್ರಧಾನಿ ನರೇಂದ್ರ ಮೋದಿ ಆ ದೇಶದೊಂದಿಗೆ ಬೆಸೆದ ಸಂಬಂಧ, ಒಪ್ಪಂದಗಳು ಅದಕ್ಕೆ ಸಾಕ್ಷಿ. ಅವರ ಹಿಂದೆಯೇ ರಕ್ಷಣಾ ಸಚಿವರು ಭೇಟಿ ನೀಡಿ ರಕ್ಷಣಾ ಸಾಮಗ್ರಿಗಳ ಸರಬರಾಜು ಕುರಿತು ಮಾಡಿಕೊಂಡ ಒಪ್ಪಂದಗಳು, ಜಂಟಿ ಸಮರಾಭ್ಯಾಸಗಳ ಯೋಜನೆಗಳು ಎರಡೂ ದೇಶಗಳ ಮಧ್ಯೆ ಉಂಟಾಗಿರುವ ಹೊಸ ನಂಟಿನ ದ್ಯೋತಕ. ಎರಡು ವರ್ಷಗಳಲ್ಲಿ ಮೋದಿ ಸರಕಾರದ ವಿದೇಶೀ ನೀತಿಯ ಬಹುದೊಡ್ಡ ಸಾಧನೆ ಎಂದರೆ ಅಲಿಪ್ತ ಚಳವಳಿಯಿಂದ ಅಮೆರಿಕದ ತೆಕ್ಕೆಗೆ ನೆಗೆದದ್ದು. ಅಮೆರಿಕದೊಂದಿಗೆ ಸಖ್ಯ ಚೀಣಾದ ಕೆಂಗಣ್ಣಿಗೆ ಗುರಿಯಾಗಿದೆ. ಎಂದಿನಂತೆ ಮೋದಿ ಈ ವರ್ಷವೂ ಕೂಡ ವಿದೇಶೀ ಪರ್ಯಟನೆಯನ್ನು ಮುಂದುವರಿಸಿದ್ದು ಅಚ್ಚರಿಯೇನಲ್ಲ. ಅವುಗಳ ಪೈಕಿ ಮುಖ್ಯವಾದ್ದು ಜಪಾನಿಗೆ ನೀಡಿದ ಭೇಟಿ ಹಾಗೂ ಆ ದೇಶದೊಂದಿಗೆ ಮಾಡಿಕೊಂಡ ನ್ಯೂಕ್ಲಿಯರ್ ಸರಬರಾಜು ಒಪ್ಪಂದ. ಭೇಟಿಯ ಕಾಲದಲ್ಲಿ ಮೋದಿ ಜಪಾನಿನ ಬುಲೆಟ್ ರೈಲಿನಲ್ಲಿ ಪ್ರಯಾಣ ಮಾಡಿ ತಮ್ಮ ಬಹುದಿನದ ಬಯಕೆ ಈಡೇರಿಸಿಕೊಂಡರು. ಈಗ ಅದನ್ನು ಭಾರತಕ್ಕೆ ತರುವ ಕನಸು ಕಾಣುತ್ತಿದ್ದಾರೆ.

ಇಷ್ಟೆಲ್ಲ ಪ್ರಪಂಚ ಸುತ್ತುವ ಮೋದಿಗೆ ವೆನೆಜುವೇಲದಲ್ಲಿ ಸೆಪ್ಟೆಂಬರ್ ನಡುವಿನಲ್ಲಿ ಜರುಗಿದ ಅಲಿಪ್ತ ರಾಷ್ಟ್ರಗಳ ಚಳವಳಿಯ ಶೃಂಗಸಭೆಯಲ್ಲಿ ಭಾಗವಹಿಸಲು ಸಮಯ ಸಿಗದೇಹೋದದ್ದು ಅಚ್ಚರಿಯ ಸಂಗತಿ. ಇದಕ್ಕೆ 'ನಾಮ್' (ಅಲಿಪ್ತ ಚಳವಳಿ) ಬಗ್ಗೆ ನಮೋ ಹೊಂದಿರುವ ಉಪೇಕ್ಷೆಯೇ ಕಾರಣ. ಭಾರತದ ಪರವಾಗಿ ಉಪರಾಷ್ಟ್ರಪತಿ ಹಮೀದ್ ಅನ್ಸಾರಿ ಭಾಗವಹಿಸಿದ್ದುದು ಅಲಿಪ್ತ ಚಳವಳಿಯೊಂದಿಗೆ ಭಾರತದ ಸಂಬಂಧದ ಅಂತ್ಯಕ್ಕೆ ಸೂಚಕವಾಗಿತ್ತು. ಒಂದು ಕಾಲದಲ್ಲಿ ಭಾರತ ಅಲಿಪ್ತ ಚಳವಳಿಯ ಅಗ್ರಪ್ರತಿಪಾದಕವಾಗಿತ್ತು ಎನ್ನುವುದು ಈಗ ಇತಿಹಾಸ. ಅದು ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಹಲವು ದಶಕಗಳ ಕಾಲ ಪ್ರಮುಖ ಪಾತ್ರ ವಹಿಸಿತ್ತು ಎನ್ನುವುದೂ ಇತಿಹಾಸ.

ದಕ್ಷಿಣ ಏಶಿಯ ಪ್ರಾದೇಶಿಕ ಸಹಕಾರ ಸಂಸ್ಥೆ (ಸಾರ್ಕ್) ಕೂಡ ಈಗ ಅತಂತ್ರ ಸ್ಥಿತಿಯಲ್ಲಿದೆ. ಅದರ ಮುಂದುವರಿಕೆ ಅನಿಶ್ಚಿತವಾಗಿದೆ. ಭಾರತ–ಪಾಕಿಸ್ತಾನ ಸಂಬಂಧಗಳು ಸಂಪೂರ್ಣವಾಗಿ ಹದಗೆಟ್ಟಿವೆ. ಮಾತುಕತೆಯ ಪ್ರಾರಂಭಕ್ಕೆ ವೇದಿಕೆ ಸಿದ್ಧವಾಗುತ್ತಿದ್ದ ಹಾಗೆ ಪಠಾಣ್‌ಕೋಟ್ ಸೈನಿಕ ಕೇಂದ್ರದ ಮೇಲೆ ಭಯೋತ್ಪಾದಕರ ದಾಳಿ ಮಾತುಕತೆಗೆ ಅಡ್ಡಿ. ಆನಂತರ ಕಾಶ್ಮೀರದ ಉರಿಯ ಮಿಲಿಟರಿ ಠಾಣೆಯ ಮೇಲೆ ಭಯೋತ್ಪಾದಕರು ನಡೆಸಿದ ದಾಳಿಯಲ್ಲಿ ಹತ್ತೊಂಬತ್ತು ಯೋಧರ ಹತ್ಯೆ ಭಯೋತ್ಪಾದಕರಿಂದ. ಎರಡೂ ದಾಳಿಗಳು ಪಾಕಿಸ್ತಾನದ ಐಎಸ್‌ಐ ಪ್ರೇರಿತ ಎಂಬುದು ಭಾರತ ಸರಕಾರದ ಆಪಾದನೆ. ಅದಕ್ಕೆ ಪ್ರತಿಕ್ರಿಯೆಯಾಗಿ ಕಾಶ್ಮೀರದ ಗಡಿಯಲ್ಲಿ ಭಾರತ ಸೇನೆಯಿಂದ 'ಸರ್ಜಿಕಲ್ ಸ್ಟ್ರೈಕ್' ಎಂದೇ ಹೆಸರಾಗಿರುವ ಕಾರ್ಯಾಚರಣೆ, ಭಯೋತ್ಪಾದಕರ ಕೇಂದ್ರಗಳ ಮೇಲೆ ನಡೆಸಲಾದ ಈ ಕಾರ್ಯಾಚರಣೆ ಪಾಕಿಸ್ತಾನದ ರಾಜಧಾನಿ ಇಸ್ಲಾಮಾಬಾದ್‌ನಲ್ಲಿ ನಡೆಯಬೇಕಾಗಿದ್ದ 'ಸಾರ್ಕ್' ಶೃಂಗಸಭೆಗೆ ಮೂಲ. ಭಾರತದ ಭಾಗವಹಿಸುವಿಕೆ ಅಸಾಧ್ಯವಾದ್ದರಿಂದ ಬೆಂಬಲವಾಗಿ ಭೂತಾನ್, ಶ್ರೀಲಂಕಾ, ಬಂಗ್ಲಾದೇಶಗಳೂ ಭಾಗವಹಿಸದಿರಲು ನಿರ್ಧರಿಸಿದ್ದರಿಂದ ಅನಿರ್ದಿಷ್ಟಕಾಲ ಶೃಂಗಸಭೆ ಮುಂದಕ್ಕೆ ಹೋಗಿದೆ. ಇತ್ತೀಚೆಗೆ, ಅಂದರೆ ಡಿಸೆಂಬರ್ ತಿಂಗಳಲ್ಲಿ ಜಮ್ಮುವಿನ ಮಿಲಿಟರಿ ಕೇಂದ್ರದ ಮೇಲೆ ದಾಳಿ ನಡೆದು ನಾಲ್ಕು ಭಾರತೀಯ ಯೋಧರು ಹತರಾಗಿದ್ದಾರೆ. ಹಾಗಾಗಿ ಭಾರತ–ಪಾಕಿಸ್ತಾನಗಳ ಸಂಬಂಧಗಳು ಹಿಂದೆಂದಿಗಿಂತಲೂ ಹಳಸಿಕೊಂಡಿವೆ. ಪಾಕಿಸ್ತಾನವನ್ನು ಭಯೋತ್ಪಾದನೆ ಪ್ರಚೋದನೆ ಕೇಂದ್ರ ಎಂದು ಘೋಷಿಸಿ ಪ್ರತ್ಯೇಕಿಸಲು ಅಂತರರಾಷ್ಟ್ರೀಯ ಸಂಸ್ಥೆಗಳ ವೇದಿಕೆಯಲ್ಲಿ ಭಾರತ ಹರಸಾಹಸ ಪಡುತ್ತಿದೆ. ಈಚೆಗೆ ಅಮೃತಸರದಲ್ಲಿ ಜರುಗಿದ 'ಹಾರ್ಟ್ ಆಫ್ ಏಶಿಯ' ಸಮ್ಮೇಳನದಲ್ಲೂ ಆ ಪ್ರಯತ್ನ ನಡೆಯಿತು. ಆದರೆ ನಿರೀಕ್ಷಿತ ಫಲ ದೊರಕಲಿಲ್ಲ. ಭಯೋತ್ಪಾದನೆಯ ಖಂಡನೆ ಮತ್ತು ಅದರ ವಿರುದ್ಧ ಹೋರಾಟಕ್ಕೆ ಮಾತ್ರ ಬೆಂಬಲ ವ್ಯಕ್ತವಾಗಿದೆ ಈ ವೇದಿಕೆಗಳಲ್ಲಿ. ಹಾಗೆಯೇ ಭಾರತಕ್ಕೆ 'ಎನ್‌ಎಸ್‌ಜಿ' ಎಂದು ಕರೆಯುವ ನ್ಯೂಕ್ಲಿಯರ್ ಸರಬರಾಜು ಗುಂಪಿನ ಸದಸ್ಯತ್ವ ಪಡೆಯಲು ಭಾರತದ ಪ್ರಯತ್ನ ಕೂಡ ವಿಫಲವಾಗಿದೆ ಇದುವರೆಗೆ. ಈ ಎರಡೂ ಮೋದಿ ಗುರಿ.




✷ ✷ ✷

**ಮುಂದುವರಿದ ಅಸಹಿಷ್ಣುತೆ**

ಅಸಹಿಷ್ಣುತೆ ನಾನಾ ಬಗೆಯಲ್ಲಿ ವ್ಯಕ್ತಗೊಳ್ಳುತ್ತದೆ. ಅಲ್ಪಸಂಖ್ಯಾತರು, ದಲಿತರ ಮೇಲೆ ದೌರ್ಜನ್ಯಗಳು ಒಂದು ಕಡೆಯಾದರೆ, ಮೋದಿ ಸರಕಾರದ ನೀತಿಗಳನ್ನು ಬೆಂಬಲಿಸುವವರೆಲ್ಲ ರಾಷ್ಟ್ರಪ್ರೇಮಿಗಳು, ವಿರೋಧಿಸುವವರೆಲ್ಲ ರಾಷ್ಟ್ರದ್ರೋಹಿಗಳು ಎನ್ನುವ ಮಟ್ಟಕ್ಕೆ ಹೋಗಿದೆ. ಇದು ಸಂಘಪರಿವಾರ ರಾಷ್ಟ್ರೀಯತೆ ಕುರಿತು ನೀಡಿರುವ ಹೊಸ ವ್ಯಾಖ್ಯಾನವಾಗಿದೆ. ಸಂಘಪರಿವಾರದ ಅಂಗಸಂಸ್ಥೆಯಾದ 'ಎಬಿವಿಪಿ' ಹೆಚ್ಚು ಆಕ್ರಮಣಕಾರಿ ಸ್ವಭಾವ ಪ್ರದರ್ಶಿಸುತ್ತಿದೆ. ಇದಕ್ಕೆ ವಿಶ್ವವಿದ್ಯಾನಿಲಯಗಳಲ್ಲಿ ಅದರ ಚಟುವಟಿಕೆಗಳು ಉದಾಹರಣೆ. ಜವಹರಲಾಲ್ ನೆಹರು ವಿಶ್ವವಿದ್ಯಾನಿಲಯದ ಘಟನೆಗಳು, ಹೈದರಾಬಾದ್ ವಿಶ್ವವಿದ್ಯಾನಿಲಯದ ಪ್ರಕರಣಗಳಲ್ಲಿ ಸರಕಾರ ನಡೆದುಕೊಂಡ ರೀತಿ ಎಬಿವಿಪಿಗೆ ಕುಮ್ಮಕ್ಕು ನೀಡುವಂಥದ್ದಾಗಿತ್ತು. ವಿದ್ಯಾರ್ಥಿಗಳ ಮೇಲೆ ರಾಷ್ಟ್ರದ್ರೋಹದ ಆಪಾದನೆ ಹೊರಿಸಿ ಸರಕಾರ ಅವರನ್ನು ಬಂಧನದಲ್ಲಿರಿಸಿತು. ಬ್ರಿಟಿಷ್ ಸರಕಾರದ ಓಬಿರಾಯನ ಕಾಲದ ಕಾನೂನನ್ನು ಸರಕಾರ ಈಗ ಕೆದಕಿ ದುರುಪಯೋಗಪಡಿಸಿಕೊಳ್ಳುತ್ತಿದೆ.

ಆಯಕಟ್ಟಿನ ಸ್ಥಾನಗಳಲ್ಲಿ ಸರಕಾರಕ್ಕೆ ಅನುಕೂಲಕರವಾಗಿರುವವರನ್ನು ನೇಮಕ ಮಾಡಿಕೊಳ್ಳುವ ಪ್ರಕ್ರಿಯೆ ಎಂದಿನಂತೆ ಸಾಗಿದೆ. ಮೋದಿ ಸರಕಾರ ರಿಸರ್ವ್ ಬ್ಯಾಂಕ್ ಗವರ್ನರ್ ರಘುರಾಮ ರಾಜನ್ ಅವರನ್ನು ನಡೆಸಿಕೊಂಡ ರೀತಿ, ಆತನ ನಿರ್ಗಮನದ ನಂತರ ಮಾಡಿದ ನೇಮಕ ಅದಕ್ಕೆ ನಿದರ್ಶನ. ಅದೇ ಬಗೆಯಲ್ಲಿ ಸರಕಾರ ನ್ಯಾಯಮೂರ್ತಿಗಳ ನೇಮಕಾತಿ ವಿಷಯದಲ್ಲೂ ನಡೆದುಕೊಳ್ಳಲು ನೋಡುತ್ತಿದೆ. ಈ ವಿಷಯದಲ್ಲಿ ಸರ್ವೋಚ್ಚ ನ್ಯಾಯಾಲಯ ಮತ್ತು ಸರಕಾರದ ಮಧ್ಯೆ ಜಟಾಪಟಿ ನಡೆಯುತ್ತಿದ್ದು ಸಾವಿರಾರು ನೇಮಕಾತಿಗಳು ಸ್ಥಗಿತಗೊಂಡಿವೆ. ಹಾಗಾಗಿ ಮೊದಲೇ ನಿಧಾನಗತಿಯಲ್ಲಿ ಸಾಗಿದ್ದ ನ್ಯಾಯ ವಿತರಣೆ ಈಗ ಮತ್ತಷ್ಟು ಜಟಿಲಗೊಂಡಿದೆ.

✷ ✷ ✷




# ಭಗವದ್ಗೀತೆ : ಒಂದು ಅವಲೋಕನ

# ೫. ಸ್ವ-ಧರ್ಮಕ್ಕೆ ದೇಹಾತ್ಮವಾದಿಗಳ ವಿರೋಧ

ಜಿ. ರಾಮಕೃಷ್ಣ

**ಬುದ್ಧ ಮತ್ತು ಲೋಕಾಯತರು ಯಜ್ಞ, ವರ್ಣ ವಿಭಜನೆ, ಕರ್ಮ ಸಿದ್ಧಾಂತ, ಮುಂತಾದ ವೈದಿಕ ಪ್ರಕ್ರಿಯೆಗಳನ್ನು ತೀವ್ರವಾಗಿ ವಿರೋಧಿಸದೆ ಇದ್ದಿದ್ದರೆ ಬಿಗುವಿನ ಧರ್ಮಶಾಸ್ತ್ರ ಗ್ರಂಥಗಳು, ಭಗವದ್ಗೀತೆ, ಇತ್ಯಾದಿ ಗ್ರಂಥಗಳು ಅನೇಕ ವೈದಿಕ ನಂಬಿಕೆ ಮತ್ತು ಆಚರಣೆಗಳ ಸಮರ್ಥನೆಗಾಗಿ ಮುಂದಾಗುವ ಪ್ರಸಂಗವೇ ಬರುತ್ತಿರಲಿಲ್ಲ.**

ಆರಂಭದಲ್ಲಿ ಗೀತೆಯು ಕುರುಕ್ಷೇತ್ರ ಯುದ್ಧದ ಸನ್ನಿವೇಶದಲ್ಲಿ ಅರ್ಜುನನಿಂದ ಹತ್ತಾರು ಪ್ರಶ್ನೆಗಳನ್ನು ಹಾಕಿಸಿದ್ದನ್ನು ಮತ್ತೆ ನೆನೆಯೋಣ. ಅರ್ಜುನನು ಸಾಮಾಜಿಕ ಸಂರಚನೆಯು ಯುದ್ಧದಿಂದಾಗಿ ಪಲ್ಲಟಗೊಳ್ಳುತ್ತದೆಂಬ ಆತಂಕವನ್ನು ಪ್ರಕಟಿಸಿದ್ದ. ಶ್ರೇಣೀಕೃತ ವರ್ಣಗಳು ತಮ್ಮ ಧರ್ಮಗಳ ಪಾಲನೆ ಮಾಡುತ್ತಾ ಯಥಾಸ್ಥಿತಿಯನ್ನು ಕಾಯ್ದುಕೊಳ್ಳುವ ಬದಲು ಸಂಕರ ಅಥವಾ ಮಿಶ್ರಣಕ್ಕೆ ತುತ್ತಾಗಿ ನಿರ್ದಿಷ್ಟ ವರ್ಣ ವಿಭಜನೆಯನ್ನು ಅಸಿಂಧುವಾಗಿಸಬಹುದು; ಅಂದರೆ, ಸಮಾಜದಲ್ಲಿ ಒಂದು ತೆರನಾದ ಸಾಮಾಜಿಕ ಯುದ್ಧದ ಘೋಷಣೆಯಾಗುವ ಸಂಧಿಕಾಲ ಕೂಡಿಬಂದಿದೆ. ಗೀತೆಯ ಕರ್ತೃವು ಆ ಸಾಧ್ಯತೆಯನ್ನು ದೂರಮಾಡಬೇಕೆಂಬ ಆಶಯ ಹೊಂದಿದ್ದಾನೆ. ಅದನ್ನು ಸಾಧಿಸಲು ಗೀತೆಯು ತತ್ತ್ವಶಾಸ್ತ್ರೀಯ ಮತ್ತು ಸಾಮಾಜಿಕ ನೆಲೆಗಳಲ್ಲಿ ಸಮಾಧಾನ ನೀಡಬೇಕಾಗಿದೆ. ಆದ್ದರಿಂದ "ಸುಖ-ದುಃಖಗಳನ್ನೂ ಲಾಭ-ನಷ್ಟಗಳನ್ನೂ ಒಮ್ಮನಸ್ಸಿನಿಂದ ಸ್ವೀಕರಿಸಿ ಯುದ್ಧ ಮಾಡಿದರೆ ನೀನು ಪಾಪ ಮಾಡಿದಂತಾಗುವುದಿಲ್ಲ" (೨.೩೮) ಎಂದು ಬೋಧಿಸಿದ ಭಗವಾನನು ಮುಂದುವರಿದು ಹೇಳುವುದು ಮಾರ್ಮಿಕವಾಗಿದೆ. ಆತ್ಮವು ನಿತ್ಯ, ಅದಕ್ಕೆ ಸಾವಿಲ್ಲ, ಮುಂತಾದ ವಚನಗಳ ಮೂಲಕ "ಆತ್ಮಜ್ಞಾನ"ದ ಬೋಧೆಯಾಗಿದೆ. ಅಂತಹ ಬೋಧೆಯನ್ನು ಅಂತರ್ಗತ ಮಾಡಿಕೊಂಡವರಿಗೆ ಇಂಥದೇ ಕರ್ಮವನ್ನು ಮಾಡಬೇಕೆಂಬ ವಿಧಿಯಿಲ್ಲ; ಏಕೆಂದರೆ ಅಂಥವರು ಆತ್ಮದಲ್ಲೇ ಸಂತುಷ್ಟರು (೩.೧೭ : ಆತ್ಮನ್ಯೇವ ಚ ಸಂತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ). ಅಂತಹ ಮಹತ್ತರ ಆತ್ಮಜ್ಞಾನವನ್ನು ಸ್ವೀಕರಿಸಲು ಸಮರ್ಥರಲ್ಲದವರು ಕರ್ಮಯೋಗದಲ್ಲಿ ನಿರತರಾಗಬೇಕು. ಇಲ್ಲಿ ಒಂದು ಪ್ರಶ್ನೆಯು ಸಹಜವಾಗಿ ಮೂಡುತ್ತದೆ: ಆತ್ಮಜ್ಞಾನವನ್ನು ಪಡೆಯಲು ಸಾಮರ್ಥ್ಯ ಪಡೆಯುವುದು ಹೇಗೆ ? ಭೂಮಿಯನ್ನು ಉಳುವವರಿಗೆ ಆ ಜ್ಞಾನವು ದಕ್ಕದಿರಬಹುದು, ಆದ್ದರಿಂದ ಉಳುವ ಕರ್ಮದಿಂದ ಅವರೆಂದೂ ವಿಮುಖರಾಗಬಾರದು. ಯಾವ ವರ್ಣದವರಿಗೆ ಯಾವ ಕರ್ಮ ಎಂಬುದನ್ನು ಗೀತೆಯು ಮುಂದೆ ಇನ್ನೂ ಸ್ಪಷ್ಟವಾಗಿ ಹೇಳುತ್ತದೆ. ಅದರ ಪ್ರಕಾರ ಶೂದ್ರರೆಂದೂ ಜ್ಞಾನಯೋಗಿಗಳಾಗುವ ಸಂಭವ ಇಲ್ಲ. ಏಕೆಂದರೆ, ಎಲ್ಲರೂ ಅವರವರ ಸ್ವಭಾವವನ್ನು ಅನುಸರಿಸಿಕೊಂಡು ಕರ್ಮದಲ್ಲಿ ತೊಡಗಬೇಕು (೧೮.೪೭ : ಸ್ವಭಾವನಿಯತಂ ಕರ್ಮ ಕುರ್ವನ್ ನ ಆಪ್ನೋತಿ ಕಿಲ್ಬಿಷಂ). ಸ್ವಭಾವವನ್ನು ತಿದ್ದಿ ತೀಡಿ ಬದಲಾಯಿಸಲಾಗುವುದಿಲ್ಲ. ಆದ್ದರಿಂದ ನಿಗದಿಯಾದ ಕರ್ಮವು ದೋಷದಿಂದ ಕೂಡಿದ್ದರೂ ಅದನ್ನು ಬಿಡುವಂತಿಲ್ಲ (೧೮.೪೮). ಪ್ರಶ್ನಾರ್ಹವಾದ ಸಂಗತಿಯೇನೆಂದರೆ ಸ್ವಭಾವವನ್ನು ನಿರ್ಧರಿಸುವುದು ವ್ಯಕ್ತಿಯಲ್ಲ; ಅದನ್ನು ಸಮಾಜದ ಕಟ್ಟಲೆಯು ಮೊದಲೇ ನಿರ್ಧರಿಸಿಬಿಟ್ಟಿದೆ. ಅದನ್ನು ಬದಲಾಯಿಸಿಕೊಂಡು ಬೇರೊಂದು ಸ್ವಭಾವವನ್ನು ಮೈಗೂಡಿಸಿಕೊಳ್ಳುವ ಸಾಧ್ಯತೆ ಮತ್ತು ಅವಶ್ಯಕತೆಯನ್ನು ಗೀತೆಯು ಪ್ರಸ್ತಾಪಿಸುವುದಿಲ್ಲ. ಇರುವುದರಲ್ಲೇ ತೃಪ್ತಿ ಪಡೆಯುತ್ತಾ ಸ್ಥಿತಪ್ರಜ್ಞನಾಗಬೇಕು. ಕರ್ಮದಲ್ಲಿ ಸ್ವಲ್ಪ ನ್ಯೂನತೆ ಇದ್ದರೂ ಸರಿಯೆ, ತನ್ನ ನಿರ್ದಿಷ್ಟ ಧರ್ಮವನ್ನು ಪಾಲಿಸುತ್ತಲೇ ಇರಬೇಕು. ಹಾಗಿದ್ದರೆ ಮೂಲ ಸಂದೇಶವೇನು ?

ಯುದ್ಧವು ಯೋಗ್ಯವೋ ಅಲ್ಲವೋ ಎಂಬ ಅರ್ಜುನನ ಪ್ರಶ್ನೆಯಿಂದ ಬಹುದೂರ ಬಂದುಬಿಟ್ಟಿದೆ ಗೀತೆ. ಬೇರೆಯೇ ಆಯಾಮದಲ್ಲಿನ ಚರ್ಚೆಯನ್ನು ಗೀತೆಯ ಕರ್ತೃ ಆರಂಭಿಸಿದ್ದಾನೆ. ವೇದವಿಧಿಗಳಿಂದ ಪ್ರಯೋಜನವಿದೆಯೆ, ಇದ್ದರೆ ಎಷ್ಟರಮಟ್ಟಿಗೆ ಅದಕ್ಕೆ ಕಟ್ಟುಬೀಳಬೇಕು, ಅದಕ್ಕೆ ಯಾವ ಮಟ್ಟದ ಗೌರವ ನೀಡಿ ಆಚರಿಸಬೇಕು, ಎಂಬಿತ್ಯಾದಿ ಪ್ರಶ್ನೆಗಳನ್ನು ಗೀತೆಯ ತತ್ತ್ವಶಾಸ್ತ್ರಜ್ಞನು ವಿವೇಚಿಸಬೇಕಾಯಿತೇಕೆ ? ಅದಕ್ಕೆ ಎಲ್ಲಿಲ್ಲದ ಮಹತ್ವ ನೀಡಿದ್ದರಿಂದ ಬುದ್ಧನು ಸಿಟ್ಟಿಗೆದ್ದಿದ್ದನೆಂದೆ ಅಥವಾ ನಿರರ್ಥಕವಾದ ಕ್ರಮಗಳಿಂದ ಅವು ತುಂಬಿಹೋಗಿವೆಯೆಂದೆ ? ಅಥವಾ ವ್ಯಕ್ತಿಯು ಗಳಿಸಿಕೊಳ್ಳಬೇಕಾದ ಸಮಸ್ಥಿತಿಗೆ ಅವು ಬಾಧಕಗಳೆಂದೆ ? ಮೂಲತಃ ಗೀತೆಯು ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಿದ ಸಾಮಾಜಿಕ ತುಮುಲಗಳಿಗೂ ಇದಕ್ಕೂ ಯಾವ ಸಂಬಂಧವಿದೆ ? ವೇದವಾದದಲ್ಲಿ ನಿರತರಾದವರ ಯಜ್ಞಗಳ ಭರಾಟೆಯಿಂದಾಗಿ ಸಾಮಾಜಿಕ ತುಮುಲಗಳು ಉದ್ಭವಿಸಿವೆಯೆ ? ಅಥವಾ ತುಮುಲಗಳನ್ನು ನಿಷ್ಪರಿಣಾಮಗೊಳಿಸಬೇಕಾದ ತುರ್ತು ಏನಾದರೂ ಉಂಟೊ ? ಇಲ್ಲವೆ, ಚಾರಿತ್ರಿಕ ಸಂಗತಿಗಳನ್ನೆಲ್ಲಾ ಹೊರತುಪಡಿಸಿ ಆತ್ಮಜ್ಞಾನ, ಭಕ್ತಿಮಾರ್ಗ, ಕರ್ಮಯೋಗ ಇತ್ಯಾದಿಗಳನ್ನು ಬೋಧಿಸಬೇಕಾಗಿ ಬಂದಿದೆಯೊ ? ಇಂತಹ ಪ್ರಶ್ನೆಗಳನ್ನೆತ್ತದೆ ಗೀತೆಗೆ ವ್ಯಾಖ್ಯಾನ ನೀಡುವುದು "ತಿಳಿಯದವರು ಆಡುವ ಸೊಗಸು ಮಾತುಗಳಿಗಿಂತಲೂ" ಭಿನ್ನವಲ್ಲ (೨.೪೨ : ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತಿ ಅವಿಪಶ್ಚಿತಃ) ! ಈ ಮಾತನ್ನು ಗೀತೆಯು ವೇದವಾದಿಗಳ ಬಗೆಗೆ ಹೇಳಿದೆ : ಅವರು ಅವಿವೇಕಿಗಳು; ಮರುಳುಮಾಡುವ ಮಾತನ್ನಾಡುತ್ತಾರೆ, ಸ್ವರ್ಗದ ಪ್ರಾಪ್ತಿಯನ್ನು ಹೇಳಿಬಿಡುತ್ತಾರೆ ! ಗೀತೆಯು ಮಾಡುವುದೂ ಅದನ್ನೇ.

೧೮೫೯ರಲ್ಲಿ ಚಾರ್ಲ್ಸ್ ಡಾರ್ವಿನ್ ತನ್ನ ವಿಕಾಸವಾದವನ್ನು ಪ್ರತಿಪಾದಿಸಿದ, ಅವನ 'ಆರಿಜಿನ್ ಆಫ್ ಸ್ಪೀಶೀಸ್' ಪ್ರಕಟಿಸಿದ. ಕಾರ್ಡಿನಲ್ ನ್ಯೂಮನ್ನನ ನೇತೃತ್ವದಲ್ಲಿ ಆಕ್ಸ್‌ಫರ್ಡ್ ಅದರಿಂದ ವ್ಯಾಕುಲಗೊಂಡಿತು, ಪ್ರತಿಭಟನೆಯಲ್ಲಿ ತೊಡಗಿತು, ಸಿಡಿದೆದ್ದಿತು. "ಕರುಣಾಳು ಬಾ, ಬೆಳಕೆ" ಎಂದು ನ್ಯೂಮನ್ ಹಾಡಿದಾಗ ಡಾರ್ವಿನ್ ಕತ್ತಲನ್ನು ಪ್ರತಿನಿಧಿಸಿದ್ದ ! "ಹೇಳದಿರು ಹೋರಾಡಿ ಫಲವಿಲ್ಲವೆಂದು" ಎಂದು ಆರ್ಥರ್ ಕ್ಲಫ್ ಬರೆದಾಗ ಅವನು ಡಾರ್ವಿನ್ನನ ವಿರೋಧಿ ಹೋರಾಟಗಾರರನ್ನು ಹುರಿದುಂಬಿಸುತ್ತಿದ್ದ. ಮ್ಯಾತ್ಯೂ ಆರ್ನಾಲ್ಡನ "ಡವರ್ ಬೀಚ್" ಕವನದಲ್ಲಿ ಚಿತ್ರಿತವಾಗಿರುವ ಬೌದ್ಧಿಕ ಸಂಘರ್ಷದ ವಾತಾವರಣಕ್ಕೆ ಡಾರ್ವಿನ್ನನೇ ಮೂಲ ಕಾರಣ. ಟೆನಿಸನ್ ಬರೆದ, "ಪ್ರಾಮಾಣಿಕ ಸಂಶಯದಲ್ಲಿ ಶ್ರದ್ಧೆ ವ್ಯಾಪಕವಾಗಿದೆ; ನಿಷ್ಠೆಯಿಂದ ಧರ್ಮಶ್ರದ್ಧೆ ಹೊಂದಿರುವವರು ಪ್ರಾಮಾಣಿಕ ಸಂಶಯ ಉಳ್ಳವರ ಅರ್ಧದಷ್ಟು ಸಹ ಇಲ್ಲ" ಎಂದು. ಭಾರತೀಯ ಸಾಂಸ್ಕೃತಿಕ ಇತಿಹಾಸದಲ್ಲಿ ಭಗವದ್ಗೀತೆಯು ಅಂತಹ ಸಂಘರ್ಷಗಳ ಯುಗದ್ದು. ಅದು ವಿಚಾರಗಳ ಸಂಘರ್ಷಗಳ ಯುಗದ್ದು. ಕಾರ್ಡಿನಲ್ ನ್ಯೂಮನ್‌ಗೆ ಎರಡು ಸಾವಿರ ವರ್ಷಗಳ ಹಿಂದೆ ನಮ್ಮ ದೇಶದ

‘ನ್ಯೂಮನ್’ ಗೀತೆಯನ್ನು ನಮಗೆ ಕೊಟ್ಟ. ಅಜಿತ ಕೇಸಕಂಬಲಿ, ಪಕುಧ ಕಚ್ಚಾಯನ, ಬುದ್ಧ, ಲೋಕಾಯತ ಮುಂತಾದವರು ವೈದಿಕ ಕೋಟೆಗೆ ಲಗ್ಗೆ ಇಟ್ಟಾಗ ಸಾಮಾಜಿಕ ತುಮುಲಕ್ಕೆ ಬೌದ್ಧಿಕ ಪಾತಳಿಯಲ್ಲಿ ಒಂದು ದಿಟ್ಟ ಉತ್ತರ ನೀಡುವ ಕೆಲಸ ಮಾಡಿದ್ದು ಗೀತೆ. ಪ್ರಸ್ತುತ ನಮ್ಮ ಸಂದರ್ಭದಲ್ಲಿ ಫೈಜ್ ಅಹಮದ್ ಫೈಜ್‌ನಂಥವರು ಅಸ್ತಿತ್ವದಲ್ಲಿರುವ ವ್ಯವಸ್ಥೆಯನ್ನು ಮೂರಾಬಟ್ಟೆಗೊಳಿಸಲು ಉತ್ಸುಕರಾಗಿದ್ದಾರೆ. ಫೈಜ್ ಬರೆದ :

*ನಾವು ಬೆವರನು ಸುರಿಸಿ ದುಡಿಯುವ ಜನ*
*ನಮ್ಮ ಬೆವರಿನ ಪಾಲನು ಕೇಳುವೆವು;*
*ತುಂಡು ಭೂಮಿಯಲ್ಲ, ಒಂದು ದೇಶವಲ್ಲ,*
*ಇಡೀ ಭೂಗೋಲವನ್ನೇ ಕೇಳುವೆವು.*

“ಕೇಳುವೆಯಾ ? ಹಾಗಿದ್ದರೆ ಸ್ವಲ್ಪ ಬಾ, ಗೀತೋಪದೇಶ ಕೇಳು” ಎಂದು “ಆನಂದ”ರ ಬಣವು ಇಂದಿನ ವಿಚಾರ ಸಂಘರ್ಷದಲ್ಲಿ ಭಾಗಿಯಾಗುತ್ತಿದೆ. ಗೀತೆಯ ನಿಷ್ಕಾಮ ಕರ್ಮದ ಸಿದ್ಧಾಂತವು “ಬೆವರಿನ ಪಾಲನು ಕೇಳುವ” ಜನಕ್ಕೆ ಉಪದೇಶಿಸಿರುವಂಥದು. ಮುಂದೆ ಗೀತೆಯು “ನಿಯತವಾದ ಕರ್ಮವನ್ನು ನೀನು ಮಾಡು” (೩.೮), “ಯಾವಾಗಲೂ ಅನಾಸಕ್ತಿಯಿಂದ ನಿನ್ನ ಕೆಲಸ ಮಾಡು, ಹಾಗೆ ಮಾಡಿದಾಗಲೇ ಪರಮ ಶ್ರೇಯಸ್ಸು ದೊರೆಯುವುದು” (೩.೧೯), ಎಂದೆಲ್ಲಾ ಹೇಳಿದೆ. ಜನಸಮುದಾಯವನ್ನು ಪ್ರತಿನಿಧಿಸುವ ಅರ್ಜುನನಿಗೆ ಅದು ಸಂದೇಶ, ಊಳಿಗಮಾನ್ಯ ವ್ಯವಸ್ಥೆಯಲ್ಲಿ ಕನಿಷ್ಠನಾದವನಿಗೆ ಅದು ಸಂದೇಶ. ವೈದಿಕ ಕರ್ಮಾಚರಣೆಗಳಿಂದ ಸಮೃದ್ಧಿ ಮತ್ತು ಅಧಿಕಾರ ದೊರೆಯುತ್ತದೆಂದು ಭಾವಿಸಿದ್ದ ಜನ ಅವರಲ್ಲ; ಅದರ ಪಿಡುಗನ್ನು ಬುದ್ಧನ ಮೂಲಕ ಅವರು ಅಭಿವ್ಯಕ್ತಿಸಿದ್ದರು. ಅವರನ್ನು ತಣಿಸಲು “ವೈದಿಕ ಕರ್ಮಾಚರಣೆ ಸಂಕೀರ್ಣವಾಗುವುದು ಬೇಡ, ಎಷ್ಟು ಬೇಕೋ ಅಷ್ಟನ್ನು ಮಾಡಿದರೆ ಸಾಕು” (೨.೪೬) ಎಂಬ ಮಾತನ್ನು ಹೇಳಿ ನಂತರ “ಕರ್ಮಣ್ಯೇವಾಧಿಕಾರಸ್ತೇ” ಎಂಬ ಘೋಷಣಾವಾಕ್ಯ ಬಂದಿರುವುದು ಗಮನಾರ್ಹ.



ಸ್ಥಿತಪ್ರಜ್ಞನ ಲಕ್ಷಣಗಳನ್ನು ಕುರಿತು ಮಾತನಾಡುವಾಗ ಸಹ (೨.೫೪–೭೨) ಗೀತೆಯ ಕರ್ತೃವು ವರ್ಣವ್ಯವಸ್ಥೆಯ ಕಟ್ಟಳೆಗಳ ಪರಿಧಿಯಲ್ಲೇ ಸಂಚರಿಸುತ್ತಾನೆ. ಕತ್ತಲೆ ಮತ್ತು ಬೆಳಕುಗಳ ರೂಪಕದಿಂದ ಜನರ ದೃಷ್ಟಿ ಮತ್ತು ಜೀವನವಿಧಾನವನ್ನು ಭಿನ್ನೈಸುವಾಗ (೨.೬೯) ಅಜ್ಞಾನ, ಆಸೆ, ಅಭಿನಿವೇಶ, ಹಿಂಸೆ ಮುಂತಾದವು ಒಂದು ಕಡೆಗಾದರೆ, ಜ್ಞಾನ, ತೃಪ್ತಿ, ಉಲ್ಲಸಿತ ಮನಸ್ಸು, ಇನ್ನೊಂದು ಕಡೆ. ಎರಡನೆ ಲಕ್ಷಣಗಳು ಸಂಯಮಿಯದು; ಮೊದಲನೆಯದು ಜನಸಾಮಾನ್ಯರದ್ದು. ಸಂಯಮಿಯು ಚಾತುರ್ವರ್ಣ್ಯ ವಿಧಿಯನ್ನು ಮೀರುತ್ತಾನೋ ಇಲ್ಲವೆ ಜನಕಾದಿಗಳಂತೆ ‘ಲೋಕಸಂಗ್ರಹ’ಕ್ಕಾಗಿ (೩.೨೦) ವ್ಯವಸ್ಥೆಯ ಕರಾಳತೆಯನ್ನು ಮಾನ್ಯ ಮಾಡುತ್ತಾನೋ ? ಲೋಕಸಂಗ್ರಹವೆಂದರೆ ವ್ಯವಹಾರಕ್ಕಾಗಿ ಕೆಲವು ಕ್ರಿಯೆಗಳನ್ನು ಮಾಡುವ ಪ್ರಕ್ರಿಯೆ. ಆತ್ಮಜ್ಞಾನಿಗೆ ವೇದವಿಧಿಗಳು ಹಾಗೂ ಬೇರೆ ಕರ್ಮಗಳು ತೀರಾ ಅನಗತ್ಯ, ಆದರೆ ಲೋಕರೂಢಿಯಂತೆ ಮತ್ತು ಜನಸಾಮಾನ್ಯರಿಗೆ ಹಾದಿ ತೋರಲು ಅವನು ಆ ಕರ್ಮಗಳನ್ನು ಮಾಡುತ್ತಿರುತ್ತಾನೆ. ಅಂದರೆ, ಅವನು ‘ಸಂಸಿದ್ಧಿ’ ಪಡೆದಿದ್ದಾನೆ, ಆದರೆ ಲೋಕ ವ್ಯವಹಾರದಂತೆ ಕರ್ಮನಿರತನಾಗಿರುತ್ತಾನೆ. ಆ ‘ವ್ಯವಹಾರ’ದಲ್ಲಿ ವರ್ಣವಿಭಜನೆಯು ಅನಿವಾರ್ಯವಾದ ಅಂಗ. ಶತಮಾನಗಳಿಂದ ಆಚಾರ್ಯರು ಮತ್ತು ಅವರ ಸಂತತಿಯವರು ಗೀತೆಗೆ ಭಾಷ್ಯಗಳನ್ನು ಬರೆಯುತ್ತಾ ಬಂದಿದ್ದಾರಲ್ಲ, ಯಾರೊಬ್ಬರಾದರೂ ಪ್ರಾಸಂಗಿಕವಾಗಿ ‘ವರ್ಣ ವಿಭಜನೆ’ ಕೂಡದು ಎಂದಿರುವುದುಂಟೆ ? ಹಾಗೆಂದವರು ಬುದ್ಧ ಮತ್ತು ಲೋಕಾಯತರು ಮಾತ್ರ. ಮೂಲಸಾಂಖ್ಯವು ವರ್ಣವಿಭಜನೆಯನ್ನು ಆದರಿಸುವ ಸಾಧ್ಯತೆ ಇರಲಿಲ್ಲ, ಏಕೆಂದರೆ ಅದು ಉಗಮಗೊಂಡಿದ್ದೇ ಶಿಷ್ಟರಲ್ಲದವರ ನಡುವೆ. ಆಧುನಿಕ ಆಚಾರ್ಯರು ಹಲವರು ಎಸ್. ರಾಧಾಕೃಷ್ಣನ್ ಅವರಂತೆ ವರ್ಗ ವಿಭಜನೆಯು ತಾರತಮ್ಯರಹಿತವಾದ್ದು, ಏಕೆಂದರೆ ಅದು ಕೇವಲ ದುಡಿಮೆಯ ವಿಭಜನೆಯ ಸೂಚಕ ಎಂದುಬಿಡುತ್ತಾರೆ. ಆದರೆ ನಮ್ಮ ಚರಿತ್ರೆಯಲ್ಲಿ ವರ್ಣವಿಭಜನೆ ಹುಟ್ಟಿನಿಂದ ನಡೆದುಬಂದಿದೆ, ವಂಶಪಾರಂಪರಿಕವಾಗಿದೆ. ಅದನ್ನುಳಿಸುವುದು ಗೀತೆ ಮುಂತಾದ ಪ್ರಬುದ್ಧ ಗ್ರಂಥಗಳ ಚಿಂತನೆಯ ಅಡಿಪಾಯ ಮತ್ತು ತತ್ತ್ವಶಾಸ್ತ್ರವು ಅದನ್ನು ಮೀರಿ ಬೆಳೆಯಲಿಲ್ಲ. ಅಸಾಂಪ್ರದಾಯಿಕ ಚಿಂತನಾ ಹೊಳೆಯು ಮಾತ್ರವೇ ಆ ದಿಕ್ಕಿನಲ್ಲಿ ಹರಿದಿದ್ದು. ರಾಧಾಕೃಷ್ಣನ್‌ರ ಒಂದು ಮಾತು ಮಾರ್ಮಿಕವಾಗಿದೆ : “ಗೀತೆಯು ತತ್ತ್ವಶಾಸ್ತ್ರ ಗ್ರಂಥ ಎಂಬುದಕ್ಕಿಂತಲೂ ಮತಧಾರ್ಮಿಕ ಅನುಶಾಸನ ಎಂಬುದು ತಿಳಿಯಬೇಕಾದ ವಿಷಯ.” ಅವತಾರ ಪುರುಷನ ಆಗಮನವನ್ನು ಕುರಿತು ಹೇಳುವಾಗ ಶ್ರೀರಂಗರು ವರ್ಣವಿಭಜನೆಯನ್ನು ನಿರ್ದಿಷ್ಟವಾಗಿ ಹೆಸರಿಸದೆ ಹೀಗೆನ್ನುತ್ತಾರೆ : “ಭಗವದ್ಗೀತೆಯು ಇತಿಹಾಸವಲ್ಲ, ಆದರೆ ಸಂಸ್ಕೃತಿ ಮತ್ತು ನಾಗರಿಕತೆಗಳು ಪರಸ್ಪರ ಪ್ರಭಾವದ ಮೂಲಕ ಬದಲಾಗುವುದನ್ನು ಗುರುತಿಸಿದೆ. ಜೀವನ ವಿಧಾನ ನಿಂತ ನೀರಾದಾಗ ಅಥವಾ ಅಧಃಪತನದ ಕಡೆ ಚಲಿಸಿದಾಗ ದೇವರು ಅವತರಿಸಿ ಹೊಸ ಯುಗ ಪ್ರಾರಂಭಿಸುತ್ತಾನೆ.” ಭಗವಂತನು ಅವತರಿಸಿ ಹೊಸಯುಗ ಆರಂಭವಾಗುವಂತೆ ಮಾಡುತ್ತಾನೋ, ಜನರ ಪ್ರಜ್ಞಾಪೂರ್ವಕ ಮಧ್ಯಪ್ರವೇಶದಿಂದ ಅದು ಉಂಟಾಗುತ್ತದೋ ಎಂಬುದನ್ನು ಇತಿಹಾಸದ ಗತಿ ಚಕ್ರವು ನಿರ್ಧರಿಸಿದೆ. ಅವತಾರ ಪುರುಷನ ಆಗಮನದ ಪ್ರಸ್ತಾಪಕ್ಕೆ ಮುಂಚೆ ಗೀತೆಯು ಸಂಸ್ಕೃತಿ ಮತ್ತು ನಾಗರಿಕತೆಗಳ ಮಾತನ್ನಾಡಿಲ್ಲ. ಆಡಿರುವ ಮಾತಿದು (೪.೫–೬) : “ನಾನು ಮತ್ತು ನೀನು ಅನೇಕ ಜನ್ಮಗಳನ್ನು ಕಳೆದಿದ್ದೇವೆ; ಅದೆಲ್ಲಾ ನನಗೆ ಗೊತ್ತು, ಆದರೆ ನಿನಗೆ ತಿಳಿಯದು. ನನಗೆ ಹುಟ್ಟು ಕ್ಷೀಣಿಸುವಿಕೆಗಳಿಲ್ಲ, ನಾನು ಭೂತ (ದ್ರವ್ಯಗಳಿಗೆಲ್ಲಾ) ಒಡೆಯ; ಆದರೂ ನನ್ನ ಪ್ರಕೃತಿಯನ್ನು ಮೀರಿ ನನ್ನಿಂದಲೇ ನಾನು ಹುಟ್ಟುತ್ತೇನೆ.” ಹಾಗೆ ಹುಟ್ಟುವುದಕ್ಕೆ ಸಮರ್ಥನೆಯೆಂದರೆ ಧರ್ಮಕ್ಕೆ ಗ್ಲಾನಿಯುಂಟಾಗಿರುವುದು, ಸಾಧುಗಳ ಪರಿತ್ರಾಣ, ಇತ್ಯಾದಿ. ಸ್ವಲ್ಪ ಲಘುವಾಗಿ ಹೇಳುವುದಾದರೆ ಧರ್ಮದ ಗ್ಲಾನಿಯನ್ನು ಹೆಚ್ಚಿಸುವುದಷ್ಟೇ ನಮ್ಮ ಕೆಲಸ, ಅದನ್ನು ಸರಿಪಡಿಸಲು ಭಗವಂತ ಹೇಗೂ ಬರುತ್ತಾನೆ. ಅದನ್ನಂತೂ ನಾವು ಅಚ್ಚುಕಟ್ಟಾಗಿ ಮಾಡುತ್ತಿದ್ದೇವೆ, ಅವನ ಬರುವಿಕೆಗೆ ಕಾದು ಕೂತಿರಲು ಅಡ್ಡಿಯಿಲ್ಲ. ವರ್ಣಗಳ ಪ್ರಶ್ನೆಯು ಭಗವದ್ಗೀತೆಯ ವಿಷಯಗಳಲ್ಲಿ ಮಹತ್ವದ ಸ್ಥಾನವನ್ನು ಹೊಂದಿದೆ. ರಾಜವಿದ್ಯಾರಾಜಗುಹ್ಯವೆಂಬ ಒಂಬತ್ತನೆಯ ಅಧ್ಯಾಯದಲ್ಲಿ “ನನ್ನನ್ನು

ಭಜಿಸುವವರಲ್ಲಿ ನಾನಿರುತ್ತೇನೆ ಮತ್ತು ಅವರು ನನ್ನಲ್ಲಿರುತ್ತಾರೆ" (೯.೨೯) ಎನ್ನುವ ಭಗವಾನ್ ಹೇಳುತ್ತಾನೆ (೨.೩೦): "ದುರಾಚಾರಿಯಾದರೂ ಸರಿಯೆ, ನನ್ನನ್ನು ಅನನ್ಯವಾಗಿ ಭಜಿಸಿದರೆ ಅವನನ್ನು ಸಾಧುವೆಂದೇ ಪರಿಗಣಿಸಬೇಕು." ನಂತರದ ಎರಡು ಶ್ಲೋಕಗಳನ್ನು ನೋಡಿ (೨.೩೧-೩೨): "(ನನ್ನನ್ನು ಭಜಿಸುವವನು) ಧರ್ಮಾತ್ಮನಾಗುತ್ತಾನೆ, ಶಾಶ್ವತ ಶಾಂತಿಯನ್ನು ಹೊಂದುತ್ತಾನೆ. ನನ್ನ ಭಕ್ತರೆಂದೂ ದುರ್ಗತಿ ಕಾಣುವುದಿಲ್ಲ. ಪಾಪದಿಂದ ಹುಟ್ಟಿದ (ಪಾಪಯೋನಯಃ) ಮಹಿಳೆಯರು, ವೈಶ್ಯರು ಮತ್ತು ಶೂದ್ರರು ಸಹ ಪರಮಪ್ರಾಪ್ತಿಗೆ ಭಾಜನರಾಗುತ್ತಾರೆ." ಹಾಗಿರುವಾಗ ಬ್ರಾಹ್ಮಣ-ಕ್ಷತ್ರಿಯರ ಬಗ್ಗೆ ಹೇಳಬೇಕಾದ್ದೇನಿದೆ! (೨.೩೩). ಭಗವದ್ಗೀತೆಯ ಸಾಮಾಜಿಕ ದೃಷ್ಟಿಯನ್ನು ಕುರಿತಂತೆ ಇದಕ್ಕಿಂತಲೂ ಸ್ಪಷ್ಟ ಹೇಳಿಕೆಯೊಂದು ಅಗತ್ಯವಿಲ್ಲ. ಮಹಿಳೆಯ ಬಗ್ಗೆ ಹೇಳಿರುವುದು ಪುರಾತನವಾದ ಐತರೇಯ ಬ್ರಾಹ್ಮಣ ಎಂಬ ಗ್ರಂಥದ ಒಂದು ಮಾತಿನ ಪುನರುಚ್ಚಾರವೇ ಇದ್ದಂತಿದೆ. ಅಲ್ಲಿ ಹೆಣ್ಣನ್ನು "ತಂದೆಯ ಹೃದಯವನ್ನು ಪುಡಿ ಪುಡಿ ಮಾಡುವವಳು" (ದಾರಿಕಾ ಹೃದಯ ದಾರಿಕಾ ಪಿತುಃ) ಎಂದು ಕರೆಯಲಾಗಿದೆ. ಅದಕ್ಕೆ ಸ್ವಲ್ಪ ಮುಂಚೆ ಋಗ್ವೇದದ ಹತ್ತನೆಯ ಮಂಡಲದಲ್ಲಿ (೧೦.೯೫.೧೦) "ಸ್ತ್ರೀಯರು ಸಖ್ಯಕ್ಕೆ ಯೋಗ್ಯರಲ್ಲ, ತೋಳದ ಹೃದಯ ಅವರದು" (ನ ವೈ ಸ್ತ್ರೈಣಾನಿ ಸಖ್ಯಾನಿ ಸಂತಿ ಸಾಲಾವೃಕಾಣಾಂ ಹೃದಯಾನ್ಯೇತಾ) ಎನ್ನಲಾಗಿದೆ. ಕಟು ವ್ಯಂಗ್ಯವೆಂದರೆ ಈ ಮಾತನ್ನು ಹೆಣ್ಣಾದ ಊರ್ವಶಿಯ ಬಾಯಲ್ಲಿ ಪ್ರೇಮವಂಚಿತ ಪುರೂರವನಿಗೆ ಹೇಳಿಸಲಾಗಿದೆ. ಆದರೆ ಗೀತೆಯ ನಿಲುವಿನಲ್ಲಿ ಯಾವ ಭಾವವೂ ಇಲ್ಲ; ಇರುವುದು ನೇರವಾದ ಪೂರ್ವಗ್ರಹ, ಯಥಾಸ್ಥಿತಿಯ ಸಮರ್ಥನೆ.

ಇನ್ನುಳಿದಂತೆ ಪ್ರಾಣಾಯಾಮದ ವಿಧಾನ, ಪರಲೋಕ ಎಂಬುದುಂಟೆ, ಧ್ಯಾನ, ಸಾಂಖ್ಯತತ್ತ್ವ, ಸತ್ತ್ವ-ರಜಸ್-ತಮೋಗುಣಗಳು, ವಿಭೂತಿ, ವಿಶ್ವರೂಪ ದರ್ಶನ, ಹೀಗೆ ವಿವಿಧ ವಿಷಯಗಳ ಪ್ರತಿಪಾದನೆಯು ಗೀತೆಯಲ್ಲಿದೆ. ಪ್ರಾಣಾಯಾಮ ಮತ್ತು ಧ್ಯಾನವನ್ನು ಕುರಿತ ಭಾಗವು ಯೋಗಸೂತ್ರ (೧.೩೪, ೨.೪೯ ಇತ್ಯಾದಿ) ಹೇಳಿರುವುದೇ ಆಗಿದೆ. ಯುದ್ಧಭೂಮಿಯಲ್ಲಿ ಪ್ರಾಣಾಯಾಮದ ಪಾಠ ಕೇಳಿದವರಲ್ಲಿ ಅರ್ಜುನನೇ ಮೊದಲಿಗ ಮತ್ತು ಕಡೆಯವ! ಪರಲೋಕವನ್ನು ಪ್ರಶ್ನಿಸಿದ್ದ ಬುದ್ಧ ಮತ್ತು ಲೋಕಾಯತರಿಗೆ ಉತ್ತರವೋ ಎಂಬಂತೆ ಪರಲೋಕವಿಲ್ಲವೆನ್ನುವವರಿಗೆ ಸಂಶಯ ಪಿಶಾಚಿ ಹಿಡಿದಿದೆ, ಅವರಿಗೆಂದೂ ಸುಖವಿಲ್ಲವೆಂದು ಗೀತೆ ತೀರ್ಮಾನ ಉಚ್ಚರಿಸಿದೆ (೪.೪೦: ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ). ಮನೋವಿಜ್ಞಾನದ ಹಲವು ಪ್ರಮೇಯಗಳು ಗೀತೆಯಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ, ಆದರೆ ಅವಕ್ಕೆಲ್ಲಾ ನೀತಿಶಾಸ್ತ್ರದ ಕವಚ ತೊಡಿಸಲಾಗಿದೆ. ಉದಾಹರಣೆಗೆ, ಮಾನವನು ಪಾಪಕೃತ್ಯಗಳನ್ನು ಮಾಡುವುದೇಕೆಂಬ ಪ್ರಶ್ನೆ (೩.೩೬). ಅದಕ್ಕೆ ಭಗವಾನನ ಉತ್ತರ: "ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ"॥ ಈ ಭಾಗವು ಒಳ್ಳೆಯ ಉಪಮೆಗಳಿಂದ ಬಹಳ ಚೆನ್ನಾಗಿ ಮನಸ್ಸಿಗೆ ತಾಗುತ್ತದೆ. ಕಾಮ-ಕ್ರೋಧಗಳು ಇರುವುದು ಇಂದ್ರಿಯ-ಮನಸ್ಸು-ಬುದ್ಧಿಗಳಲ್ಲಿ, ಆದ್ದರಿಂದ ಇಂದ್ರಿಯಗಳನ್ನು ನಿಯಂತ್ರಿಸಬೇಕು. ಕಠೋಪನಿಷತ್ತಿನ "ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್" (೪.೧: ಇಂದ್ರಿಯಗಳನ್ನು ಬಾಹ್ಯ ಪ್ರಪಂಚವನ್ನು ಗ್ರಹಿಸಲು ಯೋಗ್ಯವಾಗಿರುವಂತೆ ಸೃಷ್ಟಿಸಲಾಗಿದೆ; ಆದ್ದರಿಂದ ಅವು ಹೊರಗಿನವನ್ನು ಗ್ರಹಿಸುತ್ತವೆ, ಆದರೆ ಅಂತರಾತ್ಮನನ್ನು ತಿಳಿಯಹೋಗುವುದಿಲ್ಲ) ಎಂಬುದನ್ನು ನೆನಪಿಸುವ ವಿವರಣೆ ಇಲ್ಲಿದೆ. ಒಂದಂತೂ ನಿಜ; ಯೋಗಾಭ್ಯಾಸದ ಬಗ್ಗೆ ಭಗವದ್ಗೀತೆಯಲ್ಲಿ ಹೇಳಿರುವುದು ಯಾವುದೂ ಅನನ್ಯವಲ್ಲ. ಬಹುಭಾಗ ಕಠೋಪನಿಷತ್ತಿನಿಂದ ಬಂದಿದೆ, ಉಳಿದದ್ದು ಯೋಗ ಸೂತ್ರದ ಪುನರುಚ್ಚಾರ.

ಸಾಂಖ್ಯದ ಬಗ್ಗೆ ಒಂದಂಶವನ್ನು ಗಮನಿಸಬೇಕು. ಭಾರತೀಯ ದರ್ಶನಗಳ ಇತಿಹಾಸದಲ್ಲಿ ಸಾಂಖ್ಯಕ್ಕೆ ಆಗಿರುವಷ್ಟು ಅನ್ಯಾಯ ಬೇರಾವುದಕ್ಕೂ ಆಗಿಲ್ಲ. ಸುಮಾರು ೧೦ನೆಯ ಶತಮಾನದ "ಸಾಂಖ್ಯಕಾರಿಕೆ"ಯಲ್ಲಿ ಈಶ್ವರಕೃಷ್ಣನು ಪ್ರತಿಪಾದಿಸುವ ಸಾಂಖ್ಯವು ಮೂಲ ಸಾಂಖ್ಯಕ್ಕೆ ತೀರಾ ವಿರುದ್ಧವಾದುದು. ಮೂಲದಲ್ಲಿ ಭೌತವಾದವಾಗಿದ್ದ ಸಾಂಖ್ಯವನ್ನು ಇವನು ಭಾವನಾ ವಾದಿ ತತ್ತ್ವಶಾಸ್ತ್ರವನ್ನಾಗಿ ಪರಿವರ್ತಿಸಿದ್ದಾನೆ. ಮೂಲ ಸಾಂಖ್ಯವು ಭಾವನಾವಾದಿ ನೆಲೆಯನ್ನೇ ನಾದರೂ ಹೊಂದಿದ್ದರೆ ಬ್ರಹ್ಮಸೂತ್ರವು ಅದನ್ನು ಕಟುವಾಗಿ ಖಂಡಿಸುವ ಅಗತ್ಯವಿರುತ್ತಿರಲಿಲ್ಲ. ಆ ಗ್ರಂಥದ ಮೊದಲ ಪ್ರಕರಣವೇ ಸಾಂಖ್ಯದ ಖಂಡನೆ; ಸಾಂಖ್ಯ ತತ್ತ್ವವು ಉಪನಿಷತ್ತಿನಲ್ಲಿಲ್ಲವೆಂದು ಬ್ರಹ್ಮ ಸೂತ್ರವು ಸಾಧಿಸಹೊರಟಿದೆ. ಇದನ್ನು ನಮ್ಮ ಅನೇಕ ತತ್ತ್ವಶಾಸ್ತ್ರ ಇತಿಹಾಸಕಾರರು ಪರಿಶೀಲಿಸುವುದೇ ಇಲ್ಲ. ಆಸ್ತಿಕ ವೇದಾಂತವು ಆಸ್ತಿಕ ಸಾಂಖ್ಯವನ್ನು ಖಂಡಿಸಬೇಕೇಕೆ? ಖಂಡಿಸುವ ಅನಿವಾರ್ಯತೆ ಉಂಟಾದ್ದು ಸಾಂಖ್ಯವು ಭೌತವಾದವಾದ್ದರಿಂದ. ಶಂಕರನು ಸಾಂಖ್ಯಕ್ಕೆ ಪ್ರಧಾನ ಮಲ್ಲನ ಸ್ಥಾನ ಕೊಟ್ಟು, ಅದರ ಖಂಡನೆಯು ಎಲ್ಲ ಭೌತವಾದಿಗಳ ಖಂಡನೆ ಮಾಡಿದಂತಾಗುತ್ತದೆ ಎಂದಿರುವುದುಂಟು. ಭಗವದ್ಗೀತೆಯ ಸಾಂಖ್ಯವು ಶಂಕರಾಚಾರ್ಯರಿಗೂ ಪ್ರೀತಿ ಉಕ್ಕಿಸುವಂತಹ ಸಾಂಖ್ಯ ಆಗಿಹೋಗಿದೆ: ಸಾಂಖ್ಯದ ೨೫ ತತ್ತ್ವಗಳು ಈಶ್ವರಕೃಷ್ಣನ ತತ್ತ್ವಗಳೇ ಹೊರತು ಬೇರೇನೂ ಅಲ್ಲ. ತ್ರಿಗುಣಗಳನ್ನು ಒಪ್ಪದವರ ಬಗ್ಗೆ ಭಗವಾನನಿಗೆ ಉಗ್ರಕೋಪ: ಅವರು ಹುಚ್ಚರು, ಆಸುರೀ ಭಾವದವರು (೭.೧೫) ಎನ್ನುವ ಗೀತೆಯು ಇನ್ನೂ ತೀಕ್ಷ್ಣವಾಗಿ ಪ್ರತಿಕ್ರಿಯಿಸಿರುವುದೂ ಉಂಟು. ಸಹನೆಯನ್ನು ಬೋಧಿಸಿದ ಗೀತೆಯು ಅದನ್ನು ಪೂರ್ತಿಯಾಗಿ ಕಳೆದುಕೊಂಡುಬಿಟ್ಟಿದೆ. "ಕೆಟ್ಟ ಕೆಲಸಗಳಲ್ಲಿ ನಿರತರಾದವರು, ಮೂಢರು, ನರಾಧಮರು, ಜ್ಞಾನಹೀನರಾಗಿ ಆಸುರೀ ಭಾವಕ್ಕೆ ಕಟ್ಟುಬಿದ್ದಿದ್ದಾರೆ; ಆದ್ದರಿಂದ ಅವರು ನನ್ನಲ್ಲಿ ಆಶ್ರಯ ಪಡೆಯುವುದಿಲ್ಲ" (೭.೧೫: ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ। ಮಾಯಯಾ ಅಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ॥). ತನಗೆ ಮುಜುಗರ ತರುವಂತಹ ಪ್ರಶ್ನೆಗಳ ನ್ನೆತ್ತುವ ಜನರು ಆಸುರೀ ಮನೋಭಾವದವರು, ಅವರು ಸಾಮಾಜಿಕ ವ್ಯವಸ್ಥೆಯನ್ನು ಪಲ್ಲಟಗೊಳಿಸಲು ಹಾತೊರೆಯುತ್ತಾರೆಂಬುದು ಗೀತೆಯ ದೊಡ್ಡ ಆಪಾದನೆ. ಅವರಿಗೆ ಹಿಡಿಶಾಪ ಹಾಕಲು ೧೬ ಮತ್ತು ೧೭ನೆಯ ಅಧ್ಯಾಯಗಳನ್ನು ಮೀಸಲಾಗಿಡಲಾಗಿದೆ. ಇವರ ಖಂಡನೆಯ ಅಗತ್ಯ ವಿಲ್ಲದಿದ್ದರೆ ಗೀತೆಯನ್ನು ಬರೆಯಬೇಕಾದ ಅಗತ್ಯವೇ ಇರುತ್ತಿರಲಿಲ್ಲ.

ಏನಿದು ಆಸುರೀ ಭಾವ? ಈ ಅಸುರರು ರಕ್ಕಸರಲ್ಲ, ಗೀತೆಯ ಕರ್ತೃವಿನಂತೆ ಮನುಷ್ಯರು. ಆದರೆ ಅವರು ದೂಷಣೆಗೆ ಪಾತ್ರರಾಗಲು ದೀರ್ಘವಾದ ಇತಿಹಾಸವನ್ನು ಹೊಂದಿದ್ದಾರೆ. ಸ್ವಲ್ಪ ಲೇವಡಿಯು ಕ್ಷಮಾರ್ಹವೆನ್ನುವುದಾದರೆ ಹೀಗೆನ್ನಬಹುದು: ಭೌತವಾದಿಗಳನ್ನು ವಿಷಯ ಲಂಪಟರು, ಸುಖಪ್ರಿಯರು, ಭೋಗನಿರತರು, ಎಂದೆಲ್ಲಾ ಹೀಯಾಳಿಸುವ 'ಆನಂದ'ರೆಲ್ಲರ ಬಣ ಇದೆಯಲ್ಲಾ, ಅವರೆಲ್ಲಾ ಯಾವಾಗಲೂ ಗೀತೆಯನ್ನು ಬೋಧಿಸುತ್ತಿರುವವರು; ಅವರ ಜೀವನಶೈಲಿಯು ಗೀತೆಯು ವಿವರಿಸುವ ನಿಜವಾದ ಆಸುರೀ ಪ್ರವೃತ್ತಿ ಎಂಬುದಕ್ಕೆ ದಿನಂಪ್ರತಿ ನಿದರ್ಶನಗಳು ಬಿಚ್ಚಿಕೊಳ್ಳುತ್ತಿರುತ್ತವೆ. ಕೊಲೆಯ ಆಪಾದನೆಯಿಂದ ಹಿಡಿದು ಅತಿಘೋರ ಆಪಾದನೆಗಳು ಇರುವುದು ಇಂಥವರ ಮೇಲೆ, ಆದರೆ ಹೀಯಾಳಿಸುವುದು ಭೌತವಾದಿಗಳನ್ನು!

ಛಾಂದೋಗ್ಯ ಉಪನಿಷತ್ತಿನ ಎಂಟನೆಯ ಅಧ್ಯಾಯದ ಏಳು ಮತ್ತು ಎಂಟನೆಯ ಖಂಡಗಳಲ್ಲಿ ಅಸುರರ ಪ್ರಸ್ತಾಪವಿದೆ ಮತ್ತು ಅವರನ್ನು ಟೀಕಿಸಲಾಗಿದೆ: ಇಂದ್ರ ಮತ್ತು ವಿರೋಚನ ಕ್ರಮವಾಗಿ ದೇವತೆಗಳ ಮತ್ತು ಅಸುರರ ಪ್ರತಿನಿಧಿಗಳಾಗಿ ಪ್ರಜಾಪತಿಯ ಬಳಿ ಆತ್ಮನ್ ಕುರಿತ ಜ್ಞಾನ ಪಡೆಯುವುದಿತ್ತು. ಮೂವತ್ತೆರಡು ವರ್ಷಗಳ ಕಾಲ ಅವನಲ್ಲಿ ಉಳಿದಿದ್ದರು. ಆಮೇಲೆ ಪ್ರಜಾಪತಿ ಅವರಲ್ಲಿ ವಿಚಾರಿಸಿದ, ಏತಕ್ಕಾಗಿ ಅವರು ಶಿಷ್ಯತ್ವ

**ಬಲಿಪಶು**

ಸೊಗಸಾಗಿ ಸಾಗುವರು
ಸರಕಾರದ ಬಸ್ ಹತ್ತಿ;
ಗಲಭೆಯ ಸಮಯದಲ್ಲಿ
ಅದನ್ನೇ ಸುಡುವರು
ಕಾನೂನನ್ನು ಕೈಗೆತ್ತಿ!

ಡಾ॥ ವಿ. ಪುಗಳೇಂದಿ
ಸಿರಗುಪ್ಪ – ೫೮೩ ೧೨೧ ಬಳ್ಳಾರಿ ಜಿಲ್ಲೆ

ವಹಿಸಿದ್ದರೆಂದು. "ಆತ್ಮಜ್ಞಾನ ಪಡೆಯಲು" ಎಂದು ಇಬ್ಬರೂ ಹೇಳಿಕೊಂಡರು. "ನಿಮ್ಮ ಕಣ್ಣಿಗೆ ಕಾಣುವ ಪುರುಷನು ಆತ್ಮ" ಎಂದು ಪ್ರಜಾಪತಿಯು ಹೇಳಲಾಗಿ ಇಬ್ಬರೂ ನೀರಿನಲ್ಲಿ ತಮ್ಮ ಪ್ರತಿಕೃತಿಗಳನ್ನು ನೋಡಿಕೊಂಡರು. ಮತ್ತೆ ಆಭರಣಗಳನ್ನು ಧರಿಸಿ ನೋಡಿಕೊಂಡರು. "ಏನನ್ನು ನೋಡಿದಿರಿ ?" ಎಂದು ಪ್ರಜಾಪತಿಯು ಕೇಳಲಾಗಿ "ನಾವು ಹೇಗೆ ಆಭರಣ, ಉಡುಪು ಧರಿಸಿದ್ದೇವೋ ಹಾಗೆಯೇ ಕಂಡೆವು" ಎಂದು ಉತ್ತರಿಸಿದರು. ದೇವಾಸುರರು ಬೇರೆ ಬೇರೆ ರೀತಿಗಳಲ್ಲಿ ಆತ್ಮನನ್ನು ಗ್ರಹಿಸುತ್ತಾರೆ ಎಂದು ತಿಳಿದಿದ್ದ ಪ್ರಜಾಪತಿ ಅವರನ್ನು ಬೀಳ್ಕೊಟ್ಟ. ವಿರೋಚನನು ಅಸುರರ ಬಳಿಗೆ ಹಿಂದಿರುಗಿ ತಾನು ಪಡೆದಿದ್ದ ಜ್ಞಾನವನ್ನು ಬಿತ್ತರಿಸಿದ. ಅವರು ಅಲಂಕಾರ ಪ್ರಿಯರಾಗಿ ದೇಹವೇ ಆತ್ಮವೆಂದು ಬಗೆದರು, ಲೋಕವನ್ನು ಜಯಿಸಿದ್ದೇವೆಂದು ಭ್ರಮಿಸಿದರು. ಅವರಿಗೆ ದೊರಕಿದ ತತ್ತ್ವವೇ 'ದೇಹಾತ್ಮವಾದ'. ಇಂದ್ರನಾದರೋ ದೇಹವೇ ಆತ್ಮವಾಗಿರಲಾರದು, ಏಕೆಂದರೆ ಶರೀರಕ್ಕೆ ಯಾವ ಉಪಚಾರ ಮಾಡುತ್ತೇವೋ ಹಾಗೆ ಅದು ಕಾಣುತ್ತದೆ, ಅಷ್ಟೇ, ಎಂದು ಆಲೋಚಿಸಿ ಪ್ರಜಾಪತಿಯ ಬಳಿಗೆ ಹಿಂದಿರುಗಿದ. ಇನ್ನೂ ಮೂವತ್ತೆರಡು ವರ್ಷ ಶಿಷ್ಯತ್ವ ವಹಿಸಿದ ನಂತರ ಇನ್ನಷ್ಟು ಜ್ಞಾನ ಪಡೆದ. ಹೀಗೆ ಶಿಷ್ಯತ್ವ ಮುಂದುವರಿಸುತ್ತಾ ಕೊನೆಗೆ ಆತ್ಮನ ನಿತ್ಯತ್ವ ಸತ್ಯವನ್ನು ತಿಳಿದುಕೊಂಡ. ಆದ್ದರಿಂದ ಆಸುರೀ ವಿದ್ಯೆಯೆಂದರೆ ದೇಹಾತ್ಮವಾದ. ಅದನ್ನು ತನ್ನದೇ ಕೋಪದ ಗಡುಸಾದ ಶೈಲಿಯಲ್ಲಿ ದೀರ್ಘವಾಗಿ ವಿವರಿಸಿ ಖಂಡಿಸಿರುವುದು ಗೀತೆಯ ಒಂದು ವೈಶಿಷ್ಟ್ಯ. ಮೈತ್ರಾಯಣಿ ಉಪನಿಷತ್ತಿನಲ್ಲೂ (೭.೮.೯) ಅಸುರ ದೃಷ್ಟಿಯ ಪ್ರಸ್ತಾಪವಿದೆ. ಆ ದೃಷ್ಟಿಯುಳ್ಳವರು "ಕೆಲಸಕ್ಕೆ ಬಾರದ ವಾದ ಹೂಡುತ್ತಾರೆ, ಅಪಕ್ವ ನಿದರ್ಶನ ಕೊಡುತ್ತಾರೆ, ಮಿಥ್ಯಾ ಉಪಮೆಗಳನ್ನು ನೀಡುತ್ತಾರೆ" ಎಂದಲ್ಲಿ ಹೇಳಲಾಗಿದೆ. ಹೀಗೆಲ್ಲಾ ಅವರು ಮಾಡುವುದು "ವೈದಿಕ ಆಚರಣೆಗಳನ್ನು ದೂಷಿಸಲು. ಅವರಿಗೆ ಆತ್ಮನಲ್ಲಿ ನಂಬಿಕೆ ಇಲ್ಲ. ಅವರು ಕಳ್ಳರು, ಸ್ವರ್ಗಕ್ಕೆ ಎಂದೂ ಹೋಗಲಾರರು. ಯಾರೂ ಅವರೊಡನೆ ಸಂಸರ್ಗ ಇಟ್ಟುಕೊಳ್ಳಬಾರದು. ಅವರ ವಿದ್ಯೆ ಬೇರೇನೂ ಅಲ್ಲ, ವೇದ ವಿದ್ಯೆಗೆ ಭಿನ್ನವಾದ್ದು ಅದು (ವೇದವಿದ್ಯಾಂತರಂ ತು ತತ್)." ಗೀತೆಯು ಬೌದ್ಧ ಮತ್ತು ಲೋಕಾಯತ ದರ್ಶನಗಳ ತತ್ತ್ವವನ್ನು ಪ್ರಬಲವಾಗಿ ಖಂಡಿಸುವುದನ್ನು ಪ್ರಮುಖ ಉದ್ದೇಶವನ್ನಾಗಿ ಹೊಂದಿದೆ ಎಂಬುದು ಇದರಿಂದಲೂ ಸ್ಪಷ್ಟವಾಗುತ್ತದೆ.

ಗೀತೆಯ ಹದಿನಾರನೆಯ ಅಧ್ಯಾಯದಲ್ಲಿ ಇದೇ ದೇವಾಸುರರು ಮತ್ತೆ ಕಾಣಿಸಿಕೊಂಡಿದ್ದಾರೆ (೧೬.೬ : ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ). ಅವರ ಪ್ರತ್ಯೇಕ ಲಕ್ಷಣಗಳನ್ನು ಮೊದಲಿಗೆ ಹೇಳಲಾಗಿದೆ (೧೬.೧-೪) : ಭಯವಿಲ್ಲದ್ದು, ಮಾನಸಿಕ ಶುಚಿತ್ವ, ಜ್ಞಾನ-ಯೋಗಗಳಲ್ಲಿ ಆಸಕ್ತಿ, ದಾನ, ಇಂದ್ರಿಯ ನಿಗ್ರಹ, ಯಜ್ಞ, ಸ್ವಾಧ್ಯಾಯ, ಋಜುಮಾರ್ಗ, ಅಹಿಂಸೆ, ಸತ್ಯ, ತ್ಯಾಗ, ಶಾಂತಿ ಇವೆಲ್ಲಾ ದೈವೀ ದೃಷ್ಟಿಯುಳ್ಳ ಕುಟುಂಬದಲ್ಲಿ ಹುಟ್ಟಿದವರಲ್ಲಿ ಮೂಡುತ್ತವೆ (ಭವಂತಿ ಸಂಪದಂ ದೇವೀಮಭಿಜಾತಸ್ಯ ಭಾರತ). ಅಂದರೆ ಅವು ಹುಟ್ಟಿನಿಂದಲೇ ಬಂದ ಯೋಗ್ಯ ಗುಣಗಳು, ರೂಢಿಸಿಕೊಂಡವಲ್ಲ. ಅಂತಹ ಕುಟುಂಬದಲ್ಲಿ ಹುಟ್ಟಿಯೂ ಆ ಗುಣಗಳು ಕಾಣಿಸಿಕೊಳ್ಳದಿರಬಹುದು. ಆದರೆ ಅಂತಹ ಕುಟುಂಬಗಳಲ್ಲಿ ಹುಟ್ಟದಿದ್ದವರಿಗೆ ಆ ಗುಣಗಳು ಸರ್ವಥಾ ದಕ್ಕುವಂತಿಲ್ಲ. ಅವರು ಆಸುರೀ ಸಂಪ್ರದಾಯಕ್ಕೆ ಮಾತ್ರವೇ ಯೋಗ್ಯರು. ಅವರ ಲಕ್ಷಣಗಳೆಂದರೆ ದರ್ಪ, ಕ್ರೋಧ, ಗಡುಸುತನ, ಕೋಪ, ತೋರಿಕೆಯ ಧಾರ್ಮಿಕತ್ವ, ಅಜ್ಞಾನ, ಇತ್ಯಾದಿ. ಅವು ಸಹ ಹುಟ್ಟಿನಿಂದಲೇ ಬಂದ ಗುಣಗಳು, ರೂಢಿಸಿಕೊಂಡುವಲ್ಲ. ಹದಿನಾರನೆಯ ಅಧ್ಯಾಯ ಪೂರ್ತಿ ಅಂತಹ ಗುಣಗಳನ್ನು ಪಟ್ಟಿ ಮಾಡಿ, ಕಡೆಗೆ ಅವರು "ಶಾಸ್ತ್ರವಿಧಿಗಳನ್ನು ನಿರಾಕರಿಸಿ ಮನಬಂದಂತೆ ವರ್ತಿಸುತ್ತಾರೆ" (೧೬.೨೩ : ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ); ಅವರಿಗೆ ಸಿದ್ಧಿ, ಸುಖ, ಪರಮ ಪ್ರಾಪ್ತಿ ಯಾವುದೂ ಸಿಗದು ಎಂಬ ತೀರ್ಮಾನ ಪ್ರಕಟಿಸಿದೆ. ಅವರ ಅವಗುಣಗಳು ಎಂಥವು ? ನೀತಿರಾಹಿತ್ಯ, ಅಂದರೆ ಅವರಿಗೆ ಪ್ರವೃತ್ತಿ – ನಿವೃತ್ತಿ ತಿಳಿಯದು. ಯಾವುದು ಮಾಡಬಹುದು, ಯಾವುದು ಮಾಡಬಾರದು ಎಂಬ ವಿವೇಚನೆ ಇಲ್ಲ ಮತ್ತು ಶೌಚ, ಆಚಾರ, ಸತ್ಯ, ಯಾವುದೂ ಇಲ್ಲ (೧೬.೭). ಇನ್ನೂ ಮುಖ್ಯವಾಗಿ, ಅವರು ಈಶ್ವರನ ಅಸ್ತಿತ್ವವನ್ನು ಒಪ್ಪುವುದಿಲ್ಲ. ಎಲ್ಲವೂ ಪರಸ್ಪರ ಕಾಮದಿಂದ ಜನ್ಯವಾಗಿವೆ ಎಂದುಬಿಡುತ್ತಾರೆ (೧೬.೮ : ಜಗದಾಹುರನೀಶ್ವರಂ। ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್). ಅವರು ಅಲ್ಪಬುದ್ಧಿಯವರು, ಆತ್ಮವನ್ನು ಕಳೆದುಕೊಂಡವರು, ಉಗ್ರಕರ್ಮಿಗಳು, ಅವರು ಹುಟ್ಟಿರುವುದೇ ಜಗದ ಅಹಿತ ಸಾಧನೆಗೆ (೧೬.೯ : ಕ್ಷಯಾಯ ಜಗತೋಽಹಿತಾಃ). ಕಾಮೋಪಭೋಗವೊಂದೇ ಅವರ ಪರಮ ಆಕಾಂಕ್ಷೆ ಮತ್ತು ಅದನ್ನು ಪಡೆದುಕೊಳ್ಳಲು ಅಪಾಮಾರ್ಗದಿಂದ ಹಣ ತುಂಬಿಕೊಳ್ಳುತ್ತಾರೆ (೧೬.೧೨ : ಈಹಂತೇ ಕಾಮಭೋಗಾರ್ಥಂ ಅನ್ಯಾಯೇನ ಅರ್ಥ ಸಂಚಯಾನ್). ದೇಹಾತ್ಮ ವಾದಿಗಳ ಸಹಸ್ರನಾಮ ಇದು ! ಮುಂದಿನ ಒಂದು ವಿವರಣೆ ಮುಖ್ಯವಾದ್ದು. ಅವರು ಮಾಡುವ ಯಜ್ಞಗಳು (ಆಚರಣೆಗಳು) ಹೆಸರಿಗೆ ಮಾತ್ರ ಯಜ್ಞ; ಅವುಗಳಲ್ಲಿ ಒಂದು ಕ್ರಮವಿಲ್ಲ, ಎಲ್ಲಾ ಕೇವಲ ಸೋಗು (೧೬.೧೭ : ಯಜಂತೇ ನಾಮಯಜ್ಞಸ್ತೇ ದಂಭೇನಾವಿಧಿಪೂರ್ವಕಮ್ ॥). ಇಷ್ಟು ಸಾಲದೆಂಬಂತೆ ಅವರು ತಮ್ಮ ಮತ್ತು ಇತರರ ದೇಹಗಳಲ್ಲಿ ಭಗವಾನನನ್ನು ಮಾನ್ಯ ಮಾಡುವುದಿಲ್ಲ; ಆದ್ದರಿಂದ ಭಗವಾನನು ಅವರನ್ನು ದ್ವೇಷಿಸುತ್ತಾನೆ, ನರಾಧಮರೆಂದು ಭಾವಿಸುತ್ತಾನೆ ಮತ್ತು ನಿರಂತರವಾಗಿ ಅವರನ್ನು ಆಸುರೀ ಯೋನಿಗಳಲ್ಲಿಯೇ ಹುಟ್ಟುವಂತೆ ಮಾಡುತ್ತಾನೆ. (೧೬.೧೮-೧೯ : ... ಮಾಂ ಆತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ । ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮಿ ಅಜಸ್ರಂ ಅಶುಭಾನ್ ಆಸುರೀಷ್ವೇವ ಯೋನಿಷು।)

ಒಟ್ಟಿನಲ್ಲಿ, ಭಗವಾನನು ಕೆಟ್ಟದ್ದನ್ನು ಮಾಡುವವರ ವಿನಾಶಕ್ಕಾಗಿ ಅವತರಿಸಿ ಧರ್ಮ ಸಂಸ್ಥಾಪನೆ ಮಾಡುವಾಗ (೪.೮) ಮುಖ್ಯವಾಗಿ ಲಕ್ಷ್ಯದಲ್ಲಿರಿಸಿ ಕೊಂಡಿರುವುದು ಈ "ನರಾಧಮ"ರಾದ ದೇಹಾತ್ಮ ವಾದಿಗಳನ್ನು, ಅಂದರೆ, ಲೋಕಾಯತರನ್ನು ಹಾಗೂ ಅವರೊಡನೆ ಹೆಜ್ಜೆ ಹಾಕುವ ಬೌದ್ಧರನ್ನು. "ಅವರೂ ಯಜ್ಞ ಮಾಡುತ್ತಾರೆ, ಅವು ಹೆಸರಿಗೆ ಮಾತ್ರ ಯಜ್ಞ; ಅದರಲ್ಲಿ ಕ್ರಮವಿಲ್ಲ" (೧೬.೧೭) ಎಂದಾಗ ಗುರುತಿಸುವುದು ಅವರನ್ನೇ. ಏಕೆಂದರೆ, ಅವರ ಆಚರಣೆಗಳು ಜಾನಪದ ಆಚರಣೆಗಳು, ಬುಡಕಟ್ಟು ವ್ಯವಸ್ಥೆಯ ಕಾಲದ ಮಾಂತ್ರಿಕ ಆಚರಣೆಗಳು, ನಂತರದ ಯಜ್ಞಗಳ ಶಿಷ್ಟತ್ವ ಹೊಂದಿಲ್ಲದಿರುವಂಥವು. ಚಾರಿತ್ರಿಕ ಸಂದರ್ಭದಲ್ಲಿಟ್ಟು ಗೀತೆಯ ಅಧ್ಯಯನ ಮಾಡಿದರೆ ಅದರ ಸೈದ್ಧಾಂತಿಕ ನಿಲುವು ಎಂಥದೆಂಬುದು ತಿಳಿಯುತ್ತದೆ, ಕುರುಕ್ಷೇತ್ರದ ಸಮರ ಯಾರ ವಿರುದ್ಧವೆಂಬ ಅರಿವು ಉಂಟಾಗುತ್ತದೆ. ಅದೆಂತಹ ತೀವ್ರವಾದ ಅಸಹನೆಯೆಂಬುದು ಗೀತೆಯು ೧೬ನೆಯ ಅಧ್ಯಾಯದಲ್ಲಿ "ಆಸುರೀ ವಿದ್ಯೆ"ಯ ಬಗ್ಗೆ ಬಳಸಿರುವ ಭಾಷೆಯಿಂದ ತಿಳಿಯುತ್ತದೆ. ಮೊದಲನೆಯ ಅಧ್ಯಾಯದಲ್ಲಿ ಸಾಮಾಜಿಕ ಪ್ರಶ್ನೆಗಳನ್ನೆತ್ತಿದ್ದು ಈ ಬಣದವರು. ಅವರು ಸಂಶಯ ಬಿತ್ತುವುದನ್ನು ತಡೆಯಬೇಕು, ಅವರ ಪ್ರಶ್ನಿಸುವ ಪ್ರವೃತ್ತಿಯನ್ನು ತುಂಡರಿಸಬೇಕು, ವೈದಿಕ ಬ್ರಾಹ್ಮಣ್ಯದ ಅನುಶಾಸನವನ್ನು ಸುಭದ್ರಗೊಳಿಸ ಬೇಕು. ಇಲ್ಲದಿದ್ದರೆ, ಯಜ್ಞವನ್ನು ಪುರಸ್ಕರಿಸದೆ ಬ್ರಹ್ಮಯಜ್ಞವೊಂದೇ ಯಜ್ಞವೆಂದು ಬಗೆಯುವ ಗೀತೆಯು ದೇಹಾತ್ಮವಾದಿಗಳ "ನಾಮಮಾತ್ರ ಯಜ್ಞ"ವನ್ನು ಅವಹೇಳನ ಮಾಡಬೇಕೇಕೆ ! ಈ ಸಂಬಂಧದಲ್ಲಿ "ಅನುಗೀತೆ" ಎಂಬ ಕಳಪೆ ಗ್ರಂಥವೊಂದನ್ನು ಗಮನಿಸುವುದು ಅವಶ್ಯಕ. ಅದು ಭಗವದ್ಗೀತೆಯು ಬಂದ ಎಷ್ಟೋ ಕಾಲದ ನಂತರದ ಬ್ರಾಹ್ಮಣ ವರ್ಣದವರ ಪರವಾದ ಗ್ರಂಥ. ಸನ್ನಿವೇಶ ಹೀಗಿದೆ : ಅರ್ಜುನ ಭಗವದ್ಗೀತೆಯನ್ನು ಮರೆತುಬಿಟ್ಟಿದ್ದಾನೆ. ಗೀತಾಯಜ್ಞ ಮಾಡುವ ನಮ್ಮ 'ಆನಂದ'ರಂತೆ ! ಕೃಷ್ಣನನ್ನು ಕೇಳಿಕೊಳ್ಳುತ್ತಾನೆ, 'ಮತ್ತೊಮ್ಮೆ ಬೋಧಿಸು' ಎಂದು. ಸ್ವಾರಸ್ಯವೆಂದರೆ, ಕೃಷ್ಣ ಭಗವಾನನಿಗೂ ಅದು ಮರೆತುಹೋಗಿದೆ. ಆದ್ದರಿಂದ "ನೆನಪಿಗೆ ಬರುತ್ತಿಲ್ಲ" ಎಂದ. ಹೀಗಾಗಿ ಸ್ಥಿತಪ್ರಜ್ಞ, ವಿಶ್ವರೂಪ ದರ್ಶನ, ದೇಹಾತ್ಮವಾದ ಯಾವುದೂ ಇಲ್ಲ ಅದರಲ್ಲಿ. ಇರುವುದೆಲ್ಲಾ ಬ್ರಾಹ್ಮಣರ, ಬ್ರಾಹ್ಮಣ್ಯದ ಪ್ರಶಂಸೆ. ಅದೂ ಮಹಾಭಾರತದಲ್ಲಿ ಅಶ್ವಮೇಧ ಪರ್ವದ ಉತ್ತರಭಾಗವಾಗಿ ಸೇರಿಹೋಗಿದೆ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫










## ಪುಸ್ತಕ ಪ್ರಕಾಶನ

**91, 9ನೇ ಮುಖ್ಯರಸ್ತೆ**
**ಸರಸ್ವತಿಪುರಂ**
**ಮೈಸೂರು - 570 009**
**ಫೋನ್ : 0821-2545774**

## ಪುಸ್ತಕ ಪ್ರಕಾಶನ

**ಬುಕ್‌ಪೋಸ್ಟ್‌ಸರ್ವೀಸ್**
**ಪಿ. ಬಿ. ನಂ. 58, ಮೂಡಿಗೆರೆ**
**ಚಿಕ್ಕಮಗಳೂರು ಜಿಲ್ಲೆ-577132**
**ಫೋನ್ : 08263-228353, 240202**
**ಮೊಬೈಲ್ : 94482 03730**
e-mail : raghu202@bsnl.in












ಪುಸ್ತಕ ಬೆಲೆ ಪಟ್ಟಿ - 2015[T]

| | |
|---|---|
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ:** | |
| ಕಿರಗೂರಿನ ಗಯ್ಯಾಳಿಗಳು | 90.00 |
| ಕರ್ವಾಲೊ | 105.00 |
| ಚಿದಂಬರ ರಹಸ್ಯ | 204.00 |
| ಸಹಜ ಕೃಷಿ | 60.00 |
| ಪರಿಸರದ ಕತೆ | 105.00 |
| ಮಿಸ್ಸಿಂಗ್ ಲಿಂಕ್ | 90.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 114.00 |
| ಜುಗಾರಿ ಕ್ರಾಸ್ | 204.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 87.00 |
| ಫ್ಲೈಯಿಂಗ್ ಸಾಸರ್ಸ್ (1) | 87.00 |
| ಫ್ಲೈಯಿಂಗ್ ಸಾಸರ್ಸ್ (2) | 87.00 |
| ಕಾಡಿನ ಕತೆಗಳು 1 - ಬೆಳ್ಳಂದೂರಿನ ನರಭಕ್ಷಕ | 75.00 |
| ಕಾಡಿನ ಕತೆಗಳು 2 - ಪೆದ್ದಚೆರುವಿನ ರಾಕ್ಷಸ | 75.00 |
| ಕಾಡಿನ ಕತೆಗಳು 3 - ಜಾಲಹಳ್ಳಿಯ ಕುರ್ಕ | 75.00 |
| ಕಾಡಿನ ಕತೆಗಳು 4 - ಮುನಿಶಾಮಿ ಮತ್ತು ಮಾಗಡಿ ಚಿರತೆ | 75.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 105.00 |
| ಕನ್ನಡನಾಡಿನ ಹಕ್ಕಿಗಳು (1) - ಮಿಂಚುಳ್ಳಿ | 99.00 |
| - ,, - (2) - ಹೆಜ್ಜೆ ಮೂಡದ ಹಾದಿ | 96.00 |
| ಹಕ್ಕಿ-ಪುಕ್ಕ | 396.00 |
| ಅಣ್ಣನ ನೆನಪುಗಳು | 210.00 |
| ಹುಲಿಯೂರಿನ ಸರಹದ್ದು | 105.00 |
| ಅಬಚೂರಿನ ಪೋಸ್ಟಾಫೀಸು | 90.00 |
| ಮಿಲೆನಿಯಮ್ (1) - ಹುಡುಕಾಟ | 87.00 |
| ಮಿಲೆನಿಯಮ್ (2) - ಜೀವನ ಸಂಗ್ರಾಮ | 87.00 |
| ಮಿಲೆನಿಯಮ್ (3) - ಪೆಸಿಫಿಕ್ ದ್ವೀಪಗಳು | 87.00 |
| ಮಿಲೆನಿಯಮ್ (4) - ಚಂದ್ರನ ಚೂರು | 87.00 |
| ಮಿಲೆನಿಯಮ್ (5) - ನೆರೆಹೊರೆಯ ಗೆಳೆಯರು | 87.00 |
| ಮಿಲೆನಿಯಮ್ (6) - ಮಹಾಯುದ್ಧ (1) | 87.00 |
| ಮಿಲೆನಿಯಮ್ (7) - ಮಹಾಯುದ್ಧ (2) | 87.00 |
| ಮಿಲೆನಿಯಮ್ (8) - ಮಹಾಯುದ್ಧ (3) | 87.00 |
| ಮಿಲೆನಿಯಮ್ (9) - ದೇಶ ವಿದೇಶ (1) | 87.00 |
| ಮಿಲೆನಿಯಮ್ (10) - ದೇಶ ವಿದೇಶ (2) | 87.00 |
| ಮಿಲೆನಿಯಮ್ (11) - ದೇಶ ವಿದೇಶ (3) | 87.00 |
| ಮಿಲೆನಿಯಮ್ (12) - ದೇಶ ವಿದೇಶ (4) | 87.00 |
| ಮಿಲೆನಿಯಮ್ (13) - ವಿಸ್ಮಯ ವಿಶ್ವ (1) | 87.00 |
| ಮಿಲೆನಿಯಮ್ (14) - ಮಹಾಪಲಾಯನ | 87.00 |
| ಮಿಲೆನಿಯಮ್ (15) - ವಿಸ್ಮಯ ವಿಶ್ವ (2) | 87.00 |
| ಮಿಲೆನಿಯಮ್ (16) - ಅಡ್ವೆಂಚರ್ | 87.00 |
| ಮಾಯಾಲೋಕ - 1 | 216.00 |

* ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಯೂ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.

| | |
|---|---|
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 87.00 |
| ವ್ಯಕ್ತಿ ವಿಶಿಷ್ಟಸಿದ್ಧಾಂತ ಮತ್ತು ಯಮಳ ಪ್ರಶ್ನೆ | 60.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 60.00 |
| ವಿಮರ್ಶೆಯ ವಿಮರ್ಶೆ | 183.00 |
| 'ಮಾಯೆಯ ಮುಖಗಳು' (ಚಿತ್ರಲೇಖನ) | 690.00 |
| ಹೊಸ ವಿಚಾರಗಳು | 480.00 |
| ಕಾಡು ಮತ್ತು ಕ್ರೌರ್ಯ | 120.00 |
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ- ಶ್ರೀ ಪ್ರದೀಪ ಕೆಂಜಿಗೆ:** | |
| ವಿಸ್ಮಯ (1) (2) (3) ಪ್ರತಿಯೊಂದೂ | 87.00 |
| ಪ್ಯಾಪಿಲಾನ್ (1) (2) (3) ಪ್ರತಿಯೊಂದೂ | 162.00 |
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ- ಡಾ|| ವಿ. ವಿ. ಬೆಳವಾಡಿ :** | |
| ನೆಡೆಯುವ ಕಡ್ಡಿ ! ಹಾರುವ ಎಲೆ ! | 87.00 |
| **ಶ್ರೀ ಪ್ರದೀಪ ಕೆಂಜಿಗೆ:** | |
| ಬರ್ಮುಡಾ ಟ್ರ್ಯಾಂಗಲ್ | 75.00 |
| ಅದ್ಭುತ ಯಾನ | 108.00 |
| ಹೆಬ್ಬಾವಿನೊಡನೆ ಹೋರಾಟ | 120.00 |
| **ಶ್ರೀ ಎಮ್. ಶಿವಕುಮಾರ್** | |
| ಕಂಪ್ಯೂಟರ್ ಕಲಿಯಿರಿ | 147.00 |
| 'ಗಡಿಯಾರ' ವಿಕಾಸದ ಹಾದಿಯಲ್ಲಿ | 66.00 |
| **ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣಗೌಡರು :** | |
| ಅಚ್ಚ ಕನ್ನಡ ನುಡಿಕೋಶ | 360.00 |
| **ಶ್ರೀ ನರೇಂದ್ರ ರೈ ದೇರ್ಲ :** ಸಾವಯವ ಕೃಷಿ | 51.00 |
| ತೇಜಸ್ವಿ ಪತ್ರಗಳು | 450.00 |
| **ಶ್ರೀ ಕೃಪಾಕರ - ಸೇನಾನಿ :** | |
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 108.00 |
| **ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ :** | |
| ತರಗತಿಗಳಲ್ಲಿ ಕುವೆಂಪು | 198.00 |
| **ಶ್ರೀ ದೇವನೂರು ಮಹಾದೇವ** | |
| ಕುಸುಮಬಾಲೆ | 90.00 |
| ದ್ಯಾವನೂರು ಹಾಗೂ ಒಡಲಾಳ | 96.00 |
| **ಶ್ರೀಮತಿ ತಾರಿಣಿ ಚಿದಾನಂದ :** | |
| ಮಗಳು ಕಂಡ ಕುವೆಂಪು | 370.00 |
| **ಶ್ರೀಮತಿ ಪದ್ಮಾಶ್ರೀರಾಮ :** | |
| ಗಿಡಗಂಟೆಯಾ ಕೊರಳು | 78.00 |
| **ಡಾ|| ಕೆ. ಚಿದಾನಂದ ಗೌಡ :** | |
| ಬದುಕು.. ಬೆಳಕು... ಚುಟುಕು....! ಭಾಗ 1 | 89.00 |
| ಬದುಕು.. ಬೆಳಕು... ಚುಟುಕು....! ಭಾಗ 2 | 90.00 |
| **ಶ್ರೀಮತಿ ರಾಜೇಶ್ವರಿ ತೇಜಸ್ವಿ:** ನನ್ನ ತೇಜಸ್ವಿ | 369.00 |

ಅಂಚೆಮೂಲಕ ತರಿಸಿಕೊಳ್ಳುವವರಿಗೆ ವಿ. ಸೂ : ನಮ್ಮ ಯಾವ ಪುಸ್ತಕ ಬೇಕಾದರೂ ತಿಳಿಸಿ. ವಿ.ಪಿ.ಎಲ್. ಮಾಡುತ್ತೇವೆ. ಅಂಚೆಯವರು ತಿಳಿಸಿದಾಗ ಹಣ ಕಟ್ಟಿ ಪುಸ್ತಕ ಪಡೆಯಬಹುದು. ಅಂಚೆ ಮತ್ತು ಪ್ಯಾಕಿಂಗ್ ವೆಚ್ಚ ಉಚಿತ











**ಕಾಶ್ಮೀರದಲ್ಲಿ ಭುಗಿಲೆದ್ದಿರುವ ಅಶಾಂತಿ**

ಕಾಶ್ಮೀರ ಕಣಿವೆಯಲ್ಲಿ ಪರಿಸ್ಥಿತಿ ಉಲ್ಬಣಿಸಿರುವುದು, ಭದ್ರತಾ ಪಡೆಗಳೊಂದಿಗೆ ಘರ್ಷಣೆ, ಬಂಧನ, ಬಿಡುಗಡೆ, ಕರ್ಫ್ಯೂ, ಇವಾವುದೂ ಹೊಸದಲ್ಲ. ಆದರೆ ಕಳೆದ ವರ್ಷ ಸೆಪ್ಟೆಂಬರ್ ತಿಂಗಳಿಂದ ಈ ಪ್ರದೇಶದಲ್ಲಿ ಹಬ್ಬಿರುವ ಅಶಾಂತಿ ಹಲವು ಪ್ರಶ್ನೆಗಳನ್ನು ಎತ್ತಿದೆ. ಪರಿಸ್ಥಿತಿ ಅವಲೋಕಿಸಿ ಸೂಕ್ತವಾದ ಪರಿಹಾರ ಕಂಡುಕೊಳ್ಳುವುದು ಜರೂರು ಅವಶ್ಯಕತೆಯಾಗಿದೆ. ಎಲ್ಲದಕ್ಕೂ ಪಾಕಿಸ್ತಾನದ ಕಿತಾಪತಿ ಆರೋಪಿಸುವುದರಿಂದಾಗಲಿ, ಕಾಶ್ಮೀರ ಭಾರತದ ಅವಿಭಾಜ್ಯ ಅಂಗ ಎಂದು ಹೇಳಿಕೊಳ್ಳುವುದರಿಂದಾಗಲಿ ಪ್ರಯೋಜನವಿಲ್ಲ. ಸಹಜಸ್ಥಿತಿಗೆ ಮರಳುವುದಕ್ಕೆ ಕಾಶ್ಮೀರದ ಜನರ ವಿಶ್ವಾಸ ಗಳಿಸುವುದು ಮುಖ್ಯ. ಮೋದಿ ಸರಕಾರ ಅನುಸರಿಸುತ್ತಿರುವ ನೀತಿಯಿಂದ ಕಾಶ್ಮೀರದ ಪ್ರಶ್ನೆ ಅಂತರರಾಷ್ಟ್ರೀಯಗೊಳ್ಳುವ ಸಂಭವವೂ ಕಾಣುತ್ತಿದೆ. ಮೂರನೆಯವರ ಮಧ್ಯಪ್ರವೇಶವಿಲ್ಲದೆ ಈಗ ಎದ್ದಿರುವ ಸಮಸ್ಯೆಯನ್ನು ಕೇಂದ್ರ ಹಾಗೂ ಕಾಶ್ಮೀರ ಸರಕಾರಗಳು ಬಗೆಹರಿಸಬೇಕು.

ಎನ್‌ಕೌಂಟರ್ ಹತ್ಯೆಗಳು ಕಾಶ್ಮೀರದಲ್ಲಿ ಅಪರೂಪವೇನಲ್ಲ. ಪ್ರತ್ಯೇಕವಾದಿಗಳು, ಉಗ್ರರ ಹಾವಳಿ ವಿರುದ್ಧ ಭದ್ರತಾ ಪಡೆಗಳು ಕೈಗೊಳ್ಳುವ ಕ್ರಮಗಳಲ್ಲಿ ಆರೋಪಿಗಳ ಹತ್ಯೆಯೂ ಒಂದು. ಜನಸಾಮಾನ್ಯರ ಪ್ರತಿಭಟನೆ, ನ್ಯಾಯಾಲಯಗಳ ತೀವ್ರವಾದ ಆಕ್ಷೇಪಗಳಿದ್ದಾಗ್ಯೂ ಎನ್‌ಕೌಂಟರ್ ಮುಂದುವರಿದಿದೆ. ಹಿಜ್ಬುಲ್ ಮುಜಾಹಿದ್ದೀನ್ ನಾಯಕ ಬರ್ಹಾನ್‌ವಾಣಿ ಎನ್‌ಕೌಂಟರ್ ಹತ್ಯೆಯಿಂದಾಗಿ ಕಾಶ್ಮೀರದಲ್ಲಿ ಈಗಲೂ ಮುಂದುವರಿಯುತ್ತಿರುವ ಪ್ರತಿಭಟನೆಗಳು, ಭದ್ರತಾ ಪಡೆಗಳ ವಿರುದ್ಧ ಆಕ್ರೋಶ, ಪ್ರತಿರೋಧ, ಕಲ್ಲು ತೂರಾಟ, ಮುಂತಾದವು ಹೊಸ ಪ್ರಶ್ನೆಗಳನ್ನು ಹುಟ್ಟುಹಾಕಿದೆ. ಸುದೀರ್ಘ ಕಾಲದಿಂದ ಭದ್ರತಾ ಪಡೆಗಳ ನೆರಳಿನಲ್ಲಿಯೇ ಇರುವ ಕಾಶ್ಮೀರದ ಜನ ರೋಸಿಹೋಗಿದ್ದಾರೆಯೇ? ಪ್ರತ್ಯೇಕವಾದಿಗಳು ಮೇಲುಗೈ ಪಡೆಯುತ್ತಿದ್ದಾರೆಯೇ? ಈ ಸಲ ನೂರಾರು ದಿನಗಳು ಕರ್ಫ್ಯೂ ಜಾರಿಯಲ್ಲಿದ್ದು ಜನಜೀವನ ಅಸ್ತವ್ಯಸ್ತಗೊಂಡಿತ್ತು. ಹತ್ತಿರ ಹತ್ತಿರ ನೂರು ಮಂದಿ ಸಾವಿಗೀಡಾಗಿ, ಹಲವರು ಗಾಯಾಳುಗಳಾದರು. ವಿದ್ಯಾರ್ಥಿಗಳು, ಯುವಜನರು ಪ್ರತ್ಯೇಕವಾದಿಗಳ ಜೊತೆ ಕೈಜೋಡಿಸಿರುವುದು ಗಮನಿಸಬೇಕಾದ ಸಂಗತಿ. ಪರಿಸ್ಥಿತಿ ಹದಗೆಡಲು ಕೇಂದ್ರ ಹಾಗೂ ಕಣಿವೆಯಲ್ಲಿ ಅಧಿಕಾರದಲ್ಲಿರುವ ಭಾಜಪ–ಪಿಡಿಪಿ ಸರಕಾರವೇ ಹೊಣೆ.

✶ ✶ ✶

**ಮುಂದುವರಿದ ಭಯೋತ್ಪಾದನೆ**

ಪಾಕಿಸ್ತಾನದಿಂದ ನುಸುಳಿಬರುವ ಭಯೋತ್ಪಾದಕರು, ದೇಸೀ ಉಗ್ರರು ಆಗಾಗ್ಗೆ ನಡೆಸುವ ದಾಳಿಗಳಿಗೆ ನಾವು ಒಗ್ಗಿಹೋಗಿದ್ದೇವೆ. ಅಮಾಯಕ ಜನರು ಕಡೆಗಳಲ್ಲಿ ಹುದುಗಿರಿಸಿರುವ ಬಾಂಬುಗಳು ಸ್ಫೋಟಗೊಳ್ಳುವುದರಿಂದ ಸಂಭವಿಸುವ ದುರಂತ, ನೇರವಾಗಿ ಭಯೋತ್ಪಾದಕರು ನಡೆಸುವ ಗುಂಡಿನ ದಾಳಿಗೆ ಈಡಾಗುವುದು ನಡೆದೇ ಇದೆ. ಹಾಗೆಯೇ ಉಗ್ರರನ್ನು ಮಟ್ಟಹಾಕಲು ಸರಕಾರ ಕ್ರಮಗಳನ್ನೂ ಕೈಗೊಂಡಿದೆ, ಸಾವಿರಾರು ಮಂದಿ ಸಂದೇಹಿಗಳು ಕಾರಾಗೃಹದಲ್ಲಿ ಕೊಳೆಯುತ್ತಿದ್ದಾರೆ. ಎಲ್ಲದಕ್ಕೂ ಪಾಕಿಸ್ತಾನವನ್ನು ದೂರುವುದೂ ಒಂದು ಕ್ಲೀಷೆಯಾಗಿಬಿಟ್ಟಿದೆ. ಆದರೆ ಉನ್ನತ ಭದ್ರತಾ ವ್ಯವಸ್ಥೆ ಇರುವ ಸ್ಥಳಗಳ ಮೇಲೆ ದಾಳಿಯಾದರೆ, ಅದು ಚಿಂತಿಸಬೇಕಾದ ಸಂಗತಿ. ವಾಜಪೇಯಿ ನೇತೃತ್ವದಲ್ಲಿ ಎನ್‌ಡಿಎ ಸರಕಾರ ಅಧಿಕಾರದಲ್ಲಿದ್ದಾಗ ಪಾರ್ಲಿಮೆಂಟ್ ಮೇಲೆ ದಾಳಿ ನಡೆದಾಗ ಭಯೋತ್ಪಾದಕರು ಸಾವಿಗೀಡಾದರು, ಜೊತೆಗೆ ಭದ್ರತಾ ಸಿಬ್ಬಂದಿಯವರೂ ಪ್ರಾಣ ತೆತ್ತರು. ಸದ್ಯ ಆಗ ಸದನಗಳ ಕಲಾಪ ಇರಲಿಲ್ಲ. ಪಾರ್ಲಿಮೆಂಟ್ ಭವನ ಬಿಗಿಭದ್ರತೆಯುಳ್ಳ ಸ್ಥಳ. ಅಂಥದ್ದರ ಮೇಲೆ ಭಯೋತ್ಪಾದಕರು ದಾಳಿ ನಡೆಸಲು ಸಂಚು ರೂಪಿಸಿ ಯಶಸ್ವಿಯಾದ್ದು ಹೇಗೆ? ಇದೇ ಪ್ರಶ್ನೆ ಮೋದಿ ಸರಕಾರದ ಆಡಳಿತೆಯಲ್ಲೂ ಉದ್ಭವಿಸಿದೆ. ಪಠಾನ್‌ಕೋಟ್, ಉರಿ, ನಗ್ರೋಟ್ ಸೇನಾ ನೆಲೆಗಳ ಮೇಲೆ ಭಯೋತ್ಪಾದಕರು ನುಸುಳಿ ನಮ್ಮ ಹಲವು ಯೋಧರನ್ನು ಹತ್ಯೆಗೈದರು ಕೆಲವೇ ದಿನಗಳ ಅಂತರದಲ್ಲಿ. ಭಾಜಪದವರು ಕೊಚ್ಚಿಕೊಳ್ಳುವ 'ಸರ್ಜಿಕಲ್ ಸ್ಟ್ರೈಕ್' ನಂತರ ಜಮ್ಮುವಿನ ನಗ್ರೋಟ್ ಸೈನಿಕ ನೆಲೆಯ ಮೇಲೆ ದಾಳಿ ನಡೆಯಿತು. ಇಂಥ ಸೇನಾ ಭದ್ರಕೋಟೆಯೊಳಗೆ ಪ್ರವೇಶಿಸಿ ಉಗ್ರರು ದಾಳಿ ನಡೆಸಲು ಅವಕಾಶವಾದ್ದು ಹೇಗೆ? ಭದ್ರತಾ ವ್ಯವಸ್ಥೆಯಲ್ಲಿ ಏನೋ ಕೊರತೆ ಇದೆ ಎನ್ನುವುದನ್ನು ಕುರಿತು ಆಲೋಚಿಸಬೇಕು. ಪಾಕಿಸ್ತಾನದ ಮೇಲೆ ಗೂಬೆ ಕೂರಿಸಿ ಸುಮ್ಮನಾಗುವುದು ಸರಿಯಲ್ಲ.

✶ ✶ ✶

**ನೋಟು ರದ್ದತಿ ಅವಾಂತರ**

ವರ್ಷದ ಕೊನೆಯಲ್ಲಿ ಜನತೆಗೆ ಮೋದಿ ನೀಡಿದ ಕೊಡುಗೆ ರೂ. ೫೦೦ ಮತ್ತು ೧೦೦೦ದ ನೋಟುಗಳ ರದ್ದತಿ, ಬ್ಯಾಂಕುಗಳು ಮತ್ತು ಎಟಿಎಂಗಳ ಮುಂದೆ ಸಾಲು ನಿಲ್ಲುವ ಶಿಕ್ಷೆ. ಅನಿರೀಕ್ಷಿತ ನಡೆಗೆ ಹೆಸರಾಗಿರುವ ಪ್ರಧಾನಿ ಮೋದಿ ಕಪ್ಪುಹಣ ಹೊರಹಾಕಲು ನವೆಂಬರ್ ೮ರಂದು ರಾತ್ರಿ ಹೊರಡಿಸಿದ ಫರ್ಮಾನು ಮುಳುವಾಗಿರುವುದು ಜನಸಾಮಾನ್ಯರಿಗೇ ಹೊರತು ಕಪ್ಪುಹಣ ಇರಿಸಿಕೊಂಡಿರುವವರಿಗಲ್ಲ. ಬ್ಯಾಂಕಿನಲ್ಲಿರಿಸಿರುವ ನಮ್ಮ ಹಣ ಪಡೆದುಕೊಳ್ಳಲು ಹಲವಾರು ನಿರ್ಬಂಧಗಳನ್ನು ಹೊರಿಸಿರುವ ಸರಕಾರ ಪೂರ್ವಸಿದ್ಧತೆಯಿಲ್ಲದೆ ಚಲಾವಣೆಗೆ ತಂದಿರುವ ಹೊಸ ರೂ. ೨೦೦೦ದ ಮತ್ತು ೫೦೦ರ ನೋಟುಗಳು ಬ್ಯಾಂಕುಗಳಲ್ಲಿ ಯಾರಿಗೂ ಸಿಗದಂತಾಗಿದೆ. ಅದೇ ಸಮಯದಲ್ಲಿ ಕೋಟಿ ಗಟ್ಟಳೆ ಹೊಸ ನೋಟುಗಳು ಭ್ರಷ್ಟರು ಮತ್ತು ಶ್ರೀಮಂತರ ಖಜಾನೆಗಳಲ್ಲಿ ಸೇರಿಹೋಗಿವೆ. ನೋಟು ರದ್ದತಿಯ ದುಸ್ಸಾಹಸ ಕುರಿತು ಮಾಧ್ಯಮಗಳಲ್ಲಿ ಬೇಕಾದಷ್ಟು ವಿವರಗಳು ಬರುತ್ತಿವೆ. ತಿಂಗಳು ಕಳೆದರೂ ಇನ್ನೂ ಬ್ಯಾಂಕುಗಳ ಮುಂದೆ ಜನ ಸಾಲುಗಟ್ಟಿ ನಿಲ್ಲಬೇಕಾಗಿ ಬಂದಿದೆ. ಸಾಲಿನಲ್ಲಿ ನಿಂತು ನೂರಕ್ಕೂ ಹೆಚ್ಚು ಮಂದಿ ಸಾವಿಗೀಡಾಗಿದ್ದರೂ ಭಾಜಪ ನಾಯಕರು ಪ್ರತಿಕ್ರಿಯಿಸದೆ ಇದ್ದಾರೆ. ಪ್ರಧಾನ ಮಂತ್ರಿ ಮೋದಿಯಂತೂ ಭಂಡತನ ಪ್ರದರ್ಶಿಸುತ್ತಿದ್ದಾರೆ. ದಿನಕ್ಕೊಂದು ಬಗೆಯಲ್ಲಿ ಮಾತನಾಡುತ್ತಿದ್ದಾರೆ, ಹೊಸ ನೋಟುಗಳು ಹಿಂದಿನವಕ್ಕಿಂತ ಚಿಕ್ಕದಾಗಿರುವ ಕಾರಣ ಎಟಿಎಂಗಳನ್ನು ಅದಕ್ಕೆ ತಕ್ಕಂತೆ ನವೀಕರಿಸಬೇಕಾಗಿದೆ. ಹಾಗಾಗಿ ದೇಶದ ಮುಕ್ಕಾಲುವಾಸಿ ಎಟಿಎಂಗಳು ಮುಚ್ಚಿವೆ. ಉಳಿದವು ಹಣವಿಲ್ಲದೆ ಮುಚ್ಚುತ್ತವೆ ಬಹು ಬೇಗನೆ. ಐವತ್ತು ದಿನಗಳು ತಾಳಿಕೊಳ್ಳಿ ಎಂದು ನಮೋ ಜನರಿಗೆ ಅರಿಕೆ ಮಾಡಿಕೊಂಡಿದ್ದಾರೆ. ಈಗ ಅದು ಜನವರಿ ೨೦೧೭ರಲ್ಲೂ ಮುಂದುವರಿಯುತ್ತದೆ ಎಂದು ಹೇಳಲಾಗಿದೆ. ಮೊದಲಿನಲ್ಲಿ ಮೋದಿ ಘನಂದಾರಿ ಕೆಲಸ ಮಾಡುತ್ತಿದ್ದಾರೆ ಎಂದು ಭಾವಿಸಿದ್ದವರೂ ಕೂಡ ಈಗ ಬೇಸತ್ತಿದ್ದಾರೆ. ಸಹಸ್ರಾರು ಮಂದಿ ದಿನಗೂಲಿ ಕಾರ್ಮಿಕರು, ರೈತರು ಹಣವಿಲ್ಲದೆ ಕೆಲಸ ಕಳೆದುಕೊಂಡು ಕಂಗಾಲಾಗಿದ್ದಾರೆ. ಬ್ಯಾಂಕುಗಳಿಗೆ ವಿಧಿಸಿರುವ ನಿರ್ಬಂಧಗಳಿಂದ ಎಷ್ಟೋ ಅಸಂಘಟಿತ ಉದ್ಯಮಗಳು ವೇತನ ವಿತರಣೆ ಮಾಡಲಾಗದೆ ಮುಚ್ಚಿಕೊಂಡಿವೆ. ಗಾರ್ಮೆಂಟ್ ಉದ್ಯಮಗಳು ಅದಕ್ಕೆ ಉದಾಹರಣೆ. ಅಂತೂ ಮೋದಿ ಸರ್ಕಾರ ನೋಟು ರದ್ದು ಮಾಡಿ ಕಪ್ಪುಹಣ ಹೊರ ತೆಗೆಯುವುದಕ್ಕಿಂತ ಹೆಚ್ಚಾಗಿ ಜನಸಾಮಾನ್ಯರಿಗೆ ಇಲ್ಲದ ತೊಂದರೆ ತಂದಿದೆ. ಪರಿಸ್ಥಿತಿ ಎಲ್ಲಿಗೆ ಮುಟ್ಟಿದೆ ಎಂದರೆ ಮೋದಿ ಕ್ರಮ ಎತ್ತಿಹಿಡಿಯುವವರು ದೇಶಭಕ್ತರು, ವಿರೋಧಿಸುವವರು ದೇಶದ್ರೋಹಿಗಳು ಎಂಬಂತಾಗಿದೆ. ಚಳಿಗಾಲದ ಪಾರ್ಲಿಮೆಂಟ್ ಅಧಿವೇಶನ ಸಂಪೂರ್ಣವಾಗಿ ಕಲಾಪಗಳಿಲ್ಲದೆಯೇ ಅಂತ್ಯಗೊಂಡಿತು. ಎಂದಿನಂತೆ ಮೋದಿ ಮೌನವ್ರತ. ಭಾಜಪ ಸದಸ್ಯರುಗಳು ಮತ್ತು ಪ್ರತಿಪಕ್ಷಗಳು ನಡೆಸಿದ ಗದ್ದಲವೇ ಪಾರ್ಲಿಮೆಂಟ್ ಕಲಾಪ ಸ್ಥಗಿತಕ್ಕೆ ಕಾರಣ. ತೆರಿಗೆ ಹಣ ಮಾತ್ರ ವ್ಯರ್ಥ ಕಲಾಪ ನಡೆಯದೆ. ಅಂತೂ ಮೋದಿ ನೋಟು ರದ್ದತಿ ಪರಿಣಾಮ ಏನಾಗುತ್ತದೆ ಎನ್ನುವುದು ಇನ್ನೂ ಅನಿಶ್ಚಿತ. ಆರ್ಥಿಕ ಪ್ರಗತಿಯ ದರ ಕಡಿಮೆಯಾಗುವುದೆಂದು ಅಂದಾಜುಮಾಡಲಾಗಿದೆ. ೨೦೧೬ರ ವರ್ಷ ಅನಿರೀಕ್ಷಿತ, ಅನಿಶ್ಚಿತತೆಯ ವರ್ಷ. ಮುಂದಿನ ವರ್ಷ ಕೂಡ ಪರಿಸ್ಥಿತಿ ಹೆಚ್ಚು ಬದಲಾಗುವಂತೆ ಕಾಣುವುದಿಲ್ಲ. ನೆಮ್ಮದಿಯನ್ನು ಅರಸುವುದು ನಮ್ಮ ಹಂಬಲ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಆಕಾಶದ ಸೂರ್ಯ ಫಿಡೆಲ್



> ‘ಮೋಡ ಇದೆ ಎಂದ ಮಾತ್ರಕ್ಕೆ ಆಕಾಶದಲ್ಲಿ ಸೂರ್ಯನಿಲ್ಲ ಎಂದು ಅರ್ಥವೇನು ? ಮೋಡ ಹನಿಯೊಡೆದು ನೆಲಕ್ಕುದುರಿದರೆ ಅಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಸೂರ್ಯನಿದ್ದಾನೆ.’
>
> – ಫಿಡೆಲ್ ಕ್ಯಾಸ್ಟ್ರೊ

‘ನನ್ನ ಈ ಬಟ್ಟೆ ಎಷ್ಟು ವರ್ಷಗಳ ಕಾಲ ಬಾಳಿಕೆ ಬರುತ್ತದೆ ?’

– ಹಾಗೆ ಕೇಳಿದ್ದು ಇನ್ನಾರೂ ಅಲ್ಲ ಫಿಡೆಲ್ ಕ್ಯಾಸ್ಟ್ರೊ.

ಕಣ್ಣು ಹಾಯಿಸಿದಷ್ಟು ದೂರಕ್ಕೂ ಜನ ಸಾಗರದಂತೆ ಕಿಕ್ಕಿರಿದು ಸೇರಿದ್ದರು. ಇನ್ನೊಬ್ಬರಿಗೆ ಅಲ್ಲಿ ಜಾಗ ಇಲ್ಲ ಎನ್ನುವಷ್ಟು. ಇಡೀ ಜನಸ್ತೋಮದತ್ತ ಒಮ್ಮೆ ಕಣ್ಣು ಹಾಯಿಸಿದ ಫಿಡೆಲ್ ಕ್ಯಾಸ್ಟ್ರೊ ತಮ್ಮ ಹಸಿರು ಯೂನಿಫಾರ್ಮ್‌ನತ್ತ ಕೈ ತೋರಿಸುತ್ತಾ ಕೇಳಿದರು, ‘ಈ ಬಟ್ಟೆ ಇನ್ನೆಷ್ಟು ದಿನ ಬಾಳಿಕೆ ಬರಲು ಸಾಧ್ಯ ?’

ಹಾಗೆ ಕೇಳುವಾಗ ಅವರ ಗಂಟಲು ಗದ್ಗದಿತವಾಗಿತ್ತು, ಕರುಳು ಚುರುಕ್ ಎಂದಿತ್ತು. ಇದ್ದ ನೋವನ್ನೆಲ್ಲಾ ಅದುಮಿ ಹಿಡಿದು ಕೇಳಿದರು – ‘ಈ ಬಟ್ಟೆ ನಾಲ್ಕು ವರ್ಷವಾದರೂ ಬಾಳಿಕೆ ಬರುತ್ತದೆಯೇ...?’ ಆಗ ಜನಸ್ತೋಮ ಕೂಗಿ ಹೇಳಿತು – ‘ನಾಲ್ಕೇನು, ಐದು ವರ್ಷ ಬಾಳಿಕೆ ಬರುತ್ತದೆ.’

ಹಾಗೆ ಹೇಳುವಾಗ ಅವರ ದನಿಯೂ ನೋವು ಹೊಂದಿತ್ತು. ನಾಳೆ ಇನ್ನೇನೋ ಎಂಬ ಆತಂಕದ ಗೆರೆಗಳು ಅವರ ಮುಖದಲ್ಲಿದ್ದವು.

ಹಾಗೆ ಕೇಳುವ ವೇಳೆಗೆ ಅಮೆರಿಕಾ ಕ್ಯೂಬಾದ ಕುತ್ತಿಗೆ ಹಿಚುಕಿಹಾಕುವ ‘ಪ್ಲಾಟ್ ಕಾಯಿದೆ’ಗೆ ಸಹಿ ಹಾಕಲು ಸಜ್ಜಾಗಿತ್ತು. ತನ್ನ ಮೂಗಿನ ತುದಿಯಲ್ಲೇ ಕ್ರಾಂತಿ ಮಾಡಿದ, ತನ್ನ ಮೂಗಿನ ತುದಿಯಲ್ಲೇ ಬಂಡಾಯ ಸಾರಿ ಗೆದ್ದ, ತನ್ನ ಅಹಂಕಾರಕ್ಕೆ ಪೆಟ್ಟು ನೀಡಿದ ಕ್ಯೂಬಾಗೆ ಅಮೆರಿಕಾ ಪಾಠ ಕಲಿಸಿಯೇ ಬಿಡಬೇಕು ಎಂದು ಸಜ್ಜಾಗಿತ್ತು. ಕ್ಯೂಬಾದ ಕತ್ತು ಹಿಸುಕದೆ ನಿದ್ದೆ ಮಾಡುವುದಿಲ್ಲ ಎನ್ನುವ ತೀರ್ಮಾನಕ್ಕೆ ಅಮೆರಿಕಾ ಬಂದಾಗಿತ್ತು. ಹಾಗಾಗಿ ಅಮೆರಿಕನ್ನರು ಯಾರೂ ಕ್ಯೂಬಾದ ಜೊತೆಗೆ ವ್ಯಾಪಾರ ನಡೆಸಬಾರದು ಎನ್ನುವ ದಿಗ್ಬಂಧನ ಜಾರಿಗೆ ತರಲು ಸಜ್ಜಾಯಿತು.

ಈ ದಿಗ್ಬಂಧನ ಎಂದರೇನು ಎನ್ನುವದು ಫಿಡೆಲ್ ಕ್ಯಾಸ್ಟ್ರೊಗೆ ಗೊತ್ತಾಗಿ ಹೋಯಿತು. ತಮ್ಮ ಹೊಟ್ಟೆಗೆ ಅನ್ನವಿಲ್ಲದಂತೆ, ಉಡಲು ಬಟ್ಟೆ ಇಲ್ಲದಂತೆ, ಮಾಡಲು ಕೆಲಸವಿಲ್ಲದಂತೆ ಮಾಡುವ ಪ್ರಯತ್ನ ಎಂದು. ಹಾಗಾಗಿಯೇ ‘ಬಿಡಿ ಭಾಗಗಳು, ಯಂತ್ರ ಹಾಗೂ ಮುಂದುವರಿದ ತಂತ್ರಜ್ಞಾನ ಕುರಿತ ಅಂತರರಾಷ್ಟ್ರೀಯ ಸಮಾವೇಶ’ದ ಕಾರಣಕ್ಕಾಗಿ ಜರುಗಿದ ಬಹಿರಂಗ ಸಭೆ ಫಿಡೆಲ್ ಕ್ಯಾಸ್ಟ್ರೊ ಅವರು ನಾಳೆಯ ಕರಾಳ ದಿನಗಳಲ್ಲಿ ತಲೆ ಎತ್ತಿ ನಿಲ್ಲಲು ಕ್ಯೂಬನ್ನರಿಗೆ ಕರೆ ನೀಡುವ ಸಭೆಯಾಗಿಹೋಗಿತ್ತು.

ಫಿಡೆಲ್ ಹೇಳಿದರು, “ನಮ್ಮ ನಮ್ಮ ಮನೆಗಳಲ್ಲಿ ಈಗ ಎಷ್ಟು ಬಟ್ಟೆ ಇದೆ ಎನ್ನುವುದನ್ನು ನೋಡೋಣ. ಆ ಬಟ್ಟೆ ಎಷ್ಟು ವರ್ಷ ಬಾಳಿಕೆ ಬರುತ್ತದೆ ಎನ್ನುವುದನ್ನು ಲೆಕ್ಕ ಹಾಕೋಣ, ಒಂದು, ಎರಡು ಇಲ್ಲ ನಾಲ್ಕು ವರ್ಷವಾದರೂ ಆ ಬಟ್ಟೆಗಳನ್ನೇ ತೊಡೋಣ...”

ಜನವರಿ ೧ – ಇಡೀ ಜಗತ್ತಿಗೆ ಹೊಸ ವರ್ಷ. ಆದರೆ ಕ್ಯೂಬನ್ನರಿಗೆ ಅದು ಕೇವಲ ಹೊಸ ವರ್ಷ ಮಾತ್ರವಲ್ಲ, ಹೊಸ ಕನಸನ್ನು, ಹೊಸ ಬದಲಾವಣೆಯನ್ನು, ಹೊಸ ಜೀವನವನ್ನು, ಎಲ್ಲಕ್ಕಿಂತ ಹೆಚ್ಚಾಗಿ ಸ್ವಾಭಿಮಾನವನ್ನು ಮರಳಿ ತಂದುಕೊಟ್ಟ ದಿನ.

೧೯೫೯, ಜನವರಿ ೧ರಂದು ಫಿಡೆಲ್ ಕ್ಯಾಸ್ಟ್ರೊ, ರೌಲ್ ಕ್ಯಾಸ್ಟ್ರೊ ಮತ್ತು ಚೆ ಗೆವಾರ ಹಾಗೂ ಇನ್ನೂ ಇತರ ಸಂಗಾತಿಗಳೊಂದಿಗೆ ಕ್ಯೂಬನ್ನರ ಬದುಕಿಗೆ ಸ್ವಾತಂತ್ರ್ಯದ ತಂಗಾಳಿಯನ್ನು ತಂದುಕೊಟ್ಟರು.



ಫಿಡೆಲ್ ಕ್ಯಾಸ್ಟ್ರೊ ಮಾಂಕೆಡಾ ಕೋಟೆಯಲ್ಲಿ ಅಮೆರಿಕಾ ಒಡ್ಡಿದ್ದ ಶಸ್ತ್ರಾಸ್ತ್ರಗಳನ್ನು ಲೂಟಿ ಮಾಡಲು ಎರಗಿ ಬಂದರು. ಅಲ್ಲಿಯವರೆಗೆ ೪೦೦ ವರ್ಷಗಳ ಕಾಲ ಸ್ಪೇನ್‌ನ ಅಡಿ ನಲುಗಿಹೋಗಿದ್ದ, ಆನಂತರ ಬ್ರಿಟಿಷರ ಮುಷ್ಟಿಗೆ ಸಿಲುಕಿದ್ದ, ಈ ಎರಡರಿಂದಲೂ ಬಿಡಿಸಿಕೊಂಡೆ ಎನ್ನುವಾಗ ಅಮೆರಿಕಾದ ಕೈಗೊಂಬೆಯಾಗಿ ಹೋಗಿದ್ದ ಕ್ಯೂಬಾಗೆ ಇದು ಸಣ್ಣ ವಿಷಯವಾಗಿರಲಿಲ್ಲ. ಫಿಡೆಲ್ ಒಂದು ಹೊಸ ಬೆಳಕಿನ ಕಿರಣದಂತೆ ಕಂಡರು. ವಿಶ್ವವಿದ್ಯಾಲಯದಲ್ಲಿ ಒಳ್ಳೆಯ ವಿದ್ಯಾರ್ಥಿ ಅನಿಸಿಕೊಂಡಿದ್ದ ಹುಡುಗನೊಬ್ಬ ತನ್ನ ಕಣ್ಣೆದುರೇ

**ಜಿ. ಎನ್. ಮೋಹನ್**



ನಡೆಯುತ್ತಿದ್ದ ಶತಮಾನಗಳ ಕಾಲದ ಮಾರಣಹೋಮವನ್ನು ನೋಡಿ ಕುದ್ದುಹೋಗಿದ್ದ. ಅಮೆರಿಕನ್ನರಿಗೆ ಪಾಠ ಕಲಿಸಿಯೇಬಿಡಬೇಕೆಂದು ತನ್ನಂತೆಯೇ ಕುದ್ದುಹೋಗಿದ್ದ ಹುಡುಗರ ದಂಡು ಕಟ್ಟಿದ. ಅಮೆರಿಕಾ ಶಸ್ತ್ರಾಸ್ತ್ರಗಳನ್ನು ಪೇರಿಸಿದ್ದ ಮಾಂಕಡಾ ಕೋಟೆಗೆ ಲಗ್ಗೆ ಹಾಕಿದ. ಕೋಟೆಯನ್ನೇ ಸ್ಫೋಟಿಸಿದ.

ಆದರೆ ಅಮೆರಿಕಾ ಸೈನಿಕರ ಕೈಗೆ ಸಿಕ್ಕಿಬಿದ್ದ. ಫಿಡೆಲ್ ಕ್ಯಾಸ್ಟ್ರೊನನ್ನ ಅಮೆರಿಕಾ ಕಟಕಟೆಯಲ್ಲಿ ನಿಲ್ಲಿಸಿತು. ವಿಚಾರಣೆ ನಡೆಸಿದಾಗ ಫಿಡೆಲ್ ಒಂದಿಷ್ಟೂ ಅಳುಕದೆ, "ನಾನು ತಪ್ಪು ಮಾಡಿದ್ದೇನೆ ಎಂದು ನೀವು ಭಾವಿಸಿದ್ದೀರಿ. ಆದರೆ ಈ ತಪ್ಪು ನಾನು ಜನರ ಪರವಾಗಿ ಮಾಡಿರುವ ತಪ್ಪು. ಚರಿತ್ರೆ ನನ್ನನ್ನು ನಿರ್ದೋಷಿಯನ್ನಾಗಿಸುತ್ತದೆ" ಎಂದರು.

ಕೇವಲ ಕ್ಯೂಬನ್ನರು ಮಾತ್ರವಲ್ಲ, ಅಷ್ಟು ದೊಡ್ಡ ಅಮೆರಿಕಾ, ಅಷ್ಟು ದೊಡ್ಡ ಅಮೆರಿಕಾ ಮಾತ್ರವಲ್ಲ, ಇಡೀ ಜಗತ್ತು ಕಣ್ಣರಳಿಸಿಕೊಂಡು ನೋಡಿತು. ಕ್ಯೂಬಾದ ಎದೆಯೊಳಗೆ ಒಂದು ಮರಿಸಿಂಹದ ಆಗಮನವಾಗಿತ್ತು. ಎರಡು ವರ್ಷ ಬಂದೀಖಾನೆಯಲ್ಲಿದ್ದ ಫಿಡೆಲ್ ಕ್ಯಾಸ್ಟ್ರೊ ಮೆಕ್ಸಿಕೋಗೆ ಓಡಿ ತಲೆ ತಪ್ಪಿಸಿಕೊಂಡರು. ಫಿಡೆಲ್ ತನ್ನ ತಮ್ಮ ರೌಲ್ ಕ್ಯಾಸ್ಟ್ರೊ ಜೊತೆ ಸೇರಿ ಯುವಕರಿಗೆ ಬಂದೂಕು ತರಬೇತಿ, ಪೆಟ್ಟು ಬಿದ್ದಲ್ಲಿ ಬೇಕಾದ ಚಿಕಿತ್ಸೆ, ಬೆಟ್ಟದ ಹಿಂದೆ ಅಡಗಿ ಗೆರಿಲ್ಲಾ ಯುದ್ಧ ಹೀಗೆ ತರಬೇತಿ ನೀಡುತ್ತಾ ಹೋದರು. ಪಡೆಯ ಸಂಖ್ಯೆ ದೊಡ್ಡದಾಗುತ್ತಾ ಹೋಯಿತು. ಆಗ ಫಿಡೆಲ್‌ನನ್ನು ಹುಡುಕುತ್ತ ಬಂದವನು ಚೆ ಗೆವಾರ. ಗ್ವಾಟೆಮಾಲಾದಲ್ಲಿ ಹೀಗೆಯೇ ಗೆರಿಲ್ಲಾ ಹೋರಾಟ ನಡೆಸಿದ್ದ ಚೆ ಗೆವಾರನಿಗೆ ಆಸ್ತಮಾ ಇನ್ನಿಲ್ಲದಂತೆ ಕಾಡಲು ಶುರುವಾಗಿತ್ತು. ಬಿಸಿ ಗಾಳಿ ಹುಡುಕುತ್ತಾ ಆತನೂ ಮೆಕ್ಸಿಕೋ ಸೇರಿಕೊಂಡಿದ್ದ.

ಚೆ ಹೇಳಿ ಕೇಳಿ ವೈದ್ಯ. ಕ್ಯಾಸ್ಟ್ರೊ ಗುಂಪಿಗೆ ಒಬ್ಬ ವೈದ್ಯನ ಅಗತ್ಯವಿತ್ತು. ಅದರ ಜೊತೆ ಈತನಿಗೆ ಗೆರಿಲ್ಲಾ ಯುದ್ಧ ಮಾಡಿ ಕೂಡ ಗೊತ್ತಿದೆ. ಸರಿ, ಇರಲಿ ಎಂದು ಫಿಡೆಲ್ ಚೆ ಗೆವಾರನನ್ನು ತಮ್ಮ ತಂಡಕ್ಕೆ ಸೇರಿಸಿಕೊಂಡರು. ಒಂದು ಒಂದು ಸೇರಿ ಹನ್ನೊಂದಾಯಿತು. ಒಟ್ಟು ೮೨ ಜನರ ಗುಂಪಾಯಿತು. ಸಾಕಷ್ಟು ಯೋಚನೆ ಮಾಡಿದ ಕ್ಯಾಸ್ಟ್ರೊ 'ಗ್ರಾನ್ಮಾ' ನೌಕೆ ಏರಿ ಕ್ಯೂಬಾದ ಸಾಮ್ರಾಜ್ಯಶಾಹಿ ಸರ್ಕಾರ ಉರುಳಿಸಲು ಹೊರಟೇಬಿಟ್ಟರು. ಆದರೆ ಲೆಕ್ಕ ತಪ್ಪಾಯಿತು. ಅಮೆರಿಕಾ ಸೇನೆಯ ಗುಂಡಿಗೆ ಸಿಕ್ಕಿಹೋದರು. ಬದುಕುಳಿದ ಕೆಲವೇ ಮಂದಿಯ ಜೊತೆ ಫಿಡೆಲ್ ಸಿಯೆರಾ ಮಾಸ್ಟರಾ ಗುಡ್ಡಗಳಲ್ಲಿ ಅವಿತುಕೊಂಡರು. ಗೆರಿಲ್ಲಾ ತಂತ್ರಕ್ಕೆ ಶರಣುಹೋದರು. ನಾಲ್ಕು ಶತಮಾನಕ್ಕೂ ಹೆಚ್ಚು ಕಾಲ ನರಳಿಹೋಗಿದ್ದ ಕ್ಯೂಬಾ ಮೊತ್ತ ಮೊದಲ ಬಾರಿಗೆ ಫಿಡೆಲ್ ಕ್ಯಾಸ್ಟ್ರೊನಲ್ಲಿ ಬೆಂಕಿಯ ಕಿಡಿಯನ್ನು ಕಂಡಿತು. ಜನ ತಾವೂ ಗುಡ್ಡದ ಕಡೆ ಸಾಗಿ ಫಿಡೆಲ್ ಸೇನೆ ಸೇರಲು ಶುರು ಮಾಡಿದರು.

ಫಿಡೆಲ್ ಕ್ಯಾಸ್ಟ್ರೊನೇ ಹೇಳಿದ್ದಾರಲ್ಲ: "ಬಹುಮತವಿರುವ ಒಂದು ಅಭಿಪ್ರಾಯಕ್ಕೆ ರಾಜನ ಶಕ್ತಿಗಿಂತಲೂ ಹೆಚ್ಚಾದ ಬಲವಿದೆ. ಅನೇಕ ನೂಲುಗಳಿಂದ ಹೆಣೆಯಲಾದ ಹಗ್ಗವು ಒಂದು ಸಿಂಹವನ್ನು ಬೇಕಾದರೂ ಕಟ್ಟಿಹಾಕುತ್ತದೆ." ಹಾಗೆಯೇ, ಥೇಟ್ ಹಾಗೆಯೇ ಹಲವು ನೂಲುಗಳು ಸೇರಿ ಹಗ್ಗವಾದರು. ಅಮೆರಿಕಾವನ್ನು ಕಟ್ಟಿಹಾಕಿಯೇ ಬಿಟ್ಟರು.

**೧೯೫೯, ಜನವರಿ ೧ ಕ್ಯೂಬಾ ಸ್ವತಂತ್ರವಾಯಿತು**

ಜನರ ಕಣ್ಣುಗಳು ಅಲ್ಲಿಯವರೆಗೆ ಎಷ್ಟು ಇಂಗಿಹೋಗಿದ್ದವು ಎಂದರೆ ಅವರು ಸ್ವಾತಂತ್ರ್ಯ ಎಂಬ ಪದವನ್ನೇ ತಮ್ಮ ಮನದ ಆಳದಿಂದ ತೆಗೆದುಹಾಕಿ ಎಷ್ಟೋ ಕಾಲವಾಗಿ ಹೋಗಿತ್ತು. ಆದರೆ ತಮ್ಮ ಕಣ್ಣೆದುರಿಗೆ ಫಿಡೆಲ್ ಕ್ಯಾಸ್ಟ್ರೊ ಬೆಳಕಿನ ಕಿರಣಗಳನ್ನು ತಂದು ಕೈಗಿಟ್ಟುಬಿಟ್ಟಿದ್ದರು. ಅವರ ಸಂತಸ ಎಷ್ಟು ಮುಗಿಲು ಮುಟ್ಟಿತ್ತೆಂದರೆ ಕ್ಯೂಬಾದ ಒಂದು ತುದಿ ಸ್ಯಾಂಟಿಯಾಗೋದಿಂದ ಫಿಡೆಲ್ ಕ್ಯಾಸ್ಟ್ರೊ ತಮ್ಮ ತಂಡದೊಂದಿಗೆ ರಾಜಧಾನಿ ಹವಾನಾದತ್ತ ಹೆಜ್ಜೆ ಹಾಕಲು ಆರಂಭಿಸಿದಾಗ ಹೆಜ್ಜೆ ಹೆಜ್ಜೆಗೂ ಜನ ನಿಂತು ಹೂವಿನ ಮಳೆಗರೆದರು. ಕ್ಯಾಸ್ಟ್ರೊ ತಂಡಕ್ಕೆ ಹವಾನಾ ತಲುಪಲು ೧೫ ದಿನ ಬೇಕಾಯಿತು.

ಈಗ ಅದೇ ಫಿಡೆಲ್ ಕ್ಯಾಸ್ಟ್ರೊ ಕೇಳುತ್ತಿದ್ದರು: "ನನ್ನ ಬಟ್ಟೆ ಎಷ್ಟು ವರ್ಷ ಬಾಳಿಕೆ ಬರುತ್ತದೆ?"

**ಜನರಲ್ಲಿ ಫಿಡೆಲ್ ಕ್ಯಾಸ್ಟ್ರೊ ಬಗ್ಗೆ ಅದಮ್ಯ ವಿಶ್ವಾಸ**

ನಾಲ್ಕು ದಶಕಗಳ ಕಾಲ ಗುಲಾಮರಿಗಿಂತಲೂ ಕೀಳಾಗಿ ಬದುಕಿ ಹೋಗಿದ್ದ ಕ್ಯೂಬನ್ನರಿಗೆ ಮೊದಲ ಬಾರಿಗೆ ಆತ್ಮವಿಶ್ವಾಸವನ್ನು ತಂದಿತ್ತ ನಾಯಕ ಆತ. ಆತ್ಮವಿಶ್ವಾಸಕ್ಕಿಂತ ಬಟ್ಟೆ, ಅನ್ನ ಮುಖ್ಯವಾಗಿರಲಿಲ್ಲ. ಅವರಿಗೆ ಗೊತ್ತಿತ್ತು ಇಂದು ಹಂಚಿ ತಿನ್ನುವ ಕಾಲ. ಹಾಗಾಗಿಯೇ ಫಿಡೆಲ್ ಕ್ಯಾಸ್ಟ್ರೊ ಜೊತೆ ಗಟ್ಟಿಯಾಗಿ ನಿಂತರು.



ಫಿಡೆಲ್ ಕ್ಯಾಸ್ಟ್ರೊಗೆ ಗೊತ್ತಿತ್ತು ಪ್ರತಿಯೊಬ್ಬ ಕ್ಯೂಬನ್ನರೂ ಹೊಸ ಯುದ್ಧದಲ್ಲಿ ಸೆಣಸಬೇಕಾಗಿ ಬಂದಿದೆ ಎಂದು. ಅದು ಹಸಿವಿನ ಜೊತೆಗಿನ ಯುದ್ಧ, ಅಮೆರಿಕಾದ ದಿಗ್ಬಂಧನದ ವಿರುದ್ಧದ ಯುದ್ಧ. ನೊಂದು ಹೇಳಿದರು, "ಕ್ಯೂಬಾದ ಪ್ರತಿಯೊಬ್ಬರೂ ಇಂದು ಇತಿಹಾಸ ನಿರ್ಮಿಸುತ್ತಿದ್ದಾರೆ. ಕಷ್ಟಗಳು ಹೆಚ್ಚಾದಷ್ಟೂ ಕ್ಯೂಬನ್ನರ ಒಳ್ಳೆಯ ಗುಣಗಳು ಹೆಚ್ಚುತ್ತಿವೆ. ಇದು ಆರ್ಥಿಕ ದಿಗ್ಬಂಧನವಲ್ಲ, ಇದು ಯುದ್ಧ. ಇಡೀ ವಿಶ್ವದಲ್ಲಿ ನಮ್ಮೊಂದಿಗೆ ಮಾತ್ರ ನಡೆದಿರುವ ಯುದ್ಧ. ಪ್ರತಿಯೊಬ್ಬರೂ ಈ ಯುದ್ಧದಲ್ಲಿ ಸೆಣಸುತ್ತಿದ್ದಾರೆ. ಪ್ರತೀ ಬಾರಿ ಮಕ್ಕಳನ್ನು ನೋಡಿದಾಗಲೂ ಅವರು ಮಹಾಯುದ್ಧದ ಮಧ್ಯೆ ಇರುವ ಯೋಧರಂತೆ ಕಾಣುತ್ತಿದ್ದಾರೆ."

"ಪ್ರತಿಯೊಂದು ಗ್ರಾಂ ಹಾಲಿಗಾಗಿ, ಪ್ರತಿಯೊಂದು ಔಷಧಿ ಬಾಟಲಿಗಾಗಿ, ಶಾಲೆಯಲ್ಲಿ ಮಕ್ಕಳ ಕೈಯಲ್ಲಿ ಇಲ್ಲವಾಗುತ್ತಿರುವ ಕಾಪಿ ಪುಸ್ತಕಕ್ಕಾಗಿ, ದಿಗ್ಬಂಧನದ ವಿರುದ್ಧ ಘೋಷಣೆ ಮೊಳಗಿಸಿದ ಪ್ರತೀ ದನಿಗಾಗಿ, ದೇಶದ ವಿರುದ್ಧ ನಡೆಯುತ್ತಿರುವ ಪ್ರತೀ ಅಪಪ್ರಚಾರಕ್ಕಾಗಿ, ನೀವು ಎತ್ತಿ ಹಿಡಿದಿರುವ ಕ್ಯೂಬಾ ಬಾವುಟಕ್ಕಾಗಿ ನಾವು ಸಾಮ್ರಾಜ್ಯಶಾಹಿಯ ವಿರುದ್ಧ ಹೋರಾಡುತ್ತೇವೆ" ಎಂದರು ಕ್ಯಾಸ್ಟ್ರೊ.

ಕ್ಯಾಸ್ಟ್ರೊ ಹೋರಾಟದ ಒಡಲಿನಿಂದ ಬಂದವರು. ಹಾಗಾಗಿ ಅವರಿಗೆ ಮನುಷ್ಯನಿಗೆ ಘನತೆ ತಂದುಕೊಡುವುದು ಎಂದರೆ ಏನು ಎಂದು ಗೊತ್ತಿತ್ತು. ಅಷ್ಟು ದಿನ ಹವಾನಾದಲ್ಲಿ ಇದ್ದದ್ದು ಅಮೆರಿಕಾ ಮತ್ತು ಸ್ಪೇನ್‌ನ ಬಿಳಿ ಬಣ್ಣದವರು. ಸಕ್ಕರೆ, ಸಿಗಾರ್ ಕಾರ್ಖಾನೆಗಳನ್ನು ತಮ್ಮ ಮುಷ್ಟಿಯಲ್ಲಿ ಇಟ್ಟುಕೊಂಡವರು. ಮನರಂಜನೆಯ ಅಡ್ಡೆಯಾಗಿದ್ದ ಕ್ಯಾಸಿನೋಗಳನ್ನು ನಡೆಸುತ್ತಿದ್ದವರು. ಅವರಿಗೆ ಹವಾನಾ ಗೊತ್ತಿತ್ತು, ಅಷ್ಟೆ. ಅವರು ಎಂದಿಗೂ ಹವಾನಾ ಬಿಟ್ಟು ಕ್ಯೂಬಾ ನೋಡಿರಲಿಲ್ಲ. ಕ್ಯೂಬನ್ನರು ಹವಾನಾವನ್ನೇ ನೋಡಿರಲಿಲ್ಲ. ಕರಿ, ಬಿಳಿ, ಬೆರಕೆ – ಹೀಗೆ ಕ್ಯೂಬಾ ಮೂರು ಭಾಗವಾಗಿ ಹೋಗಿತ್ತು. ಬಿಳಿಯಲ್ಲದ ಇತರರಿಗೆ ಬದುಕೇ ಇರಲಿಲ್ಲ.

ಸ್ಯಾಂಟಿಯಾಗೋದಿಂದ ಹವಾನಾದತ್ತ ಹೆಜ್ಜೆ ಹಾಕಿ ಬಂದ ಫಿಡೆಲ್ ಕ್ಯಾಸ್ಟ್ರೊ ಮೊದಲು ಮಾಡಿದ್ದು ಸಕ್ಕರೆ, ಸಿಗಾರ್ ಕಾರ್ಖಾನೆಗಳನ್ನು ಕೈಗೆ ತೆಗೆದುಕೊಂಡಿದ್ದು. ದೇಶದಲ್ಲಿ ರೈಲ್ವೆ ಹಳಿಗಳು ಇದ್ದದ್ದು, ಮೋಟಾರು ವಾಹನಗಳು ಇದ್ದದ್ದು, ಮನೆಗಳು ಇದ್ದದ್ದು, ಟೆಲಿಫೋನ್‌ಗಳು ಇದ್ದದ್ದು ಕೇವಲ ಸಕ್ಕರೆ ಹಾಗೂ ಸಿಗಾರ್ ಕಾರ್ಖಾನೆಗಳ ಮಾಲೀಕರಿಗಾಗಿ. ಇಡೀ ಒಂದು ದೇಶ ಸಕ್ಕರೆ ಮತ್ತು ಸಿಗಾರ್ ಕಾರ್ಖಾನೆಗಳನ್ನು ಹೊಂದಿದ್ದ ಬೆರಳೆಣಿಕೆಯ ಜನರಿಗಾಗಿಯೇ ಸೃಷ್ಟಿಯಾಗಿದೆ ಎನ್ನುವಂತಾಗಿ ಹೋಗಿತ್ತು.

ಯಾವಾಗ ಮನೆ ಬಾಡಿಗೆಯನ್ನು ಇನ್ನಿಲ್ಲದಂತೆ ಇಳಿಸಿ ಅದನ್ನು ಕ್ಯೂಬನ್ನರು ಪ್ರವೇಶಿಸಲು ಬಿಟ್ಟರೋ, ರೈಲು ಹಳಿಗಳನ್ನು ಜನರಿಗಾಗಿಯೂ ಮುಕ್ತ ಮಾಡಿದರೋ ಟೆಲಿಫೋನುಗಳಲ್ಲಿ ಕ್ಯೂಬನ್ನರ ದನಿಯೂ ಕೇಳಿ ಬಂದಿತೋ, ಅಮೆರಿಕಾ ಕೆಂಗಣ್ಣಾಗಿ ಹೋಯಿತು. ಅಮೆರಿಕನ್ನರ ಬದುಕಿಗೆ ಧಕ್ಕೆಯಾಗಿ ಹೋಯಿತು ಎಂದು ಹುಯಿಲೆಬ್ಬಿಸಿ ಪ್ಲಾಟ್ ಕಾಯಿದೆಯನ್ನು ಜಾರಿಗೊಳಿಸಿಯೇಬಿಟ್ಟಿತು.

ಫಿಡೆಲ್ ಕ್ಯಾಸ್ಟ್ರೊ ಅವರ ನೇತೃತ್ವದಲ್ಲಿ ಎರಡನೆಯ ಸ್ವಾತಂತ್ರ್ಯ ಯುದ್ಧ ಶುರುವಾದದ್ದು ಆಗಿನಿಂದ. ಫಿಡೆಲ್ ಕ್ಯೂಬನ್ನರಿಗೆ ಹೇಳಿದರು, "ಯೋಚನೆ ಮಾಡಬೇಡಿ, ಮುಂದೆ ಸ್ಥಿತಿ ಏನಾಗುತ್ತದೋ ಗೊತ್ತಿಲ್ಲ, ಆದರೆ ಇಷ್ಟು ಮಾತ್ರ ನಿಜ. ಅದು ಹಳೆಯ ದಿನಗಳಿಗಿಂತ ಸುಲಭವಾಗಿರುತ್ತದೆ. ಬಂಡವಾಳಶಾಹಿಗೆ ಮರಳುವುದಕ್ಕಿಂತ ಇಂತಹ ತ್ಯಾಗ ಮಾಡುವುದು ಸಾವಿರ ಸಾವಿರ ಪಾಲು ಮೇಲು. ದೇಶದ ಸ್ವಾತಂತ್ರ್ಯ, ಕ್ರಾಂತಿ, ಸಮಾಜವಾದ ಕೊಡುವ ಘನತೆಯನ್ನು ಉಳಿಸಿಕೊಳ್ಳುವುದು ಮುಖ್ಯ."

ಆ ಘನತೆಯನ್ನು ಉಳಿಸಿಕೊಳ್ಳುವ ಸಲುವಾಗಿಯೇ ಫಿಡೆಲ್ ಜಗತ್ತಿನ ಎಲ್ಲೆಡೆ ನೋಡಿದರು. ಮೆಕ್ಸಿಕೋದ ಕೈಗಾರಿಕಾ ವಸ್ತುಪ್ರದರ್ಶನದಲ್ಲಿ ಕ್ಯೂಬಾದ ಮಳಿಗೆ ನೋಡಿ ಮಾರುಹೋಗಿದ್ದ ಸೋವಿಯತ್ ದೇಶದ ಕೈಗಾರಿಕಾ ಸಚಿವ ಕ್ಯೂಬಾಗೂ ಅಲ್ಲಿಂದಲೇ ಪ್ರಯಾಣ ಮಾಡಿದರು. ಸೋವಿಯತ್ ದೇಶ ಆಹಾರದ ಬರದಿಂದ ತತ್ತರಿಸಿತ್ತು. ಕ್ಯೂಬಾ ಸಕ್ಕರೆ ಕೊಳ್ಳುವವರಿಲ್ಲದೆ, ದುರ್ಭಿಕ್ಷದಲ್ಲಿ ಅಧಿಕ ಮಾಸ ಎನ್ನುವಂತೆ ಅತಿ ಇಳುವರಿಯಿಂದ ತತ್ತರಿಸಿತ್ತು. ಕ್ಯೂಬಾ ಮತ್ತು ಸೋವಿಯತ್ ದೇಶ ಒಡಂಬಡಿಕೆಗೆ ಸಹಿ ಹಾಕಿದವು.

ಕ್ಯಾಸ್ಟ್ರೊ ಹುಟ್ಟು ಹೋರಾಟಗಾರ. ಗೋರ್ಬಚೇವ್ ನೇತೃತ್ವದಲ್ಲಿ ಸೋವಿಯತ್ ದೇಶವೇ ಪತನವಾಗಿಹೋದಾಗ, ಅದರ ಬೆನ್ನಲ್ಲೇ ಇನ್ನೂ ಕೆಲವು ಸಮಾಜವಾದಿ ದೇಶಗಳು ಅಂತ್ಯ ಕಂಡಾಗ, ಕ್ಯಾಸ್ಟ್ರೊ ಧೃತಿಗೆಡಲಿಲ್ಲ. ಪ್ರವಾಸೋದ್ಯಮವನ್ನೇ ಬಂಡವಾಳ ಮಾಡಿಕೊಂಡರು. ಇದನ್ನು 'ಚಿಮಣಿ ಇಲ್ಲದ ಕೈಗಾರಿಕೆ' ಎಂದು ಕರೆದರು. ಆ ನಂತರ ಆರೋಗ್ಯ ವ್ಯವಸ್ಥೆಯನ್ನು ಜಗತ್ತಿಗೆ ತೆರೆದಿಟ್ಟರು. ಇದನ್ನು 'ಆರೋಗ್ಯ ಪ್ರವಾಸೋದ್ಯಮ' ಎಂದು ಕರೆದರು. 'ದಿಗ್ಬಂಧನದೊಳಗೆ ಇನ್ನೊಂದು ದಿಗ್ಬಂಧನ'. ಆದರೂ ಕುಸಿಯಲಿಲ್ಲ. ಜೈವಿಕ ತಂತ್ರಜ್ಞಾನವನ್ನು ಇನ್ನಿಲ್ಲದಂತೆ ಅಳವಡಿಸಿಕೊಂಡರು. ದೇಶ ಹಸಿವಿಗಂತೂ ಬೀಳಲಿಲ್ಲ.

ಕ್ಯಾಸ್ಟ್ರೊ ಹೇಳಿದರು, "ಹಸಿದು ಸಾಯುವಂತೆ ಮಾಡಿದರು, ಹಂಚಿ ತಿನ್ನುವುದನ್ನು ಕಲಿತೆವು. ರೋಗಗಳಿಂದ ನರಳಿ ಸಾಯುವಂತೆ ಮಾಡಿದರು. ಹಸಿರು ಎಲೆಗಳಿಂದ ಜೀವ ಉಳಿಸಿಕೊಂಡೆವು. ನಮ್ಮ ದನಿಗಳನ್ನು ಕುಗ್ಗಿಸಲು ಯತ್ನಿಸಿದರು. ಅವು ಮರುಧ್ವನಿಗಳಾದವು ನಿಮ್ಮ ಎದೆಗಳಲ್ಲಿ..."

*(ಇನ್ನೂ ಪುಟಕ್ಕೆ)*

## ಸಿ ಫಾರ್...



ಒಂದು ಬೆಳಕು ದೀಪ ಬೇಕು ಎಂದೆ
ಅವರು ಕ್ಯೂಬಾದ ಭೂಪಟ ನೀಡಿದರು

ವಸಂತ ಮೆಲ್ಲನೆ ಕಾಲಿಡುತ್ತಿದೆ
'ಗ್ವಂತನಮೇರಾ' ಹಾಡು
ಗಿಟಾರ್‌ನ ಮೂಲಕ
ಹೊರಚೆಲ್ಲುತ್ತಿತ್ತು

ನಿನ್ನ ಕಂಗಳ ಹೊಳಪಿನ ಗುಟ್ಟೇನು
ಎಂದು ಕೇಳಿದೆ
'ವಿ ಶಲ್ ಓವರ್ ಕಮ್'
ಹಾಡು ಗುನುಗಿದಳು

'ಕಗ್ಗತ್ತಲ ಕಾಲದಲ್ಲೂ ಕವಿತೆ ಬರೆಯುವುದುಂಟೆ' ಎಂದು ಕೇಳಿದೆ
ಕ್ಯೂಬಾದ ಹಡಗುಕಟ್ಟೆಯಲ್ಲಿ ಗೋಧಿ ಇಳಿಯುತ್ತಿತ್ತು

'ಮಮ್ಮಿ ಮಮ್ಮಿ ಮಾಡರ್ನ್ ಬ್ರೆಡ್' ಎನ್ನುವ ಜಾಹೀರಾತು ಕೇಳಿದಾಗಲೆಲ್ಲಾ
ಯಾಕೋ ಕ್ಯೂಬಾದ ನೆನಪು

'ಸರಿಹೊಂದದ ಪದ ಆರಿಸಿ ತೆಗೆದುಬಿಡಿ' ಎಂದರು
ಕ್ಯೂಬಾ, ವಿಯೆಟ್ನಾಂ, ಅಮೆರಿಕಾ, ವೆನೆಜುವೆಲಾ

'ಬಿಟ್ಟ ಸ್ಥಳ ತುಂಬಿ' ಎನ್ನುತ್ತಾರೆ ಶಾಲೆಯಲ್ಲಿ
ಬಿಟ್ಟುಹೋಗಿರುವ ಜಗತ್ತಿನ ಕೊಂಡಿ ಎನ್ನುತ್ತದೆ ಕ್ಯೂಬಾ

ಹಾಡು ಎಂದರೇನು ? ಎಂದರು
ಕ್ಯೂಬಾ ಎಂದೆ

ಸಿ ಫಾರ್ ಎಂದರು

ತಡಮಾಡದೆ ಹೇಳಿದೆ – ಕ್ಯೂಬಾ, ಕ್ಯಾಸ್ಟ್ರೋ , ಚೆ

'ಎಲ್ಲಾದರೂ ಇರು, ಎಂತಾದರು ಇರು' ಹಾಡು ರೇಡಿಯೋದಲ್ಲಿ
ಕ್ಯೂಬಾ ಮರೆಯದಿರು ಎಂಬ ಸೊಲ್ಲು ನನ್ನ ಹೃದಯದಲ್ಲಿ



ಕ್ಯೂಬಾ
ಪುಟ್ಟ ಹುಡುಗಿ
ಮುಖದಲ್ಲಿ ಮುಡಿದುಕೊಂಡ
ಅದೇ ನೋವು ನಗೆ
ತುರುಬಿಗೆ ಟ್ಯೂಲಿಪ್ ಪಕಳೆ

ಎದೆಯಲ್ಲಿ ಸದಾ ಹಾಡ ಸಾಲು
ಬಂದೂಕು ತುದಿಗೆ ನಗೆಮಲ್ಲಿಗೆ ಎಸಳು
ಊರ ತುಂಬಾ ಯುಗಾದಿ ಹಸಿರು ತೋರಣ

ಎದೆಯಾಳದೊಳಗೆ
ಅಪ್ಪ ಬಚ್ಚಿಟ್ಟುಕೊಂಡ ಯಾತನೆ
ಮೇಲೆ ಬೆಚ್ಚನೆಯ ಮಡಿಲ ಕಾವು
ಕಾಣುವುದು ನೆಲದ ಹಸಿರ ಎಳೆ
ಒಳಗೆ ಮಾತ್ರ ತಲ್ಲಣದ ಮಳೆ

ಕೆಂಪು ಟೋಪಿಯ ಹರಕಲು ಗಡ್ಡದ
ಸೈಕಲ್ ತುಳಿಯುವ ಪಡ್ಡೆ 'ಚೆ'
ರಾಗಿ ತೆನೆಗಳ ಹೊತ್ತು ಬೀಗಿದ

ಹೊಲದ ಮಧ್ಯೆ ಗಾಳಿ ಓಡಿಸಿದಷ್ಟೇ ಸಲೀಸಾಗಿ
ಕ್ರಾಂತಿ ಚಕ್ರ ಸುತ್ತಿಸಿದ್ದು
ಕೆಂಪು ತುಟಿ ಬಿರಿದು ಹೂನಗೆ ಎಸೆದವರಿಗೆ
ಕಣ್ಣು ಮಿಟುಕಿಸಿ ಕೆಣಕಿದ್ದು

ಅದೇ ಹಾಡು ಜೋಕಾಲಿ ಜೀಕುತ್ತಾ
ಇದೀಗ ಅದೇ ಟೋಪಿಯ ಹರಕಲು ಗಡ್ಡದ
ಈತ ಎದೆಯೊಳಗೆ ಬೀಜ ಬಿತ್ತುತ್ತಾನೆ
ತೆನೆ ತೆಗೆಯುತ್ತಾನೆ. ಬಸಿರೊಳಗೆ ಮುದ್ದು
ನಗೆ ಬೆಳೆಯುತ್ತಾನೆ
ಕ್ಯೂಬಾದ ಕಣ್ಣೊಳಗೆ ಇನಿಯರ
ಕಣ್ಣ ಹೊಳಪ ತೀಡುತ್ತಾನೆ.

## ಗೋಧಿ ಎಂಬ ಹೋರಾಟದ ಹುಮ್ಮಸ್ಸು

'ನೀವು ಕಳಿಸಿದ ಗೋಧಿ ನಮ್ಮಲ್ಲಿ ಹೋರಾಟದ ಹುಮ್ಮಸ್ಸನ್ನು ಹೆಚ್ಚಿಸಿದೆ. ನೀವು ಕಳಿಸಿದ ಗೋಧಿ ಅಮೆರಿಕಾದ ವಿರುದ್ಧ ನಾವು ಇನ್ನಷ್ಟು ದೃಢವಾಗಿ ನಿಲ್ಲುವಂತೆ ಮಾಡಿದೆ. ನೀವು ಕಳಿಸಿದ ಗೋಧಿ ಹೋರಾಟದಲ್ಲಿ ನಾವು ಒಬ್ಬಂಟಿಯಲ್ಲ ಎಂದು ಸಾರಿದೆ. ಈ ಗೋಧಿಯಿಂದ ಕ್ಯೂಬಾದ ಪ್ರತಿಯೊಬ್ಬ ಪ್ರಜೆಗೂ ಒಂದು ವಾರ ಉತ್ತಮ ಬ್ರೆಡ್ ನೀಡುತ್ತೇನೆ.'

ಪಂಜಾಬಿನ ಅತ್ಯುತ್ತಮ ಗೋಧಿಯನ್ನು ಕಲ್ಕತ್ತಾದ ಹಲ್ದಿಯಾ ಬಂದರಿಗೆ ತಂದು ೩೭ ದಿನಗಳ ಕಾಲ ಹಿಂದೂ ಮಹಾಸಾಗರ, ಆಫ್ರಿಕಾ ಖಂಡದ ದಕ್ಷಿಣ ಭಾಗ, ಅಟ್ಲಾಂಟಿಕ್ ಸಾಗರದ ಮೂಲಕ ೨೦ ಸಾವಿರ ಕಿ.ಮೀ. ಪ್ರಯಾಣ ಮಾಡಿದ ಕೆರೆಬಿಯನ್ ಪ್ರಿನ್ಸೆಸ್ – 'ಕೆರೆಬಿಯನ್ ಸಮುದ್ರದ ರಾಜಕುಮಾರಿ' ಎಂಬ ಹಡಗು ಹವಾನಾದ ಹಡಗು ಕಟ್ಟೆಯನ್ನು ಸ್ಪರ್ಶಿಸಿದಾಗ ಫಿಡೆಲ್ ಕ್ಯಾಸ್ಟ್ರೊ ಆಡಿದ ಮಾತಿದು, "ಸಾಮ್ರಾಜ್ಯಶಾಹಿಯ ವಿರುದ್ಧ ಕ್ಯೂಬಾ ನಡೆಸುತ್ತಿರುವ ಹೋರಾಟ ಕ್ಯೂಬಾದ ಹೋರಾಟ ಮಾತ್ರವಲ್ಲ, ಅದು ಜಗತ್ತಿನ ಮೂಲೆ ಮೂಲೆಗಳಲ್ಲಿ ಸಾಮ್ರಾಜ್ಯಶಾಹಿಯ ವಿರುದ್ಧ ಜನರು ನಡೆಸುತ್ತಿರುವ ಹೋರಾಟ ಎಂದು ಭಾವಿಸಿದ ಭಾರತ – ಕ್ಯೂಬಾ ಸೌಹಾರ್ದ ಸಮಿತಿ ಆಪತ್ಕಾಲದಲ್ಲಿರುವ ಕ್ಯೂಬಾಗೆ ಬೀದಿ ಬೀದಿಗಳಲ್ಲಿ ದಿನಗಟ್ಟಲೆ ಸಂಗ್ರಹಿಸಿದ ಹಣದಿಂದ ಖರೀದಿಸಿದ ೧೦,೧೦೫ ಟನ್ ಗೋಧಿಯನ್ನು ಕಳಿಸಿದಾಗ, "೧೦,೧೦೫ ಟನ್ ಗೋಧಿಯನ್ನು ಮಾತ್ರ ಕಳಿಸಿಲ್ಲ. ಬದಲಾಗಿ ೧೦,೧೦೫ ಟನ್ ಸೌಹಾರ್ದತೆಯನ್ನು ೧೦,೧೦೫ ಟನ್ ನೈತಿಕ ಬೆಂಬಲವನ್ನು ಕಳಿಸಿದ್ದೀರಿ" ಎಂದರು.

"೧೦,೧೦೫ ಟನ್ ಗೋಧಿ ಎಂದರೆ ಎಷ್ಟಾಗುತ್ತದೆ ಗೊತ್ತೇ? ಇಷ್ಟನ್ನು ಪಡೆಯಲು ನಾವು ೧೦,೫೦೦ ಎಕರೆ ಪ್ರದೇಶದಲ್ಲಿ ಕಬ್ಬು ಬೆಳೆದು ಸಕ್ಕರೆ ಉತ್ಪಾದಿಸಬೇಕು. ಭಾರತದಲ್ಲಿ ಇಷ್ಟು ಗೋಧಿ ಬೆಳೆಯಲು ಎಷ್ಟು ಶ್ರಮ ಬೇಕು ಎಂಬುದು ನಮಗೆ ಗೊತ್ತಿಲ್ಲ. ಆದರೆ ಈ ಉತ್ಪಾದನೆಯಲ್ಲಿ ಎಷ್ಟು ಜನ ಭಾಗವಹಿಸಿದ್ದರು ಎಂಬುದನ್ನು ನಾವು ಊಹಿಸಬಲ್ಲೆವು. ಈ ೧೦,೧೦೫ ಟನ್ ಗೋಧಿಯಿಂದ ನೂರು ಗ್ರಾಂನ ಎಂಟು ಕೋಟಿ ಉತ್ತಮ ಬ್ರೆಡ್ ಸುರಳಿಗಳನ್ನು ತಯಾರಿಸಬಹುದು. ಕ್ಯೂಬಾದ ಪ್ರತಿಯೊಬ್ಬರಿಗೆ ಒಂದು ವಾರ ಅತ್ಯುತ್ತಮ ಬ್ರೆಡ್ ನೀವು ನೀಡುತ್ತಿದ್ದೀರಿ" ಎಂದರು.

"ಕ್ಯೂಬಾ ಎಂಬ ಪುಟ್ಟ ದೇಶ ಜಗತ್ತಿನ ಎಲ್ಲಾ ದೇಶಗಳ ಮೇಲೆ ಸವಾರಿ ಮಾಡಲು ಹೊರಟಿರುವ ಅಮೆರಿಕಾದ ವಿರುದ್ಧ ನಡೆಸುತ್ತಿರುವ ಹೋರಾಟ ಕೇವಲ ಭಾರತದಿಂದ ಮಾತ್ರವಲ್ಲ, ಜಗತ್ತಿನ ಮೂಲೆ ಮೂಲೆಗಳಿಂದ ನೆರವು ಹರಿಯುವಂತೆ ಮಾಡಿದೆ."

"ನಮ್ಮ ವಿರುದ್ಧದ ಪ್ರಚಾರವೇನೇ ಇರಲಿ, ಜಗತ್ತಿನ ಜನ ನಮ್ಮ ಪರವಾಗಿದ್ದಾರೆ. ಕ್ಯೂಬಾದ ಪರವಾಗಿ ಹತ್ತು ಲಕ್ಷಕ್ಕೂ ಹೆಚ್ಚು ಭಾರತೀಯರು ಸೌಹಾರ್ದ ಜಾಥಾಗಳಲ್ಲಿ ಭಾಗವಹಿಸಿದ್ದರು ಎಂಬುದು ನಮ್ಮಲ್ಲಿ ಹುಮ್ಮಸ್ಸು ತುಂಬಿದೆ. ಕ್ಯೂಬಾದೊಂದಿಗೆ ದಿನೇ ದಿನೇ ಜನರ ಸೌಹಾರ್ದ ಹೆಚ್ಚುತ್ತಿದೆ. ಏಕೆಂದರೆ ಜನರಲ್ಲಿ ಸತ್ಯ ತಿಳಿಯುವ ಸಹಜ ಸ್ವಭಾವವಿದೆ" ಎಂದರು ಕ್ಯಾಸ್ಟ್ರೊ .

'ನಿಮ್ಮ ಸೂಟ್‌ಕೇಸ್‌ನ ಅರ್ಧ ಭಾಗ ಕ್ಯೂಬಾ ಆಗಿರಲಿ' – ಕ್ಯೂಬಾಗೆ ಹಾರುವ ಮುನ್ನ ಉತ್ಸವದ ಭಾರತ ಸಿದ್ಧತಾ ಸಮಿತಿ ನಮಗೆ ಸೂಚನೆ ನೀಡಿತ್ತು. ಕ್ಯೂಬಾದ ನೋವು ನಲಿವುಗಳನ್ನು ಸದಾ ಹಂಚಿಕೊಂಡು ಬಂದ ನಮಗೆ ಸೂಟ್‌ಕೇಸ್‌ನಲ್ಲಿ ಅರ್ಧಭಾಗ ಮೀಸಲಾಗಿರಿಸಬೇಕಾದ ಮಹತ್ವ ಗೊತ್ತಿತ್ತು. ಆದರೆ ಕ್ಯೂಬಾಗೆ ಕಾಣಿಕೆಯಾಗಿ ಏನು ಕೊಂಡೊಯ್ಯುವುದು ಎಂಬುದು ಮಾತ್ರ ಬಿಡಿಸಲಾಗದ ಒಗಟಾಗಿತ್ತು. ವಿದೇಶಕ್ಕೆ ಹಾರುವವರಿಗೆ ತಕ್ಷಣವೇ ನೆನಪಾಗುವ ಕರ್ನಾಟಕದ ಕಂಪು ಬೀರುವ ಶ್ರೀಗಂಧ ಶಿಲ್ಪ ? ಇಲ್ಲ ದಂತದ ಕುಸುರಿ ? ಸಂಗಾತಿಯೊಬ್ಬರು ಹೇಳಿದರು – ಸೋಪ್ ಸಾಕು. ದೂರದ ಆ ಕ್ಯೂಬಾಗೆ ಕೇವಲ ಸೋಪ್. ಹಿಂಜರಿದೂ ಹಿಂಜರಿದೂ ಸೂಟ್‌ಕೇಸ್‌ನಲ್ಲಿ ಕೆಲಭಾಗ ಸೋಪನ್ನೂ ತುಂಬಿಸಿಕೊಂಡು ಕ್ಯೂಬಾಗೆ ಹಾರಿದ ನಮಗೆ 'ಕ್ಯೂಬಾ ಇನ್ನೂ ಅರ್ಥವಾಗಬೇಕು' ಎಂಬುದು ಗೊತ್ತಾಯಿತು.

ಕ್ಯೂಬಾದ ರೇಷನ್ ಕಾರ್ಡ್ ? ತಿರುವಿಹಾಕಿದರೆ ಅಲ್ಲಿ ಸೋಪನ್ನೊ ದಾಖಲೆಯೇ ಇಲ್ಲ. ಕ್ಯೂಬಾದ ಜನರಿಗೆ ಸಿಗುವುದು ತಿಂಗಳಿಗೆ ಒಂದು ಸೋಪ್ ಮಾತ್ರ. ಅದೂ ಮೈ ತೊಳೆಯಲು. ನಮ್ಮ ಸೂಟ್‌ಕೇಸ್‌ಗಳಿಂದ ಹೊರಬಿದ್ದ ಸೋಪುಗಳು ಕ್ಯೂಬಾದ ಹತ್ತು ಹಲವು ಕಥೆಗಳನ್ನು ಬಿಡಿಸಿಟ್ಟಿತು. ದುಬಾರಿಯಾದ ಪೆಟ್ರೋಲ್ ಮಧ್ಯೆಯೂ ಕ್ರಿಸ್ತನ ಕಾಸಾಬ್ಲಾಂಕಾಗೆ ಪ್ರೀತಿಯಿಂದ ಕರೆದೊಯ್ದ, ಪುಸ್ತಕದ ಹುಚ್ಚು ಎಂದು ಗೊತ್ತಾಗಿ ಹವಾನಾದ ಹಳೆಯ ಪುಸ್ತಕದಂಗಡಿಗಳ ಗಲ್ಲಿಯಲ್ಲಿ ಸುತ್ತಿಸಿದ, ಇಂಗ್ಲಿಷ್ ಇಲ್ಲದ ನಾಡಿನಲ್ಲಿ ತಮ್ಮ ಕೆಲಸವನ್ನೂ ಬಿಟ್ಟು ಆದಷ್ಟೂ ಕ್ಯೂಬಾವನ್ನು ಅರ್ಥ ಮಾಡಿಸಲು ಯತ್ನಿಸಿದ, ಪ್ರಾಥಮಿಕ ಶಾಲಾ ಟೀಚರ್‌ಗಳ ವಿವಾಹ ವಾರ್ಷಿಕೋತ್ಸವಕ್ಕೆ, ಕ್ಯೂಬಾದ ಸಪೋಟಾ ಗೊಜ್ಜನ್ನು ಪ್ರೀತಿಯಿಂದ ಉಣಿಸಿದ ಅಜ್ಜಂದಿರಿಗೆ, ಭಾರತದಿಂದ ಬಂದಿದ್ದಾರಂತೆ ಎಂದು ನೋಡಲು ಬರುತ್ತಲೇ ಇದ್ದ ಹತ್ತು ಹಲವರಿಗೆ ಭಾರತದ ಸಾಬೂನು ಬಿಲ್ಲೆಗಳು ಗೆಳೆತನದ ಪದಕಗಳಾದವು.

ಕೇವಲ ನಮ್ಮ ಸೂಟ್‌ಕೇಸ್‌ನಿಂದ ಮಾತ್ರವಲ್ಲ, ಭಾರತದ ಮೂಲೆ ಮೂಲೆಯಿಂದ ಸೋಪುಗಳ ಹೊಳೆಯೇ ಹರಿಯಿತು. ಭಾರತಕ್ಕೆ ಬಂದಿದ್ದ ಕ್ಯೂಬಾ




ಇನ್‌ಸ್ಟಿಟ್ಯೂಟ್‌ನ ಅಧ್ಯಕ್ಷ ಸರ್ಜಿಯೋ ಕೊರಿಯೇ ಕೇರಿ ಅವರಿಗೆ ಭಾರತದ ಜನತೆ ೩ ಕೋಟಿ ಸಾಬೂನು ಬಿಲ್ಲೆಗಳನ್ನು ಅರ್ಪಿಸಿದರು. ಕ್ಯೂಬಾದ ಕಣ್ಣಂಚು ಒದ್ದೆಯಾಯಿತೇನೋ. ಸರ್ಜಿಯೋ ಕೊರಿಯೇ ಕೇರಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿ ಹರಿಕಿಷನ್ ಸಿಂಗ್ ಸುರ್ಜಿತ್ ಅವರಿಗೆ ಪತ್ರ ಬರೆದರು – 'ಕ್ಯೂಬಾದ ಜನತೆಯ ಈ ನಿರ್ಣಾಯಕ ಕಾಲಘಟ್ಟದಲ್ಲಿ ಭಾರತ ನಮ್ಮ ಪರವಾಗಿ ನಡೆಸುತ್ತಿರುವ ಪ್ರಯತ್ನಗಳನ್ನು ನಾವು ನೆನಪಿಸಿಕೊಳ್ಳುತ್ತೇವೆ. ಈ ದಿನಗಳ ಇತಿಹಾಸ ಬರೆಯುವಾಗ ನಿಸ್ಸಂಶಯವಾಗಿಯೂ ಕ್ರಾಂತಿಕಾರಿ ಕ್ಯೂಬಾದ ಶ್ರಮಜೀವಿಗಳ ಗುರಿಸಾಧನೆಗೆ ವಿಶ್ವಾದ್ಯಂತ ಮೂಡಿಬಂದಿರುವ ಮಾನವ ಸೌಹಾರ್ದದ ಅಗಣಿತ ಕೊಡುಗೆಗಳು ಅಲ್ಲಿ ಪ್ರತಿಬಿಂಬಿತವಾಗುತ್ತವೆ.'

'ಭಾರತ' ಕ್ಯೂಬಾ ಜನರಿಗೆ ಉಲ್ಲಾಸ ತರುವ ಹೆಸರು. ಭಾರತದ ಹಡಗು, ಸಾಬೂನಿನ ಬಿಲ್ಲೆ, ಔಷಧಿ ಎಲ್ಲಕ್ಕಿಂತಲೂ ಹೆಚ್ಚಾಗಿ ಜನರಿಂದ ಹರಿದು ಬಂದ ಪ್ರೀತಿ ಪ್ರತೀ ಕ್ಯೂಬನ್ನರಿಗೆ ಗೊತ್ತು. ಭಾರತದಿಂದ ಹೋದ ನಾವು ಕ್ಯೂಬನ್ನರ ಮನೆಗಳಲ್ಲಿ ಇಳಿದುಕೊಂಡ ರಾತ್ರಿ 'ಭಾರತದ ಸಂಗಾತಿಗಳಿಗೆ ಸ್ವಾಗತ' ಎಂಬ ಹೃದಯಸ್ಪರ್ಶಿ ಕಾರ್ಯಕ್ರಮ ಜರುಗಿತು. ಕ್ಯೂಬಾದಲ್ಲಿ ನಾವಿದ್ದ ಮನೆಯ ಬೀದಿಯ ಪ್ರತಿಯೊಬ್ಬರೂ ಬಂದು ಭಾರತ ಹಾಗೂ ಕ್ಯೂಬಾದ ನಂಟನ್ನು ನೆನಪಿಸಿಕೊಂಡರು. ನಮಗೆ ಆಶ್ಚರ್ಯವಾಗಿದ್ದು ಅಲ್ಲಿಯ ಪ್ರಾಥಮಿಕ ಶಾಲೆಯ ಅಧ್ಯಾಪಕರು ವಾಲ್ಮೀಕಿ ರಾಮಾಯಣ, ರವೀಂದ್ರನಾಥ ಠಾಗೂರರ ಕವಿತೆಗಳ ಬಗ್ಗೆ ಮಾತನಾಡಿದಾಗ. ಅಕ್ಷರ ಹೊತ್ತು ತರುವ ಅರಿವಿನ ಸ್ಪರ್ಶವಾಯಿತು. ಕ್ಯೂಬಾದಲ್ಲಿ ಪ್ರತಿಯೊಬ್ಬರೂ ಸಾಕ್ಷರರು ಮಾತ್ರವಲ್ಲ ಅರಿವಿನ ಜೊತೆಗಾರರು. ಅಮೆರಿಕಾ ಕ್ಯೂಬಾದ ಸುತ್ತ ಕುಣಿಕೆ ಬಿಗಿಯಲು ಆರಂಭಿಸಿದಾಗ ಫಿಡೆಲ್ ಕ್ಯಾಸ್ಟ್ರೊ ಯುದ್ಧ ವಿಮಾನಗಳನ್ನು ಕೊಳ್ಳುವುದಕ್ಕೂ ಮುಂಚೆ ಸಾಕ್ಷರತೆಗೆ ಕೈಹಾಕಿದ್ದು ಏಕೆ ಎಂಬುದು ಗೊತ್ತಾಯಿತು. ಗೋಧಿ ಇಲ್ಲದ, ಸೋಪ್ ಇಲ್ಲದ, ಬ್ರೆಡ್ ಇಲ್ಲದ ಜನ ಏಕೆ ಫಿಡೆಲ್ ಕ್ಯಾಸ್ಟ್ರೊ ಹಿಂದೆ ಇದ್ದಾರೆ ಎಂಬುದರ ಅರಿವಾಯಿತು. ಉತ್ಸವಕ್ಕಾಗಿ ನಡೆಸಿದ ಸೌಹಾರ್ದ ಮೆರವಣಿಗೆಯೂ ಅಷ್ಟೆ. ಭಾರತದ ಧ್ವಜ ಕಂಡರೆ ಸಾಕು ಜನ ಉತ್ಸಾಹದಿಂದ ಇಂಡಿಯಾ, ಇಂಡಿಯಾ ಎಂದು ಕೂಗಿ ಕರೆಯುತ್ತಿದ್ದರು. ಅಲಿಪ್ತ ಆಂದೋಲನದ ನಾಯಕನಾಗಿದ್ದ ಫಿಡೆಲ್ ಕ್ಯಾಸ್ಟ್ರೊ ಭಾರತಕ್ಕೆ ಬಂದಾಗ ಇಲ್ಲಿ ಸಿಕ್ಕಿದ ಸ್ವಾಗತ ಕ್ಯೂಬನ್ನರ ನೆನಪಿನಲ್ಲಿ ಇನ್ನೂ ಹಚ್ಚಹಸಿರು.

'ಜಗತ್ತಿನ ಜನರ ಬಳಿ ಆ್ಯಂಟೆನಾಗಳಿವೆಯೇನೋ, ಆ ಆ್ಯಂಟೆನಾಗಳ ಮೂಲಕ ಮೂರು ದಶಕಗಳಿಂದಲೂ ನಾವು ಇತಿಹಾಸದ ಅತ್ಯಂತ ಶಕ್ತಿಶಾಲಿ ಸಾಮ್ರಾಜ್ಯದ ವಿರುದ್ಧ ನಡೆಸುತ್ತಿರುವ ಧೀರ ಹೋರಾಟದ ಬಗ್ಗೆ ಸತ್ಯಸಂಗತಿಗಳು ಅವರಿಗೆ ತಿಳಿಯುತ್ತಿದೆ' ಎಂದಿದ್ದರು ಕ್ಯಾಸ್ಟ್ರೊ. ಆ ಆ್ಯಂಟೆನಾಗಳೇ ೧೨ ದೇಶಗಳ ೧೦೨ ಸಂಘಟನೆಗಳನ್ನು ಕ್ಯೂಬಾದ ಪರ ದನಿ ಎತ್ತುವಂತೆ ಮಾಡಿತು. ಭಾರತ ಮತ್ತು ಕ್ಯೂಬಾ ಸೌಹಾರ್ದತಾ ಸಂಘಟನೆ ೧೯೯೫ರಲ್ಲಿ ಕ್ಯೂಬಾಗೆ ಬೆಂಬಲ ಸಾರಲು ಪ್ರಥಮ ಏಷ್ಯಾ ಪೆಸಿಫಿಕ್ ಪ್ರಾದೇಶಿಕ ಸಮ್ಮೇಳನವನ್ನು ನಡೆಸಿತು. ಮೂರು ದಿನಗಳ ಕಾಲ ನಡೆದ ಸಭೆಯಲ್ಲಿ ಕ್ಯೂಬಾದ ಪ್ರೀತಿಯನ್ನು ಹಂಚಿಕೊಳ್ಳಲಾಯಿತು. ಕ್ಯೂಬಾದ ನೆನಪು ಸದಾ ಹಸಿರಾಗಿ ಉಳಿಯಲು ಕ್ಯೂಬಾದ ಮಹಾನ್ ಹೋರಾಟಗಾರ ಜೋಸೆ ಮಾರ್ತಿ ? ಅವರ ಪ್ರತಿಮೆಯನ್ನು ಸ್ಥಾಪಿಸಲಾಯಿತು. ಕ್ಯೂಬಾ ಕುರಿತ ಪುಸ್ತಕಗಳ ಬಿಡುಗಡೆ, ಕ್ಯೂಬಾ ಚಲನಚಿತ್ರ ಉತ್ಸವ, ಕ್ಯೂಬಾ ವಸ್ತುಪ್ರದರ್ಶನ ನಡೆಯಿತು.

ಯಾವುದೇ ಸೌಹಾರ್ದ ಸಮ್ಮೇಳನಕ್ಕೆ ತನ್ನ ಪ್ರತಿನಿಧಿಯನ್ನು ಕಳಿಸದ ಚೀನಾ, ಕ್ಯೂಬಾದ ನೆರವಿಗಾಗಿ ನಡೆದ ಈ ಸಮ್ಮೇಳನಕ್ಕೆ ಪ್ರತಿನಿಧಿಯನ್ನು ಕಳಿಸಿ ಈ ಧೀರ ಹೋರಾಟದಲ್ಲಿ ನಾವೂ ಭಾಗಿಗಳು ಎಂದು ಸಾರಿ ಹೇಳಿತು. ಕ್ಯೂಬಾದ ವಿರುದ್ಧದ ಅಮೆರಿಕಾದ ಆರ್ಥಿಕ ದಿಗ್ಬಂಧನವನ್ನು ಒಕ್ಕೊರಲಿನಿಂದ ಎಲ್ಲಾ ದೇಶಗಳೂ ಖಂಡಿಸಿದವು. 'ಕ್ಯೂಬಾ ದಿನ'ವನ್ನು ಆಚರಿಸಲು ಕರೆ ನೀಡಿದವು.

'ಇಂದಲ್ಲ ನಾಳೆಯಾದರೂ' ಗೆಲ್ಲಲಿರುವ ಕ್ಯೂಬಾಕ್ಕೆ ಭಾರತ ಹೆಗಲು ಕೊಟ್ಟು ನಿಂತಿತು. ೧೯೯೫ರ ನವೆಂಬರ್ ೨೭ರಂದು ಭಾರತದ ಅಮೆರಿಕಾ ಮಾಹಿತಿ ಕೇಂದ್ರದ ಎದುರು, ೧೧ ಮಿಲಿಯ ಜನರ ಪುಟ್ಟ ದ್ವೀಪವೊಂದು ಅಮೆರಿಕಾದ ಭದ್ರತೆಗೆ ಆತಂಕ ಉಂಟುಮಾಡಿದೆ ಎಂದು ಹೆಲ್ಮ್ಸ್ – ಬರ್ಟನ್ ಕಾಯಿದೆಯನ್ನು ಜಾರಿಮಾಡಿರುವ ನೀತಿಯ ಕಟುಕತನವನ್ನು ಬಯಲು ಮಾಡಿತು. ಭಾರತದ ಮೂಲೆ ಮೂಲೆಯಲ್ಲಿ ಕ್ಯೂಬಾದ ಪರವಾಗಿ ಅಂದು ಘೋಷಣೆಗಳು ಮೊಳಗಿದವು.

ಕಾಶ್ಮೀರದ ವಿವಾದ ಭುಗಿಲೆದ್ದಾಗ, ಪಾಕಿಸ್ತಾನಕ್ಕೆ ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡಲು ಅಮೆರಿಕಾ ಪ್ರೆಸ್ಲರ್ ನಿಯಮಗಳನ್ನು ಮುಂದುಮಾಡಿದಾಗ ಕ್ಯೂಬಾ ಭಾರತದ ಬೆನ್ನಿಗೆ ನಿಂತಿತು. ಚೆ ಗೆವಾರನ ಮಗಳು ಅಲೀಡಾ ಗುವಾರ ಭಾರತಕ್ಕೆ ಬಂದಾಗ ಹೃದಯಸ್ಪರ್ಶಿಯಾದ ಸ್ವಾಗತವನ್ನು ನೀಡಲಾಯಿತು. ಕಿಕ್ಕಿರಿದ ಸಭೆಗಳಲ್ಲಿ ಕ್ಯೂಬಾ ಪರ, ಕ್ಯಾಸ್ಟ್ರೊ ಪರ, ಚೆ ಪರ ಘೋಷಣೆಗಳು ಮೊಳಗಿದವು. ಚೆ ಪ್ರೀತಿಯ ಹೊಳೆಯಲ್ಲಿ ಮುಚ್ಚಿಹೋಗಿದ್ದ ಅಲೀಡಾ ಕಣ್ತುಂಬಿ ಹೇಳಿದರು, "ನನ್ನ ತಂದೆಯ ಬಗ್ಗೆ ಭಾರತದಲ್ಲಿ ಇರುವ ಅಭಿಮಾನ, ಅಕ್ಕರೆಗೆ ನನ್ನ ಮನಸೋತಿದೆ. ಈ ಅಭಿಮಾನಕ್ಕೆ ಬೆಲೆ ಕಟ್ಟುವಂತಿಲ್ಲ. ವಂದನೆ ಹೇಳಲು ನನ್ನಲ್ಲಿ ಪದಗಳೇ ಇಲ್ಲ."

ಕ್ಯಾಸ್ಟ್ರೊ ಮಾತು ನಿಜವಾಯಿತು – ಸೌಹಾರ್ದತೆ ಎಂಬುದು ರಕ್ತದಾನದಂತೆ. ಕಪ್ಪು ಅಥವಾ ಬಿಳಿ, ಆಸ್ತಿಕ ಅಥವಾ ನಾಸ್ತಿಕ, ಪುರುಷ ಇಲ್ಲವೇ ಮಹಿಳೆ, ಬಡವ ಇಲ್ಲವೇ ಶ್ರೀಮಂತ ಎಂಬ ಭೇದ ಇರುವುದಿಲ್ಲ. ಪ್ರಾಣ ಉಳಿಸಲು ನೀಡುವ ಎಲ್ಲಾ ರಕ್ತ ಕೆಂಪು. ಅಂತೆಯೇ ನಿಮ್ಮ ಈ ಪ್ರೀತಿ.

*(೨೯ನೇ ಪುಟದಿಂದ)*

'ಹೌದು' ಎನ್ನುವಂತೆ ಭಾರತ ತನ್ನ ಗೋಧಿಯನ್ನು ಕಳಿಸಿಕೊಟ್ಟಿತು. ಬ್ರೆಜಿಲ್ ಕಾಫಿಯನ್ನು, ಚೀನಾ ಸೈಕಲ್‌ಗಳನ್ನು, ಮೆಕ್ಸಿಕೋ ಆಫ್ರಿಕಾ ಹೀಗೆ ಒಂದೊಂದೇ ದೇಶಗಳು ತಮ್ಮಲ್ಲಿದ್ದದ್ದನ್ನು ಹಂಚಿ ಕ್ಯೂಬಾ ಉಳಿಸಲು ಮುಂದಾದವು. ಕ್ಯಾಸ್ಟ್ರೊ ಮತ್ತೆ ಹೇಳಿದರು, "ನಮ್ಮ ಕಷ್ಟದ ದಿನಗಳಲ್ಲಿ ಸೆಗಣಿಯಿಂದ ಅದ್ಭುತ ಹೂವುಗಳು ಅರಳುವಂತೆ ಹೊಸ ದಾರಿಗಳು ಅರಳಿದವು." ಆಗಲೇ ಅಮೆರಿಕಾ ಸುಸ್ತಾಗಿ ಹೋದದ್ದು. "ಜಗತ್ತಿನ ಯಾವ ದೇಶಗಳೂ ಕ್ಯೂಬಾದೊಂದಿಗೆ ಸಂಬಂಧ ಇಟ್ಟುಕೊಳ್ಳುವಂತಿಲ್ಲ. ಹಾಗೇನಾದರೂ ಬೆಂಬಲ ಕೊಟ್ಟರೆ ಅವರ ವಿರುದ್ಧವೂ ದಿಗ್ಬಂಧನ" ಎಂದು ಸಾರಿಬಿಟ್ಟಿತು. 'ಹೆಲ್ಮ್ಸ್ – ಬರ್ಟನ್ ಕಾಯಿದೆ' ಎಂದರೆ ಇದೇ.

ಹೆದರಿದ ಹಲವು ದೇಶಗಳು ಅಮೆರಿಕಾ ಜೊತೆ ಒಂದಾಗಿಬಿಡಿ ಎಂದು ಫಿಡೆಲ್ ಕ್ಯಾಸ್ಟ್ರೊರನ್ನು ಒಪ್ಪಿಸಲು ಮುಂದಾದವು. ಕ್ಯಾಸ್ಟ್ರೊ ಒಂದೇ ಮಾತಿನಲ್ಲಿ, "ಬೆರಳನ್ನು ಕೊಟ್ಟು ಕೈಯ್ಯೇ ಇಲ್ಲವಾಗಿಸಿಕೊಳ್ಳಲು ನಮಗಿಷ್ಟವಿಲ್ಲ" ಎಂದು ಸಾರಾಸಗಟಾಗಿ ನಿರಾಕರಿಸಿಬಿಟ್ಟರು. ಅಮೆರಿಕಾ ಅಲ್ಲಿಂದ ಸೇಡು ತೀರಿಸಿಕೊಳ್ಳಲು ಆರಂಭಿಸಿತು. ಹಾಗೆ ಕ್ಯಾಸ್ಟ್ರೊ ಹಾಜರಿದ್ದ ಸಭೆಯಿಂದ ಅವರು ಹೊರಗೆ ಹೋಗುವವರೆಗೆ ಅಮೆರಿಕಾ ಸಭೆಯಲ್ಲಿ ಕಾಲೇ ಇಡಲಿಲ್ಲ.

ಆಗ ಫಿಡೆಲ್ ಕ್ಯಾಸ್ಟ್ರೊ ಹೇಳಿದರು: "ಆಯ್ತು, ನಾನು ಈ ಕೋಣೆಯಿಂದ ಹೊರ ಹೋಗುತ್ತಿದ್ದೇನೆ. ನನ್ನೊಂದಿಗೆ ಇಡೀ ಅಮೆರಿಕಾದ ಜನರಿದ್ದಾರೆ. ಹಾಗೆಯೇ ಮತ್ತೆ ನಾನು ಈ ಕೋಣೆಗೆ ಹಿಂದಿರುಗುತ್ತೇನೆ. ನನ್ನೊಂದಿಗೆ ಇಡೀ ಅಮೆರಿಕಾದ ಜನರು ಇರುತ್ತಾರೆ."

ಹಾಗೇ ಆಯಿತು. ಅಮೆರಿಕಾದಿಂದಲೇ ಬೆಂಬಲದ ಸುರಿಮಳೆಯೊಂದಿಗೆ, ಅಮೆರಿಕಾದ ಕರತಾಡನದೊಂದಿಗೆ ಫಿಡೆಲ್ ಕ್ಯಾಸ್ಟ್ರೊ ವಿಶ್ವ ಸಂಸ್ಥೆಯಲ್ಲಿ ಭಾಷಣ ಮಾಡಿದರು. ಹೀಗೆ ಕ್ಯಾಸ್ಟ್ರೊ ಅಮೆರಿಕಾಗೆ ಹೆಜ್ಜೆ ಹಾಕಿದರು. ಆಗ ಅಮೆರಿಕಾ ಮಾತಿರಲಿ, ಇಡೀ ಜಗತ್ತು ಅವರೊಂದಿಗಿತ್ತು. ಇದರ ಬೆನ್ನಿಗೇ ಅಮೆರಿಕಾದಿಂದ ಯಾರೆಂದರೆ ಯಾರೂ ಕ್ಯೂಬಾಗೆ ಕಾಲಿಡಬಾರದು ಎಂದು ಶಾಸನ ಮಾಡಿದ ನೆಲದಿಂದ ಅಮೆರಿಕಾದ ಅಧ್ಯಕ್ಷರೇ ಕ್ಯೂಬಾದತ್ತ ನಡೆದರು. ಬರಾಕ್ ಒಬಾಮ ಕ್ಯೂಬಾಗೆ ಕಾಲಿಟ್ಟರು. ವ್ಯಾಪಾರದ ಹೆದ್ದಾರಿಗಳು ಎರಡೂ ದೇಶದ ನಡುವೆ ತೆರೆದುಕೊಂಡವು. ಎರಡೂ ದೇಶಗಳ ನಡುವೆ ನಾಗರಿಕರನ್ನು ಹೊತ್ತ ನೌಕೆಗಳು ಓಡಾಡಿದವು.



ನನಗೆ ಫಿಡೆಲ್ ಹೇಳಿದ ಮಾತು ನೆನಪಿಗೆ ಬರುತ್ತಿದೆ – "ಮೋಡ ಇದೆ ಎಂದ ಮಾತ್ರಕ್ಕೆ ಆಕಾಶದಲ್ಲಿ ಸೂರ್ಯನಿಲ್ಲ ಎಂದು ಅರ್ಥವೇನು? ಮೋಡ ಹನಿಯೊಡೆದು ನೆಲಕ್ಕುದುರಿದರೆ ಅಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ಸೂರ್ಯನಿದ್ದಾನೆ."

ಈಗ ಕ್ಯಾಸ್ಟ್ರೊ ಇಲ್ಲ. ಕ್ಯೂಬಾದಲ್ಲಿ ಮೋಡ ಕವಿದಿದೆ. ಅಮೆರಿಕಾದಲ್ಲಿ ಡೊನಾಲ್ಡ್ ಟ್ರಂಪ್ ಅಧ್ಯಕ್ಷ ಗಾದಿ ಏರಲು ದಿನ ಕಾಯುತ್ತಿದ್ದಾರೆ. ಕ್ಯೂಬಾದಲ್ಲಿ ಮೋಡ ಕವಿದಿದೆ. ಆದರೆ ಆ ಮೋಡಗಳೂ ಕರಗಿ ನೆಲಕ್ಕೆ ಇಳಿಯಲೇಬೇಕಲ್ಲ.

**ಜಿ. ಎನ್. ಮೋಹನ್**

೧೪೨, ೬ನೇ ಅಡ್ಡರಸ್ತೆ, ೫ನೇ ಹಂತ, ರಾಜಾಜಿನಗರ, ಬೆಂಗಳೂರು –೧೦

# ನೋಟು ರದ್ದತಿ –
# ಒಂದು ಕಣ್ಣುಮುಚ್ಚಾಲೆ, ವರ್ಗ ಸಮರ

೨೦೧೬ರ ನವೆಂಬರ್ ೮ರ ಮಧ್ಯರಾತ್ರಿಯ ತರುವಾಯ ಅಧಿಕ ಮೌಲ್ಯಗಳಾದ ೫೦೦ ಮತ್ತು ೧೦೦೦ ರೂಪಾಯಿಗಳ ನೋಟುಗಳು ಕೇಂದ್ರ ಸರ್ಕಾರದ ನೋಟು ರದ್ದತಿಯಿಂದಾಗಿ ಚಲಾವಣೆಯಲ್ಲಿ ಇಲ್ಲವಾದವು. ಈ ಯೋಜನೆಯು ತೀವ್ರ ವಿಮರ್ಶೆಗೆ ಗುರಿಯಾಗಿದೆ. ಅದಕ್ಕೆ ಕಾರಣಗಳು ಎರಡು: ಲಕ್ಷಾಂತರ ಜನರಿಗೆ ಉಂಟಾದ ತೊಂದರೆಗಳು ಮತ್ತು ಇಂತಹ ಯೋಜನೆಯನ್ನು ಕಾರ್ಯಗತಗೊಳಿಸಲು ಕೇಂದ್ರ ಸರ್ಕಾರವು ಸರಿಯಾದ ಸಿದ್ಧತೆ ಮಾಡಿಕೊಳ್ಳದಿದ್ದುದು. ಅಚ್ಚರಿಯೋ ಎಂಬಂತೆ ಕಾರ್ಪೊರೇಟ್ ಜಗತ್ತಿನ ಹಲವು ದೈತ್ಯರು ಈ ಯೋಜನೆಯನ್ನು ಬಹು ಹರ್ಷದಿಂದ ಸ್ವಾಗತಿಸಿದ್ದಾರೆ. ಅಂತೆಯೇ ತಮ್ಮ ಚಾರಿತ್ರ್ಯದ ಬಗ್ಗೆ ಅನುಮಾನ ಮೂಡಿಸುವ ಕೆಲವು ದೇವಮಾನವರು ಮತ್ತು ನಗರ ಕೇಂದ್ರಿತ ಮಧ್ಯಮ ವರ್ಗದವರೂ ಅದನ್ನು ಸ್ವಾಗತಿಸಿದ್ದಾರೆ. ನಗರ ಕೇಂದ್ರಿತ ಮಧ್ಯಮ ವರ್ಗದವರಿಗೆ ಭಾಗಶಃ ಒಂದು ನೇರ ಕಾರಣವಿದೆ: ಮೋದಿ ಸರ್ಕಾರದ ಘೋಷಿತ ಆಶ್ವಾಸನೆಗಳು ಮತ್ತು ಆ ಬಗ್ಗೆ ಸಾಕಷ್ಟು ನಿಷ್ಕ್ರಿಯೆ. ಮೋದಿ ಸರ್ಕಾರದ ಅಧೀನದಲ್ಲಿ ಬಹುಭಾರಿ ಪ್ರಚಾರ ಸಾಧನಗಳು ತುಂಬಿಕೊಂಡಿವೆ. ಅರ್ಧಸತ್ಯಗಳ ಮಹಾಜಾಲಗಳನ್ನು ಹೆಣೆಯುವುದು ಮತ್ತು ಯಾವ ಸಂಕೋಚವೂ ಇಲ್ಲದೆ ಸುಳ್ಳುಗಳ ಮಹಾಪೂರ ಹರಿಸುವುದು ಅವಕ್ಕೆ ಚಿಟಿಕೆ ಹೊಡೆಯುವಷ್ಟು ಸರಳ. ಬಹುಸುಲಭವಾಗಿ ಅವಕ್ಕೆ ಭಾವನಾತ್ಮಕ ಸ್ವರೂಪ ಕೊಡುತ್ತವೆ ಕೂಡ. ಸರ್ಕಾರದ ಅವಶ್ಯಕತೆಗೆ ತಕ್ಕಂತೆ ರಾಷ್ಟ್ರೀಯತೆಯ ಮಾತನ್ನು ತಿರುಚುವುದು, ಜನತೆಯ ಹಿತಕ್ಕೆ ಅದು ಪ್ರತಿಕೂಲವಾಗುವಂತೆ ಮಾಡುವುದು ಎಲ್ಲಾ ನಿಸ್ಸಂಕೋಚವಾಗಿ ನಡೆಯುತ್ತವೆ. ಫ್ಯಾಸಿಸ್ಟ್ ಆಡಳಿತದ ಸ್ವಭಾವಕ್ಕನುಗುಣವಾಗಿ ಬಾಹ್ಯ ಇಲ್ಲವೇ ಆಂತರಿಕ ಶತ್ರುವನ್ನು ತಯಾರಿಸಿಟ್ಟುಕೊಳ್ಳುವುದು ಅದಕ್ಕೆಲ್ಲಾ ಒಂದು ಸಾಧನ. ಸದಾ ಆ "ಇತರನ" ಬಗೆಗೇ ಧ್ವನಿ ಏರಿಸುವುದು ಅದರೊಂದು ಭಾಗ. ಜನರಿಗೆ ಉದ್ಯೋಗಗಳು ಇಲ್ಲದಂತಾಗಿರುವುದು ಮತ್ತು ಬೆಲೆಯೇರಿಕೆ ಮುಂತಾದ ನೈಜ ಸಮಸ್ಯೆಗಳಿಂದ ಜನರ ಮನಸ್ಸನ್ನು ಬೇರೆಡೆ ತಿರುಗಿಸಲು ಇದೊಂದು ಮಾರ್ಗ. ಫ್ಯಾಸಿಸ್ಟ್ ಅಧಿಕಾರಕ್ಕೆ ಅನುವಾಗುವಂತೆ ಈ ಶತ್ರುವಿನ ಬಣ್ಣವನ್ನು ಬದಲಾಯಿಸುತ್ತಿರಬಹುದು. ಒಮ್ಮೆ ಅದು ಜೆಎನ್‌ಯು ವಿದ್ಯಾರ್ಥಿಗಳತ್ತ, ಇನ್ನೊಮ್ಮೆ ಬಂಗ್ಲಾ ದೇಶದತ್ತ, ಮತ್ತೊಮ್ಮೆ ನೆಹರು ಕುಟುಂಬದತ್ತ, ಉದ್ರೇಕ ಹುಟ್ಟಿಹಾಕುತ್ತದೆ. ನಿರಂತರ ಶತ್ರುವಾಗಿ ಪಾಕಿಸ್ತಾನ ಹೇಗೂ ಇದ್ದೇ ಇದೆ; ಜೊತೆಗೆ ಭಾರತದ ಮುಸಲ್ಮಾನರೂ ಇದ್ದಾರೆ. ಇವುಗಳಲ್ಲಿ ಯಾವುದನ್ನು ಬೇಕಾದರೂ ಗುರಿಯಿಟ್ಟು ಹುಯಿಲೆಬ್ಬಿಸಲು ಸಾಧ್ಯ. ಆದರೆ ನಿಜವಾದ ವಿಚಾರ ಬೇರೆಯೇ ಇದೆ: ನಿಜಕ್ಕೂ ಶತ್ರುವಾದ ಉದ್ಯೋಗರಾಹಿತ್ಯವು ಈಚಿನ ದಿನಗಳಲ್ಲಿ ಅಪಾಯಕಾರಿ ಹಂತವನ್ನು ಮುಟ್ಟಿದೆ. ಇದರ ನಿವಾರಣೆಗೆ ಸಂಬಂಧಿಸಿದಂತೆ ಮೋದಿ ಸರ್ಕಾರವು ಸುತರಾಂ ನಿಷ್ಫಲವಾಗಿಹೋಗಿದೆ. ಕಳೆದ ಏಳು ವರ್ಷಗಳನ್ನು ಗಣನೆಗೆ ತೆಗೆದುಕೊಂಡರೆ ಈಚಿನ ಎರಡು ವರ್ಷಗಳಲ್ಲಿ

**ಎಂ. ಸತ್ಯಾನಂದ**



ಸೃಷ್ಟಿಯಾದ ಉದ್ಯೋಗಗಳು ಅತ್ಯಂತ ಕಡಿಮೆ ಮಟ್ಟದವು.

ಈ ಲೇಖನವು ಪ್ರತಿಪಾದಿಸುವ ಸಂಗತಿ ಇದು: ದುಡಿಯುವ ವಿಶಾಲ ಜನತೆಯ ಮೇಲೆ ಒಂದು ವರ್ಗ ಸಮರವನ್ನು ಘೋಷಿಸಲಾಗಿದೆ; ಆ ಸಮರವು ಕಾರ್ಪೊರೇಟ್ ಹಿತಾಸಕ್ತಿಗಳ ಪರವಾದ್ದು. ಅದನ್ನು ಕೈಗೊಂಡಿರುವುದು ಈಗಿನ ಮೋದಿ ಸರ್ಕಾರ. ಇದನ್ನು ಮಾಡುವಾಗ ತೋರಿಕೆಗೆ ತಾನೊಬ್ಬ ಬಡವರಿಗಾಗಿ ಸೆಣಸುತ್ತಿರುವ ಸಂತನೆಂಬ ಸೋಗನ್ನು ಪ್ರಧಾನಿ ಮೋದಿ ಹಾಕಿಕೊಂಡಿದ್ದಾರೆ. ತಾನು ಘೋಷಿಸುವ ಉದ್ದೇಶಗಳಿಗೆ ತೀರಾ ವಿರುದ್ಧವಾದ ಕ್ರಮಗಳನ್ನು ಕಾರ್ಯಗತಗೊಳಿಸಲು ಈ ಸೋಗು ಅವಶ್ಯಕ. ನೋಟುಗಳ ರದ್ದತಿಯಿಂದ ಉಂಟಾಗಿರುವ ಬೊಬ್ಬೆಯಿಂದಾಚೆಗೂ ಇಣುಕಿ ಅದರ ಸಮಸ್ಯೆಯನ್ನು ಒಂದು ವರ್ಗ ದೃಷ್ಟಿಯಿಂದ ಪರೀಕ್ಷಿಸುವುದು ಮತ್ತು ಪ್ರಶ್ನಿಸುವುದು ಅಗತ್ಯವಿದೆ. ಹಾಗೆ ಮಾಡಿದಾಗ ಕಾರ್ಪೊರೇಟ್ ಸಂಸ್ಥೆಗಳಂತಹ "ಶ್ರೀಮಂತ" ವಿಭಾಗಗಳು ನೋಟುಗಳ ರದ್ದತಿಯೆಂಬ ಯೋಜನೆಗೆ ಹುಮ್ಮಸ್ಸಿನಿಂದ ಬೆಂಬಲವನ್ನು ನೀಡಿರುವುದರ ಹಿಂದಿನ ಹುನ್ನಾರಗಳು ಅರ್ಥವಾಗುತ್ತವೆ. ಈ ಯೋಜನೆಯು ನಿಜವಾಗಿಯೂ ಆ ಶ್ರೀಮಂತ ವರ್ಗದ ಹಿತಕ್ಕೆ ಹೇಳಿಮಾಡಿಸಿದಂತಿದೆ, ಏಕೆಂದರೆ ಅದು ಕಾರ್ಪೊರೇಟ್ ಸಂಸ್ಥೆಗಳ ದುರವಸ್ಥೆಗೆ ಒಂದು ಸಿದ್ಧೌಷಧಿಯಾಗಿದೆ. ಭಾರತದ ಬ್ಯಾಂಕುಗಳ ವಹಿವಾಟಿನಲ್ಲಿ ಅನಿವಾರ್ಯವಾಗಿ ಉಂಟಾಗಲಿದ್ದ ಭೀಕರ ಪರಿಣಾಮವನ್ನು ಗಮನಿಸಿ: ಕಾರ್ಪೊರೇಟ್ ಸಂಸ್ಥೆಗಳು ಬ್ಯಾಂಕುಗಳಿಂದ ಪಡೆದಿದ್ದ ಸಾಲದ ಮೊಬಲಗುಗಳನ್ನು ಪಾವತಿಸಲಾಗದಂತಹ ಸನ್ನಿವೇಶದಿಂದಾಗಿ ಬ್ಯಾಂಕುಗಳು ನೀಡಿದ್ದ ಸಾಲಗಳು ಅನುತ್ಪಾದಕ ಆಸ್ತಿಗಳಾಗಿ ಹೋಗಿವೆ. ಅದರಿಂದಾಗಿ ಸಂಕಷ್ಟಕ್ಕೆ ಸಿಲುಕಿರುವ ಬ್ಯಾಂಕುಗಳು ಮತ್ತು ಅವುಗಳ ಸೋದರಸಂಬಂಧಿಗಳಾದ ಕಾರ್ಪೊರೇಟ್ ಸಂಸ್ಥೆಗಳನ್ನು ಬಚಾವು ಮಾಡಲು ಸಕಾಲಿಕವಾಗಿ ಬಂದಿರುವುದು ನೋಟುಗಳ ರದ್ದತಿಯ ಇಂದಿನ ಯೋಜನೆ. ಈ ಇಡೀ ಪ್ರಸಂಗವು ಇಂಥದೇ ಇನ್ನೊಂದು ಘಟನೆಯನ್ನು ನೆನಪಿಗೆ ತರುತ್ತದೆ: ಅಮೆರಿಕಾದ ಬ್ಯಾಂಕುಗಳು ಕುಸಿದುಬೀಳುವ ಸನ್ನಿವೇಶದಲ್ಲಿದ್ದಾಗ ಅಮೆರಿಕಾ ಸರ್ಕಾರವು ಅವನ್ನು ಬಚಾವು ಮಾಡಬೇಕಾಯಿತು. ಅಷ್ಟು ಭಾರಿ ಬ್ಯಾಂಕುಗಳು ಕುಸಿಯದಿರಬೇಕಾದ್ದು ಅಗತ್ಯವಾಗಿತ್ತು, ಆದ್ದರಿಂದ ಅವನ್ನು ಸಾರ್ವಜನಿಕ ಖಜಾನೆಯ ಊರುಗೋಲಿನಿಂದ ಸ್ಥಿರಗೊಳಿಸಬೇಕಾಗಿ ಬಂದಿತು. ಇಂದಿನ ಭಾರತದ ಸನ್ನಿವೇಶಕ್ಕೆ ಅಮೆರಿಕಾ ಬ್ಯಾಂಕುಗಳ ಉದ್ಧಾರಕ್ಕೆ ಅಮೆರಿಕಾ ಸರ್ಕಾರವು ಕೈಗೊಂಡ ಕ್ರಮವು ಒಳ್ಳೆಯ ಹೋಲಿಕೆಯಾಗುತ್ತದೆಂಬುದು ಪ್ರಸ್ತುತ ವಿಶ್ಲೇಷಣೆಯಿಂದ ಮನದಟ್ಟಾಗುತ್ತದೆ. ಇಂದಿನ ನೋಟು ರದ್ದತಿ ಯೋಜನೆಯಿಂದಾಗಿ ದುಡಿಯುವ ಬಡಜನ, ರೈತರು ಮತ್ತು ಕಾರ್ಮಿಕ ವರ್ಗದವರು ತಾವು ಕಷ್ಟಪಟ್ಟು ಗಳಿಸಿದ್ದ ನಿಧಿಯನ್ನು ಕಷ್ಟಕ್ಕೆ ಸಿಲುಕಿಸಲ್ಪಟ್ಟಿರುವ ಬ್ಯಾಂಕುಗಳಿಗೆ ತುಂಬಲು ತರಾತುರಿಯಿಂದ ಓಡುತ್ತಿದ್ದಾರೆ. ಹಾಗೆ ಮಾಡಿ ಈ ದುಡಿಯುವ ಜನತೆಯು ಭಾರತದ ಬ್ಯಾಂಕುಗಳನ್ನು ಮತ್ತು ಅವುಗಳ ಕಾರ್ಪೊರೇಟ್ ಸೋದರರನ್ನು ರಕ್ಷಿಸಬೇಕಾಗಿ ಬಂದಿದೆ.

**ಯೋಜನೆಯ ಗೆಲುವಿನ ಮಾಪನ**

ಕಪ್ಪು ಹಣವು ನಮ್ಮ ಆರ್ಥಿಕತೆಯನ್ನು ಹದಗೆಡಿಸಿರುವ ದುರಂತವನ್ನು ಖಂಡಿತಕ್ಕೂ ಎದುರಿಸಬೇಕೆಂಬುದು ಪ್ರಶ್ನಾತೀತವಾದ್ದು. ಕಪ್ಪು ಹಣದ ವಿರುದ್ಧ ತೆಗೆದುಕೊಳ್ಳಲಾಗುವ ಯಾವುದೇ ಕ್ರಮವು ಶ್ರೀಮಂತರಿಗೆ ಪೆಟ್ಟು ನೀಡಿ ಬಡವರಿಗೆ ಸಹಾಯಕವಾಗುತ್ತದೆಂದು ಅಮಾಯಕ ಶ್ರೀಸಾಮಾನ್ಯರು ನಂಬಬೇಕೆಂದು ನಿರೀಕ್ಷಿಸುವುದು ಬೇಡ. ಕಪ್ಪು ಆರ್ಥಿಕತೆಯ ವಿರುದ್ಧದ ಯಾವುದೇ ಕಾರ್ಯಾಚರಣೆಯ ಗೆಲುವು ಇಲ್ಲವೇ ಸೋಲಿನ ಪ್ರಮಾಣವನ್ನು ಲೆಕ್ಕಹಾಕಲು ಶ್ರೀಮಂತರ ಬೊಕ್ಕಸಗಳಿಂದ ಬಡವರಿಗೆ ಎಷ್ಟು ಸಂಪತ್ತಿನ ಮರುಹಂಚಿಕೆಯಾಯಿತೆಂಬುದನ್ನು ನಿಖರವಾಗಿ ಪರಿಮಾಣಾತ್ಮಕವಾಗಿ ಹೇಳಬೇಕು. ಈ ಇಡೀ ಪ್ರಕ್ರಿಯೆಯಲ್ಲಿ ಮಧ್ಯಸ್ತಿಕೆ ವಹಿಸಿ ನಿರ್ದೇಶಿಸುವ ಜವಾಬ್ದಾರಿಯು ಪ್ರಭುತ್ವದ್ದಾಗಿರುತ್ತದೆ. ಇದರಲ್ಲಿ ಮೂಲಭೂತವಾದ ಇಂಗಿತವೇನೆಂದರೆ ಕಪ್ಪು ಆರ್ಥಿಕತೆಯ ವಿರುದ್ಧದ ಯಾವುದೇ ಕಾರ್ಯಾಚರಣೆಯು ದುಡಿಯುವ ಜನತೆಗೆ ಲಾಭದಾಯಕವಾಗಿರಬೇಕು ಎಂಬುದು. ಇಂದಿನ ನೋಟಿನ ರದ್ದತಿಯ ಯೋಜನೆಯನ್ನು ಈ ತಕ್ಕಡಿಯಲ್ಲಿಟ್ಟು ತೂಗಿ ನೋಡೋಣ. ಯೋಜನೆಯ ಪರಾಮರ್ಶೆಗೆ ಇದೇ ಮೂಲಸೂತ್ರ. ನಮ್ಮ ದೇಶವು ಎದುರಿಸುತ್ತಿರುವ ಭೀಕರ ಸನ್ನಿವೇಶದ ಹಿನ್ನೆಲೆಯಲ್ಲಿ ಸದ್ಯದ ಯೋಜನೆಯನ್ನು ಪರಿಶೀಲಿಸುವುದು ಸುಸಂಗತವಾಗಿರುತ್ತದೆ.

**ಬ್ಯಾಂಕುಗಳು ಮತ್ತು ಕಾರ್ಪೊರೇಟ್ ಜಗತ್ತು**

ವ್ಯವಹಾರ ನಡೆಸುತ್ತಿರುವ ಕಾರ್ಪೊರೇಟ್ ಸಂಸ್ಥೆಗಳ ಅತ್ಯುಚ್ಚ ಹಂತದ ಹತ್ತು ಸಂಸ್ಥೆಗಳು ಮಾರ್ಚ್ ೨೦೧೫ರ ಯಾದಿಯಂತೆ ಒಟ್ಟು ೫ ಲಕ್ಷ ಕೋಟಿ ರೂಪಾಯಿಗಳಿಗೂ ಅಧಿಕವಾಗಿ ಬ್ಯಾಂಕುಗಳಿಂದ ಪಡೆದಿದ್ದ ಸಾಲವನ್ನು ಉಳಿಸಿಕೊಂಡಿವೆ. ನಮ್ಮೆಲ್ಲ ಘನಂದಾರಿ ಭಾರತೀಯ ಕಾರ್ಪೊರೇಟ್ ಸಂಸ್ಥೆಗಳೂ ಈ ಪಟ್ಟಿಯಲ್ಲಿವೆ. ಅನಿಲ್ ಅಂಬಾನಿ ಬಣ, ಅದಾನಿ ಬಣ, ಎಸ್ಸಾರ್ ಬಣದ ರೂಯಿಯಾಗಳು, ಜಿಂದಾಲ್ ಬಣ, ಟಾಟಾ ಸ್ಟೀಲ್, ಇವು ಪಟ್ಟಿಯಲ್ಲಿ ಪ್ರಧಾನವಾಗಿ ಕಾಣಿಸಿಕೊಳ್ಳುತ್ತವೆ. ಈ ಸಾಲಗಾರ ಕಂಪನಿಗಳಲ್ಲಿ ಕೆಲವು, ತಾವು ಪಡೆದಿದ್ದ ಸಾಲಗಳ ಮೇಲಿನ ಬಡ್ಡಿಯನ್ನು ತೆರಲು ಸಹ ಅಶಕ್ತವಾಗಿದ್ದುವೆಂದು 'ದಿ ಹಿಂದು' ಪತ್ರಿಕೆಯು ತನ್ನ ೨೦೧೬ರ ಮೇ ೯ರ ಸಂಚಿಕೆಯಲ್ಲಿ ವರದಿ ಮಾಡಿತ್ತು. ಭಾರತೀಯ ರಿಸರ್ವ್ ಬ್ಯಾಂಕ್‌ನ ಮಾಜಿ ಗವರ್ನರ್ ರಘುರಾಂ ರಾಜನ್‌ರ ನೇತೃತ್ವದಲ್ಲಿ ಈ ಕಂಪನಿಗಳ ಸಂಪತ್ತಿನ ಗುಣಾತ್ಮಕತೆಯ ತನಿಖೆ ನಡೆಸಲ್ಪಟ್ಟಿದ್ದಿತು. ಅಂದರೆ, ಸಾಲದ ಮೊತ್ತವನ್ನು ಯಾವುದಕ್ಕೆ ಬಳಸಲಾಗಿತ್ತು, ಅದು ಎಷ್ಟು ಉತ್ಪಾದಕವಾಗಿತ್ತು, ಇತ್ಯಾದಿಗಳ ಅಧ್ಯಯನ. ಸಾಲ ಪಡೆದಿದ್ದ ಯಾವ ಕಂಪನಿಗಳು ಹಣವನ್ನು ಅನುತ್ಪಾದಕಗೊಳಿಸಿದ್ದುವು ಎಂಬುದನ್ನು ವಿಂಗಡಿಸಿ ಉಲ್ಲೇಖಿಸಲಾಗಿತ್ತು. ಬ್ಯಾಂಕುಗಳು ನೀಡಿದ್ದ ಸಾಲಗಳನ್ನು ಹೇಗಾದರೂ ಹಿಂಪಡೆಯಲು ಯತ್ನಿಸಬೇಕಾದ ತುರ್ತನ್ನು ರಾಜನ್ ಆಗ ಒತ್ತಿಹೇಳಿದ್ದರು. ಹಾಗೆ ಹಿಂಪಡೆಯದೆ ಮತ್ತೆ ಸಾಲಗಳನ್ನು ಬಿಡುಗಡೆ ಮಾಡಕೂಡದೆಂದೂ ಅವರು ಆಗ್ರಹಿಸಿದ್ದರು.






## ಸಾರ್ವಜನಿಕ ವಲಯದ ಬ್ಯಾಂಕುಗಳ ಮರು ಬಂಡವಾಳೀಕರಣ

೨೦೧೪-೧೫ರ ಮುಂಗಡ ಪತ್ರವನ್ನು ಕುರಿತ ಭಾಷಣದಲ್ಲಿ ಅರ್ಥಸಚಿವ ಅರುಣ್ ಜೇಟ್ಲಿ ಹೇಳಿದ್ದಂತೆ ನಮ್ಮ ದೇಶದ ಸಾರ್ವಜನಿಕ ವಲಯದ ಬ್ಯಾಂಕುಗಳಿಗೆ ೨೦೧೮ರ ವೇಳೆಗೆ ೨.೪ ಲಕ್ಷ ಕೋಟಿ ರೂಪಾಯಿಗಳು ಬೇಕಾಗುತ್ತದೆ. ಅಷ್ಟು ಹಣವನ್ನು ತುಂಬಿಕೊಳ್ಳದಿದ್ದರೆ ಆ ಬ್ಯಾಂಕುಗಳಿಗೆ ತಮ್ಮ ಬಂಡವಾಳ ಮತ್ತು ತಾವು ನೀಡುವ ಸಾಲದ ಅನುಪಾತವನ್ನು ನಿರ್ದಿಷ್ಟವಾಗಿ ವಿಧಿಸಿರುವಂತೆ ಕಾಯ್ದುಕೊಳ್ಳಲು ಸಾಧ್ಯವಾಗದೆಂದು ಅವರು ತಿಳಿಸಿದ್ದರು. ಈ ಅನುಪಾತವು ಬ್ಯಾಸೆಲ್-೩ ಎಂಬುದರ ನಿಗದಿಯಂತೆ ಅವಶ್ಯಕ. ಹೀಗಿರುವಾಗ ಪರಿಹಾರವೇನು ? ಸಾರ್ವಜನಿಕ ವಲಯದ ಬ್ಯಾಂಕುಗಳಿಗೆ ಸರ್ಕಾರವು ಬಂಡವಾಳವನ್ನು ತುಂಬಿಕೊಡಬೇಕು. ೨೦೧೪-೧೫ರ ಅವಧಿಯಲ್ಲಿ ಆಯ್ದ ಕೆಲವು ಬ್ಯಾಂಕುಗಳಿಗೆ ಈ ರೀತ್ಯಾ ಸುಮಾರು ಏಳು ಸಾವಿರ ಕೋಟಿ ರೂಪಾಯಿಗಳನ್ನು ಸರ್ಕಾರವು ತುಂಬಿಕೊಟ್ಟಿತ್ತು. ಆಗಸ್ಟ್ ೨೦೧೫ರಲ್ಲಿ ಸರ್ಕಾರವು ನಾಲ್ಕು ವರ್ಷಗಳಲ್ಲಿ ಎಪ್ಪತ್ತು ಸಾವಿರ ಕೋಟಿ ರೂಪಾಯಿಗಳ ಮರುಬಂಡವಾಳ ತುಂಬಿಕೊಡಲು ನಿರ್ಧಾರವನ್ನು ಪ್ರಕಟಿಸಿತ್ತು. ಅದರಲ್ಲಿ ೨೦೧೫-೧೬ರ ಅವಧಿಯಲ್ಲಿ ತುಂಬಿಕೊಡಬೇಕಾದ ಮೊತ್ತವು ೨೫,೦೦೦ ಕೋಟಿ ರೂಪಾಯಿಗಳೆಂದು ಹೇಳಲಾಗಿತ್ತು. ಮರುಬಂಡವಾಳ ತುಂಬಿಕೊಡಲು ಈ ಮೊತ್ತವು ಸಹ ಅವಶ್ಯಕತೆಗಿಂತಲೂ ಬಹಳ ಕಡಿಮೆಯೇ.

ಬಂಡವಾಳದ ಕೊರತೆಯು ಬ್ಯಾಂಕುಗಳು ಸಾಲ ನೀಡುವ ಸಾಮರ್ಥ್ಯವನ್ನು ಬಹಳ ಕುಗ್ಗಿಸುತ್ತದೆ. ಸಾಲ ಪಡೆಯುವವರಲ್ಲಿ ಪ್ರಮುಖ ಸ್ಥಾನವಿರುವುದು ಕಾರ್ಪೊರೇಟ್ ವಲಯದವರಿಗೆ. ಬ್ಯಾಂಕುಗಳ ಬಂಡವಾಳ ಕೊರತೆಯು ಈ ವಲಯಕ್ಕೆ ಒಂದು ಭಾರಿ ಪೆಟ್ಟು. ಅದಕ್ಕೆ ಎರಡು ಕಾರಣಗಳಿವೆ : (ಅ) ಮುಂದೆ ದೊರಕಬಹುದಾದ ಸಾಲವು ಅನಿಶ್ಚಿತವಾಗುತ್ತದೆ, ಮತ್ತು (ಆ) ಬ್ಯಾಂಕುಗಳ ಮೇಲೆ ರಿಸರ್ವ್ ಬ್ಯಾಂಕಿನ ತಗಾದೆಯು ಹೆಚ್ಚಿ ಈವರೆಗೆ ಹಿಂದಿರುಗಿಸದಿರುವ ಸಾಲಗಳ ಮೊತ್ತವನ್ನು ಹಿಂದಿರುಗಿಸಬೇಕಾದ ಕಠಿಣ ಪರಿಸ್ಥಿತಿಯನ್ನೆದುರಿಸಬೇಕಾಗುತ್ತದೆ.

## ಬ್ಯಾಂಕುಗಳ ಅನುತ್ಪಾದಕ ಆಸ್ತಿ ಮತ್ತು ಕಾರ್ಪೊರೇಟ್‌ಗಳು

ಸಾರ್ವಜನಿಕ ವಲಯದ ಬ್ಯಾಂಕುಗಳು ಅನುತ್ಪಾದಕ ಆಸ್ತಿಗಳ ಹೊರೆಯಿಂದ ಕುಗ್ಗಿಹೋಗಿವೆ. ವಿಶ್ಲೇಷಣೆಯು ಸುಗಮವಾಗಲು ಆ ಹೊರೆಯನ್ನು ಎರಡು ವಿಧವಾಗಿ ವಿಂಗಡಿಸಿಕೊಳ್ಳೋಣ :

(ಅ) ಸಾರ್ವಜನಿಕ ವಲಯದ ಬ್ಯಾಂಕುಗಳಿಗೆ ಆದ್ಯತೆಯ ವಲಯವನ್ನು ಗುರುತಿಸಲಾಗಿರುತ್ತದೆ. ಅವು ನೀಡುವ ಒಟ್ಟು ಸಾಲದ ಶೇ. ೪೦ರಷ್ಟನ್ನು ಈ ವಲಯಗಳಿಗೆ ನೀಡಬೇಕು. ಅವು ಯಾವುವೆಂದರೆ ಕೃಷಿ, ಚಿಕ್ಕ ಉದ್ಯಮಗಳು, ಶಿಕ್ಷಣ, ವಸತಿಗೃಹಗಳು, ಇತ್ಯಾದಿ. ಸಾರ್ವಜನಿಕ ವಲಯದ ಬ್ಯಾಂಕುಗಳು ಈಚಿನ ದಿನಗಳಲ್ಲಿ ಆದ್ಯತೆಯ ವಲಯವೆಂಬುದನ್ನು ನಗಣ್ಯವೆಂಬಂತೆ ದೂರಮಾಡಿಬಿಟ್ಟಿವೆ. ಅದರ ಬದಲಾಗಿ ಮಧ್ಯವರ್ತಿಗಳಾದ ಕಡಿಮೆ ಪ್ರಮಾಣದ ಹಣಕಾಸು ಕಂಪನಿಗಳು, ಸ್ವಸಹಾಯ ಗುಂಪುಗಳು, ಇತ್ಯಾದಿಗಳನ್ನು ಆದ್ಯತೆಯ ವಲಯದಲ್ಲಿ ಸಾಲ ನೀಡುವ ಸಂಸ್ಥೆಗಳನ್ನಾಗಿ ಪರಿಗಣಿಸಿವೆ. ಬ್ಯಾಂಕುಗಳು ಈ ಮೈಕ್ರೋ – ಹಣಕಾಸು ಕಂಪನಿಗಳಿಗೆ ಸಾಲ ನೀಡುತ್ತವೆ ಮತ್ತು ಆ ಕಂಪನಿಗಳು ಸ್ವಸಹಾಯ ಗುಂಪುಗಳಿಗೆ ಹಾಗೂ ವ್ಯಕ್ತಿಗಳಿಗೆ ಸಾಲ ನೀಡುತ್ತವೆ. ಇದರ ಪರಿಣಾಮವು ಘೋರವಾಗಿದೆ, ಏಕೆಂದರೆ ಬಡ್ಡಿ ದರವು ಕೆಲವೊಮ್ಮೆ ವರ್ಷಕ್ಕೆ ಶೇ. ೨೮ರಷ್ಟು ಆಗಿಬಿಡುತ್ತದೆ. ಚಿಕ್ಕಪುಟ್ಟ ಉತ್ಪಾದಕರು, ರೈತರು, ಮನೆಗಳ ಮಾಲೀಕರು, ಮುಂತಾದವರು ಸಾಲದ ಮರುಪಾವತಿಯಲ್ಲಿ ಹಿಂತೆಗೆದಾಗ ಬ್ಯಾಂಕುಗಳು ಅವರನ್ನೆಲ್ಲಾ "ಅನುತ್ಪಾದಕ ಆಸ್ತಿಗಳು" (ಎನ್‌ಪಿಎ) ಎಂಬ ವಿಭಾಗಕ್ಕೆ ಸೇರಿಸಿಬಿಡುತ್ತವೆ.

(ಆ) ಕಳೆದ ೧೫ ವರ್ಷಗಳಲ್ಲಿ ಸರ್ಕಾರವು ಅಧಿಕ ಒತ್ತಡ ಹೇರಿ ಬ್ಯಾಂಕುಗಳನ್ನು ಮೂಲ ಸೌಲಭ್ಯಗಳಾದ ವಿಮಾನ ನಿಲ್ದಾಣಗಳು, ಬಂದರುಗಳು, ರಸ್ತೆಗಳು, ವಿದ್ಯುದುತ್ಪಾದನೆ, ಮುಂತಾದುವನ್ನು ವೃದ್ಧಿಪಡಿಸಲು ಸಾಲಗಳನ್ನು ನೀಡುವಂತೆ ಮಾಡುತ್ತಾ ಬಂದಿದೆ. ಈ ಬಾಬ್ತಿನಲ್ಲಿ ೨೦೧೨-೧೩ರ ಅವಧಿಯಲ್ಲಿ ಬ್ಯಾಂಕುಗಳು ನೀಡಿದ ಸಾಲಗಳು ಸುಮಾರು ನೂರುಪಟ್ಟು ಜಾಸ್ತಿಯಾಗಿವೆ. ೧೯೯೯-೨೦೦೦ದಲ್ಲಿದ್ದ ೭೨೪ ಕೋಟಿ ರೂಪಾಯಿಗಳ ಜಾಗದಲ್ಲಿ ೨೦೧೨-೧೩ರಲ್ಲಿ ೭೮,೬೦೫ ಕೋಟಿ ರೂಪಾಯಿಗಳಿಗೆ ಏರಿತ್ತು. ಬ್ಯಾಂಕುಗಳಲ್ಲಿ ವಸೂಲಾಗದೆ ಉಳಿದಿರುವ ಸಾಲಗಳು ಬಹುದೊಡ್ಡ ಪ್ರಮಾಣದಲ್ಲಿ ಕಾರ್ಪೊರೇಟ್ ವಲಯಕ್ಕೆ ಸೇರಿದುವೇ ಆಗಿವೆ. ಹೀಗೆ ಕಾರ್ಪೊರೇಟುಗಳು ತೀರಿಸಿಲ್ಲದ ಸಾಲಗಳನ್ನು ಮರುಸಾಲಗಳನ್ನಾಗಿ ಪರಿವರ್ತಿಸಿ ರಾಜಕೀಯ ಮತ್ತು ವ್ಯಾಪಾರಿ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳಲಾಗುತ್ತಿದೆ.

ಒಟ್ಟಿನಲ್ಲಿ, ಕಳೆದ ಐದು ವರ್ಷಗಳಲ್ಲಿ ಆದ್ಯತೆಯ ವಲಯವನ್ನು ಹಿಂದಿಕ್ಕಿ ಅನಾದ್ಯತೆಯ ವಲಯವು ಸಾಲಗಳನ್ನು ಉಳಿಸಿಕೊಳ್ಳುವುದರಲ್ಲಿ ಮೇಲುಗೈ ಪಡೆದಿದೆ. ೨೦೧೫ರಲ್ಲಿ ಈ ಅನಾದ್ಯತೆಯ ವಲಯವು (ವಿಮಾನ ನಿಲ್ದಾಣ, ಇತ್ಯಾದಿ) ತೀರಿಸದೆ ಉಳಿಸಿಕೊಂಡಿರುವ ಸಾಲವು ಒಟ್ಟು ಬಾಕಿ ಸಾಲದ ಶೇ. ೬೫ರಷ್ಟಾಗಿತ್ತೆಂದು ೨೦೧೫ರ ರಿಸರ್ವ್ ಬ್ಯಾಂಕ್‌ನ ಮಾಹಿತಿ ಲಭ್ಯವಿದೆ. ನೋಟುಗಳ ರದ್ದತಿಯ ಪ್ರಸ್ತುತ ಪ್ರಕ್ರಿಯೆಯನ್ನು ಈ ಹಿನ್ನೆಲೆಯಲ್ಲಿ ನೋಡಬೇಕು ಮತ್ತು ಇಂತಹ ನೋಟು ರದ್ದತಿಯು ಸಮಾಜದ ವಿವಿಧ ವರ್ಗಗಳ ಮೇಲೆ ಎಂತಹ ಪರಿಣಾಮಗಳನ್ನು ಬೀರಿದೆಯೆಂಬುದನ್ನು ಅರಿತುಕೊಳ್ಳಬೇಕು.

## ನೋಟುಗಳ ರದ್ದತಿಯ ಒಂದು ವಿಶ್ಲೇಷಣೆ

ಈಗಾಗಲೆ ತಿಳಿಸಿರುವಂತೆ ನೋಟುಗಳ ರದ್ದತಿ ಯೋಜನೆಯನ್ನು ಕಾರ್ಪೊರೇಟುಗಳ ಸಾಲ ಹೆಚ್ಚಳಗಳ ಹಿನ್ನೆಲೆಯಲ್ಲಿ ಅರ್ಥೈಸಿಕೊಳ್ಳಬೇಕು. ಜೊತೆಗೆ, ಬ್ಯಾಂಕುಗಳು ಸಾಲ ನೀಡುವ ಸಾಮರ್ಥ್ಯವನ್ನು ಬಹಳ ಮೊಟಕುಗೊಳಿಸಿಕೊಂಡಿರುವ ಹಿನ್ನೆಲೆಯನ್ನೂ ಗಮನಿಸಬೇಕು. ಈಗಿನ ನೋಟು ರದ್ದತಿಯ ಯೋಜನೆಯು ಈ ಎರಡೂ ಸಮಸ್ಯೆಗಳನ್ನು ಜಾಣತನದಿಂದ ಸಲೀಸಾಗಿ ಎದುರಿಸಲು ಪ್ರವೃತ್ತವಾಗಿದೆ. ಈ ಸಂದರ್ಭದಲ್ಲಿ ಒಂದು ಸ್ಪಷ್ಟನೆ ಅಗತ್ಯವಾಗಿದೆ. ಕಪ್ಪು ಆರ್ಥಿಕತೆ ಎಂದಾಗ ಮುಖ್ಯವಾಗಿ ಗಣನೆಗೆ ಬರುವುದು "ಲೆಕ್ಕಕ್ಕೆ ಸಿಕ್ಕಿಲ್ಲದ ಸಂಪತ್ತು." ಇದು ಶೇಖರಣೆಗೊಳ್ಳುವುದು ಆಸ್ತಿ, ಸರಕುಗಳು ಮತ್ತು ಉತ್ಪನ್ನಗಳ ಮೌಲ್ಯವನ್ನು ಕಡಿಮೆ ಪ್ರಮಾಣದಲ್ಲಿ ದಾಖಲಿಸುವುದು ಮತ್ತು ತನ್ಮೂಲಕ ತೆರಿಗೆ ಕೊಡುವುದರಿಂದ ತಪ್ಪಿಸಿಕೊಳ್ಳುವುದರ ಮೂಲಕ. ಕಪ್ಪು ಹಣ ಮತ್ತು ಲೆಕ್ಕಕ್ಕೆ ಸಿಗದ ಸಂಪತ್ತು, ಇವುಗಳನ್ನು ಪ್ರತ್ಯೇಕಿಸಿ ತುಲನೆ ಮಾಡುವುದು ಬಹಳ ತೊಡಕಿನ ವಿಚಾರ. ಕಪ್ಪು ಹಣವೆಂದರೆ ನಗದು ಹಣವನ್ನು ಹಣವಾಗಿಯೇ ಬಚ್ಚಿಟ್ಟುಕೊಂಡ ಹಣ, ಆದರೆ ಲೆಕ್ಕಕ್ಕೆ ಸಿಗದ ಸಂಪತ್ತು ಎಲ್ಲ ವಿಧದ ಕಾನೂನುಬಾಹಿರ ವ್ಯವಹಾರಗಳಲ್ಲಿ ಕೂಡಿಹಾಕಿಕೊಂಡಿರುವ ಸಂಪತ್ತಾಗಿರುತ್ತದೆ. ಅದು ನಗದು ರೂಪದಲ್ಲಿರಬಹುದು, ಚಿನ್ನ, ಮುಂತಾದ ದ್ರವ್ಯರೂಪದಲ್ಲಿರಬಹುದು, ಇಲ್ಲವೇ ತೆರಿಗೆಯ ವಂಚನೆ ಮಾಡಲು ಹೊರದೇಶಗಳಲ್ಲಿ ಗುಪ್ತವಾಗಿರಿಸಲ್ಪಟ್ಟ ಹಣದ ರೂಪದಲ್ಲಿರಬಹುದು.

ಆದ್ದರಿಂದ ಕಪ್ಪು ಹಣ ಮತ್ತು ಲೆಕ್ಕಕ್ಕೆ ಮಾತ್ರವೇ ಇರುವ ಸಂಪತ್ತು, ಇವನ್ನು ಒಂದೇ ಎಂಬಂತೆ ಪರಿಭಾವಿಸಿಕೊಳ್ಳುವುದು ಮೂರ್ಖತನದ ಪರಮಾವಧಿಯೇ ಸರಿ.

ಆದಾಯ ತೆರಿಗೆಯ ಪಾವತಿ ಮಾಡಿಲ್ಲವೆಂಬ ಕಾರಣಕ್ಕೆ ಆಗಾಗ್ಗೆ ಆ ಇಲಾಖೆಯವರು ಧಾಳಿ ನಡೆಸಿ ಹಣವನ್ನು ಜಪ್ತಿ ಮಾಡಿರುವುದುಂಟು. ಇಂತಹ ಧಾಳಿಗಳ ವೇಳೆ ಲೆಕ್ಕಕ್ಕೆ ಸಿಕ್ಕಿರದ ಇಲ್ಲವೇ ಕರಿಯ ಸಂಪತ್ತಿನಲ್ಲಿ ನಗದು ರೂಪದಲ್ಲಿ ಸಿಕ್ಕಿರುವುದು ಕೇವಲ ಶೇ. ೬ರಷ್ಟೆಂದು ಹಿಂದುಸ್ತಾನ್ ಟೈಮ್ಸ್ ಪತ್ರಿಕೆಯ ಒಂದು ವರದಿ ತಿಳಿಸಿದೆ. ಪ್ರಧಾನಿ ಮೋದಿಯವರು ಶ್ರೀಮಂತರು ಹಣವನ್ನು ಬಚ್ಚಿಡುವುದನ್ನು ಕುರಿತಂತೆ ಒಂದು ಪ್ರತಿಮೆಯನ್ನು ಬಳಸಿ ಹೇಳಿದ್ದಾರೆ : ಹಾಸಿಗೆಗಳಲ್ಲಿ ಮತ್ತು ದಿಂಬುಗಳಲ್ಲಿ ನಗದು ಹಣವನ್ನು ತುಂಬಿ ಕೊಂಡಿರುತ್ತಾರೆ, ಎಂದು. ಇದು ಅಸ್ತಿತ್ವ ದಲ್ಲಿರುವ ವಿದ್ಯಮಾನದಿಂದ ಸಾಬೀತಾಗಿಲ್ಲ. ಅರ್ಥಶಾಸ್ತ್ರಜ್ಞರೊಬ್ಬರು ಇದನ್ನು ನಿರೂಪಿಸುವಾಗ ಹೇಳಿರುವುದಿದು : "ಕಪ್ಪುಹಣವು ಶೇಖರಣೆಯಾಗಿ ಮೂಟೆಯಲ್ಲಿ ತುಂಬಿರುವಂಥದಲ್ಲ, ಅದು ಹರಿಯುತ್ತಿರುತ್ತದೆ. ಕಪ್ಪು ಚಟುವಟಿಕೆಗಳು ಬಿಳಿಯ ಚಟುವಟಿಕೆಗಳಂತೆಯೇ ವ್ಯವಹಾರಸ್ಥರಿಗೆ ಲಾಭ ಗಳಿಕೆಯಲ್ಲಿ ತೊಡಗಿಸಿರಲಾಗುತ್ತವೆ. ಹಣವನ್ನು ಮೂಟೆಯಲ್ಲಿ ಕಟ್ಟಿಟ್ಟಿದ್ದರೆ ಅದು ಲಾಭ ಗಳಿಸುವುದಿಲ್ಲ. ಮಾರ್ಕ್ಸ್ ಹೇಳಿದ್ದ, ಜಿಪುಣನು ಬಂಡವಾಳವನ್ನು ತುಂಬಿಟ್ಟುಕೊಳ್ಳುತ್ತಾನೆ, ಆದರೆ ಬಂಡವಳಿಗನು ಅದನ್ನು ಚಲಾವಣೆಗೆ ಬಿಟ್ಟಿರುತ್ತಾನೆ ಎಂದು." ಇದು ಅತಿಸಾಮಾನ್ಯ ತಿಳಿವಳಿಕೆ : ನಗದನ್ನು ಮೂಟೆಯಲ್ಲಿ ಕಟ್ಟಿಟ್ಟುಕೊಂಡರೆ ಅದರ ಮೌಲ್ಯ ಕಡಿಮೆಯಾಗುತ್ತಿರುತ್ತದೆ. ಇಂದು ಒಂದು ಕೋಟಿ ರೂಪಾಯಿಗಳನ್ನು ಹಾಗೆ ತುಂಬಿ ಬಚ್ಚಿಟ್ಟು ಕೊಂಡರೆ ಒಂದು ವರ್ಷದಲ್ಲಿ ಅದರ ಮೌಲ್ಯ ಕುಗ್ಗಿರುತ್ತದೆ. ಹಣದುಬ್ಬರವು ಅದಕ್ಕೆ ಕಾರಣ. ಅದೇಕೋ ಏನೋ ನಮ್ಮ ದೇಶದ ಪ್ರಧಾನಿಯವರಿಗೆ ಈ ಸಾಮಾನ್ಯ ತಿಳಿವಳಿಕೆ ಮತ್ತು ವಸ್ತುಸ್ಥಿತಿ ಅರಿವಾಗುವುದು ವಿರಳ. ಈಗಲೂ ಅದೇ ಮುಂದುವರಿದಿದೆಯೆಂದು ಹೇಳಬೇಕಾಗಿದೆ. ಕರಿಯ ಆರ್ಥಿಕತೆಯ ಮೇಲೆ "ಶಸ್ತ್ರಚಿಕಿತ್ಸಾ ಮಾದರಿಯ ಹೊಡೆತ" ನೀಡಿರುವುದಾಗಿ ಭಾವಿಸುವ ಪ್ರಧಾನಿ ತೀರಾ ಸುಳ್ಳು ಕಲ್ಪನೆಗಳಿಂದ ಮತ್ತು ಮಾಮೂಲಿ ಉಪದೇಶಗಳಿಂದ ಮಾತನಾಡುತ್ತಿದ್ದಾರೆ.

ಪ್ರಧಾನಿಯವರ ಅಪ್ಪಟ "ಭಕ್ತರು" ಸಹ ನೋಟಿನ ರದ್ದತಿಯ ಘೋಷಣೆಗೆ ಮುನ್ನ ಸಾಕಷ್ಟು ಸಿದ್ಧತೆ ಮಾಡಿಕೊಂಡಿರಲಿಲ್ಲವೆಂಬುದನ್ನು ಕಂಡು ಸ್ತಂಭೀಭೂತರಾಗಿದ್ದಾರೆ. ೫೦೦ ಮತ್ತು ೧೦೦೦ ರೂಪಾಯಿ ಮೊತ್ತದ ಇಡೀ ನೋಟುಗಳನ್ನು ಚಲಾವಣೆಯಿಂದ ಹೊರದೂಡಿದರೆ ಅದರ ಒಟ್ಟು ಮೌಲ್ಯ ಸುಮಾರು ೧೫ ಲಕ್ಷ ಕೋಟಿಗಳಷ್ಟಾಗಿರುತ್ತದೆ. ಅಷ್ಟು ದೊಡ್ಡ ಪ್ರಮಾಣದ ಮೊಬಲಗನ್ನು ೫೦೦ ಮತ್ತು ೨೦೦೦ ರೂಪಾಯಿಗಳ ನೋಟುಗಳ ರೂಪದಲ್ಲಿ ಮತ್ತೆ ತುಂಬಬೇಕಾದರೆ ಅದೆಷ್ಟು ಪೂರ್ವಸಿದ್ಧತೆ ಮಾಡಿಕೊಂಡಿರಬೇಕಾಗಿತ್ತು! ಜೊತೆಗೆ, ಈ ಮೌಲ್ಯದ ನೋಟುಗಳಿಗೆ ಸರಿದೂಗುವಂತೆ ಕಡಿಮೆ ಮೌಲ್ಯಗಳ ನೋಟುಗಳ ಸರಬರಾಜು ಸಹ ಬೇಕಾಗಿದ್ದಿತು. ಇಲ್ಲ, ದೇಶದ ಪ್ರಧಾನಿಯವರ ಅಗಾಧ ದೃಷ್ಟಿಗೆ ಇಡೀ ಮೊತ್ತದ ಮರುತುಂಬುವಿಕೆಯ ಪ್ರಶ್ನೆಯು ಗೋಚರಿಸಲೇ ಇಲ್ಲ. ಅದಕ್ಕೆ ಬದಲಾಗಿ ತಮ್ಮ ಜೀವಕ್ಕೆ ಕುತ್ತುಂಟಾಗುವ ಸಾಧ್ಯತೆಯನ್ನು ಕುರಿತು ಮೊಸಳೆಕಣ್ಣೀರು ಸುರಿಸಿದರು ಮತ್ತು ೫೦ ದಿನಗಳ ಕಾಲ ಸಹನೆಯಿಂದಿರಬೇಕೆಂದು ದೇಶವನ್ನು ಬೇಡಿಕೊಂಡರು. ನೋಟುಗಳ ರದ್ದತಿಯಂತಹ ಬೃಹತ್ ಯೋಜನೆಯನ್ನು ಕೈಗೆತ್ತಿಕೊಳ್ಳುವಾಗ ಪೂರ್ವಸಿದ್ಧತೆಯು ಪೂರ್ಣಮಟ್ಟದಲ್ಲಿ ಇರದಿದ್ದರೆ ಅದೊಂದು ಅಕ್ಷಮ್ಯವಾದ ತಪ್ಪಾಗುತ್ತದೆ, ಅದಕ್ಕೆ ಯಾವ ವಿವರಣೆಯೂ ಸಮಂಜಸವಾಗಿರುವುದಿಲ್ಲ. ಅಂತಹ ಯೋಜನೆಯನ್ನು ಕಾರ್ಯಗತಗೊಳಿಸುವಾಗ ಬೇಜವಾಬ್ದಾರಿತನ ಮತ್ತು ನಿರಾಳವಾದ ತಿಳಿವಳಿಕೆಯು ನಿಜಕ್ಕೂ ಪರಮಾಶ್ಚರ್ಯ ಮೂಡಿಸುತ್ತವೆ. ಬ್ಯಾಂಕುಗಳೆದುರು ಕೊನೆಯೇ ಇಲ್ಲದ ಉದ್ದುದ್ದದ ಸಾಲುಗಳಲ್ಲಿ ಜನ ನಿಂತಿರುತ್ತಿದ್ದುದನ್ನು ನೆನಪಿಸಿಕೊಂಡರೆ ನೋಟುಗಳ ಅಭಾವ




# ಧರ್ಮಾರ್ಥ

ಶಿಕ್ಷಣ ಸರ್ವರ ಧರ್ಮವೆನಲು,
ಹಕ್ಕು ಎಂಬರ್ಥವಲ್ಲವೇ ಧರ್ಮಕೆ ?

ಧರ್ಮಾತ್ಮನೋರ್ವನೆನಲು,
ಕರುಣೆ, ದಾನ ಎಂಬರ್ಥವಲ್ಲವೇ ಧರ್ಮಕೆ ?

ದೇವರ ಧರ್ಮದರುಶನವೆನಲು
ಉಚಿತ ಎಂಬರ್ಥವಲ್ಲವೇ ಧರ್ಮಕೆ ?

ಪಾಲಿಸುವುದೊಂದು ಧರ್ಮವನೆನಲು,
ಮತ, ಕೋಮಲ ಎಂಬರ್ಥವಲ್ಲವೇ ಧರ್ಮಕೆ ?

ಕೆಲವರ ಲೋಭಕೆ, ಜಗವೇ ಧರ್ಮದ
ಅಪಾರ್ಥಗಳಿಗೆ ಹೋರಾಡಬೇಕೇಕೆ ?

**ಎಸ್. ಅಶೋಕ್**
೩–೦೦೮, ಎಟಿಬಿ ಸೆಲಡಾನ್, ಬೈತ್ರ ಸಂತೆ ಸಮೀಪ,
ಚಿಕ್ಕಜಾಲ ರಸ್ತೆ, ಶಿವನಹಳ್ಳಿ, ಯಲಹಂಕ,
ಬೆಂಗಳೂರು – ೫೬೦ ೦೬೪

ಎಷ್ಟು ತೀವ್ರತರವಾಗಿದ್ದಿತೆಂಬುದು ತಿಳಿಯುತ್ತದೆ. ಇನ್ನೂ ಪ್ರಮುಖವಾಗಿ, ತಮ್ಮದೇ ಠೇವಣಿಯಲ್ಲಿನ ಹಣವನ್ನು ಪಡೆದುಕೊಳ್ಳಲು ಇಲ್ಲವೇ ತಮ್ಮಲ್ಲಿದ್ದ ರದ್ದತಿಯ ನೋಟುಗಳನ್ನು ಬದಲಾಯಿಸಿಕೊಳ್ಳಲು ಅವೆಷ್ಟು ನಿಬಂಧನೆಗಳು ! ಇಂತಿಷ್ಟನ್ನು ಮೀರಿ ಹಣವನ್ನು ಪಡೆಯಕೂಡದೆಂದು ವಿಧಿಸಿದ್ದ ನಿಯಮವು ದೇಶದಲ್ಲಿ ನೋಟುಗಳ ಅವಶ್ಯಕತೆಯು ಯಾವ ಮಟ್ಟದ್ದೆಂಬುದನ್ನು ಸಂಪೂರ್ಣವಾಗಿ ತಪ್ಪು ಲೆಕ್ಕಾಚಾರ ಮಾಡಿಕೊಳ್ಳಲಾಗಿತ್ತೆಂಬುದಕ್ಕೆ ಸಾಕ್ಷಿಯಾಗಿದೆ. ಇಷ್ಟು ಘೋರ ತಪ್ಪು ಲೆಕ್ಕಾಚಾರ ಸಾಧ್ಯವಾಗಿದ್ದಾದರೂ ಹೇಗೆ !

ಇದೇ ಪ್ರಕರಣದ ಎರಡನೆಯ ಮಗ್ಗುಲು ಎಟಿಎಂಗಳನ್ನು ಹೊಸ ಸನ್ನಿವೇಶಕ್ಕೆ ಅಳವಡಿಸುವುದರಲ್ಲಿ ತೋರ್ಪಡಿಸಿದ ಶುದ್ಧ ಅಪಕ್ವತೆ. ಹೊಸ ೨೦೦೦ ರೂಪಾಯಿಗಳ ನೋಟುಗಳನ್ನು ಹಳೆಯ ಎಟಿಎಂಗಳಿಗೆ ತುಂಬಲಾಗದೆಂಬ ಕನಿಷ್ಠ ತಿಳಿವಳಿಕೆ ಇಲ್ಲದೆ ಹೋಯಿತಲ್ಲಾ, ಏನೆನ್ನೋಣ ? ನೋಟುಗಳ ಬದಲಾವಣೆಗೆ ಅಗತ್ಯವಾದ ಮೂಲಭೂತ ಹೆಜ್ಜೆಗಳನ್ನಿರಿಸಲು ಸರ್ಕಾರವು ಅಸಮರ್ಥವಾಗಿ ಹೋಯಿತು. ಆಮೇಲೆ ಬಂದ ಕರೆ ಇನ್ನೂ ತಮಾಷೆಯದು : ನಗದು ವ್ಯವಹಾರವನ್ನು ಕೈಬಿಟ್ಟು ಡಿಜಿಟಲೀಕೃತ ವ್ಯವಸ್ಥೆಗೆ ಮುನ್ನುಗ್ಗೋಣ, ಎಂದು. ನಮ್ಮ ನೂರಿಪ್ಪತ್ತು ಕೋಟಿ ಜನರಲ್ಲಿ ಈ ಸಾಮರ್ಥ್ಯ ಮತ್ತು ಸೌಲಭ್ಯ ಎಷ್ಟು ಮಂದಿಗಿದೆ ? ಸಂಕ್ಷಿಪ್ತವಾಗಿ ಹೇಳುವುದಾದರೆ, ಮರುಚಲಾವಣೆಗೆ ಅಗತ್ಯವಾದ ನೋಟುಗಳನ್ನು ಭರಿಸಲು ಬಹಳ ಬೃಹತ್ತಾದ ಪ್ರಕ್ರಿಯೆಯನ್ನು ಮೊದಲೇ ಆಳವಾಗಿ ತಿಳಿದು ಕಾರ್ಯಪ್ರವೃತ್ತವಾಗಬೇಕಾಗಿತ್ತು ನಮ್ಮ ದೇಶ. ಅದು ಅತ್ಯಂತ ಕನಿಷ್ಠಮಟ್ಟದ ತಿಳಿವಳಿಕೆ. ಆದರೆ ದೇಶದ ಪ್ರಧಾನಿಯು ನವೆಂಬರ್ ೮ರಂದು ವೃಥಾ ಹೆಗ್ಗಳಿಕೆಯನ್ನು ಸಾರಿಕೊಳ್ಳುವಂತಹ ದೀರ್ಘ ಭಾಷಣದಲ್ಲಿ ೨ ಅಥವಾ ೩ ದಿನಗಳಲ್ಲಿ ಇಡೀ ಪ್ರಕ್ರಿಯೆಯು ಜಾರಿಗೊಂಡುಬಿಡುತ್ತದೆಂದು ಉಸಿರಿಬಿಟ್ಟರು ! ತದನಂತರ ಅರ್ಥಸಚಿವರು ಮೊಂಡು ಅಹಂಕಾರದಿಂದ ನುಡಿದರು, ಬೇಕೆಂದೇ ಎಟಿಎಂಗಳನ್ನು ಅವಶ್ಯಕತೆಗೆ ಅನುಗುಣವಾಗಿ ಬದಲಾಯಿಸಲಿಲ್ಲ, ಎಂದು. ಹಾಗೆ ಬದಲಾಯಿಸಿದ್ದರೆ ಏನೋ ವಿಶೇಷವಿದೆಯೆಂದು ಜನತೆಗೆ ಮೊದಲೇ ತಿಳಿದುಬಿಟ್ಟಿರುತ್ತಿತ್ತಲ್ಲ ಎಂಬ ಸಮರ್ಥನೆ ಅವರದು. ಎಟಿಎಂಗಳನ್ನು ಪ್ರಸಕ್ತ ಸನ್ನಿವೇಶಕ್ಕೆ ಅಣಿಗೊಳಿಸಲು ಏನಿಲ್ಲವೆಂದರೂ ೪೫ ದಿನಗಳು ಬೇಕಾಗುತ್ತದೆ ಎಂಬುದು ವಾಸ್ತವ. ಇದೇನು ದೇಶದ ಪ್ರಧಾನಿ ಮತ್ತು ಅರ್ಥಸಚಿವರು ಜೊತೆಯಾಗಿ ಸೇರಿ ಅತ್ಯಂತ ಗುಟ್ಟಾಗಿ ನೋಟುಗಳ ರದ್ದತಿಯ ತೀರ್ಮಾನವನ್ನು ಕೈಗೊಂಡರೆ ಎಂಬ ಸಂಶಯ ಬರುತ್ತದೆ. ರಿಸರ್ವ್ ಬ್ಯಾಂಕಿನ ಪಾತ್ರವೇನೂ ಇರಲಿಲ್ಲವೇ ? ಹೊಸ ನೋಟುಗಳು ಆ ಬ್ಯಾಂಕಿನಿಂದಲೇ ಅಲ್ಲವೆ ಬರಬೇಕು? ಸಿದ್ಧತೆಗೆ ರಿಸರ್ವ್ ಬ್ಯಾಂಕಿಗೆ ಸೂಚನೆಯೇ ಇರಲಿಲ್ಲವೇ ? ಅದನ್ನು ನೋಡಿದರೆ ಪ್ರಧಾನಿ ಮತ್ತು ಅರ್ಥಸಚಿವರು ಅಪಕ್ವ ಸಿದ್ಧತೆಯಿಂದಲೇ ಈ ಬೃಹತ್ ಯೋಜನೆಯನ್ನು ದೇಶದ ಮೇಲೆ ಹೇರಿದರೆಂದು ತಿಳಿಯಬೇಕಾಗಿದೆ. ಅಥವಾ ದೇಶದ ಪ್ರಧಾನ ಸೇವಕರ ವೈಯಕ್ತಿಕ ಹುಚ್ಚುತನ ಮತ್ತು ಸ್ವಯಂರಂಜನೆ ನೋಟು ರದ್ದತಿ ಯೋಜನೆಗೆ ಚಾಲನೆ ನೀಡಿದವೋ!

ಪ್ರಧಾನಿ ಮತ್ತು ಅರ್ಥಸಚಿವರು ಈ ವಿಚಾರದಲ್ಲಿ ಹೆಚ್ಚು ಹೆಚ್ಚು ಗೊಂದಲ ಸೃಷ್ಟಿಸಲು ಏನೇನೋ ವಿಧಾನಗಳನ್ನು ಅನುಸರಿಸುತ್ತಿದ್ದಾರೆ. ಪ್ರಧಾನಿಯವರು ತಮ್ಮ ಜೀವಕ್ಕೆ ಕುತ್ತುಂಟಾಗುವ ಸಂಭವವಿದೆಯೆಂದು ನಾಟಕೀಯವಾಗಿ ಹೇಳಿ ಕಣ್ಣೀರು ಸುರಿಸಿದ್ದಾರೆ; ಅರ್ಥಮಂತ್ರಿ ತಮ್ಮ ಎಂದಿನ ಅಹಂಕಾರದಿಂದ ಜನರನ್ನು ಛೇಡಿಸಿದ್ದಾರೆ : "ನಿಮಗೇನು ಧಾಡಿ, ನಗದುರಹಿತ ವ್ಯವಹಾರಗಳತ್ತ ಸರಿಯಲು ಆಗುವುದಿಲ್ಲವೆ ?" ಎಂದು. "ನಿಮ್ಮಲ್ಲಿ ನಗದು ಇಲ್ಲದಿದ್ದರೆ ಪ್ಲಾಸ್ಟಿಕ್ ಬಳಸಿ" ಎಂದಿದ್ದಾರೆ ಆ ಮಹಾಶಯರು. ಫ್ರಾನ್ಸಿನ ಕ್ರಾಂತಿಯ ಸಂದರ್ಭದ ರಾಣಿ ಮಾರೀ ಆಂತ್ವಾನೆತ್ ನೆನಪಿಗೆ ಬಂದಳೆ ? ಸಾಮಾಜಿಕ ತಾಣಗಳಲ್ಲಿ ಹಲವರು ಈಗಾಗಲೆ ಇದನ್ನು ಪ್ರಸ್ತಾಪಿಸಿದ್ದಾರೆ. ಹೊಟ್ಟೆಗಿಲ್ಲವೆಂದು ಜನರು ಮೆರವಣಿಗೆಯಲ್ಲಿ ಅರಮನೆಯತ್ತ ಹೊರಟಾಗ ಅವಳು ಕೆರಳಿ ಹೇಳಿದ್ದಳು : "ಏನು ? ತಿನ್ನಲು ನಿಮಗೆ ರೊಟ್ಟಿ ಸಿಗುತ್ತಿಲ್ಲವೆ ? ಹೋಗಿ, ಕೇಕ್ ತಿನ್ನಿ" ಎಂದು. ನಗದುರಹಿತ ಆರ್ಥಿಕತೆ ಎಂಬ ಮಾತು ನಮ್ಮಲ್ಲೀಗ ಹಾಸ್ಯಾಸ್ಪದವಾಗಿಹೋಗಿದೆ. ನಮ್ಮ ಅರ್ಥಸಚಿವ ಮತ್ತು ಪ್ರಧಾನಿ ಯಾವ ಲೋಕದಲ್ಲಿದ್ದಾರೆ, ಅವರ ತಿಳಿವಳಿಕೆ ಎಷ್ಟು ಕಳಪೆಯಾದ್ದು ! ಪ್ರಧಾನಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ನಾಚಿಕೆಗೆಟ್ಟ ಸಲಹೆ ನೀಡಿದ್ದಾರೆ; ದೇಶವನ್ನು ಮುಗ್ಗಟ್ಟಿಗೆ ಸಿಲುಕಿಸಿ ಆಡುವ ಮಾತೇ ಇದು ? ಅದೆಂಥದೋ "ಪೇಟಿಎಂ" ಇದೆಯಂತೆ, ನಮ್ಮ ಹಳ್ಳಿಗಾಡುಗಳಲ್ಲಿ ಜನ ಅದನ್ನು ಬಳಸಬಹುದಂತೆ ! ಆ 'ಪೇಟಿಎಂ' ಯಾವ ಚೀನೀ ಬಂಡವಳಿಗನದೋ, ಅವನಿಗೆ ಇನ್ನೆಷ್ಟು ಲಾಭ ಮಾಡಿಕೊಡುವ ಹುನ್ನಾರವೋ, ತಿಳಿಯುತ್ತಿಲ್ಲ.

ಅಭಿವೃದ್ಧಿ ಹೊಂದಿದ ಮತ್ತು ಸರಾಸರಿ ಹೆಚ್ಚು ಆದಾಯವುಳ್ಳ ದೇಶಗಳಲ್ಲಿ ಕೂಡ ಈವರೆಗೆ ಇನ್ನೂ ಗಣನೀಯ ಪ್ರಮಾಣದ ನಗದುರಹಿತ ಆರ್ಥಿಕತೆಯು ವಿಕಸಿಸಿಲ್ಲ. ಅಂಥದರಲ್ಲಿ ನಮ್ಮ ದೇಶವು ಅದನ್ನು ಆಗುಮಾಡಬೇಕಂತೆ! ನಮ್ಮ ಸಮಾಜದಲ್ಲಿ ಯಾವ ಮಟ್ಟದಲ್ಲಿ ಜನಜೀವನ ಹೊರೆಯುತ್ತಿದ್ದಾರೆಂಬ ಕಲ್ಪನೆಯೇ ಈ ನಾಯಕರಿಗಿಲ್ಲವಲ್ಲ, ಏನು ಹೇಳೋಣ.

ಮುಂದಕ್ಕೆ ನಾವೀಗ ನೋಟು ರದ್ದತಿ ಯೋಜನೆಯು ವಿವಿಧ ವರ್ಗಗಳ ಮೇಲೆ ಬೀರಿರುವ ಪರಿಣಾಮವನ್ನು ಪರಿಶೀಲಿಸೋಣ.

**ದುಡಿಯುವ ವರ್ಗ**

ದುಡಿಯುವ ಕೈಗಳ ಜನರ ಅನೌಪಚಾರಿಕ ವಿಭಾಗದಲ್ಲಿ ದೇಶದ ಒಟ್ಟು ದುಡಿಯುವ ಜನರ ಶೇ. ೯೩ರಷ್ಟು ಮಂದಿ ಇದ್ದಾರೆ. ಅವರು ಸಂಘಟಿತ ಕಾರ್ಮಿಕರಲ್ಲ. ಅವರಿಗೆ ನೌಕರಿಯ ಖಾತ್ರಿ ಇಲ್ಲ, ಸಾಮಾಜಿಕ ಭದ್ರತೆಯ ಲಾಭಗಳಿಲ್ಲ ಮತ್ತು ಸೇವಾ ನಿಯಮಗಳಿಲ್ಲ. ದುಡಿಯುವ ಜನರು ದೇಶದಲ್ಲಿ ೪೫ ಕೋಟಿ ಇದ್ದಾರೆ, ಅವರಲ್ಲಿ ಸುಮಾರು ೪೨ ಕೋಟಿ ಜನ ಇಂತಹ ಸನ್ನಿವೇಶದಲ್ಲಿ ದುಡಿದು ಬಾಳುತ್ತಿದ್ದಾರೆ. ಈ ೪೨ ಕೋಟಿಯಲ್ಲಿ ಅರ್ಧದಷ್ಟು ಮಂದಿ ಕೃಷಿ ಮತ್ತು ತತ್ಸಂಬಂಧಿ ಕೆಲಸಗಳಲ್ಲಿ ದುಡಿಯುತ್ತಿದ್ದಾರೆ. ಅವರೆಲ್ಲಾ ಬಹುತೇಕ ಗ್ರಾಮಾಂತರ ಪ್ರದೇಶಗಳಲ್ಲಿದ್ದಾರೆ. ಕೃಷಿಯ ಶೇ. ೯೮ರಷ್ಟು ಭಾಗವು ಪೂರ್ತಿಯಾಗಿ ನಗದು ಆರ್ಥಿಕತೆಯನ್ನುಳ್ಳದ್ದು. ಇದನ್ನು ಬಿಟ್ಟರೆ ಅತಿಹೆಚ್ಚು ಮಂದಿ ದುಡಿಯುವುದು ಕಟ್ಟಡಗಳ ನಿರ್ಮಾಣದ ವಿಭಾಗದಲ್ಲಿ. ಅಂಥವರು ಮೂರುವರೆಯಿಂದ ನಾಲ್ಕು ಕೋಟಿಯಷ್ಟಿದ್ದಾರೆ. ಈ ಅನೌಪಚಾರಿಕ ವಲಯದ ಇತರ ದುಡಿಮೆಗಳಲ್ಲಿ ಮನೆಗೆಲಸ ಮಾಡುತ್ತಿರುವವರಿದ್ದಾರೆ, ಸೇವಾ ಉದ್ಯಮದಲ್ಲಿ ತಳಮಟ್ಟದ ನೌಕರಿ ಮಾಡುತ್ತಿರುವವರಿದ್ದಾರೆ ಮತ್ತು ಪಟ್ಟಣಗಳಲ್ಲಿ ಸ್ವಯಂ-ಉದ್ಯೋಗಿಗಳಾಗಿರುವವರಿದ್ದಾರೆ. ಕಟ್ಟಡ ನಿರ್ಮಾಣದಲ್ಲಿ ಮತ್ತು ಮನೆಗೆಲಸದಲ್ಲಿ ದುಡಿಯುವವರಿಗೆ ಕೂಲಿಯನ್ನು ಪೂರ್ತಿಯಾಗಿ ನಗದು ರೂಪದಲ್ಲೇ ಕೊಡಲಾಗುತ್ತಿದೆ. ಈ ವಿಭಾಗದಲ್ಲಿ ದಲಿತರು ಮತ್ತು ಹಿಂದುಳಿದ ಜಾತಿಗಳವರು ಬಹುಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅವರೆಲ್ಲಾ ನಗದುರಹಿತ ವ್ಯವಹಾರಗಳಿಗೆ ಕೈಹಾಕಬಲ್ಲರೆ? ಇಂದಿನ ಆರ್ಥಿಕ ಮುಗ್ಗಟ್ಟನ್ನು ನಗದುರಹಿತ ಆರ್ಥಿಕತೆಯಿಂದ ಪರಿಹರಿಸುವ ಮಾತನ್ನಾಡುವ ಜನ ಇವರನ್ನು ಸಮಾಜದ ಭಾಗವಾಗಿ ಪರಿಗಣಿಸುತ್ತಾರೆಯೋ ಅಥವಾ ಯಾರೋ ಹೊರಗಿನವರೆಂದು ಅವರನ್ನು ದೂರಕ್ಕೆ ಅಟ್ಟುತ್ತಾರೋ? ಅವರಿಗಂತೂ ನಗದುರಹಿತ ಆರ್ಥಿಕತೆಗೆ ಸುತರಾಂ ಪ್ರವೇಶವಿಲ್ಲ.

ದುಡಿಯುವ ಜನರ ಸಂಘಟಿತ ಅಥವಾ ಔಪಚಾರಿಕ ವಲಯಕ್ಕೆ ಸೇರುವವರು ಯಾರು? ಕಾರ್ಖಾನೆಗಳಲ್ಲಿ ಕೆಲಸ ಮಾಡುವವರು. ಅವು ಇಂಜಿನಿಯರಿಂಗ್, ರಾಸಾಯನಿಕ, ಔಷಧಿ ತಯಾರಿಕೆ, ಔದ್ಯಮಿಕ ಉತ್ಪನ್ನಗಳ ವಹಿವಾಟು, ಮುಂತಾದ ಕ್ಷೇತ್ರಗಳು. ಜೊತೆಗೆ, ಮಾಹಿತಿ ತಂತ್ರಜ್ಞಾನ, ಬ್ಯಾಂಕುಗಳು, ಇನ್ಶೂರೆನ್ಸ್, ಇತರೆ ಹಣಕಾಸು ವಲಯ, ಹೀಗೆ ಎಲ್ಲಾ ಸೇರಿವೆ. ಅನೌಪಚಾರಿಕ ವಲಯಗಳವರಿಗಿಂತ ಇವರು ಸ್ವಲ್ಪ ಮೇಲು. ಆದರೆ ಪ್ರಸ್ತುತ ಯೋಜನೆಯು ಅನೌಪಚಾರಿಕ ವಲಯದವರಿಗೆ ಅತ್ಯಂತ ಆಘಾತಕಾರಿಯಾದ್ದು; ದೀರ್ಘಕಾಲೀನವಾಗಿ ಮತ್ತು ಅಲ್ಪಕಾಲೀನವಾಗಿ. ಅವರ ಕೂಲಿ ಸ್ಥಗಿತಗೊಂಡಿದೆ. ಕಟ್ಟಡಗಳ ನಿರ್ಮಾಣವೆಂಬ ಆರ್ಥಿಕ ಚಟುವಟಿಕೆಗಳು ಪೂರ್ತಿ ನಿಂತುಹೋಗಿವೆ; ಅಂತೆಯೇ ಕೃಷಿಸಂಬಂಧಿ ಚಟುವಟಿಕೆಗಳಿಗೆ ಲಕ್ವ ಹೊಡೆದಿದೆ. ಗ್ರಾಹಕರು ಕೊಳ್ಳುವುದನ್ನು ನಿಲ್ಲಿಸಿಬಿಟ್ಟಿದ್ದಾರೆ. ಅಂದರೆ, ಈ ವಲಯದವರಿಗೆ ಹೊಡೆತವು ಅಗಾಧವಾಗಿದೆ. ಸಂಘಟಿತ ವಲಯದ ದುಡಿಮೆಗಾರರಿಗೆ ಪೆಟ್ಟು ಬೀಳುವ ದಿನಗಳು ದೂರವಿಲ್ಲ. ವಿಶೇಷತಃ ಸರಕು ಉತ್ಪಾದನಾ ವಲಯಕ್ಕೆ ಭಾರಿ ಏಟು ಬೀಳಲಿದೆ. ಈ ವಲಯದ ಉತ್ಪನ್ನಗಳನ್ನು ಕೊಳ್ಳುವವರ ಸಂಖ್ಯೆಯಲ್ಲಿ ಕುಸಿತ ಉಂಟಾದಾಗ ಉದ್ಯಮ ಹೇಗೆ ಉಳಿದೀತು!

**ಚಿಕ್ಕ ಬೂರ್ಶ್ವಾ ವಲಯ (ಮಧ್ಯಮ ವರ್ಗ)**

ಭಾರತದಲ್ಲಿ ಈ ವಲಯವು ವರ್ತಕರು, ಅಂಗಡಿಗಳ ಮಾಲೀಕರು, ಚಿಕ್ಕ ವ್ಯಾಪಾರಿಗಳು, ಅನೇಕ ವಿಧದ ಮಧ್ಯವರ್ತಿಗಳು, ಸ್ವಲ್ಪ ಅನುಕೂಲಸ್ಥ ಸ್ವಯಂ ಉದ್ಯೋಗಿಗಳು, ಗುಡಿ ಕೈಗಾರಿಕೆಗಳವರು, ಕೈಕಸುಬುಗಳವರು, ಮುಂತಾದವರನ್ನು ಒಳಗೊಂಡಿದೆ. ಅವರು ಪಟ್ಟಣಗಳಲ್ಲೂ ಗ್ರಾಮಾಂತರ ಪ್ರದೇಶಗಳಲ್ಲೂ ಇದ್ದಾರೆ. ಈ ವರ್ಗವು ತನ್ನೆಲ್ಲ ವ್ಯವಹಾರಗಳಿಗೆ ಬಹುತೇಕ ಬಳಸುವುದು ನಗದು ಹಣವನ್ನೇ. ವ್ಯಾಪಾರಿಗಳಲ್ಲಿ ಹಣವನ್ನು ತುಂಬಿ ಬಚ್ಚಿಟ್ಟುಕೊಳ್ಳುವ ಪ್ರವೃತ್ತಿಯೇನೋ ಇದೆ; ಅವರಿಗೆ ಬ್ಯಾಂಕ್ ವ್ಯವಸ್ಥೆಯಲ್ಲಿ ಅಷ್ಟು ನಂಬಿಕೆಯಿಲ್ಲ. ತಮ್ಮ ವಹಿವಾಟನ್ನು ಕದ್ದುಮುಚ್ಚಿ ನಡೆಸುತ್ತಾ ಅವರಲ್ಲನೇಕರು ತೆರಿಗೆಗಳ ಜಾಲದಿಂದ ಹೊರಗುಳಿದಿದ್ದಾರೆ. ಪ್ರಸ್ತುತ ಯೋಜನೆಯು ಈ ವಲಯಕ್ಕೆ ಬಹಳ ಮಾರಕವಾದ್ದು. ಎಷ್ಟೋ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ನೋಟು ರದ್ದತಿಯ ನಂತರದ ಅನೇಕ ದಿನಗಳ ಕಾಲ ವ್ಯಾಪಾರ ನಿಂತುಹೋಗಿತ್ತು; ಏಕೆಂದರೆ ಗ್ರಾಹಕರ ಬಳಿ ನಗದು ಇರಲಿಲ್ಲ ಮತ್ತು ನಗದಿಲ್ಲದೆ ಈ ವಲಯದಲ್ಲಿ ವ್ಯಾಪಾರವೂ ಇಲ್ಲ. ಈ ವರ್ಗದ ಹಿತಾಸಕ್ತಿಗಳಿಗೆ ಲಗತ್ತಾಗಿ ಅನೇಕ ದುಡಿಮೆಗಾರರ ಹಿತಾಸಕ್ತಿಗಳು ಕೂಡಿಕೊಂಡಿವೆ. ಎರಡು ಗುಂಪುಗಳಿಗೂ ಏಕಕಾಲಕ್ಕೆ ಪೆಟ್ಟು ಬೀಳುತ್ತಿದೆ. ಕೃಷಿಕ್ಷೇತ್ರದ ಮೇಲಿನ ಪರಿಣಾಮ ಸದ್ಯಕ್ಕಿನ್ನೂ ಸ್ಪಷ್ಟವಾಗಿಲ್ಲ. ಆದರೆ ಒಂದಂಶವಂತೂ ನಿಜ : ಕೃಷಿಕ್ಷೇತ್ರದ ಕೂಲಿಯಾಳುಗಳು ವಿಪರೀತ ಸಂಕಷ್ಟಗಳಿಗೆ ಒಳಗಾಗುತ್ತಾರೆ, ಏಕೆಂದರೆ ಕೂಲಿಗೆಲಸಕ್ಕೆ ಬೇಡಿಕೆ ಕಡಿಮೆಗೊಳ್ಳುತ್ತದೆ. ನಗದು ಹಣದ ಅಭಾವದಿಂದಾಗಿ ಬೇಡಿಕೆ ಕುಸಿಯುತ್ತಿದೆ. ಅಲ್ಲದೆ, ಬಿತ್ತನೆಯ ಕಾಲಕ್ಕೆ ರೈತರು ಹಣದ ಅವಶ್ಯಕತೆ ಪೂರೈಸಲಾರದೆ ಬೆಳೆಗಳ ನಷ್ಟಕ್ಕೆ ಗುರಿಯಾಗುತ್ತಾರೆ. ಸಕಾಲಕ್ಕೆ ಗೊಬ್ಬರ, ಇತ್ಯಾದಿಗಳನ್ನು ಪೂರೈಸಲು ಅವರು ಅಶಕ್ತರಾಗಿದ್ದಾರೆ. ಕೃಷಿಯು ನಮ್ಮ ಆದ್ಯತೆಯ ವಲಯ. ಅಲ್ಲಿಯ ಬಿಕ್ಕಟ್ಟು ಇನ್ನೂ ಹೆಚ್ಚಲಿರುವುದು ಆತಂಕಕ್ಕೆ ಕಾರಣವಾಗಿದೆ.

**ನಗರ ಕೇಂದ್ರಿತ ಮಧ್ಯಮ ವರ್ಗ**

ಈ ವರ್ಗವು ಏಕಪ್ರಕಾರವಾಗಿಲ್ಲ. ಆದರೆ ಮೇಲಿನ ಅಂತಸ್ತನ್ನು ಮುಟ್ಟುವ ಸಾಧ್ಯತೆ ಉಳ್ಳವರು ಮತ್ತು ಸಾಮಾಜಿಕವಾಗಿ ಪ್ರಬಲವಾಗಿರುವ ಉಚ್ಚ ಜಾತಿಯವರು ನೋಟು ರದ್ದತಿ ಯೋಜನೆಯ ಪರವಾಗಿ ನಿಂತಿದ್ದಾರೆ. ಆರಂಭದಲ್ಲಂತೂ ಇದು ನಿಚ್ಚಳವಾಗಿ ಕಂಡುಬಂದಿತು. ಮಧ್ಯಮ ವರ್ಗದ ಈ ಬಣಗಳಿಂದ ಯೋಜನೆಗೆ ಬೆಂಬಲವು ಬೇಕಾದಷ್ಟಿದೆ. ಅದು ಎಷ್ಟರಮಟ್ಟಿಗೆ

ಎಂದರೆ ವ್ಯಕ್ತಿ ಪೂಜೆಗೆ ಪ್ರಧಾನಿ ಪಾತ್ರರಾಗುತ್ತಿದ್ದಾರೆ. ಇಳೆಯ ಮೇಲೆ ಸ್ವರ್ಗ ಸೃಷ್ಟಿಸಲು ಬಂದಿರುವ ದೇವದೂತ ಆತನೆಂಬ ಭ್ರಾಂತಿ ತುಂಬಿಹೋಗಿದೆ. ಸಮಾಜದ ಈ ವಲಯವು ಈಗ ಬಹಳ ಪ್ರಭಾವಶಾಲಿಯಾಗಿದೆ. ಅವರು ಸಾಪೇಕ್ಷವಾಗಿ ಕಡಿಮೆ ಸಂಖ್ಯೆಯವರಾದರೂ ಸಂಖ್ಯೆಗೆ ಮೀರಿದ ಪ್ರಾತಿನಿಧ್ಯ ಅವರ ಅಭಿಪ್ರಾಯಕ್ಕೆ ದಕ್ಕಿದೆ. ಪ್ರಧಾನಿಗೆ ಈ ಬಣದ ಮೇಲೆ ಪ್ರೀತಿ ಉಕ್ಕಿಬರುತ್ತದೆ. ಭಾರತೀಯ ಜನತಾ ಪಕ್ಷವು ಮಾಹಿತಿ ತಂತ್ರಜ್ಞಾನದ ಕ್ಷೇತ್ರದಲ್ಲಿ ತನ್ನದೇ ಒಂದು ಗುಂಪನ್ನು ರಚಿಸಿಕೊಂಡಿದೆ. ಆ ಗುಂಪಿನ ಮಂದಿ ಮಧ್ಯಮ ವರ್ಗದ ಹುಚ್ಚು ಆಕಾಂಕ್ಷೆಗಳಿಗೆ ಸೊಪ್ಪುಹಾಕಲು ಅರ್ಧಸತ್ಯಗಳನ್ನು ಹರಡುತ್ತಿರುತ್ತಾರೆ. ಅವರು ಬಳಸುವ ಭಾಷೆಯೂ ಬಹಳ ಕಟುವಾದ್ದು. ಅಪ್ಪಟ ಸುಳ್ಳುಗಳನ್ನು ಪ್ರಚಾರ ಮಾಡಲು ಸಹ ಅವರು ಹೇಸುವುದಿಲ್ಲ, ಆದರೆ ಮಧ್ಯಮ ವರ್ಗದ ಒಂದು ದೊಡ್ಡ ವಿಭಾಗವು ಅದನ್ನು ಸಂಪೂರ್ಣವಾಗಿ ಅಂಗೀಕರಿಸುತ್ತದೆ. ಬಹುಮುಖ್ಯ ವಿಚಾರವೇನೆಂದರೆ ಈ ವರ್ಗದ ಏಳುಬೀಳುಗಳು ಖಾಸಗಿ ಕಾರ್ಪೊರೇಟ್ ವಲಯದ ಜೊತೆಗೆ ಜಂಟಿಹಾಕಿ ಕೊಂಡಿವೆ. ನವಉದಾರೀಕರಣದ ನೀತಿಗಳು ಇದಕ್ಕೆ ಅತಿಮುಖ್ಯ ಕಾರಣ. ಸಮಾಜದ ಅಭಿವೃದ್ಧಿಯನ್ನು ಕುರಿತು ಈ ವರ್ಗವು ವಿಚಿತ್ರವಾದ ಮೀಮಾಂಸೆ ಯನ್ನು ಕಟ್ಟಿಕೊಂಡಿದೆ; ಅದೇನೆಂದರೆ, ಸಮಾಜಕ್ಕೆ ಮತ್ತು ದೇಶಕ್ಕೆ ಏನೇ ಆಗಲಿ, ತನ್ನ ಹಿತಾಸಕ್ತಿಗಳಿಗೆ ಪುಷ್ಟಿ ದೊರೆಯುತ್ತಿದ್ದರೆ ಸಾಕು ಎಂಬುದು.

ಹಣದ ಸರಬರಾಜಿನ ಮುಗ್ಗಟ್ಟು ಇಂದಿನಂತೆ ಇನ್ನೂ ಬಹುಕಾಲ ಮುಂದುವರಿದರೆ ಮತ್ತು ಹೆಚ್ಚಾದರೆ ಇಡೀ ಯೋಜನೆಯನ್ನು ಕುರಿತ ಪ್ರಶ್ನೆಗಳು ಸಹಜವಾಗಿಯೇ ಈ ವಿಭಾಗದಿಂದಲೂ ಬರುತ್ತವೆ. ಈ ವರ್ಗದ ಇನ್ನೊಂದು ವಿಶೇಷವೆಂದರೆ ಇದರಲ್ಲಿ ಉಚ್ಚ ಜಾತಿಗಳವರು ಸ್ವಲ್ಪ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅವರ ಆಳವಾದ ನಂಬಿಕೆಯೇನೆಂದರೆ ಭಾರತೀಯ ಜನತಾ ಪಕ್ಷವು ಬಹುಸಂಖ್ಯಾತ ಹಿಂದುಗಳ ಪಕ್ಷವಾದ್ದರಿಂದ ಅದು ಅವರ ಪಕ್ಷವೇ ಆಗಿದೆ ಎಂಬುದು. ಈ ಒಗಟನ್ನು ಮೀರಿ ಮುಂದುವರಿಯುವು ದೆಂದರೆ ಅವರ ಬಲವಾದ ನಂಬಿಕೆಯನ್ನು ದಾಟಿ ಹೋಗುವುದು. ಅಷ್ಟು ನಿಷ್ಠಾವಂತ ಭಕ್ತರಿಗೆ ಅದು ಸಾಧ್ಯವಾಗದು. ಗಟ್ಟಿಯಾದ ವಾಸ್ತವ ಸಂಗತಿಗಳು ಸಹ ಅವರನ್ನು ಬದಲಾಯಿಸುವುದು ಅನುಮಾನ. ಬಿಕ್ಕಟ್ಟು ಹೇಗುಂಟಾಯಿತು, ಅದರ ಭೀಕರ ಪರಿಣಾಮ ಜನತೆಯ ವಿವಿಧ ಸ್ತರಗಳ ಮೇಲೆ ಹೇಗಾಗಿದೆ, ಯೋಜನೆಯನ್ನು ಕುರಿತಂತೆ ಕಟ್ಟುಕತೆಗಳನ್ನು ಹೇಗೆ ಕಟ್ಟಲಾಗಿದೆ, ಎಂಬಿತ್ಯಾದಿ ವಿಚಾರಗಳು ಅವರ ಮನಸ್ಸಿನ ಆಳಕ್ಕೆ ಇಳಿಯುವುದು ಕಷ್ಟ. ಭಾರತೀಯ ಜನತಾ ಪಕ್ಷದಲ್ಲಿ ಆಂತರಿಕ ವೈರುಧ್ಯಗಳು ಮೇಲ್ಮಟ್ಟಕ್ಕೆ ಬಂದಾಗಲಷ್ಟೇ ಈ ನಗರ ಕೇಂದ್ರಿತ ಮಧ್ಯಮ ವರ್ಗದವರಿಗೆ ಪ್ರಶ್ನೆಗಳ ಪರಿಹಾರ ಸಾಧ್ಯ. ಇಲ್ಲವಾದಲ್ಲಿ ನಮ್ಮ ಸಮಾಜದ ವಾಸ್ತವ ಸ್ಥಿತಿಗೆ ಅವರು ವಿಮುಖರಾಗಿಯೇ ಉಳಿಯುತ್ತಾರೆ.

**ಕಾರ್ಪೊರೇಟ್ ಸಂಸ್ಥೆಗಳು ಮತ್ತು ಭಾರಿ ವಹಿವಾಟುಗಳು**

ಈಗಾಗಲೆ ಕಾರ್ಪೊರೇಟ್ ಸಂಸ್ಥೆಗಳು ಮತ್ತು ಭಾರಿ ವ್ಯವಹಾರ ನಡೆಸುವ ಮಂದಿ ಪತ್ರಿಕಾ ಹೇಳಿಕೆಗಳನ್ನು ಬಿಡುಗಡೆ ಮಾಡಿ ನಗದು ನೋಟು ರದ್ದತಿ ಯನ್ನು ಸ್ವಾಗತಿಸಿದ್ದಾಗಿದೆ. ಸ್ವಾಗತಕ್ಕೆ ಎರಡು ಕಾರಣಗಳು : (ಅ) ಅವರೆಲ್ಲರ ಸಂಪತ್ತಿಗೆ ಇದರಿಂದೇನೂ ಧಕ್ಕೆಯುಂಟಾಗದು; ಅನೇಕ ಅಧ್ಯಯನಗಳು ತಿಳಿಸಿರುವಂತೆ ಅವರ ಸಂಪತ್ತನ್ನು ತೆರಿಗೆ ವಿನಾಯಿತಿ ಇರುವಂತಹ ಹೊರದೇಶಗಳಲ್ಲಿ ಇರಿಸಿದ್ದಾರೆ. (ಆ) ಇದು ಇಂದಿನ ಸಂದರ್ಭಕ್ಕೆ ಹೆಚ್ಚು ಮುಖ್ಯವಾದ್ದು. ಕಾರ್ಪೊರೇಟ್ ಸಂಸ್ಥೆಗಳಿಗೆ ಸಾರ್ವಜನಿಕ ಬ್ಯಾಂಕುಗಳಿಂದ ನಿರಂತರವಾಗಿ ಸಾಲಗಳು ದೊರೆಯುತ್ತಿರಬೇಕಾದ್ದು ಹಿಂದೆಂದಿಗಿಂತಲೂ ಈಗ ಹೆಚ್ಚು ಅವಶ್ಯಕ. ಭಾರತೀಯ ಬ್ಯಾಂಕುಗಳ ವಲಯವು ಈಚಿನ ದಿನಗಳಲ್ಲಿ ಮುಗ್ಗಟ್ಟಿಗೆ ಸಿಲುಕಿ ಸಾಲಗಳ ಹೊಳೆಗೆ ಅಡಚಣೆಯುಂಟಾಗಿದೆ. ನಗದು ನೋಟು ರದ್ದತಿಯ ಮೊದಲ ಕೆಲದಿನಗಳಲ್ಲೇ ಸಾಮಾನ್ಯ ಜನ ಬ್ಯಾಂಕುಗಳಲ್ಲಿ ಸಾಲುಗಟ್ಟಿ ನಿಂತು ಸುಮಾರು ಮೂರು ಲಕ್ಷ ಕೋಟಿ ರೂಪಾಯಿಗಳನ್ನು ಬ್ಯಾಂಕುಗಳಿಗೆ ತುಂಬಿದ್ದಾರೆಂದು ಅಂದಾಜಿಸಲಾಗಿತ್ತು. ಈ ಹಣದಲ್ಲಿ ಶೇ. ೯೦ಕ್ಕೂ ಹೆಚ್ಚು ಭಾಗ ಕಾನೂನು ಚೌಕಟ್ಟಿಗೆ ಸೇರಿದ ಹಣವೆಂದು ನಿಸ್ಸಂಶಯವಾಗಿ ಹೇಳಬಹುದು. ಆ ಮೊದಲ ದಿನಗಳ ನಂತರ ಮುಂದಿನ ತಿಂಗಳುಗಳಲ್ಲಿ ಬ್ಯಾಂಕುಗಳಿಗೆ ತುಂಬಲಿರುವ ಹಣ ಏನಿಲ್ಲ ವೆಂದರೂ ೧೦ ಲಕ್ಷ ಕೋಟಿ ರೂಪಾಯಿಗಳಾಗಿರುತ್ತವೆ. ಅಂದರೆ ಡಿಸೆಂಬರ್ ಅಂತ್ಯದ ವೇಳೆಗೆ ಕನಿಷ್ಠ ೧೩ ಲಕ್ಷ ಕೋಟಿ ರೂಪಾಯಿಗಳು ತುಂಬಿರುವುದು ಖಂಡಿತ. ಜನ ತಮ್ಮಲ್ಲಿದ್ದ ಕಡೆಯ ಕವಡೆ ಕಾಸುಗಳನ್ನು ಸೇರಿಸಿ ಹೀಗೆ ಹಣ ತುಂಬಿರುತ್ತಾರೆ. ತಮ್ಮದೇ ಹಣವನ್ನು ಬ್ಯಾಂಕುಗಳಿಂದ ಪಡೆದುಕೊಳ್ಳಲು ಜನಗಳ ಮೇಲೆ ಕಠಿಣ ನಿರ್ಬಂಧಗಳಿದ್ದವು; ಹಳೆಯ ನೋಟುಗಳನ್ನು ಬದಲಾಯಿಸಿಕೊಳ್ಳಲು ಸಹ ನಾಲ್ಕೈದು ಬಾರಿ ವಿಚಿತ್ರ ನಿರ್ಬಂಧಗಳನ್ನು ವಿಧಿಸಲಾಗಿತ್ತು. ಭವಿಷ್ಯದಲ್ಲಿ ಏನು ಎಂಬ ಪ್ರಶ್ನೆಗೆ ಉತ್ತರ ದೊರೆಯಲಿಲ್ಲ. ಮದುವೆಗಳಿಗೆ ಇಂತಿಷ್ಟು ಹಣ ಖರ್ಚು ಮಾಡಬಹುದು, ಎಲ್ಲ ಖರ್ಚಿಗೂ ದಾಖಲೆಗಳಿರಬೇಕು, ಇತ್ಯಾದಿ ನಿರ್ಬಂಧಗಳು ಸಾರ್ವಜನಿಕರ ಹಣಕ್ಕೆ ಎಂದೂ ಇರದಿದ್ದ ನಿರ್ಬಂಧಗಳನ್ನು ಹೇರಿದವು. ಒಟ್ಟಿನಲ್ಲಿ, ನಗದು ನೋಟು ರದ್ದತಿಗೆ ಮುನ್ನ ಇರದಿದ್ದಷ್ಟು ಮಹಾಪೂರವು ಬ್ಯಾಂಕುಗಳಿಗೆ ಠೇವಣಿದಾರರಿಂದ ಹರಿದಿದೆ. ಸಾರ್ವಜನಿಕ ಬ್ಯಾಂಕುಗಳಿಗೆ ಮರುಬಂಡವಾಳದ ಬಾಬ್ತು ಕನಿಷ್ಠ ೨.೫ ಲಕ್ಷ ಕೋಟಿ ರೂಪಾಯಿಗಳು ಬೇಕಿತ್ತು. ಜನಸಾಮಾನ್ಯರ ಉಳಿತಾಯಗಳು ಬ್ಯಾಂಕಿಗೆ ಬಂದು ಆ ಗುರಿಯನ್ನು ಎಂದೋ ಮುಟ್ಟಿದ್ದಾಯಿತು.




ಬ್ಯಾಂಕುಗಳು ಇದನ್ನು ಪೂರೈಸಿಕೊಂಡಿದ್ದು ಒಂದು ರೀತಿಯ ಕಪಟ ನಾಟಕದಿಂದ. ಕಾರ್ಪೊರೇಟ್ ವಲಯವು ಬ್ಯಾಂಕುಗಳಿಂದ ಅಪಾರ ಸಾಲಗಳನ್ನು ಪಡೆದು ಹಿಂದಿರುಗಿಸದೆ ಉಳಿದಿರುವ ಅನುತ್ಪಾದಕ ಸಂಪತ್ತು (ಅಂದರೆ ತೀರಿಸಿರದ ಸಾಲದ ಹಣ) ಮಿತಿಮೀರಿಹೋಗಿದೆ. ನಗದು ನೋಟು ರದ್ದತಿಯಿಂದ ಸಾರ್ವಜನಿಕರು ತುಂಬಿರುವ ಹಣವು ಕಾರ್ಪೊರೇಟ್‌ಗಳ ಕುಸಿದಿದ್ದ ಅದೃಷ್ಟಕ್ಕೆ ಜೀವ ತುಂಬಿದೆ. ಕಾರ್ಪೊರೇಟ್‌ಗಳು ತೀರಿಸದ ಸಾಲಗಳನ್ನು ಮನ್ನಾ ಮಾಡಲು ಇನ್ನೇನಡ್ಡಿ! ನಗದು ನೋಟು ರದ್ದತಿಯ ನಂತರದ ೧೦-೧೨ ದಿನಗಳಲ್ಲೇ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ಈ ಬಗೆಯ ಏಳು ಸಾವಿರ ಕೋಟಿ ರೂಪಾಯಿಗಳನ್ನು ಮನ್ನಾ ಮಾಡಿತು. ಅದನ್ನು ಪ್ರಧಾನಿ ನಾಗರಿಕರಿಗೆ ತಿಳಿಸಲಿಲ್ಲ, ಮಾಧ್ಯಮಗಳೂ ಅದನ್ನು ಬಹಿರಂಗಗೊಳಿಸಿ ಚರ್ಚೆ ಮಾಡಿಸಲಿಲ್ಲ. ಮಾಧ್ಯಮಗಳ ಒಡೆತನವು ಕಾರ್ಪೊರೇಟ್‌ಗಳದೇ ತಾನೆ! ಹೀಗೆ ಇನ್ನೊಂದಷ್ಟು ಕೋಟಿ ಕಾರ್ಪೊರೇಟ್ ಸಾಲಗಳನ್ನು ಮನ್ನಾ ಮಾಡುತ್ತಾ ಹೋಗಬಹುದು. ಪ್ರಧಾನಿಯವರು ಘೋಷಿಸಿರುವ ಯೋಜನೆಯು ಭ್ರಷ್ಟಾಚಾರದ ವಿರುದ್ಧ ಸಮರ ನಡೆಸುವುದು ಹೀಗೆ! ರೈತರ ಹತ್ತಿಪ್ಪತ್ತು ಸಾವಿರ ರೂಪಾಯಿಗಳ ಸಾಲಗಳನ್ನು ಮನ್ನಾ ಮಾಡದ ಬ್ಯಾಂಕುಗಳು ಕಾರ್ಪೊರೇಟ್‌ಗಳ ಕೋಟಿಗಟ್ಟಲೆ ಸಾಲಗಳನ್ನು ಮನ್ನಾ ಮಾಡಲು ತುದಿಗಾಲಲ್ಲಿ ನಿಂತಿವೆ. ಅದು ಪ್ರಧಾನಿಯವರ ಯೋಜನೆಯ ಕರಾಮತ್ತು. ಹಾಗೆ ಮನ್ನಾ ಮಾಡದ ಸಾಲಗಳ ಅವಧಿಯನ್ನು ವಿಸ್ತರಿಸಿ ಕೊಡಲು ಬ್ಯಾಂಕುಗಳಿಗೆ ಅಡ್ಡಿಯಿಲ್ಲ. ಕಿಂಗ್‌ಫಿಶರ್ ಕಂಪನಿಗೆ ಸಾಲದ ಮನ್ನಾ ದೊರೆಯಿತು. ಆದರೆ ವಿಜಯ ಮಲ್ಯ ಸಾಲದ ದೃಷ್ಟಿಯಿಂದ ಒಂದು

ದೊಡ್ಡ ಮೀನಾದರೆ ಬೇರೆಷ್ಟೋ ಕಂಪನಿಗಳು ದೊಡ್ಡ ತಿಮಿಂಗಿಲಗಳೇ ಆಗಿವೆ. ಉದಾಹರಣೆಗೆ, ಅನಿಲ ಅಂಬಾನಿ, ಅದಾನಿ, ಮತ್ತು ಜಿಂದಾಲ್ ಕಂಪನಿಗಳು.

ಹಾಗಾದರೆ ನಗದು ನೋಟು ರದ್ದತಿಯ ಸಾರಾಂಶವೇನು? ಅದರ ಅಂತಿಮ ಗುರಿ ಕಾರ್ಪೊರೇಟ್ ಶವಗಳಿಗೆ ಜೀವ ತುಂಬುವುದೇ ಆಗಿದೆ. ಅವುಗಳ ಜೀವ ಅಮೂಲ್ಯ, ಆದರೆ ಜನಸಾಮಾನ್ಯರ ಜೀವಗಳು ಮೌಲ್ಯರಹಿತ. ಅವರು ಬೆವರು ಮತ್ತು ರಕ್ತ ಚೆಲ್ಲಿ ಗಳಿಸಿದ್ದ ಅಷ್ಟೋ ಇಷ್ಟೋ ಹಣವನ್ನು ಈ ತಿಮಿಂಗಿಲಗಳ ಬಾಯಿಗಳಿಗೆ ಹಾಕಹೊರಡುತ್ತಿದ್ದಾರೆ. ರೈತರ ಮತ್ತು ದುಡಿಮೆಗಾರರ ಪ್ರಾಣಗಳನ್ನು ಹೀಗೆ ನೀಗಿಸುವುದು ನಾಚಿಕೆಗೇಡಿನ ಕೆಲಸ. ಆದರೆ ಯೋಜನೆಯ ಹಿಂದಿನ ಕೆಟ್ಟ ಯೋಜನೆಯನ್ನು ಜನತೆಗೆ ಪ್ರಧಾನಿ, ಜೇಟ್ಲಿ, ಮಾಧ್ಯಮಗಳು, ಹೀಗೆ ಯಾರೂ ತಿಳಿಸುತ್ತಿಲ್ಲ. ಭ್ರಷ್ಟಾಚಾರದ ವಿರುದ್ಧದ ಹೋರಾಟವೆಂಬ ಕಟ್ಟುಕತೆಯು ಮಧ್ಯಮ ವರ್ಗಕ್ಕೆ ಹುರುಪು ನೀಡಿರುವುದು ಆ ವರ್ಗದ ಸ್ವಾರ್ಥ ಮತ್ತು ತಿಳಿಗೇಡಿತನಕ್ಕೆ ಸ್ಪಷ್ಟ ನಿದರ್ಶನವಾಗಿದೆ.

ನೋಟು ರದ್ದತಿ ಇಲ್ಲದೆಯೂ ಭ್ರಷ್ಟಾಚಾರದ ವಿರುದ್ಧ ಸೆಣಸಬಹುದು. ಆದಾಯ ತೆರಿಗೆ ಇಲಾಖೆ ಅದನ್ನು ಮಾಡಬೇಕು. ಭ್ರಷ್ಟರು ಯಾರೆಂದು ತಿಳಿಯಲು ಜ್ಯೋತಿಷಿಗಳ ಸಹಾಯವೇನೂ ಬೇಕಿಲ್ಲ.

**ಮುಕ್ತಾಯಕ್ಕೆ ಮುನ್ನ**

ನಗದು ನೋಟು ರದ್ದತಿ ಯೋಜನೆಯು ಸೊರಗುತ್ತಿರುವ ಬ್ಯಾಂಕುಗಳಿಗೆ ಮತ್ತು ಮುಗ್ಗಟ್ಟುಗಳಿಗೆ ಸಿಲುಕಿರುವ ಕಾರ್ಪೊರೇಟ್‌ಗಳಿಗೆ ಜೀವತಂತು ವಾಗಬೇಕೆಂಬ ಉದ್ದೇಶ ಹೊಂದಿದೆ. ಜನತೆಯು ದುಡಿಮೆಯಿಂದ ಸಂಪಾದಿಸಿಕೊಂಡಿರುವ ನಗದನ್ನು ಬ್ಯಾಂಕುಗಳಲ್ಲಿ ಠೇವಣಿಗಳನ್ನಾಗಿ ಪರಿವರ್ತಿಸಿ ಸಾಲಕ್ಕೆ ಸಿಲುಕಿರುವ ಕಾರ್ಪೊರೇಟ್‌ಗಳನ್ನು ದಡಮುಟ್ಟಿಸುವ ಕೆಲಸ ನಡೆದಿದೆ. ಇದನ್ನು ಪರೀಕ್ಷಿಸಿಕೊಳ್ಳಲು ಈಗಾಗಲೆ ಪರಿಣಾಮಗಳು ನಮ್ಮ ಮುಂದಿವೆ. ವಿಜಯ ಮಲ್ಯನಿಗೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯ ೧೨೦೦ ಕೋಟಿ ರೂಪಾಯಿಗಳ ಸಾಲವನ್ನು ಅನೌಪಚಾರಿಕವಾಗಿ ಬಿಟ್ಟುಕೊಟ್ಟಿದೆ. ಮನ್ನಾ ಮಾಡುವುದಕ್ಕೂ ಬಿಟ್ಟುಕೊಡುವುದಕ್ಕೂ ಏನೋ ತಾಂತ್ರಿಕ ವ್ಯತ್ಯಾಸ ಇದೆ ಎಂದು ಬ್ಯಾಂಕ್ ಆಗ್ರಹಿಸುತ್ತದೆ. ಆದರೆ ವಾಸ್ತವಿಕವಾಗಿ ಸಾಲವನ್ನು ಹಿಂದಕ್ಕೆ ಪಡೆಯಲು ಬ್ಯಾಂಕು ಯಾವ ಪ್ರಯತ್ನವನ್ನೂ ಮಾಡುವುದಕ್ಕೆ ಉತ್ತೇಜಕಾಂಶವಿಲ್ಲ. ವಿಚಾರ ಅಷ್ಟು ಸರಳ. ಹಿಂದೆಯೇ ಚರ್ಚಿಸಿರುವಂತೆ ಪ್ರಸ್ತುತ ಯೋಜನೆಯು ಬ್ಯಾಂಕುಗಳು ಕುಸಿದುಹೋಗುವುದನ್ನು ತಡೆಗಟ್ಟುವ ಆಶಯ ಹೊಂದಿದೆ. ಆವರಿಸಿರುವ ಬಿಕ್ಕಟ್ಟನ್ನು ನಿವಾರಿಸುವುದೊಂದೇ ಉದ್ದೇಶ. ಈ ಮುಗ್ಗಟ್ಟನ್ನು ಸಹ ರಾಜಕೀಯ ಮತ್ತು ವ್ಯಾಪಾರ ವ್ಯವಹಾರಗಳ ಹಿತಾಸಕ್ತಿಗಳ ರಕ್ಷಣೆಗಾಗಿ ಕೆಲವು ವರ್ಷಗಳಿಂದ ಬೆಳೆಸಿಕೊಂಡು ಬರಲಾಗಿದೆ. ಭಾರತೀಯ ಜನತಾ ಪಕ್ಷ ಮತ್ತು ಕಾಂಗ್ರೆಸ್, ಎರಡೂ ಹಿಂಬದಿಯ ಒತ್ತಡಗಳ ಮೂಲಕ ಬ್ಯಾಂಕುಗಳು ಕಾರ್ಪೊರೇಟ್‌ಗಳಿಗೆ ಬೇಕಾಬಿಟ್ಟಿ ಸಾಲಗಳನ್ನು ವಿತರಿಸುವಂತೆ ಕೈತಿರುಚುತ್ತಾ ಬಂದಿವೆ. ಕಾರ್ಪೊರೇಟ್‌ಗಳು ಈ ಸಾಲದ ಹಣದಿಂದ ಮೂಲಸೌಲಭ್ಯಗಳ ರಚನೆಗೆ ಮುಂದಾಗುತ್ತವೆಂದು ಹೇಳಲಾಗಿತ್ತು. ಆದರೆ ಅಂಥದೇನೂ ನಡೆದಿಲ್ಲ. ಬದಲಾಗಿ, ಬ್ಯಾಂಕುಗಳ ವ್ಯವಸ್ಥೆಯು ಮೂರಾಬಟ್ಟೆಯಾಗಿ ಕೂತಿದೆ. ಅಮೆರಿಕಾದ ಬ್ಯಾಂಕುಗಳು ಎದುರಿಸಿದ್ದ ಹಣಕಾಸಿನ ಬಿಕ್ಕಟ್ಟನ್ನು ಮತ್ತು ಅಲ್ಲಿಯ ಸರ್ಕಾರವು ಅದಕ್ಕೆ ತೋರಿದ ಪ್ರತಿಕ್ರಿಯೆಯನ್ನು ಮತ್ತೆ ನೆನಪಿಸಿಕೊಳ್ಳುವುದು ಒಳ್ಳೆಯದು. ಬ್ಯಾಂಕುಗಳು ಅಗಾಧವಾಗಿ ಬೆಳೆದುನಿಂತಿದ್ದಂಥವು; ಅವನ್ನು ಕುಸಿಯಲು ಬಿಡುವಂತಿರಲಿಲ್ಲ. ಆದ್ದರಿಂದ ಬ್ಯಾಂಕುಗಳನ್ನು ಹೇಗಾದರೂ ಸ್ಥಿರಗೊಳಿಸಬೇಕಿತ್ತು. ಅದಕ್ಕಾಗಿ ಟ್ರಿಲಿಯನ್‌ಗಟ್ಟಲೆ ಸಾರ್ವಜನಿಕ ಹಣವನ್ನು ಬ್ಯಾಂಕುಗಳಿಗೆ ನೀಡಿ ಅವನ್ನು ಬಚಾವು ಮಾಡಲಾಯಿತು. ನಮ್ಮ ದೇಶದ ಇಂದಿನ ನಗದು ನೋಟು ರದ್ದತಿಯು ಇದೇ ಪ್ರಕ್ರಿಯೆಯನ್ನು ಸ್ವಲ್ಪ ಹಸನಾದ ರೀತಿಯಲ್ಲಿ ಮಾಡಲು ಉಪಕ್ರಮಿಸಿದೆ.

**ಉತ್ತರವಿಲ್ಲದ ಆರ್ಥಿಕ ಮತ್ತು ರಾಜಕೀಯ ಪ್ರಶ್ನೆಗಳು**

ದೇಶದಲ್ಲಿ ವ್ಯಾಪಾರ ವಹಿವಾಟು ಪೂರ್ತಿ ಸ್ಥಗಿತಗೊಂಡಿದೆ. ಒಂದು ಮುಷ್ಕರದಿಂದ ಎಷ್ಟು ಗಂಟೆಗಳ ಮಾನವ ದುಡಿಮೆ ನಷ್ಟವಾಯಿತೆಂದು ಸರ್ಕಾರ ಮತ್ತು ಕಾರ್ಪೊರೇಟ್‌ಗಳು ಲೆಕ್ಕ ಹೇಳುವುದುಂಟು. ಈಗಿನ ನಗದು ನೋಟು ರದ್ದತಿಯಿಂದ ಮಾನವ ದುಡಿಮೆ ಮತ್ತು ಉತ್ಪಾದನೆ ಎಷ್ಟು

ಕುಂಠಿತವಾಯಿತೆಂದು ಯಾರೂ ಹೇಳುತ್ತಿಲ್ಲ. ಹಣದ ವ್ಯಯದಲ್ಲಿ ಎಷ್ಟು ಖೋತಾ ಆಗಿದೆ, ಅದರಿಂದಾಗಿ ಸರಕುಗಳ ಬೇಡಿಕೆ ಎಷ್ಟು ಕುಸಿದಿದೆ, ಆರ್ಥಿಕತೆಗೆ ಎಂತಹ ಪೆಟ್ಟು ಬಿದ್ದಿದೆ, ಇಂತಹ ಪ್ರಶ್ನೆಗಳಿಗೆ ಯಾರೂ ಉತ್ತರ ನೀಡಹೋಗುತ್ತಿಲ್ಲ. ಅವಕ್ಕೆ ಉತ್ತರ ನೀಡಲು ನಂಬಲರ್ಹವಾದ ಮಾಹಿತಿಯೂ ನಮ್ಮಲ್ಲಿಲ್ಲ. ಕಟ್ಟಡ ನಿರ್ಮಾಣ ಮತ್ತು ಕೃಷಿ ವಲಯಗಳ ಮೇಲಿನ ಹೊಡೆತವು ಮಾರಕವಾಗಿರುತ್ತದೆ. ಎರಡೂ ಕ್ಷೇತ್ರಗಳಲ್ಲಿ ಉದ್ಯೋಗ ಕಳೆದುಕೊಂಡವರ ಸಂಖ್ಯೆ ಅಪಾರ. ಕಳೆದ ದಶಕದಲ್ಲಿ ಕಟ್ಟಡ ನಿರ್ಮಾಣದ ವಲಯವು ಅತಿಹೆಚ್ಚು ಉದ್ಯೋಗಗಳನ್ನು ಸೃಷ್ಟಿ ಮಾಡಿದ್ದಿತೆಂಬುದನ್ನು ಮರೆಯುವಂತಿಲ್ಲ. ಆ ವಲಯದಲ್ಲಿ ಉದ್ಯೋಗಗಳಿಗೆ ಚ್ಯುತಿ ಬಂದಾಗ ಹಾನಿಯ ಪರಿಮಾಣ ಅಗಾಧವೇ ಸರಿ. ಕಾನೂನು ಮತ್ತು ಅನೌಪಚಾರಿಕ ವಲಯಗಳು ದೇಶದ ಒಟ್ಟು ನಿವ್ವಳ ಉತ್ಪಾದನೆಯ ಶೇ. ೬೦ರಷ್ಟನ್ನು ಭರಿಸುತ್ತದೆಯೆಂದು ಹೇಳಲಾಗಿದೆ. ಅನೌಪಚಾರಿಕ ಆರ್ಥಿಕತೆಗೆ ಈಗ ಬಲವಾದ ಪೆಟ್ಟು ಬಿದ್ದಿದೆ. ನಗದು ನೋಟು ರದ್ದತಿ ಎಂಬ ಅತಿ ಬುದ್ಧಿವಂತಿಕೆಯ ವಿಕಟ ಪರಿಣಾಮ ಇದು. ನಿವ್ವಳ ಉತ್ಪಾದನೆಯಲ್ಲಿ ಭಾರಿ ಕೊರತೆಯು ಅನಿವಾರ್ಯವಾಗಿದೆ.

"ಶಸ್ತ್ರಚಿಕಿತ್ಸೆ ಮಾದರಿಯ ಈ ಹೊಡೆತವು" ಆರ್ಥಿಕತೆಯ ವ್ಯಾಪ್ತಿಯನ್ನು ಕಡಿಮೆಗೊಳಿಸಿ ನಿವ್ವಳ ಉತ್ಪಾದನೆಯ ಕೊರತೆಯನ್ನು ಸುಮಾರು ಆರು ತಿಂಗಳ ಕಾಲ ಮುಂದುವರಿಸುತ್ತದೆ ಎಂಬುದರ ಬಗ್ಗೆ ಸಾಮಾನ್ಯವಾಗಿ ಏಕರೂಪ ಅಭಿಪ್ರಾಯ ಮೂಡಿಬಂದಿದೆ. ದೀರ್ಘಕಾಲೀನವಾಗಿ ಈ ಯೋಜನೆಯ ಪರಿಣಾಮ ಏನಿರಬಹುದೆಂಬುದನ್ನು ಈಗಲೇ ಹೇಳಲಾಗದು; ಏಕೆಂದರೆ, ನಗದು ಎಷ್ಟು ಕಡಿಮೆಗೊಂಡಿದೆಯೆಂಬುದು ತಿಳಿದಿಲ್ಲ. ಪ್ರಧಾನಿ ಮತ್ತು ಅರ್ಥಸಚಿವ ರಿಬ್ಬರೂ ಈ ಬಗ್ಗೆ ದಿವ್ಯಮೌನಿಗಳಾಗಿದ್ದಾರೆ. ನಗದು ಸರಬರಾಜು ಎಂದಿಗೆ ಪೂರ್ಣಗೊಂಡೀತೆಂಬುದನ್ನು ಅವರಿಬ್ಬರೂ ಹೇಳುತ್ತಿಲ್ಲ. ಅವರಿಗೂ ಅದು ತಿಳಿದಿರುವಂತೆ ತೋರುವುದಿಲ್ಲ. ಕೊಠಡಿಗೆ ಆನೆ ನುಗ್ಗಿದೆ, ಅದನ್ನು ಹೊರತರುವುದೆಂತು ಎಂಬುದನ್ನು ಆಡಳಿತ ವ್ಯವಸ್ಥೆಯ ಯಾವ ಅಧಿಕಾರಿಯೂ ಹೇಳುತ್ತಿಲ್ಲ. ಈ ಮಧ್ಯೆ ಆರ್ಥಿಕತೆಗೆ ರಕ್ತಸಂಚಲನೆ ಸೊನ್ನೆಯಾಗಿರುತ್ತದೆ. ನಗದಿನ ಸಮಸ್ಯೆಯು ಎಷ್ಟು ಜಾಗ್ರತೆ ಯಥಾಸ್ಥಿತಿಗೆ ಮರಳುತ್ತದೋ ಆರ್ಥಿಕತೆಗೆ ಅಷ್ಟು ಅನುಕೂಲಕರ. ಏತನ್ಮಧ್ಯೆ ಇನ್ನಷ್ಟು ನಾಟಕೀಯ ಪ್ರಹಸನಗಳನ್ನು ನಾವು ನಿರೀಕ್ಷಿಸ ಬಹುದು. ಪ್ರಧಾನಿಯವರು ಈ ಬಗ್ಗೆ ನಿರಾಸೆ ಮೂಡಿಸಲಾರರು. ಒಟ್ಟು ಎಷ್ಟು ಕಪ್ಪು ಹಣವನ್ನು ಹೊರತಂದಿರಿ? ಅಂತಹ ಪ್ರಶ್ನೆ ಹಾಕಿದರೆ ಪ್ರಧಾನಿ ಅದಕ್ಕೆ ನೇರ ಉತ್ತರ ನೀಡುವುದಿಲ್ಲ. ಅದರ ಬದಲು, ಬ್ಯಾಂಕಿನ ವ್ಯವಸ್ಥೆಗೆ ಎಷ್ಟು ಹಣವನ್ನು ತುಂಬಿಕೊಟ್ಟರೆಂಬುದನ್ನು ಬೇಕಾದರೆ ಹೇಳಿಯಾರು. ಪ್ರಹಸನದ ಭಾಗವಾಗಿ ಗೊಂದಲ ಮೂಡಿಸಿ ಈ ಮಾತನ್ನೂ ಹೇಳಿಯಾರು: "ನೋಡಿ, ಸಜ್ಜನರೆ, ಕೃಷಿ ವಲಯಕ್ಕೆ ಇಂತಿಷ್ಟು ಹಣವನ್ನು ತೆಗೆದಿಟ್ಟು ಬ್ಯಾಂಕುಗಳು ರೈತರಿಗೆ ಸಪೂರ ಸಾಲವನ್ನು ನೀಡುತ್ತವೆ." ಆದ್ಯತೆಯ ವಲಯಕ್ಕೆ ಇಷ್ಟರಮಟ್ಟಿನ ಉಪಚಾರವಾದರೂ ಬೇಡವೆ! ಆದರೆ ಒಂದಂಶವನ್ನು ಅವರು ಬಹಿರಂಗಗೊಳಿಸುವುದಿಲ್ಲ: ಕೃಷಿ ವಲಯಕ್ಕೆಂದು ನೀಡಲಾಗುವ ಸಾಲಗಳು ಬಹುತೇಕ ಸಣ್ಣ ಹಣಕಾಸು ಸಂಸ್ಥೆಗಳ ಮೂಲಕ (ಅವನ್ನು "ಮೈಕ್ರೊ ಫಿನಾನ್ಸ್" ಸಂಸ್ಥೆಗಳು ಎನ್ನುತ್ತಾರೆ) ಕೊಡಲಾಗುತ್ತವೆ. ಅವು ರೈತರಿಂದ ಮತ್ತು ಸ್ವಸಹಾಯ ಸಂಸ್ಥೆಗಳಿಂದ ಬೇಕಾಬಿಟ್ಟಿ ಬಡ್ಡಿಯನ್ನು ಪೀಕಿಸುತ್ತವೆ. ಪ್ರಧಾನಿಯು ಬಹಿರಂಗಗೊಳಿಸದ ಇನ್ನೂ ಒಂದು ಅಂಶವಿದೆ: ಕಾರ್ಪೊರೇಟ್ ವಲಯಕ್ಕೆ ನೀಡಲಾಗಿರುವ ಸಾಲಗಳನ್ನು ಮನ್ನಾ ಮಾಡಲಾಗುತ್ತದೆ, ಇಲ್ಲವೆ ಹೇಗೋ ಸರಿಹೊಂದಿಸ ಲಾಗುತ್ತದೆ, ಇಲ್ಲವೆ ಮರುಸಾಲಗಳೆಂದು ದಾಖಲು ಮಾಡಲಾಗುತ್ತದೆ. ಕಾರ್ಪೊರೇಟ್‌ಗಳಿಗೆ ಇದಕ್ಕಿಂತಲೂ ಲಾಭ ಬೇಕೆ? ಹೊಸ ಸಾಲಗಳು ಅಪಾರವಾಗಿ ದೊರೆಯಲಿವೆ. ಅಂತೆಯೇ, ಚಕ್ರವು ಸುತ್ತಿ ಮತ್ತೆ ಹಿಂದಿರುಗಿಸದ ಸಾಲದ ಬಾಧೆಯು ದೇಶವನ್ನು ಕಾಡುತ್ತದೆ.

**ರಾಜಕೀಯ ಪ್ರಶ್ನೆಗಳು**

ಭಾರತೀಯ ಜನತಾ ಪಕ್ಷದಲ್ಲಿ ಮಾರ್ಗದರ್ಶಕ ಮಂಡಲಿ ಎಂಬುದೊಂದಿದೆ. ಆ ಮಂಡಲಿಯು ಈವರೆಗೆ ತುಟಿಪಿಟಿಕ್ಕೆನಿಸಿಲ್ಲ. ಆ ಮಂಡಲಿಯ ಹಿರಿಯ ತಲೆಗಳನ್ನು ಪ್ರಧಾನಿ, ಅರ್ಥಸಚಿವ ಅರುಣ್ ಜೇಟ್ಲಿ ಮತ್ತು ಅಮಿತ್ ಷಾ ಯಶಸ್ವಿಯಾಗಿ ಪಕ್ಕಕ್ಕೆ ತಳ್ಳಿದ್ದಾರೆ. ಇಂದಿನ ಮುಗ್ಗಟ್ಟು ಮುಂದುವರಿದರೆ, ಸದ್ಯದಲ್ಲೇ ನಡೆಯಲಿರುವ ಉತ್ತರ ಪ್ರದೇಶ ಮತ್ತು ಪಂಜಾಬಿನ ಚುನಾವಣೆಗಳಲ್ಲಿ ಮೋದಿ ಪಕ್ಷಕ್ಕೆ ಬಹುಮತ ದೊರೆಯದಿದ್ದರೆ, ಆ ಎಲ್ಲ ಸೋಲುಗಳನ್ನು ಈ ತ್ರಿಮೂರ್ತಿಗಳ ತಲೆಗೆ ಕಟ್ಟಲಾಗುತ್ತದೆ. ಆಗ ಭಾರತೀಯ ಜನತಾ ಪಕ್ಷದ ಆಂತರಿಕ ವೈರುಧ್ಯಗಳು ಬಹಿರಂಗವಾಗಿ ಹೊರಬರುತ್ತವೆಯೇನೋ ಕಾದು ನೋಡಬೇಕು.

ಸಾಮಾಜಿಕ ಜಾಲತಾಣಗಳಲ್ಲಿ ಒಂದು ಸ್ವಾರಸ್ಯಕರ ಲೇಖನವು ಹರಿದಾಡುತ್ತಿದೆ. ಅದರ ಪ್ರಕಾರ 'ಇಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ' ಮತ್ತು 'ಕ್ಯಾರವಾನ್' ಪತ್ರಿಕೆಗಳಲ್ಲಿ ಒಂದು ಸುದ್ದಿಯನ್ನು ಪ್ರಕಟಿಸಲು ತೀರ್ಮಾನಿಸಲಾಗಿತ್ತು ಮತ್ತು ಅದು ಮೋದಿಯವರ ಕೈಗಳನ್ನು ಕಟ್ಟಿಹಾಕಿತು. ಸಹಾರಾ ಡೈರಿಗಳಲ್ಲಿ ಮೋದಿಯವರ ಹೆಸರು ದಾಖಲಾಗಿದೆ ಮತ್ತು ಅವರಿಗೆ ೫೫ ಕೋಟಿ ರೂಪಾಯಿಗಳನ್ನು ನೀಡಲಾಗಿತ್ತೆಂದು ದಾಖಲಾಗಿದೆ. ಮೋದಿಯವರು ಗುಜರಾತಿನ ಮುಖ್ಯಮಂತ್ರಿ ಆಗಿದ್ದಾಗಿನ ಸಂದರ್ಭದ ಸಮಾಚಾರ ಇದು. ಈ ವಿಚಾರವನ್ನು ಪ್ರಶಾಂತ ಭೂಷಣ್ ಬಹಿರಂಗವಾಗಿ ಹೇಳಿದ್ದಾರೆ, ಸರ್ವೋಚ್ಚ ನ್ಯಾಯಾಲಯವು ಆ ಬಗ್ಗೆ ತನಿಖೆ ನಡೆಸಬೇಕೆಂದು ಆಗ್ರಹಿಸಿದ್ದಾರೆ. ಸುಮ್ಮನೆ ಎಲ್ಲೋ ಹೆಸರು ದಾಖಲಾಗಿದ್ದರೆ ಅದು ತನಿಖೆಗೆ ಅರ್ಹವಾಗುವ ವಿಷಯವಾಗುವುದಿಲ್ಲ ಎಂದು ನ್ಯಾಯಾಲಯವು ಪ್ರಶಾಂತ ಭೂಷಣ್‌ಗೆ ಹೇಳಿಬಿಟ್ಟಿದೆ. ಹಾಗಿದ್ದರೆ ಸಹಾರಾದ ಕಂಪ್ಯೂಟರ್‌ಗಳಲ್ಲಿ ಅಡಕಗೊಂಡಿದ್ದ ಬೇರೆ ಮಾಹಿತಿಗಳನ್ನೇಕೆ ಗಂಭೀರವಾಗಿ ಪರಿಗಣಿಸ ಲಾಯಿತು ಮತ್ತು ಅದರ ಆಧಾರದ ಮೇಲೆ ತನಿಖೆ ಮತ್ತು ಮೊಕದ್ದಮೆ ಏಕೆ ಜಾರಿಯಾಯಿತು? ಇದಕ್ಕೆ ಸರ್ವೋಚ್ಚ ನ್ಯಾಯಾಲಯವು ಉತ್ತರ ನೀಡುವುದಿಲ್ಲ. ಏನೇ ಇರಲಿ, ಸಹಾರಾ ನೀಡಿತ್ತೆನ್ನಲಾದ ೫೫ ಕೋಟಿ ರೂಪಾಯಿಗಳೇನಾದರೂ ನಗದು ನೋಟು ರದ್ದತಿಯನ್ನು ಯಾವ ಪೂರ್ವಸಿದ್ಧತೆಯೂ ಇಲ್ಲದೆ ಥಟಕ್ಕನೆ ಜಾರಿಯಾಗುವಂತೆ ಪ್ರೇರೇಪಿಸಿತೆ? ತಿಳಿಯದು. ಒಂದಂತೂ ನಿಜ: ಯಾವ ಮುತ್ಸದ್ದಿಯೂ ಬ್ಯಾಂಕುಗಳಿಗೆ ಸಾರ್ವಜನಿಕರು ಹಿಂದಿರುಗಿಸುವ ನಗದಿಗೆ ಹೊಸ ನಗದನ್ನು ಕೊಡುವ ಪರ್ಯಾಯ ವ್ಯವಸ್ಥೆಯನ್ನು ಚೆನ್ನಾಗಿ ಮಾಡಿಕೊಳ್ಳದೆ ನೋಟು ರದ್ದತಿಯನ್ನು ಘೋಷಿಸುವುದಿಲ್ಲ ಮತ್ತು ಘೋಷಿಸಕೂಡದು. ಜನರನ್ನು ದುರವಸ್ಥೆಗೆ ದೂಡುವ ಅಕ್ರಮವು ಕ್ಷಮಾರ್ಹವಲ್ಲ. ಈಗಲೂ ನಮ್ಮ ದೇಶದಲ್ಲಿ ನೋಟು ಮುದ್ರಿಸುವ ಮಿಂಟುಗಳು ನಿರಂತರವಾಗಿ ಪೂರ್ಣಪ್ರಮಾಣದಲ್ಲಿ ಮುದ್ರಣದ ಕೆಲಸ ಮಾಡುತ್ತಿವೆ. ಅದಿನ್ನೆಷ್ಟು ದಿನ ಹೀಗೆಯೇ ಕೆಲಸ ಮಾಡುತ್ತಿದ್ದರೆ ಅಮಾನ್ಯವಾದ ನೋಟುಗಳ ಜಾಗದಲ್ಲಿ ಮಾನ್ಯವಾದ ಹೊಸ ನೋಟುಗಳು ದೊರೆಯುತ್ತವೆಯೋ ತಿಳಿಯುತ್ತಿಲ್ಲ.

ನೋಟು ರದ್ದತಿ ಯೋಜನೆಯ ವಿರುದ್ಧವಾಗಿ ಒಂದು ಪ್ರಬಲ ಕಾನೂನು ಸಮರ ನಡೆಯಲಿದೆಯೇ ಎಂಬುದು ಅನಿಶ್ಚಿತ. ರಿಸರ್ವ್ ಬ್ಯಾಂಕ್ ಶಾಸನದನ್ವಯ ನಗದು ನೋಟು ರದ್ದತಿಯನ್ನು ಕೇವಲ ಒಂದು ಗೆಜೆಟ್ ಪ್ರಕಟಣೆಯಿಂದ ಮಾಡಲಾಗದೆಂದು ಕೆಲವು ಪರಿಣತರು ಅಭಿಪ್ರಾಯ ಪಟ್ಟಿದ್ದಾರೆ. ಅವರ ಪ್ರಕಾರ ಒಂದು ಸುಗ್ರೀವಾಜ್ಞೆ ಇಲ್ಲವೆ ಶಾಸನಕ್ಕೆ ಒಂದು ತಿದ್ದುಪಡಿಯನ್ನು ಪಾರ್ಲಿಮೆಂಟಿನಲ್ಲಿ ಅಂಗೀಕರಿಸುವುದು ಅತ್ಯಗತ್ಯ. ಸರ್ವೋಚ್ಚ ನ್ಯಾಯಾಲಯದಲ್ಲಿ ಎರಡೂ ಅಭಿಪ್ರಾಯಗಳನ್ನು ಕುರಿತಂತೆ ವಾದ-ಪ್ರತಿವಾದಗಳು ಜಾರಿಯಲ್ಲಿವೆ. ನ್ಯಾಯಾಲಯವೇನಾದರೂ ಪ್ರಸ್ತುತ ಜಾರಿಗೊಳಿಸಲಾಗಿರುವ ನಗದು ನೋಟು ರದ್ದತಿಯನ್ನು ಸಂವಿಧಾನಬಾಹಿರ ಎಂದು ತೀರ್ಪಿತ್ತರೆ ಅದೆಷ್ಟು ಆರ್ಥಿಕ ಪ್ರಳಯದ ಮಹಾಪೂರಗಳನ್ನೆ ದುರಿಸಬೇಕಾಗುವುದೋ ಅನೂಹ್ಯವಾಗಿದೆ.

ದೇಶದ ಮೇಲೆ ಪ್ರಹಾರ ನಡೆದಿದೆ: ಅದನ್ನು ಶಸ್ತ್ರಕ್ರಿಯೆಯ ಮಾದರಿಯುಳ್ಳ ಹೊಡೆತ ಎನ್ನಲಾಗಿದೆ. ಅದರ ಸುತ್ತ ಪರಿಹಾರಗೊಳ್ಳದಿರುವ ಅನೇಕ ಆರ್ಥಿಕ, ರಾಜಕೀಯ ಮತ್ತು ಕಾನೂನಾತ್ಮಕ ಪ್ರಶ್ನೆಗಳು ಧಿಗ್ಗನೆ ಎದ್ದುನಿಂತಿವೆ. ಬರುವ ದಿನಗಳಲ್ಲಿ ಇವೆಲ್ಲಾ ಹೇಗೆ ತೆರೆದುಕೊಳ್ಳುತ್ತಾ ಹೋಗುತ್ತವೋ ಹೇಳಬರುತ್ತಿಲ್ಲ.

**ಎಂ. ಸತ್ಯಾನಂದ**
ಎಸ್‌ಎಫ್-೧, ಸೌತೆಂಡ್ ಸಂಪೂರ್ಣ, ಮಾಡಲ್ ಹೌಸ್ ರಸ್ತೆ
ಬಸವನಗುಡಿ, ಬೆಂಗಳೂರು - ೫೬೦ ೦೦೪

# ಕ್ಷ-ಕಿರಣ

– ಸಾನ್ವಿ ಪಿ.












ಚಿಗ್ಯಾಟಿಯಿಂದ ನಾನು, ಚೆನ್ನಿ ವಲಸೆ ಬಂದು ತಾತ್ಕಾಲಿಕವಾಗಿ ನೆಲೆ ಕಂಡುಕೊಂಡಿದ್ದು ಬಡೆಲಡಕು ಸಿಟಿಯ ಹೊರವಲಯದಲ್ಲಿದ್ದ ನವಕಂಚಿ ಬೆಟ್ಟದ ಮೇಲೆ. ಚಂದ್ರಕಳಾ ಅಮ್ಮಣ್ಣಿ ಹೆಸರಿನ ಭಕ್ತೆಯ ಮೇಲಿನ ಮೋಹದಿಂದ ಮೂಲ ಕಂಚಿಯಲ್ಲಿನ ಆರಾಧ್ಯ ದೈವ ವರದರಾಜಸ್ವಾಮಿ ಇಲ್ಲಿಗೆ ವಲಸೆ ಬಂದು ನೆಲೆಸಿದ್ದ ಕಾರಣಕ್ಕೆ ಅದು ನವಕಂಚಿ ಎಂದೇ ಹೆಸರಾಗಿತ್ತು. ಮಾತೆ ಚಂದ್ರಕಳಾದೇವಿ ನಮ್ಮಂಥ ಶ್ವಾನಗಳಿಗೆಂದೇ ಸುಸಜ್ಜಿತ ಕಟ್ಟಡ ನಿರ್ಮಿಸಿ ಅದನ್ನು ಶೌನಕಾಶ್ರಮವೆಂಬ ಹೆಸರಿನಿಂದ ಕರೆಯುತ್ತಿದ್ದಳು. ಅದರಲ್ಲಿದ್ದ ನಮ್ಮಲ್ಲಿನ ಕೆಲವು ಶ್ವಾನಗಳಿಗೆ ಯುಗಗಳ ಹೆಸರು ಗಳನ್ನು ಇಟ್ಟಿದ್ದರೆ ಇನ್ನು ಕೆಲವು ಶುನಕಗಳಿಗೆ ಸಪ್ತರ್ಷಿಗಳ ಹೆಸರುಗಳನ್ನು ಇಟ್ಟಿದ್ದಳು, ಹೆಣ್ಣು ಶುನಕಗಳಿಗೆ ದೇವಲೋಕದ ಅಪ್ಸರೆಯರ ಹೆಸರುಗಳನ್ನು ಇಟ್ಟಿದ್ದಳೆಂದರೆ ನೀವೇ ಯೋಚಿಸಿ ಆಕೆಯಲ್ಲಿದ್ದ ಆಸ್ತಿಕತೆಯನ್ನು. ಹೀಗಿರುತ್ತಿರಲಾಗಿ ಒಂದು ದಿವಸ ನಾನು ಚೆನ್ನಿಯ ಸಂಗಡ ವಾಯುವಿಹಾರಕ್ಕೆ ಹೋದ ಸಂದರ್ಭದಲ್ಲಿ...

ಎಲ್ಲೋ ಗುರ್ (ಅದರ ಅರ್ಥ ಏನಿತ್ತೆಂದರೆ ಎಲೈ ಸಹಕುಲಬಾಂಧವರೆ, ವಯಸ್ಸಾಗಿರುವ ನನಗೆ ಆಹಾರ ಸಂಪಾದಿಸಿಕೊಳ್ಳುವ ಶಕ್ತಿ ಉಡುಗಿ ಹಸಿದಿರುವೆನು, ಆದ್ದರಿಂದ ನನಗೆ ಆಹಾರ ನೀಡಿ ಕ್ಷುದ್ಬಾಧೆ ಹೋಗಲಾಡಿಸಿರಿ) ಎಂಬ ಸದ್ದು ಕೇಳಿ ನಾವು ಅಡಲ್ಲಾಗಿ ಹೋದೆವು. ಹೆದರಿದ ಚೆನ್ನಿ ಕುಪ್ಪಳಿಸಿ ಹಿಂದಕ್ಕೆ ಜಿಗಿದಳು. ಅದಕ್ಕೆ ನಾನು ವನ್ಯಮೃಗಗಳು ಇಲ್ಲಿ ಪ್ರವೇಶಿಸಲಾರವು, ಹೆದರದಿರು ಚಿನ್ನಾ ಎಂದು ಧೈರ್ಯ ಹೇಳಿದೆನು. ಸುಮ್ಮನೆ ಹಿಂದೆ ಇರು ಎಂದ ಬಳಿಕ...

ಹೋಗಿ ನೋಡುತ್ತೇನೆ, ಶುನಕವೊಂದು ಲ್ಯಾಟರಿನ್ ಕೋಣೆಯೊಳಗೆ ಅವಿತಿತ್ತು. ಅದರ ದೇಹದ ಮೇಲೆ ಅತಿ ಹೆಚ್ಚು ರೋಮವಿತ್ತು, ಕಿವಿಗಳು ಎರಡೂ ಮಗ್ಗುಲು ಇಳಿಬಿದ್ದಿದ್ದವು, ಅದರ ಮೂತಿ ಒಂದು ನಮೂನಿ ಇತ್ತು, ನಾಲಗೆಯನ್ನು ಹೊರಚಾಚಿತ್ತು. ನಿಸ್ಸಂದೇಹವಾಗಿ ಅದು ಹೈಬ್ರಿಡ್ ಜಾತಿಯದ್ದೆಂದು ಊಹಿಸಿದೆ, ವಿಷ್ ಮಾಡಿದ್ದಕ್ಕೆ ಅದು ಸಹ ವಿಷ್ ಮಾಡಿತು. ಬನ್ನಿ ಹೊರಗೆ ಎಂದೆ, ಅದು ಅಂಜುತ್ತ ಅಳುಕುತ್ತ ಮೆಲ್ಲಗೆ ಹೊರಗೆ ಬಂದಿತು, ಶೌನಕ ನೀತಿ ಸಂಹಿತೆಯಂತೆ ಅದು ನಮ್ಮಿಬ್ಬರ ಹಿಂಭಾಗವನ್ನು ಆಘ್ರಾಣಿಸಿ ಗೌರವಿಸಿತು. ನಾವು ಸಹ ಅದರ ಹಿಂಭಾಗವನ್ನು ಮೂಸಿ ಗೌರವಿಸಿ ಪರಸ್ಪರ ಅಪಾಯವಿಲ್ಲವೆಂಬ ನಿರ್ಣಯಕ್ಕೆ ಬಂದ ಬಳಿಕ...

ಅದು ತನ್ನ ಕುರಿತು ಈ ಪ್ರಕಾರ ಹೇಳಿಕೊಂಡಿತು. ನನ್ನ ಜಾತಿ ಲ್ಯಾಬ್ರಡಾರ್, ನನ್ನ ಒರಿಜಿನಲ್ ನೇಮ್ ತಿಳಿಯದು, ಆದರೆ ಪೊಲೀಸ್ ಡಿಪಾರ್ಟ್‌ಮೆಂಟನೋರು ನನ್ನನ್ನು ಕರೆಯಲಾರಂಭಿಸಿದ್ದು ಜೇಮ್ಸ್ ಬಾಂಡ್ ಎಂಬ ಹೆಸರಿನಿಂದ. ಆದರೆ ಮನುಷ್ಯರು ಪ್ರೀತಿಯಿಂದ ಕರೆಯುತ್ತಿದ್ದುದು ಜೇಮಿ, ಜಿಮ್ಮಿ, ಬಾಂಡೂ, ಗಾಂಡೂ ವಗೈರೆ ವಗೈರೆ. ನನ್ನನ್ನು ಹೆತ್ತವರು ಯಾರೆಂಬುದು ಇನ್ನೂ ನಿಗೂಢ, ಆದರೆ ನನ್ನನ್ನು ಸಾಕಿ ಬೆಳೆಸಿದ ವ್ಯಕ್ತಿ ಗುಣಸಾಗರ ನಗರದ ದಾದಾ ಖಲಂದರು. ಆತನಿಂದ ಪೊಲೀಸ್ ಇಲಾಖೆ ನನ್ನನ್ನು ಖರೀದಿಸಿತು. ಅಲ್ಲದೆ ವ್ಯಾಕುಲವೆಂಬ ನಗರದಲ್ಲಿದ್ದ ಪೊಲೀಸ್ ತರಬೇತಿ ಕೇಂದ್ರಕ್ಕೆ ಚಿಕ್ಕವನಿದ್ದ ನನ್ನನ್ನು ಸೇರಿಸಿದರು. ಅಲ್ಲಿನ ರ‍್ಯಾಂಬೋ ಎಂಬ ವ್ಯಕ್ತಿ ನನಗೆ ಅನೇಕ ವಿಧದ ಕಸರತ್ತುಗಳನ್ನು ಕಲಿಸಿದ. ಅಲ್ಲದೆ ವಿಶೇಷ ತರಬೇತಿ ದಳ ನನಗೆ ಕಳ್ಳರನ್ನು ಹಿಡಿಯು ವುದು, ಅಡಗಿಸಿಟ್ಟ ಬಾಂಬುಗಳನ್ನು

# ನವಕಂಚಿ ಮಹಾತ್ಮೆ

ಕುಂ. ವೀರಭದ್ರಪ್ಪ



**ಒಂದೆರಡು ದಿವಸಗಳ ಬಳಿಕ ಇನ್ನೋರ್ವ ಅರ್ಚಕ ಮಾಧವನಾಂದ್ ಆಚಾರ್ಯ ತಾವು ಗರ್ಭಗುಡಿಯಲ್ಲಿ ಸ್ವಾಮಿಯ ಎರಡು ಕಣ್ಣುಗಳು ಮಿಂಚು ಕೋರೈಸಿದಂತೆ ಫಳಫಳ ಹೊಳೆಯುತ್ತಿದ್ದದನ್ನು ಖುದ್ದು ನೋಡಿದ್ದಾಗಿ ಸುದ್ದಿ ಹರಡಿಸಿದರು. ಎಲ್ಲರೂ ಆ ದೃಶ್ಯವನ್ನು ಕಣ್ಣಾರೆ ನೋಡಿದ ಬಳಿಕ ಎಂತೆಂಥ ಘಟನೆಗಳು ಶರವೇಗದಲ್ಲಿ ಸಂಭವಿಸಲಾರಂಭಿಸಿದವೆಂದರೆ !**

ಪತ್ತೆ ಹಚ್ಚುವುದು, ಕೊಲೆಗಾರರ ಸುಳಿವು ಪತ್ತೆ ಹಚ್ಚುವುದು ಇವೇ ಮೊದಲಾದ ವಿದ್ಯೆಗಳನ್ನು ತಂತ್ರ ಕುತಂತ್ರಗಳನ್ನು ನನಗೆ ಅವರು ಕಲಿಸಲು ಹಲವು ತಿಂಗಳು ತೆಗೆದುಕೊಂಡರು. ಅಷ್ಟು ಹೊತ್ತಿಗೆ ನಾನು ಯೌವನಾವಸ್ಥೆಗೆ ತಲುಪಿದ್ದೆ, ನನ್ನ ಜಾತಿಯದ್ದೇ ಆದ ಅಮೆಜಾನ್ ಹೆಸರಿನ ನಾಯಿಯನ್ನು ನನಗೆ ಜೊತೆ ಮಾಡಿದರು. ಆಕೆಯ ಪೂರ್ವಿಕರು ಲ್ಯಾಟಿನ್ ಅಮೇರಿಕನ್ ಕಡೆಯ ಬ್ರೆಜಿಲ್ಲಿನ ಕಡೆಯವರು. ನಮ್ಮಿಬ್ಬರನ್ನು ಬಡೆಲಡಕು ಪಟ್ಟಣದ ಕೇಂದ್ರ ಅಪರಾಧ ಸಂಶೋಧನಾ ಕೇಂದ್ರದಲ್ಲಿ ಅಪಾಯಿಂಟ್ಮೆಂಟ್ ಮಾಡಿಕೊಂಡರು. ನಾನು ಡಿವೈಎಸ್ಪಿ ಕ್ಯಾಡರಿನ ಪೊಲೀಸ್ ಅಧಿಕಾರಿ ಎಂದರೆ ನಿಮಗೆ ಆಶ್ಚರ್ಯವಾಗಬಹುದು. ನಾನು ನನ್ನ ವೃತ್ತಿ ಜೀವನದಲ್ಲಿ ಹಲವು ಕೊಲೆಗಾರರನ್ನು ಪತ್ತೆ ಹಚ್ಚಿದ್ದೇನೆ, ಜೀವದ ಹಂಗು ತೊರೆದು ಉಗ್ರಗಾಮಿಗಳನ್ನು ಹಿಡಿದುಕೊಟ್ಟಿದ್ದೇನೆ, ನಾನು ಕಂಡುಹಿಡಿದ ಬಾಂಬುಗಳಿಗೆ ಲೆಕ್ಕವಿಲ್ಲ. ನನ್ನ ಅಸಾಧಾರಣ ಸೇವೆಯನ್ನು ಕೇಂದ್ರ ಸರ್ಕಾರ ಗುರುತಿಸಿ ರಾಷ್ಟ್ರಪತಿಯವರು, ಕೇಂದ್ರ ಗೃಹ ಖಾತೆ ಸಚಿವರು ನನಗೆ ಹಲವಾರು ಪ್ರಶಸ್ತಿಗಳನ್ನು ನೀಡಿರುವರು. ಆದರೆ ಅದರಿಂದ ಏನು ಉಪಯೋಗ! ಎಂದು ಹೇಳುತ್ತಿದ್ದಂತೆ ಕಣ್ಣಲ್ಲಿ ನೀರು ತಂದುಕೊಂಡಿತು. ಅದರ ಮಾತಿನಿಂದ ನಮಗೆ ಆಶ್ಚರ್ಯವಾಯಿತು. ನಮ್ಮ ಸಮುದಾಯದಲ್ಲೂ ಇಂಥ ಸಾಧಕರು ಇರುವರೆಂಬುದು ಅಭಿಮಾನದ ಸಂಗತಿ. ಆದರೆ ಅಂಥ ಜೇಮ್ಸ್‌ಬಾಂಡ್ ಸಾಹೇಬ ಇಂಥ ಸ್ಥಿತಿಯಲ್ಲಿ! ಕೇಳಿದ್ದಕ್ಕೆ ಅದು ದಿನಂಪ್ರತಿ ತನಗೆ ಮಾಂಸಾಹಾರಿ ಖಾದ್ಯಗಳನ್ನು ಉಣಬಡಿಸುತಿದ್ದುದನ್ನು, ಏಸಿ ರೂಮಿನಲ್ಲಿ ಸುಖದ ಸುಪ್ಪತ್ತಿಗೆ ಮೇಲೆ ಮಲಗಿಸುತ್ತಿದ್ದುದನ್ನು, ಸೋಪು ಹಚ್ಚಿ ತನಗೆ ಸ್ನಾನ ಮಾಡಿಸುತ್ತಿದ್ದುದನ್ನು ಸವಿಸ್ತಾರವಾಗಿ ತಿಳಿಸಿತು. ಆದರೆ ತಾನು ನಿವೃತ್ತನಾದ ಬಳಿಕ ತನಗೆ ಪಿಂಚಣಿ ಬರುತ್ತಿರುವುದು ಎಷ್ಟು ನಿಜವೋ ಅದನ್ನು ಕೆಲವು ಪೊಲೀಸ್ ಅಧಿಕಾರಿಗಳು ನುಂಗಿಹಾಕುತ್ತಿರುವುದು ಸಹ ಅಷ್ಟೇ ನಿಜವೆಂದು ಹೇಳಿತು. ಅವರು ಕೊಡುತ್ತಿರುವ ಹಿಂಸೆ ತಾಳಲಾರದೆ ತಾನು ಪೊಲೀಸ್ ರಿಮ್ಯಾಂಡ್ ಹೋಮಿನಿಂದ ತಪ್ಪಿಸಿಕೊಂಡು ಪ್ರಯಾಸಪಟ್ಟು ಇಲ್ಲಿಗೆ ಬಂದಿರುವುದಾಗಿ ಹೇಳಿಕೊಂಡಿತು. ಅದರ ಕರುಣಾಜನಕ ಕಥೆಯನ್ನು ಕೇಳಿ ನಾವು ಭಾವಪರವಶರಾದೆವು. ಏನು ಹೇಳುವುದೆಂದು ಮಾತೇ ಹೊರಡಲಿಲ್ಲ. ಬಳಿಕ ಅದು ಪುನಃ ನನ್ನ ಹೆಸರನ್ನು ಯಾರಿಗೂ ಹೇಳಬೇಡಿ ದಯವಿಟ್ಟು. ಕ್ರಿಶ್ಚಿಯನ್ನರೆಂದು ತಿಳಿದರೆ ಹೊರಗಟ್ಟಬಹುದು ಅದಕ್ಕೆ. ಕಳೆದ ಮೂರು ದಿವಸಗಳಿಂದ ಏನನ್ನೂ ತಿಂದಿಲ್ಲ, ಏನಾದ್ರೂ ತಿನ್ನಲಿಕ್ಕೆ ತಂದಿರೆಂದರೆ ಪುಣ್ಯ ಬರ್ತದೆ ಮಕ್ಕಳೆ ಎಂದು ದೈನ್ಯತೆಯಿಂದ ಅಪೇಕ್ಷಿಸಿತು. ಚೆನ್ನಿಯನ್ನು ಅದರ ಬಳಿ ಬಿಟ್ಟು ನಾನು ಅನ್ನದಾನ ಛತ್ರದ ಬಳಿಗೆ ಹೋದೆ, ಹೊರಗಡೆ ಕೆಲವರು ಕುಳಿತು ಊಟ ಮಾಡುತ್ತಿರುವ ದೃಶ್ಯ ಗೋಚರಿಸಿತು. ನಾನು ಹೋಗಿ ಅವರಿಗೆ ಹತ್ತಿರ ಕುಳಿತೆ ಮಹಾಮಳ್ಳಿಗನಂತೆ. ನನ್ನ ವರ್ತನೆ ಅವರಿಗೆ ಹಿಡಿಸಿತೇನೊ, ಒಂದು ಚಪಾತಿಯನ್ನು ನನ್ನ ಕಡೆ ಎಸೆದರು. ನಾನದನ್ನು ಕಚ್ಚಿಕೊಂಡು ಹೋಗಿ ಝಿರೋ ಝಿರೋ ಸೆವೆನ್ನಿನ ಮುಂದಿರಿಸಿದೆ...

* * *

ನಮಗೆ ಏನೊ ಹೊಳೆಯಿತೋ ಏನೊ! ಜೇಮ್ಸ್ ಬಾಂಡ್ ಎಂಬ ಹೆಸರನ್ನು ಉತಾರ ಮಾಡಿ ಅದರ ಬದಲಿಗೆ ಏಜಿಗೆ ತಕ್ಕಂತೆ ಭೀಷ್ಮ ಪಿತಾಮಹ ಎಂದು ಮರುನಾಮಕರಣ ಮಾಡಿದೆವು. ಸುರಕ್ಷಿತ ಸ್ಥಳವೆಂದರೆ ಶೌನಕಾಶ್ರಮ. ಅದರ ಹಿರಿಯ ಗೌತಮನ ಬಳಿಗೆ ಹೋಗಿ ವಿಷಯ ತಿಳಿಸಿದೆ. ಅದಕ್ಕೆ ಆತ ಖಂಡಿತ ಕರೆದುಕೊಂಡು ಬನ್ನಿರಿ ಎಂದು ಅನುಮತಿ ನೀಡಿದನು. ಭೀಷ್ಮಜ್ಜ ಎಂದು ಕೂಗಿದೊಡನೆ ಹೊಸ ಅತಿಥಿ ಬಂದನು. ಆತನನ್ನು ಆಪಾದಮಸ್ತಕ ದಿಟ್ಟಿಸಿ ನೀನು ವಿದೇಶಿ ತಳಿಗೆ ಸೇರಿದವನಲ್ಲವೆ! ಬಾಡಿ ನೋಡಿದರೆ ನೀನು ಸುಖ ಸುಪ್ಪತ್ತಿಗೆಯಲ್ಲಿದ್ದವನೂಂತ ಅನ್ನಿಸುತ್ತೆ ಎಂದು ಹೇಳಿದ ಬಳಿಕ ಆಶ್ರಮದ ರೀತಿರಿವಾಜು ತಿಳಿಸಿತು ಸಂಕ್ಷಿಪ್ತವಾಗಿ. ಅದಕ್ಕೆ ಭೀಷ್ಮಜ್ಜ ಸಮ್ಮತಿಸಿದನು.

ಆತ ದೈಹಿಕವಾಗಿ ಕೃಶನಿದ್ದ. ತೀರಾ ಮೆಲ್ಲಗೆ, ಅದೂ ಅಡಿಕೆ ಮರದಂತೆ ಓಲಾಡುತ್ತ ತಿರುಗಾಡುತ್ತಿದ್ದನು. ಎಲ್ಲರ ಕಡೆ ದೈನ್ಯಾತಿದೈನ್ಯತೆಯಿಂದ

ನೋಡುತ್ತಿದ್ದನು. ನಿಮಗೆ ದೊರಕುವ ಹತ್ತು ತುತ್ತುಗಳಲ್ಲಿ ಒಂದು ತುತ್ತನ್ನು ನನಗೆ ಮೀಸಲಿಡಿ ಎಂದು ಕಣ್ಣೋಟದಿಂದ ಅಂಗಲಾಚುತ್ತಿದ್ದನು. ನಮ್ಮ ಶ್ವಾನಗಳಲ್ಲಿ ಎಲ್ಲವು ಕೆಟ್ಟ ಸ್ವಭಾವದವಾಗಿರಲಿಲ್ಲ, ಅವುಗಳ ಪೈಕಿ ಒಳ್ಳೆಯವು ಸಹ ಇದ್ದವಷ್ಟೆ, ಅವು ಚೂರುಪಾರು ಆಹಾರವನ್ನು ಉಳಿಸಿ ತಂದು ಯಜಮಾನನ ಮುಂದೆ ಹಾಕುತ್ತಿದ್ದವು, ಆತ ತಿಂದು ಹೇಗೋ ಕಾಲಾಯಾಪನೆ ಮಾಡುತ್ತಿದ್ದನು. ಆದರೆ ಪರೋಪಕಾರ ಬುದ್ಧಿ ಎಷ್ಟು ದಿವಸ ಇರಲು ಸಾಧ್ಯ! ಅಲ್ಲದೆ, ನಮ್ಮ ಬದುಕು ಡೋಲಾಯಮಾನ ಸ್ಥಿತಿಯಲ್ಲಿತ್ತು, ಅದಲ್ಲದೆ, ನಮಗೆ ಹೊತ್ತು ಹೊತ್ತಿಗೆ ಸರಿಯಾಗಿ ಆಹಾರ ದೊರಕುತ್ತಿರಲಿಲ್ಲ, ದೊರಕಿದರೂ ಅತ್ಯಲ್ಪ. ಇನ್ನೂ ಒಂದು ಮಾತೆಂದರೆ ಭೀಷ್ಮಜ್ಜ ನಮ್ಮಲ್ಲಿ ಯಾರೊಬ್ಬರಿಗೂ ಸಂಬಂಧಿಯಾಗಲೀ ಪರಿಚಯಸ್ಥನಾಗಲೀ ಆಗಿರಲಿಲ್ಲ. ಆದ್ದರಿಂದ ನಮ್ಮ ಶ್ವಾನಗಳಲ್ಲಿ ಆತನ ಬಗೆಗಿನ ಆಸಕ್ತಿ ಕ್ರಮೇಣ ಕಡಿಮೆಯಾಯಿತು. ಹೀಗಾಗಿ...

ಕೆಲವು ದಿವಸಗಳು ಹೇಗೋ ಉರುಳಿದವು. ಅಜ್ಜ ದಿನಗಟ್ಟಲೆ ಅನ್ನವಿಲ್ಲದೆ ಉಪವಾಸ ಬೀಳಲಾರಂಭಿಸಿದ. ತಾನೇ ಕಷ್ಟಪಟ್ಟು ತಿರುಗಾಡಿ ಎಂಜಲೆಲೆಗಳನ್ನು ನೆಕ್ಕಿಯೋ, ಕೊಚ್ಚೆ ನೀರು ಕುಡಿದೋ ಎಷ್ಟು ದಿನಾಂತ ಇರಲಾದೀತು! ಒಂದು ದಿವಸ ನಮ್ಮನ್ನು ಕರೆದ, ಹೋದ ನಮ್ಮನ್ನು ಕಣ್ತುಂಬ ನೋಡಿದ. ನಿಮ್ಮ ಉಪಕಾರವನ್ನು ಮರೆಯುವುದಿಲ್ಲವೆಂದು ಹೇಳಿದ, ಬಳಿಕ ತಾನು ಬೆಟ್ಟದಿಂದ ಇಳಿದು ಹೋಗುವುದಾಗಿ ಹೇಳಿದ, ಅಲ್ಲದೆ ಆತ ಮಾರನೆ ದಿವಸವೇ ಕಣ್ಮರೆಯಾದನು, ಆ ಬಗ್ಗೆ ಯಾವ ನಾಯಿಯೂ ತಲೆ ಕೆಡಿಸಿಕೊಳ್ಳಲಿಲ್ಲ. ಕಾರಣ ಎಷ್ಟೋ ನಾಯಿಗಳು ಹೀಗೆ ಬರುತ್ತಿದ್ದವು, ಹಾಗೆ ಬಂದ ದಾರಿಗೆ ಸುಂಕವಿಲ್ಲವೆಂಬಂತೆ ಕಣ್ಮರೆಯಾಗುತ್ತಿದ್ದವು. ಆದರೆ ಭೀಷ್ಮಜ್ಜನ ನೆನಪಿನಿಂದ ನನಗಿಂತ ಮುಖ್ಯವಾಗಿ ಚೆನ್ನಿ ತನ್ನ ಮನಸ್ಸಿಗೆ ನೋವು ಮಾಡಿಕೊಂಡಳು. ಆತನನ್ನು ಅಲ್ಲಿ ಇಲ್ಲಿ ತಲಾಷ್ ಮಾಡಲಾರಂಭಿಸಿದಳು. ಹೀಗಿರುತ್ತಿರಲಾಗಿ...

ಪವಿತ್ರ ಗುರುವಾರ, ಬ್ರಾಹ್ಮೀ ಮುಹೂರ್ತದಲ್ಲಿ ಮಡಿಯುಡಿಯಿಂದ ಗರ್ಭಗುಡಿ ಪ್ರವೇಶಿಸಿ ಸ್ವಾಮಿಯನ್ನು ಭಕ್ತಿಶ್ರದ್ಧೆಯಿಂದ ಪೂಜೆ ಮಾಡುತ್ತಿದ್ದವರು ಯಾರೆಂದರೆ ಗುರುರಾಜಾಚಾರ್ಯರೆಂಬ ಸ್ಥೂಲಕಾಯದ ವ್ಯಕ್ತಿ, ತಿರುಚ್ಚಿ ಕಡೆಯ ವೈದಿಕ ಬ್ರಾಹ್ಮಣರು. ಆ ದಿವಸ ವೈಕುಂಠ ಏಕಾದಶಿ ಎನ್ನುವ ಕಾರಣಕ್ಕೆ ಅರ್ಧ ಗಂಟೆ ಮುಂಚಿತವಾಗಿ ಒಂದೊಂದಾಗಿ ಬೀಗಗಳನ್ನು ತೆರೆಯುತ್ತ ನಿಧಾನವಾಗಿ ಗರ್ಭಗುಡಿಯನ್ನು! ಹ್ಞಾಂ ಅಂದಹಾಗೆ ಇಲ್ಲೊಂದು ಮಹತ್ವದ ಸಂಗತಿಯನ್ನು ಪ್ರಸ್ತಾಪಿಸಿದರೆ ಆಸ್ತಿಕರಿಗೆ ಹಿಡಿಸಬಹುದೆಂದು ಭಾವಿಸುವೆ. ಅದೆಂದರೆ ರಾತ್ರಿ ವೇಳೆ ನಿದ್ರೆಯಿಂದ ಎಚ್ಚೆತ್ತು ಸೇವನೆ ಮಾಡಲೆಂದು ಬಗೆಬಗೆಯ ಭಕ್ಷ್ಯಾನ್ನವನ್ನು ಸ್ವಾಮಿಯ ಸಾನ್ನಿಧ್ಯದಲ್ಲಿರಿಸುವುದು ವಾಡಿಕೆ. ಸ್ವಾಮಿ ಅದನ್ನು ಆಸೆಪಟ್ಟು ತಿಂತಿರಲಿಲ್ಲವೆನ್ನುವುದು ಎಷ್ಟು ನಿಜವೋ, ಅದನ್ನು ಅರ್ಚಕರ ಕುಟುಂಬದ ಸದಸ್ಯರು ಬೆಳಗಿನ ಉಪಾಹಾರದ ರೂಪದಲ್ಲಿ ಸೇವಿಸುತ್ತಿದ್ದರು ಎನ್ನುವುದು ಸಹ ಅಷ್ಟೇ ನಿಜ. ನಾಳೆ ಬೆಳಗಿನ ಸ್ಕೂಲು, ಏಕಾದಶಿ ಇರುವುದರಿಂದ ನಾಳೆ ಅಷ್ಟೊತ್ತಿಗೆ ಅಡುಗೆ ಮಾಡಲಿಕ್ಕಾಗುವುದಿಲ್ಲ, ಅಲ್ಲಿನ ಪ್ರಸಾದವನ್ನು ಸಾಧ್ಯವಾದಷ್ಟು ಹೆಚ್ಚು ಪ್ರಮಾಣದಲ್ಲಿ ತನ್ನಿರಿ, ಮಕ್ಕಳು ಅದನ್ನು ತಿಂದು ಸ್ಕೂಲಿಗೆ ಹೋಗುವರು ಎಂದು ತಮ್ಮ ಶ್ರೀಮತಿ ಅಲುವೇಲುಮಂಗಮ್ಮ ಹೇಳಿದ್ದರು. ಅದನ್ನು ಸ್ಮರಿಸಿಕೊಳ್ಳುತ್ತ ಹೋಗಿ ನೋಡಿ ಮೂಗಿನ ಪ್ರಸಾದ ರೂಪದಲ್ಲಿದ್ದ ಭಕ್ಷ್ಯಾನ್ನ ತುಂಬಿದ್ದ ಬೆಳ್ಳಿ ತಳಿಗೆಗಳೆಲ್ಲವೂ ಖಾಲಿ ಖಾಲಿ. ಸ್ವಾಮಿಯ ತುಟಿಗೆ ಅನ್ನದ ಅಗುಳಿನಂಥ ಚಿಕ್ಕ ಪ್ರಮಾಣದ ವಸ್ತು ಅಂಟಿರುವುದನ್ನು ಗಮನಿಸಿ ಒಂದು ಕ್ಷಣ ಮೂರ್ಛೆ ಹೋಗಿ ಪುನಃ ಚೇತರಿಸಿಕೊಂಡರು. ಸ್ವಾಮಿ ನನ್ನ ಒಡೆಯಾ ನೀನು ಪ್ರಸಾದ ಸೇವಿಸಿ ನಮ್ಮನ್ನು ಕೃತಾರ್ಥರನ್ನಾಗಿಸಿದಿ ಮಹಾಪ್ರಭೋ ಎಂದು ದೀರ್ಘದಂಡ ಪ್ರಣಾಮ ಸಲ್ಲಿಸಿದರು. ಸ್ವಲ್ಪ ದೊಡ್ಡಬಾಯಿಗೆ ಒಡೆಯರಿದ್ದ ಅವರು ಅದನ್ನು ಸುದ್ದಿ ಮಾಡಿದರು. ಕೂಗಳತೆ ಕಣ್ಣಳತೆಯಲ್ಲಿದ್ದ ಭಕ್ತರು ಅನ್ನದ ಅಗುಳು ಸಹಿತ ಸ್ವಾಮಿ ದರ್ಶನ ಪಡೆದು ಕೃತಾರ್ಥರಾದರು, ಅದು ಅದೇ ಮಧ್ಯಾಹ್ನ ಬಡೆಲಡಕು ನಗರದಾದ್ಯಂತ ಹರಡಿತು. ಜನರ ಪ್ರವಾಹವೆ ನವಕಂಚಿ ಬೆಟ್ಟದ ಕಡೆ ಹರಿದು ಬರಲಾರಂಭಿಸಿತು. ಅದರ ಪರಿಣಾಮವಾಗಿ ದೇವಸ್ಥಾನದ ಹುಂಡಿ ಅರ್ಧ ದಿವಸದಲ್ಲಿ ಪೂರ್ತಿ ತುಂಬಿತೆಂದರೆ ನೀವೇ ಯೋಚಿಸಿ ಆಸ್ತಿಕತೆಯ ಪರಾಕಾಷ್ಠೆಯನ್ನು!

ಆರಂಭ ದಿವಸ ಏಕಾದಶಿ, ಆದ್ದರಿಂದ ಸ್ವಾಮಿ ಆಹಾರ ಸೇವಿಸಿರಬಹುದು, ದ್ವಾದಶಿ ತ್ರಯೋದಶಿ ಚತುರ್ದಶಿಗಳಂದು! ಮಾರನೆ ದಿವಸ ಇನ್ನೊಂದು ವಿಧದ ಖಾದ್ಯಗಳನ್ನು ತಳಿಗೆಗಳಲ್ಲಿರಿಸಿದ್ದು ಖಾಲಿ ಆಯಿತು. ಹೀಗೆ ದಿನಂಪ್ರತಿ ಖಾಲಿಯಾಗುತ್ತಿರುವುದೆಂದರೆ ಸ್ವಾಮಿ ಇಲ್ಲೆ ಇದ್ದು ತಮ್ಮಂಥ ಭಕ್ತರ ಕ್ರಿಯಾಕಲಾಪಗಳನ್ನು ಆಸ್ತಿಕತೆಯ ವಿದ್ಯಮಾನಗಳನ್ನು ಕಣ್ಣಾರೆ ವೀಕ್ಷಿಸುತ್ತಿರುವನೆಂದೇ ಅರ್ಥ! ಮಾಧ್ಯಮಗಳು ವಿಶೇಷ ಮುತುವರ್ಜಿಯಿಂದ ಪ್ರಸಾರ ಮಾಡಿದ ಪರಿಣಾಮದಿಂದ ಸುದ್ದಿ ಸುತ್ತನ್ನಾಕಡೆ ಹರಡಿತು. ತಲೆಮರೆಸಿಕೊಂಡಿದ್ದ ಮಾತೆ ಚಂದ್ರಕಳಾ ಅಮ್ಮಣ್ಣಿಯವರು ಅಪಾನ ಹೆಸರಿನ ಧ್ಯಾನಮಂದಿರದಿಂದಲೂ, ಒಳ ಉಡುಪುಗಳನ್ನು ವಿನ್ಯಾಸಗೊಳಿಸಿ ಅದಕ್ಕೆ ಅಂತರರಾಷ್ಟ್ರೀಯ ಪ್ರಶಸ್ತಿಗೆ ಭಾಜನನಾಗಿದ್ದ ಭಕ್ತವತ್ಸಲಂ ಸ್ವೀಡನ್ನಿಂದಲೂ ನವಕಂಚಿ ಕಡೆ ಮುಖ ಮಾಡಿದರು.




ಇನ್ನು ಭಕ್ತಜನರು ಅಲ್ಲಲ್ಲಿಂದಲೇ ಕಾಲ್ನಡಿಗೆಯಿಂದ ಭಜನೆ ಸಂಕೀರ್ತನೆ ಮಾಡುತ್ತ ಬೆಟ್ಟವೇರಲಾರಂಭಿಸಿದರು. ಅವರಲ್ಲಿ ಸಾಮಾನ್ಯರಿಗಿಂತ ರಿಯಲ್ ಎಸ್ಟೇಟ್ ಕುಳಗಳು, ಉನ್ನತಾಧಿಕಾರಿಗಳು, ಸಿನೆಮಾ ಕಲಾವಿದರು, ರಾಜಕಾರಣಿಗಳು, ಗೌರವಾನ್ವಿತ ಕಳ್ಳರು, ದಗಾಕೋರರು, ಹೆಸರಾಂತ ವೇಶ್ಯೆಯರು ಅಧಿಕ ಸಂಖ್ಯೆಯಲ್ಲಿದ್ದರು. ನನ್ನದೀ ಪ್ರಸಾದ ತನ್ನದೀ ಪ್ರಸಾದ ಸ್ವೀಕರಿಸಿ ನಮ್ಮ ಪಾಪಗಳನ್ನು ಪರಿಹಾರ ಮಾಡು ಪ್ರಭೋ ಎಂದು ಬೇಡಿಕೊಳ್ಳಲಾರಂಭಿಸಿದರು. ಎಲ್ಲರದ್ದು ಹೇಗೆ ಇಡಲಾಗುವುದು! ಸ್ವಾಮಿಗೆ ಇರುವುದು ಒಂದೆ ಹೊಟ್ಟೆ, ಆತ ಎಷ್ಟು ಸೇವಿಸಲು ಸಾಧ್ಯ! ನಿರಾಕರಿಸುವುದಕ್ಕಿಂತ ಪ್ರಸಾದಕ್ಕೆ ಇಂತಿಷ್ಟು ಎಂದು ಫೀಜು ನಿಗದಿಪಡಿಸಿದರು. ಸ್ವಲ್ಪ ದೇವರ ಬಳಿ ಇಟ್ಟು ಉಳಿದ ಭಕ್ಷ್ಯಭೋಜ್ಯಗಳನ್ನು ತಮ್ಮ ತಮ್ಮ ಮನೆಗಳಿಗೆ ಸಾಗಿಸಲಾರಂಭಿಸಿದರು. ಏನೇ ಆಗಲಿ ನೋಡುನೋಡುವಷ್ಟರಲ್ಲಿ ನವಕಂಚಿ ಮಹಾತ್ಮೆ ಇಡೀ ಕುಂತಳ ಪ್ರಾಂತವನ್ನು ಆವರಿಸಲಿಕ್ಕೆ ತೆಗೆದುಕೊಂಡ ವೇಳೆ!

ಅದರ ಜೊತೆ ಇನ್ನೂ ಒಂದು ವದಂತಿ ಹರಡಿತು. ಅದೇನೆಂದರೆ ಅದೆ ಇದು. ಇನ್ನೊಬ್ಬ ಅರ್ಚಕರಾದ ಮಹಾಬಲೇಶ್ವರ ಭಟ್ಟರು ಒಂದೆರಡು ತಿಂಗಳುಗಳ ಹಿಂದೆ ವೇಶ್ಯೆ ಸಹವಾಸ ಮಾಡಿ ಗುಹ್ಯವ್ಯಾಧಿಪೀಡಿತರಾಗಿ ಪಾಪದ ಬಲೆಯಲ್ಲಿ ಸಿಲುಕಿಹಾಕ್ಕೊಂಡಿದ್ದರು. ವಿಷಯ ತಿಳಿದು ಅವರ ಧರ್ಮಪತ್ನಿ ಪ್ರಸೂನಾಂಬೆ ಹಾಡುಹಗಲೇ ಆತ್ಮಹತ್ಯೆ ಮಾಡಿಕೊಳ್ಳುವುದನ್ನು ನೋಡಿದ ಕುಲಬಾಂಧವರು ತಡೆದರು. ಪಂಚಾಯ್ತಿ ಮಾಡಿ ಒಂದು ತಿಂಗಳ ಕಾಲ ಗರ್ಭಗುಡಿಯನ್ನು ಸ್ವಚ್ಛ ಮಾಡಬೇಕೆಂದು ಶಿಕ್ಷೆ ವಿಧಿಸಿ ತೀರ್ಪು ನೀಡಿದರು. ಅದು ಪೂಜೆಗೂ ಪೂರ್ವದಲ್ಲಿ! ಆ ದಿವಸ ಮಡಿಯುಡಿಯಿಂದ ಹೊರಟರು. ಗರ್ಭಗುಡಿಯಲ್ಲಿ ಮಂಡೆಯೂರಿ ಕ್ಲೀನು ಮಾಡಲಾರಂಭಿಸಿದರು, ಅದೂ ಶ್ರೀಹರಿ ನಾಮಸ್ಮರಣೆಯನ್ನು ಮಾಡುತ್ತ. ಆದರೆ ಅವರು ನೀನು ಗರ್ಭಗುಡಿಯೊಳಗೆ ವಿಸರ್ಜಿಸಿರುವುದು ಭುವನದ ಭಾಗ್ಯ ಮಹಾಪ್ರಭೋ, ನಿನ್ನ ಈ ಅನರ್ಘ್ಯ ವಸ್ತುವನ್ನು ನೋಡುವ ಸೌಭಾಗ್ಯವನ್ನು ನನ್ನದಾಗಿಸಿ ಕೃತಾರ್ಥನನ್ನಾಗಿ ಮಾಡಿದಿ

ದೇವಾದಿದೇವನೆ, ಇದರ ಅಲೌಕಿಕ ಪರಿಮಳವನ್ನು ಆಘ್ರಾಣಿಸಿದ ನನ್ನ ನಾಸಿ ಕೇಂದ್ರಿಯು ಪಾವನವಾಯಿತು ಎಂದು ಉದ್ಗರಿಸಿದ್ದು ಹೈಟೆಕ್ ಧ್ವನಿವರ್ಧಕದ ಮೂಲಕ ಬೆಟ್ಟದ ನಿವಾಸಿಗಳ ಕಿವಿಗೆ ಬಿತ್ತು. ಏನೇನು ಎಂದು ಗಾಬರಿಯಿಂದ ಉದ್ಗರಿಸುತ್ತ ತಮ್ಮ ತಮ್ಮ ನಿವಾಸಗಳಿಂದ ಬೀದಿಗೆ ಬಂದರು, ಅಷ್ಟರಲ್ಲಿ ಭಟ್ಟರು ತಮ್ಮ ಕೈಯಲ್ಲಿ ಬಾಳೆ ಎಲೆ ಹಾಗೂ ಅದರಲ್ಲಿ ಸೋ ಅಂಡ್ ಸೋ!

ಕರ್ರಗೆ ಸಾಲಿಗ್ರಾಮದಂತೆ ಕಂಗೊಳಿಸುತ್ತಿರುವುದು ಪರಿಮಳ ಬೀರುತ್ತಿರುವುದು ಪಂಚೇಂದ್ರಿಯಗಳಲ್ಲಿ ಪ್ರಮುಖ ಇಂದ್ರಿಯವೆನಿಸಿದ ಘ್ರಾಣೇಂದ್ರಿಯವನ್ನು ಭದ್ರಪಡಿಸಿಕೊಳ್ಳುವಂತೆ ಉತ್ತೇಜಿಸುತ್ತಿರುವುದು ಅಸಾಮಾನ್ಯ ಅನರ್ಘ್ಯ ವಸ್ತುವು! ಎಲ್ಲರೂ ಅದರ ದರ್ಶನ ಪಡೆದರಲ್ಲದೆ ಅದನ್ನು ಸ್ಪರ್ಶಿಸಲು ಹಾತೊರೆದರು. ಭಕ್ತರ ತಲೆಯಲ್ಲಿ ಹೇನಿನಂತೆ ಕಾಣಿಸಿಕೊಂಡ ಊಹೆಯನ್ನು ಸಾಕ್ಷಾತ್ ಸ್ವಾಮಿಯೇ ನಿಜ ಮಾಡಿದನೆಂದ ಬಳಿಕ ನೀವೇ ಯೋಚಿಸಿರಿ. ಆಹಾರ ಸೇವಿಸುವ ಯಾವುದೇ ಜೀವಿ ಅದನ್ನು ಮಲಿನ ವಸ್ತುವನ್ನಾಗಿ ಪರಿವರ್ತಿಸಿ ವಿಸರ್ಜಿಸುವುದು ಪ್ರಾಕೃತಿಕ ನಿಯಮವಲ್ಲವೆ! ಮುಖ್ಯ ಅರ್ಚಕರ ತಂಡ ಪದ್ಮನಾಭ ವದಂತಿಯವರ ನೇತೃತ್ವದಲ್ಲಿ ಅದನ್ನು ಕೂಲಂಕಷ ಪರಿಶೀಲಿಸಿ ಅದನ್ನು ವಿಸರ್ಜಿಸಿರುವುದು ತಮ್ಮ ಆರಾಧ್ಯ ದೈವವೆ ಎಂದು ತೀರ್ಮಾನಿಸಿತು. ತಮ್ಮ ಟಿಆರ್‌ಪಿ ರೇಟ್ ಹೆಚ್ಚಿಸಿಕೊಳ್ಳುವ ಪೈಪೋಟಿಯಿಂದ ಅಕ್ಷರ ಹಾಗೂ ದೃಶ್ಯ ಮಾಧ್ಯಮದ ಎಲ್ಲರೂ ಹಾಜರಿದ್ದರಲ್ಲವೆ! ಅವರಿಗೆ ಅದನ್ನು ಚಿನ್ನದ ಕರಂಡಕದಲ್ಲಿರಿಸಿ ಪ್ರದರ್ಶಿಸಲಾಯಿತು. ಇನ್ನು ಮೇಲಾದರೂ ಸೋಕಾಲ್ಡ್ ವಿಚಾರವಾದಿ ನುಂಕೆಮಲೇಶ್ವರ್ ನಿಬ್ಬೆರಗ್ ಅವರಿಗೆ ಬುದ್ಧಿ ಬಂದು ಆತ ಆಸ್ತಿಕನಾದರೆ ಸ್ವಾಮಿ ವಿಸರ್ಜಿಸಿದ್ದಕ್ಕೂ ಸಾರ್ಥಕವಾಗುವುದು ಎಂದು ಇಲ್ಲಿ ಹೇಳುತ್ತಿದ್ದುದನ್ನು...

ಆ ಮಾತುಕತೆ ಲೈವ್ ಹೋಗುತ್ತಿತ್ತಲ್ಲವೆ! ಬೆಳಗಿನ ಉಪಾಹಾರವನ್ನು ಅದೇ ತಾನೆ ಸೇವಿಸಿ ಸೇದಲೆಂದು ಗಣೇಶ ಹಚ್ಚಿಕೊಂಡಿದ್ದರಷ್ಟೆ, ಕೂಡಲೆ ತನ್ನ ವಿಚ್ಛೇದಿತ ಪತ್ನಿ ಪ್ರೊ॥ ಸುಂದರಮ್ಮಗೆ ಕೇಳಿಸುವಂತೆ ನಾನ್‌ಸೆನ್ಸ್ ಎಂದು ಉದ್ಗರಿಸಿದ್ದು ಯಾರೆಂದರೆ ಅದೇ ಪ್ರೊ॥ ನಿಬ್ಬೆರಗ್! ಆತ ಪತ್ರಕರ್ತರು ಕೇಳಿದ ಪ್ರಶ್ನೆಗೆ ಒಂದು ಅಂದಾಜಿನ ಪ್ರಕಾರ ದೇವತೆಗಳು ಇರುವುದು ಮುವ್ವತ್ತಾರು ಕೋಟಿಗೂ ಅಧಿಕ. ಅವರೇನಾದರು ಏಕಕಾಲಕ್ಕೆ ವಿಸರ್ಜಿಸಿದರೆಂದರೆ ಭೂಮಿಯನ್ನು ಕಾಪಾಡುವವರು ಯಾರು ಎಂದು ಹೇಳಿಕೆ ಕೊಟ್ಟನು. ಅದನ್ನು ಕೇಳಿಸಿಕೊಂಡ ಆಚಾರ್ಯರು ಬಂದು ಪ್ರತ್ಯಕ್ಷ ನೋಡಲಿ ಎಂದು ಆವಾಜ್ ಹಾಕುತ್ತಿರುವಷ್ಟರಲ್ಲಿ ಮೂಲ ಕಂಚಿ ಸಂಸ್ಥಾನದ ಪೀಠಾಧಿಪತಿಗಳಾದ ಶ್ರೀ ಶ್ರೀ ಅಭಿನವ ವರದನಾನಂದ ಸ್ವಾಮೀಜಿ ಭಗವತ್ಪಾದರು ಅದೇ ತಾನೆ ಆಗಮಿಸಿ ಕರಂಡಕದಲ್ಲಿ ವಜ್ರಾಭರಣದಂತೆ ಕೋರೈಸುತ್ತಿದ್ದ ಅದರ ದರ್ಶನ ಪಡೆದರಲ್ಲದೆ ಅದನ್ನು ಆಘ್ರಾಣಿಸಿ ಧನ್ಯರಾದೆವು ಹರಿಯೆ ಎಂದು ಉದ್ಗರಿಸಿದರು. ಅವೆರಡೂ ಉದ್ಗಾರಗಳು ಪರಸ್ಪರ ಕ್ಲಾಷ್ ಆದ ಪರಿಣಾಮ!

ಕೇವಲ ಒಂದೆರಡು ದಿವಸಗಳಲ್ಲಿ ನವಕಂಚಿ ಕ್ಷೇತ್ರದ ಮಾರುಕಟ್ಟೆ ಮೌಲ್ಯ ಹೆಚ್ಚಿತ್ತು, ಆ ಪವಾಡಸದೃಶ ಘಟನೆ ಭಕ್ತರ ನಾಲಗೆ ಮೇಲೆ ನಲಿದಾಡಲಾರಂಭಿಸಿತು. ದಿನಂಪ್ರತಿ ಸ್ವಾಮಿ ವಿಸರ್ಜನೆ ಮಾಡುವುದು, ಅದನ್ನು ಪದ್ಮನಾಭರು ಸಂಗ್ರಹಿಸಿ ಚಿನ್ನದ ಕರಂಡಕದಲ್ಲಿ ಸಂಗ್ರಹಿಸುವುದು! ಅದನ್ನು ಇಟ್ಟುಕೊಂಡು ಉಪ್ಪಿನಕಾಯಿ ಹಾಕಲು ಸಾಧ್ಯವಿರಲಿಲ್ಲ. ಆದ್ದರಿಂದ ಅದನ್ನು ಗುಲಗಂಜಿ ಗಾತ್ರದಲ್ಲಿ ವಿಭಜಿಸಿ ಪ್ರಸಾದದ ರೂಪದಲ್ಲಿ ದೇವಸ್ಥಾನದ ಶ್ರೀಮಂತ ಭಕ್ತರಿಗೆ ವಿಲೇವಾರಿ ಮಾಡುವುದು ಲೇಸೆಂದು ದೇವಸ್ಥಾನದ ಆಡಳಿತಮಂಡಳಿ ತೀರ್ಮಾನಿಸಿತು.

ಈ ಸ್ಪರ್ಧಾತ್ಮಕ ಸನ್ನಿವೇಶದಲ್ಲಿ ಹೆಚ್ಚಿನ ಮುಖಬೆಲೆ ನಿಗದಿಪಡಿಸಲಾಗಿದ್ದರೂ ಅದನ್ನು ಖರೀದಿಸಲು ಪೈಪೋಟಿ ನಡೆಯಿತು, ಒಂದೆರಡು ತೊಲ ತೂಕದ ಅದನ್ನು ಸಹಸ್ರಾರು ಭಕ್ತರಿಗೆ ವಿತರಿಸುವುದು ಅಸದಳವೆಂದು ಭಾವಿಸಿ ಅದಕ್ಕೆ ಬೇರಿನ್ನೇನೊ ಪರಿಮಳ ಸಿಂಪರಣೆ ಮಾಡಿ ವಿತರಿಸಲು ಸಜ್ಜಾಯಿತು ಆಡಳಿತ ಮಂಡಳಿ! ವಿಷಯ ತಿಳಿದು ರಾಜ್ಯದ ಹಾಗೂ ರಾಷ್ಟ್ರಮಟ್ಟದ ರಾಜಕಾರಣಿಗಳು ಪಕ್ಷಭೇದ ಮರೆತು ನವಕಂಚಿ ಕಡೆ ಹೆಜ್ಜೆ ಮೂಡಿಸಿದರೆಂದರೆ, ಹಾಗೂ ನವಕಂಚಿಯ ಸರ್ವಾಂಗೀಣ ಉದ್ಧಾರವೇ ದೇಶದ ಪ್ರಗತಿ ಎಂದು ನಿರ್ಧರಿಸಿದರೆಂದರೆ ನೀವೆ ಲೆಕ್ಕ ಹಾಕಿರಿ ಭಕ್ತಿಯ ಶಕ್ತಿಯನ್ನು!

ಇನ್ನು ಒಂದೆರಡು ದಿವಸಗಳ ಬಳಿಕ ಇನ್ನೋರ್ವ ಅರ್ಚಕ ಮಾಧವನಾಂದ್ ಆಚಾರ್ಯ ತಾವು ಗರ್ಭಗುಡಿಯಲ್ಲಿ ಸ್ವಾಮಿಯ ಎರಡು ಕಣ್ಣುಗಳು ಮಿಂಚು ಕೋರೈಸಿದಂತೆ ಫಳಫಳ ಹೊಳೆಯುತ್ತಿದ್ದದನ್ನು ಖುದ್ದು ನೋಡಿದ್ದಾಗಿ ಸುದ್ದಿ ಹರಡಿಸಿದರು. ಎಲ್ಲರೂ ಆ ದೃಶ್ಯವನ್ನು ಕಣ್ಣಾರೆ ನೋಡಿದ ಬಳಿಕ ಎಂತೆಂಥ ಘಟನೆಗಳು ಶರವೇಗದಲ್ಲಿ ಸಂಭವಿಸಲಾರಂಭಿಸಿದವೆಂದರೆ!

ಮುಂದೆ ಜೇಮ್ಸ್‌ಬಾಂಡ್ ಯಾನೆ ಭೀಷ್ಮಪಿತಾಮಹ ದೇವಸ್ಥಾನದ ಗರ್ಭಗುಡಿಯಿಂದ ಹೊರಗಡೆ ಬಂದದ್ದು ಮಹಾಮಂಗಳಾರತಿ ಸಂದರ್ಭದಲ್ಲಿ, ಧೂಪದೀಪದ ಹೊಗೆಯ ಮಬ್ಬು ಆತನ ಪಲಾಯನಕ್ಕೆ ಸಹಕರಿಸಿತು, ನಮ್ಮ ಮುಂದೆ ತನ್ನ ಸಾಹಸವನ್ನು ನಿವೇದಿಸಿಕೊಂಡ ಅತ್ಯಂತ ಸೌಜನ್ಯಯುತ ಭಾಷೆಯಲ್ಲಿ. ಅದಾದ ಕೆಲವೇ ದಿವಸಗಳಲ್ಲಿ ಆತನ ದೇಹ ರಕ್ತದ ಮಡುವಿನಲ್ಲಿ ಬಿದ್ದಿತ್ತು, ಆ ಕೊಲೆಯ ರೂವಾರಿಗಳು ಮಾತೆ ಚಂದ್ರಕಳಾ ಅಮ್ಮಣ್ಣಿ ಹಾಗೂ ಆಕೆಯ ಪತಿ ಭಕ್ತವತ್ಸಲಂ ಮೊದಲಿಯಾರ್ ಎಂದು ಹೇಗೆ ಪತ್ತೆ ಹಚ್ಚಿದೆವು, ಆ ಬಳಿಕವೂ ನವಕಂಚಿ ದೇವಸ್ಥಾನ ಗರ್ಭಗುಡಿಯಲ್ಲಿ ಪವಾಡಗಳು ನಿರಾತಂಕವಾಗಿ ಸಂಭವಿಸುತ್ತಲೇ ಇರುವವು, ಅಲ್ಲಿ ಸ್ವಾಮಿ ಮಲ ವಿಸರ್ಜಿಸುತ್ತಲೇ ಇರುವನು, ದೇವಾಲಯದ ಆಡಳಿತ ಮಂಡಳಿ ಅದನ್ನು ಚಿನ್ನದ ಕರಂಡಕದಲ್ಲಿ ಪ್ರದರ್ಶಿಸುತ್ತಿರುವುದಲ್ಲದೆ ಅದನ್ನು ಗಣ್ಯಾತಿಗಣ್ಯ ಶ್ರೀಮಂತ ಭಕ್ತರಿಗೆ ಪ್ರಸಾದದ ರೂಪದಲ್ಲಿ ವಿತರಿಸುತ್ತಲೇ ಇರುವುದು.

**ಕುಂ. ವೀರಭದ್ರಪ್ಪ**
ಕೊಟ್ಟೂರು, ಬಳ್ಳಾರಿ ಜಿಲ್ಲೆ

# ನಿರೀಶ್ವರವಾದಿ ಮತ್ತು ಮಠಾಧಿಪತಿಗಳ ಸಮಾಗಮ



ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ

೧೯೫೦ರಲ್ಲಿ, ಜಾತಿಪದ್ಧತಿಯು ಪ್ರಕ್ಷುಬ್ಧ ಸ್ಥಿತಿಯಲ್ಲಿರುವ ದಿನಗಳಲ್ಲಿ, 'ಪೆರಿಯಾರ್' (ಇ. ವಿ. ರಾಮಸ್ವಾಮಿ ನಾಯ್ಕರ್) ಮತ್ತು ಕುನ್ರುಕುಡಿ ಅಡಿಗಳ್ – ಇವರ ಸಮಾಗಮವಾದುದು ಒಂದು ಅಪೂರ್ವ ಘಟನೆ. ಈ ಘಟನೆಯು ಪರಸ್ಪರ ತೀವ್ರ ಭಿನ್ನಾಭಿಪ್ರಾಯಗಳ ನಡುವೆಯೂ, ಇಬ್ಬರನ್ನೂ ಹತ್ತಿರ ಹತ್ತಿರ ತಂದು ಭಿನ್ನಾಭಿಪ್ರಾಯಗಳನ್ನು ಬದಿಗೆ ಸರಿಸಿ ಒಬ್ಬರೊಡನೆ ಮತ್ತೊಬ್ಬರು ಗೌರವಪೂರ್ಣವಾಗಿ ನಡೆದುಕೊಳ್ಳುವಂತೆ ಮಾಡಿತು.

ಸುಪ್ರಸಿದ್ಧ ಧರ್ಮಪುರಿಯ ಶೈವ ಮಠಕ್ಕೆ ೧೯೪೫ರಲ್ಲಿ ಕೇವಲ ಇಪ್ಪತ್ತೈದು ವರ್ಷದ ತರುಣನೊಬ್ಬನನ್ನು ಕಿರಿಯ ಸ್ವಾಮಿಯಾಗಿ ಕರೆತಂದುದು ಒಂದು ವಿಶೇಷ ಸಂದರ್ಭ. ಮುಂದಿನ ಮೂರು ವರ್ಷಗಳಲ್ಲಿ ಈ ಕಿರಿಯ ಸ್ವಾಮಿಯನ್ನು ಮಠಾಧಿಪತಿಯ ಪಟ್ಟಕ್ಕೇರಿಸಲಾಯಿತು. ಸಾಮಾನ್ಯವಾಗಿ ಹೊಸ ಶಿಷ್ಯರನ್ನು ಮಠಾಧಿಪತಿಗಳಾಗಿ ನೇಮಿಸುವಾಗ – ಅವರು ಶೈವ ಸಂಪ್ರದಾಯಗಳಿಗೆ ಬದ್ಧರಾಗಿರಬೇಕೆಂಬ ನಿಯಮವಿಲ್ಲದಿದ್ದರೂ – ವಾಸ್ತವದಲ್ಲಿ ಮಡಿವಂತ ಮೇಲುಜಾತಿಯ 'ವೆಲ್ಲಾಲರ್'ಗಳನ್ನೇ ನೇಮಿಸುವುದು ರೂಢಿಯಾಗಿತ್ತು. ಆದರೆ, ಈಗಿನ ಹೊಸ ಮಠಾಧಿಪತಿಯು (ಕುನ್ರುಕುಡಿ ಅಡಿಗಳ್) ಪ್ರಾಚೀನ ಸಂಪ್ರದಾಯವನ್ನು ಮುರಿದು 'ಆದಿ ದ್ರಾವಿಡ' ಕೇರಿಗಳಿಗೆ ಹೋಗಿಬರತೊಡಗಿದರು. ಅಲ್ಲದೆ ದೇವರ ಪೂಜೆ, ಪ್ರಾರ್ಥನೆಗಳಲ್ಲಿ ತಮಿಳು ಭಾಷೆಯನ್ನು ಬಳಸಲಾರಂಭಿಸಿದರು. (ಕನ್ನಡದಲ್ಲಿ ಭಕ್ತಿ ಸಾಹಿತ್ಯವನ್ನು, ಮತಧಾರ್ಮಿಕ ವಿಚಾರಗಳನ್ನು ನಿರೂಪಿಸಲು ಕನ್ನಡವನ್ನು ಬಳಸುವುದಕ್ಕೆ ನಿಷೇಧವಿದ್ದಾಗ, ಶಿವಶರಣರು, ಹರಿದಾಸರು ವಚನಗಳನ್ನೂ, ಕೀರ್ತನೆಗಳನ್ನೂ ಕನ್ನಡದಲ್ಲಿಯೇ ರಚಿಸಿ ಒಂದು ಕ್ರಾಂತಿಯನ್ನೇ ಮಾಡಿದುದನ್ನು ಇಲ್ಲಿ ನೆನೆಯಬಹುದು) ದೇವರ ಪೂಜೆ, ಪ್ರಾರ್ಥನೆ, ವ್ರತಗಳು – ಮೊದಲಾದವುಗಳಲ್ಲಿ ಕನ್ನಡಿಗರು ಇಂದಿಗೂ ಸಂಸ್ಕೃತ ಭಾಷೆಯನ್ನೇ ಬಳಸುತ್ತಿದ್ದಾರೆ ('ಕನ್ನಡ ಪೂಜಾರಿ' ಎಂದು ಪರಿಚಿತರಾಗಿರುವ ಹಿರೇಮಗಳೂರು ಕಣ್ಣನ್ ಅವರು ಮಾತ್ರ ದೇವರ ಪೂಜೆಯ ಮಂತ್ರಗಳನ್ನು ಕನ್ನಡದಲ್ಲಿಯೇ ರಚಿಸುವ ಪ್ರಯತ್ನ ಮಾಡಿದ್ದಾರೆ).

ಧರ್ಮಪುರಿಯ ಹೊಸ ಮಠಾಧಿಪತಿಗಳಾದ ಕುನ್ರುಕುಡಿ ಅಡಿಗಳ್ ದೇವರ ಪೂಜೆ, ಪ್ರಾರ್ಥನೆಗಳಲ್ಲಿ ತಮಿಳು ಭಾಷೆಯನ್ನು ಬಳಸತೊಡಗಿದುದು ಮತ್ತು ಆದಿದ್ರಾವಿಡರ ಕೇರಿಗಳಲ್ಲಿ ಸಂಚರಿಸಿದುದು ಪೂಜಾರಿಗಳು, ಪುರೋಹಿತರು ಮೊದಲಾದ ಮಡಿವಂತ ವೈದಿಕ ಬ್ರಾಹ್ಮಣರ ಮೇಲೆ ಹೇರಿದ್ದ ಕಟ್ಟುಪಾಡುಗಳಿಗೆ ಒಂದು ಸವಾಲಾಯಿತು.

೧೯೫೦ರಲ್ಲಿ ಪೆರಿಯಾರ್ ಅವರು ದೈವಪುರುಷರ ಮೂರ್ತಿಗಳನ್ನು ಒಡೆದುಹಾಕಿ, ಚಿತ್ರಪಟಗಳನ್ನು ಸುಡುವ ಮೂಲಕ ದೊಡ್ಡ ಆಂದೋಲನವನ್ನು ಆರಂಭಿಸಿದ್ದರು. ಅಲ್ಲದೆ, ಸಂಸ್ಕೃತ ಭಾಷೆಯನ್ನು ತಿರಸ್ಕರಿಸಿ, ಆರ್ಯ ಸಂಸ್ಕೃತಿಯ ಪ್ರತೀಕಗಳಾದ ರಾಮ ಮೊದಲಾದವರ ಮೂರ್ತಿಗಳಿಗೂ, ಚಿತ್ರಗಳಿಗೂ ಅವಮಾನ ಮಾಡಿ ದ್ರಾವಿಡ ಸಂಸ್ಕೃತಿಯ – ಮುಖ್ಯವಾಗಿ ತಮಿಳರ – ಅಸ್ಮಿತೆಯನ್ನು ಸ್ಥಾಪಿಸುವ ಪ್ರಯತ್ನ ಮಾಡಿದರು. ತಕ್ಷಣವೇ ಕುನ್ರುಕುಡಿ ಅಡಿಗಳ್ ಅವರು 'ಅರುಳ್ ನೆರಿ ತಿರುಕೂಟಮ್' ಎಂಬ ಸಂಘಟನೆಯ ಮೂಲಕ ಇದಕ್ಕೆ ಪ್ರತಿರೋಧವನ್ನು ವ್ಯಕ್ತಪಡಿಸಿದರು, ಕರಪತ್ರಗಳನ್ನು ಮುದ್ರಿಸಿ ಹಂಚುವ ಮೂಲಕ ಪ್ರಚಾರಾಂದೋಲನ ಆರಂಭಿಸಿದರು. ಈ ಹಂತದಲ್ಲಿ ಒಬ್ಬ ಬ್ರಾಹ್ಮಣೇತರನ ನಾಯಕತ್ವದಲ್ಲಿ ಪೆರಿಯಾರರನ್ನು ಎದುರಿಸುವುದೇ ಸೂಕ್ತವೆಂದು ಲೆಕ್ಕ ಹಾಕಿದ, ಕಂಚಿ ಮಠವೂ ಸೇರಿದಂತೆ ಹಲವು ವೈದಿಕ ಬ್ರಾಹ್ಮಣ ಮಠಗಳು ಕುನ್ರುಕುಡಿ ಅಡಿಗಳ್ ಜೊತೆ ಸೇರಿಕೊಂಡವು. ಆದರೆ, ಕೆಲವೇ ದಿನಗಳಲ್ಲಿ ಕಂಚೀಮಠಕ್ಕೆ ನಿರಾಸೆ ಕಾದಿತ್ತು.

ಇದಕ್ಕೂ ಮೊದಲು ಈ ಮಠಾಧಿಪತಿಯು, ಗಾಂಧೀಜಿ ನೇತೃತ್ವದಲ್ಲಿ ನಡೆದ 'ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಮತ್ತು ವಿನೋಬಾ ಭಾವೆಯವರ 'ಭೂದಾನ' ಚಳುವಳಿಯಲ್ಲಿ ಭಾಗವಹಿಸಿದ್ದರು.

ಜಾತಿ–ಮತಗಳ ಕಟ್ಟುಪಾಡುಗಳಿಗೆ ಬದ್ಧವಾಗದೆ ಈ ಬಗೆಯ ಚಟುವಟಿಕೆಗಳಲ್ಲಿ ಭಾಗವಹಿಸುವ ಮೂಲಕ ಜನಸಾಮಾನ್ಯರ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದರು. ಜನರು ಇವರನ್ನು ಗೌರವದಿಂದ ಸ್ವಾಮಿ ಕುನ್ರುಕುಡಿ ಅಡಿಗಳ್ ಎಂದು ಸಂಬೋಧಿಸಲಾರಂಭಿಸಿದರು. ಇಂಥ ಮಠಾಧಿಪತಿಯೊಬ್ಬರು ಕಟ್ಟಾ ನಾಸ್ತಿಕವಾದಿಯೂ 'ದ್ರಾವಿಡ ಕಳ್ಹಗಂ' (ಡಿ.ಕೆ.)ನ – (ಇದೇ ಮುಂದೆ, ದ್ರಾವಿಡ ಮುನ್ನೇತ್ರ ಕಳ್ಹಗಂ (ಡಿ.ಎಂ.ಕೆ.), ಅಣ್ಣಾ ಡಿ.ಎಂ.ಕೆ., ಅಖಿಲ ಭಾರತ ಅಣ್ಣಾ ಡಿ.ಎಂ.ಕೆ.ಗಳಾಗಿ ತಮಿಳುನಾಡಿನಾದ್ಯಂತ ವ್ಯಾಪಿಸಿತು.) – ಮುಖಂಡರೂ ಆದ ಪೆರಿಯಾರ್ ಅವರ ಗೆಳೆಯನಾಗುವುದು ಅಸಾಧ್ಯವೇ ಎನಿಸಿತ್ತು.

**ಒಬ್ಬರನ್ನು ಮತ್ತೊಬ್ಬರ ವಿರುದ್ಧ ಎತ್ತಿಕಟ್ಟುವ ಪ್ರಯತ್ನ**

೧೯೫೦ರಲ್ಲಿ ಪೆರಿಯಾರ್ ಅವರು ದೈವಪುರುಷರ ಮೂರ್ತಿಗಳನ್ನು ಒಡೆದುಹಾಕಿ, ಚಿತ್ರಪಟಗಳನ್ನು ಸುಡುವ ಮೂಲಕ ದೊಡ್ಡ ಆಂದೋಲನವನ್ನು ಆರಂಭಿಸಿದ್ದರು. ಅಲ್ಲದೆ, ಸಂಸ್ಕೃತ ಭಾಷೆಯನ್ನು ತಿರಸ್ಕರಿಸಿ ಆರ್ಯ ಸಂಸ್ಕೃತಿಯ ಪ್ರತೀಕಗಳಾದ ರಾಮ ಮೊದಲಾದವರ ಮೂರ್ತಿಗಳಿಗೂ, ಚಿತ್ರಗಳಿಗೂ ಅವಮಾನ ಮಾಡಿ ದ್ರಾವಿಡ ಸಂಸ್ಕೃತಿಯ – ಮುಖ್ಯವಾಗಿ ತಮಿಳರ – ಅಸ್ಮಿತೆಯನ್ನು ಸ್ಥಾಪಿಸುವ ಪ್ರಯತ್ನ ಮಾಡಿದರು. ತಕ್ಷಣವೇ ಕುನ್ರುಕುಡಿ ಅಡಿಗಳ್ ಅವರು 'ಅರುಳ್ ನೆರಿ ತಿರುಕೂಟಮ್' ಎಂಬ ಸಂಘಟನೆಯ ಮೂಲಕ ಇದಕ್ಕೆ ಪ್ರತಿರೋಧವನ್ನು ವ್ಯಕ್ತಪಡಿಸಿದರು, ಕರಪತ್ರಗಳನ್ನು ಮುದ್ರಿಸಿ ಹಂಚುವ ಮೂಲಕ ಪ್ರಚಾರಾಂದೋಲನ ಆರಂಭಿಸಿದರು. ಈ ಹಂತದಲ್ಲಿ ಒಬ್ಬ ಬ್ರಾಹ್ಮಣೇತರನ ನಾಯಕತ್ವದಲ್ಲಿ ಪೆರಿಯಾರರನ್ನು ಎದುರಿಸುವುದೇ ಸೂಕ್ತವೆಂದು ಲೆಕ್ಕ ಹಾಕಿದ, ಕಂಚಿ ಮಠವೂ ಸೇರಿದಂತೆ ಹಲವು ವೈದಿಕಬ್ರಾಹ್ಮಣ ಮಠಗಳು ಕುನ್ರುಕುಡಿ ಅಡಿಗಳ್ ಜೊತೆ ಸೇರಿಕೊಂಡವು. ಆದರೆ, ಕೆಲವೇ ದಿನಗಳಲ್ಲಿ ಕಂಚೀಮಠಕ್ಕೆ ನಿರಾಸೆ ಕಾದಿತ್ತು.



೧೯೫೪ರ ಕೊನೆಯಲ್ಲಿ ಪೆರಿಯಾರ್ ಅವರು ಮಲಯಾ (ಈಗಿನ ಮಲೇಶಿಯಾದ ಹಿಂದಿನ ಹೆಸರು ಮಲಯಾ) ಪ್ರವಾಸ ಕೈಗೊಂಡರು. ಕೆಲವು ವಾರಗಳ ಅಂತರದಲ್ಲಿ ಪೆರಿಯಾರರನ್ನು ಹೊರದೇಶದಲ್ಲಿಯೆ ಎದುರಿಸುವ ಉದ್ದೇಶದಿಂದ, ಕುನ್ರುಕುಡಿ ಅಡಿಗಳ್ ಕೂಡ ಅಲ್ಲಿಗೆ ಹೋದರು. ಆ ದಿನಗಳಲ್ಲಿ ಮಠಾಧಿಪತಿಗಳು ಸಮುದ್ರ ಪ್ರಯಾಣ ಮಾಡುವುದನ್ನು ನಿಷೇಧಿಸಲಾಗಿತ್ತು. (ಈಗಲೂ ಕೂಡ ಕೆಲವು ಮಠಗಳಲ್ಲಿ ಇದೇ ಕಟ್ಟುಪಾಡುಗಳಿರಬಹುದು). ಆದರೆ ಕುನ್ರುಕುಡಿ ಅಡಿಗಳ್ ಈ ನಿರ್ಬಂಧವನ್ನು ಲೆಕ್ಕಿಸಲಿಲ್ಲ; ನಾಸ್ತಿಕವಾದಿಗಳ ವಿತಂಡವಾದಕ್ಕೆ ಸವಾಲೊಡ್ಡುವ ಉದ್ದೇಶದಿಂದಲೇ ತಾವು ಹೊರದೇಶಕ್ಕೆ ಹೋಗುತ್ತಿರುವುದಾಗಿ ಹೇಳುವ ಮೂಲಕ ಸಂಪ್ರದಾಯವಾದಿಗಳನ್ನು ಸಮಾಧಾನಪಡಿಸಿದರು. ಇದರಿಂದ ತಮ್ಮ ಮಠಕ್ಕೆ ಇನ್ನೂ ಹೆಚ್ಚು ಶಿಷ್ಯರನ್ನು ಸೆಳೆಯುವುದು ಸಾಧ್ಯವಾಗಿರುವುದೆಂಬ ಆಶಯವನ್ನು ಬಿತ್ತಿದರು. ತಮ್ಮ ಈ ಪ್ರವಾಸ ಕಾಲದಲ್ಲಿ ಅಡಿಗಳ್ ತಮ್ಮ ಉಪನ್ಯಾಸಗಳಲ್ಲಿ ಪೆರಿಯಾರರ ವಾದದಲ್ಲಿನ ವಿವಾದಾಸ್ಪದ ಸಂಗತಿಗಳನ್ನೆತ್ತಿಕೊಂಡು ಖಂಡಿಸಿದರು. ಶೈವಸಿದ್ಧಾಂತದಲ್ಲಿ ಜಾತಿ ವಿಂಗಡಣೆಗಾಗಲಿ ಬಹುದೇವತಾರಾಧನೆಗಾಗಲಿ ಅವಕಾಶವಿಲ್ಲವೆಂದು ಪ್ರತಿಪಾದಿಸಿದರು.

ಇತ್ತ ಪೆರಿಯಾರರು ಚೆನ್ನೈಗೆ ಹಿಂತಿರುಗಿದ ಮೇಲೆ ತಮ್ಮ ಮಲಯಾ ಪ್ರವಾಸ ಕಾಲದಲ್ಲಿ ತಮಿಳುನಾಡಿನಿಂದ ಬಂದಿರುವ ಒಬ್ಬ ಸ್ವಾಮಿಯ ಬಗೆಗೆ ಕೆಲವರು ವಿಚಾರಿಸಿದುದನ್ನು ಹೇಳಿದರು. ಆಗ ಇವರು ಎಂದಿನಂತೆ ತಮ್ಮ ವ್ಯಂಗ್ಯವಾದ ಧಾಟಿಯಲ್ಲಿ "ಆತ ಕೂಡ ನಮ್ಮ ನಿಮ್ಮ ಹಾಗೆ ಒಬ್ಬ ಸಾಮಾನ್ಯವಾದ ಮನುಷ್ಯ; ಆದರೆ ತಾನು ತೊಟ್ಟ ಮಠಾಧಿಪತಿಯ ವೇಷದಿಂದಾಗಿ ಅದಕ್ಕೆ ತಕ್ಕಹಾಗೆ ಮಾತಾಡುತ್ತಾನೆ. ಅಷ್ಟೆ" – ಎಂದು ಮೂದಲಿಸಿದ್ದರಂತೆ! ಆ ಸ್ವಾಮಿಯ ವಿಚಾರಗಳನ್ನು ಅಷ್ಟೇನೂ ಗಂಭೀರವಾಗಿ ತೆಗೆದುಕೊಳ್ಳಬೇಕಾಗಿಲ್ಲ ಎಂದು ತಮ್ಮ ಶಿಷ್ಯರಿಗೆ ತಿಳಿಸಿದ್ದರು. ಅಲ್ಲದೆ ಆತನಿಗೆ ಏನೂ ತೊಂದರೆ ಕೊಡಬೇಡಿರೆಂದು ತಮ್ಮ ಅನುಯಾಯಿಗಳಿಗೆ ಎಚ್ಚರಿಕೆ ಕೊಟ್ಟರಂತೆ! ಕಡೆಯ ಪಕ್ಷ ಇದು, ಅಡಿಗಳನ್ನು ಇಷ್ಟವಿಲ್ಲದೆ ಒಪ್ಪಿಕೊಳ್ಳುವ ಹೇಳಿಕೆಯಾಗಿತ್ತು.

ಪೆರಿಯಾರರು ಮತ್ತು ಅಡಿಗಳ್ ನಡುವಿನ ಸಂಘರ್ಷವು ದ್ರಾವಿಡ ಸಮುದಾಯದ (ಮುಖ್ಯವಾಗಿ ತಮಿಳರ) ಹಿತದೃಷ್ಟಿಯಿಂದ ಒಳ್ಳೆಯದಲ್ಲವೆಂಬುದು ಜನರಿಗೆ ಅರಿವಾಗಿತ್ತು. ಕೆಲವು ಹಿತೈಷಿಗಳು ಇಬ್ಬರನ್ನೂ ಹತ್ತಿರ ತರುವ ಆಲೋಚನೆ ಮಾಡಿದರು. ಈರೋಡ್ ಪಟ್ಟಣದಲ್ಲಿ ಇಬ್ಬರ ಸಮಾಗಮವನ್ನು ಏರ್ಪಡಿಸಲಾಯಿತು.

ಒಂದು ದೊಡ್ಡ ಮನೆಯ ಮಹಡಿಯ ಮೇಲೆ, ಅಡಿಗಳ ವಸತಿಗೆ ಏರ್ಪಡಿಸಲಾಗಿತ್ತು. ಪೆರಿಯಾರರು ತಾವೇ ಅಡಿಗಳ ಬಳಿಗೆ ಹೋಗಲು ಸಿದ್ಧರಾದರು. ಇತ್ತ ಅಡಿಗಳು, ವಯೋವೃದ್ಧರಾದ ಪೆರಿಯಾರರಿಗೆ ಮಹಡಿಯ ಕಡಿದಾದ ಮೆಟ್ಟಿಲುಗಳನ್ನು ಹತ್ತಿ ಬರಲು ಕಷ್ಟವಾಗಬಹುದೆಂದು ಯೋಚಿಸಿ, ತಾವೇ ಮಹಡಿಯಿಂದ ಇಳಿದುಬಂದು ಹಜಾರದಲ್ಲಿ ಕುಳಿತು ಪೆರಿಯಾರರಿಗಾಗಿ ಕಾಯುತ್ತಿದ್ದರು. ಆದರೆ, 'ಮಹಾಸನ್ನಿಧಾನ'ವು ಅಡಿಗಳು, (ಮಠಾಧಿಪತಿಗಳನ್ನು 'ಮಹಾಸನ್ನಿಧಾನ'ವೆಂದು ಸಂಬೋಧಿಸುವುದು ಮತ್ತು ಸ್ವತಃ ಮಠಾಧಿಪತಿಗಳು ತಮ್ಮನ್ನು ತಾವೇ 'ಬಹುವಚನ'ದಲ್ಲಿ ಸಂಬೋಧಿಸಿಕೊಂಡು ಮಾತಾಡುವುದು ದ್ರಾವಿಡ ಭಾಷೆಗಳ ಒಂದು ಶಿಷ್ಟಾಚಾರ. ತಮ್ಮಿಬ್ಬರ ಭೇಟಿಯ ಉದ್ದಕ್ಕೂ ಪೆರಿಯಾರರು ಈ ಶಿಷ್ಟಾಚಾರವನ್ನು ತಪ್ಪದೆ ಪಾಲಿಸುತ್ತಾರೆ). ತಮ್ಮನ್ನು ಕಾಣುವ ಸಲುವಾಗಿ ಕೆಳಗೆ ಬಂದು ಕುಳಿತು ಕಾಯುತ್ತಿರುವರೆಂದು ನಿರೀಕ್ಷಿಸದಿದ್ದ ಪೆರಿಯಾರರು ಮಹಡಿಯ ಮೇಲೆ ಹೋಗಲು ಸಿದ್ಧರಾಗಿ ಹಜಾರದೊಳಗೆ ಕಾಲಿಟ್ಟರು. ಅದೇ ಸಮಯಕ್ಕೆ ಅಡಿಗಳು ಸಹ, ಪೆರಿಯಾರರನ್ನು ಬರಮಾಡಿಕೊಳ್ಳುವ ಸಲುವಾಗಿ ತಾವು ಕುಳಿತಿದ್ದ ಆಸನದಿಂದ ಮೇಲೆದ್ದರು.

ಇಬ್ಬರೂ ಎದುರುಬದುರಾದಾಗ, ಗಡಿಬಿಡಿಯಲ್ಲಿ ಪೆರಿಯಾರರ ಕೈಕೋಲು ಜಾರಿಬಿದ್ದಿತು. ತಕ್ಷಣ ಸಾವರಿಸಿಕೊಂಡು ಅದನ್ನು ಕೈಗೆತ್ತಿಕೊಂಡ ಪೆರಿಯಾರರು, 'ತಾವು ಕುಳಿತುಕೊಳ್ಳಬೇಕು' ಎಂದು ಅಡಿಗಳನ್ನು ಒತ್ತಾಯಿಸಿದರು.

ಹಜಾರದಲ್ಲಿ ಇಬ್ಬರೂ ಅಕ್ಕಪಕ್ಕ ಕುಳಿತುಕೊಳ್ಳುವಂತೆ ವ್ಯವಸ್ಥೆ ಮಾಡಲಾಗಿತ್ತು. ಆದರೆ ಪೆರಿಯಾರರು ಅಡಿಗಳಿಗೆ ಸರಿಸಮಾನರಾಗಿ ಒಂದೇ ಆಸನದ ಮೇಲೆ

ಕುಳಿತುಕೊಳ್ಳಲು – ಅಡಿಗಳು ಒತ್ತಾಯ ಮಾಡಿದರೂ ಒಪ್ಪದೆ ಬೇರೊಂದು ಆಸನದ ಮೇಲೆ ಕುಳಿತರು. ಅಡಿಗಳು ತಮಗಿಂತ ಸುಮಾರು ಐವತ್ತು ವರ್ಷಗಳಷ್ಟು ಚಿಕ್ಕವರಾದರೂ ಪೆರಿಯಾರರು ಅವರ ಬಗೆಗೆ ಗೌರವದಿಂದಾಗಿ ಶಿಷ್ಟಾಚಾರವನ್ನು ಪಾಲಿಸಿದರು. ಸಮಾಗಮದ ಉದ್ದಕ್ಕೂ ಇದೇ ನಿಯಮವನ್ನು ಅನುಸರಿಸಿದರು.

ಇಬ್ಬರೂ ನಿಸ್ಸಂಕೋಚವಾಗಿ ಮಾತಾಡಲೆಂದು ಈ ಇಬ್ಬರನ್ನೇ ಬಿಟ್ಟು ಮಿಕ್ಕವರೆಲ್ಲ ದೂರ ಹೋದರು. ಪೆರಿಯಾರರು ಎಂದಿನಿಂದಲೂ ದೇವರು, ಮತಧರ್ಮ, ಜಾತಿಭೇದ, ಅಸ್ಪೃಶ್ಯತೆ ಮೊದಲಾದವುಗಳನ್ನು ಒಪ್ಪುತ್ತಿರಲಿಲ್ಲವೆಂಬುದು ಎಲ್ಲರಿಗೂ ಗೊತ್ತಿರುವ ವಿಚಾರ.

ಭಾವಾವೇಶದಿಂದಲೇ ಮಾತನಾಡಲಾರಂಭಿಸಿದ ಪೆರಿಯಾರರು, ಜಾತಿ ವಿಂಗಡಣೆ, ಅಸ್ಪೃಶ್ಯತೆ ಮೊದಲಾದವುಗಳನ್ನು ಕಟುವಾಗಿ ಟೀಕಿಸಿದರು. ಅಲ್ಲದೆ, ವೈದಿಕ ಧರ್ಮ, ಸಂಸ್ಕೃತ ಭಾಷೆ, ಉತ್ತರ ಭಾರತದ ಬಹುಸಂಖ್ಯಾತರಾದ ಬ್ರಾಹ್ಮಣಾದಿ ಮೇಲುಜಾತಿಗಳ ಜನರು ದಾಕ್ಷಿಣಾತ್ಯರಾದ ದ್ರಾವಿಡ ಭಾಷಿಕರ ಮೇಲೆ ನಡೆಸುತ್ತಿರುವ ದಬ್ಬಾಳಿಕೆಯನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿ ದಾಕ್ಷಿಣಾತ್ಯರಾದ ದ್ರಾವಿಡರ (ಪ್ರಮುಖವಾದ ತಮಿಳು ಜನರ) ಅಸ್ಮಿತೆಯನ್ನು ಪ್ರತಿಪಾದಿಸಿದರು. ಪೆರಿಯಾರರ ಉದ್ವೇಗದ ಮಾತುಗಳ ಆಸ್ಫೋಟವು ಅಡಿಗಳ ಬಾಯಿ ಮುಚ್ಚಿಸಿತು. ಪೆರಿಯಾರರು ಉದ್ವೇಗದಿಂದ ಮಾತಾಡುತ್ತಿದ್ದರೂ ಅವರ ಮಾತುಗಳಲ್ಲಿ ಸಾಕಷ್ಟು ಸತ್ಯವಿದ್ದುದನ್ನು ಅಡಿಗಳು ಕಂಡುಕೊಂಡರು. ಅವರ ಅಭಿಪ್ರಾಯಗಳಿಗೆ ಹೇಗೆ ಪ್ರತಿಕ್ರಿಯಿಸಬೇಕೆಂದು ತಿಳಿಯದೆ ಅಡಿಗಳಿಗೆ ಗೊಂದಲವಾಯಿತು. ಸ್ವಲ್ಪ ಹೊತ್ತಿನಲ್ಲೆ ಸುಧಾರಿಸಿಕೊಂಡು, ತಮ್ಮಷ್ಟಕ್ಕೆ ಪರ್ಯಾಲೋಚಿಸಿದ ಅಡಿಗಳು, ತಮಿಳಿನ ಮಹಾಸಂತರಾದ ಅಪ್ಪರ್, ರಾಮಾನುಜ ಮತ್ತು ರಾಮಲಿಂಗ ಅಡಿಗಳ್ ಮೊದಲಾದವರ ನಡೆನುಡಿಗಳನ್ನು ಜನರು ಅನುಸರಿಸಿದ್ದಿದ್ದರೆ, ಪೆರಿಯಾರರಂಥವರು ಹುಟ್ಟಿಬರುವ ಅಗತ್ಯವೇ ಇರಲಿಲ್ಲವೆಂದುಕೊಂಡರು.

ಇಷ್ಟರಲ್ಲಿ ಪೆರಿಯಾರರು ಕೂಡ ತಮ್ಮನ್ನು ತಾವೇ ಸಂತೈಸಿಕೊಂಡು ಹೇಳಿದರು : ಹೋಗಲಿಬಿಡಿ, ದೇವರ ವಿಚಾರದಲ್ಲಿ ನಾವೇಕೆ ವೈಯಕ್ತಿಕವಾಗಿ ಜಗಳವಾಡಬೇಕು ? ನಾನಂತೂ ದೇವರ ವಿಚಾರವನ್ನು ಯೋಚಿಸಿಯೂ ಇಲ್ಲ; ಯಾವುದೇ ಲಾಭಕ್ಕಾಗಿ ದೇವರನ್ನು ಯಾಚಿಸಿಯೂ ಇಲ್ಲ. ಮನುಷ್ಯರಿಂದಲೇ ಮನುಷ್ಯರ ಮೇಲೆ ನಡೆಯುತ್ತಿರುವ ಅನ್ಯಾಯವನ್ನು, ಜನರ ಮೇಲೆ ಕವಿದಿರುವ ಅಜ್ಞಾನವನ್ನು ತೊಡೆದುಹಾಕಬೇಕು; ನಿರೀಶ್ವರವಾದಿಗಳ ಸ್ವಾಭಿಮಾನವನ್ನು ರಕ್ಷಿಸಬೇಕೆಂಬುದಷ್ಟೇ ನನ್ನ ಉದ್ದೇಶ ಎಂದರು.

"ಆ ಉದ್ದೇಶ ಸಾಧನೆಗಾಗಿ ನಾವಿಬ್ಬರೂ ಒಟ್ಟಾಗಿಯೇ ದುಡಿಯೋಣ" ಎಂದುಬಿಟ್ಟರು ಅಡಿಗಳು. ಆದರೆ, "ನಿಮ್ಮ ರೂಢಿಗತ ಸಂಪ್ರದಾಯಗಳು ಅದಕ್ಕೆಲ್ಲ ಅವಕಾಶಕೊಡುತ್ತವೆಯೆ ?" – ಪೆರಿಯಾರರ ವ್ಯಂಗ್ಯವಾದ ಪ್ರಶ್ನೆ.

"ಸಂಪ್ರದಾಯಗಳು ಬದಲಾಗಬೇಕು" – ಅಡಿಗಳು ತಮ್ಮ ಆಶಯವನ್ನು ವ್ಯಕ್ತಪಡಿಸಿದರು. ಸಮಾಗಮದ ಕೊನೆಗೆ ಇಬ್ಬರ ಕೋಪ, ಉದ್ವೇಗಗಳು ಶಮನವಾಗಿದ್ದವು !

ಕೆಲವು ದಿನಗಳ ಅನಂತರ, ೧೯೫೬ರ ಸೆಪ್ಟೆಂಬರ್ ತಿಂಗಳಲ್ಲಿ ದ್ರಾವಿಡ ಕಜ್ಹಗಂ ಪಕ್ಷದ ವತಿಯಿಂದ ತಿರುಚ್ಚಿಯ "ಗೋಲ್ಡನ್ ರಾಕ್"ನಲ್ಲಿ ಪೆರಿಯಾರರ ಹುಟ್ಟುಹಬ್ಬವನ್ನು ಆಚರಿಸುವ ಏರ್ಪಾಡಾಯಿತು; ಹಾಗೂ ಪೆರಿಯಾರರನ್ನು ಸನ್ಮಾನಿಸಲು ಅಡಿಗಳನ್ನು ಆಹ್ವಾನಿಸಲು ನಿರ್ಧರಿಸಲಾಯಿತು. ಆರಂಭದಲ್ಲಿ ಈ ಆಹ್ವಾನವನ್ನು ಒಪ್ಪಿಕೊಳ್ಳಲು ಅಡಿಗಳು ಸ್ವಲ್ಪ ಹಿಂಜರಿದರಾದರೂ ಕಡೆಗೆ ಒಪ್ಪಿಕೊಂಡರು. ವೇದಿಕೆಯ ಮೇಲೆ ಇಬ್ಬರೂ ಒಟ್ಟಾಗಿ ಕಾಣಿಸಿಕೊಂಡದ್ದು ಇದೇ ಮೊದಲು. ಅಡಿಗಳು ಬರಲು ಒಪ್ಪಿಕೊಂಡದ್ದರಿಂದ ಪೆರಿಯಾರರಿಗೆ ಸಂತೋಷವಾಗಿತ್ತು. ವೇದಿಕೆಯ ಮೇಲೆ ಕುಳಿತಿದ್ದ ಇಬ್ಬರೂ ಪಿಸುದನಿಯಲ್ಲಿ ಮಾತಾಡಿಕೊಳ್ಳುತ್ತಿದ್ದರು, ಆಗಾಗ ನಸುನಗುತ್ತಿದ್ದರು. ಸಭಿಕರು ಉತ್ಸಾಹದಿಂದ ಸಂಭ್ರಮಿಸಿದರು.




ಛಾಯಾಚಿತ್ರ ಗ್ರಾಹಕರು ಇಬ್ಬರ ಭಾವಚಿತ್ರ ತೆಗೆಯಲು ಮುಗಿಬೀಳುತ್ತಿದ್ದರು. ಸಮಾರಂಭವು ಮುಗಿದ ಅನಂತರ ಒಬ್ಬ ಛಾಯಾಚಿತ್ರ ಗ್ರಾಹಕನು, ಇನ್ನಷ್ಟು ಚಿತ್ರಗಳನ್ನು ತೆಗೆಯಲು ತನ್ನ 'ಸ್ಟುಡಿಯೋ'ಗೆ ಬರುವಂತೆ ವಿನಂತಿಸಿದನು. ಇದು ಪೆರಿಯಾರರಿಗೆ ಇಷ್ಟವಾಗಲಿಲ್ಲ. "ಮಹಾಸನ್ನಿಧಾನ"ವನ್ನು ಸ್ಟುಡಿಯೋಗೆ ಬರುವಂತೆ ಕರೆಯುವುದು ಸರಿಯಲ್ಲವೆಂದು ಆತನನ್ನು ಛೇಡಿಸಿದರು.

ತುಂಬಿದ ಸಭೆಯಲ್ಲಿ ಒಬ್ಬ ಭಾಷಣಕಾರನು, ದ್ರಾವಿಡ ಕಜ್ಹಗಂನ ವಕ್ತಾರರಿಗೆ ರೂಢಿಯಾಗಿದ್ದ ಅಬ್ಬರದ ದನಿಯಲ್ಲಿ ಮತಧರ್ಮಗಳನ್ನು ಖಂಡಿಸಲಾರಂಭಿಸಿದನು. ಪೆರಿಯಾರರಿಗೆ ಇದು ಇಷ್ಟವಾಗಲಿಲ್ಲವೆಂಬುದು ಹುಬ್ಬುಗಂಟಿಕ್ಕಿದ ಅವರ ಮುಖದಲ್ಲಿಯೇ ಕಾಣಿಸಿತು. ಅವರು ತಮ್ಮ ಕೈಗೋಲನ್ನು ಕುಕ್ಕಿ, ಭಾಷಣಕಾರನು ಧ್ವನಿತಗ್ಗಿಸಿ ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸುವಂತೆ ಸಂಜ್ಞೆ ಮಾಡಿದರು.

ಅಡಿಗಳನ್ನು ಪೆರಿಯಾರರಿಗೆ ಸನ್ಮಾನ ಮಾಡಲು ಕರೆದಾಗ ಅವರು (ಅಡಿಗಳು) ಒಂದು ರೇಷ್ಮೆ ಶಾಲನ್ನು (ಪೊನ್ನಾಡೈ) ಪೆರಿಯಾರರ ಬೆನ್ನಮೇಲೆ ಹೊದಿಸಿದರು. ಈ ವರ್ತನೆಯನ್ನು ಮತಧರ್ಮ ಶ್ರದ್ಧಾವಂತರು ಮತ್ತು ನಿರೀಶ್ವರವಾದಿಗಳು ಇಬ್ಬರೂ ಟೀಕಿಸಿದರು. ಆದರೂ ಪೆರಿಯಾರರು ತಮ್ಮೆದುರಿಗೆ ತಲೆಬಾಗಿ ನಿಂತಾಗ ಅಡಿಗಳು ಪೆರಿಯಾರರಿಗೆ ಸನ್ಮಾನವನ್ನು ಸಲ್ಲಿಸಿ ಮಾತಾಡಿದರು. ಮೊದಲಿಗೆ ಜಾತಿಪದ್ಧತಿಯ ತಾರತಮ್ಯವನ್ನು ತೊಡೆದುಹಾಕುವ ಸಲುವಾಗಿ ಪೆರಿಯಾರರು ವಹಿಸುತ್ತಿರುವ ಅಗಾಧ ಶ್ರಮವನ್ನು ಪ್ರಶಂಸಿಸಿದರು. ಅನಂತರ ತಮ್ಮ ಮಾತನ್ನು ಮುಂದುವರಿಸಿ ನಾಸ್ತಿಕವಾದದ ಒಂದೊಂದೇ ಅಂಶಗಳನ್ನು ಎತ್ತಿಕೊಂಡು ಖಂಡಿಸಿದರು. ಅವರ ಮಾತುಗಳನ್ನು ಪೆರಿಯಾರರು ಗಮನವಿಟ್ಟು ಕೇಳಿಸಿಕೊಂಡರಾದರೂ ಅಡಿಗಳ ಮಾತಿಗೆ ಪ್ರತಿಕ್ರಿಯಿಸಲು ಇದು ಸೂಕ್ತ ಸಂದರ್ಭವಲ್ಲವೆಂದು ಭಾವಿಸಿ ಮೌನವಾಗಿ ಕುಳಿತಿದ್ದರು.

ತಮಗೆ ಸಲ್ಲಿಸಿದ ಸನ್ಮಾನಕ್ಕೆ ಕೃತಜ್ಞತೆಯನ್ನು ವ್ಯಕ್ತಪಡಿಸುವ ಅವಕಾಶ ಒದಗಿದಾಗ ಪೆರಿಯಾರರು ಭಾವುಕರಾಗಿ ತಮ್ಮ ಅಳಲನ್ನು ತೋಡಿಕೊಳ್ಳಲು ಮರೆಯಲಿಲ್ಲ. ಜಾತಿವ್ಯವಸ್ಥೆಯಲ್ಲಿ ತಮಿಳರನ್ನು ಶೂದ್ರರೆಂದು ನಿಂದಿಸಿ ಅವರ ಮುಖಕ್ಕೆ ಮಸಿ ಬಳಿಯಲಾಗುತ್ತಿದೆ. ಈ ಅಪವಾದವನ್ನು ತೊಡೆದುಹಾಕುವುದು ನನ್ನ ಮುಖ್ಯ ಉದ್ದೇಶ. ಆ ಕೆಲಸವನ್ನು 'ದೇವರೇ' ಮಾಡಿದರೂ, ಅಡಿಗಳಂತಹ ಮಹಾಸನ್ನಿಧಾನವೇ ಮಾಡಿದರೂ ನನಗೆ ಸಂತೋಷವೆ. ಮುಖ್ಯವಾಗಿ ಮಹಾಸನ್ನಿಧಾನವು ನಮ್ಮ ನೋವನ್ನು ಅರ್ಥಮಾಡಿಕೊಳ್ಳಬೇಕು; ನಮ್ಮ ನೋವನ್ನು ನಾವು ಹೇಗೆ ವ್ಯಕ್ತಪಡಿಸುತ್ತೇವೆ, ಹೇಗೆ ಏರುಧ್ವನಿಯಲ್ಲಿ ಮಾತಾಡುತ್ತೇವೆ ಎಂಬುದನ್ನು ನೋಡಿ ಬೇಸರಪಟ್ಟುಕೊಳ್ಳಬಾರದು ಎಂದು ವಿನಂತಿಸಿದರು.

ಅಂದಿನ ಕಾರ್ಯಕ್ರಮವು ಮುಗಿದಮೇಲೆ ಇಬ್ಬರೂ ಒಂದೇ ಕಾರಿನಲ್ಲಿ ತಿರುನವೇಲಿವರೆಗೆ ಹೋದರು. ತಿರುನವೇಲಿಯಲ್ಲಿ ಕಾರಿನಿಂದ ಇಳಿದಾಗ, ಜಾತಿಭೇದದ ಅನಿಷ್ಟವನ್ನು ತೊಡೆದುಹಾಕುವ, ತಮಿಳರಿಗೆ ಆಗುತ್ತಿರುವ ಅವಮಾನವನ್ನು ನಿವಾರಿಸುವ ತಮ್ಮ ನಿರ್ಧಾರವನ್ನು ಇಬ್ಬರೂ ಪುನರುಚ್ಚರಿಸಿದರು. ಪರಸ್ಪರ ಭಿನ್ನಾಭಿಪ್ರಾಯಗಳ ಹೊರತಾಗಿಯೂ, ಈ ಇಬ್ಬರ ನಡುವೆ ಅಂದು ಆರಂಭವಾದ ಸ್ನೇಹವು ೧೯೭೩ರಲ್ಲಿ ಪೆರಿಯಾರರು ತೀರಿಕೊಳ್ಳುವವರೆಗೂ ಮುಂದುವರಿಯಿತು.

*(ಈ ಲೇಖನದ ಕೆಲವು ಮಾಹಿತಿಗಳನ್ನು ೧೬-೧೧-೨೦೧೬ರ 'ದಿ ಹಿಂದು' ದಿನಪತ್ರಿಕೆಯಿಂದ ಸಂಗ್ರಹಿಸಲಾಗಿದೆ.)*

---

**ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೦೭೦



# ಲಂಕೇಶ್ ಪ್ರಕಾಶನ

## ನಮ್ಮ ಪ್ರಕಾಶನದಿಂದ ಈವರೆಗೆ ಪ್ರಕಟವಾಗಿರುವ ಪುಸ್ತಕಗಳು

ಪ್ರತಿಗಳಿಗಾಗಿ ಸಂಪರ್ಕಿಸಿ:
**ಲಂಕೇಶ್ ಪ್ರಕಾಶನ**
ನಂ.9, ಇ.ಎ.ಟಿ.ರಸ್ತೆ, ಬಸವನಗುಡಿ
ಬೆಂಗಳೂರು-4 080-26676427
**9880302817**



| ಶೀರ್ಷಿಕೆ | ಬೆಲೆ | ಮಾಧ್ಯಮ | ಲೇಖಕರು |
|---|---|---|---|
| 1. ನೀಲು ಕಾವ್ಯ –ಸಂಗ್ರಹ 1 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 2. ನೀಲು ಕಾವ್ಯ –ಸಂಗ್ರಹ 2 | 150.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 3. ನೀಲು ಕಾವ್ಯ –ಸಂಗ್ರಹ 3 | 200.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 4. ಚಿತ್ರ ಸಮೂಹ | 90.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 5. ಅಕ್ಷರ ಹೊಸ ಕಾವ್ಯ | 300.00 | ಕಾವ್ಯ ಸಂಗ್ರಹ | ಪಿ. ಲಂಕೇಶ್ |
| 6. ಮರೆಯುವ ಮುನ್ನ–ಸಂಗ್ರಹ 1 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 7. ಮರೆಯುವ ಮುನ್ನ–ಸಂಗ್ರಹ 2 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 8. ಮರೆಯುವ ಮುನ್ನ–ಸಂಗ್ರಹ 3 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 9. ಮರೆಯುವ ಮುನ್ನ–ಸಂಗ್ರಹ 4 | 150.00 | ಸಮಕಾಲೀನ ಬರಹ | ಪಿ. ಲಂಕೇಶ್ |
| 10. ಪಾಂಚಾಲಿ | 150.00 | 1974ರ ದೀಪಾವಳಿ ಸಂಚಿಕೆ | ಪಿ. ಲಂಕೇಶ್ |
| 11. ಮನಕೆ ಕಾರಂಜಿಯ ಸ್ಪರ್ಶ | 150.00 | ಪಾಶ್ಚಿಮಾತ್ಯ ಬರಹಗಳು | ಪಿ. ಲಂಕೇಶ್ |
| 12. ಈ ನರಕ ಈ ಪುಲಕ | 125.00 | ಸಿನಿಮಾ ಬರಹಗಳು | ಪಿ. ಲಂಕೇಶ್ |
| 13. ಆಟ–ಜೂಜು–ಮೋಜು! | 175.00 | ಕ್ರೀಡಾ ಬರಹಗಳು | ಪಿ. ಲಂಕೇಶ್ |
| 14. ಟೀಕೆ–ಟಿಪ್ಪಣಿ 1 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 15. ಟೀಕೆ–ಟಿಪ್ಪಣಿ 2 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 16. ಟೀಕೆ–ಟಿಪ್ಪಣಿ 3 | 200.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 17. ಸಾಹಿತಿ–ಸಾಹಿತ್ಯ | 300.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 18. ರೂಪಕ ಲೇಖಕರು | 70.00 | ಪ್ರಸಿದ್ಧ ಲೇಖಕರ ಬದುಕು–ಬರಹ | ಪಿ. ಲಂಕೇಶ್ |
| 19. ಕಂಡದ್ದು ಕಂಡಹಾಗೆ | 100.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 20. ಪ್ರಸ್ತುತ | 80.00 | ಸಮಕಾಲೀನ ಬರಹಗಳು | ಪಿ. ಲಂಕೇಶ್ |
| 21. ಹುಳಿಮಾವಿನ ಮರ | 275.00 | ಆತ್ಮಕಥೆ | ಪಿ. ಲಂಕೇಶ್ |
| 22. ಮುಸ್ಸಂಜೆಯ ಕಥಾ ಪ್ರಸಂಗ | 250.00 | ಕಾದಂಬರಿ | ಪಿ. ಲಂಕೇಶ್ |
| 23. ಬಿರುಕು | 65.00 | ಕಾದಂಬರಿ | ಪಿ. ಲಂಕೇಶ್ |
| 24. ಅಕ್ಕ | 80.00 | ಕಾದಂಬರಿ | ಪಿ. ಲಂಕೇಶ್ |
| 25. ಮಂಜು ಕವಿದ ಸಂಜೆ | 85.00 | ಕಥಾ ಸಂಕಲನ | ಪಿ. ಲಂಕೇಶ್ |
| 26. ಉಮಾಪತಿ ಸ್ಕಾಲರ್‌ಶಿಪ್ ಯಾತ್ರೆ | 70.00 | ಕಥಾ ಸಂಕಲನ | ಪಿ. ಲಂಕೇಶ್ |
| 27. ಕಲ್ಲು ಕರಗುವ ಸಮಯ | 125.00 | ಕಥಾ ಸಂಕಲನ | ಪಿ. ಲಂಕೇಶ್ |
| 28. ನಾನಲ್ಲ | 60.00 | ಕಥಾ ಸಂಕಲನ | ಪಿ. ಲಂಕೇಶ್ |
| 29. ಕೆರೆಯ ನೀರನು ಕೆರೆಗೆ ಚೆಲ್ಲಿ | 50.00 | ಕಥಾ ಸಂಕಲನ | ಪಿ. ಲಂಕೇಶ್ |
| 30. ಉಲ್ಲಂಘನೆ | 80.00 | ಕಥಾ ಸಂಕಲನ | ಪಿ. ಲಂಕೇಶ್ |
| 31. ಪಾಪದ ಹೂಗಳು | 60.00 | ಕಾವ್ಯ ಸಂಕಲನ | ಪಿ. ಲಂಕೇಶ್ |
| 32. ಬಿರುಕು | 40.00 | ನಾಟಕ | ಪಿ. ಲಂಕೇಶ್ |
| 33. ಸಂಕ್ರಾಂತಿ | 50.00 | ನಾಟಕ | ಪಿ. ಲಂಕೇಶ್ |
| 34. ತೆರೆಗಳು | 50.00 | ನಾಟಕ | ಪಿ. ಲಂಕೇಶ್ |
| 35. ಈಡಿಪಸ್ ಮತ್ತು ಅಂತಿಗೊನೆ | 70.00 | ನಾಟಕ | ಪಿ. ಲಂಕೇಶ್ |
| 36. ಟಿ. ಪ್ರಸನ್ನನ ಗೃಹಸ್ಥಾಶ್ರಮ | 50.00 | ನಾಟಕ | ಪಿ. ಲಂಕೇಶ್ |
| 37. ಗುಣಮುಖ | 30.00 | ನಾಟಕ | ಪಿ. ಲಂಕೇಶ್ |
| 38. ಕ್ರಾಂತಿ ಬಂತು ಕ್ರಾಂತಿ | 40.00 | ನಾಟಕ | ಪಿ. ಲಂಕೇಶ್ |
| 39. ಕಪ್ಪು ಮಲ್ಲಿಗೆ | 75.00 | ಅನುವಾದಿತ ಕತೆಗಳು | ಗೌರಿ ಲಂಕೇಶ್ |
| 40. ಕಂಡಹಾಗೆ – 1 | 125.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| 41. ಕಂಡಹಾಗೆ – 2 – III | 150.00 | ಸಮಕಾಲೀನ ಬರಹಗಳು | ಗೌರಿ ಲಂಕೇಶ್ |
| 42. ಬಸವರಾಜಮಾರ್ಗ | 40.00 | ಲೇಖನಗಳು | ಸಂ: ಗೌರಿ ಲಂಕೇಶ್ |
| 43. ಆವರಣ ಎಂಬ ವಿ–ಕೃತಿ | 100.00 | ವಿಮರ್ಶೆಗಳು | ಸಂ: ಗೌರಿ ಲಂಕೇಶ್ |
| 44. ಜೈಲೆಂಬ ಲೋಕದಲ್ಲಿ | 75.00 | ಸರಳುಗಳ ಹಿಂದಿನ ಸತ್ಯಗಳು | ಕುಮಾರ್ ಸಮತಳ |
| 45. ವೇದಾಂತ ರೆಜಿಮೆಂಟ್ | 60.00 | ವೈಚಾರಿಕ ಲೇಖನಗಳು | ಬಿ.ವಿ.ವೀರಭದ್ರಪ್ಪ |
| 46. ಕಳೆದುಕೊಂಡವಳು | 45.00 | ಕತೆಗಳು | ಜಾಹ್ನವಿ |
| 47. ನೂರುಸ್ವರ | 60.00 | ಕತೆಗಳು | ಉಮಾ ರಾವ್ |
| 48. ಟ್ರೇನ್ ಟು ಪಾಕಿಸ್ತಾನ್ | 125.00 | ಕಾದಂಬರಿ | ಖುಷ್ವಂತ್ ಸಿಂಗ್. ಅನು : ಡಾ. ಎಂ.ಬಿ. ರಾಮಮೂರ್ತಿ |
| 49. ಮಿಡತೆಗಳ ಬರವಿಗೆ.... | 100.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| 50. ಡಿಸೆಂಬರ್ 13 | 150.00 | ಅನು: ಸುಕನ್ಯಾ ಕಾನರಳ್ಳಿ | ಅರುಂಧತಿ ರಾಯ್ |
| 51. ಮನುಸ್ಮೃತಿ | 20.00 | ಸಂಘಪರಿವಾರದ ಸಂವಿಧಾನ ಮನುಸ್ಮೃತಿ | ಏಕಲವ್ಯ |
| 52. ಆರೋಗ್ಯ ಮತ್ತು ಜೀವನ | 125.00 | ವೈದ್ಯಕೀಯ ಸಾಹಿತ್ಯ | ಡಾ. ಎಂ. ಬಿ. ರಾಮಮೂರ್ತಿ |
| 53. ಜಬೀವುಲ್ಲಾ ಕೊಟ್ಟ ಕೋಳಿ | 100.00 | ಹಾಸ್ಯಲೇಖನಗಳು | ಬಿ. ಚಂದ್ರೇಗೌಡ |
| 54. ವಿಷ್ಣು–ನೂರೊಂದು ನೆನಪು | 150.00 | ವಿಷ್ಣುವರ್ಧನ್ ಆತ್ಮಕಥೆ | ಸದಾಶಿವ ಶೆಣೈ |
| 55. ಓ ಈಳಂ | 250.00 | ಎಲ್‌ಟಿಟಿಇ ಕಥನ | ಕುಮಾರ್‌ಬುರಡಿಕಟ್ಟಿ |
| 56. ಖೈರ್ಲಾಂಜಿ | 200.00 | ದಲಿತ ಭಾರತದ ಕಥನ | ಆನಂದ್ ತೇಲ್‌ತುಂಬ್ಡೆ |
| 57. ಕಮಲಾ ದಾಸ್ ಕಥೆಗಳು | 60.00 | ಸಣ್ಣ ಕಥೆಗಳು | ಅನು: ಗಂಗಾಧರನ್ |
| 58. ಮಾಂಟೊ ಕಥೆಗಳು | 80.00 | ಸಣ್ಣ ಕಥೆಗಳು | ಅನು: ಜೆ. ಬಾಲಕೃಷ್ಣ |
| 59. ಜಾತಿ ಪದ್ಧತಿ | 125.00 | | ರಾಮ್‌ಮನೋಹರ್ ಲೋಹಿಯಾ |
| 60. ರಾಮಾಯಣ ವಿಷವೃಕ್ಷ | 75.00 | ವೈಚಾರಿಕ ಬರಹಗಳು | ಡಾ.ಬಂಜಗೆರೆ ಜಯಪ್ರಕಾಶ್ |
| 61. ಅರೇಬಿಯನ್ ನೈಟ್ಸ್ | 150.00 | ಕಥೆಗಳು | ಪಂಜು ಗಂಗೊಳ್ಳಿ |
| 62. ಜಿಮ್‌ಕಾರ್ಬೆಟ್–ಶಿಕಾರಿ ಕತೆಗಳು | 80.00 | ಕಥೆಗಳು | ಟಿ. ಎಸ್. ವಿವೇಕಾನಂದ |
| 63. ಗೋವು ಪವಿತ್ರ ಎಂಬ ಮಿಥ್ಯೆ | 80.00 | ವೈಚಾರಿಕ ಬರಹಗಳು | ಡಿ.ಎನ್.ಝಾ |
| 64. ಅಸ್ಪೃಶ್ಯ ವಸಂತ | 200.00 | ಕಾದಂಬರಿ | ಕಲ್ಯಾಣ್ ರಾವ್ |
| 65. ಬಾಲಗೋಪಾಲ್ ಬರಹಗಳು | 150.00 | ವೈಚಾರಿಕ ಬರಹಗಳು | ಬಾಲಗೋಪಾಲ್ |
| 66. ಬದುಕು–ಬಯಲು | 200.00 | ಹಿಜ್ರಾ ಒಬ್ಬಳ ಆತ್ಮಕತೆ | ಎ. ರೇವತಿ |
| 67. ಜಂಗಲ್‌ನಾಮಾ | 175.00 | ಗೆರಿಲ್ಲಾ ವಲಯದೊಳಗೆ | ಸತ್ನಾಮ್ |
| 68. ತಾಜುಮಾ ಕವಿತೆಗಳು | 75.00 | ಕವನಗಳು | ತಾಜುಮಾ |
| 69. ಪ್ರೀತಿ ಮತ್ತು ಕ್ರಾಂತಿ | 125.00 | ಕವನಗಳು | ಫೈಜ್ ಮಹಮ್ಮದ್ ಫೈಜ್ |
| 70. ಲೋಕಾಯುಕ್ತ ತನಿಖಾ ವರದಿ | 100.00 | | ಸಂತೋಷ್ ಹೆಗ್ಡೆ |
| 71. ಕೇಸರಿ ಭಯೋತ್ಪಾದನೆ | 100.00 | | ಸುರೇಶ್ ಭಟ್ ಬಾಕ್ರಬೈಲ್ |
| 72. ಹೇಳುತ್ತೇನೆ ಕೇಳು | 175.00 | ಹೆಣ್ಣಿನ ಆತ್ಮಕತೆ | ಸುಕನ್ಯಾ ಕನಾರಳ್ಳಿ |
| 73. ಹುಳಿ ಮಾವು ಮತ್ತು ನಾನು | 150.00 | | ಇಂದಿರಾ ಲಂಕೇಶ್ |
| 74. ಬಿಟ್ಟು ಹೋದ ಪುಟಗಳು I | 250.00 | | ಪಿ. ಲಂಕೇಶ್ |
| 75. ನೇತುಬಿದ್ದ ನವಿಲು | 225.00 | | ರಹಮತ್ ತರೀಕೆರೆ |
| 76. ಬಿಟ್ಟು ಹೋದ ಪುಟಗಳು II | 250.00 | | ಪಿ. ಲಂಕೇಶ್ |
| 77. ಅನಂತಮೂರ್ತಿ ಅನಂತ ರೀತಿ | 130.00 | | |
| 78. ಜೇಡರ ಕಣಿವೆ ಮತ್ತು ಇತರ ಕಥೆಗಳು | 50.00 | | |
| 79. ನಸ್ರುದ್ದೀನ ಕತೆಗಳು | 80.00 | | |
| 80. ಆರ್.ಎಸ್.ಎಸ್. ಅಂತರಂಗ | 80.00 | | |
| 81. ನನ್ನನುಭವದ ಸೂಫಿ ಮತ್ತು ಇತರೆ ಲೇಖನಗಳು | 200.00 | | ನೂರ್ ಶ್ರೀಧರ್ |
| 82. ದೇಶ ಅಂದರೆ... ಮನುಷ್ಯರು | 150.00 | | ಹರ್ಷಕುಮಾರ್ ಕುಗ್ವೆ |
| 83. ಹತ್ತು ತಮಿಳು ಕತೆಗಳು | 80.00 | | ನಲ್ಲತಂಬಿ ಕೆ. |
| 84. ಬಿಟ್ಟುಹೋದ ಪುಟಗಳು (ಸಂಗ್ರಹ 3) | 250.00 | | ಲಂಕೇಶ್ ಪಿ. |
| 85. ಅರ್ಧನಾರೀಶ್ವರ | 150.00 | | ಪೆರುಮಾಳ್ ಮುರುಗನ್ |
| 86. ಕಾಡುವ ಕತೆಗಳು | 80.00 | | ಗಿರೀಶ್ ತಾಳಿಕಟ್ಟೆ |
| 87. ಹುಲಿಯ ಜಾಡು ಹಿಡಿದು (ಟಿಪ್ಪು ಸುಲ್ತಾನ್ ಕುರಿತು ಲೇಖನ) | 80.00 | | ಕುಮಾರ್ ಬುರಡಿಕಟ್ಟೆ |
| 88. ಕಗ್ಗತ್ತಲ ಜಗತ್ತಲ್ಲಿ ತೊಂಬತ್ತು ದಿನ | 60.00 | | ನಗರಿ ಬಾಬಯ್ಯ |
| 89. ಮನಕೆ ಕಾರಂಜಿಯ ಸ್ಪರ್ಶ | 175.00 | | ಲಂಕೇಶ್ ಪಿ. |

ಪ್ರಸಿದ್ಧ ಬರಹಗಾರ ಆ್ಯಂಟನ್ ಚೆಕಾಫ್‌ನ 'ದ ಮಿಸ್‌ಕ್ರಿಯೆಂಟ್' (The Miscreant) ಎಂಬ ಕತೆಯೊಂದಿದೆ. ಅದರಲ್ಲಿ ಹಳ್ಳಿ ಗಮಾರನಂತೆ ಭಾಸವಾಗುವ ಮುಗ್ಧನೊಬ್ಬನ ವಿಚಾರಣೆ ಸರ್ಕಾರಿ ರೈಲ್ವೆ ಅಧಿಕಾರಿಗಳಿಂದ ನಡೆಯುತ್ತಿದೆ. ಅವನು ರೈಲ್ವೆ ಹಳಿಯಿಂದ ಬೋಲ್ಟ್ ಒಂದನ್ನು ಕದ್ದು ತೆಗೆದಿದ್ದಾನೆ ಹಾಗೂ ನೂರಾರು ಜನರ ಜೀವಾಪಾಯಕ್ಕೆ ಕಾರಣನಾಗಿದ್ದಾನೆಂಬ ಆರೋಪ. 'ನಾಲ್ಕು ಬೋಲ್ಟ್‌ಗಳು ಗಟ್ಟಿಯಾಗಿರುವ ಜಾಗದಿಂದ ಮೀನಿನ ಗಾಳ ಆಳಕ್ಕಿಳಿಯಲು ಒಂದು ಬೋಲ್ಟ್ ತೆಗೆದರೆ ಹಳಿಗಳಿಗೆ ಅಪಾಯವಿಲ್ಲ. ನಮ್ಮ ಹಳ್ಳಿಯಲ್ಲಿ ಎಲ್ಲರೂ ಹಾಗೆ ಜಾಗ್ರತೆ ವಹಿಸಿಯೇ ಗಾಳಕ್ಕೆ ಕಟ್ಟಲು ಬೋಲ್ಟ್ ತೆಗೆಯುವುದು. ಜನರ ಜೀವವನ್ನು ಅಪಾಯಕ್ಕೆ ಒಡ್ಡುವುದು ಎಂದರೇನು ?' ಎಂಬುದು ವಿಚಾರಣಾ ಅಧಿಕಾರಿ ಎದುರು ಅವನ ಉತ್ತರ. ತಾನು ಯಾಕೆ ಜೈಲಿಗೆ ಹೋಗಬೇಕು ? ತನಗೆ ಮಾಡಲು ಹಲವಾರು ಕೆಲಸಗಳು ಬಾಕಿ ಇವೆ. ಬೋಲ್ಟ್ ತೆಗೆದದ್ದು ನಿಜ ಎಂದೊಡನೆ ಮತ್ತಷ್ಟು ಬಿಗಿಯಾಗುವ ಅಧಿಕಾರಿ ಕಾನೂನಿನ ಕಟ್ಟುಗಳನ್ನು ಶಿಕ್ಷೆಗೆ ಮತ್ತಷ್ಟು ಭದ್ರಗೊಳಿಸುತ್ತಾನೆ.

ತನ್ನ ಹಳ್ಳಿಯ ಬಳಿ ಹಾಯುವ ಆಧುನಿಕ ರೈಲ್ವೆಯ ಯಾವ ಪ್ರಗತಿಯ ಲಾಭವೂ ಪಡೆಯದಿರುವ ಹಳ್ಳಿ ಹುಡುಗನಿಗೆ ರೈಲ್ವೆಯ ಕಾನೂನು ಏನು ಎಂಬುದೇ ಅರ್ಥವಾಗುವುದಿಲ್ಲ. ಅವನ ನೈತಿಕತೆ ಪ್ರಕಾರ ನಾಲ್ಕು ಬೋಲ್ಟ್‌ಗಳು ಗಟ್ಟಿಯಾಗಿರುವಲ್ಲಿಂದ ಎಲ್ಲರ ಹಾಗೆ ಗಾಳಕ್ಕೆ ಒಂದು ಬೋಲ್ಟ್ ತೆಗೆದರೆ ರೈಲ್ವೆ ಹಳಿಗಾಗಲೀ ಚಲಿಸುವ ರೇಲುಗಾಡಿಗಾಗಲೀ ಯಾವುದೇ ಅಪಾಯವಿಲ್ಲ. ಆದರೆ ಕಾನೂನು ಪ್ರಕಾರ ಆತ ರೈಲ್ವೆ ಆಸ್ತಿಯನ್ನು ಕದ್ದು ಪ್ರಯಾಣಿಕರ ಜೀವವನ್ನು ಅಪಾಯಕ್ಕೆ ಒಡ್ಡಿದ ಅಪರಾಧಿ. ಕಳ್ಳತನ ತಪ್ಪೆಂಬ ಅರಿವಿದ್ದೂ ತನ್ನ ಸಹೋದರಿಯ ಹಸಿದ ಏಳು ಮಕ್ಕಳಿಗಾಗಿ ಬೇಕರಿಯಿಂದ ಬ್ರೆಡ್ಡು ಕದಿಯುವ ವಿಕ್ಟರ್ ಹ್ಯೂಗೋನ ದುಃಖಾರ್ಥರು (Les Miserables) ಕಾದಂಬರಿಯ ಜೀನ್‌ವಾಲ್ ಜೀನ್‌ನ ಕಾನೂನು ಹಾಗೂ ನೈತಿಕ ತಿಳಿವಳಿಕೆಗಿಂತ ಭಿನ್ನವಾದ ಸ್ಥಿತಿ ಚೆಕಾಫ್‌ನ ಕಥಾನಾಯಕ ಡೆನಿಸ್ ಗ್ರಿಗರೋವ್‌ನದ್ದು. ಆತ ತನ್ನ ನೀತಿಗೆ ಅನುಗುಣವಾಗಿದ್ದಾನೆ, ಕಾನೂನು ಮತ್ತು ಕಾಯಿದೆಗಳ ನ್ಯಾಯ ಅದನ್ನು ಒಪ್ಪುತ್ತಿಲ್ಲ.

ನ್ಯಾಯ ಮತ್ತು ನೀತಿ ಎಂಬುದು ನಿತ್ಯ ನಾಲಗೆಯಲ್ಲಿರುವ ಪದಗಳಾದರೂ ಅದರ ಹಿಂದಿರುವ ತಾತ್ವಿಕತೆ ಅಗಾಧವಾದುದು. ಅಗೆದಷ್ಟೂ ಆಳಕ್ಕಿಳಿಯುವ ವಿಚಾರಗಳವು. ಅನ್ವಯದಲ್ಲಿ ಅವು ಸದಾ ಜೀವಂತವಾಗಿರುತ್ತವೆ. ನ್ಯಾಯ ಮತ್ತು ನೀತಿ ಎಂಬುದನ್ನು ಇಂದಿನ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಗೆ ಅನ್ವಯಿಸಿದಾಗ ಅವು ಕಾನೂನು ಮತ್ತು ನೈತಿಕತೆಯ ಪರಿಭಾಷೆಗೆ ಒಳಗಾಗುತ್ತವೆ. ಚುನಾವಣೆಗಳಲ್ಲಿ ಆಯ್ಕೆಗೊಂಡ ಪ್ರಜಾಪ್ರತಿನಿಧಿಗಳಿಂದ ಇಂದಿನ ಕಾನೂನುಗಳು ನಿರ್ಮಾಣಗೊಂಡಿವೆ ಹಾಗೂ ಹಿಂದಿನ ಕಾನೂನುಗಳು ಅಂಗೀಕರಿಸಲ್ಪಟ್ಟಿವೆ. ಕಾಲಕಾಲಕ್ಕೆ ಹೊಸ ಬೆಳವಣಿಗೆಗಳಿಂದಾಗಿ ಹೊಸ ಕಾನೂನುಗಳೂ ಅನಿವಾರ್ಯವಾಗುತ್ತವೆ. ಭದ್ರವಾದ ರೈಲ್ವೆ ಹಳಿಗೆ ಅಪಾಯವಾಗದಂತೆ ಒಂದು ಬೋಲ್ಟ್ ತೆಗೆಯಬಹುದೆಂಬ ಚೆಕಾಫ್‌ನ ಹಳ್ಳಿಗಳ ಅಲಿಖಿತ ನೀತಿಯಂತೆ, ಭಾರತದಂತಹ ದೇಶದಲ್ಲಿ ಸಾವಿರಾರು ವರುಷಗಳಿಂದ ಪಾಲಿಸಿಕೊಂಡು ಬಂದ ಕೆಲವು ನೀತಿನಿಯಮಗಳಿವೆ. ಅವುಗಳು ಕಾನೂನಿನ ಮಾನ್ಯತೆ ಪಡೆಯದಿದ್ದರೂ ಆಚರಣೆಯಲ್ಲಿರುತ್ತವೆ. ಉದಾಹರಣೆಗೆ, ಹಿರಿಯರೆದುರು ಬಾಗಿ ಕಾಲುಮುಟ್ಟಿ ಆಶೀರ್ವಾದ ಪಡೆಯುವ ಪದ್ಧತಿ. ಪೇಟೆ ಪಟ್ಟಣಗಳಲ್ಲಿ ಹಲವು ಸಮಸ್ಯೆಗಳಿಗೆ ಕಾರಣವಾಗುತ್ತಿದ್ದರೂ ದನ, ನಾಯಿ ಮುಂತಾದ ಪ್ರಾಣಿಗಳಿಗೆ ಆಹಾರದಾನ; ಪಕ್ಷಿಗಳಿಗೆ ಧಾನ್ಯದಾನ ಮೊದಲಾದ ಆಚಾರಗಳ ಮೂಲದಲ್ಲಿ ಪಶುಪಕ್ಷಿಗಳೊಡನೆ ಆಹಾರ ಹಂಚಿಕೊಳ್ಳುವ ನೈತಿಕ ನಿಲುವು ಇದೆ.

ಇಂಗ್ಲೆಂಡ್, ಅಮೆರಿಕ ಮೊದಲಾದ ಕಾನೂನುಬದ್ಧ ಪ್ರಜಾಪ್ರಭುತ್ವ

# ಕಾನೂನು ನ್ಯಾಯ ಮತ್ತು ಸಮುದಾಯ ನೀತಿ

**ಎಸ್. ಆರ್. ವಿಜಯಶಂಕರ**

**ನ್ಯಾಯತತ್ತ್ವದ ವಿಚಾರ ಅಥವಾ ಆನ್ವಯಿಕ ಸಮಸ್ಯೆಗಳ ಚರ್ಚೆ ಯಾವುದೂ ನಡೆಯದೆ ಶಾಸಕಾಂಗಗಳು ಇಂದು ನಿರಂತರವಾಗಿ ಹೊಸ ಕಾನೂನುಗಳನ್ನು ಸೃಜಿಸುತ್ತಲೇ ಇವೆ.**



ರಾಜ್ಯವ್ಯವಸ್ಥೆಗಳು ಕಾನೂನು ಹಾಗೂ ನೈತಿಕತೆಗಳನ್ನು ಒಂದಾಗಿ ಪರಿಗಣಿಸುತ್ತವೆ. ಕಾನೂನು ವ್ಯವಸ್ಥೆಯ ಮೂಲಕವೇ ವಲಸಿಗರಿಂದ ನಾಡು ಕಟ್ಟಿರುವ ಅಮೆರಿಕಕ್ಕಂತೂ ಕಾನೂನು ಹಾಗೂ ನೈತಿಕತೆಗಳ ನಡುವೆ ವ್ಯತ್ಯಾಸವೇ ಇಲ್ಲ. ಅವೆರಡೂ ಒಂದರಿಂದೊಂದು ಪ್ರತ್ಯೇಕಿಸಲು ಸಾಧ್ಯವಿಲ್ಲದಂತಹ ವಿಚಾರಗಳು. ಭಾರತದ ಕ್ರಮ ಕಟ್ಟಳೆಗಳಲ್ಲಿ ಅನೇಕ ಸಲ ಹಾಗಾಗುವುದಿಲ್ಲ.

ಅಮೆರಿಕ ಮೂಲದ ಕಂಪನಿಯೊಂದರಲ್ಲಿ ಇತ್ತೀಚೆಗೆ ಕೆಲವು ಕೇಸುಗಳನ್ನು ಅಧಿಕಾರಿಯಾಗಿ ನಿರ್ಣಯಿಸಬೇಕಾದ ಕಮಿಟಿಯಲ್ಲಿರಬೇಕಾಗಿ ಬಂದುದರಿಂದ ಕಾನೂನು ಹಾಗೂ ನೈತಿಕತೆ ವಿಚಾರಗಳು ನನ್ನನ್ನು ಎಡೆಬಿಡದೆ ಚಿಂತಿಸುವಂತೆ ಮಾಡಿತು. ಅವಿರತವಾಗಿ ಕಾಡುತ್ತಿರುವ ಈ ತಾತ್ವಿಕ ವಿಚಾರಗಳಿಂದ ಬಿಡುಗಡೆಗಾಗಿ ಅವುಗಳನ್ನು ಇಲ್ಲಿ ಓದುಗರ ಜೊತೆ ಹಂಚಿಕೊಳ್ಳುತ್ತಿದ್ದೇನೆ. ಇಂದಿನ ಪ್ರಜಾಪ್ರಭುತ್ವದ ಶಾಸಕಾಂಗಗಳಲ್ಲಿ ಇಂತಹ ಚಿಂತನೆಗಳು ಹೊಸ ಕಾನೂನುಗಳನ್ನು ಅಂಗೀಕರಿಸುವಾಗ ಸಾಕಷ್ಟು ನಡೆಯುತ್ತಿಲ್ಲ. ಇತ್ತೀಚೆಗೆ ನಮ್ಮ ಶಾಸನ ಸಭೆ ಏಳು ಹೊಸ ಕಾನೂನು ಹಾಗೂ ತಿದ್ದುಪಡಿಗಳನ್ನು ಯಾವುದೇ ಚರ್ಚೆಯಿಲ್ಲದೆ ಅಂಗೀಕರಿಸಿದೆ. ಇಂತಹ ಕಾಲಸ್ಥಿತಿಯಲ್ಲಿರುವ ನಾವು ಕಾನೂನು ಹಾಗೂ ನೈತಿಕತೆಯ ತಾತ್ವಿಕ ವಿಚಾರಗಳನ್ನು ಸಾರ್ವಜನಿಕವಾಗಿ ಚರ್ಚಿಸುವುದು ಪ್ರಜಾಪ್ರಭುತ್ವವನ್ನು ಬಲಪಡಿಸುವ ಒಂದು ಕ್ರಮವೇ ಆಗಿದೆ.

ಕಂಪೆನಿಗಳಲ್ಲಿ ಉದ್ಯೋಗಿಗಳು ತಪ್ಪು ಮಾಡಿದಾಗ ವಿಚಾರಣೆ ಇಲ್ಲದೆ ಸಾರಾಸಗಟು ಅವರನ್ನು ಕೆಲಸದಿಂದ ತೆಗೆದುಹಾಕುವಂತಿಲ್ಲ. ಅದಕ್ಕೊಂದು ವಿಚಾರಣಾ ಕಮಿಟಿ ಆಗಬೇಕು. ಅಮೆರಿಕದ ಉತ್ತಮ ಕಂಪೆನಿಗಳಿಗೆ ಯಾವನೇ ಉದ್ಯೋಗಿ ತನ್ನ ಕಾರ್ಯಕ್ಷೇತ್ರದಲ್ಲಿ ಯಾವುದೇ ಕಾನೂನಿಗೆ ವಿರುದ್ಧವಾಗಿ ನಡೆದರೂ ಆ ಬಗ್ಗೆ ಸಹನೆ ಇಲ್ಲ. ಭಾರತದ ಇನ್‌ಕಮ್ ಟ್ಯಾಕ್ಸ್ ಕಾನೂನು ಖರ್ಚಿನ ಕೆಲವು ಅಂಶಗಳಿಗೆ ಸಂಬಳದ ಆದಾಯದಿಂದ ವಿನಾಯಿತಿ ನೀಡಿದೆ. ಅವುಗಳಲ್ಲಿ ವಾರ್ಷಿಕ ಹದಿನೈದು ಸಾವಿರ ರೂಪಾಯಿಗಳ ಕೌಟುಂಬಿಕ ಔಷಧ ಬಳಕೆಯೂ ಸೇರಿದೆ. ಹಾಗೆಯೇ ಎರಡು ವರುಷಗಳಿಗೊಮ್ಮೆ ಕುಟುಂಬ ಪ್ರವಾಸ, ಲೀಸ್‌ನಲ್ಲಿರುವ ಕಾರಿನ ಡ್ರೈವರ್‌ಗಳಿಗೆ ನೀಡುವ ಸಂಬಳ ಇತ್ಯಾದಿಗಳೂ ಸೇರಿವೆ. ಭಾರತದ ಬ್ರ್ಯಾಂಚಿನಲ್ಲಿ ಹಲವಾರು ಉದ್ಯೋಗಿಗಳು ಇಂತಹ ರಿಯಾಯಿತಿ ಅಂಶಗಳ ದುರುಪಯೋಗ ಮಾಡಿದ್ದಾರೆ. ಅದು ಕಾನೂನುಬಾಹಿರ ಎಂಬುದರಿಂದ ಅವುಗಳ ವಿಚಾರಣೆಗಾಗಿ ಅಮೆರಿಕದ ಕೇಂದ್ರ ಕಚೇರಿಯಿಂದ ತಜ್ಞರ ತಂಡ ಉದ್ಯೋಗಿಗಳ ವಿಚಾರಣೆಗಾಗಿ ಭಾರತಕ್ಕೆ ಬಂದಿಳಿಯಿತು. ತಪ್ಪು ಸಾಬೀತಾದರೆ ಯಾರೇ ಇರಲಿ, ಕೆಲಸದಿಂದ ತೆಗೆಯುವ ಶಿಕ್ಷೆ.

ಮಾನವ ಸಂಪನ್ಮೂಲದ ಪ್ರಾತಿನಿಧಿಕ ಅಧಿಕಾರಿಯಾಗಿ ನಾನು, ಪ್ರತಿಯೊಬ್ಬ ಉದ್ಯೋಗಿಗೂ ತನ್ನನ್ನು ಸಮರ್ಥವಾಗಿ ಪ್ರತಿನಿಧಿಸುವ ಅವಕಾಶ ಇರಬೇಕು ಎಂಬ ವಾದವನ್ನು ವಿಚಾರಣಾ ತಂಡದ ಮುಂದಿಟ್ಟೆ. ಹಾಗೆ ಪ್ರತಿಯೊಬ್ಬ ಉದ್ಯೋಗಿಗೂ ಇಷ್ಟಪಟ್ಟರೆ ವಕೀಲರೂ ಸೇರಿ ತನ್ನ ವಾದವನ್ನು ಮಂಡಿಸಲು ಯಾರಾದರೂ ಒಬ್ಬನನ್ನು ನೇಮಿಸಿಕೊಳ್ಳಬಹುದು. ಕಂಪೆನಿಯು ಭಾರತ ವಿಭಾಗದ ಮಾನವ ಸಂಪನ್ಮೂಲದ ಪ್ರತಿನಿಧಿಯಾಗಿ ಎಲ್ಲ ವಿಚಾರಣಾ ಸಮಿತಿಯಲ್ಲೂ ಒಬ್ಬ ನಿರ್ಣಾಯಕ ನಿರಬೇಕು ಎಂಬ ನಿರ್ಧಾರವಾಯಿತು. ಈ ಹಿನ್ನೆಲೆಯಲ್ಲಿ ಒಂದು ವಿಚಾರಣಾ ಸಮಿತಿಯಲ್ಲಿ ಕುಳಿತು ಉದ್ಯೋಗಿಗಳ ಮೇಲಿನ ಆರೋಪ ಹಾಗೂ ಆ ಬಗ್ಗೆ ಅವರ ರಕ್ಷಣಾತ್ಮಕ ನಿಲುವಿನ ಉತ್ತರ ಇವುಗಳನ್ನು ವಿವರವಾಗಿ ಆಲಿಸಬೇಕಾದ ಸಂದರ್ಭ ಉಂಟಾಯಿತು. ಈಗ ಹೇಳಹೊರಟಿರುವುದು ಅವುಗಳಲ್ಲಿ ಒಂದನ್ನು.

ಆರೋಪಿತ ಉದ್ಯೋಗಿಗಳಲ್ಲಿ ಒಬ್ಬ ತನ್ನ ತಾಯಿಯ ಹೆಸರಿನಲ್ಲಿ ಸುಮಾರು ಒಂಭತ್ತು ಸಾವಿರ ರೂಪಾಯಿಗಳಷ್ಟು ಔಷಧ ಕೊಂಡು ಅದನ್ನು ಆದಾಯ ತೆರಿಗೆ ರಿಯಾಯಿತಿಗಾಗಿ ಬಳಸಿದ್ದ. ಆತ ತಿಂಗಳಿಗೆ ಎರಡು ಲಕ್ಷಕ್ಕೂ ಅಧಿಕ ಸಂಬಳ ಪಡೆಯುತ್ತಿದ್ದ, ಆದರೆ ಈ ಔಷಧ ಆತನ ತಾಯಿಯ ಆರೈಕೆಗಾಗಿ ಬಳಕೆ ಆಗಿಲ್ಲ ಎಂಬುದು

ವೈದ್ಯಕೀಯ ವಿಚಾರಣೆಗಳಿಂದ ತಿಳಿದುಬಂತು. ನಾನು ಆತನನ್ನು ತನಿಖೆಯ ವೇಳೆ ವಿಚಾರಿಸಿದಾಗ ಆ ಒಂಭತ್ತು ಸಾವಿರ ರೂಪಾಯಿಗಳ ಔಷಧವನ್ನು ತನ್ನ ಮನೆ ಕೆಲಸಕ್ಕೆ ಬರುತ್ತಿರುವ ವಯಸ್ಸಾದ ಹೆಂಗಸಿಗೆ ನೀಡಿದ್ದಾಗಿಯೂ, ಅದು ಅವಳಿಗೆ ಸಹಾಯ ಮಾಡಲು ಉಚಿತವಾಗಿ ನೀಡಿದ ಔಷಧ ವಾದ್ದರಿಂದ ತೆರಿಗೆ ರಿಯಾಯಿತಿಗಾಗಿ ತಾಯಿ ಹೆಸರಲ್ಲಿ ರಶೀದಿ ಬಳಸಿದರೆ ತಪ್ಪೇನಿಲ್ಲವೆಂದು ಆ ಉದ್ಯೋಗಿ ಹಾಗೆ ಮಾಡಿದ್ದಾಗಿ ತಿಳಿಯಿತು.

ಅದರ ಆಧಾರದಲ್ಲಿ ನಾನು ಅಮೆರಿಕದಿಂದ ಬಂದ ಕಾನೂನು ಪಂಡಿತನೊಡನೆ ಈ ಉದ್ಯೋಗಿಯ ಪರವಾಗಿ ಹೀಗೆ ಹೇಳಿದೆ: ಆತ ಹಣವನ್ನು ಖರ್ಚು ಮಾಡಿ ಔಷಧವನ್ನು ಉಚಿತ ವಾಗಿ ನೀಡಿದ್ದಾನೆ. ಅದು ಆತನ ಲೆಕ್ಕದ ದಾನ. ಬಡ ಮನೆಕೆಲಸದವಳಿಗೆ ಸರ್ಕಾರ ಉಚಿತವಾಗಿ ಔಷಧ ನೀಡುವ ವ್ಯವಸ್ಥೆ ಇರಬೇಕಿತ್ತು. ಹಾಗಿಲ್ಲದ್ದರಿಂದ ಈತ ಉದಾರವಾಗಿ ನೀಡಿದ್ದಾನೆ. ಹಾಗೆ ತನ್ನ ಕೈಯಿಂದ ಖರ್ಚಾಗಿ ಉಪಕಾರ ಮಾಡಿದ ಹಣಕ್ಕೆ ಸರ್ಕಾರದ ರಿಯಾಯಿತಿ ಸಿಗಬಹುದಾದಲ್ಲಿ ಅದನ್ನು ಪಡೆಯುವುದರಲ್ಲಿ ತಪ್ಪೇನಿಲ್ಲ ಎಂದು ಅವನು ಭಾವಿಸಿದ್ದಾನೆ. ಯಾವ ತಪ್ಪು ಮಾಡುವ ಭಾವನೆಯೂ ಇಲ್ಲದೆ ಇದೊಂದು ಒಳ್ಳೆಯ ಕಾರ್ಯ ಎಂಬ ನಿಲುವಿನಿಂದ ಹೀಗೆ ನಡೆದುಕೊಂಡಿದ್ದಾನೆ. ರಿಯಾಯಿತಿಯನ್ನು ಪಡೆಯುವುದರಲ್ಲಿ ಏನೂ ತಪ್ಪಿಲ್ಲ ಎಂಬುದು ಆತನ ನೈತಿಕ ನಿಲುವು ಕೂಡ ಆಗಿದೆ.

ಅಮೆರಿಕಾದ ಕಾನೂನು ತಜ್ಞ ವಿಚಾರಣಾ ಅಧಿಕಾರಿ ನನ್ನ ನಿಲುವನ್ನು ಒಪ್ಪಲಿಲ್ಲ. ಆತ ಒಂದೇ ವಾಕ್ಯದಲ್ಲಿ ಕಡ್ಡಿ ಮುರಿದಂತೆ ಹೇಳಿದ್ದು: ನೈತಿಕತೆ ಮತ್ತು ಕಾನೂನು ಎಂಬುದು ಪ್ರತ್ಯೇಕವಲ್ಲ. ಅವೆರಡೂ ಒಂದೇ ಆಗಿವೆ.

ಕಾನೂನಿನಲ್ಲೇ ಕಟ್ಟಿದ ಪಾಶ್ಚಿಮಾತ್ಯ ಸಮಾಜಕ್ಕೆ ಅವೆರಡೂ ಒಂದೇ ಎಂದು ತೋರಬಹುದು. ಆದರೆ ಸಾವಿರಾರು ವರುಷಗಳಲ್ಲಿ ನೂರಾರು ಕಾನೂನುಗಳನ್ನು ನೋಡಿದ ಭಾರತದಂತಹ ಸಮಾಜದಲ್ಲಿ ಧರ್ಮ ಹಾಗೂ ಅಧರ್ಮಗಳೆಂಬ ನೈತಿಕ ತಾತ್ವಿಕತೆ ಬೆಳೆಯಲು ಅವಕಾಶವಿದೆ. ಹೊಸ ಕಾನೂನು ದೀರ್ಘಕಾಲದ ನಾಗರಿಕತೆಯ ಈ ಎಲ್ಲ ನೈತಿಕ ನೆಲೆಗಳನ್ನು ತನ್ನ ತೆಕ್ಕೆಗೆ ತೆಗೆದು ಕೊಳ್ಳಲು ಒಂದೇ ಬಾರಿಗೆ ಸಾಧ್ಯವಾಗುವುದಿಲ್ಲ. ಯಾಕೆಂದರೆ ನ್ಯಾಯಾಲಯಗಳ ತೀರ್ಪುಗಳಿಂದ ಹೊಸ ಕಾನೂನುಗಳು ವ್ಯಾಖ್ಯಾನಿಸಲ್ಪಡಬೇಕಾಗುತ್ತವೆ. ಆದರೆ ನೈತಿಕವಾಗಿ ವ್ಯಾಖ್ಯಾನಿಸಲ್ಪಟ್ಟ ನೂರಾರು ವರುಷಗಳ ಚರಿತ್ರೆಯುಳ್ಳ ವ್ಯಾಖ್ಯಾನಗಳ ಎದುರು ಇಪ್ಪತ್ತೊ ಐವತ್ತೊ ವರುಷಗಳಷ್ಟು ಹಳೆಯದಾದ ಹೊಸ ಕಾನೂನುಗಳನ್ನು ನ್ಯಾಯಾಲಯಗಳು ವ್ಯಾಖ್ಯಾನಿಸಿ ಮುಗಿಸಲು ಸಾಧ್ಯವೆ? ಅದಕ್ಕಾಗಿ ಇಂತಹ ಹೊಸ ಕೇಸುಗಳು ನೂತನವಾಗಿ ವ್ಯಾಖ್ಯಾನಿಸಲ್ಪಡಲು ಸಮಯ ಬೇಡವೆ? ಎಂದೆ. ಪಾಶ್ಚಾತ್ಯ ಅಧಿಕಾರಿ ಅದಕ್ಕೊಂದು ಉದಾಹರಣೆ ಕೊಡು ಎಂದಾಗ ನಾನು ಈ ಕೆಳಗಿನ ವಿವರ ನೀಡಿದೆ:

ಸುಳ್ಯದ ಸಮೀಪ ನನ್ನ ಪರಿಚಯದ ಶ್ರೀಮಂತ ಸಜ್ಜನ ಹಿರಿಯರಿದ್ದರು. ಕಷ್ಟದಲ್ಲಿದ್ದವರು ಬಂದು ಕೇಳಿದಾಗ ಅನೇಕ ಸಲ ಅವರು ಸಹಾಯ ಮಾಡುತ್ತಿದ್ದರು. ಸಾಲ, ದಾನ, ವಿದ್ಯಾಭ್ಯಾಸಕ್ಕೆ ಸಹಾಯ ...ಹೀಗೆ ಅವರ ಬಳಿ ಕೇಳಿದವರಲ್ಲೂ ವೈವಿಧ್ಯವಿತ್ತು. ಈ ಘಟನೆ ಸಜ್ಜನ ಅಜ್ಜ ತೀರಿಕೊಂಡ ಸುಮಾರು ನಾಲ್ಕು ವರುಷಗಳ ಬಳಿಕ ನಡೆದದ್ದು. ಆಕಸ್ಮಿಕವಾಗಿ ನಾನು ಆ ದಿನ ಅಲ್ಲಿದ್ದೆ.

ಸುಮಾರು ಅರವತ್ತು ವಯಸ್ಸಿನ ಇಬ್ಬರು ಈ ಸಜ್ಜನ ಅಜ್ಜನ ಮನೆಗೆ ಬಂದು ಏಳು ವರುಷಗಳ ಹಿಂದೆ ಆ ಸಜ್ಜನರಿಂದ ತಾವು ಪಡೆದ ೬,೦೦೦ ರೂಪಾಯಿಗಳ ಸಾಲ ಹಿಂತಿರುಗಿಸಬೇಕಾಗಿ ಹೇಳಿದರು. ಮನೆಯಲ್ಲಿದ್ದ ಆಗಿನ ಯಜಮಾನರು ಅಜ್ಜನ ಹಳೆ ಡೈರಿ ತೆಗೆದು ಈ ಹಣ ಸಾಲವೆಂದು ಅಲ್ಲಿ ನಮೂದಾಗಿಲ್ಲ. ಹಾಗಾಗಿ ಹಣ ಪುನಃ ತೆಗೆದು ಕೊಳ್ಳುವುದು ಸರಿಯೂ ಅಲ್ಲ, ಸಾಧ್ಯವೂ ಇಲ್ಲ ಎಂದರು. ಬಂದವರು ಅಜ್ಜ ಜೀವಂತವಿದ್ದಾಗ ತಾವು ಸಾಲ ಪಡೆದ ಸಂದರ್ಭ ವಿವರಿಸಿದರು.

ಆಗ ಮನೆಯ ಯಜಮಾನರು, 'ಇರಲೂ ಬಹುದು. ಆದರೆ ಅಜ್ಜ ಅದನ್ನು ನಿಮಗೆ ಆಗ ದಾನವೆಂದು ಪರಿಗಣಿಸಿ ನೀಡಿದ್ದರೆ, ನಾವು ಈಗ ಅದನ್ನು ಪುನಃ ಸಾಲವೆಂದು ಪಡೆದರೆ ತಪ್ಪಾಗು ತ್ತದೆ. ಡೈರಿಯಲ್ಲಿ ಸಾಲ ನಮೂದಿಸಿಲ್ಲ. ಹಾಗಾಗಿ ಹಣ ತೆಗೆದುಕೊಳ್ಳಲು ಸಾಧ್ಯವಿಲ್ಲ' ಎಂದರು.

ಉಪಾಹಾರ ಇತ್ಯಾದಿಗಳಾದ ಬಳಿಕ ಬಂದವರು ಹೊರಡುವಾಗ ಮನೆಯೊಳಗೆ ದೇವರ ಕೋಣೆಯಲ್ಲಿ ನಮಸ್ಕರಿಸಲು ಅನುಮತಿ ಕೇಳಿ ದೇವರಿಗೆ ನಮಸ್ಕರಿಸಿ ಹಣವನ್ನು ಅಲ್ಲಿ ದೇವರ ಹುಂಡಿಗೆ ಎಂದು ಇರಿಸಿ ಹೊರಟುಹೋದರು. ಅಜ್ಜ ಜೀವಂತ ಇದ್ದಾಗ ಕೊಟ್ಟ ಹಣದ ಬಗ್ಗೆ ಹೀಗಿರುವ ಕೆಲವಾರು ಅನುಭವಗಳಾಗಿವೆ. ಆ ಹಣ ದೇವರ ಹುಂಡಿಗೆ ಹೋಗಬೇಕಷ್ಟೆ ಎಂದು ನನ್ನ ಪರಿಚಯದ ಆ ಮನೆಯ ಯಜಮಾನರು ಹೇಳಿದರು.




ಅಮೆರಿಕ ಕಾನೂನು ತಜ್ಞನಿಗೆ ನಾನು ಹೇಳಿದೆ, "ಭಾರತೀಯ ಕಾನೂನು ಪ್ರಕಾರ ತೆಗೆದುಕೊಂಡ ಸಾಲಕ್ಕೆ ಮೂರು ವರ್ಷಗಳ ಬಳಿಕ ಅವಧಿ ಬಾಧಕ (Limitation). ಅದನ್ನು ಕಾನೂನು ಪ್ರಕಾರವೇ ಪುನಃ ಕೇಳುವಂತಿಲ್ಲ. ಅದು ಡೈರಿಯಲ್ಲಿ ಇಲ್ಲ ಎಂದರೂ ಅದನ್ನು ಹಿಂತಿರುಗಿಸಲೇಬೇಕೆಂಬ ಒತ್ತಡದ ಹಿಂದಿನ ನೈತಿಕತೆ ಏನು? ಕಾನೂನಿನ ಹೊರಗೂ ಒಂದು ನೈತಿಕ ನೆಲೆ ಇಲ್ಲವೇ?"

ವಿಚಾರಣಾ ಅಧಿಕಾರಿಗೆ ಅದು ಸಮ್ಮತ ವಾಗಲಿಲ್ಲ. ಇದೊಂದು ಸಂಶೋಧನಾ ಪ್ರಬಂಧದ ವಸ್ತು, ಅಷ್ಟೆ. ವಾಸ್ತವದಲ್ಲಿ ಕಾನೂನು ನೈತಿಕತೆಯನ್ನು ಒಳಗೊಂಡಿರುತ್ತದೆ ಅಥವಾ ಸಂದರ್ಭಕ್ಕೆ ಅನುಗುಣವಾಗಿ ವ್ಯಾಖ್ಯಾನಿಸುತ್ತದೆ. ಪ್ರಸ್ತುತ ಉದ್ಯೋಗಿಯ ಸಂದರ್ಭದಲ್ಲಿ, ತೆರಿಗೆ ರಿಯಾಯಿತಿಗೆ ಅರ್ಹನಲ್ಲ ಎಂಬುದು ತಿಳಿದೂ ರಿಯಾಯಿತಿ ಪಡೆಯಲು ಸುಳ್ಳು ಹೇಳಿದ್ದಾನೆ. ಇದು ಉದ್ದೇಶಪೂರ್ವಕ ಕಾನೂನಿಗೆ ತಪ್ಪಿ ನಡೆದುದೇ ಆಗಿದೆ. ಹಾಗಾಗಿ ಉದ್ಯೋಗಿ ಶಿಕ್ಷೆಗೆ ಅರ್ಹ ಎಂಬ ತೀರ್ಮಾನವಾಯಿತು.

**ಭಾಗ – ೨**

'ಉಳ್ಳವರ ನಡುವಿನ ಜಗಳಗಳಲ್ಲಿ ಮಾತ್ರ ಇಂದಿನ ನ್ಯಾಯಾಲಯಗಳು ನ್ಯಾಯ ಒದಗಿಸ ಬಲ್ಲವು' ಎಂದೊಮ್ಮೆ ಕಾರ್ಲ್ ಮಾರ್ಕ್ಸ್ ಹೇಳಿದ್ದ. ಇಲ್ಲದವರಿಗೆ ನ್ಯಾಯ ಒದಗಿಸಲು ಬೇಕಾದ ಮೂಲಶಕ್ತಿಯೇ ಉಳ್ಳವರು ನಿರ್ಮಾಣ ಮಾಡಿದ ಕಾನೂನುಗಳಿಗೆ ಇರುವುದಿಲ್ಲ ಎಂಬುದು ಆತನ ಮಾತಿನ ತಾತ್ಪರ್ಯ.

ಕಾನೂನು ಹಾಗೂ ನೈತಿಕತೆ ಬಗ್ಗೆ ಚರ್ಚಿಸುವಾಗ, ಬಹಳ ಶ್ರೇಷ್ಠ ರಚನೆ ಎಂದು ಪರಿಗಣಿತವಾದ ಭಾರತದ ಸಂವಿಧಾನ ಕೂಡ ಗಿರಿಜನರ ಮೂಲಭೂತ ಹಕ್ಕುಗಳನ್ನು ರಕ್ಷಿಸುವಷ್ಟು ಸಮರ್ಥವಾಗಿಲ್ಲ ಎಂಬೊಂದು ವಾದವಿದೆ. ಕಾಡುಮೇಡು ಅಲೆದು ತಮ್ಮ ಜೀವನ ನಿರ್ವಹಿಸುವವರ ಆಸ್ತಿಯ ಹಕ್ಕು ಯಾವುದು? ಈ ಪ್ರಶ್ನೆ ನಮ್ಮ ಸಂವಿಧಾನ ಜಾರಿಗೊಂಡಾಗಲೇ ಕೇಳಲ್ಪಟ್ಟಿತ್ತು. ಆದರೆ, ನಮ್ಮ ಸಂವಿಧಾನದ ತಾಂತ್ರಿಕ ನೆಲೆಗಳಲ್ಲಿ ಗಿರಿಜನರೂ ತಮ್ಮ ಹಕ್ಕುಗಳನ್ನು ರಕ್ಷಿಸಿ ಕೊಳ್ಳಬಹುದೆಂಬ ಪ್ರತಿವಾದವೂ ಆಗ ಚರ್ಚೆಗೆ ಒಳಗಾಯ್ತು. ಅದರಲ್ಲಿ ಎಡಪಂಥೀಯರು ಹಾಗೂ ಇತರ ಕಾನೂನು ತಜ್ಞರು ಭಾಗವಹಿಸಿದ್ದರು. ಕಾರ್ಲ್ ಮಾರ್ಕ್ಸ್‌ನ ವಿಚಾರಗಳ ಹಿನ್ನೆಲೆಯಲ್ಲಿ ಅಂತಹ ಚರ್ಚೆಗಳು ನಡೆಯುವುದು ಸಹಜ. ಆದರೆ ಇಂದಿನ ಪ್ರಜಾಪ್ರಭುತ್ವದಲ್ಲಿ ಸಮಾನತೆಯ ಸ್ಥಾಪನೆಗೆ ಹಾಗೂ ತಮ್ಮ ಹಕ್ಕುಗಳ ಪ್ರತಿಪಾದನೆಗೆ ನ್ಯಾಯಾಂಗವನ್ನು ನಾವೆಲ್ಲರೂ ಮೊರೆಹೋಗಲೇ ಬೇಕಾದ ಸ್ಥಿತಿ ಇದೆ. ಅದು ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಯ ಮುಖ್ಯ ಬುನಾದಿಗಳಲ್ಲಿ ಒಂದಾಗಿದೆ.

ಈ ಮೊದಲು ವಿವರಿಸಿದ ಅಮೆರಿಕದ ಕಾನೂನು ತಜ್ಞರಿಗೆ ನಮ್ಮ ಸಮಾಜದ ನೈತಿಕತೆ ಹಾಗೂ ಕಾನೂನಿನ ಅಂತರ್ಗತ ಸಂಕೀರ್ಣ

ಒಳಸುಳಿಗಳು ಅರ್ಥವಾಗಲು ಕಷ್ಟವಾಗುತ್ತದೆ ಎಂಬುದನ್ನು ಗಮನಿಸಿದ್ದೇವೆ. ವಾಸ್ತವದಲ್ಲಿ ಭಾರತ ಹಲವು ನಂಬಿಕೆ ಹಾಗೂ ಆಚರಣೆಗಳುಳ್ಳ ದೇಶ. ಇಲ್ಲಿ ಅನೇಕ ಪಂಗಡ, ಒಳಪಂಗಡ ಹಾಗೂ ಸಮುದಾಯಗಳು ತಮ್ಮದೇ ಆದ ನೀತಿ, ನಿಯಮ, ನಂಬುಗೆಗಳಲ್ಲಿ ಬಾಳುತ್ತವೆ. ಅದರಂತೆ ನಮ್ಮದೇ ಕಾನೂನಿನಲ್ಲೂ ನಮ್ಮ ಜನ ನಂಬುವ ನೈತಿಕತೆಯ ಒಳಸುಳಿಗಳು ಹೊಸ ಕಾನೂನಿಗೆ ಅನೇಕ ಸಲ ತಿಳಿಯುವುದಿಲ್ಲ. ಇದನ್ನು ಇನ್ನೊಂದು ಉದಾಹರಣೆಯಿಂದ ಗಮನಿಸೋಣ.

ಈ ಕೇಸು ನಡೆದಿರುವುದು ಕೊಡಗು ಜಿಲ್ಲೆಯ ಮಡಿಕೇರಿ ಸಮೀಪ. ಬಡ ಆರೋಪಿ ಪರ ವಕಾಲತ್ತು ವಹಿಸಿದ್ದ ವಕೀಲರಾದ ರವಿಪ್ರಕಾಶ್ ನನಗೆ ವಿವರ ಹೇಳಿದ್ದು. ಈಗ ಹೆಸರುಗಳನ್ನು ಬದಲಿಸಿಕೊಂಡು ಸಮಸ್ಯೆಯನ್ನು ಚರ್ಚಿಸೋಣ.

ನೂತನ ಹಿಂದೂ ಲಾ ಪ್ರಕಾರ ಹಿಂದೂ ಕಾನೂನಿಗಿಂತ ಹೊರಗೆ ಗಿರಿಜನರ ಕಾನೂನು ಸಂಪ್ರದಾಯಗಳಿಗೆ ಅಸ್ತಿತ್ವವಿದೆ. ಗಿರಿಜನರು ಹಿಂದೂ ಕಾನೂನಿಗೆ ಒಳಪಡಬೇಕಾಗಿಲ್ಲ. ಆದರೆ ಹರಿಜನರು ಹಿಂದೂ ವಿವಾಹ ಮತ್ತಿತರ ಕಾನೂನಿಗೆ ಒಳಪಟ್ಟವರು. ಆದರೂ, ಮಡಿಕೇರಿ ಸಮೀಪದ ಕೆಲವು ಹರಿಜನ ಸಮುದಾಯಗಳಲ್ಲಿ ತಾಯಿಪ್ರಾಧಾನ್ಯದ ಅಳಿಯಸಂತಾನ ಕಟ್ಟು ಸಂಪ್ರದಾಯ ಇತ್ಯಾದಿಗಳು ಬಳಕೆಯಲ್ಲಿವೆ.

ಅಂತಹ ಮಡಿಕೇರಿ ಸಮೀಪದ ಕೆಲವು ಹರಿಜನ ಸಮುದಾಯಗಳಲ್ಲಿ ಮದುವೆಗೆ ನಿಶ್ಚಯವಾದ ಹುಡುಗಿಯೊಡನೆ ಮದುವೆಗೆ ಮೊದಲೇ ಲೈಂಗಿಕ ಸಂಪರ್ಕ ಇರುವುದು ತಪ್ಪಲ್ಲ. ಮದುವೆ ಸಂದರ್ಭದಲ್ಲಿ ಮದುಮಗಳು ಬಸುರಿ ಆಗಿರುವುದು, ಮಗುವಾದ ಬಳಿಕ ಆ ಮಗುವಿನ ತಂದೆಯನ್ನೇ ಮದುವೆಯಾಗುವುದು ಕೂಡ ಅವರಲ್ಲಿ ಸಹಜವಾದ ಸ್ವೀಕಾರಾರ್ಹ ಕಟ್ಟಳೆ.

ಮಡಿಕೇರಿ ಘಟ್ಟದ ತಗ್ಗು ಪ್ರದೇಶದ ಹರಿಜನ ಹುಡುಗ (ಹೆಸರು ವೀರೇಶ ಎಂದಿರಲಿ) ಅಲ್ಲಿಂದ ಮೂವತ್ತು ಮೈಲು ದೂರದ ಕಾಫಿ ಎಸ್ಟೇಟಿನಲ್ಲಿ ಕೂಲಿ ಕೆಲಸಕ್ಕೆ ಹೋಗುತ್ತಾನೆ. ಹೋದ ಉದ್ದೇಶ ಆ ಎಸ್ಟೇಟಿನಲ್ಲಿ ಕೂಲಿ ಕೆಲಸ ಮಾಡುತ್ತಿದ್ದ ಸಂಬಂಧದ ಹುಡುಗಿಯನ್ನು ಮದುವೆಯಾಗುವುದು. ಮದುವೆಯಾದ ಬಳಿಕ ಆ ಹುಡುಗಿಯನ್ನು ಕರಕೊಂಡು ತಮ್ಮ ಹಳ್ಳಿಗೇ ಹಿಂತಿರುಗುವ ಉದ್ದೇಶ ವೀರೇಶನದು. ಅದನ್ನು ಎಸ್ಟೇಟಿನ ಮಾಲಿಕ ಒಪ್ಪುವುದಿಲ್ಲ. ಆತನಿಗೆ ಒಂದು ಕೂಲಿಯಾಳು ತನ್ನ ಶೆಡ್ಡಿನಿಂದ ಕಮ್ಮಿಯಾಗುವುದು ಇಷ್ಟವಿಲ್ಲ. ಅದಲ್ಲದೆ ಮಾಲಿಕನಿಗೆ ಅವಳ ಬಗ್ಗೆ ಬೇರೆ ಆಸಕ್ತಿ, ಉದ್ದೇಶಗಳೂ ಇವೆ ಎಂಬ ವದಂತಿಯೂ ಹಬ್ಬಿತ್ತು.

ವೀರೇಶನಿಗೆ ತಾನು ಮದುವೆಯಾಗುವುದೆಂದು ನಿಶ್ಚಯವಾದ ಹುಡುಗಿ ಜೊತೆ ಆಪ್ತವಾಗಿರುವುದು ತಪ್ಪು ಎನಿಸುವುದಿಲ್ಲ. ಅವರ ನಡುವೆ ಲೈಂಗಿಕ ಸಂಪರ್ಕವೂ ಬೆಳೆಯುತ್ತದೆ. ಮದುವೆ ಬಳಿಕ ತನ್ನ ತಾಯಿ ಇರುವ ಹಳ್ಳಿಗೆ ಹೆಂಡತಿಯೊಡನೆ ಹಿಂತಿರುಗುವ ನಿಶ್ಚಯವನ್ನು ವೀರೇಶ ದೃಢಪಡಿಸುತ್ತಾನೆ.

ಅದು ಇಷ್ಟವಿಲ್ಲದ ಎಸ್ಟೇಟು ಮಾಲಿಕ, ವೀರೇಶ ಆ ಹುಡುಗಿಯ ಮಾನಭಂಗ ಮಾಡಿದ್ದಾನೆಂದು ಪೊಲೀಸರಿಗೆ ದೂರು ನೀಡುತ್ತಾನೆ. ಪೊಲೀಸರಿಗೆ ಕೊಡುವ ಮೊದಲ ಮಾಹಿತಿ ವರದಿ ಹುಡುಗಿ ಮನೆ ಕಡೆಯವರಿಂದಲೂ ಸಹಿ ಹಾಕಿಸುತ್ತಾನೆ. ಪೊಲೀಸರ ವಿಚಾರಣೆಯಲ್ಲಿ, ಲೈಂಗಿಕ ಸಂಪರ್ಕ ಆದುದಾಗಿ ಹುಡುಗಿ ಹೇಳಿಕೆ ದಾಖಲಾಗುತ್ತದೆ.

ವೀರೇಶನ ಮೇಲೆ ಮಡಿಕೇರಿ ನ್ಯಾಯಾಲಯದಲ್ಲಿ ರೇಪ್ ಕೇಸು ದಾಖಲಾಗುತ್ತದೆ. ಹುಡುಗ–ಹುಡುಗಿ ಇಬ್ಬರೂ ಮದುವೆಯಾಗುವುದಾಗಿ ಹೇಳುತ್ತಾರೆ. ಆದರೆ ಮಾನಭಂಗದ ಅಪರಾಧ ಮದುವೆಯಿಂದ ಇಲ್ಲವಾಗು ವುದಿಲ್ಲ ಎಂದು ಜಿಲ್ಲಾ ನ್ಯಾಯಾಲಯ ಹೇಳುತ್ತದೆ. ಉಚ್ಚ ನ್ಯಾಯಾಲಯದಲ್ಲಿ ಜಾಮೀನು ಬಿಡುಗಡೆಗಾಗಿ ವಾದಿಸಿದ ರವಿಪ್ರಕಾಶ ನ್ಯಾಯಮೂರ್ತಿಗಳಿಗೆ ಸಮುದಾಯದಲ್ಲಿರುವ ವಿವಾಹಪೂರ್ವ ಲೈಂಗಿಕ ಸ್ವಾತಂತ್ರ್ಯವನ್ನು ಮನದಟ್ಟು ಮಾಡಲು ಪ್ರಯತ್ನಿಸುತ್ತಾರೆ. ನ್ಯಾಯಾಲಯ ದಾಖಲಾದ ಆರೋಪ ವಿಚಾರಣೆ ಮೂಲಕವೇ ಕೊನೆಯಾಗಬೇಕು ಎಂದು ಹೇಳಿ ಈ ಕ್ರಿಮಿನಲ್ ಕೇಸನ್ನು ತ್ವರಿತವಾಗಿ ಇತ್ಯರ್ಥಗೊಳಿಸುವಂತೆ ಆದೇಶ ನೀಡುತ್ತದೆ. ಇಷ್ಟಾಗಲು ಮಡಿಕೇರಿಯಲ್ಲಿ ಕೇಸು ದಾಖಲಾಗಿ ಸುಮಾರು ಐದು ವರುಷಗಳ ಕಾಲ ತಗಲುತ್ತದೆ. ಸೆರೆಮನೆಯಲ್ಲಿದ್ದ ಅನಾರೋಗ್ಯಕರ ವಾತಾವರಣದಿಂದಾಗಿ

ವೀರೇಶನಿಗೆ ಕ್ಷಯ ರೋಗ ತಗುಲಿರುತ್ತದೆ. ಜೈಲಿನಿಂದ ಆಸ್ಪತ್ರೆಗೆ ದಾಖಲಾಗಿ ಸರಕಾರಿ ಆಸ್ಪತ್ರೆಯಲ್ಲಿ ವೀರೇಶ ಮೃತಪಟ್ಟಿದ್ದಾನೆ ಎಂದು ಪೊಲೀಸರು ನ್ಯಾಯಾಲಯಕ್ಕೆ ತಿಳಿಸುತ್ತಾರೆ. ವಾಸ್ತವದಲ್ಲಿ ಆತ ಜೈಲಿನಲ್ಲೇ ಸತ್ತಿದ್ದ ಎಂದು ಕೂಡ ಪ್ರತ್ಯಕ್ಷದರ್ಶಿಗಳು ಮಾತನಾಡುತ್ತಿದ್ದರು.

ಈ ಪ್ರಕರಣದಲ್ಲೂ ಮದುವೆಯಾಗಲಿದ್ದ ಹುಡುಗನಿಗೆ ಆ ಹುಡುಗಿ ಯೊಡನೆ ಇದ್ದ ಸಂಬಂಧದಲ್ಲಿ ಯಾವ ತಪ್ಪೂ ಕಾಣುವುದಿಲ್ಲ. ನೈತಿಕವಾಗಿ ಅವನು ತಾನು ಮದುವೆಯಾಗಲಿರುವ ಹುಡುಗಿಯೊಡನೆ ಇರುವುದರಲ್ಲಿ ಯಾವ ತಪ್ಪೂ ಆ ಸಮುದಾಯಕ್ಕೆ ಇಲ್ಲ. ಅವರಿಬ್ಬರೂ ತಾವು ಮದುವೆಯಾಗು ವುದಾಗಿಯೂ ನ್ಯಾಯಾಲಯಕ್ಕೆ ತಿಳಿಸುತ್ತಾರೆ. ಆದರೆ ದೂರು ದಾಖಲಾಗಿರುವ ಕಾನೂನಿಗೆ ಈ ಇಬ್ಬರ ನೈತಿಕ ನಿಲುವು ಹಾಗೂ ತಾವು ಆ ಕಾನೂನಿನ ಪರಿಪ್ರೇಕ್ಷ್ಯದ ಹೊರಗೆ ಸರಿ ಎಂದೇ ನಂಬಿರುವ ನೈತಿಕತೆ ಅರ್ಥವಾಗುವುದೇ ಇಲ್ಲ. ದೂರು ದಾಖಲಿಸಿದ ಪೊಲೀಸರು, ಜಿಲ್ಲಾ ನ್ಯಾಯಾಲಯ, ಉಚ್ಚ ನ್ಯಾಯಾಲಯ ಎಲ್ಲವೂ ಕಾನೂನಿನ ಪರಿಧಿಯಲ್ಲೇ ಕೆಲಸ ಮಾಡಿವೆ.

ಆ ಒಬ್ಬನೇ ಮಗನನ್ನು ಕಳಕೊಂಡ ತಾಯಿಯನ್ನು ಭೇಟಿ ಮಾಡುವ ಅವಕಾಶ ನನಗೆ ಒದಗಿದೆ. ಅವಳು ಇಂದಿಗೂ ತನ್ನ ಮಗನ ತಪ್ಪೇನು, ಎಂದೇ ಕೇಳುತ್ತಾಳೆ. ಆ ಹುಡುಗಿಯೂ ಮದುವೆಯಾಗಲು ಒಪ್ಪಿರುವಾಗ ಅದರಲ್ಲಿ ದೋಷವೇನು ಎನ್ನುತ್ತಾಳೆ. ಅಷ್ಟೇ ಅಲ್ಲ ತನ್ನ ಒಬ್ಬನೇ ಮಗ ಹುಟ್ಟುವ ಮೊದಲು ಆ ಮಗನ ಅಪ್ಪ ತನ್ನ ಮನೆಗೆ ಬರುತ್ತಿದ್ದ. ತಾವು ಮದುವೆಯಾಗಲು ಒಪ್ಪಿದ್ದೆವು. ದನಿಗಳ ಸಾಲ ಅರ್ಧ ಮುಗಿದ ಬಳಿಕ ಪುನಃ ಸಾಲ ಕೊಟ್ಟರು. ಆ ಬಳಿಕ ಮದುವೆಯಾದೆವು. ತನ್ನ ಮಗನನ್ನು ಯಾವ ತಪ್ಪಿಗೆ ಜೈಲಿಗೆ ಹಾಕಿದ್ದೆಂದು ಅವಳು ಕಣ್ಣೀರಿಟ್ಟು ಕೇಳಿದ್ದು ಇನ್ನೂ ಮನಸ್ಸಿನಲ್ಲಿ ಉಳಿದಿದೆ.

ಇದೇ ಕಾರಣದಿಂದ ಬರಹದ ಮೊದಲಿಗೇ ನ್ಯಾಯ ಮತ್ತು ನೀತಿ ಅನ್ವಯಿಸಲ್ಪಟ್ಟಾಗಲೇ ಅವುಗಳ ವಿರಾಟ್ ಸ್ವರೂಪವನ್ನು ತೋರಿಸುವುದೆಂದು ಸೂಚಿಸಿರುವುದಾಗಿದೆ. ನಮ್ಮ ಪುರಾಣಗಳಲ್ಲೂ ಅಷ್ಟೇ ವೈಯಕ್ತಿಕ ನೀತಿ ಹಾಗೂ ಸಾರ್ವತ್ರಿಕ ಕಟ್ಟಳೆಗಳು ನ್ಯಾಯ ಹಾಗೂ ನೀತಿಗಳ ನೆಲೆಗಳಲ್ಲಿ ನಿರಂತರವಾಗಿ ಚರ್ಚಿತವಾಗಿವೆ. ವೈಯಕ್ತಿಕ ನೆಲೆಯಲ್ಲಿ ಶ್ರೀರಾಮ ಸೀತೆಯನ್ನು ಕಾಡಿಗೆ ಕಳುಹಿಸಿದ ಘಟನೆ ಹಾಗೂ ದ್ರೌಪದಿಯ ವಸ್ತ್ರಾಪಹರಣದ ಘಟನೆ ಸಾರ್ವತ್ರಿಕ ನಿಯಮಗಳ ನೆಲೆಯಲ್ಲಿ ಇಂದಿಗೂ ಚರ್ಚೆಗೆ ಒಳಗಾಗುತ್ತಿವೆ.

"ಧರ್ಮಶಾಸ್ತ್ರದಲ್ಲಿ ಸ್ತ್ರೀಮತವನ್ನು ಉತ್ತರಿಸಲಾಗದೆ?" ಎಂದು ಕುಮಾರವ್ಯಾಸನ ದ್ರೌಪದಿ ಸಭಾಪರ್ವದಲ್ಲಿ ಕೇಳುತ್ತಾಳೆ. ಧರ್ಮರಾಯ ಮೊದಲು ತನ್ನನ್ನು ಪಣಕ್ಕಿಟ್ಟು ಸೋತನೋ ಅಥವಾ ತನ್ನ ಮೊದಲು ಪತ್ನಿ ದ್ರೌಪದಿಯನ್ನು ಪಣಕ್ಕಿಟ್ಟನೋ ಎಂಬುದು ಸೂಕ್ಷ್ಮ. ತನ್ನನ್ನು ಪಣಕ್ಕಿಟ್ಟು ಸೋತರೆ ಆ ಬಳಿಕ ಪತ್ನಿಯನ್ನು ಪಣಕ್ಕಿಡುವ ಹಕ್ಕು ಆತನಿಗೆ ಇದೆಯೆ ಎಂಬುದು ಪ್ರಶ್ನೆ. ಧರ್ಮಗತಿಯ ಸೋಲು ಯಾವುದೆಂಬುದು ನಿರ್ಣಯವಾಗಬೇಕಿದೆ.

*ಗೆಲುವಿದೆಂತುಟೊ ತನ್ನ ಸೋಲಿದು*
*ಬಳಿಕ ಸೋತರೆ ಧರ್ಮಗತಿಯನು*
*ತಿಳಿದು ಹೇಳಿ ತತ್ಸಭಾಸದರೆಂದಳಿಂದುಮುಖಿ*

ಅಧಿಕಾರದಿಂದ ಒಂದು ನ್ಯಾಯ ಹಾಗೂ ನಿಯಮ ನಿರ್ಮಾಣ ವಾಗುತ್ತಿದೆ. ಅದರ ಕ್ರೌರ್ಯ ಎಷ್ಟೆಂದರೆ ಪಟ್ಟದ ರಾಣಿಯನ್ನೇ ತೊತ್ತೆಂದು ಪರಿಗಣಿಸಿ ಅವಳ ವಸ್ತ್ರ ಸೆಳೆಯುವುದಕ್ಕೂ ಮುಂದಾಗಿದೆ. ರಾಜಸಭೆಯಲ್ಲಿ ಆ ಕ್ಷಣದ ಕಾನೂನು ನಡೆಯುತ್ತಿದೆ. ದ್ರೌಪದಿ ಉದ್ದೀಪನಗೊಳಿಸಲು ಪ್ರಯತ್ನಿಸು ತ್ತಿರುವುದು ಆ ತನಕ ಬೆಳೆದು ಬಂದ ನೈತಿಕ ನಿಲುವುಗಳನ್ನು. ಯಾವುದು ಧರ್ಮಸಮ್ಮತ ಎಂಬುದು ಕಾನೂನು ಮತ್ತು ನೈತಿಕತೆಯ ಸಂಕೀರ್ಣ ಸಂಬಂಧ ಗಳನ್ನು ಹಾಗೂ ವಿರೋಧಗಳನ್ನು ಪರಿಹರಿಸಿಕೊಳ್ಳಲು ಇರುವ ದಾರಿ.

ನ್ಯಾಯ ಮತ್ತು ನೀತಿ ಅನ್ವಯದಲ್ಲೇ ಜೀವ ತಳೆಯುವ ಅಗಾಧಶಕ್ತಿ. ಇಲ್ಲಿ ದ್ರೌಪದಿಗೆ ವಸ್ತ್ರ ನೀಡಿದವ ಶ್ರೀಕೃಷ್ಣ. ಆದರೆ ಅದೇ ಶ್ರೀಕೃಷ್ಣ ಒಂದು ಹಂತದಲ್ಲಿ ಗೋಪಿಕೆಯರ ಸೀರೆ ಕದ್ದವ. ನ್ಯಾಯ ಮತ್ತು ನೀತಿ ಅನ್ವಯದಲ್ಲೇ ಸಾಂದರ್ಭಿಕ ಆಕಾರ ಪಡೆಯಬಲ್ಲವು ಎಂಬುದಕ್ಕೆ ಶ್ರೀಕೃಷ್ಣನ ವಸ್ತ್ರ ಪ್ರಕರಣಗಳೂ ಉದಾಹರಣೆಯಾಗಬಲ್ಲವು.

ವೈಯಕ್ತಿಕ ನೀತಿ ಹಾಗೂ ಸಾರ್ವತ್ರಿಕ ಕಾನೂನುಗಳನ್ನು ಎದುರು ಬದುರಾಗಿಸಿ ಸಾರ್ವತ್ರಿಕದ ಎದುರು ವೈಯಕ್ತಿಕವನ್ನು ಪರಸ್ಪರ ಪರೀಕ್ಷಿಸಿದ ಹೊಸ ಕಾಲದ ಲೇಖಕರಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಪ್ರಮುಖರು. ಇವರ 'ಜೋಗ್ಯೋರ ಅಂಜಪ್ಪನ ಕೋಳೀಕತೆ' ಹಾಗೂ 'ಬೈಚೇಗೌಡ' ಎಂಬೆರಡು ಕತೆಗಳು ನ್ಯಾಯ ಮತ್ತು ನೀತಿಗಳನ್ನು ಅವುಗಳ ಅನ್ವಯದಲ್ಲಿ ಎದುರುಬದುರಾಗಿಸುತ್ತವೆ.

ಸುಂದರ ರೂಪಿನ ಜೋಗ್ಯೋರ ಅಂಜಪ್ಪನಿಗೆ ಆತ ಹೋಗುತ್ತಿದ್ದ ಮನೆಯ ಸೊಸೆ ಹುಂಜವೊಂದನ್ನು ನೀಡಿರುತ್ತಾಳೆ. ಪರಸ್ಪರ ದೃಷ್ಟಿಯ ಆಪ್ತ ಶೃಂಗಾರದ ವಿನಿಮಯದ ಸಂಕೇತ ಸೊಸೆ ನೀಡಿದ ಹುಂಜದ ಕಾಣಿಕೆ. ಅದು ಜೋಗಿಯ ಜೋಳಿಗೆಯಲ್ಲಿದೆ. ಅದು ತಾನು ನೀಡಿದ ಕಾಣಿಕೆ ಎಂದು ಹೇಳಬಾರದೆಂದು ಅದೇ ಶೃಂಗಾರ ಸೂಚಿಸಿದ್ದ ಕಣ್ಣಿನಿಂದ ಸೊಸೆ ಬೇಡಿ ಕೊಳ್ಳುತ್ತಾಳೆ. ಆ ಕ್ಷಣವೊಂದರ ಆಪ್ತತೆಗೆ ತನ್ನನ್ನೂ ತೆತ್ತುಕೊಂಡಿದ್ದ ಜೋಗಿ ಸೊಸೆಯನ್ನು ಕಾನೂನಿನ ಕಣ್ಣಿನಲ್ಲಿ ಸಾರ್ವಜನಿಕವಾಗಿ ರಕ್ಷಿಸುವುದು ತನ್ನ ನೈತಿಕ ಜವಾಬ್ದಾರಿ ಎಂದು ತಿಳಿದು ಕಾನೂನಿನ ಕಣ್ಣು ನೋಡುವ ಕಳ್ಳತನದ ಶಿಕ್ಷೆಯನ್ನು ಒಪ್ಪಿಕೊಳ್ಳುತ್ತಾನೆ. ಅದು ತಪ್ಪಾದ ಶೃಂಗಾರಕ್ಕೆ ತೆತ್ತ ಬೆಲೆಯೂ ಹೌದು. ಕಾನೂನು ಹಾಗೂ ವೈಯಕ್ತಿಕ ನೈತಿಕತೆ ಅತ್ಯಂತ ಸೂಕ್ಷ್ಮದಲ್ಲಿ ಸೂಚಿತವಾಗಿದೆ.

ಬೈಚೇಗೌಡ ತಾನು ಅಪಾರವಾಗಿ ಗೌರವಿಸುವ ತೀರಿಹೋದ ಶಾನುಭೋಗರ ಮೇಲಿನ ಗೌರವದಿಂದ ಅವರ ಮಗ ಮಾಡುವ ತಪ್ಪುಗಳನ್ನು ಕ್ಷಮಿಸುತ್ತಾ ಹೋಗುತ್ತಾನೆ. ಕಾನೂನಿನ ಶಿಕ್ಷೆಯಿಂದ ಬುದ್ಧಿ ಕಲಿತು ಮಗ ಸರಿದಾರಿಗೆ ಬರಲಿ ಎಂದು ಬೈಚೇಗೌಡ ಆಶಿಸಿದರೆ ಮಗ ಶಾನುಭೋಗ ಜೈಲಿಗೆ ಹೋದ ಮೇಲೂ ಸರಿಯಾದ ಬುದ್ಧಿ ಕಲಿಯುವುದಿಲ್ಲ.

ಕಾನೂನು ಹಾಗೂ ನೈತಿಕತೆಗಳ ಪರಸ್ಪರ ಸಂಬಂಧ ಅರಿತ ಬೈಚೇಗೌಡ ಕಾಕತಾಳೀಯವಾಗಿ ಶಾನುಭೋಗನ ಮಗನನ್ನು ಇರಿಸಿದ್ದ ಜೈಲಿನಲ್ಲಿ ತನಗೆ ದೊರಕಿದ್ದ ಉದ್ಯೋಗವನ್ನೇ ತೊರೆದು ಹೊರಟುಹೋಗುತ್ತಾನೆ. ಕಾನೂನು ಮತ್ತು ನೈತಿಕ ನೆಲೆಗಳು ಒಂದೇ ಆಗಿ ಪರಿಣಮಿಸಿದಾಗ ಬೈಚೇಗೌಡ ವ್ಯಕ್ತಿ, ಕುಟುಂಬಗಳ ಮೇಲಿನ ಪ್ರೀತಿ, ಗೌರವಗಳಿಗೆ ಬಲಿಬಿದ್ದು ಕಾನೂನು ಮುರಿಯು ವವನನ್ನು ರಕ್ಷಿಸಲು ಎರಡು ಬಾರಿ ಪ್ರಯತ್ನಿಸಿ ಸೋಲುತ್ತಾನೆ. ಮುಂದೆ ತನ್ನ ನೈತಿಕ ನಿಲುವಿಗೆ ತಲೆಬಾಗಿ ಒಮ್ಮೆ ಊರುಬಿಟ್ಟು ಹೊರಟಂತೆ ಇನ್ನೊಮ್ಮೆ ಉದ್ಯೋಗ ಬಿಟ್ಟು ಹೊರಡುತ್ತಾನೆ. ಕಾನೂನು ಹಾಗೂ ನೈತಿಕತೆಗಳ ಘರ್ಷಣೆ ನಡೆಯುವುದು ನಿಷ್ಠಾವಂತನಾದ ಬೈಚೇಗೌಡನ ಮನಸ್ಸಲ್ಲಿ. ಅನ್ವಯದ ಇನ್ನೊಂದು ಸಂಘರ್ಷವನ್ನು ಬಿಟ್ಟು ಬೈಚೇಗೌಡ ಬಿಟ್ಟು ನಡೆಯುವ ಮೂಲಕ ಆತ್ಮವಿಕಾಸದ ಹಾದಿಯನ್ನು ತುಳಿಯುತ್ತಾನೆ. ಅದು ನೈತಿಕ ನಿಲುವಿನಲ್ಲಿ ಇನ್ನೂ ಉನ್ನತವಾದ ಹಂತ ಎಂಬುದನ್ನು ಕೂಡ ನಾವು ಗಮನಿಸಬೇಕು.

ನ್ಯಾಯ ತತ್ತ್ವಶಾಸ್ತ್ರಗಳು ಕಾನೂನು ಮತ್ತು ನೈತಿಕತೆಯನ್ನು ಚರ್ಚಿಸಲು ಇನ್ನೂ ಹಲವಾರು ವಿಧಾನಗಳನ್ನು ಸೂಚಿಸಬಹುದು. ಪ್ರಜಾಪ್ರಭುತ್ವ ಕಾನೂನನ್ನು ಸೃಷ್ಟಿಸಬಲ್ಲದು. ಅವನ್ನು ನ್ಯಾಯ ತತ್ತ್ವಶಾಸ್ತ್ರಗಳು ವಿವರಿಸ ಬಲ್ಲವು. ನಾಗರಿಕತೆಯಲ್ಲಿ ಬೆಳೆದುಬಂದ ನೈತಿಕತೆಯನ್ನು ವಿವರಿಸಬೇಕಾದ ಕ್ರಮಗಳೇನು ಎಂಬುದಕ್ಕೂ ನ್ಯಾಯ ತತ್ತ್ವದಲ್ಲಿ ಉತ್ತರಗಳಿವೆ. ಅಲ್ಲಿ ಉತ್ತರಗಳು ಸ್ಪಷ್ಟವಿಲ್ಲದಾಗ ನ್ಯಾಯಾಲಯಗಳ ತೀರ್ಮಾನಗಳು ಅವುಗಳನ್ನು ಹೊಸದಾಗಿ ವ್ಯಾಖ್ಯಾನಿಸುತ್ತವೆ.

ಆದರೆ ನ್ಯಾಯತತ್ತ್ವದ ವಿಚಾರ ಅಥವಾ ಆನ್ವಯಿಕ ಸಮಸ್ಯೆಗಳ ಚರ್ಚೆ ಯಾವುದೂ ನಡೆಯದೆ ಶಾಸಕಾಂಗಗಳು ಇಂದು ನಿರಂತರವಾಗಿ ಹೊಸ ಕಾನೂನುಗಳನ್ನು ಸೃಜಿಸುತ್ತಲೇ ಇವೆ. ಅವುಗಳ ಆನ್ವಯಿಕ ಇತಿಮಿತಿಗಳೊಳಗೆ ಕಾನೂನು ಹಾಗೂ ನೈತಿಕತೆಗಳ ಸಂಬಂಧವನ್ನು ತಾತ್ವಿಕವಾಗಿ ಚರ್ಚಿಸುವುದು ಕೂಡ ನಮ್ಮ ಕಾಲದ ಮೌಲ್ಯ ವ್ಯವಸ್ಥೆಯ ಬಗ್ಗೆ ಎಚ್ಚರಗೊಳ್ಳುವಂತೆ ಮಾಡುವ ಪ್ರಯತ್ನಗಳಲ್ಲಿ ಒಂದಾಗಿದೆ.

**ಎಸ್. ಆರ್. ವಿಜಯಶಂಕರ**
ಸಿ–೨/೧೦೩, ಓಂಕಾರ್ ಅಪಾರ್ಟ್‌ಮೆಂಟ್ಸ್, ೮ನೇ ಮುಖ್ಯರಸ್ತೆ
೧೨ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು – ೫೬೦ ೦೦೩

# ಪೋಟ್ಸ್‌ಡಾಮ್‌ಗೆ ಒಂದು ಪುಟ್ಟ ಭೇಟಿ

**ಡಾ॥ ಬಿ. ಎಸ್. ಶೈಲಜಾ**



**ಪೋ**ಟ್ಸ್‌ಡಾಮ್ ಎಂಬುದು ರಾಜಕೀಯ ಕ್ಷೇತ್ರದಲ್ಲಿ ಬಹಳ ಪರಿಚಿತವಾದ ಹೆಸರು. ಎರಡನೆಯ ವಿಶ್ವ ಯುದ್ಧದ ಕೊನೆಯಲ್ಲಿ ನಡೆದ ಒಂದು ಗೋಷ್ಠಿಯ ಕಾರಣ ಇದು ಬಹಳ ಪ್ರಾಮುಖ್ಯತೆ ಪಡೆದಿದೆ. ೧೯೧೮ರ ವರೆಗೂ ಇದು ಬ್ರಾಂಡೆನ್‌ಬರ್ಗ್‌ನ ರಾಜಧಾನಿಯಾಗಿತ್ತು. ಈಗ ಅದು ಬರ್ಲಿನ್‌ನ ಒಂದು ಉಪನಗರದಂತಿದೆ ಎನ್ನಬಹುದು.

ಹಿಂದೆ ಪೂರ್ವ ಬರ್ಲಿನ್ ಎಂದು ಪರಿಚಿತವಾಗಿದ್ದ ಈ ದೇಶದಲ್ಲಿ ಅನೇಕ ಕ್ರಿಯಾಶೀಲ ಖಗೋಳ ವೀಕ್ಷಣಾಲಯಗಳಿದ್ದವು. ಅವುಗಳಲ್ಲಿ ಪೋಟ್ಸ್‌ಡಾಮ್ ಬಹಳ ಮುಖ್ಯವಾದದ್ದು. ಇಲ್ಲಿಂದ ಚಂಚಲ ನಕ್ಷತ್ರಗಳ ಕುರಿತು ನಿಯತಕಾಲಿಕವಾಗಿ ಪ್ರಕಟಣೆಗಳು ಹೊರ ಬೀಳುತ್ತಿದ್ದವು. ಆದರೆ ಅವು ಇಂಗ್ಲಿಷ್‌ಗೆ ತರ್ಜುಮೆಯಾಗಿ ಇತರ ದೇಶಗಳನ್ನು ತಲುಪಲು ಹಲವಾರು ತಿಂಗಳುಗಳೇ ಬೇಕಾಗುತ್ತಿತ್ತು. ಆದರೂ ಆ ವಿಷಯದಲ್ಲಿ ಸಂಶೋಧನೆ ನಡೆಸುತ್ತಿದ್ದವರಿಗೆ ಅದು ಬಹಳ ಮುಖ್ಯ ಆಕರ ಕೇಂದ್ರವಾಗಿತ್ತು. ಈ ಕಾರಣದಿಂದ ಆ ಹೆಸರು ನನಗೆ ಪರಿಚಿತವಾಗಿತ್ತು.

ನಮ್ಮ ಬರ್ಲಿನ್ ಭೇಟಿಯ ಕೊನೆಯ ದಿನ ಪೂರ್ವಾಹ್ನದಲ್ಲಿ ಯಾವುದೇ ನಿಯೋಜಿತ ಕಾರ್ಯಕ್ರಮ ಇರಲಿಲ್ಲ. ಮೆಟ್ರೋ ರೈಲುಗಳ ಸಂಚಾರದ ನಕ್ಷೆಯಲ್ಲಿ ಪೋಟ್ಸ್‌ಡಾಮ್ ಹೆಸರು ನನ್ನ ಕಣ್ಣಿಗೆ ಬಿತ್ತು. ನಾವು ಓಡಾಡುತ್ತಿದ್ದ ಮೆಟ್ರೋದ ಕೊನೆಯ ನಿಲ್ದಾಣ ಅದು. ಕೇವಲ ಇಪ್ಪತ್ತು ನಿಮಿಷಗಳಲ್ಲಿ ತಲುಪಬಹುದು ಎಂಬ ಅಂಶ ನನ್ನನ್ನು ಆಕರ್ಷಿಸಿತು. ಬೆಳಗ್ಗೆಯೇ ಹೊರಟು ವೀಕ್ಷಣಾಲಯ ನೋಡಿಕೊಂಡು ಮಧ್ಯಾಹ್ನಕ್ಕೆ ಪುನಃ ಬರ್ಲಿನ್‌ಗೆ ಹಿಂದಿರುಗಬಹುದು ಎಂದು ಹೊರಟೆವು.

ಈ ಪುಟ್ಟ ಊರಿಗೆ ಇಪ್ಪತ್ತು ನಿಮಿಷಕ್ಕೊಂದು ರೈಲು. ಸಂಚರಿಸುತ್ತಿದ್ದವರು ಹೆಚ್ಚಾಗಿ ವಿದ್ಯಾರ್ಥಿಗಳು. ಬೈಸಿಕಲ್‌ಗಳನ್ನೂ ರೈಲಿನಲ್ಲಿ ಹಾಕಿಕೊಂಡು ಬರುತ್ತಿದ್ದವರು, ರೈಲು ಇಳಿದಂತೆಯೇ ಬೈಸಿಕಲ್ ಏರಿ ಮಾಯವಾಗುತ್ತಿದ್ದರು. ಇಲ್ಲಿ ವಿಶ್ವವಿದ್ಯಾಲಯ ಹೊಸದಾದರೂ ಅಲ್ಲಿಯ ಇತರ ವಿದ್ಯಾಸಂಸ್ಥೆಗಳು ಬಹಳ ಹಳೆಯವು. ಒಳ್ಳೆಯ ಹೆಸರು ಮಾಡಿರುವಂತಹವು. ಇಲ್ಲಿರುವ ಒಂದು ಸಂಸ್ಥೆ ಚಲನಚಿತ್ರ ಮಾಧ್ಯಮದ ಶಿಕ್ಷಣಕ್ಕೆ ಹೆಸರುವಾಸಿಯಾಗಿದೆ. ಎರಡೂ ಜರ್ಮನಿಗಳ ಐಕ್ಯದ ನಂತರ ಪೋಟ್ಸ್‌ಡಾಮ್‌ನಲ್ಲಿ ಹಲವಾರು ಹೊಸ ಸಂಶೋಧನಾ ಸಂಸ್ಥೆಗಳು ತಲೆ ಎತ್ತಿವೆ.

ನಾವು ಅಲ್ಲಿ ತಲುಪಿದ್ದು ಸುಮಾರು ಒಂಬತ್ತು ಗಂಟೆಗೆ. ಆಗ ತಾನೇ ಒಂದು ಬಸ್ ಹೊರಟುಹೋಗಿತ್ತು. ಮುಂದಿನದು ಬಹಳ ತಡವಾಗಿದೆ ಎಂದು ನಾವು ಪೇಚಾಡಿಕೊಳ್ಳುತ್ತಿದ್ದಾಗ ಅಲ್ಲಿದ್ದ ಯುವತಿಯೊಬ್ಬಳು ನಡೆದೇ ಹೋಗಬಹುದು ಎಂದು ಸೂಚಿಸಿದಳು. ನಡೆದೇ ಹೊರಟೆವು. ಅಷ್ಟೇನೂ ಎತ್ತರವಿಲ್ಲದ ಗುಡ್ಡ. ದಾರಿಯುದ್ದಕ್ಕೂ ಅನೇಕ ಸಂಶೋಧನಾ ಸಂಸ್ಥೆಗಳು ಕಂಡವು. ಭೂ ವಿಜ್ಞಾನ, ಗುರುತ್ವ ವಿಜ್ಞಾನ, ಪಾಲಿಮರ್, ಬಯೋಮೆಡಿಕಲ್ ಹೀಗೆ ಹಲವಾರು ವಿಷಯಗಳಲ್ಲಿ ಸಂಶೋಧನೆ ನಡೆಸುತ್ತಿರುವ ಸಂಸ್ಥೆಗಳನ್ನು ದಾಟಿ ಖಭೌತ ವಿಜ್ಞಾನದ ಸಂಸ್ಥೆಯನ್ನು ತಲುಪಿದೆವು. ಕೇವಲ ಇಪ್ಪತ್ತು ನಿಮಿಷದಲ್ಲಿ ಸಾಗಿದ ಈ ದಾರಿ ಬಹಳ ಆಹ್ಲಾದಕರವಾಗಿತ್ತು. ಇಕ್ಕೆಲಗಳಲ್ಲಿಯೂ ದೊಡ್ಡ ದೊಡ್ಡ ಮರಗಳು. ಪಕ್ಕದ ಕಣಿವೆಯಲ್ಲಿ ಸಾಹಸಕ್ರೀಡೆಗಳಿಗಾಗಿ ಕುಟುಂಬಗಳು ಸಜ್ಜುಗೊಳ್ಳುತ್ತಿದ್ದವು. ಹಗ್ಗದ ಏಣಿ ಹತ್ತಿ ಹಗ್ಗದ ಸೇತುವೆಯಲ್ಲಿ ಹಳ್ಳ ದಾಟುವುದು, ಮರ ಹತ್ತುವುದು ಮುಂತಾದ ಆಟಗಳಿದ್ದವು.

ವೀಕ್ಷಣಾಲಯದ ಪ್ರವೇಶ ದ್ವಾರದಲ್ಲಿಯೇ ನಮ್ಮನ್ನು ಸ್ವಾಗತಿಸಿದ ವ್ಯಕ್ತಿ ಇಂಗ್ಲಿಷ್‌ನಲ್ಲಿ ಎಲ್ಲ ವಿವರಗಳನ್ನು ಹೇಳಿ, ನಕ್ಷೆ ಇರುವ ಕರಪತ್ರವನ್ನೂ ಕೊಟ್ಟ. ಅದರಲ್ಲಿ ಒಂದು, ಎರಡು ಎಂದು ಸೂಚಿಸಿರುವ ಪ್ರಕಾರವೇ ನಡೆದು ಹೊರಟೆವು.

ಈ ಗುಡ್ಡಕ್ಕೆ ಟೆಲಿಗ್ರಾಫೆನ್‌ಬರ್ಗ್ ಎಂದೇ ಹೆಸರು. ಏಕೆಂದರೆ ಮೊದಲ ಟೆಲಿಗ್ರಾಫ್ ವ್ಯವಸ್ಥೆ

ಹಳೆಯ ವೀಕ್ಷಣಾಲಯ



ಪುನಶ್ಚೇತನಗೊಂಡ ಗ್ರೋಸ್ ರಿಫ್ರಾಕ್ಟರ್ – ವಕ್ರೀಭವನ ದೂರದರ್ಶಕ



ಸೌರ ವೀಕ್ಷಣಾಲಯ – ಪಕ್ಕದಲ್ಲಿರುವುದು ೧೮೩೨ರ ಟೆಲಿಗ್ರಾಫ್ ಕಂಬ

೧೮೩೨ರಲ್ಲಿ ಸ್ಥಾಪಿತವಾಗಿದ್ದು ಇಲ್ಲಿಯೇ. ಆ ಕಂಬಗಳು ಈಗಲೂ ಸುಸ್ಥಿತಿಯಲ್ಲಿವೆ.

ಮುನ್ನೂರು ವರ್ಷಗಳಷ್ಟು ಹಿಂದಿನದು ಈ ವೀಕ್ಷಣಾಲಯ; ಬರ್ಲಿನ್ ವೀಕ್ಷಣಾಲಯದಲ್ಲಿದ್ದ ದೂರದರ್ಶಕಗಳಿಂದ ನಡೆಸುತ್ತಿದ್ದ ಅಧ್ಯಯನಕ್ಕೆ ವಿದ್ಯುತ್ ದೀಪಗಳ ಅಡಚಣೆ ಆರಂಭವಾಗಿದ್ದು ಇಪ್ಪತ್ತನೆಯ ಶತಮಾನದ ಆರಂಭದಲ್ಲಿ. ಆಗ ಅಲ್ಲಿದ್ದ ದೂರದರ್ಶಕಗಳನ್ನು ಇಲ್ಲಿಗೆ ಸ್ಥಳಾಂತರಿಸ ಲಾಯಿತು. ಜೊತೆಗೇ ಹೊಸ ಹೊಸ ದೂರದರ್ಶಕಗಳನ್ನೂ ನಿರ್ಮಿಸ ಲಾಯಿತು. ಇದಾದ ಮೇಲೆ ಚಿಕ್ಕ ಚಿಕ್ಕ ದೂರದರ್ಶಕಗಳನ್ನು ಮತ್ತು ಖಭೌತ ವಿಜ್ಞಾನಕ್ಕೆ ಅವಶ್ಯಕವಾದ ಪ್ರಯೋಗಾಲಯಗಳು, ಕತ್ತಲೆ ಕೋಣೆಗಳನ್ನು (ಡಾರ್ಕ್ ರೂಂ – ಫಿಲ್ಮ್‌ಗಳನ್ನು ಡೆವಲಪ್ ಮಾಡಲು) ಸ್ಥಾಪಿಸಿಕೊಂಡರು. ನಕ್ಷತ್ರಗಳ ರೋಹಿತದ ಅಧ್ಯಯನದಲ್ಲಿ ಇಲ್ಲಿ ಮುಖ್ಯವಾದ ಸಂಶೋಧನೆ ನಡೆಸಿದವರಲ್ಲಿ ಹೆರ್ಮಾನ್ ಫೋಗೆಲ್ ಮುಖ್ಯರು.

ನಮ್ಮ ಪಠ್ಯಪುಸ್ತಕಗಳಲ್ಲಿ ಕೇಳಿಬರುವ ಇನ್ನೊಂದು ಹೆಸರು ಜೊಹಾನೆಸ್ ಹಾರ್ಟ್‌ಮನ್. ಸೌರ ರೋಹಿತದ ಅಧ್ಯಯನ ಮಾಡಿ ಈತ ಕಂಡುಹಿಡಿದ ಸೂತ್ರವನ್ನು ನಾವು ಈಗ ರೋಹಿತ ದರ್ಶಕಗಳಲ್ಲಿ ತರಂಗದೂರದ ಲೆಕ್ಕ ಮಾಡಲು ಬಳಸುತ್ತೇವೆ. ನಕ್ಷತ್ರಗಳ ರೋಹಿತವನ್ನೂ ಸೂಕ್ಷ್ಮವಾಗಿ ಗಮನಿಸಿದ ಈತ ಕೆಲವೊಂದು ನಿಶ್ಚಲ ರೇಖೆಗಳನ್ನು ಗುರುತಿಸಿ, ಅವುಗಳ ಸಹಾಯದಿಂದ ನಕ್ಷತ್ರಗಳ ನಡುವೆ ಅಡಗಿರುವ ಅನಿಲ ಸಮೂಹ ಗಳನ್ನು ಪತ್ತೆ ಮಾಡಿದರು. ಅವು ಬೇರೆ ಬೇರೆ ವೇಗದಲ್ಲಿ ಚಲಿಸುತ್ತವೆ ಎಂಬ ಮಹತ್ವದ ಶೋಧ ಮುಂದೆ ನಮ್ಮ ಗೆಲಾಕ್ಸಿ ಆಕಾಶಗಂಗೆಯ ರಚನೆಯನ್ನು ತಿಳಿಯುವಲ್ಲಿ ಬಹಳ ಮುಖ್ಯ ಅಂಶವಾಯಿತು.

ಸುಮಾರು ನೂರು ವರ್ಷಗಳಿಗಿಂತಲೂ ಹಳೆಯ ದೂರದರ್ಶಕವನ್ನು ಗ್ರೋಸ್ ರಿಫ್ರಾಕ್ಟರ್ (ದೊಡ್ಡ ವಕ್ರೀಭವನ ದೂರದರ್ಶಕ) ಎಂದೇ ಹೆಸರಿಸಿದ್ದಾರೆ. ಹತ್ತು ವರ್ಷಗಳ ಹಿಂದೆ ಇದಕ್ಕೆ ಮರುಜೀವ ಕೊಟ್ಟದ್ದರಿಂದ ಈಗ ವಿದ್ಯಾರ್ಥಿಗಳಿಗೆ / ಸಾರ್ವಜನಿಕರಿಗೆ ವೀಕ್ಷಣೆಗೆ ಲಭ್ಯವಿದೆ.

ಕಪ್ಪುಕುಳಿಗಳ ಅಧ್ಯಯನದಲ್ಲಿ ಮಹತ್ವವಾದ ಸಂಶೋಧನೆ ಮಾಡಿರುವ ಕಾರ್ಲ್ ಶ್ವಾರ್ ಶೀಲ್ಡ್ ಇಲ್ಲಿಯ ನಿರ್ದೇಶಕರಾಗಿದ್ದರು. ಐನ್‌ಸ್ಟೈನ್ ಅವರ ಗುರುತ್ವ ಸಿದ್ಧಾಂತದ ಕುರಿತು ಇಲ್ಲಿ ಮಹತ್ವದ ಸಂಶೋಧನೆಗಳು ನಡೆದವು. ಸೂರ್ಯನ ಬೆಳಕು ಬಾಗುವುದೆಂದು ಗ್ರಹಣದ ಅವಧಿಯಲ್ಲಿ ಎಡಿಂಗ್‌ಟನ್ ತೋರಿಸಿಕೊಟ್ಟ ಮೇಲೆ, ಆ ಕುರಿತ ಪ್ರಯೋಗಗಳನ್ನು ನಡೆಸುವುದಕ್ಕಾಗಿ ಇಲ್ಲಿ ಸೌರ ವೀಕ್ಷಣಾಲಯವೊಂದನ್ನು ೧೯೨೧ರಲ್ಲಿ ಸ್ಥಾಪಿಸಲಾಯಿತು. ಇದಕ್ಕೆ ಐನ್‌ಸ್ಟೈನ್ ಗುಮ್ಮಟ ಎಂದೇ ಹೆಸರಿದೆ. ಈ ಕಟ್ಟಡದ ವಿನ್ಯಾಸವೇ ಭಿನ್ನವಾಗಿದೆ. ವಾಸ್ತು ವಿಜ್ಞಾನದ ವಿದ್ಯಾರ್ಥಿಗಳನ್ನು ಆಕರ್ಷಿಸುತ್ತದೆ. ಸುಮಾರು ಹದಿನಾಲ್ಕು ಮೀಟರ್ ಎತ್ತರದ ಗೋಪುರ ಇದು. ಇಲ್ಲಿರುವ ದೂರದರ್ಶಕ ಸೌರ ಅಧ್ಯಯನಕ್ಕೆ ಮೀಸಲಾಗಿದೆ. ಅದರ ಕಿರೀಟ, ಕಾಂತಶಕ್ತಿಯ ಅಧ್ಯಯನ ಮುಂತಾದ ವಿಷಯಗಳ ಕುರಿತು ಸಂಶೋಧನೆ ನಡೆಯುತ್ತಿದೆ. ಸೂರ್ಯನನ್ನೇ ಹಿಂಬಾಲಿಸುವ ಹೀಲಿಯೋಸ್ಟಾಟ್ ಇದು. (ನಕ್ಷತ್ರವನ್ನು ಹಿಂಬಾಲಿಸುವ ದೂರದರ್ಶಕಕ್ಕೂ ಇದಕ್ಕೂ ಸ್ವಲ್ಪ ವ್ಯತ್ಯಾಸವಿದೆ.) ಉಳಿದ ದೂರದರ್ಶಕಗಳಲ್ಲಿ ಈಗ ಹೊಸ ಹೊಸ ಉಪಕರಣಗಳನ್ನು ಜೋಡಿಸಿ ವಿದ್ಯಾರ್ಥಿಗಳ ಉಪಯೋಗಕ್ಕೆಂದು ಮೀಸಲಿಡಲಾಗಿದೆ.



ಐನ್‌ಸ್ಟೈನ್ ಗುಮ್ಮಟ

ವಿಶ್ವ ಯುದ್ಧಕ್ಕೆ ಮೊದಲು ಇಲ್ಲಿ ಐನ್‌ಸ್ಟೈನ್‌ನ ಚಿತ್ರಗಳು ಮತ್ತು ಪುತ್ಥಳಿಯೊಂದು ಇದ್ದಿತಂತೆ. ಅದನ್ನು ನಾಝಿಗಳು ಹಾಳು ಮಾಡಿ ಪುತ್ಥಳಿ ಯನ್ನು ಕರಗಿಸಿಬಿಟ್ಟರಂತೆ. ಆದರೆ ಯುದ್ಧ ತಣ್ಣಗಾದ ಮೇಲೆ ಅಡಗಿಸಿ ಇಟ್ಟಿದ್ದ ಚಿತ್ರಗಳು ದೊರಕಿದವಂತೆ. ಈಗ ಐನ್‌ಸ್ಟೈನ್‌ನ ನೆನಪಿನಲ್ಲಿ ಒಂದು ಕಲ್ಲು ಇದೆ. (ಐನ್ = ಒಂದು; ಸ್ಟೈನ್ = ಕಲ್ಲು). ಇದು ಆಗಾಗ ಕಳವಾಗುತ್ತಿರುತ್ತದೆಯಂತೆ; ಪುನಃ ಪುನಃ ಹೊಸದನ್ನು ಇಡುತ್ತಾರೆ.

ಈ ಎಲ್ಲ ಗುಮ್ಮಟಗಳನ್ನೂ ಸುತ್ತುಹಾಕಿ ರೈಲು ನಿಲ್ದಾಣಕ್ಕೆ ಹಿಂದಿರುಗಿದೆವು.

ಈ ಪುಟ್ಟ ಪ್ರವಾಸ ನನಗೆ ಬಹಳ ಸಮಾಧಾನ ಕೊಟ್ಟಿತು. ನನ್ನ ಸಂಶೋಧನೆಗಾಗಿ ಇಲ್ಲಿಯ ಅನೇಕ ಮಹನೀಯರ ಪ್ರಬಂಧಗಳನ್ನು ಬಳಸಿ ಕೊಂಡಿದ್ದೆ. ಅವರೆಲ್ಲರಿಗೆ ನಮನ ಸಲ್ಲಿಸಲು ಅವಕಾಶ ಸಿಕ್ಕಿತು.

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಟಿ. ಚೌಡಯ್ಯ ರಸ್ತೆ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧







# ಅಂಕಿತ ಪುಸ್ತಕ

ಪ್ರಕಾಶಕರು ಮತ್ತು ಪುಸ್ತಕ ಮಾರಾಟಗಾರರು

53, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು-560 004

☎: 2661 7100, 2661 7755

## ಇತ್ತೀಚಿನ ನಮ್ಮ ಕೆಲವು ಪ್ರಮುಖ ಪ್ರಕಟಣೆಗಳು






















































> ಸಹಜವಾಗಿಯೇ ಒದಗಿಬಂದ ಕಂಠಸಿರಿಯನ್ನು ಅತ್ಯಂತ ಜೋಪಾನವಾಗಿ ಕಾಪಾಡಿಕೊಂಡು, ಅದು ದೈವಕ್ಕೇ ಮೀಸಲು ಎಂಬುದನ್ನು ಮನಗಂಡು ಮತ್ತೆ ಆ ಸರ್ವವ್ಯಾಪಿಗೇ ಅದನ್ನು 'ಕೃಷ್ಣಾರ್ಪಣಮಸ್ತು' ಎಂದು ಅರ್ಪಿಸಿದವರು ಮಹಾನ್ ಗಾಯಕಿ 'ಸುಸ್ವರಲಕ್ಷ್ಮಿ – ಸುಬ್ಬುಲಕ್ಷ್ಮಿ'. ಈ ೨೦೧೬ನೇ ವರ್ಷ ಈ ಮಹಾನ್ ಮಾನವೀಯ ಮೌಲ್ಯಗಳುಳ್ಳ ಭಾರತರತ್ನಕ್ಕೆ ಜನ್ಮ ಶತಮಾನೋತ್ಸವದ ಸಂಭ್ರಮ. ಈ ಅಮರ ಗಾಯನಕ್ಕೆ ಇದೋ ಈ ನಮನ.

**ಕಲಾವತಿ ಅವಧೂತ್**

೧೯೯೯ರ ಡಿಸೆಂಬರ್ ತಿಂಗಳು, ಚೆನ್ನೈ ನಗರದಲ್ಲಿ ನಾನು ನನ್ನ ಹಲವು ಸಂಗೀತ ಸ್ನೇಹಿತರು ಖಂಜರಿ ಗುರುಪ್ರಸನ್ನ, ಎ. ವಿ. ಕಾಶೀನಾಥ್, ಪುಷ್ಪ ಕಾಶೀನಾಥ್ ಮುಂತಾದವರು ನಮ್ಮ ತಂದೆ ಸಂಗೀತ ಕಲಾರತ್ನ ಶ್ರೀ ಬೆಂಗಳೂರು ಕೆ. ವೆಂಕಟರಾಂ ಅವರೊಂದಿಗೆ ಚೆನ್ನೈ ನಗರದ 'ಮಾರ್ಗಳಿ ಮಹೋತ್ಸವಂ' ಎಂಬ ಸಂಗೀತ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಹೋದಾಗ ನಡೆದ ಘಟನೆ. "ಬೇಗ ಎಲ್ಲರೂ ತಯಾರಾದರೆ, ಒಬ್ಬ ಪ್ರಸಿದ್ಧ ಸಂಗೀತ ವಿದುಷಿಯನ್ನು ಭೇಟಿ ಮಾಡಲು ಹೋಗೋಣ," ತಂದೆಯವರ ಆಗ್ರಹ. ವೆಂಕಟರಾಂ ಅವರು ಶಿಸ್ತಿನ ಸಿಪಾಯಿ. ಸಮಯ ಪರಿಪಾಲನೆಗೆ ಅವರು ಕೊಡುತ್ತಿದ್ದ ಪ್ರಾಶಸ್ತ್ಯವನ್ನು ಅರಿತಿದ್ದ ನಾವು ತಕ್ಷಣವೇ ತಯಾರಾದೆವು. ಬಹುತೇಕ ಎಲ್ಲ ಸಂಗೀತ ವಿದ್ವಾಂಸ–ವಿದುಷಿಯರ ನಿಕಟ ಪರಿಚಯ ತಂದೆಯವರಿಗೆ ಇದ್ದುದರಿಂದ, ನಾವು ಈ ವಿದುಷಿ ಯಾರಿರಬಹುದು ಎಂದು ಯೋಚಿಸುತ್ತಿದ್ದೆವು.

"ನಾವೀಗ ಎಂ. ಎಸ್. ಸುಬ್ಬುಲಕ್ಷ್ಮಿಯವರನ್ನು ನೋಡಲು ಹೋಗುತ್ತಿದ್ದೇವೆ" ಎಂದರು. ನನ್ನ ಮೈ ಝುಮ್ಮೆಂದಿತು. 'ಎಂ. ಎಸ್.' – ಈ ಎರಡು ಇಂಗ್ಲಿಷ್ ಅಕ್ಷರಗಳೇ ಸಾಕು, ಸುಬ್ಬುಲಕ್ಷ್ಮಿಯವರ ಸ್ವರೂಪ ಕಣ್ಮುಂದೆ ಬಂದು ನಿಲ್ಲುತ್ತದೆ.

ಸರಿಯಾಗಿ ಬೆಳಗ್ಗೆ ೧೦ ಗಂಟೆಗೆ 'ಶಿವಂ ಶುಭಂ' ಎಂಬ ನಾಮಫಲಕವಿದ್ದ ಎಂ. ಎಸ್. ಅವರ ಮನೆಯನ್ನು ತಲುಪಿದೆವು. ಅವರ ಪುತ್ರ, ಆತ್ಮನಾಥನ್ ಅವರು ಬಂದು ನಮ್ಮ ತಂದೆಯವರನ್ನು ಆತ್ಮೀಯವಾಗಿ ಮಾತನಾಡಿಸಿ, ನಮ್ಮನ್ನು ಉಪಚರಿಸಿದರು. ಐದೇ ನಿಮಿಷಗಳಲ್ಲಿ ಸಂಗೀತ ಕಲೆಯ 'ನಿಧಿ' ನಮ್ಮ ಮುಂದೆ ನಿಂತಿದ್ದರು. ಮುಖದಲ್ಲಿ ಆತ್ಮೀಯತೆ, ಮಾತೃತ್ವವನ್ನು ಸೂಚಿಸುವ ನಗು, ಸರಳ ಸಜ್ಜನಿಕೆಯ ಮೂರ್ತಿಯನ್ನು ಕಂಡು ನಾವು ಸಂಕೋಚದ ಮುದ್ದೆಗಳಾದೆವು. ಸಂಗೀತ ಶಾರದೆಯೇ ಕಣ್ಮುಂದೆ ಪ್ರತ್ಯಕ್ಷವಾದಾಗ ಏನು ಮಾತನಾಡುವುದು ? ಅವರನ್ನು ನೋಡುತ್ತಲೇ ಮಂತ್ರಮುಗ್ಧರಾದ ನಮ್ಮನ್ನೆಲ್ಲ ತಂದೆಯವರು ಪರಿಚಯ ಮಾಡಿಸಿದರು.

ಇಡೀ ಸಂಗೀತ ಪ್ರಪಂಚವನ್ನೇ ಮಂತ್ರಮುಗ್ಧರನ್ನಾಗಿಸಿದ ಸುಸ್ವರ ಲಕ್ಷ್ಮಿ ಎಲ್ಲಿ, ನಾವೆಲ್ಲಿ !!?? ಆದರೆ ಅವರು ಅತ್ಯಂತ ಸರಳತೆಯಿಂದ ನಮ್ಮನ್ನು ಮಾತನಾಡಿಸಿದಾಗ, ಇದು ಭ್ರಮೆಯೇನೋ ಅನ್ನಿಸುತ್ತಿತ್ತು.

ತಂದೆಯವರು ನನಗೆ ಎಂ. ಎಸ್. ಅಮ್ಮ ಅವರ ಸಾನಿಧ್ಯದಲ್ಲಿ ಒಂದು ಹಾಡನ್ನು ಹಾಡಲು ಹೇಳಿದರು. "ಈ ಹಾಡನ್ನೇ ಅವರಿಗೆ ಸಮರ್ಪಿಸು. ಅದಕ್ಕಿಂತ ಮಿಗಿಲಾಗಿ ಇನ್ನೇನೂ ಕೊಡಲು ಸಾಧ್ಯವಿಲ್ಲ" ಎಂದು ತಂದೆಯವರು ಆಗ್ರಹಪಡಿಸಿದಾಗ ನಿಜವಾಗಿ ನನಗೆ ಬೆವರಿಳಿದುಹೋಯಿತು. ಆದರೆ ಅಮ್ಮ ಅವರ ಮುಖದಲ್ಲಿನ ಆ ಹಸನ್ಮುಖತೆ, ಮಾತೃತ್ವದ ಛಾಯೆ ಬಾಯಿ ತೆಗೆದು ಹಾಡುವ ಧೈರ್ಯ ಕೊಟ್ಟಿತು. ಸಿಂಧುಭೈರವಿ ರಾಗದ



# ಗಾನ ಕೋಗಿಲೆಯ ನೂರರ ನೆನಪು

‘ಮನದಿರ್ ಕುಹಂದದ್ ಮುರುಗನ್ ರೂಪಂ’ ಎಂಬ ಅಂಬುಜಂ ಕೃಷ್ಣ ಅವರ ರಚನೆಯನ್ನು ಹಾಡಿದೆ. ನಂತರ ಎಂ. ಎಸ್. ಅಮ್ಮ ವ್ಯಕ್ತಪಡಿಸಿದ ಸಂತೋಷ ಅವರ ಉದಾರ ಗುಣವನ್ನು ತೋರಿಸುತ್ತದೆ. ಮುಂದೆ ಅವರು ನೀಡಿದ ಸಲಹೆಗಳು ಅತ್ಯಮೂಲ್ಯ.

“ನಾನು ಕೆಲವು ಸಲಹೆಗಳನ್ನು ನಿನಗೆ ನೀಡಬಹುದೇ ?” ಎಂದು ಕೇಳಿದಾಗ ನನ್ನ ಪರಿಸ್ಥಿತಿ ಊಹಿಸಿಕೊಳ್ಳಿ. ಸಂಗೀತಕಲಾನಿಧಿ ನನ್ನಂಥ ಸಾಮಾನ್ಯಳ ಮೇಲೆ ತೋರಿದ ಕೃಪೆಯ ಪರಾಕಾಷ್ಠತೆ ಅದು.

ಸುಮಾರು ೧೫ ನಿಮಿಷಗಳ ಕಾಲ ಅಮೂಲ್ಯ ಸಲಹೆಗಳ ಸರಮಾಲೆ. “ನಿನ್ನ ಕಂಠದಲ್ಲಿ ಭಾವನೆಗಳ ಅಭಿವ್ಯಕ್ತಿ ಅತ್ಯಂತ ಸ್ವಾಭಾವಿಕವಾಗಿರುವಂತಹ ವರವನ್ನು ದೇವರು ನಿನಗೆ ನೀಡಿದ್ದಾನೆ. ಅದನ್ನು ಚೆನ್ನಾಗಿ ರೂಢಿಸಿಕೋ, ಜೋಪಾನವಾಗಿ ಕಾಪಾಡಿಕೋ. ರೆಫ್ರಿಜಿರೇಟರ್‌ನಲ್ಲಿರುವ ಪಾನೀಯ, ತಿನಿಸುಗಳನ್ನು ತಿನ್ನಬೇಡ. ಕಂಠದ ಬಗ್ಗೆ ಗಮನವಿರಲಿ, ಎಂದೆಂದೂ ಧರ್ಮ ಮಾರ್ಗದಲ್ಲಿರು,” ಎಂದರು.

ಸುಮಾರು ಅರ್ಧ ಗಂಟೆಕಾಲ ಅವರ ಮೃದುವಾದ ಹಸ್ತವನ್ನು ಹಿಡಿದೇ ಕುಳಿತಿದ್ದೆ ನಾನು. ಒಂದು ರೀತಿಯಲ್ಲಿ ಯೋಗನಿದ್ರೆಯಲ್ಲಿರುವಂತಹ ಭಾವನೆ. ‘ಟ್ರ್ಯಾನ್ಸ್’ ಎನ್ನುತ್ತೀವಲ್ಲ ಹಾಗೆ.

ಸಂಗೀತ ಲೋಕದ ಸುಪ್ರಸಿದ್ಧ ತಾರೆ, ಅಂತರರಾಷ್ಟ್ರೀಯ, ಹಾಗೂ ದೇಶದ ಎಲ್ಲ ಅತ್ಯುನ್ನತ ಪ್ರಶಸ್ತಿಗಳನ್ನು ಮುಡಿಗೇರಿಸಿಕೊಂಡರೂ ಅದೆಂತಹ ಸರಳತೆ !!! ಅವರ ಸಂಗೀತದಲ್ಲಿ ಇರುವ ಮಾರ್ದವತೆ, ಸೂಕ್ಷ್ಮತೆ, ಶುದ್ಧತೆ ಅವರ ಮಾತಿನಲ್ಲೂ ಇತ್ತು.

ಆಗ ನಾನು ಅರಿತುಕೊಂಡ ಪರಮಸತ್ಯ, ಸಂಗೀತ ಬರಿಯ ಬಾಯಲ್ಲಿ ಹೊರಡುವ ಶಬ್ದತರಂಗವಲ್ಲ – ಅದು ಹೃದಯದಿಂದ ಬರಬೇಕು. ಬಂದರೆ ಅದು ಎಂ. ಎಸ್. ಅವರ ‘ವಿಷ್ಣುಸಹಸ್ರನಾಮದಂತೆ’, ‘ಭಜಗೋವಿಂದಂ’ ಶ್ಲೋಕದಂತೆ, ‘ವೆಂಕಟೇಶ ಸುಪ್ರಭಾತ’ದಂತೆ, ಚಿರಸ್ಥಾಯಿಯಾಗಿ ಉಳಿಯುತ್ತದೆ ಎಂಬುದು.



ಸುಸ್ವರಲಕ್ಷ್ಮಿ, ಸಪ್ತಸ್ವರಗಳನ್ನೂ ದಾಟಿ ‘ಆಠವಾಸ್ವರ್’ (ಎಂಟನೆಯ ಸ್ವರ) ಎಂದು ಕರೆಸಿಕೊಂಡ ಭಾರತದ ಕೋಗಿಲೆ ಎಂ. ಎಸ್. ಸುಬ್ಬುಲಕ್ಷ್ಮಿಯವರ ಪೂರ್ಣ ಹೆಸರು ಮಧುರೈ ಷಣ್ಮುಖವಡಿವು ಸುಬ್ಬುಲಕ್ಷ್ಮಿ. ಸೆಪ್ಟೆಂಬರ್ ೧೬, ೧೯೧೬ರಂದು ಜನನ.

ಎಂ. ಎಸ್. ಎಂದೇ ಖ್ಯಾತನಾಮರಾದ ಸುಬ್ಬುಲಕ್ಷ್ಮಿ ಅಮ್ಮ ನಡೆದುಬಂದ ಹಾದಿಯೇನೂ ಹೂವಿನ ಹಾಸಿಗೆಯಾಗಿರಲಿಲ್ಲ. ಸಂಗೀತಕ್ಕಾಗಿ ಅವರು ಪಟ್ಟ ಶ್ರಮ, ಮಾಡಿದ ತ್ಯಾಗ, ಪರಿಶ್ರಮವನ್ನು ಗಮನಿಸಿದಾಗ ಅವರ ಹೋರಾಟದ ಹಾದಿ ನಮಗೆ ಜೀವನ ಪಾಠವನ್ನು ಕಲಿಸುತ್ತದೆ.

ಎಂ. ಎಸ್. ಅವರ ಪೂರ್ವಜರು ದೇವಾಲಯದ ನರ್ತಕಿಯಾಗಿ ಸೇವೆ ಸಲ್ಲಿಸಿದವರಂತೆ. ದೇವರ ಸೇವೆಗೆ ತಮ್ಮನ್ನು ಸಮರ್ಪಿಸಿಕೊಂಡು ‘ದೇವದಾಸಿ’ಯರ ಪಂಥಕ್ಕೆ ಸೇರಿದ ಕಲಾವಿದರಿಗೆ ಸಮಾಜದಲ್ಲಿ ಏನೇನೂ ಗೌರವವಿರಲಿಲ್ಲ. ಇಂತಹ ತಾರತಮ್ಯವನ್ನು ಎಂ. ಎಸ್. ಅವರ ಅಮ್ಮ ಷಣ್ಮುಖವಡಿವು ಮಧುರೈ ನಗರದಲ್ಲಿ ಅನುಭವಿಸುತ್ತಲೇ ಜೀವನ ಸಾಗಿಸಿದರು. ಶಕ್ತಿವೇಲ್ ಎಂಬ ಮಗ, ಸುಬ್ಬುಲಕ್ಷ್ಮಿ ಹಾಗೂ ವಡಿವಾಂಬಾಳ್ ಎಂಬ ಎರಡು ಹೆಣ್ಣುಮಕ್ಕಳು ಷಣ್ಮುಖವಡಿವು ಅವರಿಗೆ.

ಆಗಿನ ಕಾಲಕ್ಕೆ ಇವರು ಉತ್ತಮ ವೀಣಾವಾದಕಿ ಎಂದು ಹೆಸರು ಗಳಿಸಿದ್ದರು. ಕುಂಜಮ್ಮ (ಎಂ. ಎಸ್. ಅವರ ಮನೆಯಲ್ಲಿ ಕರೆಯುತ್ತಿದ್ದ ನಾಮಧೇಯ) ತಾಯಿಯಂತೆ ವೀಣಾವಾದಕಿಯಾಗಬೇಕೆಂದೂ ಬಯಸಿದ್ದರಂತೆ. ಕಾಲಕ್ರಮೇಣ ಕುಂಜಮ್ಮ ಹಾಡುಗಾರಿಕೆಯಲ್ಲಿ ತಮಗಿದ್ದ ಆಸಕ್ತಿಯನ್ನು ವ್ಯಕ್ತಪಡಿಸಿದ್ದರು. ಎಂ. ಎಸ್. ಅವರ ಬಾಲ್ಯದ ಸಂಗೀತವನ್ನು ಹಲವಾರು ಸಂಗೀತ ದಿಗ್ಗಜರು ಮನೆಗೆ ಭೇಟಿ ಮಾಡಿ, ಕೇಳಿ ಸಂತೋಷಪಡುತ್ತಿದ್ದರು. ಅರಿಯಕುಡಿ ರಾಮಾನುಜ ಅಯ್ಯಂಗಾರ್ ಅವರಂತಹ ಹಿರಿಯರೂ ಸುಬ್ಬುಲಕ್ಷ್ಮಿಯವರ ಕಲೆಯ ಶ್ರೇಷ್ಠತೆಯನ್ನು ಗುರುತಿಸಿದರು ಎನ್ನಲಾಗಿದೆ.

ಮುಂದೆ ಎಂ. ಎಸ್. ಅವರಿಗೆ ಹಲವಾರು ಸಣ್ಣಪುಟ್ಟ ಕಾರ್ಯಕ್ರಮಗಳಲ್ಲಿ ಹಾಡುತ್ತಲೇ ಗ್ರಾಮೋಫೋನ್ ಧ್ವನಿಮುದ್ರಣ ಆಗಿನ ಮದರಾಸ್ ಮ್ಯೂಸಿಕ್ ಅಕಾಡೆಮಿಯಲ್ಲಿ ಹಾಡುವ ಅವಕಾಶಗಳು ದೊರಕಿದವು. ಹೀಗೆ ಸಂಗೀತ ಲೋಕದ ಧ್ರುವತಾರೆಯಾಗಿ ಬೆಳೆಯುವ ಎಲ್ಲ ಲಕ್ಷಣಗಳನ್ನೂ ತೋರಿದರು.

ಇವರ ಸಂಗೀತದ ತೀವ್ರಾಸಕ್ತಿ ಯಾವ ಮಟ್ಟದ್ದು ಎಂದರೆ, ರಾಜಮನೆತನದ ವರನೊಬ್ಬ ಇವರನ್ನು ವಿವಾಹವಾಗಲು ಒಪ್ಪಿದರೂ, ಎಂ. ಎಸ್. ಮದುವೆಗೆ ಸಮ್ಮತಿಸಲಿಲ್ಲ. ಈ ವಿವಾಹ ಮುಂದೆ ತನ್ನ ಸಂಗೀತದ ಹಾದಿಯಲ್ಲಿ ತೊಡಕಾಗುವುದೆಂಬ ಭಯ ಅವರಿಗಿತ್ತು.

ಸುಮಾರು ೧೯೩೬ನೇ ಇಸವಿಯಲ್ಲಿ ಎಂ. ಎಸ್. ಅವರ ಜೀವನದ ಮುಖ್ಯ ತಿರುವು ಎಂದರೆ, ಶ್ರೀಯುತ ಟಿ. ಸದಾಶಿವಂ ಅವರನ್ನು ಭೇಟಿ ಮಾಡಿದ್ದು. ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಸದಾಶಿವಂ ಎಂ. ಎಸ್. ಅವರ ಸಂಗೀತದ ಸಂಸ್ಕಾರ, ಅತ್ಯುನ್ನತೆಯನ್ನು ಸೂಕ್ಷ್ಮವಾಗಿ ಗುರುತಿಸಿದ್ದರು. ಎಂ. ಎಸ್. ಅವರನ್ನು ಸಿನಿಮಾ ಜಗತ್ತಿಗೆ ಪರಿಚಯಿಸಿದವರೂ ಸದಾಶಿವಂ ಅವರೇ. ‘ಸೇವಾಸದನಂ’ ಚಿತ್ರದ ಮೂಲಕ ಚಿತ್ರರಂಗಕ್ಕೆ ಪ್ರವೇಶಿಸಿದ ಎಂ. ಎಸ್. ‘ಶಕುಂತಲೈ’, ‘ಸಾವಿತ್ರಿ’, ‘ಮೀರಾ’ ಮುಂತಾದ ಚಿತ್ರಗಳಲ್ಲಿ ಅಭಿನಯಿಸಿದರು. ಮಹಾನ್ ಸಂಗೀತಗಾರರಾಗಿದ್ದ ಜಿ. ಎನ್. ಬಾಲಸುಬ್ರಹ್ಮಣ್ಯಂ ಅವರೊಂದಿಗೆ ಎಂ. ಎಸ್. ‘ಶಕುಂತಲೈ’ ಚಿತ್ರದಲ್ಲಿ ಅಭಿನಯಿಸಿದ್ದು ಗಮನಾರ್ಹ.

ಆಗಿನ ಬಹುತೇಕ ಮುಖ್ಯ ನಟ–ನಟಿಯರು ತಮ್ಮ ಕಂಠಸಿರಿಯ ಆಧಾರದ ಮೇಲೆಯೇ ಚಲನಚಿತ್ರದಲ್ಲಿ ಹಾಡುಗಳ ಐನಿಕೆ ಮಾಡುತ್ತಿದ್ದರು. ಹಾಗೆ ಎಂ. ಎಸ್. ಹಾಡಿದ ‘ಬ್ರೂಹಿಮುಕುಂದೇತಿ’, ‘ಕಾಟ್ರಿನಿಲೇ ವರುಂ ಗೀತಂ’, ‘ಗಿರಿಧರ ಗೋಪಾಲ’... ಹೀಗೆ ಇನ್ನೂ ಹತ್ತು ಹಲವಾರು ಹಾಡುಗಳು, ಭಜನ್‌ಗಳು ಅಪಾರ ಜನಪ್ರಿಯತೆ ಪಡೆದವು.

ಪುರುಷಪ್ರಧಾನವಾಗಿದ್ದ ಸಂಗೀತ ಜಗತ್ತು ಈ ಮಹಾನ್ ತಾರೆಯನ್ನು ಬರಮಾಡಿಕೊಂಡಿತು. ‘ಪರಿವರ್ತನೆಯೇ ಜಗದ ನಿಯಮ’ ಎಂಬುದನ್ನು ಪಾಲಿಸಬೇಕಾಯಿತು.

ಶ್ರೀ ಸದಾಶಿವಂ ಅವರನ್ನು ವಿವಾಹವಾಗುವ ನಿರ್ಣಯ ಎಂ. ಎಸ್. ಅವರ ಜೀವನದ ದಿಕ್ಕನ್ನು ಸಂಪೂರ್ಣವಾಗಿ ಬದಲಾಯಿಸಿತು. ಅದಾಗಲೇ ಗೃಹಸ್ಥರಾಗಿ, ಇಬ್ಬರು ಹೆಣ್ಣುಮಕ್ಕಳ ತಂದೆಯಾಗಿದ್ದ ಸದಾಶಿವಂ ಅವರನ್ನು ಎಂ. ಎಸ್. ತಮ್ಮ ಸಂಗೀತ ಜೀವನದ ರೂವಾರಿಯಾಗಿ ಗುರುತಿಸಿಕೊಂಡಿದ್ದರು. ತೀವ್ರ ಮಾನಸಿಕ ಹೋರಾಟಗಳನ್ನು ಅನುಭವಿಸಿದ್ದಾಗ್ಯೂ, ಎಂ. ಎಸ್. ಮತ್ತು ಸದಾಶಿವಂ ವಿವಾಹ ಜೀವನಕ್ಕೆ ಕಾಲಿಟ್ಟರು. ಆಗಿನ ಸಮಾಜದ ಮಡಿವಂತಿಕೆಯಲ್ಲಿ ಎಂ. ಎಸ್. ಹಾಗೂ ಸದಾಶಿವಂ ಅವರಿಗೆ ಆಗಿರಬಹುದಾದ ಹಲವಾರು ಮಾನಸಿಕ ಹೊಯ್ದಾಟಗಳನ್ನು ನಾವು ಊಹಿಸಬಹುದು. ಬಹುಶಃ ಈ ಎಲ್ಲ ಹೋರಾಟಗಳೇ ಎಂ. ಎಸ್. ಅವರ ಸಂಗೀತದ ಹಾದಿಗೆ ಭದ್ರ ಅಡಿಪಾಯಗಳಾಗಿದ್ದವು.

ತಾಯಿಯನ್ನು ಕಳೆದುಕೊಂಡಿದ್ದ ರಾಧಾ ಮತ್ತು ವಿಜಯಾ ಎಂ. ಎಸ್. ಅವರನ್ನು ತಮ್ಮ ಹೆತ್ತಮ್ಮನಂತೆಯೇ ಭಾವಿಸಿದರು. ಈ ಮಕ್ಕಳಿಗೆ ಎಂ. ಎಸ್. ತಾಯಿ, ಗೆಳತಿ, ಗುರು ಹಾಗೂ ಸಲಹಗಾರ್ತಿಯಾಗಿದ್ದರು. ಅವರ ನೂರಾರು ಸಂಗೀತ ಕಚೇರಿಗಳಲ್ಲಿ ರಾಧಾ ಎಂ. ಎಸ್. ಅವರ ಮತ್ತೊಂದು ದನಿ ಆಗಿದ್ದನ್ನು ನಾವೆಲ್ಲ ನೋಡಿ ಆನಂದಿಸಿದ್ದೇವೆ.

'ಆನಂದ ವಿಗಡನ್' ಎಂಬ ತಮಿಳು ಪತ್ರಿಕೆಯಲ್ಲಿ ಸಂಪಾದಕ ಬಳಗದಲ್ಲಿ ಬರೆಯುತ್ತಿದ್ದ 'ಕಲ್ಕಿ' ಕೃಷ್ಣಮೂರ್ತಿಯವರು, ಸದಾಶಿವಂ ಹಾಗೂ ಹಿರಿಯ ಮುತ್ಸದ್ದಿ ರಾಜಾಜಿಯವರ ಒತ್ತಾಸೆಗೆ ಮಣಿದು 'ಕಲ್ಕಿ' ಪತ್ರಿಕೆಯನ್ನು ಪ್ರಾರಂಭಿಸಿದಾಗ ಸದಾಶಿವಂ ಅವರ ಬಂಗಲೆಗಳ ಸಮುಚ್ಚಯ 'ಕಲ್ಕಿ ಗಾರ್ಡನ್' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಅಲ್ಲೇ ಎಂ. ಎಸ್. ಅವರ ವಾಸ್ತವ್ಯವೂ ಆಗಿದ್ದರಿಂದ ಅನೇಕ ಗಣ್ಯರು 'ಕಲ್ಕಿ ಗಾರ್ಡನ್'ಗೆ ಭೇಟಿ ನೀಡುತ್ತಿದ್ದರು. 'ಕಲ್ಕಿ ಗಾರ್ಡನ್' ತುಂಬ ಜನಪ್ರಿಯತೆಯನ್ನು ಗಳಿಸಿತ್ತು, ಸಾಂಸ್ಕೃತಿಕ ಕೇಂದ್ರವಾಗಿ ರೂಪುಗೊಂಡಿತ್ತು. ವಿಶ್ವವಿಖ್ಯಾತರೆನಿಸಿದ್ದ ಹಿಂದೂಸ್ಥಾನಿ ಸಂಗೀತಗಾರರೂ ಇಲ್ಲಿ ಸಂಗೀತ ಕಾರ್ಯಕ್ರಮಗಳನ್ನು ನೀಡಿದರು. ಪಂಡಿತ್ ರವಿಶಂಕರ್, ಗಿರಿಜಾದೇವಿ ದಾಗರ್ ಸಹೋದರರು, ಬಡೇ ಗುಲಾಂ ಅಲಿಖಾನ್... ಇವರೇ ಅಲ್ಲದೆ ಅಧ್ಯಾತ್ಮವಾದಿಗಳೂ ಅಲ್ಲಿ ಭೇಟಿ ನೀಡಿ ಆ ಬಂಗಲೆ ಒಂದು ಕಲಾ ಮಂಟಪವಾಗಿ, ಆಶ್ರಮವಾಗಿ ಪರಿವರ್ತನೆಯಾಯಿತು.

ಆದರೆ ಮುಂದೆ ಇದೇ 'ಕಲ್ಕಿ' ಪತ್ರಿಕೆಯು ನಷ್ಟದಲ್ಲಿ ನಡೆಯುವಂತಾದಾಗ ಬಂಗಲೆಯನ್ನು ಮಾರಿ, ಸಾಲದ ಹೊರೆಯನ್ನು ಇಳಿಸಿಕೊಂಡು ಎಂ. ಎಸ್. ಹಾಗೂ ಸದಾಶಿವಂ ಕೈ ಖಾಲಿ ಮಾಡಿಕೊಂಡರು. ಆದರೆ ಸ್ವಾಭಿಮಾನಿಗಳಾಗಿ, ಕೊಡುವ ಕೈಯಾಗಿದ್ದ ಈ ದಂಪತಿಗಳು ಯಾರಲ್ಲೂ ಏನೂ ಯಾಚಿಸದೆ, ಮುಂದೆ ತಮ್ಮ ದತ್ತುಪುತ್ರ, ಕಾರ್ಯದರ್ಶಿ ಆತ್ಮನಾಥನ್ ಅವರೊಂದಿಗೆ 'ಶಿವಂ-ಶುಭಂ' ಗೃಹದಲ್ಲಿ ನೆಲೆಸಿದ್ದರು.

ಎಂ. ಎಸ್. ಹಾಗೂ ಸದಾಶಿವಂ ದಂಪತಿಗಳು ಮಾಡಿದ ದಾನ-ಧರ್ಮಗಳಿಗೆ ಲೆಕ್ಕವೇ ಇಲ್ಲ. ಹಲವಾರು ದಾನಶೀಲ ಸಂಸ್ಥೆಗಳಿಗಾಗಿ ಹಾಡಿದರು, ತಮ್ಮ ಅನೇಕ ರೆಕಾರ್ಡುಗಳ ರಾಯಧನವನ್ನು ಸೇವಾಸಂಸ್ಥೆಗಳಿಗೆ ದಾನವಾಗಿ ನೀಡಿದ್ದಾರೆ. 'ವೆಂಕಟೇಶ ಸುಪ್ರಭಾತ' ಸ್ತೋತ್ರಾದಿಯಾಗಿ ಹೆಚ್ಚು ಸಂಖ್ಯೆಯಲ್ಲಿ ಮಾರಾಟವಾದ ಹಲವಾರು ರೆಕಾರ್ಡುಗಳ ರಾಯಧನವನ್ನು ತಿರುಪತಿ ವೇದ ಪಾಠಶಾಲೆ, ಸಂಕಟ ಪರಿಸ್ಥಿತಿಯಲ್ಲಿದ್ದ ಅನೇಕ ಸೇವಾಸಂಸ್ಥೆಗಳಿಗೆ ಕೊಡುಗೆಯಾಗಿ ನೀಡಿದ್ದಾರೆ.

ಎಂ. ಎಸ್. ಸಂಸ್ಕಾರಯುತ ನಡವಳಿಕೆ, ಸಂಗೀತ, ಸೌಂದರ್ಯ, ಸರಳತೆ, ಸಜ್ಜನಿಕೆಗಳ ಅಪೂರ್ವ ಮಿಶ್ರಣ. ಅವರು ವೇದಿಕೆಯ ಮೇಲಿದ್ದರೆ ನಾದದೇವತೆಯೇ ಸರಿ. ಅವರು ಉಡುತ್ತಿದ್ದ ಸೀರೆ, ತೊಡುತ್ತಿದ್ದ ಆಭರಣಗಳೂ ಎಲ್ಲವೂ ಗಾಂಭೀರ್ಯದ ಸಂಕೇತಗಳು.

'ವಿನಯವೇ ಮೂರ್ತಿವೆತ್ತಂತೆ' ಎಂಬುದು ಅವರಿಗೆ ಅನ್ವರ್ಥ. ಅಭಿಮಾನ ಹಾಗೂ ಪ್ರೀತಿಗೆ ನಿಷ್ಕಲ್ಮಶವಾಗಿ ಓಗೊಡುತ್ತಿದ್ದ ಹೃದಯ. ಒಮ್ಮೆ ಅವರ ದತ್ತುಪುತ್ರ ಆತ್ಮನಾಥನ್ ಅವರ ಆಪ್ತ ಸ್ನೇಹಿತ ಆಚಾರ್ಯ ಅವರು ತಮ್ಮ ಮದುವೆಯ ಲಗ್ನಪತ್ರಿಕೆಯನ್ನು ಅಮ್ಮ ಅವರಿಗೂ ಕಳುಹಿಸಿದ್ದರು. ಆದರೆ ಎಂ. ಎಸ್. ಬೆಂಗಳೂರಿನಲ್ಲಿ ಅವರ ವಿವಾಹಕ್ಕೆ ಬಂದುದಲ್ಲದೆ, 'ಸೀತಾ ಕಲ್ಯಾಣ ವೈಭೋಗಮೇ' ಕೃತಿಯನ್ನು ಹಾಡಿದಾಗ ಅಲ್ಲಿದ್ದ ನಾದಸ್ವರ ವಿದ್ವಾಂಸರೂ ಸ್ತಬ್ಧರಾಗಿ ಕುಳಿತುಬಿಟ್ಟರಂತೆ. 'ಕಲ್ಕಿ ಗಾರ್ಡನ್ಸ್' ಬಂಗಲೆಗೆ ಬಂದ ಗಣ್ಯರಿಗೆ



ತಾವೇ ಸ್ವತಃ ಉಪಾಹಾರ, ಭೋಜನ ವ್ಯವಸ್ಥೆಯ ಬಗ್ಗೆ ಕಕ್ಕುಲತೆಯಿಂದ ವಿಚಾರಿಸಿಕೊಳ್ಳುತ್ತಿದ್ದ ಬಗೆ, ಸ್ವತಃ ಮಹಾತ್ಮ ಗಾಂಧೀಜಿಯವರೇ ಇವರನ್ನು 'ಹರಿ ತುಮ ಹರೋ' ಭಜನ್ ಹಾಡಲು ಆಗ್ರಹಪಡಿಸಿದ್ದನ್ನು ಅತ್ಯಂತ ವಿನಯ, ಸಂಭ್ರಮಗಳಿಂದ ವ್ಯಕ್ತಪಡಿಸುತ್ತಿದ್ದ ರೀತಿ ಇವೆಲ್ಲವೂ ಅವರ ಕಲಾಭಿವ್ಯಕ್ತಿ ಹಾಗೂ ಹೃದಯಶ್ರೀಮಂತಿಕೆ ಎರಡೂ ಒಂದಕ್ಕೊಂದು ಪೂರಕವಾಗಿದ್ದುದರ ಕೆಲವು ಉದಾಹರಣೆಗಳಷ್ಟೆ. ಅವರ ಜೀವನದಲ್ಲಿ ಇಂತಹ ಅದೆಷ್ಟು ಪ್ರಸಂಗಗಳಿವೆಯೋ !!!

ಹಲವಾರು ಭಾಷೆಗಳಲ್ಲಿ ಹಾಡಿರುವ ಎಂ. ಎಸ್. ಶ್ರದ್ಧೆಗೆ ಮತ್ತೊಂದು ಹೆಸರು. ಪೂರ್ವಸಿದ್ಧತೆ, ಬದ್ಧತೆ ಎನ್ನುವುದು ಇಲ್ಲಿ ಅತ್ಯಂತ ಪ್ರಮುಖ. ಶಾಸ್ತ್ರೀಯ ಕೃತಿಗಳಾಗಲಿ, ಅನ್ನಮಯ್ಯನ ರಚನೆಯಾಗಲಿ, ಮೀರಾ ಭಜನ್ ಆಗಿರಲಿ, ಸುಪ್ರಭಾತಗಳಾಗಿರಲಿ, ದೇವರನಾಮಗಳಾಗಿರಲಿ, ಸಂಸ್ಕೃತ ಶ್ಲೋಕಗಳಾಗಿರಲಿ, ಭಕ್ತಿಗೀತೆಗಳಾಗಿರಲಿ, ಹಲವಾರು ಪ್ರಾಂತ್ಯಗಳ ಭಾಷೆಗಳ ಗೀತೆಗಳಿರಲಿ – ಯಾವುದೇ ರಚನೆಯನ್ನು ಕಲಿಯುವಾಗ ಆ ರಚನೆಯ ಅರ್ಥ, ಭಾವಾಭಿವ್ಯಕ್ತಿ, ಉಚ್ಚಾರಣೆಗಳ ಬಗ್ಗೆ ಅತ್ಯಂತ ಭಕ್ತಿ-ಶ್ರದ್ಧೆಗಳನ್ನಿಟ್ಟು ಕಲಿಯುವ ಆ ಆಸಕ್ತಿ ನಮಗೆ ಸುಸ್ಪಷ್ಟ. ಈ ವಿರಾಟ್ ರೂಪಗಳೇ ಕೇಳುವವನ ಮನಸ್ಸು, ಹೃದಯವನ್ನು ನೇರವಾಗಿ ತಲುಪುತ್ತವೆ.

ಎಂ. ಎಸ್. ಜೀವನವೇ ನಮ್ಮಂತಹ ವಿದ್ಯಾರ್ಥಿಗಳಿಗೆ ಒಂದು ಮಾರ್ಗಸೂಚಿ. ಶ್ರದ್ಧೆ ಇದ್ದಲ್ಲಿ ಜಯವಿದ್ದೇ ಇದೆ ಎಂಬುದಕ್ಕೆ ಇವರು ನಡೆದುಬಂದ ಹಾದಿಯೇ ಸಾಕ್ಷಿ.

೧೯೬೬ರಲ್ಲಿ ಈ ಮಹಾನ್ ಗಾಯಕಿ ವಿಶ್ವಸಂಸ್ಥೆಯ ಸಂಸ್ಥಾಪನಾ ದಿನಾಚರಣೆಯ ಅಂಗವಾಗಿ ವಿಶ್ವಸಂಸ್ಥೆಯಲ್ಲಿ 'ಆಡಿಸಿದಳೆಶೋಧಾ ಜಗದೋದ್ಧಾರನಾ' ಮತ್ತಿತರ ಕೀರ್ತನೆಗಳನ್ನು ಹಾಡುವ ಮೂಲಕ ಕರ್ನಾಟಕ ಸಂಗೀತದ ಮಾಧುರ್ಯವನ್ನು, ಅದರ ಕಂಪನ್ನು, ಅಲ್ಲಿ ನೆರೆದಿದ್ದ ವಿವಿಧ ರಾಷ್ಟ್ರಗಳ ಪ್ರತಿನಿಧಿಗಳಿಗೆ ಪರಿಚಯಿಸಿದರು. ಆ ಮೂಲಕ ಕರ್ನಾಟಕ ಸಂಗೀತಕ್ಕೆ ಒಂದು ರೀತಿಯಲ್ಲಿ ಜಾಗತಿಕ ಮನ್ನಣೆ ತಂದುಕೊಟ್ಟುದಲ್ಲದೆ ತಾವೂ ಜಗದ್ವಿಖ್ಯಾತರಾದರು.

ಸಹಜವಾಗಿಯೇ ಒದಗಿಬಂದ ಕಂಠಸಿರಿಯನ್ನು ಅತ್ಯಂತ ಜೋಪಾನವಾಗಿ ಕಾಪಾಡಿಕೊಂಡು, ಅದು ದೈವಕ್ಕೇ ಮೀಸಲು ಎಂಬುದನ್ನು ಮನಗಂಡು ಮತ್ತೆ ಆ ಸರ್ವವ್ಯಾಪಿಗೇ ಅದನ್ನು 'ಕೃಷ್ಣಾರ್ಪಣಮಸ್ತು' ಎಂದು ಅರ್ಪಿಸಿದವರು ಮಹಾನ್ ಗಾಯಕಿ 'ಸುಸ್ವರಲಕ್ಷ್ಮಿ – ಸುಬ್ಬುಲಕ್ಷ್ಮಿ'. ಈ ೨೦೧೬ನೇ ವರ್ಷ ಈ ಮಹಾನ್ ಮಾನವೀಯ ಮೌಲ್ಯಗಳುಳ್ಳ ಭಾರತರತ್ನಕ್ಕೆ ಜನ್ಮ ಶತಮಾನೋತ್ಸವದ ಸಂಭ್ರಮ. ಈ ಅಮರ ಗಾಯನಕ್ಕೆ ಇದೋ ಈ ನಮನ.

**ಕಲಾವತಿ ಅವಧೂತ್**

'ಶ್ರೀ ದತ್ತ ಧಾಮ', ನಂ. ೧೧/೧ (ಹಳೇ ನಂ. ೧೫೨), ೭ನೇ ಅಡ್ಡರಸ್ತೆ ೫ನೇ ಮುಖ್ಯರಸ್ತೆ
ದೇವನಾಥಚಾರ್ ಸ್ಟ್ರೀಟ್, ಚಾಮರಾಜಪೇಟೆ, ಬೆಂಗಳೂರು – ೫೬೦ ೦೧೮

ವಚನಕಾರ್ತಿಯರಂತೂ ಹೊರಗಿನ ಯಾರನ್ನೂ ತನ್ನ ಕೇಡಿಗೆ ಹೊಣೆ ಮಾಡುವುದಿಲ್ಲ. ತನ್ನ ದೇಹ ಮತ್ತು ಮನಸ್ಸನ್ನು ಪ್ರಾಮಾಣಿಕವಾಗಿ ಇದಿರಾಗುತ್ತಲೇ ಅನುಭಾವವನ್ನು ನಿಭಾಯಿಸುವ ವಚನಕಾರ್ತಿಯರು ಇಂದ್ರಿಯ ಸಮೇತ ಬಾಳುವ ಮನುಷ್ಯನ ಎಲ್ಲ ಇಕ್ಕಟ್ಟುಗಳನ್ನು ನಿರ್ವಹಿಸುತ್ತಲೇ ಪರಮಾರ್ಥ ಸಾಧನೆಯನ್ನು ಮಾಡಬೇಕೆನ್ನುವ ನಿಲುವಿನವರು.

‘ವಚನಕಾರ್ತಿಯರ ಲೋಕದೃಷ್ಟಿ’ ಎನ್ನುವ ತಲೆಬರಹದ ಹಿಂದೆ ಕೆಲವು ಗೃಹೀತಗಳಿವೆ. ಮೊದಲನೆಯದಾಗಿ, ಅವರ ಲೋಕದೃಷ್ಟಿ ವಚನಕಾರರಿಗಿಂತ ಭಿನ್ನವಿರಬಹುದು ಎನ್ನುವುದು. ಎರಡನೆಯದಾಗಿ, ವಚನಕಾರರ ರೀತಿಯಲ್ಲಿಯೇ ವಚನಕಾರ್ತಿಯರೂ ಯೋಚಿಸಬೇಕಿಲ್ಲ, ಯಾಕೆಂದರೆ ಸಂಸಾರ ಹೇಯಸ್ಥಲವೆನ್ನುವುದು ವಚನಕಾರರಿಗೆ ಸಾಧ್ಯವೇ ಹೊರತು ಹೆಣ್ಣು ಸಂಸಾರವನ್ನು ಹೇಯವಾಗಿ ಕಾಣಲಾರಳು ಎನ್ನುವುದು. ವರ್ತಮಾನದ ಸ್ತ್ರೀವಾದಿ ಯೋಚನಾ ಧಾಟಿಯನ್ನು ಇಲ್ಲಿಯೂ ಕಾಣಬಹುದೇ ಎನ್ನುವ ಸಂಶಯವು ಮತ್ತೊಂದು. ಇವೆಲ್ಲ ಪ್ರಶ್ನೆಗಳಿಗೆ ವಚನಕಾರ್ತಿಯರಲ್ಲಿ ಹೆಚ್ಚಿನ ಪ್ರಾಶಸ್ತ್ಯವೇನೂ ಇದ್ದಂತಿಲ್ಲ. ಏಕೆಂದರೆ, ಹೇಳಿಕೇಳಿ ಇದು ಇಂತಹ ಭಿನ್ನ ತಾರತಮ್ಯಗಳ ಸಾಂಸ್ಕೃತಿಕ, ಸಾಮಾಜಿಕ, ಲೌಕಿಕ ಸಂರಚನೆಗಳನ್ನು ದಾಟಿದ ಲೋಕ. ಇದು ‘ನಡುವೆ ಸುಳಿವಾತ್ಮದ’ ಸಂಗತಿಯಾಗಿರುವುದರಿಂದ, ಹಾಗೆ ವಚನಕಾರ್ತಿಯರಿಗೇ ವಿಶೇಷವಾದ ಲೋಕದೃಷ್ಟಿಯ ಬಗೆಗೆ ಮಾತನಾಡ ಬಹುದು ಎನ್ನುವುದರ ಬಗೆಗೆ ನನಗೆ ವೈಯಕ್ತಿಕವಾಗಿಯಂತೂ ವಿಶ್ವಾಸವಿಲ್ಲ. ಹಾಗಾಗಿ, ಒಟ್ಟಾರೆ ವಚನಪರಂಪರೆಯ ಭಾಗವಾಗಿ ವಚನಕಾರ್ತಿಯರ ಅಭಿವ್ಯಕ್ತಿಯನ್ನು ನೋಡಬಹುದೇ ಹೊರತು ಒಡೆದು ಕಾಣುವ ಹಾಗೆ ಮತ್ತೊಂದು ಚಿಂತನಾಕ್ರಮವೊಂದನ್ನು ಹುಡುಕುವುದು ದೂರಾನ್ವಯದ ಸಂಗತಿ. ಸುಮಾರು ಹದಿನಾಲ್ಕು ವಚನ ಸಂಪುಟಗಳು ವಚನಕಾರರದಿದ್ದರೆ, ಒಂದು ಸಂಪುಟ ಮಾತ್ರ ವಚನಕಾರ್ತಿಯರದಿದೆ. ತತ್ವಪದಕಾರರ ಸಂದರ್ಭ ದಲ್ಲಿಯೂ ಇದು ಹೀಗೇ ಇದೆ. ಹಾಗೆಂದ ಮಾತ್ರಕ್ಕೆ ಸಾಧಕ ಬದುಕಿನಲ್ಲಿ ಅವರು ಹಿಂದೆ ಬಿದ್ದಿದ್ದಾರೆ ಎಂದೇನೂ ಅಲ್ಲ. ಒಟ್ಟು ೩೩ ವಚನಕಾರ್ತಿಯರ ೧೧೦೪ ವಚನಗಳ ಸಂಗ್ರಹವಿದೆ. ಮುಖ್ಯವಾಗಿ ಅಕ್ಕಮಹಾದೇವಿ, ಅಕ್ಕಮ್ಮ, ಅಮುಗೆ ರಾಯಮ್ಮ, ಆಯ್ದಕ್ಕಿ ಲಕ್ಕಮ್ಮ, ನಾಗಲಾಂಬಿಕೆ, ನೀಲಮ್ಮ, ಮುಕ್ತಾಯಕ್ಕ, ಲಿಂಗಮ್ಮ ಮುಂತಾದವರ ವಚನಗಳು ಸಂಗ್ರಹಗೊಂಡಿವೆ.

ಇನ್ನು, ಈಗಾಗಲೇ ಬಹುವಾಗಿ ಚರ್ಚಿತವಾಗಿರುವ ವಚನತಾತ್ವಿಕತೆಯ ಚೌಕಟ್ಟಿನೊಳಗೇ ವಚನಕಾರ್ತಿಯರನ್ನು ಚರ್ಚಿಸಬೇಕೆನ್ನುವ ಪ್ರಶ್ನೆಯೊಂದನ್ನು ಮೊದಲಿಗೇ ಇದಿರಾಗಬೇಕೆನ್ನಿಸಿತು. ಇಂತಹ ಯಾವ ಚೌಕಟ್ಟುಗಳೂ ಇಲ್ಲದ ಯೋಚನಾಕ್ರಮವೇ ಸರಿಯಾದುದು ಮತ್ತು ಸಿದ್ಧ ಚೌಕಟ್ಟುಗಳ ಗೊಡವೆಗೆ ಹೋಗದೆ ತಾಕ್ಷಣಿಕತೆಯು ಒದಗಿಸಿಕೊಡುವ ಸರಿ–ತಪ್ಪುಗಳನ್ನು ನಂಬುವುದೇ ಒಳಿತೆನ್ನಿಸಿದುದರಿಂದ ಇದು ಅಂತಹ ಒಂದು ಪ್ರಯತ್ನವೆಂದು ಭಾವಿಸಲು

**ಎಸ್. ನಟರಾಜ ಬೂದಾಳು**





# ಅನುಭಾವ

# ವಚನಕಾರ್ತಿಯರ ಲೋಕದೃಷ್ಟಿ









ಕೋರುತ್ತೇನೆ. ಅಂತಹ ಸೂಚನೆಗಳು ವಚನಗಳ ಒಳಗಿನಿಂದಲೂ ದೊರೆಯುತ್ತವೆ. ನಡುವೆ ಸುಳಿವಾತ್ಮವು ನುಡಿವ ಮಾತಾಗಿರುವುದರಿಂದ ಇದು ಕತ್ತಿಯಂಚಿನ ನಡೆ ಎಂಬ ಭಯವೂ ನನಗಿದೆ. ಅನುಭವಕ್ಕೆ ಮಾತ್ರ ದಕ್ಕುವ ಸಂಗತಿಯನ್ನು ಕೇವಲ ತತ್ವಸಂಹಿತೆಯೊಡನೆ ಇದಿರಾಗುವಾಗಿನ ಎಲ್ಲ ಇತಿಮಿತಿಗಳೂ ಈ ಮಾತುಕತೆಗೆ ಇದೆ.

ವಚನಗಳ ಒಂದು ಜನಪ್ರಿಯ ಓದು ನಮ್ಮ ನಡುವೆ ಚಾಲ್ತಿಯಲ್ಲಿದೆ. ಈ ಮಾದರಿಯ ಓದುಗಳಲ್ಲಿ ಕೆಲವೇ ವಚನಗಳನ್ನು ತಿರುಗಾ ಮುರುಗಾ ಉದ್ಧರಿಸಲಾಗುತ್ತದೆ. ಅವಿಷ್ಟೇ ವಚನಗಳಿಂದ ವಚನಕಾರರು ಹಾಗಿದ್ದರು ಹೀಗಿದ್ದರು, ಅವರ ನಿಲುವು ಹಾಗೆ ಹೀಗೆ ಎನ್ನುವ ತೀರ್ಮಾನಗಳನ್ನು ಪ್ರಕಟಿಸಲಾಗುತ್ತದೆ. ಅನೇಕ ಸಾರಿ ಇದು ರಸವಾದಿ ಓದಿನ ಕಡೆಗೇ ಹೆಚ್ಚು ವಾಲುತ್ತದೆ. ಅಲ್ಲಮನನ್ನು ಮುಕ್ತಾಯಕ್ಕ ಹೇಗೆ ಹಿಗ್ಗಾ ಮುಗ್ಗಾ ಜಗ್ಗಿಸಿ ಕೇಳಿದಳು ಎನ್ನುವುದನ್ನು 'ನಾನೇ ಆವಾಗ ಎದುರಿಗಿದ್ದೆ' ಎನ್ನುವಂತೆ ನಾಟಕೀಯವಾಗಿ ನಿರೂಪಿಸುವುದನ್ನೂ ಕೇಳಿದ್ದೇವೆ. ಹಾಗಾಗಿ, ಸಂಪಾದನೆಯ ಯುಗ ಇನ್ನೂ ಮುಗಿದಿಲ್ಲ; ಅದು ನಿರ್ದಿಷ್ಟ ಜನಪ್ರಿಯ ಪಾಂಥಿಕ ಉದ್ದೇಶದೊಡನೆ ಮುಂದುವರಿದಿದೆ ಎಂದೇ ಹೇಳಬೇಕು. ವಚನಕಾರ್ತಿಯರಲ್ಲಿ ಅಕ್ಕನನ್ನು ಬಿಟ್ಟರೆ ಉಳಿದವರನ್ನು ಕುರಿತ ಓದುಗಳಾಗಲಿ, ಮಾತುಕತೆಗಳಾಗಲಿ, ಕಡಿಮೆಯೆಂದೇ ಹೇಳಬೇಕು. ವಚನಗಳನ್ನು ಸಂದರ್ಭಮುಕ್ತವಾಗಿ ಓದುವ ಕ್ರಮವನ್ನು ಬಹುಪಾಲು ನಾವು ಒಪ್ಪಿಕೊಂಡುಬಿಟ್ಟಿದ್ದೇವೆ. ಹಾಗೆ ಯಾವ ವಚನವೂ ಸಂದರ್ಭಮುಕ್ತವಾಗಿ ಕೇವಲ ಉಪದೇಶದಂತೆ ಕಟ್ಟಿ ನುಡಿದದ್ದಲ್ಲವೆಂಬುದನ್ನು ಶೂನ್ಯ ಸಂಪಾದನೆಗಳೂ ಹೇಳುತ್ತಿವೆ. ಆದರೆ ಹಾಗೆ ಸಂದರ್ಭವೊಂದನ್ನು ಜೋಡಿಸಿಕೊಳ್ಳುವುದೂ ಕೂಡ ವಚನದ ಅನೇಕ ಓದುಗಳಲ್ಲಿ ಒಂದನ್ನು ಮುಂದಿಡುತ್ತಿರುತ್ತದೆ ಎನ್ನುವುದನ್ನು ಗಮನಿಸಬೇಕಾಗಿದೆ. ಇವಿಷ್ಟು ಪ್ರಾಥಮಿಕ ಸಂಗತಿಗಳೊಡನೆ ವಚನಕಾರ್ತಿಯರ ಕೆಲವು ನಿಲುವುಗಳನ್ನು ಒಂದು ಪಾರ್ಶ್ವಿಕ ಓದಿನ ಮಿತಿಗಳೊಡನೆ ಮುಂದಿಡಬಯಸುತ್ತೇನೆ.

ಅನುಭಾವ ಪದಕ್ಕೆ ಏನೇನೆಲ್ಲ ಅರ್ಥಗಳನ್ನು ಸೂಚಿಸಿಯೂ ಇದೇ ಅದರ ಅರ್ಥವೆಂದು ಯಾರೂ ಹೇಳಿಲ್ಲ. ಆ ಪದಕ್ಕೆ ಇರುವ ಅನೇಕ ಅರ್ಥಗಳಲ್ಲಿ 'ಜೊತೆಯಲ್ಲಿ ಬೆರೆಯುವುದು' ಎನ್ನುವುದೂ ಕೂಡ ಒಂದು ಅರ್ಥ – ಅನುವೆಂದರೆ ಜೊತೆಯಲ್ಲಿ ಮತ್ತು ಭಾವವೆಂದರೆ ಇರುವುದು ಎಂಬರ್ಥದಲ್ಲಿ. ಯಾವುದರ ಜೊತೆಗೆ ಬೆರೆತುಹೋಗುವುದು ? ಇದಕ್ಕೆ ಅನೇಕ ವಿವರಣೆಗಳಿವೆ. ಬೆರೆಯುವವರು ಮತ್ತು ಬೆರೆಯಬೇಕಾದ್ದು ಬೇರೆ ಬೇರೆ ಎನ್ನುವುದೊಂದು ನಿಲುವು; ಬೆರೆಯಬೇಕಾದ್ದು, ಬೆರೆಯುವವರು ಒಂದೇ ಎನ್ನುವುದು ಇನ್ನೊಂದು ನಿಲುವು, ಬೆರೆಯುವವರು ಮತ್ತು ಬೆರೆಯಬೇಕಾದ್ದನ್ನು ನಿರ್ವಹಿಸುತ್ತಿರುವ ಮತ್ತೊಂದಿದೆ, ಅದೇ ಎಲ್ಲದರಲ್ಲೂ ಇದೆ ಎನ್ನುವುದು ಬೇರೊಂದು ನಿಲುವು, ಬೆರೆಯುವವರು ಮತ್ತು ಬೆರೆಯಬೇಕಾದ್ದು ಇವುಗಳಿಗೆ ಸ್ವತಂತ್ರ ಅಸ್ತಿತ್ವವಿಲ್ಲ ಇವೇನಿದ್ದರೂ ಸಂಬಂಧದಲ್ಲಿ ಉಂಟಾಗುತ್ತವೆ ಮತ್ತು ಸದಾ ಬದಲಾಗುತ್ತಲೇ ಇರುತ್ತವೆ ಹಾಗೂ ಇವುಗಳಿಗೆ ಅತಿರಿಕ್ತವಾದ್ದು ಯಾವುದೂ ಇಲ್ಲ ಎನ್ನುವುದು ಇನ್ನೂ ಒಂದು ನಿಲುವು. ನಾವು ಯಾವ ನಿಲುವನ್ನು ಆಧರಿಸಿ ಲೋಕದೊಡನೆ ಒಡನಾಡುತ್ತೇವೆಯೋ ಅದಕ್ಕನುಗುಣವಾಗಿ ನಮ್ಮ ಮತ್ತು ಲೋಕದ ಸಂಬಂಧ ಏರ್ಪಡುತ್ತದೆ. ಅಕ್ಕ ಸೂಚಿಸುವ ಅನುಭಾವ ಇದು :

*ಅಂಗವ ಲಿಂಗಮುಖದಲ್ಲಿ ಅರ್ಪಿಸಿ ಅಂಗ ಅನಂಗವಾಯಿತ್ತು*
*ಮನವ ಅರಿವಿಂಗರ್ಪಿಸಿ ಮನ ಲಯವಾಯಿತ್ತು*
*ಭಾವವ ತೃಪ್ತಿಗರ್ಪಿಸಿ ಭಾವ ಬಯಲಾಯಿತ್ತು*
*ಅಂಗ ಮನ ಭಾವವಳಿದ ಕಾರಣ ಕಾಯ ಅಕಾಯವಾಯಿತ್ತು*
*ಎನ್ನ ಕಾಯದ ಸುಖಭೋಗವ ಲಿಂಗವೆ ಭೋಗಿಸುವನಾಗಿ*
*ಶರಣಸತಿ ಲಿಂಗಪತಿಯಾದೆನು*
*ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ*
*ಒಳಹೊಕ್ಕು ಬೆರಸಿದೆನು*

ಅಕ್ಕ ಈ ಸಂಬಂಧವನ್ನು ಸತಿ–ಪತಿ ಸಂಬಂಧವಾಗಿ ನೋಡುತ್ತಿದ್ದಾಳೆ. ಈ ಲೋಕದ ಪ್ರವಾಹದಲ್ಲಿ ಸಮರಸಗೊಳ್ಳಬೇಕಾದರೆ ಅದು ಸತಿ–ಪತಿ ಭಾವದಲ್ಲಿ ಮಾತ್ರ ಸಾಧ್ಯ. ತಾನು ಮತ್ತು ಇದಿರು ಬೇರೆ ಬೇರೆ ಎಂದಾದರೆ ಅಥವಾ ಒಂದೇ ಎಂದಾದರೆ ಬೆರೆಯುವಿಕೆ ಸಾಧ್ಯವೇ ಇಲ್ಲ. ತಾನು ಮತ್ತು ಇದಿರು ಒಂದೇ ಎನ್ನುವುದೂ ಜಡ ಜಗತ್ತು, ಬೇರೆ ಬೇರೆ ಎನ್ನುವುದೂ ಜಡ ಜಗತ್ತು. ಇವೆರಡನ್ನೂ ನಿವಾರಿಸಿಕೊಳ್ಳುವ ಮಾತನ್ನು ಅಕ್ಕ ಆಡುತ್ತಿದ್ದಾಳೆ. ಗಂಡ ಹೆಂಡತಿಯಂತೆ ಬೇರೆ ಇದ್ದೂ ಬೆರೆಯಬಲ್ಲ, ಬೆರೆತೂ ಬೇರೆ ಇರಬಲ್ಲ ಆಹ್ವಾನ ಮತ್ತು ವಿಸರ್ಜನೆಯ ನಿಸರ್ಗ ನಡೆಯನ್ನು ತನ್ನದಾಗಿಸಿಕೊಳ್ಳುವುದನ್ನು ಅಕ್ಕ ಅನುಭಾವವಾಗಿ ಪರಿಭಾವಿಸುತ್ತಾಳೆ.

ಈ ಒಳಹೊಕ್ಕು ಬೆರೆಯುವುದಕ್ಕೆ ಇರುವ ಅಡ್ಡಿಗಳನ್ನು ಪಟ್ಟಿಮಾಡಿ ಒಂದೊಂದನ್ನೂ (ಕಾಯ, ಮನ, ಭಾವ) ನಿರಸನಗೊಳಿಸಿಕೊಳ್ಳಬೇಕಾದ ಅಗತ್ಯವನ್ನೂ ಹಾಗೆ ನಿರಸನಗೊಂಡನಂತರದ ಲೋಕಾನುಸಂಧಾನವನ್ನು ಅಕ್ಕ ಶರಣಸತಿ–ಲಿಂಗಪತಿ ಸಂಬಂಧದ ಮೂಲಕ ಸೂಚಿಸುತ್ತಾಳೆ. ಕಾಯವನ್ನು ಅಕಾಯಗೊಳಿಸುವ, ಮನಸ್ಸನ್ನು ಅಮನಸ್ಕಗೊಳಿಸುವ ಸಾಧನೆಯ ಮಹತ್ತನ್ನು ಅನುಭಾವಿಗಳು ನಾನಾ ರೀತಿಯಲ್ಲಿ ಹೇಳಿದ್ದಾರೆ. ಅದು ಮನದ ಸಂಚ(ಸಂಗ್ರಹ)ದಿಂದ ಮುಕ್ತವಾಗಿ ವ್ಯವಹರಿಸುವ ಕ್ರಮ. ಹೀಗೆ ತನ್ನ ಮನೋಸಂರಚನೆಗಳನ್ನು ಇಲ್ಲವಾಗಿಸಿಕೊಳ್ಳದ ಹೊರತು ಇದಿರಿನ ಜೊತೆಗೆ ಸೇರುವುದು ಸಾಧ್ಯವಾಗದು. ವಚನಕಾರ್ತಿಯರಲ್ಲಿ ಅತಿ ಹೆಚ್ಚಿನ ವಚನಗಳು ತನ್ನನ್ನೇ ನೀಡುವ ಬಗೆಗೆ ಇವೆ. ತನ್ನನ್ನು ಚೆನ್ನಮಲ್ಲಿಕಾರ್ಜುನನಿಗೋ, ಉರಿಲಿಂಗದೇವನಿಗೋ, ಇನ್ನಿಲ್ಲದಂತೆ ನೀಡುವ, ಕೂಡುವ ಮಾತುಗಳಿವೆ. 'ಹರನೆ ಎನ್ನ ಕುಂಭಕುಚದ ಮೇಲೆ ನಿನ್ನನೆಂದೆತ್ತಿಕೊಂಬೆನಯ್ಯಾ, ಅಂಗಭಂಗ ಮನಭಂಗವಳಿದು ನಿಮ್ಮನೆಂದಿಗೊಮ್ಮೆ ನೆರೆವೆನಯ್ಯಾ ಚನ್ನಮಲ್ಲಿಕಾರ್ಜುನಾ' ಎಂಬುದಾಗಿಯೋ,

*ನಲ್ಲನ ಕೂಡುವನ್ನಕ್ಕ ಸುಖದ ಸುಗ್ಗಿಯನೇನೆಂದರಿಯೆ ಕೇಳಾ ಕೆಳದಿ*
*ಸುಖದ ಸವಿಗೆ ಸ್ರವಿಸಿ ಕೂಡಿದೆ ನೋಡವ್ವ*
*ತವಕಕ್ಕೆ ತವಕ ಮಿಗೆ ಮೇಲುವರಿದು ಕೂಡಿದಂತೆ*
*ಕೂಡುವೆನುರಿಲಿಂಗದೇವನ*

*(ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆಯದಿರಬೇಕು)*

ವಚನಕಾರ್ತಿಯರು ಮತ್ತಿತರ ಪ್ರಸ್ಥಾನಗಳ ಅನುಭಾವಿಗಳಂತೆ, ಉದಾಹರಣೆಗೆ ಸರಹನಂತೆ, ಲೋಕಾನುಸಂಧಾನವನ್ನು ಸುರತದ ಪ್ರತಿಮೆಗಳನ್ನು ಬಳಸಿ ನುಡಿಯುತ್ತಾರೆ. ಅಕ್ಕನಿಗೆ ತನ್ನ ಹೊರತು ಉಳಿದ ಏನನ್ನು ನೀಡಿದರೂ ಅದು ಸಮನಲ್ಲ. ಬಹುಪಾಲು ಎಲ್ಲ ಅನುಭಾವಿಗಳೂ ಇದೇ ದನಿಯಲ್ಲಿ ಮಾತನಾಡುತ್ತಾರೆ.

*ಅನ್ನವ ನೀಡುವವರಿಂಗೆ ಧಾನ್ಯವೆಸೆವ ಲೋಕ*
*ಅರ್ಥವ ಕೊಡುವವರಿಂಗೆ ಪಾಷಾಣವೆಸೆವ ಲೋಕ*
*ಹೆಣ್ಣು ಹೊನ್ನು ಮಣ್ಣು ಮೂರನೂ*
*ಕಣ್ಣಿನಲಿ ನೋಡಿ ಕಿವಿಯಲಿ ಕೇಳಿ*
*ಕೈಯಲಿ ಮುಟ್ಟಿ ಮಾಡುವ ಭಕ್ತಿ*
*ಸಣ್ಣವರ ಸಮಾರಾಧನೆಯಾಯಿತ್ತು*
*ತನ್ನನಿತ್ತು ತುಷ್ಟಿವಡೆವರನೆನಗೆ ತೋರಾ*
*ಶ್ರೀಗಿರಿ ಚೆನ್ನಮಲ್ಲಿಕಾರ್ಜುನಾ*

ತನ್ನನ್ನು ಇಡಿಯಾಗಿ ಲೋಕಪ್ರವಾಹದೊಳಗೆ ಬೆರೆಸದ ಹೊರತು ಅನುಭಾವ ಸಾಧ್ಯವಿಲ್ಲ. ಹೀಗೆ ತನ್ನನ್ನು ಇಲ್ಲವಾಗಿಸಿಕೊಂಡು ಎಲ್ಲದರೊಡನೆ ಪೂರ್ಣವಾಗಿ ಬೆರೆಯುವ ಅನುಭವ ಕೇವಲ ಬಾಯ ಬ್ರಹ್ಮಕ್ಕೆ ಸಾಧ್ಯವಾಗದು. ಹೀಗೆ ಜೊತೆಯಲ್ಲಿರುವುದು ಎನ್ನುವುದನ್ನು ಅನುಭಾವ ಪದ ಸೂಚಿಸುತ್ತದೆ ಎನ್ನುವುದಕ್ಕೆ ಸತ್ಯಕ್ಕನ ಒಂದು ವಚನವನ್ನು ಗಮನಿಸಬಹುದು :




*ಇನಿಯಂಗೆ ತವಕವಿಲ್ಲ ಎನಗೆ ಸೈರಣೆಯಿಲ್ಲ*
*ಮನದಿಚ್ಛೆಯನರಿವ ಸಖಿಯರಿಲ್ಲ ಇನ್ನೇವೆನವ್ವಾ*
*ಮನಮಥವೈರಿಯ ಅನುಭಾವದಲ್ಲಿ ಎನ್ನ ಮನ ಸಿಲುಕಿ ಬಿಡದು*
*ಇನ್ನೇನ ಮಾಡುವೆನೆಲೆ ಕರುಣವಿಲ್ಲದ ತಾಯೆ*
*ದಿನ ವೃಥಾ ಹೋಯಿತ್ತಾಗಿ ಯೌವ್ವನ ಬೀಸರವಾಗದ ಮುನ್ನ*
*ಪಿನಾಕಿಯ ನೆರೆಯವ್ವಾ ಶಂಭುಜಕ್ಕೇಶ್ವರನ* *(ಸತ್ಯಕ್ಕ)*

– ಹೀಗೆ ಲೋಕಪ್ರವಾಹದಲ್ಲಿ ಬೆರೆಯುವ ಸಾಧನೆಯು ಭಾರತದ ಬಹುಪಾಲು ಎಲ್ಲ ಅನುಭಾವೀ ಧಾರೆಗಳಲ್ಲಿ ಕಾಣುವ ಸಂಗತಿ ಮತ್ತು ಇಂತಹ ಅನುಭವವನ್ನು ಸತಿಪತಿಯರ ಸುರತಕ್ಕೆ ಹೋಲಿಸುವುದರಿಂದ ಅದು ಅನುಭವಕ್ಕೆ ದಕ್ಕುವ ಸಂಗತಿಯೇ ಹೊರತು ವ್ಯಾಖ್ಯಾನಕ್ಕಲ್ಲ ಎನ್ನುವ ಸೂಚನೆಯೂ ಇದೆ. ಈ ಲೋಕಸಂಬಂಧದ ಪರಿಯನ್ನು ಅಕ್ಕನ ವಚನ ಇನ್ನಷ್ಟು ಸ್ಪಷ್ಟಪಡಿಸಿ ನುಡಿಯುತ್ತದೆ :

*ಗಂಡ ನೀನು ಹೆಂಡತಿಯಾನು ಮತ್ತೊಬ್ಬರಿಲ್ಲಯ್ಯ*
*ನಿನ್ನ ಬೆಂಬಳಿಯಲಾನು ಮಚ್ಚಿ ಬಂದೆ*
*ಕಂಡಕಂಡವರೆಲ್ಲ ಬಲುಹಿಂದ ಕೈ ಹಿಡಿದರೆ*
*ಗಂಡಾ ನಿನಗೆ ಸೈರಣೆಯೆಂತಾಯಿತ್ತು ಹೇಳಾ*
*ಚನ್ನಮಲ್ಲಿಕಾರ್ಜುನಯ್ಯಾ*
*ನಿನ್ನ ತೋಳ ಮೇಲಣವಳನನ್ಯರೆಳೆದೊಯ್ಯುವರೆ*
*ನೋಡುತಿಹುದುಚಿತವೆ ಕರುಣಿಗಳರಸಾ*

ಇದೇನು ಅನುಭಾವದ ಬಗೆಗೆ ಮಾತನಾಡುತ್ತಿದ್ದಾರೋ ಅಥವಾ ಸುರತದ ಬಗೆಗೆ ಮಾತನಾಡುತ್ತಿದ್ದಾರೋ ಎಂದು ಅಚ್ಚರಿಪಡುವಷ್ಟು ಇಂತಹದೇ ಪ್ರತಿಮೆಗಳು ಬಳಕೆಯಾಗಿವೆ. ಈ ವಿವರಣೆಯನ್ನು ಗಮನಿಸಿದರೆ ಅನುಭಾವವನ್ನು ಜ್ಞಾತೃ, ಜ್ಞಾನ ಮತ್ತು ಜ್ಞೇಯಗಳ ಸಂಬಂಧದ ವ್ಯಾಖ್ಯಾನದಲ್ಲಿ ಮತ್ತು ಅನುಭವಕ್ಕೆ ನಿಷ್ಠನಾಗಿ ಮಾಡಬೇಕೇ ಹೊರತು ಹೊರಗಿನ ಅನ್ಯಸಂಗತಿಯೊಂದರ ಮೂಲಕ ವ್ಯಾಖ್ಯಾನಿಸಲಾಗದು. ಕೇವಲ ತಾತ್ವಿಕ ಸಂಹಿತೆಗೆ ಅನುಭಾವ ಇಡಿಯಾಗಿ ದಕ್ಕಲಾರದು ಎನ್ನುವುದನ್ನು ಈ ವಚನಗಳು ದೃಢಪಡಿಸುತ್ತಿವೆ. ಅದರಲ್ಲಿಯೂ ವಚನಕಾರ್ತಿಯರ ವಚನಗಳಲ್ಲಿ ಅನೇಕ ಸಾರಿ ಕಾಣುವ 'ಅಪ್ಪಿದರೆ ಅಸ್ಥಿಗಳು ನುಗ್ಗಿ ನುಸಿಯಾಗಬೇಕು' ಎನ್ನುವ ತೀವ್ರತೆ ವಚನಕಾರ್ತಿಯರಿಗೇ ವಿಶೇಷವೆಂದರೆ ಒಪ್ಪಬಹುದೆನ್ನಿಸುತ್ತದೆ. ಅವರೆಲ್ಲ ಅನುಭಾವದ ನಿಲುವನ್ನು ಕುಟುಂಬದ ಮತ್ತು ಸತಿ–ಪತಿ ಭಾವದ ನೆರವಿನಿಂದಲೇ ನುಡಿಯುತ್ತಾರೆ. ವಚನಕಾರ್ತಿಯರು ಸಂಸಾರ–ಮುಕ್ತಿಯನ್ನು ಬೇರೆ ಬೇರೆ ಎಂದು ನೋಡಲಾರರು. ಯಾವ ಅರಿವು ಮುಕ್ತಿಗೆ ಕಾರಣವೋ ಅದೇ ಅರಿವು ಬದುಕಿಗೂ ಅಗತ್ಯವಾದುದು. ಬದುಕಲು ಒಂದು ಜ್ಞಾನ ಮುಕ್ತಿ ಪಡೆಯಲು ಇನ್ನೊಂದು ಎಂಬುದಿಲ್ಲ. ಹಾಗಾಗಿ ಸಂಸಾರ ಹೇಯಸ್ಥಲ ಮುಂತಾದ ಸ್ಥಲಕಟ್ಟಿನ ಅನ್ವಯ ದೂರಾನ್ವಯದಂತೆ ಗೋಚರಿಸುತ್ತದೆ. ಸ್ಥಲಕಟ್ಟಿನ ಸಾಧನೆಯ ಬಗೆಗೆ ಅನೇಕ ವಚನಗಳನ್ನು ವಚನಕಾರ್ತಿಯರಲ್ಲಿ ಕಾಣಬಹುದು. ಆದರೆ ಅವರ ಮಾರ್ಗ ವಿಹಂಗ ಮಾರ್ಗವೇ ಎನ್ನಿಸುತ್ತದೆ. ವಚನಕಾರರಲ್ಲಿ ಹಲವರು ಪಿಪೀಲಿಕ ಮಾರ್ಗದವರು. (ಅಂದರೆ ಇರುವೆಯಂತೆ ತೆವಳುತ್ತ ತೆವಳುತ್ತ ಮರವ ಹತ್ತಿ ಹಣ್ಣ ಮೆಲ್ಲುವ ಕ್ರಿಯಾ ಮಾರ್ಗ). ಅಲ್ಲಮ, ಮಾಧಾರ ಧೂಳಯ್ಯ, ಮರುಳು ಶಂಕರದೇವನಂಥವರ ಮಾರ್ಗ ವೇನಿದ್ದರೂ ವಿಹಂಗಮಾರ್ಗ (ನೇರವಾಗಿ ಆಕಾಶಮಾರ್ಗದಿಂದ ಬಂದು ಹಣ್ಣ ಮೇಲೆ ಕೂರುವ ಜ್ಞಾನ ಮಾರ್ಗ).

**ಭಾಷೆ ಒಡ್ಡುವ ತೊಡಕು**

ಮತ್ತೊಂದು ಪ್ರಮುಖ ಚರ್ಚಿತ ಸಂಗತಿಯೆಂದರೆ ಶಬ್ದ ಮುಗ್ಧನಾಗುವ ಅಥವಾ ಶಬ್ದ ಮುಕ್ತನಾಗುವ ಅವಸ್ಥೆಯದ್ದು. ಅನುಭಾವಿಗಳಿಗೆ ಭಾಷಿಕ ಪ್ರಪಂಚ ಒಡ್ಡುವ ತೊಡಕನ್ನು ನಿವಾರಿಸಿಕೊಳ್ಳಬೇಕಾದುದು ಅನಿವಾರ್ಯ ಸಂಗತಿ. ಭಾಷೆ ಕ್ರಿಯಾಶೀಲವಾಗಿದೆ ಎಂದರೆ ಅದು ಸಂರಚನೆಯ ಉದ್ಯೋಗದಲ್ಲಿ ತೊಡಗಿದೆ ಎಂದೇ ಅರ್ಥ. ನಿರಚನೆಯ ಉದ್ಯೋಗಕ್ಕೆ ಹೊರಟ ಅನುಭಾವಿಗೆ ಭಾಷೆ ಸಹಜವಾಗಿಯೇ ತೊಡರಾಗುತ್ತದೆ. ಅದನ್ನು ಸುಮ್ಮನಾಗಿಸದ ಹೊರತು ಮುನ್ನಡೆಯಲು ಸಾಧ್ಯವಿಲ್ಲ. ಅದಕ್ಕೆ ಅಂಧಕನ ಕೈಯ ಅಂಧಕನು ಹಿಡಿದಾಗ ಮಾತ್ರ ಭಾಷೆ ಸುಮ್ಮನಾಗುತ್ತದೆ. ಕಣ್ಣಿರುವವರು ದಾರಿಯನ್ನು ನಿಶ್ಚಿತಗೊಳಿಸುತ್ತಲೇ ಇರುತ್ತಾರೆ. ಮಾತು ದಾರಿಯಾದಾಗ ಉಂಟಾಗುವ ಸ್ಥಗಿತತೆ ಅದು; ಆದರೆ ಮಾತು ಹಚ್ಚಿಟ್ಟ ಜ್ಯೋತಿಯಾಗಿ ದಾರಿ ತನ್ನದೇ ಆಯ್ಕೆಯಾದಾಗ ಮಾತ್ರ ಅದು ಜ್ಯೋತಿರ್ಲಿಂಗ.

*ಅರಿವನಣಲೊಳಗಿಕ್ಕಿ ಅಗಿವುತ್ತಿದೆ ಮರ್ತ್ಯಲೋಕವೆಲ್ಲವು.*
*ಅರಿವು ಉಳಿಯಲರಿಯದೆ ಕೆಟ್ಟಿತ್ತು ಲೋಕವೆಲ್ಲವು.*
*ನಾನೆಂತು ಬದುಕುವೆನಣ್ಣಾ?*
*ಕತ್ತಲೆ ಬೆಳಗ ಕಾಂಬ ಸಂದೇಹಿ ನಾನೊಬ್ಬಳು.*
*ಎನ್ನ ಕಣ್ಣ ಕಟ್ಟಿ ಕನ್ನಡಿಯ ತೋರಿತ್ತೋ ಅಜಗಣ್ಣಾ ನಿನ್ನ ಯೋಗ!*
(ಮುಕ್ತಾಯಕ್ಕ)

ಅರಿವನ್ನು ದವಡೆಗೆ ಒತ್ತಲಿಸಿಕೊಂಡು ಅಗಿಯುವ ಕೆಲಸವನ್ನು ನಾವು ಮಾಡುತ್ತಿದ್ದೇವೆ. ಅನ್ವಯವಾಗದ ಮಾತಿನ ಜ್ಞಾನ ನಿರುಪಯೋಗಿ. ಎರಡು ಸಂಗತಿಗಳ ಕಡೆಗೆ ಮುಕ್ತಾಯಕ್ಕ ಗಮನ ಸೆಳೆಯುತ್ತಾಳೆ. ಒಂದು, ಭಾಷೆಯೊಂದನ್ನೆ ಜ್ಞಾನದ ಮಾಧ್ಯಮವೆಂದುಕೊಂಡ ಮಿಥ್ಯಾದೃಷ್ಟಿಯ ಬಗೆಗೆ. ಮಾತನ್ನೆ ಜ್ಞಾನವೆಂದುಕೊಂಡಿರುವ ಲೋಕದ ನಟ್ಟನಡುವೆ ನಾವಿದ್ದೇವೆ. ಸುತ್ತ ಎತ್ತ ನೋಡಿದರೂ ಮಾತೇ ಮಾತು. ನಿಜ – ಸುಳ್ಳುಗಳನ್ನು ಒಟ್ಟಿಗೆ ಬೆರೆಸಿ ನುಣ್ಣಗೆ ಅಗಿಯುತ್ತಿದ್ದೇವೆ. ಸುಮ್ಮನೆ ಉಳುತ್ತಿರುವವರ ಬಗೆಗೆ, ಸುಮ್ಮನೆ ಹೊಲಿಯುತ್ತಿರುವವರ ಬಗೆಗೆ, ಸುಮ್ಮನೆ ನೇಯುತ್ತಿರುವವರ ಬಗೆಗೆ, ಸುಮ್ಮನೆ ಬೇಯಿಸುತ್ತ ಬೇಯುತ್ತಿರುವವರ ಬಗೆಗೆ ಯಾರೂ ಮಾತೇ ಆಡುತ್ತಿಲ್ಲ. ಯಾರೂ ಕಂಡು ಅನುಭವಿಸಿಲ್ಲದ ಸಂಗತಿಗಳನ್ನು ಕುರಿತು ಅತಿ ಹೆಚ್ಚು ಬರೆದಿದ್ದಾರೆ, ಅತಿ ಹೆಚ್ಚು ಮಾತನಾಡಿದ್ದಾರೆ, ಅತಿ ಹೆಚ್ಚು ಹಣ ಖರ್ಚು ಮಾಡಿದ್ದಾರೆ. ಅರಿವಿನ ಮಾಧ್ಯಮ ಕೇವಲ ಮಾತೂ ಅಲ್ಲ, ಕೇವಲ ಭಾಷೆಯೂ ಅಲ್ಲ. ಅರಿವಿನ ಹೆಸರಿನಲ್ಲಿ ನಮ್ಮೆದುರಿಗೆ ಒಟ್ಟುತ್ತಿರುವ ಈ ಅಪಾರ ಮಾಹಿತಿಯನ್ನು ತೆಗೆದುಕೊಂಡು ನಾನೇನು ಮಾಡಲಿ? ಇದರಲ್ಲಿ ನಿಜವೆಷ್ಟು ಸುಳ್ಳೆಷ್ಟು? ಯಾಕೆ ಹೀಗೆ ಕೂಗಾಡುತ್ತಿದ್ದಾರೆ? ಇದನ್ನು ಕಂಡ ಅಲ್ಲಮಪ್ರಭು ಹೀಗೆ ವ್ಯಂಗ್ಯವಾಡುತ್ತಾನೆ:

*ಊರದ ಚೇಳಿನ ಏರದ ಬೇನೆಯಲ್ಲಿ ಮೂರು ಲೋಕವೆಲ್ಲಾ ನರಳಿತ್ತು*
*ಹುಟ್ಟದ ಗಿಡುವಿನ ಬಿಟ್ಟೆಲೆಯ ತಂದು ಮುಟ್ಟದೆ*
*ಪೂಸಲು ಮಾಬುದು ಗುಹೇಶ್ವರ.*

– ಚೇಳು ಕಚ್ಚಿಲ್ಲ, ವಿಷ ಏರಿಲ್ಲ, ಗಾಯ ಆಗಿಲ್ಲ. ಆದರೂ ಚೇಳು ಕಡೀತು ಚೇಳು ಕಡೀತು ಅಂತಾ ಕಿರುಚಾಡ್ತಾ ಇದಾರಲ್ಲ. ಇದಕ್ಕೇನು ಮದ್ದು? ಹುಟ್ದೇ ಇರೋ ಗಿಡದ ಎಲೇನ ಮುಟ್ಟದೇ ತಂದು ಹಚ್ಚಿದರೆ ಸರಿಯಾಗುತ್ತೆ ಬಿಡಿ ಅಂತಾನೆ. ಕುರುಹು ಮತ್ತು ಭಾಷೆ ಇವೆರಡರಿಂದ ಆಗಿರುವ ಲೋಕದ ಕೇಡನ್ನು ಮುಕ್ತಾಯಿಯ ವಚನ ತೋರುತ್ತಿದೆ. ನಾವೀಗ ಮಾಡುತ್ತಿರುವುದೂ ಅದೇ. ಭಾಷೆಯಲ್ಲಿ ಸಂಭವಿಸುವ ವಚನವೆಂಬ ರಚನೆಗಳನ್ನು ದವಡೆಗೆ ವತ್ತಲಿಸಿಕೊಂಡು ಅಗಿಯುವ ಕೆಲಸವೇ. ಭಾಷೆಯ ಹೊರಗೆ, ಉದಾಹರಣೆಗೆ ಕಸುಬಿನ ಮಾಧ್ಯಮದಲ್ಲಿ, ಕೌಶಲದ ಮಾಧ್ಯಮದಲ್ಲಿ, ನಾದದ ಮಾಧ್ಯಮದಲ್ಲಿ, ತಾಳದ ಮಾಧ್ಯಮದಲ್ಲಿ ಸಂಭವಿಸುವ ಜ್ಞಾನದ ಅನುಸಂಧಾನ ಹಿನ್ನೆಲೆಗೆ ಸಂದುದರಿಂದ ಉಂಟಾದ ಮರಹನ್ನು ಕುರಿತು ವಚನಕಾರ್ತಿಯರು ಮಾತನಾಡಿದ್ದಾರೆ. ಭಾಷಿಕ ಸಂಕೇತಗಳು ಲೋಕದ ನೇರ ಅನುಸಂಧಾನಕ್ಕೆ ಅಡ್ಡಿಯಾಗಿ ಪರಿಣಮಿಸುತ್ತವೆ. ಹಾಗಾಗಿ ಅನುಭಾವಿಗಳು ಮೊದಲು ಅವುಗಳನ್ನು ನಿರಸನಗೊಳಿಸುವ ಪ್ರಯತ್ನ ಮಾಡುತ್ತಾರೆ. ಆದರೆ ಅದು ಅಷ್ಟು ಸರಳ ಸಂಗತಿಯಲ್ಲ. ಉದಾಹರಣೆಗೆ ಮುಕ್ತಾಯಕ್ಕ ಈ ಇಕ್ಕಟ್ಟನ್ನು ವ್ಯಕ್ತಪಡಿಸುವ ಪರಿ ಇದು:

*ನುಡಿಯೆನೆಂಬಲ್ಲಿಯೆ ನುಡಿ ಅದೆ*
*ನಡೆಯನೆಂಬಲ್ಲಿಯೆ ನಡೆ ಅದೆ*
*ಭಾವಿಸೆನೆಂಬಲ್ಲಿಯೆ ಭಾವ ಅದೆ*
*ಅರಿದು ಮರೆದೆನೆಂಬಲ್ಲಿಯೆ ಅರಿವು ಮರವೆ ಅದೆ*
*ಅಂಗದಲ್ಲಿ ಲಿಂಗ ಲೀಯವಾಯಿತ್ತೆಂದಡೆ*
*ಅಲ್ಲಿಯೆ ಅಂಗ ಅದೆ.*
*ಅನಂಗಸಂಗಿಯಾದೆನೆಂಬಲ್ಲಿಯೆ ವಿಷಯ ಸೂತಕ ಅದೆ*
*ನಾನೆ ನಾನಾದೆನೆಂಬಲ್ಲಿಯೆ ನೀನೆಂಬುದು ಅದೆ*
*ಅರಿದು ಮರೆದ ಪರಿ ಎಂತು ಹೇಳಾ?*
*ಅರಿವು ನಷ್ಟವಾಗಿ, ಮರಹು ಲಯವಾಗಿಪ್ಪಡೆ*
*ಎನ್ನ ಅಜಗಣ್ಣ ತಂದೆಯಲ್ಲದೆ ಮತ್ತಾರನೂ ಕಾಣೆ.*

ಶಬ್ದ ಮುಗ್ಧನಾಗುವ ಪ್ರಕ್ರಿಯೆಯನ್ನು ಕುರಿತ ಮುಕ್ತಾಯಿಯ ಈ ನುಡಿ ಭಾಷೆಯ ಬಹಳ ದೊಡ್ಡ ಮಿತಿಯನ್ನು ಅನಾವರಣ ಮಾಡುತ್ತಿದೆ. ಭಾಷೆಯಲ್ಲಿ ಸಂಭವಿಸುವ ಅರಿವು ಮರಹುಗಳ ನಡುವೆ ಅಂತಹ ವ್ಯತ್ಯಾಸವಿಲ್ಲವೆಂದೇ ಶ್ರಮಣ ಧಾರೆಗಳು ಭಾವಿಸುತ್ತವೆ. ಯಾವುದನ್ನು ಅರಿವೆಂದು ಈ ಕ್ಷಣಕ್ಕೆ ಭಾವಿಸುತ್ತಿದ್ದೇವೆಯೋ ಯಾವುದನ್ನು ಮರಹು ಎಂದು ಈ ಕ್ಷಣಕ್ಕೆ ಭಾವಿಸುತ್ತಿದ್ದೇವೆಯೋ ಅವು ಮುಂದಿನ ಕ್ಷಣಕ್ಕೆ ಅವೇ ಆಗಿ ಉಳಿಯಲಾರವೆಂಬ ಎಚ್ಚರವೊಂದು ಅನುಭಾವಿಕ ನಡೆಗೆ ಇದೆ. ನಿರಂತರ ಪ್ರವಾಹರೂಪಿಯಾಗಿರುವುದನ್ನು ನಿಲ್ಲಿಸಿ ಮಾತನಾಡಿಸುವ ಮಾತಿನ ಇಕ್ಕಟ್ಟು ಅದು. ಅದನ್ನು ದಾಟುವುದು ಹೇಗೆ ಎನ್ನುವುದನ್ನು 'ಮಾತೆಂಬುದು ಜ್ಯೋತಿರ್ಲಿಂಗ' ಎನ್ನುವ ಮತ್ತೊಂದು ಹೊಳಹು ತಿಳಿಸುತ್ತಿದೆ. ಅದು ಸಾಮಾನ್ಯ ಮಾತಿಗೂ ಹಚ್ಚಿಟ್ಟ ಜ್ಯೋತಿಯಾಗಿರುವ ಮಾತಿಗೂ ಇರುವ ಅಂತರ. ಜ್ಯೋತಿ

ದಾರಿಗಳನ್ನು ಕಾಣಿಸಿಕೊಟ್ಟು ಆ ಹೊತ್ತಿನ ಸರಿ ದಾರಿಯ ನಿರ್ಣಯವನ್ನು ಆ ಕ್ಷಣಕ್ಕೆ ಬಿಡುತ್ತದೆ. ಅದು ನಿರನ್ವಯೋತ್ಪತ್ತಿ ವಿನಾಶವನ್ನು ಹೇಳುವ ತಕ್ಷಣದ ಬೆಳಕು. ಅಂದು ಹಚ್ಚಿದ ಜ್ಯೋತಿಯ ಬೆಳಕಲ್ಲಿ ಕಂಡ ಸಂಗತಿಗಳನ್ನು ಇಂದು ಕಾಣಲಾಗದು. ಮೊದಲನೇ ಜಾವದಲ್ಲಿ ಉರಿದ ಜ್ಯೋತಿ, ಅದು ನೀಡಿದ ಬೆಳಕು, ಮೂರನೆಯ ಜಾವದಲ್ಲಿ ಉರಿದ ಜ್ಯೋತಿ ಮತ್ತು ಬೆಳಕು ಒಂದೇ ಅಲ್ಲ; ಮತ್ತು ಪೂರ್ಣ ಬೇರೆ ಬೇರೆಯೂ ಅಲ್ಲ. ಹಾಗಾದರೆ ಭಾಷೆಯ ಈ ತೊಡಕನ್ನು ಹೇಗೆ ನಿವಾರಿಸಿಕೊಳ್ಳಬೇಕು ? ಸುಮ್ಮನಿರಬೇಕು. ಸುಮ್ಮನಿರುವ ಸಹಜಯಾನವನ್ನು ಮುಕ್ತಾಯಕ್ಕ ನುಡಿದೂ ಭಂಗಗೊಳಿಸದೆ, ಶಬ್ದಕ್ಕೆ ಹೇಸುತ್ತಲೇ ನುಡಿಯುತ್ತಾಳೆ. ಹಾಗೆ ಭಾಷೆಯ ಪ್ರಾಣಘಾತುಕ ತನವನ್ನು ಈಡಾಡಿದವರು ಅಲ್ಲಮ ಮತ್ತು ಮುಕ್ತಾಯಿ.

*ನಡೆದು ನಡೆದು ನಡೆಯ ಕಂಡವರು*
*ನುಡಿದು ನುಡಿದ ಹೇಳುತ್ತಿಹರೆ ?*
*ನುಡಿದು ನುಡಿದು ಹೇಳವನ್ನಕ್ಕರ*
*ನಡೆದುದೆಲ್ಲಾ ಹುಸಿಯೆಂಬೆನು.*
*ಮಾತಿನ ಮಥನದಿಂದಾದ ಅರಿವು*
*ಕರಣಮಥನದಿಂದಾದುದಲ್ಲದೆ,*
*ಅನುಪಮ ಸ್ವರಭೇದವಾದ ಪರಿ ಎಂತು ಹೇಳಾ ?*
*ಇದಿರ ಗೆಲಬೇಕೆಂದು ನುಡಿದುಕೊಂಡಡೇನು ?*
*ಮನಕ್ಕೆ ಮನವೆ ಸಾಕ್ಷಿಯಾಗಿ ನಿಃಪತಿಯಲ್ಲ ನೋಡಾ !*
*ಎನ್ನ ಅಜಗಣ್ಣ ತಂದೆ ಶಬುದಕ್ಕೆ ಹೇಸಿ ಮುಗುದನಾದನು.*
*ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು*
*ಶಿಶುಕಂಡ ಕನಸಿನಂತಿರಬೇಕಲ್ಲದೆ*
*ನುಡಿದು ಹೇಳುವನ್ನಕ್ಕರ ಭಿನ್ನವಲ್ಲದೇನು ಹೇಳಾ...* ಎನ್ನುತ್ತಾಳೆ.

**ಹೆಣ್ಣು ಹೊನ್ನು ಮಣ್ಣು**

ನಮ್ಮ ಓದನ್ನು ನಿಯಂತ್ರಿಸಿದ ಅನೇಕ ಸಂಗತಿಗಳಲ್ಲಿ 'ಹೆಣ್ಣು ಹೊನ್ನು ಮಣ್ಣು' ಎನ್ನುವ ಒಂದು ಸೆಟ್ ಬಹಳ ಮುಖ್ಯವಾದುದು. ಅನುಭಾವೀ ಸಾಹಿತ್ಯದಲ್ಲಿ ಈ ಸೆಟ್ಟನ್ನು ಬಲು ಅಗ್ಗವಾಗಿ ಬಳಸಲಾಗಿದೆ. ಇವು ನಮ್ಮನ್ನು ಭವಕ್ಕೆ ಬಂಧಿಸುವ ಸಂಗತಿಗಳೆಂದೂ ಇವುಗಳನ್ನು ದಾಟದ ಹೊರತು ಭವಮುಕ್ತಿ ಸಾಧ್ಯವಿಲ್ಲವೆಂಬಂತೆಯೂ ಹಾಡುತ್ತಲೇ ಇರುತ್ತಾರೆ. ಅದಕ್ಕೆ ಪ್ರತಿಯಾಗಿ ಇವೆಲ್ಲ ನಮ್ಮ ಮನಸ್ಸಿನ ಲಂಪಟತನ ದುರಾಸೆಗಳನ್ನು ನಿಭಾಯಿಸಲಾಗದೆ ನುಣುಚಿಕೊಳ್ಳಲು ಹೇಳುವ ನೆಪವೆಂದೂ ಮತ್ತು ಅನೇಕ ಸಾರಿ ಇವುಗಳ ಆಕರ್ಷಣೆಯನ್ನು ಮೀರಲು ಅಸಾಧ್ಯವೆಂದೂ, ಇನ್ನೂ ಕೆಲವು ಸಾರಿ ಇವುಗಳನ್ನು ನಿರಾಕರಿಸುವ ಉದ್ಯೋಗವನ್ನು ಮಾಡುತ್ತ ನಿರರ್ಥಕವಾಗಿ ಜೀವನ ಕಳೆಯುವುದನ್ನು ಕುರಿತ ವ್ಯಂಗ್ಯದ ಮಾತುಗಳಿವೆ.

ಮೊದಲಿಗೆ ಕಾಡುವ ಸಂಗತಿಯೆಂದರೆ ದೇಹಮೀಮಾಂಸೆಯನ್ನು ಕುರಿತಾದ ವಚನ ಸಂದರ್ಭದ ಅನೇಕ ನಿಲುವುಗಳಿಗೆ ವಚನಕಾರ್ತಿಯರಿಂದ ಯಾವ ಪ್ರತಿಕ್ರಿಯೆ ಬಂದಿದೆ ? – ಇಂತಹ ಒಂದು ಪ್ರಶ್ನೆ ಮುನ್ನೆಲೆಗೆ ಬರಲು ಕಾರಣವೇನೆಂದರೆ ಹೆಣ್ಣು ನಡೆಸುವ ದೇಹದ ಅನುಸಂಧಾನ ಗಂಡಿಗಿಂತ ಹೆಚ್ಚು ನೈಸರ್ಗಿಕವಾದುದು, ಗಾಢವಾದುದು ಮತ್ತು ಆಪ್ತವಾದುದು. ಈ ದೃಷ್ಟಿಯಿಂದ ವಚನಕಾರ್ತಿಯರ ಕೆಲವು ವಚನಗಳನ್ನು ಗಮನಿಸಬಹುದು :

*ಹೊನ್ನ ಬಿಟ್ಟು ಲಿಂಗವನೊಲಿಸಬೇಕೆಂಬರು*
*ಹೊನ್ನಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ ?*
*ಹೆಣ್ಣಬಿಟ್ಟು ಲಿಂಗವನೊಲಿಸಬೇಕೆಂಬರು*

## ಮಾತು

ಗಂಟೆಗಟ್ಟಲೆ
ಪಕ್ಕದಲ್ಲಿ ಕುಳಿತಿದ್ದರೂ
ಭಕ್ತರ ಆಗಮನದ ಬಳಿಕವೇ
ದೇವರ ಹತ್ತಿರ
ಮಾತನಾಡುವನು
ಪೂಜಾರಿ !

ಡಾ॥ ವಿ. ಪುಗಳೇಂದಿ
ಸಿರಗುಪ್ಪ – ೫೮೩ ೧೨೧ ಬಳ್ಳಾರಿ ಜಿಲ್ಲೆ

*ಹೆಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ ?*
*ಮಣ್ಣಬಿಟ್ಟು ಲಿಂಗವನೊಲಿಸಬೇಕೆಂಬರು*
*ಮಣ್ಣಿಂಗೆಯೂ ಲಿಂಗಕ್ಕೆಯೂ ವಿರುದ್ಧವೆ ?*
*ಅಂಗವ ಬಿಟ್ಟು ಲಿಂಗವನೊಲಿಸಬೇಕೆಂಬರು*
*ಅಂಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೆ ?*
*ಇಂದ್ರಿಯಂಗಳ ಬಿಟ್ಟು ಲಿಂಗವನೊಲಿಸಬೇಕೆಂಬರು*
*ಇಂದ್ರಿಯಂಗಳಿಗೆಯೂ ಲಿಂಗಕ್ಕೆಯೂ ವಿರುದ್ಧವೆ?*
*ಜಗವ ಬಿಟ್ಟು ಲಿಂಗವನೊಲಿಸಬೇಕೆಂಬರು*
*ಜಗಕ್ಕೆಯೂ ಲಿಂಗಕ್ಕೆಯೂ ವಿರುದ್ಧವೆ ?*
*ಇದು ಕಾರಣ, ಪರಂಜ್ಯೋತಿ ಪರಮಕರುಣಿ*
*ಪರಮಶಾಂತನೆಂಬ ಲಿಂಗವು*
*ಕೋಪದ ಮುನಿಸನರಿದಡೆ ಕಾಣಬಹುದು,*
*ಮರೆದಡೆ ಕಾಣಬಾರದು*
*ಅರಿವಿಂದ ಕಂಡೊದಗಿದ ಸುಖವು ಮಸಣಯ್ಯ*
*ಪ್ರಿಯ ಗಜೇಶ್ವರಾ*
*(ಗಜೇಶಮಸಣಯ್ಯಗಳ ಪುಣ್ಯಸ್ತ್ರೀ)*

ಅಜ್ಞಾತ ತತ್ವಪದಕಾರನೊಬ್ಬನ / ಪದಕಾರ್ತಿಯೊಬ್ಬಳ ನುಡಿ ಇಲ್ಲಿ ನೆನಪಾಗುತ್ತಿದೆ :

*ಬಲ್ಲರೆ ಯೋಗಿಯಾಗು ಇನಿ*
*ತಿಲ್ಲದಿರೆ ಭೋಗಿಯಾಗಿರೈಯ್ಯ*
*ಎವೆಯಲುಗದೆ ಲಿಂಗವ ನೋಡದಿರೆ*
*ನವಯವ್ವನೆಯ ಭಾವವಿರಲಿ ತವೆಯದೆ*
*ಶಿವ ಮಂತ್ರವ ಕೇಳ ಕೇಳದಿರೆ*
*ನವರಸ ಲಲ್ಲೆದೈನ್ಯವ ಕೇಳಿರಯ್ಯ*
*ಅಲಸದೆ ಲಿಂಗಪೂಜೆಯ ಮಾಡಿಲ್ಲದಿರೆ*
*ಮೊಲೆಯ ಮೇಲಣ ಕೈಯ ತೆಗೆಯದಿರಿ*
*ಒಲಿದೊಲಿದು ಲಿಂಗ ಪ್ರಸಾದವ ಕೊಳ್ಳಿ ಕೊಳ್ಳದಿರೆ*
*ಚಲ್ವೆ ಚಂದುಟಿಯಮೃತವನುಣ್ಣಿರೈಯ್ಯ*
*ಅಂಗ ಸಂಗ ದೊರಕೊಂಡಿರಲು ಲಲಿ*
*ತಾಂಗಿಯರ ಹಿಂಗದಲೆ ನೀವು ಸುಖಿಯಾಗಿರಯ್ಯ*

ಅಕ್ಕ ಇನ್ನೂ ಮುಂದೆ ಹೋಗಿ 'ಜಗವೆಲ್ಲಾ ಹೆಣ್ಣು ನೋಡಾ' ಎನ್ನುತ್ತಾಳೆ :

*ಹೆಣ್ಣು ಹೆಣ್ಣಾದಡೆ ಗಂಡಿನ ಸೂತಕ*
*ಗಂಡು ಗಂಡಾದಡೆ ಹೆಣ್ಣಿನ ಸೂತಕ*
*ಮನದ ಸೂತಕ ಹಿಂಗಿದಡೆ*
*ತನುವಿನ ಸೂತಕಕ್ಕೆ ತೆರಹುಂಟೆ*
*ಅಯ್ಯಾ, ಮೊದಲಿಲ್ಲದ ಸೂತಕಕ್ಕೆ ಮರುಳಾಯಿತ್ತು ಜಗವೆಲ್ಲ*
*ಎನ್ನ ದೇವ ಚೆನ್ನಮಲ್ಲಿಕಾರ್ಜುನನೆಂಬ ಗರುವಂಗೆ*
*ಜಗವೆಲ್ಲ ಹೆಣ್ಣು ನೋಡಾ ಅಯ್ಯಾ*

ವಚನಕಾರ್ತಿಯರಂತೂ ಹೊರಗಿನ ಯಾರನ್ನೂ ತನ್ನ ಕೇಡಿಗೆ ಹೊಣೆ ಮಾಡುವುದಿಲ್ಲ. ತನ್ನ ದೇಹ ಮತ್ತು ಮನಸ್ಸನ್ನು ಪ್ರಾಮಾಣಿಕವಾಗಿ ಇದಿರಾಗುತ್ತಲೇ ಅನುಭಾವವನ್ನು ನಿಭಾಯಿಸುವ ವಚನಕಾರ್ತಿಯರು ಇಂದ್ರಿಯ ಸಮೇತ ಬಾಳುವ ಮನುಷ್ಯನ ಎಲ್ಲ ಇಕ್ಕಟ್ಟುಗಳನ್ನು ನಿರ್ವಹಿಸುತ್ತಲೇ ಪರಮಾರ್ಥ ಸಾಧನೆಯನ್ನು ಮಾಡಬೇಕೆನ್ನುವ ನಿಲುವಿನವರು.

ಎಸ್. ನಟರಾಜ ಬೂದಾಳು
'ಗೌರಿ', ನಳಂದ ಶಾಲೆ ಹಿಂಭಾಗ, ಸಪ್ತಗಿರಿ ಬಡಾವಣೆ, ತುಮಕೂರು – ೫೭೨ ೧೦೨

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

## ಇವರಿಂದ ರಚಿತವಾದ ಕೃತಿಗಳು




ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ವಿಶಾಲವಾದ ವಿಶ್ವ ಸೌರವ್ಯೂಹ ಹಾಗೂ ಮಾನವನ ಆವಾಸ ಸ್ಥಾನವಾದ ಪೃಥ್ವಿಯನ್ನು ಕುರಿತ ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂ ಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಏರ್ಪಡಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಬಿಂಬಿಸುತ್ತದೆ.

............ ಈ ಸಂಪುಟದಲ್ಲಿ ನಾವು ಜೀವಮಂಡಲ ಎಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ... ಇಲ್ಲಿ ಜೀವ ಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದ ಉಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ.

... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪ ವಾಗಿ ಮಾನವನ ವಿವಿಧ ಉದ್ಯೋಗ ಗಳ, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿ ಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸ ಲಾಗಿದೆ... ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭ ಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.

... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯ ವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ.... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲ ದೊಂದಿಗೆ ಮಾನವರ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮ ಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ.

ಒಂದು ನಾಡಿನಲ್ಲಿ ಬುದ್ಧಿಜೀವಿ ಚಿಂತಕರ ಮಹತ್ವ ಇರುವುದೇ ಇಲ್ಲಿ: ಅವರು ಮಾಹಿತಿ ಮತ್ತು ಜ್ಞಾನದ ನಡುವಣ, ಮಾಹಿತಿ ಮತ್ತು ಪ್ರಚಾರದ ನಡುವಣ, ಬಂಡವಾಳಶಾಹಿ ಜ್ಞಾನ ಮತ್ತು ಜನತೆಯ ಜ್ಞಾನಗಳ ನಡುವಣ ವ್ಯತ್ಯಾಸಗಳನ್ನು ವಿಂಗಡಿಸಿ ತೋರಬಲ್ಲರು. ನಿಜವಾದ ಶಿಕ್ಷಣ ಮತ್ತು ಸಂಶೋಧನೆ ತಮ್ಮ ವಿದ್ಯಾರ್ಥಿ ಮತ್ತು ಸಂಶೋಧಕರಿಗೆ ಮನವರಿಕೆ ಮಾಡಬೇಕಾಗಿರುವುದೇ ಈ ಎಚ್ಚರವನ್ನು. ಸಂಶೋಧಕರು ಈ ಎಚ್ಚರದಲ್ಲೇ ತಿಳುವಳಿಕೆ ಸೃಷ್ಟಿ ಮಾಡಬೇಕಿದೆ. ಆಗ ಆ ತಿಳುವಳಿಕೆ ಪ್ರತಿಷ್ಠಾಪಿತ ಧಾರ್ಮಿಕ ರಾಜಕೀಯ ಆರ್ಥಿಕ ವ್ಯವಸ್ಥೆಗಳನ್ನು ಪ್ರಶ್ನಿಸುವ ಗುಣವನ್ನು ಹೊಂದಿರಬಲ್ಲದು; ಅಧಿಕಾರಸ್ಥ ಸ್ಥಾಪಿತ ವ್ಯವಸ್ಥೆಗಳು ರೂಪಿಸಿ ಹರಡುವ ಮಿಥ್ಯೆಗಳನ್ನು ಒಡೆದು ನಿಜವಾದ ತಥ್ಯವನ್ನು ಜನರ ಮುಂದಿಡುವ ಕೆಲಸವನ್ನು ಮಾಡಬಲ್ಲದು; ಹೊಸ ಸಮಾಜಕ್ಕೆ ಬೇಕಾದ ವೈಚಾರಿಕ ಬೌದ್ಧಿಕ ಬುನಾದಿ ಹಾಕಬಲ್ಲದು.

# ಮಾಹಿತಿ ಮತ್ತು ಜ್ಞಾನ : ಕೆಲವು ಚಿಂತನೆಗಳು

ಡಾ॥ ರಹಮತ್ ತರೀಕೆರೆ



**ಈ**ಚೆಗೆ ಸರ್ಕಾರದ ಪದವಿ ಕಾಲೇಜುಗಳ ಅಧ್ಯಾಪಕರ ನೇಮಕಾತಿ ವಿಷಯದಲ್ಲಿ ಅರ್ಹತಾ ಪರೀಕ್ಷೆ ನಡೆದವು. ಕನ್ನಡ ಅಧ್ಯಾಪಕರ ಪರೀಕ್ಷೆಯ ಪಠ್ಯಕ್ರಮದಲ್ಲಿ ಸಾಹಿತ್ಯದ ಅತ್ಯುತ್ತಮ ಪಠ್ಯಗಳಿದ್ದವು. ಆದರೂ ಸಾಹಿತ್ಯದ ಗಂಭೀರ ವಿದ್ಯಾರ್ಥಿಗಳು ಪರೀಕ್ಷೆ ಮುಗಿದ ಬಳಿಕ ಅಸಮಾಧಾನ ವ್ಯಕ್ತಪಡಿಸಿದರು. ಕಾರಣವೆಂದರೆ – ೧. ಇಟ್ಟ ಪಠ್ಯಗಳಿಗೂ ಪರೀಕ್ಷೆಯಲ್ಲಿ ಕೇಳಿದ ಪ್ರಶ್ನೆಗಳಿಗೂ ಅರ್ಥಪೂರ್ಣ ಸಂಬಂಧವಿರಲಿಲ್ಲ. ಹೆಚ್ಚಿನ ಪ್ರಶ್ನೆಗಳನ್ನು ಜಾಲತಾಣಗಳಲ್ಲಿರುವ ಪ್ರಶ್ನೆ ಬ್ಯಾಂಕುಗಳಿಂದ ತಪ್ಪುಗಳ ಸಮೇತ ಕಿತ್ತಿಡಲಾಗಿತ್ತು. ೨. ಪ್ರಶ್ನೆಪತ್ರಿಕೆ ಸುಲಭವಾಗಿತ್ತು. ವಿಶ್ಲೇಷಣೆ ಮತ್ತು ವ್ಯಾಖ್ಯಾನ ಪ್ರಧಾನ ಪ್ರಶ್ನೆಗಳಿಗೆ ಬದಲಾಗಿ ಮಾಹಿತಿ ಪ್ರಧಾನವಾದ ಪ್ರಶ್ನೆಗಳನ್ನು ಕೇಳಲಾಗಿತ್ತು.

ಮೊದಲನೆಯ ಆಕ್ಷೇಪದಲ್ಲಿ ವಾಸ್ತವಿಕತೆ ಇದೆ. ಆದರೆ ಈ ಆಕ್ಷೇಪ ಕಷ್ಟಪಟ್ಟು ಓದಿದ್ದ ಪಠ್ಯಕ್ರಮದಲ್ಲಿದ್ದ ಕೃತಿಗಳಿಂದ ಪ್ರಶ್ನೆ ಕೇಳಿಲ್ಲ ಎಂಬುದಕ್ಕೆ ನಿಂತುಬಿಡುತ್ತದೆ. ಒಂದೊಮ್ಮೆ ಪ್ರಶ್ನೆಪತ್ರಿಕೆ ತೆಗೆದವರು ಪಠ್ಯಕ್ರಮದೊಳಗಿಂದಲೇ ಮಾಹಿತಿಕೇಂದ್ರಿತ ಪ್ರಶ್ನೆ ತೆಗೆದಿದ್ದರೆ ಇವರಿಗೆ ತಕರಾರು ಇರುತ್ತಿರಲಿಲ್ಲ. ಇವರಲ್ಲಿ ಬಹಳ ಜನ, ಮಾಹಿತಿ ಪ್ರಧಾನವಾದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತಯಾರಾಗಿ, ಜ್ಞಾನವೆಂದರೆ ಗಳಿಸಿದ ಮಾಹಿತಿಯನ್ನು ಮರಳಿ ಸಲ್ಲಿಸುವುದು ಎಂಬ ಧೋರಣೆವುಳ್ಳವರು; ಮಾಹಿತಿ ನೆನಪಿಟ್ಟುಕೊಳ್ಳಲು ನಾನಾ ಉಪಾಯ ಹುಡುಕಿಕೊಂಡವರು. ಬಡ ಮತ್ತು ಮಧ್ಯಮವರ್ಗದಿಂದ ಬಂದು, ಶ್ರಮವಹಿಸಿ ಓದಿ ಪರೀಕ್ಷೆಗಳಲ್ಲಿ ಅತ್ಯುತ್ತಮ ಅಂಕ ಗಳಿಸುವ ಜಾಣ್ಮೆ ಕುಶಲತೆ ಪಡೆದಿರುವವರು. ಈ ಜಾಣರಿಗೆ ಸಾಹಿತ್ಯ ಕುರಿತು ಹೊಸನೋಟಗಳಿಂದ ಒಂದು ಲೇಖನ ಬರೆಯುವುದು ಕಷ್ಟ. ಅಧ್ಯಾಪಕರಾದ ಬಳಿಕವೂ ಇವರು ಮಾಹಿತಿ ಪ್ರಧಾನ ಬೋಧನೆ ಮಾಡುವ ಮತ್ತು ಪ್ರಶ್ನೆಪತ್ರಿಕೆ ತಯಾರಿಸುವ ಸಾಧ್ಯತೆಗಳಿವೆ. ಕೊಟ್ಟ ಕುದುರೆಯನ್ನು ಚೆನ್ನಾಗಿ ಹತ್ತುವುದು ಹೇಗೆ ಎಂದು ಚಿಂತಿಸುವವರು ಕುದುರೆ ಯಾವುದೆಂಬುದನ್ನಾಗಲಿ, ಅದು ಹೋಗಲಿರುವ ಪಥವನ್ನಾಗಲಿ, ಮುಟ್ಟಲಿರುವ ಗುರಿಯನ್ನಾಗಲಿ ಪ್ರಶ್ನಿಸುವವರಲ್ಲ.

ಎರಡನೆಯ ಆಕ್ಷೇಪದಲ್ಲಿ ವಿಚಾರ ಮಾಡಬೇಕಾದ ಅಂಶಗಳಿವೆ. ಇಲ್ಲಿ ಸಾಹಿತ್ಯದ ಅಧ್ಯಾಪಕರಾಗುವವರಿಗೆ ಮಾಹಿತಿಪ್ರಧಾನ ಪ್ರಶ್ನೆ ಕೇಳುವುದು ತಪ್ಪೆಂಬ ನಿಲುವಿದೆ. ಇದರಿಂದ ಅಧ್ಯಾಪಕರಾಗ ಹೊರಟವರ ದಿಟವಾದ ಸಾಮರ್ಥ್ಯ ಪರೀಕ್ಷಿಸಿದಂತಾಗುವುದಿಲ್ಲ. ಸಾಹಿತ್ಯ ಸಂವೇದನೆ ಪಾಂಡಿತ್ಯ ಚಿಂತನಶೀಲತೆ ಇದ್ದವರಿಗೂ ಕಛೇರಿ ಸಹಾಯಕರ ಪರೀಕ್ಷೆಗೆ ಕೂತು ಮಾಹಿತಿಯನ್ನು ಗಟ್ಟು ಹೊಡೆದವರಿಗೂ ವ್ಯತ್ಯಾಸ ಉಳಿಯುವುದಿಲ್ಲ. ಯಾಂತ್ರಿಕವಾಗಿ ಓದಿದವರೇ ಆಯ್ಕೆ ಆಗುವ ಸಾಧ್ಯತೆ ಹೆಚ್ಚು ಎಂಬ ಆತಂಕವಿದೆ. ಈ ಆತಂಕ ಉಚಿತವೂ ಆಗಿದೆ. ಈ ಆತಂಕ ಸಹ ಪ್ರಶ್ನೆಪತ್ರಿಕೆ ತೆಗೆದ ವ್ಯಕ್ತಿಯ ವೈಯಕ್ತಿಕ ಬೇಜವಾಬ್ದಾರಿತನದ ಹಂತದವರೆಗೆ ಹೋಗಿ ನಿಂತುಬಿಡುತ್ತದೆ; ಮಾಹಿತಿ ಪ್ರಧಾನ ಪ್ರಶ್ನೆ ಕೇಳುವ ಹಿಂದಿನ ಶೈಕ್ಷಣಿಕ ನೀತಿ ಮತ್ತು ಮನೋಭಾವದ ತನಕ

ಹೋಗುವುದಿಲ್ಲ. ಆದ್ದರಿಂದ ಈ ಎರಡೂ ಆಕ್ಷೇಪಗಳಾಚೆ ಹೋಗಿ ಮಾಹಿತಿಯೇ ಜ್ಞಾನವೆಂಬ ಧೋರಣೆಯನ್ನು ಪ್ರಶ್ನಿಸುವ ಜರೂರಿಯಿದೆ.

ಸಂಶೋಧಕರ / ಅಧ್ಯಾಪಕರ ಅರ್ಹತಾ ಪರೀಕ್ಷೆಗೆ ಮಾಹಿತಿಕೇಂದ್ರಿತ ಪ್ರಶ್ನೆ ಕೇಳುತ್ತಿರುವುದು ಹೊಸ ಸಂಗತಿಯಲ್ಲ. ಯುಜಿಸಿಯಿಂದ ವಿವಿಧ ಸಂಶೋಧನ ವೇತನ ಪಡೆವ ಸಂಶೋಧಕರಿಗೆ ಅರ್ಹತೆಯಾಗಿರುವ ನೆಟ್–ಸ್ಲೆಟ್–ಜೆಆರ್ಎಫ್ ಪರೀಕ್ಷೆಗಳಲ್ಲೂ ಇಂತಹ ಪ್ರಶ್ನೆಗಳೇ ಇವೆ. ಕೊಟ್ಟಿರುವ ನಾಲ್ಕು ಉತ್ತರಗಳ ಪೈಕಿ ಒಂದಕ್ಕೆ ಗುರುತು ಹಾಕುವ ವ್ಯವಸ್ಥೆಯಿದ್ದು, ಸರಿ ಉತ್ತರಗಳನ್ನು ತುಂಬಿಸಲಾದ ಕಂಪ್ಯೂಟರ್ ಅದನ್ನು ಮೌಲ್ಯಮಾಪನ ಮಾಡುತ್ತದೆ. ಸಾಹಿತ್ಯ ಸಂವೇದನೆ, ಭಾಷಿಕ ಕುಶಲತೆ, ಸಾಮಾಜಿಕ ನಿಲುಮೆ ಅರಿವ ಮನುಷ್ಯ ಮೌಲ್ಯಮಾಪನ ಇಲ್ಲಿ ಸಾಧ್ಯವಿಲ್ಲ. ಈ ಪಲ್ಲಟವು ನಮ್ಮ ಶಿಕ್ಷಣ ವ್ಯವಸ್ಥೆ ಮತ್ತು ಸಮಾಜಗಳು, ಜ್ಞಾನ ಮತ್ತು ಚಿಂತನೆಯತ್ತ ಹೋಗಲು ನಿರಾಕರಿಸುತ್ತಿರುವುದರ ಸಂಕೇತವಿದ್ದಂತಿದೆ. ಈ ಹಿನ್ನೆಲೆಯಲ್ಲಿ ಇಂತಹ ಪರೀಕ್ಷೆಗಳ ಹಿಂದಿನ ಉದ್ದೇಶ ಮತ್ತು ಪರಿಣಾಮಗಳನ್ನು ಚರ್ಚಿಸಬೇಕಿದೆ. ಅದರಲ್ಲೂ ಮಾನವಿಕ ಮತ್ತು ಸಮಾಜ ವಿಜ್ಞಾನ ಕ್ಷೇತ್ರಗಳಲ್ಲಿ, ಅಂಕ ಗಳಿಕೆಯ ಬುದ್ಧಿವಂತಿಕೆಯು ಪ್ರತಿಭೆಯಲ್ಲ. ಮಾಹಿತಿಯು ಜ್ಞಾನವಲ್ಲ; ಮಾಹಿತಿಯನ್ನು ವಿಶ್ಲೇಷಿಸಿ ವ್ಯಾಖ್ಯಾನಿಸಿ ಅದರೊಳಗೆ ಅಡಗಿರುವ ಸಾಮಾನ್ಯ ತತ್ವವನ್ನು ಹೊರತೆಗೆಯುವುದು ಜ್ಞಾನ. ಈ ಜ್ಞಾನವು ಕೇವಲ ಅಕೆಡಮಿಕ್ ಆಗಿರುವುದಿಲ್ಲ; ತತ್ವಶಾಸ್ತ್ರೀಯವಾಗಿರುತ್ತದೆ; ಹೊಸ ಸಮಾಜ ಕಟ್ಟುವ ಕನಸು ಕಾಣ್ಕೆ ಮಾನವೀಯತೆ ಬದ್ಧತೆಗಳನ್ನು ಒಳಗೊಂಡಿರುತ್ತದೆ. ಈ ಗುಣಗಳು ಅಂತಿಮವಾಗಿ ಕ್ರಿಯಾಶೀಲತೆಯ ಆಯಾಮ ಪಡೆದಿರುತ್ತವೆ. ಮಾಹಿತಿ ಮತ್ತು ಜ್ಞಾನ, ಜ್ಞಾನ ಮತ್ತು ಕಾಣ್ಕೆ, ಕಾಣ್ಕೆ ಮತ್ತು ಕ್ರಿಯೆಗಳ ನಡುವೆ ವ್ಯತ್ಯಾಸವಿದ್ದರೂ ಬೇರ್ಪಡಿಸಲಾರದ ಕರುಳಬಳ್ಳಿ ಸಂಬಂಧವೂ ಇರುತ್ತದೆ. ಇದೊಂದು ಸರಣಿ ಪ್ರಕ್ರಿಯೆ. ಆದರೆ ಜ್ಞಾನವನ್ನು ಸರಕನ್ನಾಗಿ ಮಾರ್ಪಡಿಸಿ ಶಿಕ್ಷಣವನ್ನು ಉದ್ಯಮವನ್ನಾಗಿ ಮಾಡಿರುವ ವ್ಯವಸ್ಥೆ ತಿಳುವಳಿಕೆಯ ಈ ಜೀವಪರ ಮತ್ತು ಸಾವಯವ ಸಮೀಕರಣವನ್ನು ಉಧ್ವಸ್ತಗೊಳಿಸುತ್ತಿದೆ.

ಮಾಹಿತಿ/ಆಕರ (ಡಾಟ) ತನಗೇ ತಾನೇ ಕೇಡಲ್ಲ. ಜ್ಞಾನ ಮತ್ತು ಕಾಣ್ಕೆ ಎಂದು ಕರೆಯುವ ಉನ್ನತ ಹಂತಗಳಿಗೆ ಅದುವೇ ಆಧಾರ. ಅದರ ವಿಶ್ಲೇಷಣೆ ಮತ್ತು ವ್ಯಾಖ್ಯಾನಗಳ ಮೂಲಕವೇ ಅರಿವಿನ ಉನ್ನತಸ್ತರಗಳಿಗೆ ಚಲಿಸಬೇಕು. ಆದರೆ ಮಾಹಿತಿ/ಆಕರಗಳೇ ಜ್ಞಾನವೆಂಬ ಗ್ರಹಿಕೆ ನಮ್ಮ ಸಮಾಜದಲ್ಲಿ ಆಳವಾಗಿ ನೆಲೆನಿಂತಿದೆ. ಭಾರತದ ನೆಲ ಜನ ಜಾತಿ ಧರ್ಮ ಸಂಸ್ಕೃತಿ ಭಾಷೆ ಇತಿಹಾಸಗಳ ಮೇಲೆ ತಮ್ಮದೇ ದೃಷ್ಟಿಕೋನದ 'ಜ್ಞಾನ'ವನ್ನು ಸೃಷ್ಟಿಸಲು ಬ್ರಿಟಿಷರು ೧೯ನೇ ಶತಮಾನದಿಂದಲೇ ಸಮೀಕ್ಷೆಗಳನ್ನು ಕೈಗೊಂಡರಷ್ಟೆ. ಈ ಕೆಲಸಕ್ಕಾಗಿ ನೇಮಕಗೊಂಡ ದೇಶೀಯರು ತಮ್ಮ ಒಡೆಯರಾದ ಆಂಗ್ಲ ಅಧಿಕಾರಿಗಳ/ಪಾದ್ರಿಗಳ ಜತೆ ಸೇರಿ ಭಾರತದ ಬಗ್ಗೆ ಈತನಕ ಸಾಧ್ಯವಾಗಿರದ ಅಪಾರ ಮಾಹಿತಿ ಸಂಗ್ರಹಿಸಿ ಪ್ರಕಟಿಸಿದರು. ಇದರಿಂದ ಭಾರತದ ಬಗ್ಗೆ ಹೊಸ ತಿಳುವಳಿಕೆ ಸೃಷ್ಟಿಸಲು ಬೇಕಾದ ಮಹತ್ವದ ಇಡೀ ಭಾರತದ ಆಕರ ಸಾಮಗ್ರಿ ಒಟ್ಟಿಗೆ ಸಿಕ್ಕಿತು. ಕವಿಚರಿತೆ ಸಂಪುಟಗಳು, ಶಾಸನ ಸಂಪುಟಗಳು, ಗೆಜಟಿಯರುಗಳು, ಮ್ಯಾನುವೆಲ್ಲುಗಳು, ವಿವಿಧ ವರದಿಗಳು ಇದಕ್ಕೆ ಸಾಕ್ಷಿ. ಆದರೆ ಇವು ಜ್ಞಾನ ಹುಟ್ಟಿಸುವ ಸಾಮಗ್ರಿಗಳೇ ಹೊರತು ತಾವೇ ಜ್ಞಾನವಲ್ಲ. ಮಾಹಿತಿಯಲ್ಲಿ ಹಾಲಿನೊಳಗಿನ ತುಪ್ಪದಂತೆ ಜ್ಞಾನದ ಅಂಶವಿರುತ್ತದೆ. ಅದು ಮಥನದಿಂದ ಮತ್ತು ಕಾಸಿ ರೂಪಾಂತರ ಮಾಡುವುದರಿಂದ ಹುಟ್ಟುತ್ತದೆ. ಈ ರೂಪಾಂತರಕ್ಕೆ ತೊಡಗಿಕೊಳ್ಳಲಾಗದ ವಸಾಹತೀಕರಣಗೊಂಡ ಭಾರತೀಯರ ಮಾನಸಿಕ ಸ್ಥಿತಿಯು ಮಾಹಿತಿಯೇ ಜ್ಞಾನ ಮತ್ತು ಅದರ ಸಂಗ್ರಹವೇ ಸಂಶೋಧನೆ ಎಂಬ ಸರಳ ಗ್ರಹಿಕೆಗಳನ್ನು ರೂಪಿಸಿತು. ಈ ಗ್ರಹಿಕೆಯಿಂದ ದಿಟವಾಗಿಯೂ ಪ್ರತಿಭಾವಂತರು ನಿಶಿತಮತಿಗಳು ತಪ್ಪಿಸಿಕೊಂಡರು. ಅಂಬೇಡ್ಕರ್ ಅವರ ಚಿಂತನೆಗಳು ರೂಪುಗೊಂಡಿದ್ದು, ಇವೇ ವಸಾಹತುಶಾಹಿ ಆಕರಗಳಿಂದ. ಆದರೂ ವಿಶ್ವವಿದ್ಯಾಲಯಗಳಲ್ಲಿ ಮಾಹಿತಿ ಪ್ರಧಾನ ಸಂಶೋಧನ ಮಾದರಿಗಳು ವ್ಯಾಪಕವಾಗಿ ಸೃಷ್ಟಿಯಾಗುತ್ತ ಹೋದವು. ಈಗಲೂ ಹೆಚ್ಚಿನ ವಿದ್ಯಾರ್ಥಿಗಳು ಸಂಶೋಧನೆಗೆ ಪ್ರವೇಶ ಪಡೆಯುವಾಗ, ಮಾಹಿತಿ ಕಲೆಹಾಕುವ ಕ್ಷೇತ್ರ (ಏರಿಯಾ) ಮತ್ತು ವಿಷಯ (ಟಾಪಿಕ್)ಗಳಿಗೆ

ಹೆಚ್ಚು ಆಸ್ಥೆ ತೋರುತ್ತಾರೆ; ಮಾಹಿತಿಯನ್ನು ವಿಶ್ಲೇಷಣೆ–ವ್ಯಾಖ್ಯಾನ ಮಾಡಿ ಪ್ರಮೇಯ ಕಟ್ಟುವ ಕ್ಷೇತ್ರ / ವಿಷಯಗಳಿಗಲ್ಲ. ಒಂದೊಮ್ಮೆ ಪರಿಕಲ್ಪನಾತ್ಮಕ ವಿಷಯ ಕೊಟ್ಟರೆ, ನಿಭಾಯಿಸಲಾಗದೆ ಮಾಹಿತಿಯನ್ನೇ ಬರೆಯುತ್ತಾರೆ. ಹೀಗಾಗಿಯೇ ವರ್ಷಕ್ಕೆ ಮಾನವಿಕ ಮತ್ತು ಸಮಾಜ ವಿಜ್ಞಾನಗಳಲ್ಲಿ ನೂರಾರು ಪಿಎಚ್.ಡಿ. ಪದವೀಧರರು ಹೊರ ಬರುತ್ತಿದ್ದರೂ, ಕರ್ನಾಟಕ ಕುರಿತು ಹೊಸ ತಿಳುವಳಿಕೆ ಕೊಡಬಲ್ಲ ಚಿಂತನಶೀಲ ಮತ್ತು ಹೊಸ ನೋಟಗಳುಳ್ಳ ಹೊಸ ಪರಿಕಲ್ಪನೆ– ಪ್ರಮೇಯ ಮಂಡಿಸುವ ಸಂಶೋಧನೆ ಅತ್ಯಲ್ಪ.

ಮಾಹಿತಿಯನ್ನೇ ಜ್ಞಾನವೆಂದು ತಿಳಿಯುವುದು ಒಂದು ಸಮಸ್ಯೆಯಾದರೆ, ಮಾಹಿತಿ ಸಿಕ್ಕರೂ ಅದನ್ನು ಜ್ಞಾನವಾಗಿಸಲು ಬೇಕಾದ ಕುಶಲತೆ ಪಡೆದು ಕೊಳ್ಳದೆ ಇರುವುದು ಇನ್ನೊಂದು ಸಮಸ್ಯೆ. ಈ ದುರಂತಕ್ಕೆ ಕೇವಲ ವಿದ್ಯಾರ್ಥಿಗಳಲ್ಲ, ಶೈಕ್ಷಣಿಕ ವ್ಯವಸ್ಥೆ ಹೊಣೆ ಹೊರಬೇಕು. ಯಾಕೆಂದರೆ, ವಿದ್ಯಾರ್ಥಿಗಳಿಗೆ ಮಾಹಿತಿ ಸಂಗ್ರಹಿಸಿ ಮಂಡಿಸುವ ಪದ್ಧತಿ ಕೆಳಹಂತದ ತರಗತಿಗಳಿಂದಲೇ ಕೊಡಲು ಶುರುವಾಗುತ್ತದೆ. ಹೊಸಪ್ರಶ್ನೆ ಕೆರಳಿಸುವ, ಕಲ್ಪನಾಶಕ್ತಿ ಬಳಸುವ, ಸ್ವಂತ ದಿಟ್ಟ ಧೋರಣೆ ತಳೆಯುವ ಸಾಧ್ಯತೆಗಳನ್ನು ಪ್ರೇರಿಸುವಂತೆ ಅವರ ಮನಸ್ಸನ್ನು ರೂಪಿಸುವಂತಹ ಬೋಧನ ವ್ಯವಸ್ಥೆಯೇ ಕಡಿಮೆ. ಬೋಧನೆ ಎಂಬ ಶಬ್ದವೇ ಅರೆಸತ್ಯ. ಸಂವಾದ ವಾಗ್ವಾದ ಎಂಬ ಪರಿಭಾಷೆಯನ್ನು ಉನ್ನತ ಹಂತ ದಲ್ಲಾದರೂ ನಾವು ಬಳಸಬೇಕು ಮತ್ತು ಜಾರಿ ಮಾಡಬೇಕು. ಆದರೆ ವಿದ್ಯಾರ್ಥಿಗಳು ಪ್ರಶ್ನೆ ಕೇಳುವುದೇ ಅವಿಧೇಯತೆ ಎಂಬ ಧೋರಣೆ ಹೆಚ್ಚಿನ ಶಿಕ್ಷಕರಲ್ಲಿದೆ. ಅಪವಾದವಾಗಿ, ಮಕ್ಕಳ ಕುತೂಹಲ ಮತ್ತು ಪ್ರಶ್ನಾ ಮನೋಭಾವಗಳನ್ನು ಗುರುತಿಸಿ ಬೆಳೆಸುವ ಪೋಷಕರು ಮತ್ತು ಶಿಕ್ಷಕರು ಇರಬಹುದು. ಆದರೆ ಉಳಿದಂತೆ ನಿಗದಿಪಡಿಸಿದ ಪಠ್ಯವನ್ನು ಮಾಹಿತಿ ಪ್ರಧಾನವಾಗಿ ಬೋಧಿಸುವ, ಪ್ರಶ್ನೆ ಕೇಳುವ ಮತ್ತು ಮೌಲ್ಯಮಾಪನ ಮಾಡುವ ಪ್ರವೃತ್ತಿಯೇ ಪ್ರಧಾನವಾಗಿದೆ. ಪದವಿ ತರಗತಿಗಳಲ್ಲಿ ಬಂದಿರುವ ಸೆಮಿಸ್ಟರ್ ವ್ಯವಸ್ಥೆಯೂ ಇಂತಹ ಕಲಿಕೆಗೆ ಒತ್ತು ಕೊಟ್ಟಿದೆ. ಆರು ತಿಂಗಳ ಅವಧಿಯಲ್ಲಿ ಅವಸರದಲ್ಲಿ ಪಡೆದಿದ್ದನ್ನು ಪರೀಕ್ಷೆಗಳಲ್ಲಿ ಮಂಡಿಸುವ ವ್ಯವಸ್ಥೆ ಯಿಂದ ಹೆಚ್ಚು ಅಂಕಗಳ ಗಳಿಕೆ ಸಾಧ್ಯವಾಗಿರ ಬಹುದು; ಕಲಿತ ವಿಷಯದೊಳಗೆ ಚಿಂತನೆ ಸಾಧ್ಯ ವಾಗಿದೆಯೇ ? ವಾರ್ಷಿಕ ಪರೀಕ್ಷೆಯಿದ್ದಾಗ ಪ್ರತಿಭಾವಂತ ಸಾಧನೆಗಳು ಆಗಿರದೆ ಇರಬಹುದು. ಆದರೆ ಪಠ್ಯಗಳ ಜತೆ ಆಳವಾಗಿ ಸಾವಧಾನವಾಗಿ ಅನುಸಂಧಾನ ಮಾಡುವ, ತರಗತಿ–ಪಠ್ಯದಾಚೆಗೆ ಶ್ರೇಷ್ಠ ಸಿನಿಮಾ ನೋಡುವ, ನಾಟಕ ಮಾಡುವ, ಸಾಮಾಜಿಕ ಚಳುವಳಿಯಲ್ಲಿ ಭಾಗವಹಿಸುವ, ಪ್ರವಾಸ ಹೋಗುವ ಅವಕಾಶಗಳು ಆಗ ಹೆಚ್ಚಾಗಿದ್ದವು. ಸೆಮಿಸ್ಟರ್ ವ್ಯವಸ್ಥೆಯ ಧಾವಂತ ಈ ಕ್ರಿಯಾಶೀಲ ಸಾಧ್ಯತೆಗಳನ್ನೆಲ್ಲ ಕತ್ತರಿಸಿ ಹಾಕಿತು. ವಿಜ್ಞಾನ ಅಧ್ಯಯನಗಳಿಗೆ ರೂಪಿಸಲಾಗುವ ಮಾದರಿಗಳನ್ನು ಮಾನವಿಕ ಮತ್ತು ಸಮಾಜ ವಿಜ್ಞಾನಗಳ ಮೇಲೆ




ಯಾಂತ್ರಿಕವಾಗಿ ಹೇರುತ್ತಿರುವುದರ ಪರಿಣಾಮವಿದು.

ಇಂತಹ ವ್ಯವಸ್ಥೆಯೊಳಗೂ ಕೆಲವು ಕಾಣ್ಕೆ, ಕನಸುಗಾರಿಕೆ, ಕ್ರಿಯಾಶೀಲತೆ, ಸಾಮಾಜಿಕ ಬದ್ಧತೆ ಇರುವ ವಿದ್ಯಾರ್ಥಿಗಳು ಸಮಾಜವಿಜ್ಞಾನ ಮತ್ತು ಮಾನವಿಕಗಳಲ್ಲಿ ಮೂಡಿಬರಲು ಸಾಧ್ಯವಾಗಿರುವುದು, ಕೆಲವು ವಿಶ್ವವಿದ್ಯಾಲಯಗಳಲ್ಲಿ ಇನ್ನೂ ಜೀವಂತವಾಗಿ ಉಳಿದಿರುವ ಚಿಂತನೆ ಮತ್ತು ಕ್ರಿಯಾಶೀಲತೆಯನ್ನು ಜ್ಞಾನವೆಂದು ತಿಳಿದಿರುವ ಪರಿಸರದಿಂದ. ಸಾಮಾನ್ಯ ವಾಗಿ ಮಾಹಿತಿ ಪ್ರಧಾನ ಪಾಠ, ಪಠ್ಯ, ಪ್ರಶ್ನೆಪತ್ರಿಕೆಗಳು ಸ್ವಂತ ಚಿಂತನೆ ಮತ್ತು ಕ್ರಿಯಾಶೀಲತೆಯನ್ನು ಹೊಸಕಿಹಾಕುತ್ತವೆ. ಈಚೆಗೆ ಭಾರತದ ಕ್ಯಾಂಪಸ್ಸು ಗಳಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಗಮನಿಸಿದರೆ, ಪ್ರಭುತ್ವಗಳು ತಮ್ಮ ಪಾಡಿಗೆ ಓದಿಕೊಂಡು ಪರೀಕ್ಷೆ ಬರೆಯುತ್ತಿರದೆ, ಸಾಮಾಜಿಕ ರಾಜಕೀಯ ಆರ್ಥಿಕ ಧಾರ್ಮಿಕ ವ್ಯವಸ್ಥೆಗಳ ಮೇಲೆ ಸ್ವತಂತ್ರ ಬುದ್ಧಿಯಿಂದ ಪ್ರಶ್ನೆ ಎತ್ತುತ್ತಿರುವ ವಿದ್ಯಾರ್ಥಿ ಗಳನ್ನು ಹೊಸಕಿ ಹಾಕುತ್ತಿರುವುದು ಕಾಣುತ್ತದೆ. ಇದು ದಲಿತ ಮತ್ತು ಬಡತನದ ಹಿನ್ನೆಲೆಯಿಂದ ಉನ್ನತ ಶಿಕ್ಷಣಕ್ಕೆ ಬಂದ ವಿದ್ಯಾರ್ಥಿಗಳ ದಮನ ಮಾತ್ರವಲ್ಲ, ಚಿಂತನಶೀಲ ಪ್ರಶ್ನೆ ಎತ್ತುವ ಹೊಸತಲೆಮಾರಿನ ಜೀವಂತಿಕೆಯ ನಾಶ ಕೂಡ. ಪುಣೆಯ ಚಲನಚಿತ್ರ ಸಂಸ್ಥೆಯ ವಿದ್ಯಾರ್ಥಿಗಳಾಗಲಿ, ಕನ್ಹಯ್ಯಕುಮಾರ್–ರೋಹಿತ್ ವೇಮುಲಾ ಅವರಾಗಲಿ, ಮದರಾಸು ಐಐಟಿಯ ಅಂಬೇಡ್ಕರ್ ಪೆರಿಯಾರ್ ವೇದಿಕೆಯ ಎಂಜಿನಿಯರಿಂಗ್ ವಿದ್ಯಾರ್ಥಿಗಳಾಗಲಿ, ಪ್ರತಿಭಾವಂತರು ಮಾತ್ರವಲ್ಲ, ಸಮಾಜಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಪ್ರಭುತ್ವದ ಮುಂದಿಡುವ ಜ್ಞಾನ ಚಿಂತನೆ ಮತ್ತು ಕ್ರಿಯಾಶೀಲತೆ ಉಳ್ಳವರು ಕೂಡ. ರೋಹಿತ್ ಜ್ಞಾನಪ್ರಧಾನ ಸಮಾಜವನ್ನು ಕಟ್ಟ ಬೇಕೆಂದಿದ್ದ ಮಹದಾಸೆಯಿದ್ದ ಉದಯೋನ್ಮುಖ ಸಂಶೋಧಕ ನಾಗಿದ್ದನು; ಕನ್ಹಯ್ಯ, ಅಧ್ಯಯನದ ಜತೆಗೆ ಕ್ರಿಯೆಯನ್ನು ಬೆರೆಸಿ ಮಾನವಿಕ ಅಧ್ಯಯನವನ್ನು ಮಾನವೀಯವಾಗಿಸಲು ಯತ್ನಿಸುತ್ತಿರುವವನು; ರೋಹಿತ್ ಬರೆದ ಪತ್ರ ಮತ್ತು ಕನ್ಹಯ್ಯ ಜೈಲಿಂದ ಹೊರಬಂದಾಗ ಮಾಡಿದ ಭಾಷಣ ಇದಕ್ಕೆ ಸಾಕ್ಷಿ. ಇವು ಇವರು ಕೇವಲ ಸಂಶೋಧನ ವಿದ್ಯಾರ್ಥಿಗಳಲ್ಲ; ಈ ಸಮಾಜವನ್ನು ದೇಶವನ್ನು ಸಮಾನತೆಯ ಆಧಾರದಲ್ಲಿ ಕಟ್ಟಬೇಕೆಂದು ಬಯಸಿದ ಕನಸುಗಾರರು; ಕೊಟ್ಟ ಕುದುರೆ ಏರುವವರಲ್ಲ. ಕುದುರೆಯನ್ನೂ ಹೋಗಲು ಸೂಚಿಸಿರುವ ಹಾದಿಯನ್ನೂ ಪ್ರಶ್ನಿಸುವವರು; ಜ್ಞಾನವೆಂದರೆ ಮಾಹಿತಿಯಲ್ಲ, ಹೊಸ ಹೊಸ ವಿಶ್ಲೇಷಣೆ ಮತ್ತು ವ್ಯಾಖ್ಯಾನಗಳ ಮೂಲಕ ಹುಟ್ಟಿಸುವ ಚಿಂತನೆ; ಈ ಚಿಂತನೆ ಮಾನವೀಯ ಕಾಳಜಿ, ಸಾಮಾಜಿಕ ಬದ್ಧತೆಗಳ ವಿಸ್ತರಣೆ ಎಂದು ನಂಬಿದವರು.

ಮಾಹಿತಿ ಜ್ಞಾನವಾಗಿ ರೂಪಾಂತರಗೊಳ್ಳುವುದು ಮಾತ್ರ ಮುಖ್ಯವಲ್ಲ. ಆ ಜ್ಞಾನಕ್ಕಿರುವ ಸಾಮಾಜಿಕ ಕಾಣ್ಕೆ ಮತ್ತು ಕ್ರಿಯಾಶೀಲತೆ ಯಾವುದು ಎಂಬುದು ಸಹ ಮುಖ್ಯ. ಜೀವಪರ ಪರಿವರ್ತನೆ ಅಗತ್ಯ ವಾಗಿರುವ ದೇಶದಲ್ಲಿ ಇದು ಮುಖ್ಯ ಪ್ರಶ್ನೆ. ಸಂಗ್ರಹಿಸಿದ ಮಾಹಿತಿಯನ್ನು ಮಥಿಸಿ ಜ್ಞಾನವನ್ನಾಗಿಸಿ, ಸಮಾಜದ ಆರೋಗ್ಯಪೂರ್ಣ ಪಲ್ಲಟಕ್ಕೆ ಬೇಕಾದ ತತ್ವದರ್ಶನವನ್ನಾಗಿ ರೂಪಿಸಿಕೊಡುವ ಸಂಶೋಧಕರು ಇರುವಂತೆ; ಮಾಹಿತಿಯನ್ನು ಅಥವಾ ಅದನ್ನು ಮಥಿಸಿ ಉದ್ಯಮಿಗಳ ಅಥವಾ ಪ್ರಭುತ್ವಕ್ಕೆ ಉದ್ದೇಶಕ್ಕೆ ಬೇಕಾದ ಪ್ರಮೇಯವನ್ನಾಗಿ ಮಾಡಿ ಅರ್ಪಿಸುವ ವಿಜ್ಞಾನಿಗಳೂ ಸಮಾಜ ಶಾಸ್ತ್ರಜ್ಞರೂ ಇದ್ದಾರೆ. ಸಮಾಜವಿಜ್ಞಾನ ಮತ್ತು ಮಾನವಿಕಗಳಲ್ಲಿ ಮಥಿಸಿ ಪಡೆದ ಜ್ಞಾನವು ಹೀಗೆ ಹೊಸ ಸಮಾಜವನ್ನು ಕಟ್ಟುವ ಕಾಣ್ಕೆಯಾಗಿ ರೂಪಾಂತರ ಹೊಂದಿದಾಗಲೇ ಅದಕ್ಕೆ ಸಾರ್ಥಕತೆ. ಆದರೆ ಜ್ಞಾನಕ್ಕೆ ಹೀಗೆ ತಾತ್ವಿಕ ಕಾಣ್ಕೆ, ಸಾಮಾಜಿಕ ಬದ್ಧತೆ, ಮಾನವೀಯತೆಗಳನ್ನು ಜೋಡಿ ಸುವವರು ಪ್ರಭುತ್ವಕ್ಕೆ ಕಂಟಕರಾಗಿ ತೋರುವರು.

ಸಮಾಜವಿಜ್ಞಾನ ಮತ್ತು ಮಾನವಿಕಗಳಲ್ಲಿ, ಮಾಹಿತಿ ಅಥವಾ ಅದರಿಂದ ಉತ್ಪನ್ನಗೊಂಡ ಜ್ಞಾನದಲ್ಲಿ, ಅದನ್ನು ಕೊಡುತ್ತಿರುವವರ ದೃಷ್ಟಿಕೋನ ವೊಂದು ಅಂತರ್ಗತವಾಗಿರುತ್ತದೆ. ಅದನ್ನು ಪಡೆದುಕೊಂಡು ಬಳಸುವವರಿಗೆ ಈ ಸೂಕ್ಷ್ಮ ಗೊತ್ತಾಗದಿದ್ದರೆ, ಅವರು ಕೊಡುವವರ ದೃಷ್ಟಿಕೋನ ಗಳನ್ನೂ ವಿಮರ್ಶೆಯಿಲ್ಲದೆ ಪಡೆಯುತ್ತಿರುತ್ತಾರೆ. ಇಂದು ಸಂಶೋಧಕರು ಮಾಹಿತಿ ಸುಲಭವಾಗಿ ಸಿಗುವ ಅಂತರ್ಜಾಲಗಳಿಗೆ ಮುಗಿಬಿದ್ದಿದ್ದಾರೆ. ಜಾಲತಾಣಗಳು ಜ್ಞಾನ ನಿರ್ಮಾಣಕ್ಕೆ ಬೇಕಾದ ಆಕರ ಒದಗಿಸುವಲ್ಲಿ ನೆರವಾಗುತ್ತಿವೆ, ನಿಜ. ಆದರೆ ಅವು ಕೊಡಮಾಡುತ್ತಿರುವ ಆಕರ/ಮಾಹಿತಿ ನಿರ್ಲಿಪ್ತ ವಾಗಿಲ್ಲ. ವಿವಿಧ ಹಿತಾಸಕ್ತಿಗಳು ಕ್ರಿಯಾಶೀಲವಾಗಿರುವ ಸಮಾಜದಲ್ಲಿ ಮಾಹಿತಿ ಹಾಗೆ ನಿರ್ಲಿಪ್ತವಾಗಿರುವುದು ಸಾಧ್ಯವೂ ಇಲ್ಲ. ಒಂದೇ ವಿದ್ಯಮಾನಕ್ಕೆ ವಿವಿಧ ಚಾನಲ್ಲು ಮತ್ತು ಪತ್ರಿಕೆಗಳು ಕೊಡುವ ವರದಿ ಮತ್ತು ಮಾಡುತ್ತಿರುವ ವ್ಯಾಖ್ಯಾನಗಳಲ್ಲಿ ಇರುವ ವ್ಯತ್ಯಾಸಗಳನ್ನು ಗಮನಿಸಬೇಕು. ಇಂದು ಜಗತ್ತಿನ ಬಗ್ಗೆ ಮಾಹಿತಿ ಅಥವಾ ಸುದ್ದಿಯ ಮೂಲಕ ನಮ್ಮ ಅರಿವನ್ನು ರೂಪಿಸುತ್ತಿರುವ ಮಾಧ್ಯಮಗಳೂ

ಕಾರ್ಪೊರೇಟ್ ಸಂಸ್ಥೆಗಳ ಒಡೆತನದಲ್ಲಿವೆ. ಅವು ಯಾವುದು ಸುದ್ದಿಯಾಗಬೇಕು ಮತ್ತು ಆಗಬಾರದು ಎಂಬುದನ್ನು ನಿರ್ಧರಿಸುತ್ತವೆ ಮತ್ತು ನಿಯಂತ್ರಿಸುತ್ತವೆ. ಆದ್ದರಿಂದ ದೊರಕುವ ಮಾಹಿತಿಯನ್ನು ಮಥಿಸಿ ಜ್ಞಾನಸೃಷ್ಟಿ ಮಾಡುವ ಕುಶಲತೆಗಿಂತ ಮುಖ್ಯವಾದುದು, ಪಡೆದ ಮಾಹಿತಿಯ ಮೂಲದಲ್ಲೇ ಅಡಗಿರುವ ದೃಷ್ಟಿಕೋನವನ್ನು ಪತ್ತೆಮಾಡುವ ತಾತ್ವಿಕ ಹುಷಾರು. ಆದರೆ ಮಾಹಿತಿಯನ್ನೆಲ್ಲ ಪರಮಸತ್ಯವೆಂದು ಸ್ವೀಕರಿಸುವವರು ಅದನ್ನು ಕೊಟ್ಟವರೊಡ್ಡಿದ ಬಲೆಯೊಳಗೆ ಬೀಳುವ ಮಿಕಗಳಾಗುವರು. ಈ ದೃಷ್ಟಿಯಿಂದ 'ಜಾಲತಾಣ' ಎಂಬಲ್ಲಿರುವ 'ಜಾಲ' ಶಬ್ದವು ಸಾಂಕೇತಿಕವಾಗಿದೆ. ಆದರೆ ಸಾಮಾಜಿಕ ಜಾಲತಾಣಗಳು ಈಗ ಕೇವಲ ಮಾಹಿತಿ ವಿನಿಮಯದ ಆಚೆ ಜ್ಞಾನವನ್ನೂ ಕಾಣ್ಕೆಯನ್ನೂ ಉದ್ದೀಪಿಸುವ ಕಿಡಿಗಳನ್ನು ಹೊಮ್ಮಿಸುತ್ತಿರುವುದನ್ನು ಮರೆಯುವಂತಿಲ್ಲ.

ವಿವಿಧ ಮತೀಯ ರಾಜಕೀಯ ಆರ್ಥಿಕ ಸಿದ್ಧಾಂತಗಳು ದೇಶದ ಇತಿಹಾಸ ವರ್ತಮಾನ ಸಂಸ್ಕೃತಿ ಧರ್ಮಗಳ ಬಗ್ಗೆ ಕೊಡುತ್ತಿರುವ ಮಾಹಿತಿಗಳಲ್ಲೇ ಒಂದು ಸಿದ್ಧ ದೃಷ್ಟಿಕೋನವಿರುತ್ತದೆ. ಧಾರ್ಮಿಕವಾಗಿ ಬಲಪಂಥೀಯವಾದ, ಆರ್ಥಿಕವಾಗಿ ಬಂಡವಾಳಶಾಹಿ ಪರವಾದ, ಸಾಮಾಜಿಕವಾಗಿ ಜಾತಿವಾದದ ಪರವಾಗಿರುವ ಚಿಂತನೆಯು ಭಾರತದ ಹೊಸತಲೆಮಾರಿನಲ್ಲಿ ಬೇರೂರಿರಲು ಕಾರಣ, ಈ ಮೂರೂ ಅಧಿಕಾರಸ್ಥ ವ್ಯವಸ್ಥೆಗಳು ವಿವಿಧ ಸಂವಹನ ಮಾಧ್ಯಮಗಳನ್ನು ಬಳಸಿ, ತಮಗೆ ಬೇಕಾದ ಮಾಹಿತಿಯನ್ನು ಮೇಲೆತ್ತಿ ಬೇಡವಾದುದನ್ನು ಅಡಗಿಸಿ, ಜ್ಞಾನವೆಂದು ಪ್ರಸಾರ ಮಾಡಿರುವ ತಂತ್ರಗಾರಿಕೆ. ಇಲ್ಲಿ ಕೊಡಲಾಗುವ ಮಾಹಿತಿಯನ್ನು ಪ್ರಶ್ನಾತೀತವಾಗಿ ನಂಬುವ ಮನೋಧರ್ಮ ರೂಪಿಸಲಾಗುತ್ತದೆಯೇ ಹೊರತು ಅದನ್ನು ಪ್ರಶ್ನಿಸುವುದನ್ನಲ್ಲ. ಈ ಸನ್ನಿವೇಶಕ್ಕೂ ಬಲಪಂಥೀಯ ಸಿದ್ಧಾಂತದ ಪ್ರಚಾರಕರಾಗಿದ್ದವರು ಸಾಂವಿಧಾನಿಕ ಹುದ್ದೆಗಳನ್ನು ಅಲಂಕರಿಸಿರುವ ಭಾರತದ ರಾಜಕೀಯ ಸನ್ನಿವೇಶಕ್ಕೂ, ಬಂಡವಾಳವಾದದ ಪ್ರತಿಪಾದಕರು ಜಾಗತಿಕ ನಾಯಕತ್ವ ವಹಿಸುವ ಅಂತರರಾಷ್ಟ್ರೀಯ ಸನ್ನಿವೇಶಕ್ಕೂ ಸಂಬಂಧವಿದೆ. ಅಮೆರಿಕದ ಚುನಾವಣೆಗಳಲ್ಲಿ ಪ್ರಚಾರವು ಒಂದು ಉದ್ಯಮವಾಗಿಯೂ ಬೆಳೆದಿರುವುದನ್ನು ಗಮನಿಸಬೇಕು. ಈ ಉದ್ಯಮಶೀಲತೆಯ ಸ್ಪರ್ಶ ಭಾರತದ ಚುನಾವಣೆಗಳಿಗೂ ಬಂದಿದೆ. 'ಪ್ರಚಾರಕ'ರ ಕೆಲಸ ಉತ್ಪಾದನೆಯಾದ ಸರಕು ಅಥವಾ ಜ್ಞಾನವನ್ನು ನಿಷ್ಠೆಯಿಂದ ಮಾರುವುದು ಇಲ್ಲವೇ ಹರಡುವುದು. ಪ್ರಚಾರವು ಸಿದ್ಧಾಂತಗಳಿಗೆ ಮಾತ್ರವಲ್ಲ, ವ್ಯಾಪಾರ ಸಂಸ್ಕೃತಿಗೂ ಅಸ್ತ್ರ. ಭಾರತದ ಅಷ್ಟೇಕೆ ಜಗತ್ತಿನ ರಾಜಕಾರಣ ಹೊಸ ನಾಯಕತ್ವಗಳನ್ನು ಈಗ ರೂಪಿಸುತ್ತಿರುವುದು ಜನಪರ ಸಮಾಜವಾದಿ ಚಳುವಳಿಗಳಲ್ಲ; ಬಂಡವಾಳಶಾಹಿ ಆರ್ಥಿಕತೆ ಹಾಗೂ ಬಲಪಂಥೀಯ ಜನಾಂಗವಾದಿ ಸಿದ್ಧಾಂತಗಳು. ಇವು ತಮ್ಮನ್ನು ನೆಲೆಗೊಳಿಸಿಕೊಳ್ಳುವುದಕ್ಕಾಗಿ ಉತ್ಪಾದನೆ ಮಾಡುವ ಸುದ್ದಿ ಮತ್ತು ಮಾಹಿತಿಯನ್ನು ಜ್ಞಾನವೆಂದು ಕರೆಯುತ್ತವೆ. ಇದನ್ನು ಜನರಿಗೆ ತಲುಪಿಸುವ ಮಾಧ್ಯಮ ಮತ್ತು ಶಿಕ್ಷಣವನ್ನು ಪ್ರಚಾರದ ಸಾಧನವಾಗಿ ರೂಪಾಂತರಿಸುತ್ತವೆ. ಇದನ್ನೇ ಚೋಂಸ್ಕಿಯವರು 'ಒಪ್ಪಿಗೆಯ ಉತ್ಪಾದನೆ' ಎಂಬ ಪರಿಕಲ್ಪನೆಯಲ್ಲಿ ವಿವರಿಸಿದರು. ಈ ಒಪ್ಪಿಗೆಯ ಉತ್ಪಾದನೆ ಈಗ ದೊಡ್ಡ ಉದ್ಯಮವಾಗಿದೆ. ಸ್ಪರ್ಧಾ ಪರೀಕ್ಷೆಯ ಪತ್ರಿಕೆಗಳು ಇದರ ಒಂದು ಭಾಗವಾಗಿರುವಂತೆ ಕಾಣುತ್ತಿದೆ. ಸ್ಪರ್ಧೆಯು ಮಾರುಕಟ್ಟೆಯ ಆತ್ಮಕ್ಕೆ ಹತ್ತಿರವಾದ ಪರಿಭಾಷೆ.

ಇದೇ ಹಿನ್ನೆಲೆಯಲ್ಲಿ ಜಗತ್ತಿನಾದ್ಯಂತ ಬಲಪಂಥೀಯರು ಮತ್ತು ಮಾರುಕಟ್ಟೆ ಶಕ್ತಿಗಳು ಅಧಿಕಾರ ಹಿಡಿಯುತ್ತಿರುವುದನ್ನು ಅರ್ಥ ಮಾಡಿಕೊಳ್ಳಬೇಕು. ಭಾರತದಲ್ಲಂತೂ ಮತೀಯ ಬಲಪಂಥೀಯತೆ ಮತ್ತು ಬಂಡವಾಳವಾದಗಳು ವಿಚಿತ್ರವಾಗಿ ಏಕೀಭವಿಸಿವೆ. ಸರ್ಕಾರಗಳಲ್ಲಿ ಶಿಕ್ಷಣ ಮಂತ್ರಿಗಳಾಗಿರುವರಲ್ಲಿ ಹೆಚ್ಚಿನವರು, ಈ ವಿಷಯದಲ್ಲಿ ತಿಳುವಳಿಕೆಯಿಲ್ಲದವರು; ಅಥವಾ ಸಾಂವಿಧಾನಿಕ ಅಧಿಕಾರವಿಲ್ಲದ ಸೈದ್ಧಾಂತಿಕ ಸಂಘಟನೆಗಳಿಂದ ಪಡೆದ ನಿರ್ದೇಶನಗಳನ್ನು ಜಾರಿಮಾಡುವ ಉಪಕರಣಗಳಾದವರು. ಶಿಕ್ಷಣವು ವ್ಯಾಪಾರೀಕರಣ ಪಡೆದಿರುವುದರಿಂದ, ಉದ್ಯಮಿಗಳು ಶಿಕ್ಷಣ ಕ್ಷೇತ್ರದಲ್ಲಿ ತಮಗೆ ಬೇಕಾದ ಬದಲಾವಣೆ ಮಾಡಲು ಅವಕಾಶ ಕಲ್ಪಿತವಾಗಿದೆ. ಇದರ ಭಾಗವಾಗಿ ದೊಡ್ಡ ಪ್ರಮಾಣದಲ್ಲಿ ಖಾಸಗಿ ವಿಶ್ವವಿದ್ಯಾಲಯಗಳು ಸ್ಥಾಪನೆಯಾಗಿವೆ. ಸ್ವತಃ ಪ್ರಭುತ್ವಗಳೇ ಉದ್ಯಮಿಗಳನ್ನು ಶಿಕ್ಷಣ ಕ್ಷೇತ್ರದಲ್ಲಿ ಬದಲಾವಣೆ ತರಲು 'ಟಾಸ್ಕ್‌ಫೋರ್ಸು'ಗಳನ್ನು ರಚಿಸಿವೆ. ಕೆಲವೊಮ್ಮೆ ಉದ್ಯಮಿಗಳೇ ಶಿಕ್ಷಣ ಮಂತ್ರಿಗಳಾಗಿ ಇರುವುದೂ ಉಂಟು. ಸಹಜವಾಗಿ ಈ ಮಂತ್ರಿಗಳು ಮತ್ತು ಉದ್ಯಮಿಗಳು, ಖಾಸಗೀಕರಣದ ಒಲವುಳ್ಳ ಅಧಿಕಾರಿಗಳನ್ನು ಖಾತೆಯ ನೀತಿನಿರೂಪಣ ಜಾಗದಲ್ಲಿ ನೇಮಿಸುತ್ತಾರೆ. ಈ ಅಧಿಕಾರಿಗಳು ಖಾಸಗಿ ವಿಶ್ವವಿದ್ಯಾಲಯಗಳ ಪರವಾಗಿ ಕೆಲಸ ಮಾಡುತ್ತಾರೆ. ಈ ಲಾಬಿಯು ಸಾರ್ವಜನಿಕರ ಹಿತಾಸಕ್ತಿ ಮತ್ತು ನಿಯಂತ್ರಣರಹಿತವಾದ 'ಸ್ವಾಯತ್ತ' ಶಿಕ್ಷಣೋದ್ಯಮವನ್ನು ಬೆಳೆಸಿದೆ, ಇದು ಸೃಷ್ಟಿಸುವ 'ಜ್ಞಾನ'ವನ್ನು ಸರಕಾಗಿಸುತ್ತದೆ. ಈ ಸರಕೀಕರಣಗೊಂಡ ಜ್ಞಾನವು ಔದ್ಯಮಿಕ ಹಿತಾಸಕ್ತಿಯನ್ನೇ ಹೊಂದಿರುತ್ತದೆ. ಇದು ತಮ್ಮ ಹಿತಾಸಕ್ತಿಯನ್ನು ಅಥವಾ ಅದಕ್ಕೆ ಬೆಂಬಲವಾಗಿ ನಿಲ್ಲುವ ಪ್ರಭುತ್ವವನ್ನು ವಿಮರ್ಶೆಗೆ ಒಳಪಡಿಸುವ ಜ್ಞಾನವನ್ನು ಅಪಾಯಕರ ಎಂದು ಭಾವಿಸುತ್ತದೆ.

ಈ ಹಿನ್ನೆಲೆಯಲ್ಲಿ ಜ್ಞಾನದ ಮರುವ್ಯಾಖ್ಯಾನ ಮಾಡುವ ಸಾಮಾಜಿಕ ಬದ್ಧತೆ, ಮಾನವೀಯ ಕಾಣ್ಕೆಯುಳ್ಳ ಚಿಂತಕರನ್ನು ಕೊಲ್ಲುವ, ಬುದ್ಧಿಜೀವಿಗಳನ್ನು ಗೇಲಿಮಾಡುವ, ವಿದ್ಯಾರ್ಥಿಗಳನ್ನು ಆತ್ಮಹತ್ಯೆಗೆ ದೂಕುವ ಇಲ್ಲವೇ ಜೈಲಿಗೆ ಹಾಕುವ ಘಟನೆಗಳು ಜರುಗುತ್ತಿರುವುದು, ಈ ಖಾಸಗೀಕರಣ–ಮತೀಕರಣದ ತರ್ಕದ ಆತ್ಯಂತಿಕ ಕೊನೆಯಂತಿದೆ. ದೇಶವನ್ನು ಜ್ಞಾನಸಮಾಜವಾಗಿಸಲು ಬಯಸುವವರನ್ನು ಶಿಕ್ಷಿಸುತ್ತಿರುವುದಕ್ಕೂ ಭಾರತದ ಪ್ರಭುತ್ವಗಳು ಮಾರುಕಟ್ಟೆ ಸಂಸ್ಕೃತಿ ಮತ್ತು ಮತೀಯ ದುರಭಿಮಾನದ ಸಿದ್ಧಾಂತಗಳನ್ನು ಒಪ್ಪಿಕೊಂಡಿರುವುದಕ್ಕೂ ಸಂಬಂಧವಿದೆ. ಭಾರತದಲ್ಲಿ ಸಾಮಾಜಿಕ ಆರ್ಥಿಕ ಸಮಾನತೆಯುಳ್ಳ ಸಮಾಜ ನಿರ್ಮಾಣಕ್ಕೆ ಬೇಕಾದ ಮನಸ್ಸು ಮತ್ತು ಪ್ರತಿಭೆಗಳಿವೆ. ಅವನ್ನು ಬೆಳೆಸುವ ಕೆಲವಾದರೂ ಅಧ್ಯಾಪಕರು, ವಿಭಾಗಗಳು ಹಾಗೂ ಸಂಸ್ಥೆಗಳಿವೆ. ಆದರೆ ಮಾರುಕಟ್ಟೆ ಮತ್ತು ಬಲಪಂಥೀಯ ಸಿದ್ಧಾಂತಗಳ ಅಗತ್ಯಕ್ಕೆ ತಕ್ಕಂತೆ ಶಿಕ್ಷಣವನ್ನು ಬದಲಾಯಿಸುವ ಪ್ರಭುತ್ವಗಳು ಅವಕ್ಕೆ ಬೇಕಾದ ಸ್ವಾತಂತ್ರ್ಯ ಮತ್ತು ಧನಸಹಾಯ ನೀಡುತ್ತಿಲ್ಲ. ದೇಶಕ್ಕೆ ಬೇಕಾದ ಶಿಕ್ಷಣ ನೀತಿಯನ್ನು ಬಲಿಷ್ಠ ದೇಶಗಳ ಅಥವಾ ಅವುಗಳ ಪ್ರತಿನಿಧಿಗಳಂತಿರುವ ಬಹುರಾಷ್ಟ್ರೀಯ ಕಂಪನಿಗಳ ಮರ್ಜಿಗೆ ಅನುಸಾರವಾಗಿ ರೂಪಿಸಲು ಬದಲಾಯಿಸಲು ಪ್ರಭುತ್ವಗಳು ತುದಿಗಾಲಲ್ಲಿವೆ. ಪ್ರಭುತ್ವ ಮತ್ತು ಯುಜಿಸಿ ಸೇರಿ, ಖಾಸಗಿ

ವಿಶ್ವವಿದ್ಯಾಲಯಗಳಿಗೆ ಕೊಡುತ್ತಿರುವ ಉತ್ತೇಜನವನ್ನು ಗಮನಿಸಬೇಕು. ಈಗ ವಿಶ್ವವಿದ್ಯಾಲಯಗಳು ಗೌರವ ಡಾಕ್ಟರೇಟ್ ಪದವಿಗಳನ್ನು ಉದ್ಯಮಿಗಳಿಗೆ ಕೊಡಲು ತವಕಿಸುತ್ತಿವೆ. ವಿಶ್ವವಿದ್ಯಾಲಯಗಳ ಮೌಲ್ಯಮಾಪನಕ್ಕೆಂದು ಇರುವ ನ್ಯಾಕ್ ಸಂಸ್ಥೆಯು 'ನಿಮ್ಮ ಪರಿಸರದಲ್ಲಿರುವ ಉದ್ಯಮಕ್ಕೆ ಕೊಟ್ಟಿರುವ ಕೊಡುಗೆ ಯಾವುದು ?' ಎಂಬ ಪ್ರಶ್ನೆಯನ್ನು ಕೇಳುತ್ತಿದೆ. ಹೀಗೆ ಉದ್ಯಮ ಮತ್ತು ಪ್ರಭುತ್ವ ನಿಯಂತ್ರಿತ ಶಿಕ್ಷಣವು ಎಂದೂ ಅಸಮಾನತೆ ಇರುವ ಸಾಮಾಜಿಕ ಆರ್ಥಿಕ ವ್ಯವಸ್ಥೆಗೆ ಮುಜುಗರವಾಗುವಂತಹ, ದೇಶದ ಎಲ್ಲ ಜನರು ಸಮಾನವಾಗಿ ಸಂಪನ್ಮೂಲ ನಾಗರಿಕ ಹಕ್ಕು ಅನುಭವಿಸುವಂತಹ ಪ್ರಶ್ನೆಗಳನ್ನು ಮುಂದಿಡುವುದನ್ನು ಜ್ಞಾನವೆಂದು ಮಾನ್ಯಮಾಡಲು ನಿರಾಕರಿಸುತ್ತಿರುವುದು ಸಹಜವಾಗಿದೆ.

ಜಗತ್ತಿನ ಅತ್ಯುತ್ತಮ ವಿಶ್ವವಿದ್ಯಾಲಯಗಳಲ್ಲಿ ಯಾಕೆ ಭಾರತವಿಲ್ಲ ಎಂಬ ಅಥವಾ ಜಗದೀಶ ಚಂದ್ರ ಬೋಸರ ಬಳಿಕ ಭಾರತದಲ್ಲಿದ್ದು ನೊಬೆಲ್ ಪ್ರಶಸ್ತಿ ಪಡೆದವರು ಇನ್ನೊಬ್ಬರು ಬರಲಿಲ್ಲ ಎಂದು ಕೆಲವರು ದುಗುಡದಿಂದ ಕೇಳುವ ಪ್ರಶ್ನೆಯನ್ನು ಇಲ್ಲಿಯೇ ಚರ್ಚಿಸಬೇಕು. ಭಾರತದ ಗತವು ಭವ್ಯವಾಗಿತ್ತು, ಭಾರತ ಈಗ ವಿಶ್ವಗುರುವಾಗಬೇಕಿದೆ ಎಂದು ಆಶಿಸುವವರೂ ತಮ್ಮ ಈ ಅಭಿಮಾನವೇ ಜ್ಞಾನವಿರೋಧಿ ನಿಲುವಿಂದ ಹುಟ್ಟಿದೆ ಎಂಬುದನ್ನು ಮರೆಯುತ್ತಾರೆ. ಸ್ವವಿಮರ್ಶೆ ಮತ್ತು ಚಿಂತನಶೀಲತೆಯಿಲ್ಲದೆ ಯಾವ ದೇಶವೂ ಜ್ಞಾನದಲ್ಲಿ ದೊಡ್ಡದನ್ನು ಸಾಧಿಸಿಲ್ಲ. ಯಾರೋ ರೂಪಿಸಿದ ಮಾನದಂಡಗಳಿಗೆ ನಮ್ಮ ವಿಶ್ವವಿದ್ಯಾಲಯಗಳು ಯಾಕೆ ಹೊಂದಿಕೊಳ್ಳಬೇಕು ಎಂಬ ಪ್ರಶ್ನೆಯಲ್ಲಿ ತಥ್ಯವಿದೆ. ಆದರೆ ನಮ್ಮದೇ ಆದ ಜನಪರ ಮಾನದಂಡಗಳನ್ನು ರೂಪಿಸಿಕೊಂಡು ನೋಡುವಾಗಲೂ ಅವು ಜ್ಞಾನಕೇಂದ್ರಗಳಾಗಿವೆಯೇ ? ವಿದೇಶಿ ಮಾನದಂಡಗಳಲ್ಲಿ ಸ್ಥಾನ ಪಡೆಯುತ್ತಿರುವ ಸಂಸ್ಥೆಗಳು ಸಾಮಾನ್ಯವಾಗಿ ವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಸಂಬಂಧಿಸಿವೆ. ಮಾನವಿಕ ಮತ್ತು ಸಮಾಜವಿಜ್ಞಾನದ ಸಂಸ್ಥೆಗಳಲ್ಲ ಎನ್ನುವುದು ಮಾಹಿತಿಯನ್ನೇ ಸಂಶೋಧನೆಯ ಹೆಸರಲ್ಲಿ ಪುನರುತ್ಪಾದನೆ ಮಾಡುತ್ತಿರುವ ಸುಳಿಯಲ್ಲಿ ಅವು ಸಿಕ್ಕಿಕೊಂಡಿರುವುದನ್ನು ಸೂಚಿಸುತ್ತಿದೆ. ಹೆಚ್ಚಿನ ವಿಶ್ವವಿದ್ಯಾಲಯಗಳು ಜ್ಞಾನ ಮತ್ತು ಸ್ವತಂತ್ರ ಚಿಂತನಶೀಲತೆಗೆ ಬೆನ್ನುಕೊಟ್ಟಿವೆ. ಖಾಸಗಿ ವಿಶ್ವವಿದ್ಯಾಲಯಗಳ ಪರಿಕಲ್ಪನೆ ಬಂದ ಬಳಿಕ ಜ್ಞಾನದ ವ್ಯಾಖ್ಯೆಯು ಸಾಮಾಜಿಕವಾಗಿ ಮತ್ತಷ್ಟು ಹೊಣೆಗೇಡಿಯಾಗಿದೆ. ವಿಶ್ವವಿದ್ಯಾಲಯದ ಘಟಿಕೋತ್ಸವದಲ್ಲಿ ಮತ್ತು ಸಾರ್ವಜನಿಕ ಭಾಷಣಗಳಲ್ಲಿ, ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ, ವಿಚಾರಕ್ರಾಂತಿಗೆ ಆಹ್ವಾನ ಎಂದು ಮುಕ್ಕಾಲು ಶತಮಾನದ ಹಿಂದೆ ಕುವೆಂಪು ಕೊಟ್ಟಿದ್ದ ಕರೆಯನ್ನು ಈಗ ಬೇರೆ ಮಾರ್ಪಾಟಿನೊಂದಿಗೆ ಮತ್ತೊಮ್ಮೆ ಕೇಳಿಸಿಕೊಳ್ಳಬೇಕಿದೆ.

ಭಾರತೀಯ ವಿಜ್ಞಾನ ಸಂಸ್ಥೆಯ ಹಿರಿಯ ವಿಜ್ಞಾನಿ ಸಿ. ಎನ್. ಆರ್. ರಾವ್ ಅವರು ಹಲವಾರು ಸಲ 'ಬಂಡವಾಳಶಾಹಿ ಮಾರುಕಟ್ಟೆ ವ್ಯವಸ್ಥೆಯಲ್ಲಿ ಸರ್ಕಾರ ಹಾಗೂ ಸಾರ್ವಜನಿಕರು ಐಟಿಬಿಟಿಗಳಿಗೆ ಅತಿಯಾದ ಮನ್ನಣೆ ನೀಡಿದ್ದರಿಂದ, ಅದರ ದೊಡ್ಡ ಸಂಬಳದ ಆಕರ್ಷಣೆಗೆ ಸಿಕ್ಕು ಮೂಲವಿಜ್ಞಾನಕ್ಕೆ ಸೇರಿದ ಭೌತಶಾಸ್ತ್ರ ರಸಾಯನಶಾಸ್ತ್ರ ಜೀವಶಾಸ್ತ್ರಗಳಲ್ಲಿ ಎಂ.ಎಸ್ಸಿ. ಪದವಿಗೆ ಪ್ರತಿಭಾವಂತರು ಬಾರದಂತಾಗಿದೆ. ಇದರಿಂದ ಮೂಲಸಂಶೋಧನೆ ಕ್ಷೀಣವಾಗುತ್ತಿದೆ. ಇದು ಭಾರತದ ವಿಜ್ಞಾನ ಲೋಕದಲ್ಲಿ ಅಪಾಯಕಾರಿ ಬೆಳವಣಿಗೆ' ಎಂದು ಅಳಲು ತೋಡಿಕೊಂಡಿದ್ದಾರೆ. ಹೊಸ ಬಂಡವಾಳಶಾಹಿ ಮಾರುಕಟ್ಟೆಯಲ್ಲಿ ಪ್ರಮುಖ ಉದ್ಯಮವಾಗಿ ಬೆಳೆದ ಐಟಿ, ಮಾರುಕಟ್ಟೆಯ ನೀತಿಗಳು ಶಿಕ್ಷಣದ ಆದ್ಯತೆಗಳನ್ನು ಪ್ರಭಾವಿಸುವುದಕ್ಕೆ ಮತ್ತು ಭಾರತವು ಜ್ಞಾನಸಮಾಜದ ಪಥದಿಂದ ವಿಮುಖಗೊಂಡಿರುವುದಕ್ಕೆ ಮತ್ತೊಂದು ನಿದರ್ಶನ. ಭಾರತದ ಶಿಕ್ಷಣೋದ್ಯಮವು ಐಟಿ ಉದ್ಯಮದ ಭಾಗವಾಗಿ ಇಂಜಿನಿಯರುಗಳನ್ನು ಉತ್ಪಾದಿಸುವುದಕ್ಕೆ ತೊಡಗಿದೆ. ಐಟಿಯು (ಮಾಹಿತಿ ತಂತ್ರಜ್ಞಾನ) ತಾನೇ ಸಂಶೋಧಿತ ಜ್ಞಾನವಲ್ಲ. ಜ್ಞಾನದ ಅನ್ವಯವಷ್ಟೆ. ಕಾರ್ಪೊರೇಟ್ ವಲಯದ ಅಘೋಷಿತ ಜೀತದಾಳುಗಳಂತಿರುವ ಇಂಜಿನಿಯರುಗಳಿಂದ ಮೂಲ ಸಂಶೋಧನೆ ಸಾಧ್ಯವಾಗಿಲ್ಲ.

ಒಂದು ಸಮಾಜವು ಚಿಂತನಶೀಲವಾಗಿರುವುದಕ್ಕೂ ಸಂಶೋಧನೆಗಳಲ್ಲಿ ಮಾಹಿತಿಯನ್ನು ಮಥಿಸಿ ವಿಶ್ಲೇಷಣೆ ವ್ಯಾಖ್ಯಾನಗಳು ಹುಟ್ಟುವುದಕ್ಕೂ ಸಂಬಂಧ ಇದೆ. ಸಂಶೋಧಕರು ಮೆಥಾಡಾಲಜಿ ತರಗತಿಗಳಲ್ಲಿ ಕಲಿಯುವ ವಿಧಾನಗಳು ತಾಂತ್ರಿಕವಾದವು. ಆದರೆ ಸಂಶೋಧನೆಗೆ ಬೇಕಾದ ಸ್ವತಂತ್ರ ಚಿಂತನೆಯ ಮನೋವೃತ್ತಿ ಸಾಮಾಜಿಕ ಪರಿಸರದಿಂದಲೂ ಬರುತ್ತದೆ. ಆದ್ದರಿಂದ ಜೀವಂತ ಸಂಶೋಧನೆಗಳು ಬರದಿರಲು ಸಂಶೋಧನೆಯನ್ನು ನಿಯಂತ್ರಿಸುವ ಸಮಾಜವೂ ಕಾರಣವಾಗುತ್ತದೆ. ಆ ಸಮಾಜವನ್ನು ಅವೈಚಾರಿಕತೆಯತ್ತ, ಪ್ರಶ್ನೆಯನ್ನು ನಾಶ ಮಾಡುವತ್ತ, ವಿಶ್ಲೇಷಣೆಯನ್ನು ನಿರಾಕರಿಸುವತ್ತ ಕೆಲವು ಶಕ್ತಿಗಳು ನಡೆಸಿಕೊಂಡು ಹೋಗುತ್ತಿವೆ. ನಮ್ಮ ಸಮಾಜಗಳಲ್ಲಿ ಕಾಣಿಸಿಕೊಂಡಿರುವ ಧಾರ್ಮಿಕ ಮೂಲಭೂತವಾದ ಮತೀಯವಾದಗಳು ಜ್ಞಾನಸಮಾಜದ ಶತ್ರುಗಳಾಗಿವೆ. ಬಾಂಗ್ಲಾ ದೇಶದಲ್ಲಿ ನಾಸ್ತಿಕ, ಮಾನವತಾವಾದಿಗಳನ್ನು, ಪ್ರಾಧ್ಯಾಪಕರನ್ನು, ಲೇಖಕರನ್ನು, ಚಿಂತಕರನ್ನು, ವಿಚಾರವಾದಿಗಳನ್ನು ಕೊಲ್ಲಲಾಗುತ್ತಿದೆ. ಪಾಕಿಸ್ತಾನದಲ್ಲಿಯೂ ಹೊಸ ವಿಚಾರ ಮಂಡಿಸುವವರನ್ನು ಧರ್ಮದ್ರೋಹದ ಕಾನೂನು ಬಳಸಿ ಹತ್ತಿಕ್ಕಲಾಗುತ್ತಿದೆ. ಬಹುತೇಕ ಇಸ್ಲಾಮಿಕ್ ದೇಶಗಳು ಅತಿಯಾಗಿ ಧಾರ್ಮಿಕ ಮೂಲಭೂತವಾದವನ್ನು ಬೆಳೆಸಿ ಒಂದು ಕಾಲಕ್ಕೆ ಜ್ಞಾನ ಚಿಂತನ ಪ್ರಧಾನವಾಗಿದ್ದ ಸಮಾಜವನ್ನು ನಾಶ ಮಾಡಿಕೊಂಡಿವೆ. ಈ ಚಿಂತನ ನಾಶಕಾರ್ಯ ಭಾರತ ದಲ್ಲಿಯೂ ಬೆಳೆಯುತ್ತಿದೆ. ಸಂಶೋಧನೆಗೆ ಬದಲು ಪುರಾಣದ ಕತೆ ಹೇಳುವುದನ್ನು ಬಲಪಂಥೀಯ ರಾಜಕಾರಣವು ಬೆಂಬಲಿಸುತ್ತಿದೆ. ವಿಜ್ಞಾನದಲ್ಲಾಗಿರುವ ಈ ಅಧಃಪತನಕ್ಕೂ ದೃಶ್ಯಮಾಧ್ಯಮಗಳಿಗೆ ಕುರುಡಾಗಿ ಒಪ್ಪಿಸಿಕೊಂಡು ಜ್ಯೋತಿಷ್ಯ ವಾಸ್ತುಗಳನ್ನು ನಂಬಿರುವ ಹೆಚ್ಚಿನ ಜನರು ನಗರವಾಸಿ ಮಧ್ಯಮ ವರ್ಗದ ವಿದ್ಯಾವಂತರು ಆಗಿರುವುದಕ್ಕೂ; ಚಿಂತಕರ ಕೊಲೆಯನ್ನು ಬಹುಸಂಖ್ಯಾತ ಜನರು ಮಾಮೂಲಿ ಘಟನೆ ಎಂಬಂತೆ ನಿರ್ಲಿಪ್ತವಾಗಿ ನೋಡುತ್ತಿರುವುದಕ್ಕೂ ; ಕೊಲೆಗಳನ್ನು ಕೆಲವರು ಸಂಭ್ರಮಿಸುವುದಕ್ಕೂ ; ಸರ್ಕಾರಗಳು ಮೌಢ್ಯನಿಷೇಧ ಕಾನೂನನ್ನು ತರಲಾಗದ ಅಸಹಾಯಕತೆ ಅನುಭವಿಸುತ್ತಿರುವುದಕ್ಕೂ ; ಜ್ಯೋತಿಷಿಗಳು ಹಣಕೊಟ್ಟು ಟಿವಿ ಕಾರ್ಯಕ್ರಮ ನಡೆಸುವಷ್ಟು ಬಲಿಷ್ಠರಾಗಿರುವುದಕ್ಕೂ ; ನಟ ಬಚ್ಚನ್ ನಡೆಸಿ ಕೊಡುವ 'ಕೋನ್ ಬನೇಗಾ ಕರೋಡ್‌ಪತಿ' ಎಂಬ ಮಾಹಿತಿಯನ್ನೇ ಜ್ಞಾನವೆಂದು ನಂಬಿಸುವ ಕಾರ್ಯಕ್ರಮವು ಮನರಂಜನೆಯ ಹೆಸರಿನಲ್ಲಿ ಜನಪ್ರಿಯವಾಗಿರುವುದಕ್ಕೂ ಸಂಬಂಧಗಳಿವೆ. ಈ ಕಾರ್ಯಕ್ರಮದ ಹೆಸರಲ್ಲೇ ಸ್ಪರ್ಧೆಯ ಅಂಶವಿದೆ ಮತ್ತು ದೊಡ್ಡ ಮೊತ್ತದ ಹಣವನ್ನು ಸೂಚಿಸುವ ಶಬ್ದವಿದೆ. ಮಾಹಿತಿ ಮಾರುಕಟ್ಟೆಯಲ್ಲಿ ಜೂಜಾಟದ ರೂಪದಲ್ಲಿ ಹಣವನ್ನು ಆಮಿಷವಾಗಿ ಒಡ್ಡಲಾಗಿದೆ. ಅದನ್ನು ಗೆಲ್ಲುವವರು ಜ್ಞಾನಿಗಳೆಂದು ಬಿಂಬಿತವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಕೇವಲ ಮಾಹಿತಿ ಪರೀಕ್ಷಿಸುವ, ವಿಶ್ಲೇಷಣಾತ್ಮಕ ಉತ್ತರಗಳಿಗೆ ಅವಕಾಶವಿಲ್ಲದ ಪರೀಕ್ಷಾ ವಿಧಾನಗಳು ಆಕಸ್ಮಿಕ ಅಥವಾ ಬಿಡಿಘಟನೆಗಳೆಂದು ಅನಿಸುವುದಿಲ್ಲ. ಪರೀಕ್ಷೆಗಳನ್ನು ಯಾರು ಯಾಕಾಗಿ ಮಾಡುತ್ತಾರೆ; ಪ್ರಶ್ನೆಗಳು ಯಾಕೆ ಮಾಹಿತಿ ಪ್ರಧಾನವಾಗಿರುತ್ತವೆ, ಎಂಬ ಶೈಕ್ಷಣಿಕ ಪ್ರಶ್ನೆ, ರಾಜಕೀಯ ಆರ್ಥಿಕ ಸಾಮಾಜಿಕ ಆಯಾಮಗಳಲ್ಲಿವೆ; ಪಿಎಚ್.ಡಿ.ಗಳಲ್ಲಿ ಚಿಂತನಶೀಲತೆ ಯಾಕೆ ಕಡಿಮೆ ಯಾಗುತ್ತಿದೆ ಎಂಬ ಪ್ರಶ್ನೆಯ ಮೂಲವೂ ಇದರಲ್ಲಿದೆ. ಮಾರುಕಟ್ಟೆ ಆರ್ಥಿಕತೆ, ಜನಾಂಗವಾದ, ಫ್ಯಾಸಿಸಂ, ಮಾಹಿತಿ ಪ್ರಧಾನತೆ, ಚಿಂತನೆಯ ದ್ವೇಷ ಮತ್ತು ಜ್ಞಾನವಿರೋಧಗಳು ಪರಸ್ಪರ ಸಂಬಂಧವುಳ್ಳ ಸಂಗತಿಗಳು.

ಒಂದು ನಾಡಿನಲ್ಲಿ ಬುದ್ಧಿಜೀವಿ ಚಿಂತಕರ ಮಹತ್ವ ಇರುವುದೇ ಇಲ್ಲಿ. ಅವರು ಮಾಹಿತಿ ಮತ್ತು ಜ್ಞಾನದ ನಡುವಣ, ಮಾಹಿತಿ ಮತ್ತು ಪ್ರಚಾರದ ನಡುವಣ, ಬಂಡವಾಳಶಾಹಿ ಜ್ಞಾನ ಮತ್ತು ಜನತೆಯ ಜ್ಞಾನಗಳ ನಡುವಣ ವ್ಯತ್ಯಾಸಗಳನ್ನು ವಿಂಗಡಿಸಿ ತೋರಬಲ್ಲರು. ನಿಜವಾದ ಶಿಕ್ಷಣ ಮತ್ತು ಸಂಶೋಧನೆ ತಮ್ಮ ವಿದ್ಯಾರ್ಥಿ ಮತ್ತು ಸಂಶೋಧಕರಿಗೆ ಮನವರಿಕೆ ಮಾಡಬೇಕಾಗಿರುವುದೇ ಈ ಎಚ್ಚರವನ್ನು. ಸಂಶೋಧಕರು ಈ ಎಚ್ಚರದಲ್ಲೇ ತಿಳುವಳಿಕೆ ಸೃಷ್ಟಿ ಮಾಡಬೇಕಿದೆ. ಆಗ ಆ ತಿಳುವಳಿಕೆ ಪ್ರತಿಷ್ಠಾಪಿತ ಧಾರ್ಮಿಕ ರಾಜಕೀಯ ಆರ್ಥಿಕ ವ್ಯವಸ್ಥೆಗಳನ್ನು ಪ್ರಶ್ನಿಸುವ ಗುಣವನ್ನು ಹೊಂದಿರಬಲ್ಲದು; ಅಧಿಕಾರಸ್ಥ ಸ್ಥಾಪಿತ ವ್ಯವಸ್ಥೆಗಳು ರೂಪಿಸಿ ಹರಡುವ ಮಿಥ್ಯೆಗಳನ್ನು ಒಡೆದು ನಿಜವಾದ ತಥ್ಯವನ್ನು ಜನರ ಮುಂದಿಡುವ ಕೆಲಸವನ್ನು ಮಾಡಬಲ್ಲದು; ಹೊಸ ಸಮಾಜಕ್ಕೆ ಬೇಕಾದ ವೈಚಾರಿಕ ಬೌದ್ಧಿಕ ಬುನಾದಿ ಹಾಕಬಲ್ಲದು.

---

**ಡಾ॥ ರಹಮತ್ ತರೀಕೆರೆ**
'ಸೂಫಿ', ಎಂ. ಪಿ. ಪ್ರಕಾಶ ನಗರ, ಹೊಸಪೇಟೆ – ೫೮೩ ೨೦೧, ಬಳ್ಳಾರಿ ಜಿಲ್ಲೆ



## ಕೊಲಂಬಿಯ ಶಾಂತಿ ಒಪ್ಪಂದ

ದಕ್ಷಿಣ ಅಮೆರಿಕದ ದೇಶ ಕೊಲಂಬಿಯ ಮಾದಕ ವಸ್ತುಗಳ ಉತ್ಪಾದನೆ ಮತ್ತು ಕಳ್ಳಸಾಗಾಣಿಕೆಗೆ ಹೆಸರು ವಾಸಿ. ಅಲ್ಲಿನ ಅಧ್ಯಕ್ಷ ಯುವಾನ್ ಮ್ಯಾನ್ಯುಯೆಲ್ ಸಾಂಟೋಸ್ ೨೦೧೬ರ ನೊಬೆಲ್ ಶಾಂತಿ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ. ಕ್ರಿಸ್ಟಫರ್ ಕೊಲಂಬಸ್‌ನ ಹೆಸರು ಈ ದೇಶದ ಹೆಸರಿಗೆ ಮೂಲ. ಇತರ ದಕ್ಷಿಣ ಅಮೆರಿಕದ ದೇಶಗಳಂತೆ ಇದೂ ಕೂಡ ಹದಿನಾರನೇ ಶತಮಾನದಲ್ಲಿ ಸ್ಪ್ಯಾನಿಷ್ ವಸಾಹತು. ೧೮೨೧ರಲ್ಲಿ ಸ್ವಾತಂತ್ರ್ಯ ಪಡೆದುಕೊಂಡ ಈ ದೇಶ ಶಾಂತಿಯನ್ನೇ ಕಾಣದ ದೇಶ ಎನ್ನಬಹುದು. ಅಂತರ್ಯುದ್ಧದಲ್ಲೇ ಮುಳುಗಿರುವ ದೇಶ. ೧೮೫೦ರಿಂದ ಲಿಬರಲ್ ಮತ್ತು ಕನ್ಸರ್‌ವೇಟಿವ್‌ಗಳ ನಡುವೆ ನಿರಂತರ ಹಣಾಹಣಿ. ಸರದಿಯ ಮೇಲೆ ಅಧಿಕಾರಕ್ಕೇರುವ ಈ ಪಕ್ಷಗಳ ನಡುವೆ ಸಶಸ್ತ್ರ ಘರ್ಷಣೆ. ಈ ಘರ್ಷಣೆಗಳಲ್ಲಿ ೧೯೪೮ರಿಂದ ೧೯೫೮ರವರೆಗೆ ಹತ್ತು ವರ್ಷಗಳಲ್ಲಿ ಎರಡು ಲಕ್ಷ ಜನ ಅಸುನೀಗಿದ್ದು, ಇತಿಹಾಸದಲ್ಲಿ 'ನರಹತ್ಯೆ' ಎಂದೇ ದಾಖಲಾಗಿದೆ. ಈ ಮಧ್ಯೆ ಕೆಲಕಾಲ ಸರ್ವಾಧಿಕಾರಿ ಆಡಳಿತ.

ಕಳೆದ ಐವತ್ತು ವರ್ಷಗಳಿಂದ ಮತ್ತೆ ಕನ್ಸರ್‌ವೇಟಿವ್ ಮತ್ತು ಲಿಬರಲ್‌ಗಳ ನಡುವೆ ಸಶಸ್ತ್ರ ಘರ್ಷಣೆಗಳು ನಡೆಯುತ್ತಲೇ ಇವೆ. ಈ ಅಂತರ್‌ಯುದ್ಧದಲ್ಲಿ ೨,೬೦,೦೦೦ಕ್ಕಿಂತ ಹೆಚ್ಚು ಜನ ಹತರಾಗಿದ್ದಾರೆ, ಸುಮಾರು ೪೫,೦೦೦ ಮಂದಿ ನಾಪತ್ತೆಯಾಗಿದ್ದಾರೆ ಮತ್ತು ಹತ್ತಿರ ಹತ್ತಿರ ಏಳು ಮಿಲಿಯ ಜನ ನಿರ್ವಸಿತರಾಗಿದ್ದಾರೆ. ಇಂಥ ದುರಂತ ಸಂಭವಿಸಿರುವ ಕೊಲಂಬಿಯಾದ ಜನಸಂಖ್ಯೆ ಸುಮಾರು ನಾಲ್ಕು ಕೋಟಿ. ವಿಸ್ತೀರ್ಣದಲ್ಲಿ, ಜನಸಂಖ್ಯೆಯಲ್ಲಿ ಕರ್ನಾಟಕಕ್ಕಿಂತ ಕಿರಿದು. ಅಧ್ಯಕ್ಷ ಸಾಂಟೋಸ್ ಪ್ರಯತ್ನದಿಂದ ೨೦೧೬ರಲ್ಲಿ ಶಾಂತಿ ಒಪ್ಪಂದವಾಯಿತು. ಆದರೆ ಈ ಒಪ್ಪಂದ ಕಾರ್ಯಗತವಾಗಲೇ ಇಲ್ಲ. ಅಕ್ಟೋಬರ್ ೨ರಂದು ಜರುಗಿದ ಜನಮತಗಣನೆಯಲ್ಲಿ ಈ ಒಪ್ಪಂದ ತಿರಸ್ಕೃತವಾಯಿತು. ಮತ್ತೆ ಎರಡೂ ಪಕ್ಷಗಳ ಮಧ್ಯೆ ಅಧ್ಯಕ್ಷ ಸಾಂಟೋಸ್ ನಡೆಸಿದ ಸಂಧಾನದಿಂದ ನವೆಂಬರ್ ೨೪ರಂದು ಶಾಂತಿ ಒಪ್ಪಂದ ಒಂದಕ್ಕೆ ಸಹಿಯಾಗಿ ಜಾರಿಯಾಗಿದೆ. ಈ ಒಪ್ಪಂದ ಎಷ್ಟು ಸ್ಥಿರ ಎಂದು ಈಗಲೇ ಹೇಳುವಂತಿಲ್ಲ. ಆದರೂ ಐವತ್ತು ವರ್ಷಗಳಿಂದ ಇದ್ದ ಸಂಘರ್ಷ ಅಂತ್ಯಗೊಂಡಿರುವುದು ಸಂತೋಷದ ಸಂಗತಿ. ಶಾಂತಿ ಒಪ್ಪಂದವಾದ ಮೇಲೆ ಅಧ್ಯಕ್ಷ ಸಾಂಟೋಸ್ ಅವರು ನೊಬೆಲ್ ಶಾಂತಿ ಪುರಸ್ಕಾರವನ್ನು ಅಂಗೀಕರಿಸಿ, ಪಡೆದುಕೊಂಡರು.

ಕೊಲಂಬಿಯಾದಲ್ಲಿ ಆಗಿರುವ ಈ ಒಪ್ಪಂದ ಸಂಘರ್ಷದಲ್ಲಿ ತೊಡಗಿರುವ ಸಿರಿಯ, ಯೆಮೆನ್, ದಕ್ಷಿಣ ಸುಡಾನ್, ನೈಜೀರಿಯ ಮೊದಲಾದ ದೇಶಗಳಿಗೆ ಮಾದರಿಯಾಗಬಲ್ಲದು ಎನ್ನುವುದು ಸಾಂಟೋಸರ ಆಶಯ. ಸತತವಾಗಿ ಶ್ರಮಿಸುವುದರಿಂದ ಇಂಥ ಶಾಂತಿ ಒಪ್ಪಂದ ಸಾಧ್ಯ. ಕೊಲಂಬಿಯಾದ ಶಾಂತಿ ಒಪ್ಪಂದ ಸಂಪೂರ್ಣವಾಗಿ ಕಾರ್ಯಗತವಾಗಲು ಹಾದಿ ಸುಗಮವೇನಲ್ಲ.






## ಅಮೆರಿಕದ ಆಡಳಿತದಲ್ಲಿ ಕಾರ್ಪೊರೇಟ್ ಬಿಗಿಹಿಡಿತ

ಜನವರಿ ಮೂರನೇ ವಾರದಲ್ಲಿ ಅಮೆರಿಕದ ಅಧ್ಯಕ್ಷ ಗದ್ದುಗೆಗೆ ಏರುವ ಡೋನಾಲ್ಡ್ ಟ್ರಂಪ್ ನಡೆನುಡಿ ಎಲ್ಲ ಯರ್‍ರಾಬಿರ್‍ರಿ. ರಿಯಲ್ ಎಸ್ಟೇಟ್ ವ್ಯವಹಾರ ಚತುರ ಎನಿಸಿಕೊಂಡು ಯಶಸ್ವೀ ಉದ್ಯಮಿಯಾಗಿರುವ ಈತ ನೇರವಾಗಿ ಅಧಿಕಾರವನ್ನು ಕಾರ್ಪೊರೇಟ್ ವಲಯದ ಪ್ರಮುಖರಿಗೆ ಹಂಚಿಕೊಡುವುದರಲ್ಲಿ ನಿರತರಾಗಿದ್ದಾರೆ. ಇದುವರೆಗೆ ಕಾರ್ಪೊರೇಟ್ ವಲಯ ಆಡಳಿತದ ಮೇಲೆ ಪ್ರಬಲವಾದ ಪ್ರಭಾವ ಬೀರುತ್ತಿತ್ತು. ಅಮೆರಿಕದಲ್ಲಿ ಸಿಐಎ, ಎಫ್‌ಬಿಐ, ಮಿಲಿಟರಿ ಕೈಗಾರಿಕಾ ಸಂಕೀರ್ಣದ ಪಾತ್ರ ರಹಸ್ಯವೇನಲ್ಲ. ಯಾರೇ ಅಧಿಕಾರಕ್ಕೆ ಬಂದರೂ ಈ ಮೂರನ್ನೂ ಮೀರಿ ನಡೆದುಕೊಳ್ಳುವುದು ದುಸ್ಸಾಧ್ಯ. ದ್ವಿಪಕ್ಷೀಯ ವ್ಯವಸ್ಥೆ ಬೇರೂರಿರುವ ಈ ದೇಶದಲ್ಲಿ ಜನರಿಗೆ ಆಯ್ಕೆಯೇ ಇಲ್ಲವಾಗಿದೆ. ಅಮೆರಿಕದ ವೈಭವವನ್ನು ಜಗತ್ತಿನಲ್ಲಿ ಮತ್ತೆ ವಿಜೃಂಭಿಸುತ್ತೇನೆ ಎಂದು ಆರ್ಭಟಿಸುತ್ತಿರುವ ಟ್ರಂಪ್ ಆಡಳಿತೆಯಿಂದ ಹೆಚ್ಚಿನ ಬದಲಾವಣೆಯನ್ನೇನೂ ನಿರೀಕ್ಷಿಸಲಾಗದು. ದಿನಕ್ಕೊಂದು ಬಗೆಯ ಹೇಳಿಕೆ ನೀಡುತ್ತಿರುವ ಈತನದು ಹರಕು ಬಾಯಿ ಎನ್ನಬಹುದು. ಇದರಲ್ಲಿ ಕಾಳಿಗಿಂತ ಜೊಳ್ಳೇ ಹೆಚ್ಚು.

ಸಂಪುಟ ರಚನೆಯಲ್ಲಿ ತೊಡಗಿರುವ ಟ್ರಂಪ್ ಈಗಾಗಲೇ ಆಡಳಿತ ಹೇಗಿರುವುದೆಂಬುದರ ಸೂಚನೆ ನೀಡಿದ್ದಾರೆ. ರಿಪಬ್ಲಿಕನ್ ಪಕ್ಷದ ವರಿಷ್ಠರನ್ನು, ಆಡಳಿತದಲ್ಲಿ ಯಾವುದೇ ಬಗೆಯ ಅನುಭವ ಪಡೆಯದಿರುವ ಬಿಲಿಯನೇರ್‌ಗಳನ್ನು, ಮಾಜಿ ಮಿಲಿಟರಿ ಅಧಿಕಾರಿಗಳನ್ನು ನೇಮಕ ಮಾಡಿಕೊಳ್ಳಲಿದ್ದಾರೆ. ಸಾಧ್ಯವಾದಷ್ಟು ಕಾರ್ಪೊರೇಟ್ ವಲಯದ 'ಸಿಇಒ'ಗಳನ್ನು ಅಧಿಕಾರದ ಪ್ರಮುಖ ಸ್ಥಾನಗಳಿಗೆ ತರಲು ಬಯಸುತ್ತಿದ್ದಾರೆ. ರಾಷ್ಟ್ರೀಯ ಭದ್ರತಾ ವ್ಯವಸ್ಥೆಗೆ ಮೈಕೇಲ್ ಫ್ಲೆಂಗೊನ, ರಕ್ಷಣಾ ಕಾರ್ಯದರ್ಶಿಯಾಗಿ ಜೇಮ್ಸ್ ಬ್ಯಾಟಿಸ್ ಇವರನ್ನು ನೇಮಕ ಮಾಡಲಿದ್ದಾರೆ. ಇಬ್ಬರೂ ಮಿಲಿಟರಿ ಜನರಲ್ಲುಗಳು, ಆಫ್ಘಾನಿಸ್ತಾನದ ಯುದ್ಧದಲ್ಲಿ ಭಾಗಿಯಾಗಿದ್ದವರು. ವಾಣಿಜ್ಯ ಕಾರ್ಯದರ್ಶಿ ವಿಲ್ಬರ್‌ಲಾಸ್ ಎಂಬುವರು ಸ್ಪೈಸ್ ಜೆಟ್ ಕಂಪೆನಿಯಲ್ಲಿ ಶೇ. ೩೦ರಷ್ಟು ಷೇರುಗಳನ್ನು ಹೊಂದಿರುವವರು. ವಿದೇಶಾಂಗ ಕಾರ್ಯದರ್ಶಿಯಾಗಿ ನೇಮಕಗೊಂಡಿರುವ ರೆಕ್ಸ್ ಡಬ್ಲ್ಯು. ಟಿಲ್ಲರ್‌ಸನ್ ಅಮೆರಿಕದ ಪೆಟ್ರೋಲಿಯಂ ಉದ್ಯಮವೊಂದರ 'ಸಿಇಒ'. ಈತನಿಗೆ ಯಾವುದೇ ಬಗೆಯ ರಾಜತಾಂತ್ರಿಕ ಅನುಭವವಿಲ್ಲ. ಹುದ್ದೆಯನ್ನು ಹೇಗೆ ನಿರ್ವಹಿಸುವರೋ ನೋಡಬೇಕು. ಟೈವಾನ್‌ನೊಂದಿಗೆ ಸಂಪರ್ಕ ಬೆಳೆಸುವ ಒಲವು ತೋರಿರುವ ಟ್ರಂಪ್‌ನ ಚೀಣಾ ನೀತಿ ಅನಿಶ್ಚಿತ. ಹಾಗೆಯೇ ರಷ್ಯಾದ ಪುಟಿನ್ ಜೊತೆ ಸಂಬಂಧವೂ ಈಗ ಗೊಂದಲದಲ್ಲಿದೆ. ಭಾರತದ ಮಟ್ಟಿಗೆ 'ಹೆಚ್‌ಒನ್' ವೀಸಾದ ತೂಗುಕತ್ತಿ ಇದ್ದೇ ಇದೆ. ಚುನಾವಣೆ ಪ್ರಚಾರ ಕಾಲದಲ್ಲಿ ಈ ವೀಸಾಗಳು ದುರ್ಬಳಕೆಯಾಗುತ್ತಿರುವ ಬಗ್ಗೆ ಸಾಕಷ್ಟು ಮಾತಾಡಿದ್ದಾರೆ. 'ಅಮೆರಿಕಗೆ ಮೊದಲ ಆದ್ಯತೆ' ಎಂದು ಘೋಷಿಸಿರುವ ಟ್ರಂಪ್ 'ಅಮೆರಿಕನ್ ಪದಾರ್ಥಗಳನ್ನು ಕೊಳ್ಳಿರಿ', 'ಅಮೆರಿಕನ್ನೇ ಉದ್ಯೋಗದಲ್ಲಿ ನೇಮಕ ಮಾಡಿಕೊಳ್ಳಿ' ಎಂಬ ಘೋಷಣೆ ನೀಡಿದ್ದಾರೆ. ಇದರ ಪರಿಣಾಮ ಏನೆನ್ನುವುದು ಈಗಲೇ ಹೇಳುವಂತಿಲ್ಲ.

**ಸೀಯಾರ್ಕೆ**

'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂ.–೮೫

**ಎಚ್. ಎಲ್. ಕೇಶವಮೂರ್ತಿ**




**ನಾ**ಲ್ಕು ಜನರ ಎದುರು ಅಂದವಾಗಿ ಕಾಣಬೇಕು ಅನ್ನುವ ಆಸೆ ಎಲ್ಲರಿಗೂ ಇರುತ್ತದೆ. ಹಾಗೆ ಇತರರ ಕಣ್ಣಿಗೆ ಬೀಳಬೇಕಾದರೆ ಚೂರುಪಾರು ಚಿನ್ನವಾದರೂ ಮೈಮೇಲೆ ಇರಲೇಬೇಕು. 'ಬರೀ ಕತ್ತು, ಬೋಳು ಲತ್ತಿಗೆ ಅವಳ ಕಣ್ಣಿಂದ ನೋಡಕಾಗದು ಮಗ' ಎಂಬ ನೋವಿನ ನುಡಿಗಳು ಸಾಮಾನ್ಯ. ಪೊಲೀಸಿನವರು ಒಡವೆಗಳ ಪ್ರದರ್ಶನ ಮಾಡಬೇಡಿ, ಸರಗಳ್ಳರು ಇದ್ದಾರೆ ಅಂತ ಎಚ್ಚರಿಕೆ ಕೊಡುತ್ತಾರೆ, ನಿಜ. 'ಒಂಟಿ ಮಹಿಳೆಯ ಸರ ಕಿತ್ತು ಪರಾರಿ', 'ಮಾಂಗಲ್ಯ ಅಪಹರಿಸಿದ ಬೈಕ್ ಸವಾರ', 'ಮತ್ತೆ ಸರಗಳ್ಳರ ಕೈಚಳಕ' – ಇಂತಹ ಸುದ್ದಿಗಳು ಪತ್ರಿಕೆಗಳಲ್ಲಿ ಬರುತ್ತಲೇ ಇರುತ್ತವೆ ಎಂಬುದೂ ನಿಜ. ಕೆ. ಎಸ್. ನಿಸಾರ್ ಅಹಮದ್ ಅವರ ಒಂದು ಕವಿತೆ ಓದಿದ ನೆನಪು. ಅದರಲ್ಲಿ ನವದಂಪತಿಗಳು ಹೊರಗೆಲ್ಲೋ ಹೋಗುವ ಪ್ರೋಗ್ರಾಂ ಇರುತ್ತದೆ. ಹೆಂಡತಿ ಶೃಂಗಾರಕ್ಕೇ ಗಂಟೆಗಟ್ಟಲೆ ತೆಗೆದುಕೊಳ್ಳುತ್ತಾಳೆ. ಮನಸ್ಸಿಗೆ ಒಪ್ಪುವ ಸೀರೆ ಉಡುತ್ತಾಳೆ, ಆಕರ್ಷಕವಾಗಿರುವ ಒಡವೆ ತೊಡುತ್ತಾಳೆ, ಮುಖಕ್ಕೆ ತೆಳುವಾಗಿ ಪೌಡರ್ ಸಿಂಪಿಸಿಕೊಳ್ಳುತ್ತಾಳೆ. ತುಟಿಗೆ ಲಿಪ್‌ಸ್ಟಿಕ್ ಲೇಪಿಸಿಕೊಳ್ಳುತ್ತಾಳೆ. ಗಂಡ ಹೊರಗೆ ಅಸಹನೆಯಿಂದ ಕಾಯುತ್ತಾ ಇರುತ್ತಾನೆ. ಅಲಂಕರಿಸಿಕೊಂಡ ಹೆಂಡತಿ ಕೊನೆಗೂ ಹೊರಗೆ ಬರುತ್ತಾಳೆ. ಗಂಡ ನೋಡುತ್ತಾನೆ. ಅಷ್ಟೊಂದು ಶ್ರಮವಹಿಸಿ ಅಲಂಕರಿಸಿಕೊಂಡ ಆ ದೇಹವನ್ನು ಬುರ್ಖಾ ಆವರಿಸಿದೆ! ಪೊಲೀಸಿನವರು ಮಾಂಗಲ್ಯ ಸರಗಳನ್ನು ಸೆರಗಿನಿಂದ ಮರೆಮಾಡಿಕೊಳ್ಳಿ ಎಂದರೆ ಬುರ್ಖಾ ಹೆಂಡತಿ ತರಹವೇ ಆಗುತ್ತೆ ಅಲ್ವಾ. ಕೆಲವರು ನಗುವೇ ಸುಂದರ ಆಭರಣ ಅನ್ನುತ್ತಾರೆ. ಹಂಗನ್ನುತ್ತಾರೆ ಅಂತ ಮೈಮೇಲೆ ಚೂರುಪಾರು ಚಿನ್ನಾನೂ ಇಲ್ಲದೆ ಮೂವತ್ತೆರಡು ಹಲ್ಲನ್ನೂ ಕಿಸಿದುಕೊಂಡು ನಿಂತುಕೊಂಡರೆ 'ಅದೊಂದು ಹಲ್ಲು ಬೀರಿ' ಅಂತಾರೆ ಅಷ್ಟೇಯ... ನಮ್ಮ ಹಳ್ಳಿಕಡೆ 'ತತ್ತೀನಿ ತತ್ತೀನಿ ಅಂತ ತಂದ ನೋಡು ಹಲ್ಬೀರಿಯ' ಅಂತ ಮೂದಲಿಸ್ತಾರೆ. ಕಳ್ಳತನ ತಡೆಯಲಾಗದ ಪೊಲೀಸಿನವರು, ಒಡವೆ ಮಾಡಿಸಲಾರದ ದರಿದ್ರ ನೋವು ಅಂತಾರೆ ಅಂತ ಒಡವೆ ಮೇಲಿನ ವ್ಯಾಮೋಹವೇನೂ ಕಡಿಮೆ ಆಗಿಲ್ಲ ಅನ್ನುವುದೇ ಸಮಾಧಾನದ ಸಂಗತಿ!




ಒಡವೆ ಪುರಾಣ ಬಿಚ್ಚುವುದಕ್ಕೆ ಕಾರಣ ಇದೆ. ತಮಿಳುನಾಡಿನ ಜನರ ಪಾಲಿನ 'ಅಮ್ಮ' ಮುಖ್ಯಮಂತ್ರಿ ಜಯಲಲಿತಾ ಆರೋಗ್ಯ ಬಿಗಡಾಯಿಸಿದ್ದು, ಚೆನ್ನೈನ ಅಪೊಲೊ ಆಸ್ಪತ್ರೆ ಸೇರಿದ್ದು, ಸರಿಯಷ್ಟೆ... ಅಲ್ಲಿನ ಅವರ ಹಿಂಬಾಲಕರು ಅಮ್ಮನ ಆರೋಗ್ಯ ಸುಧಾರಿಸಲಿ, ಅವರು ಮೊದಲಿನಂತೆಯೇ ಆರೋಗ್ಯವಂತರಾಗಿ ಹಿಂತಿರುಗಲಿ ಎಂದು ಆಸ್ಪತ್ರೆಯ ಎದುರೇ ದೇವತೆಗೆ ಪ್ರಾರ್ಥನೆ ಸಲ್ಲಿಸಿದರು. ಹೋಮ ಮಾಡಿದರು. ಅಮ್ಮ ಚೇತರಿಸಿಕೊಳ್ಳುವ ಸೂಚನೆ ಕಂಡುಬರಲಿಲ್ಲವಂತೆ. ಕಾರ್ಖಾನೆಗಳು ಚುರುಕಾದುವು: 'ಇಲ್ಲಿ ಗುಣಪಡಿಸಲು ಸಾಧ್ಯವೇ ಇಲ್ಲವಂತೆ; ಸಿಂಗಾಪುರಕ್ಕೆ ಹೋಗ್ತಾರಂತೆ; ಇಲ್ಲಿ ಇಲ್ಲ ಇಂಗ್ಲೆಂಡಿಗೆ ಅಂತೆ ಹೋಗೋದು, ಅಮ್ಮ ಆಗಲೇ ಅಲ್ಲಿಗೆ ಹೋಗಿ ಆಯಿತಂತೆ, ಇಲ್ಲವಂತೆ; ಅಲ್ಲಿನ ವೈದ್ಯರೇ ಇಲ್ಲಿಗೆ ಬರುತ್ತಾರಂತೆ; ಇಲ್ಲ ಇಲ್ಲ, ಇವೆಲ್ಲ ಸುಳ್ಳು ಅಮ್ಮ ಬದುಕಿಯೇ ಇಲ್ಲ. ಈಗ ಇರುವುದು ಅವರ ದೇಹ ಅಷ್ಟೆ. ಜೀವ ಹೋಗಿ ಎಷ್ಟೋ ದಿವಸಗಳಾಗಿವೆ. ತಮಿಳುನಾಡಿನಲ್ಲಿ ದಂಗೆ ಏಳಬಹುದು ಅಂತ ಹಿಂಗೆ ಸುಳ್ಳು ಹೇಳ್ತಿದಾರೆ' ಎನ್ನುವವರೆವಿಗೂ ಸುದ್ದಿ ಹರಿದಾಡಲಾರಂಭಿಸಿತು. ಅಮ್ಮನ ಭಕ್ತರಿಗೆ ಇಂತಹ ಸುದ್ದಿಗಳನ್ನು ಕೇಳಿ ನೋವಾಯಿತು. ಈ ತರಹದ ಸುದ್ದಿ ಹರಡುತ್ತಿರುವವರಿಗೆ ಹಿಡಿ ಹಿಡಿ ಶಾಪ ಹಾಕುತ್ತಾ ಅಮ್ಮನ ಜೀವಕ್ಕೆ ಯಾವುದೇ ಹಾನಿಯಾಗ ಬಾರದೆಂದು ಕಂಡ ಕಂಡ ದೇವರುಗಳಿಗೆ ಮೊರೆಹೋದರು. ಕೆಲವರು ಯಾವ

# ಚಾಮುಂಡಿ ತಾಯಿಯ ಸಂಕಟ

ಹೊಸ ಒಡವೆ ತಂದಾಗ ಅವನ್ನ ಹಾಕಿ ನೋಡಬೇಕು, ಅವನ್ನು ತೊಟ್ಟಾಗ ಹೇಗೆ ಕಾಣಿಸುತ್ತೇವೆಯೋ ನೋಡಬೇಕು ಅನ್ನುವ ತವಕ ಎಲ್ಲರಿಗೂ ಇರುತ್ತೆ. ಆ ತಾಯಿಗೂ ಹಾಗೆ ಆಯಿತು. ಹೊಸ ಆಭರಣಗಳನ್ನು ತೊಟ್ಟಳು. ಕನ್ನಡಿಯ ಮುಂದೆ ನಿಂತಳು. ತನ್ನ ಸೌಂದರ್ಯ ಮೂರುಪಟ್ಟು ಹೆಚ್ಚಾಗಿದೆ ಅಂತ ಹಿರಿ ಹಿರಿ ಹಿಗ್ಗಿದಳು. ಹೀಗೆ ಅಲಂಕರಿಸಿಕೊಂಡಾಗ ನಾಲ್ಕು ಜನ ನೋಡಿದರೇ ಮನಸ್ಸಿಗೆ ಹಿತ ಆಗೋದು. ಚಾಮುಂಡಿ ತಾಯಿ ಸರ್ವಾಲಂಕಾರ ಭೂಷಿತೆಯಾಗಿ ಸಲೀಕರ ಮುಂದೆ ವಿನಾಕಾರಣ ಸುಳಿದಾಡಿದಳು.

ದೇವರನ್ನು ಒಲಿಸಿಕೊಂಡರೆ ಅಮ್ಮನ ಪ್ರಾಣ ಹಾನಿಯಾಗದಂತೆ ಕಾಪಾಡುತ್ತಾರೆ ಎಂದು ಚಿಂತಿಸಿದರು. ಚಾಮುಂಡಿ ತಾಯಿ ಅಮ್ಮನ ಮನೆ ದೇವರು. ಆಕೆಯ ಪರಮ ಭಕ್ತೆ ನಮ್ಮ ಅಮ್ಮ. ಆಕೆಯಿಂದ ಮಾತ್ರ ಇದು ಸಾಧ್ಯ ಅನಿಸಿತು. ದೇವರು ಆದರೆ ಏನು, ಆ ತಾಯಿಯೂ ಹೆಣ್ಣಲ್ಲವೆ. ಆಕರ್ಷಕ ಚಿನ್ನದ ಒಡವೆಗಳ ವ್ಯಾಮೋಹ ಇದ್ದೇ ಇರುತ್ತದೆ. ಅಂತಹ ಒಡವೆಗಳನ್ನು ಮಾಡಿಸಿಕೊಂಡು ತಾಯಿ ಸನ್ನಿಧಿಗೆ ಬಂದರು. ಚಿನ್ನದ ಕಿರೀಟ, ಖಡ್ಗಗಳನ್ನು ಭಕ್ತಿಯಿಂದ ಅರ್ಪಿಸಿದರು. ಆ ತಾಯಿಯ ಬಳಿ ಅಂತಹ ಆಭರಣಗಳು ಇರಲಿಲ್ಲ ಅಂತ ಅಲ್ಲ. ಬೀರುವಿನ ತುಂಬ ಬಟ್ಟೆ ತುಂಬಿದರೂ 'ಈ ಸೀರೆ ಡಿಸೈನ್ ಚೆನ್ನಾಗಿದೆ', 'ಈ ಬಟ್ಟೆ ಟೆಕ್‌ಸ್ಚರ್ ಹೈ ಕ್ಲಾಸಾಗಿದೆ' ಅಂತೆಲ್ಲ ಹೇಳುತ್ತಾ ಆಸೆಯಿಂದ ಕೊಂಡು ತರಲ್ವಾ ಹಾಗೇನ ಆ ತಾಯಿಯೂ ಅವುಗಳನ್ನು ಸಂತೋಷದಿಂದಲೇ ಸ್ವೀಕರಿಸಿದಳು. ಭಕ್ತರಿಗೂ ತೃಪ್ತಿ ಆಯಿತು.

ಹೊಸ ಒಡವೆ ತಂದಾಗ ಅವನ್ನ ಹಾಕಿ ನೋಡಬೇಕು, ಅವನ್ನು ತೊಟ್ಟಾಗ ಹೇಗೆ ಕಾಣಿಸುತ್ತೇವೆಯೋ ನೋಡಬೇಕೆನ್ನುವ ತವಕ ಎಲ್ಲರಿಗೂ ಇರುತ್ತೆ. ಆ ತಾಯಿಗೂ ಹಾಗೆ ಆಯಿತು. ಹೊಸ ಆಭರಣಗಳನ್ನು ತೊಟ್ಟಳು. ಕನ್ನಡಿಯ ಮುಂದೆ ನಿಂತಳು. ತನ್ನ ಸೌಂದರ್ಯ ಮೂರು ಪಟ್ಟು ಹೆಚ್ಚಾಗಿದೆ ಅಂತ ಹಿರಿ ಹಿರಿ ಹಿಗ್ಗಿದಳು. ಹೀಗೆ ಅಲಂಕರಿಸಿಕೊಂಡಾಗ ನಾಲ್ಕು ಜನ ನೋಡಿದರೆನೇ ಮನಸ್ಸಿಗೆ ಹಿತ ಆಗೋದು. ಚಾಮುಂಡಿ ತಾಯಿ ಸರ್ವಾಲಂಕಾರ ಭೂಷಿತೆಯಾಗಿ ಸರೀಕರ ಮುಂದೆ ವಿನಾಕಾರಣ ಸುಳಿದಾಡಿದಳು. ಒಡವೆಗಳನ್ನು ಸರಿಪಡಿಸಿಕೊಳ್ಳುವ ನೆಪದಲ್ಲಿ ಅವುಗಳತ್ತ ಅವರ ಗಮನ ಸೆಳೆದಳು. ಅವರ ಮುಖದಲ್ಲಾಗುತ್ತಿದ್ದ ಬದಲಾವಣೆಗಳು ಮನಕ್ಕೆ ಮುದ ನೀಡಿದವು. ಸರೀಕರ ಮುಂದಿನ ಮೆರೆದಾಟ ಮುಗಿಸಿ ಎದೆ ಉಬ್ಬಿಸಿಕೊಂಡು ಸ್ವಸ್ಥಾನಕ್ಕೆ ಹಿಂದಿರುಗಿದಳು ಆ ತಾಯಿ.

ಇದುವರೆವಿಗೆ ಎಲ್ಲ ಸರಿಯಾಗಿತ್ತು. ಈಗೇನಾಗಿತ್ತು ಅಂದರೆ ತಮಿಳುನಾಡು ಮತ್ತು ಕರ್ನಾಟಕ ರಾಜ್ಯಗಳ ನಡುವೆ ಕಾವೇರಿ ನದಿ ನೀರಿನ ಹಂಚಿಕೆ ವಿವಾದ ಕಗ್ಗಂಟಾಗಿತ್ತು. ಕರ್ನಾಟಕದ ಪಾಲಿನ ನೀರನ್ನೂ ತಮಿಳುನಾಡು ಕಬಳಿಸುತ್ತಿದೆ; ಇದಕ್ಕೆ ಮೂಲ ಕಾರಣವೇ ಅಲ್ಲಿನ ಮುಖ್ಯಮಂತ್ರಿ ಜಯಲಲಿತಾ. ಆಕೆಯ ಆರೋಗ್ಯದ ಜವಾಬ್ದಾರಿ ಹೊರುವಂತೆ ನೀಡಿರುವ ಚಿನ್ನದ ಆಭರಣಗಳನ್ನು ಅರ್ಪಿಸಿಕೊಳ್ಳಬಾರದಿತ್ತು. ತಾಯಿ ಚಾಮುಂಡಿ ಕರ್ನಾಟಕದ ಅದಿದೇವತೆಯೇ ಹೊರತು ತಮಿಳುನಾಡಿನ ಅದಿದೇವತೆಯಲ್ಲ. ನಮ್ಮ ಹಿತರಕ್ಷಣೆ ಮಾಡದೆ ಅವರ ಹಿತ ಕಾಪಾಡಲು ಸಮ್ಮತಿಸಿರುವುದು ಖಂಡನೀಯ... ಮುಂತಾಗಿ ತಮಿಳು ಎಂದರೆ ಕುದಿಯುತ್ತಿದ್ದ ಸಂಘಟನೆ ತಕರಾರು ತೆಗೆಯಿತು. ಈ ಅನಿರೀಕ್ಷಿತ ಬೆಳವಣಿಗೆಯಿಂದ ಚಾಮುಂಡಿ ತಾಯಿ ದಿಗ್ಭ್ರಾಂತಳಾದಳು.

ತಾಯಿ ಹೀಗೆ ಆಗಲು ಕಾರಣ ಇತ್ತು. ಇಂತಹ ಸಂದಿಗ್ಧತೆಗೆ ಆಕೆ ಎಂದೂ ಸಿಲುಕಿರಲಿಲ್ಲ. ಈ ಹಿಂದೆ ಆಕೆಯ ಸಹಾಯ ಬೇಡಿ ಹಲವಾರು ಭಕ್ತರು ಬಂದಿದ್ದರು. ತಮ್ಮ ಬೇಡಿಕೆ ಈಡೇರಿದರೆ 'ತಾಯಿಯ ಕೃಪೆ' ಎಂದು ಹಾಡಿ ಹೊಗಳುತ್ತಿದ್ದರು. ಈಡೇರದೇ ಹೋದಲ್ಲಿ 'ಎಲ್ಲಾ ನನ್ನ ಹಣೆಬರಹ' ಎಂದು ಸಮಾಧಾನ ತಂದುಕೊಳ್ಳುತ್ತಿದ್ದರು. ಬೇರೆ ವಿಷಯಗಳ ಮಾತು ಹಾಗಿರಲಿ, ಕ್ರಿಕೆಟ್ ಅಂದರೆ ಭಾರತೀಯರ ಧರ್ಮ ಎಂದು ಸಿದ್ಧವಾಗಿರುವುದು ಸರಿಯಷ್ಟೆ. ವಿಶ್ವ ಕ್ರಿಕೆಟ್ ಪಂದ್ಯದಲ್ಲಿ ಭಾರತ ಜಯಶೀಲವಾಗಲಿ ಎಂದು ದೇಶಪ್ರೇಮಿಗಳು ಚಾಮುಂಡಿ ತಾಯಿಯ ಸನ್ನಿಧಿಯಲ್ಲಿ ಸತತವಾಗಿ ಮೂರು ದಿವಸ ಹೋಮ ಮಾಡಿದ್ದರು. 'ಗೆದ್ದು ಬಾ ಭಾರತ' ಎನ್ನುವುದು ಪ್ರತಿಯೊಬ್ಬ ಭಾರತೀಯನ ಅಂತರಾಳದ ಕೂಗು ಎಂದು ಹೇಳುತ್ತಾ ಟಿ.ವಿ. ಯವರು ಹೋಮ ನಡೆಯುತ್ತಿರುವುದನ್ನು ಕಣ್ಣಿಗೆ ಕಟ್ಟುವಂತೆ ತೋರಿಸಿದ್ದರು. ಎದುರಾಳಿ ಧಾಂಡಿಗರ ಎದುರು ಭಾರತದ ಬಲಭೀಮರು ಮಣ್ಣು ಮುಕ್ಕಬೇಕಾಯಿತು, ನಿಜ. ಆದರು ಯಾರೂ ಚಾಮುಂಡಿ ತಾಯಿಯನ್ನು ಆಕ್ಷೇಪಿಸುವುದಿಲ್ಲ. ಹೋಮ ನಡೆಸಿ ತೃಪ್ತಿಗೊಳಿಸಿದರೂ ಭಾರತೀಯ ಕ್ರಿಕೆಟಿಗರಿಗೆ ಹೀನಾಯ ಸೋಲಾಯ್ತಲ್ಲ, ಈ ದೇವರು ನಿಷ್ಪ್ರಯೋಜಕ ಎಂದು ಹೀಯಾಳಿಸಲಿಲ್ಲ,

ತಿರಸ್ಕರಿಸಲಿಲ್ಲ, ಎಂದಿನಂತೆಯೇ ಬರುತ್ತಿದ್ದಾರೆ. ಭಕ್ತಿಯಿಂದ ನಡೆದುಕೊಳ್ಳುತ್ತಿದ್ದಾರೆ. ಅದೆಲ್ಲವನ್ನೂ ಬಿಟ್ಟು ತಾಯಿಯ ನಡವಳಿಕೆಯನ್ನೇ ಪ್ರಶ್ನಿಸುತ್ತಿರುವುದು ಚಾಮುಂಡಿ ದೇವಿಗೆ ನೋವು ಉಂಟುಮಾಡಿತ್ತು.

ಯಾವ ದೇವರೂ ಇಂತಹ ಸಂದಿಗ್ಧತೆಗೆ ಸಿಲುಕಿದ ಉದಾಹರಣೆ ಇಲ್ಲ. ಅವರು ಸದಾ ಸುರಕ್ಷಿತ ವಲಯದಲ್ಲಿ ನೆಮ್ಮದಿಯಾಗಿರೋರು. ಇದರಲ್ಲಿ ತಿರುಪತಿ ತಿಮ್ಮಪ್ಪ ನಂಬರ್ ಒನ್. ಅವನಿಗೆ ಭಕ್ತರೂ ಜಾಸ್ತಿ, ಬೇಡಿಕೆಗಳೂ ಜಾಸ್ತಿ. ಅದಕ್ಕೆ ತಕ್ಕಂತೆ ಆದಾಯವೂ ಇರುತ್ತೆ ಅನ್ನಿ. ಕರ್ನಾಟಕದ ಮಾಜಿ ಮಂತ್ರಿಯೊಬ್ಬರು ವಜ್ರಖಚಿತ ಚಿನ್ನದ ಕಿರೀಟವನ್ನು ಸ್ವಾಮಿಗೆ ಅರ್ಪಿಸಿದ್ದರು. ತಾನು ಮಾಡಿರುವ ಪಾಪಕೃತ್ಯಗಳನ್ನೆಲ್ಲ ಹೊಟ್ಟೆಗೆ ಹಾಕಿಕೊಳ್ಳುವ ದೇವರೇ ಅಂತ ಬೇಡಿಕೊಂಡಿದ್ದರು. ಇಂಥೋವನ್ನೆಲ್ಲಾ ಹಾಕಿಕೊಂಡು ಹಾಕಿಕೊಂಡು ಆ ಸ್ವಾಮಿಯ ಹೊಟ್ಟೆ ಕೆಟ್ಟು ಕುಲಗೆಟ್ಟು ಹೋಗಿತ್ತೋ ಏನೋ. ತಿಮ್ಮಪ್ಪನಿಗೂ "ಇದೇನಿದು, ಸದಾ ಮೋಸಗಾರರನ್ನ, ದಗಾಕೋರರನ್ನ, ವಂಚಕರನ್ನ ಕಾಪಾಡೋದೇ ನನ್ನ ಕಸುಬು ಆಗದಲ್ಲಾ. ಈಗಲಾದರೂ ನ್ಯಾಯನಿಷ್ಠುರಿ ಅನ್ನಿಸಿಕೊಳ್ಳಬೇಕು" ಎಂದನ್ನಿಸಿರಬೇಕು. ತನ್ನ ಪರಮ ಭಕ್ತ ಜೈಲು ಸೇರುವಂತೆ ಮಾಡಿದ. ಆದರೂ ಮಾಜಿಗಳು ತಿರುಪತಿ ತಿಮ್ಮಪ್ಪನನ್ನು ದೂಷಿಸಲಿಲ್ಲ. ಬಿಡುಗಡೆಗಾಗಿ ಜೈಲಿನಲ್ಲಿಯೇ ಆ ದೇವನನ್ನು ಭಕ್ತಿಯಿಂದ ಪ್ರಾರ್ಥಿಸ ತೊಡಗಿದರು. ಅಷ್ಟು ಮಾತ್ರ ಅಲ್ಲ, ತಮ್ಮ ಹಿಂಬಾಲಕರಿಗೆ ತಿರುಪತಿಗೆ ಹೋಗಿ ತಮ್ಮ ಬಿಡುಗಡೆಗಾಗಿ ಸ್ವಾಮಿಯನ್ನು ಬೇಡಿಕೊಳ್ಳುವಂತೆ ಸೂಚಿಸಿದರು ! ತಿರುಪತಿ ತಿಮ್ಮಪ್ಪ ಸೇಫ್ಟಿ ಝೋನ್‌ನಲ್ಲಿ ಸುರಕ್ಷಿತವಾಗಿದ್ದ !

ಚುನಾವಣೆಗಳು ಬಂದರೆ ಸಾಕು. ಮರ್ಯಾದಾ ಪುರುಷೋತ್ತಮ ಶ್ರೀರಾಮ ಚುನಾವಣಾ ರಾಮನಾಗುತ್ತಾನೆ. ಅವನಿಗೋಸ್ಕರ ಮಂದಿರ ಕಟ್ತೀನಿ ಅಂತಾರೆ; ಮ್ಯೂಸಿಯಂ ಮಾಡ್ತೀವಿ ಅಂತಾರೆ; ಕಾರಿಡಾರ್ ಮಾಡ್ತೀವಿ ಅಂತಾರೆ. ಅವನ ಜಪ ಮಾಡ್ತಾರೆ. ಚುನಾವಣೆ ಮುಗಿಯಿತು ಅಂದರೆ,

*ಮಂದಿರ ಮರೆತು ಹೋಗುತ್ತೆ*
*ಮ್ಯೂಸಿಯಂ ಮ್ಯೂಸಿಯಂ ಸೇರುತ್ತೆ*
*ಕಾರಿಡಾರು ಕಾಣದಾಗುತ್ತೆ.*

ಚುನಾವಣೆಯಲ್ಲಿ ಅಭ್ಯರ್ಥಿ ಗೆದ್ದರೆ ಶ್ರೀರಾಮನ ಕೃಪೆ. ಅವನಿಗೆ ವಿಶೇಷ ಪೂಜೆ ಪುನಸ್ಕಾರ. ಸೋತರೆ ಸೋಲಿನ ಕಾರಣಗಳ ಪೋಸ್ಟ್‌ಮಾರ್ಟಮ್ಮು. ಶ್ರೀರಾಮ ಯಾವಾಗಲೂ ಸುರಕ್ಷಿತ ವಲಯದಲ್ಲಿ ನಿಶ್ಚಿಂತ !

ದೇವರುಗಳನ್ನು ಚುನಾವಣೆಗಳಿಗೆ ಎಳೆದು ತರೋದು ಇಲ್ಲಿ ಮಾತ್ರ ಅಲ್ಲ, ಅಮೆರಿಕದಲ್ಲೂ ಈ ಪದ್ಧತಿ ಇದೆ. ರಿಪಬ್ಲಿಕನ್ ಅಭ್ಯರ್ಥಿ ಟ್ರಂಪನ ಮಗಳು ಈ ಸಲದ ದೀಪಾವಳಿಯನ್ನು ಹಿಂದೂ ದೇವಾಲಯದಲ್ಲಿ ಆಚರಿಸಿದಳಂತೆ. ಅರೆ ! ಅರೆ ! ಈ ಕಿರಿಸ್ತಾನ ಹೆಣ್ಣುಮಗಳಿಗೆ ಹಿಂದೂ ದೇವರ ಮೇಲೆ ಭಕ್ತಿ ಯಾಕೆ ಮೂಡಿಬಂತು ಅಂದರೆ ಅದು ಚುನಾವಣೆ ಪ್ರೀತಿಯಂತೆ. ಅಮೆರಿಕದಲ್ಲಿ ಗಣನೀಯ ಪ್ರಮಾಣದಲ್ಲಿ ಹಿಂದೂ ಮತದಾರರು ಇದ್ದಾರಂತೆ. ಅವರನ್ನು ಓಲೈಸುವ ಪರಿ ಇದಂತೆ.




ನವಕರ್ನಾಟಕ ಪ್ರಕಾಶನದ ಕಲಬುರಗಿ ಮಳಿಗೆಯ ೨೫ರ ಸಂಭ್ರಮ ಹಾಗೂ ಹತ್ತು ಕೃತಿಗಳ ಲೋಕಾರ್ಪಣೆ ಸಮಾರಂಭವು ದಿನಾಂಕ ೨೭.೧೧.೨೦೧೬ರಂದು ಕಲಬುರಗಿ ನಗರದ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ಭವನದಲ್ಲಿ ನಡೆಯಿತು. ಖ್ಯಾತ ಲೇಖಕಿ, ನಾಡೋಜ ಡಾ॥ ಗೀತಾ ನಾಗಭೂಷಣ ಅವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಕೃತಿಗಳನ್ನು ಅನಾವರಣಗೊಳಿಸಿದರು.

ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಹಿರಿಯ ಸಾಹಿತಿ ಶ್ರೀ ವಸಂತ ಕುಷ್ಟಗಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿ, ಕಲಬುರಗಿ, ಇದರ ಪದನಿಮಿತ್ತ ಸಹನಿರ್ದೇಶಕರಾದ ಶ್ರೀ ಜಿ. ಎಂ. ವಿಜಯಕುಮಾರ, ಕಲಬುರಗಿ ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ವೀರಭದ್ರ ಸಿಂಪಿ ಮುಂತಾದವರು ಭಾಗವಹಿಸಿದ್ದರು. ವೇದಿಕೆಯಲ್ಲಿ ನವಕರ್ನಾಟಕ ಪ್ರಕಾಶನದ ಕಾರ್ಯನಿರ್ವಾಹಕ ನಿರ್ದೇಶಕರಾದ ಶ್ರೀ ಎ. ರಮೇಶ ಉಡುಪ ಹಾಗೂ ನವಕರ್ನಾಟಕ ಕಲಬುರಗಿ ಮಳಿಗೆಯ ಮಾಜಿ ವ್ಯವಸ್ಥಾಪಕರಾದ ಶ್ರೀ ಸೂರ್ಯಕಾಂತ ಸೊನ್ನದ ಉಪಸ್ಥಿತರಿದ್ದರು.

ಇಂತಹ ಧರ್ಮಕಾರಣದ ಬಲೆಗೆ ಹಿಂದುಗಳ ಮತಗಳು ಬಿದ್ದಾವು ಅನ್ನೋ ಅನುಮಾನ ಡೆಮೋಕ್ರಟಿಕ್ ಪಕ್ಷವನ್ನು ಕಾಡಿತಂತೆ. ಅದಕ್ಕೆ ಅಲ್ಲಿನ ಅಧ್ಯಕ್ಷ ಏನು ಮಾಡಿದರು, ವೈಟ್ ಹೌಸಿನಲ್ಲಿ ಪ್ರಥಮ ಬಾರಿಗೆ ದೀಪಾವಳಿ ಆಚರಿಸಿದರು ! ಯಾರು ಗೆಲ್ಲಲಿ, ಸೋಲಲಿ ಹಿಂದೂ ದೇವರು ಮಾತ್ರ ಸುರಕ್ಷಿತ ವಲಯದಲ್ಲಿ ಇರುತ್ತಾನೆ ಅನ್ನುವುದೇ ಸಮಾಧಾನದ ಸಂಗತಿ !

ಹಿರಿಯ ಸ್ವಾತಂತ್ರ್ಯ ಹೋರಾಟಗಾರರೊಬ್ಬರು ಹೇಳುತ್ತಿದ್ದರು : "ಆಳುವ ಸರ್ಕಾರಕ್ಕೆ ನಾವು ಅಂದರೆ ನಶ್ಯದ ಡಬ್ಬಿ ಇದ್ದಂತೆ. ನಶ್ಯದ ಡಬ್ಬಿ ಜೇಬಿನಲ್ಲಿರುತ್ತೆ. ತೆವಲು ಹತ್ತಿದಾಗ ಅದನ್ನ ಹೊರಕ್ಕೆ ತಗೀತೀವಿ. ನಶ್ಯ ಹಾಕಿಕೊಳ್ತೀವಿ. ಆಮೇಲೆ ಮತ್ತೆ ಜೇಬಿಗೆ ಸೇರಿಸ್ತೀವಿ. ಆಳುವ ಸರ್ಕಾರಗಳು ನಮ್ಮನ್ನ ನಶ್ಯದ ಡಬ್ಬಿ ತರಹ ಬಳಸಿಕೊಳ್ತಾರೆ. ನಮ್ಮ ಕೆಲಸ ಆದ ನಂತರ ಮೂಲೆಗೆ ಬಿಸಾಕ್ತಾರೆ" ಅಂತ. ದೇವರುಗಳೂ ಚುನಾವಣಾ ಆಕಾಂಕ್ಷಿಗಳಿಗೆ ನಶ್ಯದ ಡಬ್ಬಿ ತರಹ ಆಗಿದ್ದಾರಾ... ಇರಲಿ.

ದೇವಾನುದೇವತೆಗಳೆಲ್ಲ ಸುರಕ್ಷಿತ ವಲಯದಲ್ಲಿ ನೆಮ್ಮದಿಯಿಂದ ಇದ್ದರೂ ಚಾಮುಂಡಿ ತಾಯಿ ಮಾತ್ರ ಆ ವಲಯದಿಂದ ಹೊರಹೋಗಬೇಕಾದ ಅನಿವಾರ್ಯತೆ ಉದ್ಭವಿಸಿತ್ತು. ತಮಿಳುನಾಡಿನ ಜಯಲಲಿತಾ ಕಟ್ಟಾ ಅಭಿಮಾನಿಗಳಿಂದ ಆಭರಣ ಸ್ವೀಕರಿಸಿದ್ದಕ್ಕೆ ತಕರಾರು ಎತ್ತಿರುವವರೂ ತನ್ನ ಭಕ್ತರೆ. ಅವರ ಆಶಯಕ್ಕೆ ಸ್ಪಂದಿಸಿದರೆ ಒಡವೆಗಳನ್ನು ತಿರಸ್ಕರಿಸಬೇಕು. ತಾಯಿ ಕಿರೀಟ ಮುಟ್ಟಿ ನೋಡಿಕೊಂಡಳು. ಕನ್ನಡಿ ಮುಂದೆ ನಿಂತಳು. ಆ ಕಿರೀಟ ತನ್ನ ಮುಖಕ್ಕೆ ಅಂದವಾಗಿ ಕಾಣುತ್ತಿರುವುದನ್ನು ಗಮನಿಸಿದಳು. ತನ್ನ ದರ್ಶನಕ್ಕೆ ಬರುವ ಭಕ್ತರು 'ಆಭರಣಗಳಿಂದ ಅಲಂಕೃತವಾಗಿರುವ ತಾಯಿಯ ದರ್ಶನ ಮಾಡಲು ಎರಡು ಕಣ್ಣು ಸಾಲದು' ಎಂಬ ಮನದಾಳದ ಮಾತು ಚಾಮುಂಡಿ ತಾಯಿಯ ಹೃದಯ ನಾಟಿತು. ತನಗೆ ಮಾತ್ರ ಅಲ್ಲ, ತನ್ನ ಭಕ್ತರಿಗೂ ಪ್ರಿಯವಾದಂತಹ ಒಡವೆಗಳನ್ನು ತಿರಸ್ಕರಿಸುವುದಕ್ಕೆ ಆ ತಾಯಿಗೆ ಸಂಕಟ ಆಯಿತು. ಅದಕ್ಕೆ ಏನು ಮಾಡಿದಳು ಗೊತ್ತೆ? ಸಾಯಿಸುವುದು ನನ್ನ ಧರ್ಮ ಅಲ್ಲ, ಬದುಕಿಸುವುದು ನನ್ನ ಧರ್ಮ ಎಂದು ಉಡುಗೊರೆಯನ್ನು ಸ್ವೀಕರಿಸಿದ್ದಕ್ಕೆ ಸಮಜಾಯಿಷಿ ಹೇಳಿದಳು !

*ಒಡವೆ ತಾಯಿಯ ಪಾಲಾಯ್ತು*
*ಹಿತವಚನ ಜನರ ಪಾಲಾಯ್ತು*

**ಎಚ್. ಎಲ್. ಕೇಶವಮೂರ್ತಿ**
ನಂ. ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್ಸ್
ಅಗ್ನಿಶಾಮಕ ಠಾಣೆ ಎದುರು, ಗುತ್ತಲು ಅಂಚೆ
ಮಂಡ್ಯ – ೫೭೧ ೪೦೩

# ಬಹುಮುಖಿ ರಾಮಾಯಣ

ತುಮಕೂರು ವಿಶ್ವವಿದ್ಯಾನಿಲಯದಲ್ಲಿ ೨೬.೧೦.೨೦೧೬ರಂದು ಆಯೋಜಿಸಲಾಗಿದ್ದ ವಿಚಾರ ಸಂಕಿರಣದ ಸಮಾರೋಪ ಸಮಾರಂಭದಲ್ಲಿ ನೀಡಲಾಗಿದ್ದ ಅಧ್ಯಕ್ಷ ಭಾಷಣದ ಸಂಕ್ಷಿಪ್ತ ರೂಪವೇ ಈ ಲೇಖನ.

**ಜಿ. ರಾಮಕೃಷ್ಣ**

ಇಂದಿನ ಸಂದರ್ಭವು ನಮ್ಮ ದೇಶದಲ್ಲಿ ಸ್ವಲ್ಪ ನಿರಾಶಾದಾಯಕವಾಗಿದೆ. ಶಿಕ್ಷಣ ಕ್ಷೇತ್ರದಲ್ಲಾಗಲಿ ಅದರ ಹೊರಗಾಗಲಿ ವಿದ್ವತ್ತಿನ ಮರಳುಗಾಡು ನಮ್ಮನ್ನು ಬಾಧಿಸುವಂತಾದರೆ ಅದು ಸ್ಥಗಿತತೆ ಎನಿಸಿಕೊಳ್ಳುತ್ತದೆ, ಸೃಷ್ಟ್ಯಾತ್ಮಕ ಪ್ರಕ್ರಿಯೆಗೆ ಕುತ್ತುಂಟಾಗಿದೆಯೆಂಬ ಭಾವನೆ ಬರುತ್ತದೆ. ಆಳವಾದ ಅಧ್ಯಯನ, ಸಂವೇದನೆ, ಚರ್ಚೆ, ಇತ್ಯಾದಿಗಳ ಜಾಗದಲ್ಲಿ ಕೇವಲ ಪುರಾಣದ ಪ್ರಸಂಗಗಳ ವೈಭವೀಕರಣವು ಸ್ಥಾಪನೆಗೊಂಡರೆ ಅದು ಹಿತಕರವಲ್ಲ. ಪುರಾಣವನ್ನು ವಾಸ್ತವ ಇತಿಹಾಸವೆಂಬಂತೆ ವ್ಯವಹರಿಸುವುದು ಪಾಂಡಿತ್ಯದ ಕುರುಹಲ್ಲ, ಆದರೆ ಅಂತಹ ನಿಲುವಿಗೆ ಮಾನ್ಯತೆ ನೀಡುವ ವರ್ಗವೊಂದು ಇಂದು ಪ್ರಭಾವೀ ಸ್ಥಾನದಲ್ಲಿದೆ. ಇಂತಹ ಅನಾರೋಗ್ಯಕರ ದೃಷ್ಟಿಯನ್ನು ಪ್ರಶ್ನಿಸುವವರೆಲ್ಲಾ ಪಾಷಂಡಿಗಳು, ಸಂಸ್ಕೃತಿಯನ್ನು ಅಲ್ಲಗಳೆಯುವಂಥವರು, ಎಂಬ ದೂಷಣೆಗೆ ಪಾತ್ರರಾಗುತ್ತಿದ್ದಾರೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಅವರನ್ನು ದೇಶದ್ರೋಹಿಗಳು ಎಂದು ಮೂದಲಿಸುವ ವಾತಾವರಣವೂ ನಿರ್ಮಾಣಗೊಂಡಿದೆ.

"ಬಹುಮುಖಿ ರಾಮಾಯಣ" ಕುರಿತ ವಿಚಾರ ಸಂಕಿರಣವು ಇಂತಹ ಪ್ರವೃತ್ತಿಗೆ ಸ್ಥಾನವಿಲ್ಲ, ಅದೇನೂ ಅಷ್ಟೊಂದು ವ್ಯಾಪಕವಾಗಿ ಅಂಗೀಕಾರ ಪಡೆದಿಲ್ಲ, ಇಂದಿಗೂ ವಿಮರ್ಶಾತ್ಮಕ ನೆಲೆಯಲ್ಲಿ ರಾಮಾಯಣಗಳನ್ನು ಅರ್ಥೈಸಿಕೊಳ್ಳುತ್ತಿರುವ ವಿದ್ವಾಂಸರಿದ್ದಾರೆ, ವಿದ್ಯಾರ್ಥಿ ಸಮೂಹವಿದೆ, ಎಂಬ ಭಾವನೆಯನ್ನು ಪುಷ್ಟೀಕರಿಸಿದೆ. ನಮ್ಮ ವಿದ್ವತ್ಪ್ರಪಂಚವು ಹೊರಗಿನ ಗಾಳಿಯಿಂದ ಕಲುಷಿತವಾಗಿಲ್ಲ, ಅಲ್ಪಮತಿಗಳ ಭರಾಟೆಗೆ ಮಣಿದಿಲ್ಲ, ಎಂಬ ಭರವಸೆ ಮೂಡಿಸಿದ ವಿಚಾರ ಸಂಕಿರಣ ಇದು. ಮಾಧ್ಯಮಗಳಲ್ಲಿ ಕೆಲಬಾರಿ ಮತ್ತು ಸಾರ್ವಜನಿಕ ಜೀವನದಲ್ಲಿ ಹಲವು ಬಾರಿ ಇದಕ್ಕೆ ಪ್ರತಿಯಾದ ಭಾವನೆ ಮೂಡುವಂತಾಗಿದೆ. ಅದೇ ಅಗ್ರಸ್ಥಾನ ಪಡೆದುಬಿಟ್ಟಿದೆಯೇನೋ ಎಂಬ ವ್ಯಾಕುಲವೂ ಉಂಟಾಗುತ್ತದೆ. ಪ್ರಸ್ತುತ ವಿಚಾರ ಸಂಕಿರಣವು ವಾಸ್ತವವು ಬೇರೆಯೇ ಇದೆ ಎಂಬುದನ್ನು ನಿಶ್ಚಿತವಾಗಿ ಪ್ರಕಟಿಸಿದೆ. ಅದು ಅತ್ಯಂತ ಸಮಾಧಾನದ ಸಂಗತಿ.

ನಮ್ಮ ದೇಶವು ಗಣರಾಜ್ಯವಾದ ಕಳೆದ ೬೫ ವರ್ಷಗಳಲ್ಲಿ ಎಂದೂ ಇಂದಿನಂತೆ ಮತ್ತು ಇಂದಿನ ರೀತಿಯಲ್ಲಿ ದೇಶದ್ರೋಹದ ಆಪಾದನೆಗಳು ನಮ್ಮ ಮುಂದೆ ಬಂದಿರಲಿಲ್ಲ. ಈಗ ನೋಡಿದರೆ ಒಂದು ವಸ್ತುನಿಷ್ಠ ಅಭಿಪ್ರಾಯವನ್ನು ವ್ಯಕ್ತಗೊಳಿಸಿದರೆ ದೇಶದ್ರೋಹದ ಆಪಾದನೆ ಮಾಡಲಾಗುತ್ತದೇನೋ ಎಂಬ ವಿಷಮಯ ವಾತಾವರಣವು ನಿರ್ಮಾಣಗೊಂಡಿದೆ. ಅದು ನಮ್ಮ ದೇಶದ ರಾಜಕೀಯವು ಕಶ್ಮಲದಿಂದ ತುಂಬಿರುವುದನ್ನು ತೋರಿಸುತ್ತದೆ. ಸಂಸ್ಕೃತಿ ಎಂದರೆ ಗೋವು, ಭಾರತಮಾತೆಗೆ ಜಯವಾಗಲಿ, ಮುಂತಾದ ಘೋಷಣೆಗಳ ಚೀಲ ಎನ್ನುವ ಪರಿಸ್ಥಿತಿ ಬಂದಂತಿದೆ. ಇದೇ ತುಮಕೂರಿನಲ್ಲಿ ಒಂದೆರಡು ತಿಂಗಳ ಹಿಂದೆ ಜ್ಯೋತಿ ಎಂಬ ಕಾನೂನು ವಿದ್ಯಾರ್ಥಿನಿಯನ್ನು ಬಹಿರಂಗವಾಗಿ ಕೆಲವು ಗೂಂಡಾಗಳು ಒದ್ದರೆಂದು ವರದಿಯಾಗಿತ್ತು. ಆಕೆಯ ಮೇಲೆ ಸುಳ್ಳು ಆರೋಪ ಹೊರಿಸಿ ಮೊಕದ್ದಮೆಯನ್ನೂ ಹೂಡಲಾಗಿತ್ತು. ಆಕೆ ಸಿದ್ದಗಂಗೆ ಸ್ವಾಮಿಗಳನ್ನು ಬೈದಳು, ಪಾಕಿಸ್ತಾನ್ ಜಿಂದಾಬಾದ್ ಎಂಬ ಘೋಷಣೆ ಕೂಗಿದಳು, ಎಂಬಿತ್ಯಾದಿ ಅಪ್ಪಟ ಸುಳ್ಳುಗಳನ್ನು ಹೇಳಿ ಆಕೆಗೆ ಹಿಂಸೆ ನೀಡಲಾಗಿತ್ತು. ಸಿದ್ದಗಂಗೆಯ ಸ್ವಾಮಿಗಳನ್ನು ಯಾರಾದರೂ ಬೈಯ್ಯುವುದುಂಟೆ ? ಎಂತಹ ಕೆಟ್ಟ ರಾಜಕೀಯ ವಾತಾವರಣವಿದೆಂದು ವಿವರಿಸುವ ಅಗತ್ಯವಿಲ್ಲ. ಮುಕ್ತ ಚರ್ಚೆಗಳಿಗೆ ವಿದ್ಯಾರ್ಥಿಗಳನ್ನು ಅಣಿಗೊಳಿಸಬೇಕು, ಅದನ್ನು ರಾಮಾಯಣದ ಬಗೆಗಿನ ಇಂದಿನ ಚರ್ಚೆಗಳು ಸಮರ್ಥವಾಗಿ ಮಾಡಿವೆ. ಸಂಕಿರಣದ ಸಂಯೋಜಕರು ಅಭಿನಂದನಾರ್ಹರು.

ನಾವಿಂದು ತುಮಕೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಒಟ್ಟುಗೂಡಿ ಚಿಂತನೆ ನಡೆಸುತ್ತಿದ್ದೇವೆ. ನಮ್ಮ ದೇಶದ ಸಂಶೋಧನಾ ಕೇಂದ್ರಗಳು ಏನಾಗುತ್ತಿವೆ ಎಂಬುದನ್ನು ನಾವು ಪರಾಮರ್ಶಿಸಿಕೊಳ್ಳಬೇಕು. ಭಾರತೀಯ ಇತಿಹಾಸ ಸಂಶೋಧನಾ ಪರಿಷತ್ತು (ಐ.ಸಿ.ಎಚ್.ಆರ್.), ಭಾರತ ಸಮಾಜ ವಿಜ್ಞಾನ ಸಂಶೋಧನಾ ಪರಿಷತ್ತು (ಐ.ಸಿ.ಎಸ್.ಎಸ್.ಆರ್.), ಮುಂತಾದ ಕೇಂದ್ರಗಳಲ್ಲಿ ವಿದ್ವತ್ತು ಮತ್ತು ವಿಶ್ಲೇಷಣೆ ಗೌಣವಾಗುತ್ತಿವೆ, ಚಾರಿತ್ರಿಕ ದೃಷ್ಟಿಗೆ ಪೆಟ್ಟು ಬೀಳುತ್ತಿದೆ. ಅವು ವಿದ್ವತ್ತಿನ ಮರಳುಗಾಡುಗಳಾಗುತ್ತಿವೆ. ತುಮಕೂರು ವಿಶ್ವವಿದ್ಯಾನಿಲಯದ ರೀತಿಯಲ್ಲಿ ನಮ್ಮೆಲ್ಲ ಶೈಕ್ಷಣಿಕ ಮತ್ತು ಸಂಶೋಧನಾ ಸಂಸ್ಥೆಗಳು ಮುಕ್ತ ವ್ಯಾಪಕ ಚಿಂತನೆಯ ಶಿಸ್ತಿಗೆ ತೆರೆದುಕೊಳ್ಳುವುದು ತುರ್ತಾಗಿ ನಡೆಯಬೇಕಿದೆ.

"ಬಹುಮುಖಿ ರಾಮಾಯಣ"ವೆಂಬ ವಿಷಯದ ಸುತ್ತ ಇರುವ ಮತ್ತು ಇಂದು ಇಲ್ಲಿ ನಡೆದ ಚರ್ಚೆಯು ಬಹಳ ಪ್ರಸ್ತುತವಾದ್ದು. ಉನ್ನತಮಟ್ಟದ

**ಕವಿಯು ಜಾನಪದನೋ ಶಿಷ್ಟನೋ ಯಾವುದೇ ಆಗಿರಲಿ, ಅವನಿಗೆ ಹಾಗೂ ಅವಳಿಗೆ ಮಿತಿಗಳನ್ನು ವಿಧಿಸಲಾಗದು. ಕಲ್ಪನಾ ಲಹರಿಗೆ ಸಂಪೂರ್ಣ ಸ್ವಾತಂತ್ರ್ಯವುಳ್ಳವರು ಕಲಾವಿದರು. ಶ್ರೇಷ್ಠ ಚಿತ್ರಕಲಾ ವಿಶಾರದ ಜಾಮಿನಿ ರಾಯ್ ಆಗಾಗ್ಗೆ ಹೇಳುತ್ತಿದ್ದರು, ವಾಲ್ಮೀಕಿಗೆ ಅದೆಷ್ಟು ಅಗಾಧವಾದ ಕಲ್ಪನಾ ಸ್ವಾತಂತ್ರ್ಯವಿದ್ದಿತೆಂದು : ಅವನ ಆಂಜನೇಯ ಬೇಕಾದಾಗ ಅಣುವಾಗಿಬಿಡುತ್ತಾನೆ, ಇನ್ನು ಕೆಲವೊಮ್ಮೆ ಮಹತ್ತಾಗಿಬಿಡುತ್ತಾನೆ. ಇದೆಂತಹ ವಿಸ್ಮಯ ! ಒಬ್ಬನೇ ವ್ಯಕ್ತಿ ಹಾಗೆ ಭಿನ್ನ ಶರೀರಗಳನ್ನು ಹೊಂದುತ್ತಾ ಹೋಗುತ್ತಾನಲ್ಲ, ಅದು ಸಾಧ್ಯವೆ ? ಹೌದು, ವಾಲ್ಮೀಕಿಯ ಮಹಾಕಾವ್ಯದಲ್ಲಿ ಅದು ಸಾಧ್ಯ.**

ಪ್ರಬಂಧಗಳು ಸಹ ಮಂಡಿಸಲ್ಪಟ್ಟವು. ಆದರೆ ಇಲ್ಲಿ ಹೇಳಲಾಗಿರುವ "ವಾಲ್ಮೀಕಿ ಜಯಂತಿ" ಪೌರಾಣಿಕವಾದ್ದು. ರಾಮಾಯಣ ಗ್ರಂಥ ನಮಗೆ ಹಲವು ರೂಪ ಗಳಲ್ಲಿ ಲಭ್ಯವಿದೆ; ಆದರೆ ವಾಲ್ಮೀಕಿ ಎಂಬೊಬ್ಬ ಕವಿಯ ಹುಟ್ಟು, ಅವನ ಪೂರ್ವಾಪರ, ಯಾವುದೂ ತಿಳಿಯದು. ರಾಮಾಯಣವು ಮಹಾಕಾವ್ಯವೇ ವಿನಾ ಇತಿಹಾಸದ ಗ್ರಂಥವಲ್ಲ. ಆ ಕಾರಣದಿಂದಲೇ ಅದು ಬಹುಮುಖಿ ಸ್ವರೂಪ ಪಡೆದಿದ್ದು. ಇತಿಹಾಸವು ಹಾಗೆ ಬೇಕಾಬಿಟ್ಟಿ ಬಹುಮುಖಿಯಾದರೆ ಅದು ಉಪಹಾಸವಾಗುತ್ತದೆ, ಇತಿಹಾಸದ ಮೂಲ ಲಕ್ಷಣವನ್ನು ಕಳೆದುಕೊಳ್ಳುತ್ತದೆ. ದೆಹಲಿ ವಿಶ್ವವಿದ್ಯಾನಿಲಯವು "೩೦೦ ರಾಮಾಯಣಗಳು" ಎಂಬ ಎ. ಕೆ. ರಾಮಾನುಜನ್‌ರ ಪುಸ್ತಕವನ್ನು ಪಠ್ಯದಿಂದ ಕಿತ್ತುಹಾಕುವ ಮೂರ್ಖತನ ಮೆರೆಯಿತು, ಆದರೆ ೩೦೦ ರಾಮಾಯಣಗಳು ಇಲ್ಲವಾಗಲಿಲ್ಲ. ವಾಲ್ಮೀಕಿಯು ತಪಸ್ಸು ಮಾಡಿ ಹುತ್ತ ಬೆಳೆಸಿಕೊಂಡದ್ದು ಐತಿಹ್ಯ, ಆದರೆ ಕಾವ್ಯವು ಸತ್ಯ. ಆದ್ದರಿಂದ ವಾಲ್ಮೀಕಿ ಜಯಂತಿಗಿಂತಲೂ ಬಹುಮುಖಿ ರಾಮಾಯಣವು ಪ್ರಮುಖವಾಗುತ್ತದೆ. ಹೋಮರ್ ಬಗ್ಗೆ ಐತಿಹಾಸಿಕ ದಾಖಲೆಗಳೇನೂ ಇಲ್ಲ, ಇರುವುದು ಹೆಸರು ಮಾತ್ರ. ಅವನ ಚರಿತ್ರೆಯನ್ನು ಹೇಗೆ ಕಟ್ಟಿಕೊಳ್ಳುವುದು? ಒಬ್ಬ ವಿಮರ್ಶಕ ಇದನ್ನು ಸ್ವಾರಸ್ಯವಾಗಿ ಹೇಳಿದ್ದಾನೆ: "ಇಲಿಯಡ್ ಮತ್ತು ಒಡಿಸ್ಸಿ ಬರೆದದ್ದು ಹೋಮರ್ ಅಲ್ಲ, ಅದನ್ನು ಹೋಮರ್ ಎಂಬ ಹೆಸರಿನವನೇ ಆದ ಇನ್ನೊಬ್ಬ ಬರೆದ." ಆ ಇನ್ನೊಬ್ಬನ ಬಗೆಗೂ ನಮಗೇನೂ ತಿಳಿಯದು! ವಾಲ್ಮೀಕಿಯ ಕತೆಯೂ ಅದೇ.

ಎಲ್ಲ ಸಾಹಿತ್ಯದಲ್ಲೂ ಜೀವನದ ಪ್ರತಿಫಲನವಿರುವಂತೆ ರಾಮಾಯಣದಲ್ಲೂ ಇದೆ, ಪುಷ್ಕಳವಾಗಿಯೇ ಇದೆ. ಕವಿಯ ಕಲ್ಪನೆಗೂ ಈ ಕಾವ್ಯದಲ್ಲಿ ಮಿತಿ ಎಂಬುದಿಲ್ಲ. ರಾಮಾಯಣವು "ನಾಡು ಮತ್ತು ಕಾಡಿನ ನಡುವಿನ ಸಂಘರ್ಷ" ಎಂದು ರೋಮಿಲಾ ಥಾಪರ್ ಒಮ್ಮೆ ವಾದಿಸಿದ್ದರು. ನಾಗರಿಕತೆಯ ವಿಕಾಸದ ಸಂದರ್ಭದಲ್ಲಿ ಇಂತಹ ಸಂಘರ್ಷಗಳು ಪ್ರಸಿದ್ಧ. ಋಗ್ವೇದದಲ್ಲಿ ಆರ್ಯರ ಮತ್ತು ಸ್ಥಳೀಯ ಬುಡಕಟ್ಟುಗಳ ನಡುವೆ ಸಂಘರ್ಷಗಳ ದಾಖಲೆಗಳಿವೆ. ಇಂದ್ರನ ನಾಯಿ ಸರಮಾ ಮತ್ತು ಪಣಿಗಳೆಂಬ ಬುಡಕಟ್ಟಿನವರ ನಡುವಣ ಕಾವ್ಯಾತ್ಮಕ ಸಂವಾದವು ಆರ್ಯರು ಹೇಗೆ ಸಂಪತ್ತಿನ ಹರಣ ಮಾಡುತ್ತಿದ್ದರೆ ಎಂಬುದನ್ನು ಸೊಗಸಾಗಿ ನಿರೂಪಿಸಿದೆ. ಬುದ್ಧನು ತನ್ನ ಕಾಲದ ಬುಡಕಟ್ಟುಗಳು ನಶಿಸಿಹೋಗಿ ದೊಡ್ಡ ಸಾಮ್ರಾಜ್ಯಗಳ ಭಾಗವಾಗಿ ಹೋಗುತ್ತಿದ್ದುದನ್ನು ಕಂಡು ಕಸಿವಿಸಿಗೊಂಡಿದ್ದ. ಬುಡಕಟ್ಟು ಜೀವನದ ಮೌಲ್ಯಗಳು ಅದೃಶ್ಯವಾಗುತ್ತಿವೆ ಎಂದು ಗಮನಿಸಿ ಅವಕ್ಕೆ ಮರುಜೀವ ನೀಡಲು ಆಶಿಸಿದ. ವಜ್ಜಿಯರೆಂಬ ಬುಡಕಟ್ಟಿನವರನ್ನು ಅಜಾತಶತ್ರು ಸದೆಬಡಿಯಲು ಹೊರಟಾಗ ಬುದ್ಧ ಬಹಳ ಸಂಕಟಕ್ಕೀಡಾಗಿದ್ದ. ಅಂತಹ ಹತ್ತಾರು ಪ್ರಸಂಗಗಳನ್ನು ನಾವು ರಾಮಾಯಣದಲ್ಲಿ ನೋಡುತ್ತೇವೆ. ಇಂತಹ ಚಾರಿತ್ರಿಕ ಸಂಗತಿಗಳನ್ನು ಬಹುವಾಗಿ ರಾಮಾಯಣದಲ್ಲಿ ಗುರುತಿಸಬಹುದು. ಆದರೆ ವಾಲ್ಮೀಕಿಯ ಊರು, ಜಾತಿ, ಗೋತ್ರ, ಮುಂತಾದ ಯಾವ ಉಲ್ಲೇಖಗಳನ್ನೂ ಗುರುತಿಸ ಹೋಗಲಾಗದು. ಒಬ್ಬ ತಥಾಕಥಿತ ವಿದ್ವಾಂಸರಾದ ಕೆ. ಎಸ್. ನಾರಾಯಣಾಚಾರ್ಯ ವಾಲ್ಮೀಕಿಯು ಬ್ರಾಹ್ಮಣ ಜಾತಿಯವನೆಂದು ಸಾಧಿಸಿರುವುದಾಗಿ ಹೇಳಲಾಗಿದೆ. ಬೇಡರ ಬುಡಕಟ್ಟಿನವನು ಕಾವ್ಯ ರಚಿಸುವುದು ಅವರಿಗೆ ಜಿಗುಪ್ಸೆ ಉಂಟುಮಾಡುತ್ತದೇನೋ! ಅಂತಹ ಸಂಶೋಧನೆಗಳಲ್ಲಿ ತೊಡಗುವುದು ಇಲ್ಲವೇ ಮಾರುಹೋಗುವುದು ಸರ್ವಥಾ ಅನವಶ್ಯಕ.

ರಾಮಾಯಣದ ಮೊದಲ ನಾಲ್ಕು ಸರ್ಗಗಳನ್ನು ಖಂಡಿತವಾಗಿಯೂ ವಾಲ್ಮೀಕಿ ಬರೆಯಲಿಲ್ಲವೆಂಬುದನ್ನು ಅಲ್ಲಿಯ ನಿರೂಪಣೆಗಳೇ ಹೇಳುತ್ತವೆ. ನಾರದನನ್ನು ವಾಲ್ಮೀಕಿ ಕೇಳಿದನೆನ್ನಲಾದ ವಿಷಯ ಮತ್ತು ನಾರದನ ಉತ್ತರ ಮೊದಲನೆಯ ಸರ್ಗದ ವಿಷಯ. ಗುಣವಂತ, ವೀರ, ಇತ್ಯಾದಿ




ಮಹದ್ಗುಣಗಳನ್ನು ಹೊಂದಿರುವವನು ಯಾರಿದ್ದಾನೆಂಬ ವಾಲ್ಮೀಕಿಯ ಪ್ರಶ್ನೆಗೆ ಅಂತಹ ರಾಮನಿದ್ದಾನೆಂದು ನಾರದ ಹೇಳಿ ಹೊರಟುಹೋದ. ಎರಡನೆಯ ಸರ್ಗದಲ್ಲಿ ವಾಲ್ಮೀಕಿಯು ತನ್ನ ಶಿಷ್ಯ ಭರದ್ವಾಜನೊಡನೆ ತಮಸಾ ನದಿಗೆ ಹೋದ ಪ್ರಸಂಗವು ಉಕ್ತವಾಗಿದೆ. ಕ್ರೌಂಚಪಕ್ಷಿಯೊಂದನ್ನು ಬೇಡನೊಬ್ಬ ಕೊಂದಿದ್ದನ್ನು ಕಂಡು ಹಠಾತ್ತನೆ ವಾಲ್ಮೀಕಿಯ ಬಾಯಿಂದ ತನ್ನ ಶೋಕದ ಅಭಿವ್ಯಕ್ತಿಯಾಯಿತು. ವಾಲ್ಮೀಕಿ ಬೇಡನೋ ಅಲ್ಲವೋ ಹೇಗೂ ಇರಲಿ; ಬೇಡನಾಗಿದ್ದರೆ ಒಳ್ಳೆಯದೇ. ಏಕೆಂದರೆ, ಬೇಡನಾದರೂ ಇನ್ನೊಬ್ಬ ಬೇಡನ ಸಹಜ ವೃತ್ತಿಯು ಉತ್ಕಟ ಪ್ರೇಮಕ್ಕುಂಟಾದ ಹಾನಿಯನ್ನು ಕಂಡು ಇವನ ಮನಸ್ಸನ್ನು ಕಲಕಿಬಿಟ್ಟಿತು. ಪ್ರೇಮವು ಮಾನವೀಯ ಮೌಲ್ಯ. ಅದಕ್ಕೆ ಧಕ್ಕೆಯುಂಟಾದರೆ ಮನಸ್ಸಿಗೆ ಆಘಾತ. ವಾಲ್ಮೀಕಿಗೇ ಆಶ್ಚರ್ಯ, ಅದೆಂತು ಅಷ್ಟು ಛಂದೋಬದ್ಧವಾದ ಪದ್ಯವೊಂದು ತನ್ನಿಂದ ಹೊರಬಿದ್ದಿತು, ಎಂದು. ಅವನ ಶೋಕವು ಕಾವ್ಯಾತ್ಮಕ ಅಭಿವ್ಯಕ್ತಿಯನ್ನು ಅಪ್ರಯತ್ನಪೂರ್ವಕವಾಗಿ ಹೊರತಂದಿತ್ತು. ಆಮೇಲೆ ಬ್ರಹ್ಮ ಬಂದು ರಾಮಾಯಣವನ್ನು ಬರೆಯುವಂತೆ ವಾಲ್ಮೀಕಿಗೆ ಆದೇಶಿಸಿದ. "ನಿನ್ನ ಕಾವ್ಯವು ಅಜರಾಮರವಾಗಿ ಉಳಿಯುತ್ತದೆ" ಎಂಬ ಭರವಸೆಯನ್ನು ನೀಡಿ ಅವನು ನಿರ್ಗಮಿಸಿದ. ಬ್ರಹ್ಮನು ಹೇಳಿದ್ದು, ನಾರದನು ಹೇಳಿಹೋಗಿದ್ದುದು, ಎಲ್ಲವೂ ವಾಲ್ಮೀಕಿಯ ಮನಸ್ಸಿನಲ್ಲಿ ಗುನುಗುನಿಸುತ್ತಿದ್ದವು. ಉತ್ತರಕಾಂಡದ ಪ್ರಸಂಗಗಳು ಸಹ ಅವನ ಮನಸ್ಸಿನಲ್ಲಿ ಹಾದುಹೋದವು. ಇದು ಮೂರನೆಯ ಸರ್ಗದ ವಸ್ತು. ನಾಲ್ಕನೆಯ ಸರ್ಗದಲ್ಲಿ ಲವ–ಕುಶರು ರಾಮಾಯಣವನ್ನು ಹಾಡುತ್ತಾ ಹೋದುದರ ಉಲ್ಲೇಖವಿದೆ. ಈ ನಾಲ್ಕೂ ಸರ್ಗಗಳನ್ನು ಭರದ್ವಾಜನೋ ಮತ್ತಾರೋ ಬರೆದಿರಬೇಕು.

ಮೊದಲನೆಯ ಸರ್ಗದ ಒಂದೆರಡು ಪದ್ಯಗಳನ್ನು ನೋಡಿ : "ರಾಘವನು ನೂರಾರು ಗುಣಗಳ ರಾಜವಂಶಗಳನ್ನು ಸ್ಥಾಪಿಸುತ್ತಾನೆ. ಅಲ್ಲದೆ, ತಮ್ಮ ತಮ್ಮ ಧರ್ಮಗಳಲ್ಲಿ ತಮ್ಮನ್ನು ನಿಯೋಜಿಸಿಕೊಂಡಿರುವಂತಹ ನಾಲ್ಕು ವರ್ಣಗಳನ್ನೂ ಈ ಲೋಕದಲ್ಲಿ ಸ್ಥಾಪಿಸುತ್ತಾನೆ" (೧.೯೬: ರಾಜವಂಶಾನ್ ಶತಗುಣಾನ್ ಸ್ಥಾಪಯಿಷ್ಯತಿ ರಾಘವಃ। ಚಾತುರ್ವರ್ಣ್ಯಂ ಚ ಲೋಕೇಽಸ್ಮಿನ್ ಸ್ವೇ ಸ್ವೇ ಧರ್ಮೇ ನಿಯೋಕ್ಷ್ಯತಿ॥). ಈ "ಸ್ವೇ ಸ್ವೇ ಧರ್ಮೇ" ಇದೆಯಲ್ಲಾ, ಅದು ನಮ್ಮ ಪ್ರಾಚೀನರಲ್ಲಿ ಬಹಳ ಆದ್ಯತೆಯ ವಿಷಯವಾಗಿತ್ತು. ಭಗವದ್ಗೀತೆ, ಮನುಸ್ಮೃತಿ, ಎಲ್ಲಕ್ಕೂ ಇದು ಘೋಷವಾಕ್ಯ. ಆಯಾ ವರ್ಣದವರು ಅವರಿಗೆ ನಿಗದಿಗೊಳಿಸಲಾದ ಕೆಲಸಗಳಲ್ಲಿ ಉಳಿಯಬೇಕು, ಬೇರೆಡೆಗೆ ಸರಿಯಬಾರದು. ಅಲ್ಲೇ ಇನ್ನೊಂದು ಪದ್ಯವಿದೆ. ಅದರ ಪ್ರಕಾರ ರಾಮಾಯಣವು ವೇದಸಮ್ಮತವಾದ್ದು, ಅದನ್ನು ಓದಿದರೆ ಓದುಗರು ಎಲ್ಲ ಪಾಪಗಳಿಂದಲೂ ವಿಮುಕ್ತರಾಗುತ್ತಾರೆ (೧.೯೮). ಅಷ್ಟೇ ಅಲ್ಲ, ರಾಮಾಯಣವನ್ನು ಓದಿದವರು ಬೇರೆ ಬೇರೆ ವರ್ಣದವರಾದಾಗ ಅವರಿಗೆಲ್ಲಾ ಬೇರೆ ಬೇರೆಯೇ ಫಲಗಳಿವೆ. (೧.೧೦೦: "ಶೂದ್ರೋಽಪಿ ಮಹತ್ವಂ ಈಯಾತ್" ಎಂದು ಶೂದ್ರರಿಗೂ ಸಾಂತ್ವನ ನೀಡಲಾಗಿದೆ).

ಸಹಜವಾಗಿಯೇ ಇವೆಲ್ಲಾ ಆದಿಕವಿಯ ರಾಮಾಯಣದ ಭಾಗಗಳಲ್ಲ. ಸ್ವ–ಧರ್ಮದ ಬಗ್ಗೆ ಉದ್ದುದ್ದದ ಪ್ರವಚನ ನೀಡುವ ಯಾವನೋ "ಶ್ರದ್ಧಾಳು" (ನಾರಾಯಣಾಚಾರ್ಯನಂಥವನು) ಇದನ್ನು ಸೇರಿಸಿದ್ದಾನೆ. ಕವಿ ವಾಲ್ಮೀಕಿಯ ಕಾವ್ಯವು ಆರಂಭವಾಗುವುದು ಇಂದು ನಮ್ಮ ಮುಂದಿರುವ ರಾಮಾಯಣದ ೫ನೆಯ ಸರ್ಗದಿಂದ. ನೂರಾರು ವಿಧದ ರಾಮಾಯಣಗಳು ಹುಟ್ಟಿಕೊಂಡಿದ್ದು ಹೀಗೆ. ಯಾರಿಗೆ ತಮ್ಮ ಪರಿಸರ, ಆಚರಣೆ, ನಿಯಮ, ಇತ್ಯಾದಿಗಳನ್ನು ಗ್ರಂಥಸ್ಥವಾಗಿಸಬೇಕಿತ್ತೋ ಅವರೆಲ್ಲಾ ತಮ್ಮದೇ ರಾಮಾಯಣಗಳನ್ನು ರಚಿಸಿ ತೃಪ್ತರಾದರು. ರಾಮ–ಸೀತೆಯರ ಛಾಯೆ ಒಂದೊಂದು ಕಡೆ ಒಂದೊಂದು ರೀತಿ ಕಾಣಿಸಿಕೊಳ್ಳುವುದು ಈ ಕಾರಣದಿಂದ. ಅಯೋಧ್ಯೆಯಲ್ಲಿ ರಾಮಮಂದಿರ ಕಟ್ಟಿ ಪುನೀತರಾಗಬಯಸುವವರಿಗೆ ಈ ಕಾವ್ಯ ಸೌಂದರ್ಯ ಮತ್ತು ಕಾವ್ಯಬಾಹುಳ್ಯ ಅರ್ಥವೂ ಆಗುವುದಿಲ್ಲ, ಹಿಡಿಸುವುದೂ ಇಲ್ಲ.

ವಾಲ್ಮೀಕಿಯದೆನ್ನಲಾದ ಇನ್ನೊಂದೆರಡು ಪದ್ಯಗಳನ್ನು ನೋಡಿ : ಎರಡೂ ಅಯೋಧ್ಯಾ ಕಾಂಡದಲ್ಲಿ ಬರುವಂಥವೇ. ಕಾಡಿಗೆ ಬಂದ ಭರತನಿಗೆ ಪಾದುಕೆ ನೀಡಿದ ರಾಮ ರಾಜ್ಯಭಾರದ ಬಗ್ಗೆ ಅವನಿಗೆ ಒಂದೆರಡು ಬುದ್ಧಿವಾದದ ಮಾತುಗಳನ್ನಾಡಿದ. ಅದರಲ್ಲಿ ಒಂದು ಎಚ್ಚರಿಕೆಯನ್ನು ನೀಡುವುದಿದೆ : "ಭರತ, ನೀನು ಆಳ್ವಿಕೆ ನಡೆಸುವಾಗ ಲೋಕಾಯತರನ್ನು ಸರ್ವಥಾ ದೂರವಿಡು." ಏಕೆ ಈ ಉಪದೇಶ ? ಅವರು "ಸ್ವೇ ಸ್ವೇ ಧರ್ಮೇ" ಎಂಬ ಕಟ್ಟಳೆಯನ್ನು ಮಾನ್ಯ ಮಾಡುವುದಿಲ್ಲವೆಂಬುದೇ ಇರಬೇಕು. ಇನ್ನೊಂದೆಡೆ ರಾಮನು ಜಾಬಾಲಿಗೆ ಹೇಳುವ ಮಾತಿದೆ (ಅಯೋಧ್ಯಾ ಕಾಂಡ, ೧೦೯.೩೪) : "ಅಯ್ಯಾ ಜಾಬಾಲಿ, ಒಂದು ವಿಚಾರವನ್ನು ಸರಿಯಾಗಿ ತಿಳಿದುಕೊ. ಆ ಬುದ್ಧನಿದ್ದಾನಲ್ಲ ಅವನೊಬ್ಬ ಕಳ್ಳ, ಅವನು ಶುದ್ಧ ನಾಸ್ತಿಕ. ಬೌದ್ಧರು ಮತ್ತು ನಾಸ್ತಿಕರು ಶಂಕೆಗೆ ಪಾತ್ರರು. ಪ್ರಜೆಗಳು ಅವರಿಂದ ಪ್ರಭಾವಿತರಾಗಬಾರದು" (ಯಥಾ ಹಿ ಚೋರಸ್ಸ ತಥಾ ಹಿ ಬುದ್ಧಃ ತಥಾಗತಂ ನಾಸ್ತಿಕಮತ್ರ ವಿದ್ಧಿ। ತಸ್ಮಾದ್ಧಿ ಯಶ್ಶಂಕ್ಯತಮಃ ಪ್ರಜಾನಾಂ ನ ನಾಸ್ತಿಕೋ ನಾಭಿಮುಖೋ ಬುಧಸ್ಸ್ಯಾತ್॥). ಕಾವ್ಯ ಕಲ್ಪನೆಯಲ್ಲಿ ವಾಲ್ಮೀಕಿಯು ಮೇರು ಶಿಖರವೇ ಇರಬಹುದು, ಆದರೆ ಕವಿಯಾಗಿ ಅವನಿಗೂ ಸಮಕಾಲೀನ ಚಿಂತನೆ ಮತ್ತು ಪೂರ್ವಗ್ರಹಗಳ ಬಂಧನಗಳಿವೆ ಎನ್ನಬಹುದಲ್ಲವೆ ? ಈ ಪದ್ಯಗಳನ್ನು ವಾಲ್ಮೀಕಿ ಬರೆಯಲಿಲ್ಲವೆಂದು ಬೇಕಾದರೆ ಬಗೆದು ಅವನಿಗೆ ಕಳಂಕ ತಪ್ಪಿಸಲು ಅಡ್ಡಿಯಿಲ್ಲ. ಆದರೆ ವಾಲ್ಮೀಕಿಯ ಕಾಲದಲ್ಲಿ ಸಮಾಜವು ಬಹುಮುಖಿ ಚಿಂತನೆಯಲ್ಲಿ ತೊಡಗಿತ್ತು, ಪರಸ್ಪರ ವ್ಯತಿರಿಕ್ತವಾದ ತಾತ್ವಿಕ ಧೋರಣೆಗಳನ್ನುಳ್ಳವರು ವಾದ ಮತ್ತು ನಿಂದನೆಗಳಲ್ಲಿ ತೊಡಗಿದ್ದರೆಂಬುದನ್ನು ತಳ್ಳಿಹಾಕುವಂತಿಲ್ಲ.

ಕವಿಯು ಜಾನಪದನೋ ಶಿಷ್ಟನೋ ಯಾವುದೇ ಆಗಿರಲಿ, ಅವನಿಗೆ ಹಾಗೂ ಅವಳಿಗೆ ಮಿತಿಗಳನ್ನು ವಿಧಿಸಲಾಗದು. ಕಲ್ಪನಾ ಲಹರಿಗೆ ಸಂಪೂರ್ಣ ಸ್ವಾತಂತ್ರ್ಯವುಳ್ಳವರು ಕಲಾವಿದರು. ಶ್ರೇಷ್ಠ ಚಿತ್ರಕಲಾ ವಿಶಾರದ ಜಾಮಿನಿ ರಾಯ್ ಆಗಾಗ್ಗೆ ಹೇಳುತ್ತಿದ್ದರು, ವಾಲ್ಮೀಕಿಗೆ ಅದೆಷ್ಟು ಅಗಾಧವಾದ ಕಲ್ಪನಾ ಸ್ವಾತಂತ್ರ್ಯವಿದ್ದಿತೆಂದು : ಅವನ ಆಂಜನೇಯ ಬೇಕಾದಾಗ ಅಣುವಾಗಿ ಬಿಡುತ್ತಾನೆ, ಇನ್ನು ಕೆಲವೊಮ್ಮೆ ಮಹತ್ತಾಗಿಬಿಡುತ್ತಾನೆ. ಇದೆಂತಹ ವಿಸ್ಮಯ ! ಒಬ್ಬನೇ ವ್ಯಕ್ತಿ ಹಾಗೆ ಭಿನ್ನ ಶರೀರಗಳನ್ನು ಹೊಂದುತ್ತಾ ಹೋಗುತ್ತಾನಲ್ಲ, ಅದು ಸಾಧ್ಯವೆ ? ಕಾವ್ಯದಲ್ಲಿ ಸಾಧ್ಯ. ಅದನ್ನೇ ಆಂಗ್ಲಕವಿ ಕೋಲರಿಜ್ "ಅಪನಂಬಿಕೆಯನ್ನು ಯಾರ ಒತ್ತಾಯವೂ ಇಲ್ಲದೆ ಸ್ವ–ಇಚ್ಛೆಯಿಂದ ಕ್ಷಣಿಕವಾಗಿ ಬಿಟ್ಟುಕೊಡುವುದು" ಎಂದು ಹೇಳಿದ್ದು. ಅದು ವಾಸ್ತವ ಸತ್ಯವಲ್ಲ, ಆದರೆ ಕಾವ್ಯ ಸತ್ಯವಾಗಿ ಅದಕ್ಕೆ ಸ್ಥಾನವಿದೆ. ವಾಲ್ಮೀಕಿಯ ವಾಲಿಯು

ಗವಿಯಲ್ಲಿ ವಾಸಿಸುತ್ತಾನೆ, ಆದರೆ ಅವನ ಗವಿಯಲ್ಲಿ ಬೃಹತ್ತಾದ ಪ್ರಾಸಾದಗಳಿವೆ. ನಾವೆಲ್ಲೂ ಅದನ್ನು ನೋಡಿಲ್ಲವೆಂದರೆ ವಾಲ್ಮೀಕಿ ಹೇಳುತ್ತಾನೆ, "ಆಯಿತು, ಇಲ್ಲಿದೆ ಬಂದು ನೋಡಿರಿ" ಎಂದು. ವಿಶಾಲವಾದ ಕಾವ್ಯಸಂಸಾರದಲ್ಲಿ ಕವಿಯೇ ಪ್ರಜಾಪತಿ; ವಿಶ್ವವು ಹೇಗೆ ಅವನಿಗೆ ರುಚಿಸುತ್ತದೋ ಹಾಗೆ ಅವನು ಅದನ್ನು ಪರಿವರ್ತಿಸಿಕೊಳ್ಳುತ್ತಾನೆ. ಹಾಗೆನ್ನುವ ಒಂದು ಸಂಸ್ಕೃತ ಶ್ಲೋಕವು ಪ್ರಸಿದ್ಧವಾಗಿದೆ. ಆದ್ದರಿಂದಲೇ ರಾಮಾಯಣದ ಹಲವು ರೂಪಗಳೂ ಆಕಸ್ಮಿಕವೇನಲ್ಲ. ಜಾನಪದರು, ಜೈನರು, ಥಾಯ್ಲೆಂಡಿನವರು, ಆಧುನಿಕರು, ಸಂಪ್ರದಾಯಸ್ಥರು, ಎಲ್ಲರೂ ರಾಮಾಯಣದಲ್ಲಿ ತಾವೇನು ಕಾಣ ಬಯಸಿದರೋ ಅದನ್ನು ಯಥೇಚ್ಛವಾಗಿ ಕಂಡು ಕೊಂಡರು. ಜೀವನದ ಬಗೆಗಿನ ಪ್ರತಿಫಲನಗಳು ಏಕಮುಖವಾಗಿಲ್ಲ ಎಂಬುದಕ್ಕೆ ಇದಕ್ಕಿಂತಲೂ ಬೇರೆಯಾದ ಪುರಾವೆ ಬೇಕಿಲ್ಲ. ಮತಿಭ್ರಷ್ಟರು ಏಕೈಕ ರಾಮಾಯಣದ ಕನಸಿನಲ್ಲಿ ತಮ್ಮನ್ನು ತಾವು ಜೀವನದ ಸಂಕೀರ್ಣತೆಯಿಂದ ಕಳಚಿಕೊಳ್ಳಲು ಆಶಿಸುತ್ತಾರೆ. ಅದೇ ಸಂಕುಚಿತ ದೃಷ್ಟಿಯನ್ನು ರಾಷ್ಟ್ರೀಯತೆಯ ವ್ಯಾಖ್ಯಾನಕ್ಕೆ, ದಾರ್ಶನಿಕ ಜಿಜ್ಞಾಸೆಗೆ, ದಿನನಿತ್ಯದ ಮತಧಾರ್ಮಿಕ ಆಚರಣೆ ಗಳಿಗೆ ಅನ್ವಯಿಸಿಕೊಂಡು ಸಾಮಾಜಿಕ ಗಲಭೆಗಳಿಗೆ ಕಾರಣರಾಗುತ್ತಾರೆ. ಅವರ ಜಡ್ಡು ಇಚ್ಛೆಯನ್ನು ಭಾರತೀಯ ಪರಂಪರೆಯು ಎಂದೂ ಮಾನ್ಯ ಮಾಡಿಲ್ಲವೆಂಬುದು ಖಂಡಿತ ಸತ್ಯ.

ಇದು ರಾಮಾಯಣದ ಕತೆ ಮಾತ್ರವಲ್ಲ, ಸಾವಿರ ಅಂತಹ ಬದಲಾವಣೆಗಳು ನಮ್ಮ ಇತಿಹಾಸ ದುದ್ದಕ್ಕೂ ಘಟಿಸಿವೆ. ನಮ್ಮ ಪುರಾಣದ ಕತೆಗಳು ಕಾಲದಿಂದ ಕಾಲಕ್ಕೆ ಉಬ್ಬಿ ಬೆಳೆದಿರುವುದನ್ನು ನೋಡಿದರೆ ಸಾಕು, ಇದು ಮನದಟ್ಟಾಗುತ್ತದೆ. ಕುರುಡಾಗಿ ಅದನ್ನು ಇಲ್ಲವೆನ್ನಲಾಗುತ್ತದೆಯೆ ? ಅದ್ಭುತ ರಾಮಾಯಣ, ಅಧ್ಯಾತ್ಮ ರಾಮಾಯಣ, ಮುಂತಾದುವೆಲ್ಲಾ ವಾಲ್ಮೀಕಿಯನ್ನು ಗೌರವಿಸುತ್ತಲೇ ಬೇರೆ ಹಾದಿಗಳನ್ನು ಹಿಡಿದಿರುವುದು ವಾಸ್ತವ. ಅವನ್ನೆಲ್ಲಾ ಬಿಸುಡುವಷ್ಟು ನಾವು ಅಸಂಸ್ಕೃತ ರಾಗಬೇಕೆ ? ಜೈನ ರಾಮಾಯಣವಾದ "ಪವುಮ ಚರಿಉ" ವಾಲ್ಮೀಕಿಯ ಪಾತ್ರಗಳನ್ನು ಬೇಕಾದಷ್ಟು ಭಿನ್ನವಾಗಿ ಚಿತ್ರಿಸಿರುವುದು ಮೆಚ್ಚಿಗೆಗೆ ಪಾತ್ರವಾಗಿದೆ. ಭಾಸನು ತನ್ನ ಪ್ರತಿಮಾ ನಾಟಕದಲ್ಲಿ ತನ್ನದೇ ಜಾಡು ಹಿಡಿದಿದ್ದಾನೆ. ಆವಿಷ್ಕಾರಗಳಿಲ್ಲದಿದ್ದರೆ ಸಾಹಿತ್ಯವು ಶೂನ್ಯವಾಗುತ್ತದೆಂದು ಅವನಿಗೆ ತಿಳಿದಿತ್ತು. ಊರುಭಂಗದಲ್ಲಿ ಅವನು ಮಹಾಭಾರತದ ಕತೆಯನ್ನೂ ಬದಲಾಯಿಸಿಕೊಂಡ. ಅದಕ್ಕಾಗಿ ಅವನನ್ನು ಖಂಡಿಸುತ್ತೇವೆಯೆ ? ಭವಭೂತಿಯ ಉತ್ತರರಾಮಚರಿತ್ರದ ರಾಮ–ಸೀತೆ ವಾಲ್ಮೀಕಿಯ ರಾಮ–ಸೀತೆಯರ ತದ್ರೂಪವಲ್ಲ. ದೆಹಲಿ ವಿಶ್ವವಿದ್ಯಾ ನಿಲಯದ ಇತಿಹಾಸ ವಿಭಾಗದ ಪಂಡಿತರಿಗೆ ಇದು ತಿಳಿಯದಿದ್ದರೆ ಮೊದಲು ಅವರು ತಮ್ಮ ಸ್ಥಾನಗಳಿಂದ ತೊಲಗಿಹೋಗಬೇಕು !

ವೇದಕಾಲೀನ ದೇವತೆಗಳು, ನಂತರದ ಮತಧಾರ್ಮಿಕ ತತ್ವಗಳು, ದಾರ್ಶನಿಕ ಸಿದ್ಧಾಂತಗಳು, ಸಾಮಾಜಿಕ ಸಂಸ್ಕೃತಿಯ ನೆಲೆಗಳು, ಎಲ್ಲಾ ಕಾಲದಿಂದ ಕಾಲಕ್ಕೆ ವಿಕಾಸಗೊಳ್ಳುತ್ತಾ ಬಂದಿವೆ. ಋಗ್ವೇದದ ಇಂದ್ರ, ವರುಣ, ಅಶ್ವಿನೀ ದೇವತೆಗಳು, ಎಲ್ಲರೂ ಕ್ರಮೇಣ ಬೇರೆಯೇ ರೂಪಗಳನ್ನು ಧರಿಸಿದರು. ಋಗ್ವೇದದ ಸಾಮ್ರಾಟ ವರುಣ ನಂತರದಲ್ಲಿ ಕೇವಲ ಸಮುದ್ರರಾಜ ಆಗಿಬಿಟ್ಟ. ೧೯೫೦ರ ದಶಕದಲ್ಲಿ ಡಾ॥ ಎಚ್. ಎಲ್. ಹರಿಯಪ್ಪನವರು "ಕಾಲಾಂತರಗಳಲ್ಲಿ ಋಗ್ವೇದದ ಪುರಾಣ ಕತೆಗಳು" ಎಂಬ ಸಂಶೋಧನಾ ಗ್ರಂಥ ಪ್ರಕಟಿಸಿದ್ದರು. ಬಹುಮುಖಿ ರಾಮಾಯಣದ ಮಾತನ್ನು ಅರಗಿಸಿಕೊಳ್ಳಲಾಗದ ಕುಬ್ಜ ಸಾಂಸ್ಕೃತಿಕ ಚಿಂತಕರು ಆ ಪುಸ್ತಕವನ್ನು ಓದುವುದು ಆರೋಗ್ಯಕರ. ಪೂನಾ ಓರಿಯೆಂಟಲ್ ಸೀರೀಸ್‌ನಲ್ಲಿ ಆ ಪುಸ್ತಕ ಪ್ರಕಟವಾಗಿತ್ತು. ಋಗ್ವೇದದ ಊರ್ವಶಿ–ಪುರೂರವ ಕಾಳಿದಾಸನ ನಾಟಕದಲ್ಲಿ ಹೊಸ ಜನ್ಮತಾಳಿದ್ದಾರೆ, ಹೆಚ್ಚು ಸುಭಗತ್ವ ಪಡೆದಿದ್ದಾರೆ. ಮಹಾಭಾರತದ ಶಕುಂತಲೆಯು ದುಷ್ಯಂತನೆದುರು ರಾಜಸಭೆಯಲ್ಲಿ ನಾಚಿ ತಲೆತಗ್ಗಿಸಿ ನಿಂತುಕೊಂಡಿರಲಿಲ್ಲ. ಬದಲಾಗಿ, ಪ್ರಸಿದ್ಧ ವಕೀಲ ನಿಪುಣೆಯಂತೆ ಗಟ್ಟಿಯಾಗಿ ವಾದ ಹೂಡಿ ದುಷ್ಯಂತನನ್ನು ನೇರವಾಗಿ ಜರೆದಿದ್ದಳು. ಕಾಳಿದಾಸನ ಶಕುಂತಲೆ ಹಾಗಿಲ್ಲ. ಅವಳನ್ನು ತಾಯಿಯೇ ಬಂದು ಸ್ವರ್ಗಕ್ಕೆ ಒಯ್ದುಬಿಟ್ಟಳು. ಈ ಪ್ರಸಂಗವನ್ನು ತೀನಂಶ್ರೀಯವರು ವಿಶದವಾಗಿ ಚರ್ಚಿಸಿದ್ದಾರೆ. ಒಟ್ಟಿನಲ್ಲಿ ಹೇಳಬೇಕಾದರೆ ಭಾರತೀಯ ಸಂಸ್ಕೃತಿ ಮತ್ತು ಪರಂಪರೆ ಎಂದೂ ಜಡ್ಡುತನಕ್ಕೆ ಸಿಲುಕಿ ಸೊಗಸು ನೀಗಿಕೊಳ್ಳಲಿಲ್ಲ. ಬಹುಮುಖಿ ರಾಮಾಯಣವನ್ನು ಆದರಿಸದಿದ್ದವರು ಭಾರತೀಯ ಪರಂಪರೆಗೆ ಎರಡು ಬಗೆಯುತ್ತಾರೆ.

ಇಂದಿನ ವಿಚಾರ ಸಂಕಿರಣವು ಈವರೆಗೆ ವ್ಯಾಪಕ ವಾಗಿ ಚರ್ಚಿಸಿರುವುದು ಇದನ್ನೇ. ಪ್ರತಿಯೊಂದು ಮಾತಿಗೂ ಸ್ಪಷ್ಟ ಪುರಾವೆಗಳನ್ನು ನೀಡಿ ವಿದ್ವಾಂಸರು ಪ್ರಬಂಧಗಳನ್ನು ಮಂಡಿಸಿದ್ದಾರೆ. ಅಷ್ಟಾಗಿಯೂ ಇಲ್ಲಿ ವ್ಯಕ್ತವಾದ ವಿಶ್ಲೇಷಣೆಗಳಿಗೆ ತೀವ್ರ ವಿರೋಧ ವಿದ್ದರೆ ಅದು ಸಂಕುಚಿತ ದೃಷ್ಟಿಯ ಸೂಚಕ, ಅಷ್ಟೆ. ಆ ದೃಷ್ಟಿಯು ಸಾಹಿತ್ಯಕ ಕಾರಣಗಳಿಂದ ಉತ್ಪನ್ನ ಆಗುವುದಿಲ್ಲ; ಅದಕ್ಕೆ ರಾಜಕೀಯ–ಸಾಂಸ್ಕೃತಿಕ ಕಾರಣ ಗಳಿವೆ. ಒಂದು ಉದಾಹರಣೆ ನೀಡಬಯಸುತ್ತೇನೆ: ಅಯೋಧ್ಯೆಯಲ್ಲಿ ಶ್ರೀರಾಮನಿಗೆ ಸಂಬಂಧಿಸಿದ ವಸ್ತುಸಂಗ್ರಹಾಲಯವನ್ನು ಸ್ಥಾಪಿಸುವ ಯೋಜನೆ ಯೊಂದು ಇದೆಯಂತೆ. ಅಲ್ಲಿ ಬಹುಮುಖಿ ರಾಮಾಯಣದ ದ್ಯೋತಕಗಳಾಗಿ ವಿಭಿನ್ನ ಕಥಾಹಂದರಗಳನ್ನು ಚಿತ್ರಿಸುವುದಿಲ್ಲ. ರಾಮನ ನಾರುಬಟ್ಟೆ, ಬ್ರಹ್ಮಾಸ್ತ್ರ, ಸೀತೆಗೆ ಕಳಿಸಿದ್ದ ಮುದ್ರೆಯುಂಗುರ, ರಾವಣನಿಂದ ತಂದ ಪುಷ್ಪಕ ವಿಮಾನ, ಅಯೋಧ್ಯೆಯಲ್ಲಿ ಪಡೆದ ಕಿರೀಟ, ಮುಂತಾದುವನ್ನು ಇರಿಸುವ ಸಾಧ್ಯತೆಯೇ ಹೆಚ್ಚು. ಅವನು ಮುರಿದಿದ್ದ ಶಿವಧನುಸ್ಸೂ ಇರುತ್ತದೇನೊ! ಕುರುಕ್ಷೇತ್ರದಲ್ಲಿ ಈಗಾಗಲೆ ಒಂದು ಸಂಗ್ರಹಾಲಯ ಇದೆ. ಅಲ್ಲಿ ಯುದ್ಧಭೂಮಿಯ ಆಕರ್ಷಣೀಯ ಮಾದರಿಯೊಂದನ್ನು ಇರಿಸಿದ್ದಾರೆ. ರಾಮನ ವಸ್ತುಸಂಗ್ರಹಾಲಯದಲ್ಲಿ ಲಂಕೆಯ ಯುದ್ಧಭೂಮಿ ಯನ್ನು ಅವತರಿಸುವಂತೆ ಮಾಡಬಹುದು. ಇವೆಲ್ಲಾ ರೋಚಕವಾದ್ದು, ಅವುಗಳನ್ನಿರಿಸಿದರೆ ಬಾಧಕವಿಲ್ಲ. ಆದರೆ ಅದು ಬಾಲಿಶವಾಗಿಬಿಡುತ್ತದೆ. ಆ ಸಂಗ್ರಹಾಲಯದಲ್ಲಿ ಕುವೆಂಪು ಅವರ ಶಂಬೂಕ ಇರುವುದಿಲ್ಲ, ಜೈನ ರಾಮಾಯಣದ ಕರ್ತೃ ವಿಮಲ ಸೂರಿಯ ರಾವಣ ಮತ್ತು ಲಕ್ಷ್ಮಣ ಇರುವುದಿಲ್ಲ (ಅವರು ವಾಲ್ಮೀಕಿಯಲ್ಲಿದ್ದಂತೆ ಇಲ್ಲ), ಥೈಲೆಂಡ್ ಮತ್ತು ಇಂಡೊನೇಷ್ಯಾಗಳ ರಾಮ–ಸೀತೆ ಇರುವುದಿಲ್ಲ. ಜಾನಪದದ ರಾಮನಿಗಂತೂ ಅಲ್ಲಿ ಒಂದಿಂಚು ಜಾಗವೂ ಇರುವುದಿಲ್ಲ.

ಇದರರ್ಥವೇನು ? ಬಹುಮುಖಿಗಳು ಏಕೈಕ ಮುಖವಾಗುವ ಸಾಂಸ್ಕೃತಿಕ ದುರಂತ ಇದು, ವ್ಯಕ್ತಿತ್ವಗಳನ್ನು ಹ್ರಸ್ವಗೊಳಿಸುವ ಅಪಾಯ ಇದು, ಕಲ್ಪನೆಗಳ ಜಿಗಿತ ಇರದಂತೆ ಕಾವ್ಯದ ಕಾಲುಗಳನ್ನು ಮುರಿದು ಕೂಡಿಸುವ ಹುನ್ನಾರ ಇದು. ಅದರಿಂದ ಸಂಸ್ಕೃತಿಯು ಕುಬ್ಜಗೊಳ್ಳುತ್ತದೆ, ಅಪಕ್ವವಾಗುತ್ತದೆ. ಒಂದೇ ಮಾತಿನಲ್ಲಿ ಹೇಳುವುದಾದರೆ, ಅದು ವಿದ್ವತ್ತಿನ ಮತ್ತು ಸಂಸ್ಕೃತಿಯ ಹನನ ಹಾಗೂ ಹರಣ. ನಮ್ಮ ಗೋಷ್ಠಿಗಳು ಮತ್ತು ಸಂವಾದಗಳು ಆ ರೀತಿಯ ವಿಪತ್ತಿನ ಸಾಧ್ಯತೆಗೆ ಪ್ರತಿರೋಧ ಒಡ್ಡಿವೆ, ಬಹುತ್ವವನ್ನು ಪೋಷಿಸಿವೆ. ಈ ಕ್ರಿಯೆ ನಿರಂತರವಾಗಿ ಮುಂದುವರಿಯಬೇಕು, ಅದನ್ನು ಆಗುಮಾಡೋಣ.

ಛಾಂದೋಗ್ಯ ಉಪನಿಷತ್ತಿನ ಒಂದು ಮಾತಿದೆ. ಅದು "ಸತ್" ಎಂಬುದನ್ನು ಕುರಿತಾದದ್ದು. ಮೊದಲಿಗೆ 'ಸತ್' ಒಂದೇ ಇತ್ತು; ಅದು ಬಹು ವಾಗಲು ಇಚ್ಛಿಸಿತು. (ಸದೇವ ಸೋಮ್ಯ ಇದಮಗ್ರ ಆಸೀತ್ ತದೈಕ್ಷತ ಬಹು ಸ್ಯಾಂ ಪ್ರಜಾಯೇಯ). ಸಾಹಿತ್ಯವು ಆ "ಸತ್" ಎಂಬುದನ್ನು ಬೇರೊಂದು ನಿಟ್ಟಿನಲ್ಲಿ ಪ್ರತಿಪಾದಿಸುತ್ತದೆ. ಈ ಉಪನಿಷದ್ವಾಕ್ಯವನ್ನು ಪ್ರಾಯೋಗಿಕವಾಗಿ ಬಹುಮುಖಿ ರಾಮಾಯಣದ ಅಸ್ತಿತ್ವಕ್ಕೆ ಅನ್ವಯಿಸಿಕೊಳ್ಳಬೇಕು.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ
ಹಂತ, ಬೆಂಗಳೂರು – ೫೬೦ ೦೮೫

## ಅಭಿನಂದನೆಗಳು

ಕನ್ನಡ ಪುಸ್ತಕ ಪ್ರಾಧಿಕಾರವು
ನೀಡುವ ೨೦೧೫ನೇ ಸಾಲಿನ
**"ಡಾ॥ ಜಿ. ಪಿ. ರಾಜರತ್ನಂ
ಸಾಹಿತ್ಯ ಪರಿಚಾರಕ ಪ್ರಶಸ್ತಿ**"ಗೆ ಪಾತ್ರರಾದ
**ಶ್ರೀಮತಿ ಶಶಿಕಲಾ ಬೆಳಗಲಿ**ಯವರಿಗೆ
'ಹೊಸತು' ಪತ್ರಿಕೆಯ
ಅಭಿನಂದನೆಗಳು




# ಭಾಷಾತಜ್ಞ ಹಾಗೂ ಸಾಮಾಜಿಕ ಚಿಂತಕ ಡಾ॥ ಗಣೇಶ ದೇವಿ

ಸಂದರ್ಶಕರು

**ಡಾ॥ ರಾಜೇಂದ್ರ ಪೋದ್ದಾರ**

**ಡಾ॥ ಸಂಜೀವ ಕುಲಕರ್ಣಿ**

ಭಾಷಾತಜ್ಞ, ವಿಶ್ವವಿದ್ಯಾಲಯದ ಇಂಗ್ಲಿಷ್ ಪ್ರಾಧ್ಯಾಪಕ ಸ್ಥಾನ ತ್ಯಜಿಸಿ, ಆದಿವಾಸಿ ಭಾಷೆ, ಸಂಸ್ಕೃತಿಯ ರಕ್ಷಣೆಗಾಗಿ ಗುಜರಾತ್, ಮಧ್ಯಪ್ರದೇಶ ಗಡಿ ಪ್ರದೇಶದಲ್ಲಿ ಆದಿವಾಸಿ ಅಕಾಡೆಮಿಯನ್ನು ಸ್ಥಾಪಿಸಿ ಅಪಾರ ಅನುಭವ ಹೊಂದಿರುವ ಡಾ॥ ಗಣೇಶ ದೇವಿಯವರು ಈಗ ಧಾರವಾಡದಲ್ಲಿ ವಾಸವಾಗಿದ್ದಾರೆ. ಸ್ವಯಂನಿವೃತ್ತಿಯ ನಂತರ ವಿಶ್ರಾಂತಜೀವನ ನಡೆಸದೆ ಕೋಮುಸೌಹಾರ್ದತೆ, ಸಾಹಿತ್ಯ, ಭಾಷಾ ಅಧ್ಯಯನ ಹೀಗೆ ಹಲವಾರು ಕ್ಷೇತ್ರಗಳಲ್ಲಿ ಕ್ರಿಯಾಶೀಲರಾಗಿದ್ದಾರೆ. 'ದಕ್ಷಿಣಾಯಣ' ಎಂಬ ವೇದಿಕೆಯ ಮೂಲಕ ದೇಶದ ಜನಪರ, ಪ್ರಗತಿಪರ ಚಿಂತಕರನ್ನು ಒಂದುಗೂಡಿಸಿ ಹೊಸ ಆಂದೋಲನವನ್ನೇ ನಡೆಸಿದ್ದಾರೆ. ಪದ್ಮಶ್ರೀ ಪ್ರಶಸ್ತಿ ವಿಜೇತರಾದ ಇವರು ಇಂಗ್ಲಿಷ್, ಮರಾಠಿ, ಗುಜರಾತಿಯಲ್ಲಿ ೫೦ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಇಂಥ ಕ್ರಿಯಾಶೀಲ ವ್ಯಕ್ತಿತ್ವದ ಡಾ॥ ಜಿ. ಎನ್. ದೇವಿಯವರ ಸಂದರ್ಶನವನ್ನು ಧಾರವಾಡ ಕೃಷಿ ವಿಶ್ವವಿದ್ಯಾಲಯ ಪ್ರಾಧ್ಯಾಪಕರಾದ ಡಾ॥ ರಾಜೇಂದ್ರ ಪೋದ್ದಾರ ಹಾಗೂ ಧಾರವಾಡದ ವೈದ್ಯ, ಕವಿ ಡಾ॥ ಸಂಜೀವ ಕುಲಕರ್ಣಿಯವರು 'ಹೊಸತು'ಗಾಗಿ ನಡೆಸಿಕೊಟ್ಟಿದ್ದಾರೆ.

**ಹೊಸತು :** ತಾವು ಒಬ್ಬ ಭಾಷಾತಜ್ಞರಾಗಿ ಭಾರತೀಯ ಭಾಷೆಗಳ ಸಂರಕ್ಷಣೆಗಾಗಿ ಸಾಕಷ್ಟು ಪರಿಶ್ರಮ ಪಟ್ಟಿದ್ದೀರಿ. ಇದೀಗ ಭಾಷೆಗಳ ಉಳಿವಿನ ಬಗ್ಗೆ ಗಂಭೀರ ಚರ್ಚೆ ನಡೆದಿದ್ದು, ಈ ಕುರಿತು ತಮ್ಮ ಅಭಿಪ್ರಾಯಗಳೇನು ಹಾಗೂ ಮುಂದಿನ ದಾರಿ ಯಾವುದು?

**ಜಿ. ಎನ್. ದೇವಿ :** ನಾನು ಈ ಹಿಂದೆ ಬರೋಡಾ ವಿಶ್ವವಿದ್ಯಾಲಯದಲ್ಲಿ ಸಾಹಿತ್ಯದ ಪ್ರಾಧ್ಯಾಪಕನಾಗಿದ್ದಾಗ ಕೆಲವೊಂದು ಐತಿಹಾಸಿಕ ಕಾರಣಗಳಿಂದಾಗಿ

ಭಾಷೆಗಳ ಉಳಿವಿನತ್ತ ಒಲವು ಮೂಡಿತು. ೧೯೬೧ರ ಗಣತಿಯ ಅನ್ವಯ ಭಾರತ ಸರಕಾರ ೧೬೫೨ ಭಾಷೆಗಳನ್ನು ದಾಖಲು ಮಾಡಿತ್ತು. ಆದರೆ ೧೯೭೧ರ ಗಣತಿಯಲ್ಲಿ ಈ ಭಾಷೆಗಳ ಸಂಖ್ಯೆ ೧೦೮ಕ್ಕೆ ಇಳಿದುಬಿಟ್ಟಿತ್ತು. ೧೫೪೪ ಭಾಷೆಗಳು ಕಾಣೆಯಾಗಿದ್ದವು! ಈ ಭಾಷೆಗಳು ಹೇಗೆ ಕಾಣೆಯಾದವು ಎನ್ನುವದರ ಬಗ್ಗೆ ಚಿಂತಿಸಲಾಗಿ, ಅವೆಲ್ಲ ಆದಿವಾಸಿ ಭಾಷೆಗಳಾಗಿದ್ದವು ಎಂದು ತಿಳಿದು ಬಂದಿತು. ಆದಿವಾಸಿ ಸಮುದಾಯಗಳು ಅಭಿವೃದ್ಧಿ ಫಲಗಳಿಂದ ವಂಚಿತರಾಗಿದ್ದು, ಆ ಸಮುದಾಯಗಳ ಅನಾದರದಿಂದ ಅವರ ಭಾಷೆಗಳೂ ನಿರ್ಲಕ್ಷ್ಯ ಕ್ಕೊಳಪಟ್ಟು, ಆ ಮೂಲಕ ಅವುಗಳು ನಾಶ ವಾಗಿದ್ದನ್ನು ನಾನು ಗಮನಿಸಿದೆ. ಈ ವಿಷವರ್ತುಲ ವನ್ನು ಸರಿಪಡಿಸಿ ಆದಿವಾಸಿ ಸಮುದಾಯಗಳನ್ನು ರಾಷ್ಟ್ರೀಯ ಮುಖ್ಯವಾಹಿನಿಗೆ ತರುವುದರ ಮೂಲಕ ಆದಿವಾಸಿ ಭಾಷೆಗಳನ್ನು ಎಲ್ಲರೂ ಒಪ್ಪಿಕೊಳ್ಳು ವಂತಾಗಬೇಕೆಂಬುದು ನನ್ನ ಇಚ್ಛೆಯಾಗಿತ್ತು. ಈ ಹಿನ್ನೆಲೆಯಲ್ಲಿ ನೋಡಿದಾಗ ನಮ್ಮ ಆರ್ಥಿಕ ಅಭಿವೃದ್ಧಿ ಯೋಜನೆಗಳು ಭಾಷೆಗಳ ವಸ್ತುಸ್ಥಿತಿ ಹಾಗೂ ಭಾಷಾ ವಲಯಗಳ ಮೇಲೆ ಅವಲಂಬಿತ ವಾಗಿರಬೇಕೆನಿಸುತ್ತದೆ.

ಭಾರತದಲ್ಲಿ ಭಾಷಾ ಸಮೀಕ್ಷೆಗಳು ಇದೀಗ ೭೮೦ ಭಾಷೆಗಳನ್ನು ಗುರುತಿಸಿದ್ದು, ಇಂತಹ ಜನ ಭಾಷಾ ಸಮೀಕ್ಷೆಗಳನ್ನು ಮುಂದುವರಿಸಬೇಕಾಗಿದೆ ಎಂದು ಒಬ್ಬ ಭಾಷಾ ಕಾರ್ಯಕರ್ತನಾಗಿ ನನ್ನ ನಂಬಿಕೆ. ಈ ನಿಟ್ಟಿನಲ್ಲಿ ಆದಿವಾಸಿ ಅಭಿವೃದ್ಧಿ ಉಪಯೋಜನೆಗಳ ಮಾದರಿಯಲ್ಲಿ ಭಾಷಾ ಉಪಯೋಜನೆಗಳ ಅವಶ್ಯಕತೆಯೂ ಇದೆ. ಇದರಿಂದಾಗಿ ಆದಿವಾಸಿ ಮಕ್ಕಳು ಮಾತೃಭಾಷೆ ಯಲ್ಲಿ ಕಲಿಯುವಂತಾಗುತ್ತದೆ ಮತ್ತು ಆ ಮೂಲಕ ಗಿರಿಜನರ ಪಾರಂಪರಿಕ ಜ್ಞಾನವನ್ನು ಉಳಿಸಿ, ಉದ್ಯೋಗ ಸೃಷ್ಟಿಸಿ ಆದಿವಾಸಿಗಳು ಪಟ್ಟಣಗಳಿಗೆ ವಲಸೆಹೋಗುವದನ್ನು ತಪ್ಪಿಸಬಹುದು.

ಅಷ್ಟೇ ಅಲ್ಲ, ನಮ್ಮ ನಗರ ಪ್ರದೇಶಗಳು ಅತಿಯಾಗಿ ಬೆಳೆದಿರುವದು ಇನ್ನೊಂದು ಆಯಾಮ ವಾಗಿದೆ. ದೇಶದಲ್ಲಿ ಭಾಷಾವಾರು ಪ್ರಾಂತಗಳ ರಚನೆಯಾದಾಗ ಭಾಷಾವಾರು ಪಟ್ಟಣಗಳ ಸೃಷ್ಟಿಯಾಗಲಿಲ್ಲ. ದೇಶದ ಕನಿಷ್ಠ ೧೬ ಬೃಹತ್ ನಗರಗಳು ಇಂದು ಬಹುಭಾಷಿಕ ಪ್ರದೇಶಗಳಾಗಿವೆ. ಅವುಗಳಲ್ಲಿ ಸುಮಾರು ೨೦೦ ಭಾಷೆಗಳು ಬಳಕೆ ಯಲ್ಲಿವೆ. ಕಾರಣ, ಇಂತಹ ಬೃಹತ್ ನಗರಗಳಿಗೆ ವಿಶೇಷ ಸ್ಥಾನಮಾನ ನೀಡಬೇಕಾದ ಅವಶ್ಯಕತೆ ಇದೆ. ಹೀಗಾಗದ ಪಕ್ಷದಲ್ಲಿ ರಾಜ್ಯವಾರು ಭಾಷಾನೀತಿಗೆ ಹಿನ್ನಡೆ ಆಗುತ್ತದಲ್ಲದೆ, ಆಯಾ ರಾಜ್ಯದ ಭಾಷೆಯ ಉಳಿವಿಗಾಗಿ ಬೃಹತ್ ನಗರಗಳಲ್ಲಿ ಪ್ರತಿರೋಧ ಉಂಟಾಗುವ ಸಾಧ್ಯತೆಗಳಿವೆ. ಉದಾಹರಣೆಗಾಗಿ ಬೆಂಗಳೂರಿನ ಭಾಷಾ ವಸ್ತುಸ್ಥಿತಿ ಒಂದು ತೆರನಾದರೆ, ಕರ್ನಾಟಕ ರಾಜ್ಯದ ಭಾಷಾ ಪರಿಸ್ಥಿತಿ ಇನ್ನೊಂದು ತೆರನಾದುದು. ಬೆಂಗಳೂರಿನ ಭಾಷಾ ವಸ್ತುಸ್ಥಿತಿ ರಾಜ್ಯದ ಭಾಷಾ ಪರಿಸ್ಥಿತಿಯ ಮೇಲೆ ಮೇಲುಗೈ ಸಾಧಿಸಲಾರಂಭಿಸುತ್ತದೆ. ಭಾಷೆಯ ಕುರಿತ ಅನಾದರ ವನ್ನು ತಡೆಗಟ್ಟಲು ೧೯೫೦ರ ದಶಕಗಳಲ್ಲಿ ಭಾಷಾವಾರು ಪ್ರಾಂತಗಳನ್ನು ಗುರುತಿಸಿದ ಹಾಗೆ ಇದೀಗ ಬಹು ಭಾಷಾ ನಗರಗಳನ್ನು ಗುರುತಿಸುವ ಹೊಸ ವಿಚಾರಗಳು ಬೇಕಾಗಿವೆ. ಭಾಷೆಗಳ ಸಂಖ್ಯೆಗಳನ್ನು ಕಡಿಮೆಗೊಳಿಸುವುದರ ಬದಲು ಭಾಷೆಗಳಲ್ಲಿರುವ ವೈವಿಧ್ಯತೆಗಳನ್ನು ಗುರುತಿಸಿ ಆ ಮೂಲಕ ಅವುಗಳನ್ನು ಅಭಿವೃದ್ಧಿಗೊಳಿಸುವುದರಲ್ಲಿ ಮುಂದಿನ ದಾರಿ ಇದೆ ಎಂದು ನನ್ನ ನಂಬಿಕೆ.

**ಹೊಸತು** : ಕರ್ನಾಟಕದಲ್ಲಿ ಮಾತೃಭಾಷೆಯಲ್ಲಿ ಕಲಿಕೆಯ ಬಗ್ಗೆ ಚರ್ಚೆ ನಡೆದಿದೆ. ಕಲಿಕೆಯ ಮಾಧ್ಯಮವಾಗಿ ಭಾಷಾ ಸಮಸ್ಯೆಯನ್ನು ಬಗೆಹರಿಸಲು ಸಂವಿಧಾನಕ್ಕೆ ತಿದ್ದುಪಡಿ ತರುವ ಅವಶ್ಯಕತೆ ಇದೆ ಎಂದೂ ಕೇಳಿಬರುತ್ತಿದೆ. ಈ ಜಟಿಲ ಸಮಸ್ಯೆಯ ಬಗ್ಗೆ ತಮ್ಮ ವಿಚಾರಗಳೇನು?

**ಜಿ. ಎನ್. ದೇವಿ** : ಜಗತ್ತಿನಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಮಾತನಾಡಲಾಗುತ್ತಿರುವ ೬೦೦೦ ಭಾಷೆಗಳಲ್ಲಿ ಕನ್ನಡಕ್ಕೆ ೨೯ನೇ ಸ್ಥಾನವಿದೆ ಎಂದರೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಅದು ಜಗತ್ತಿನ ಮೂರು ಕೋಟಿಗಿಂತಲೂ ಹೆಚ್ಚಿನ ಜನ ಮಾತನಾಡು ತ್ತಿರುವ ವಿರಳ ಭಾಷೆಗಳಲ್ಲೊಂದು. ಮೊದಲಿನ ೩೦ ಭಾಷೆಗಳನ್ನು ಮೂರು ಕೋಟಿಗಿಂತಲೂ ಅಧಿಕ

ಜನ ಮಾತನಾಡುತ್ತಾರೆ. ಈ ೩೦ ಭಾಷೆಗಳಲ್ಲಿ ಅವುಗಳ ಪ್ರಾಚೀನತೆ ಹಾಗೂ ಪರಂಪರೆಯನ್ನು ಗಣನೆಗೆ ತೆಗೆದುಕೊಂಡರೆ ಕನ್ನಡಕ್ಕೆ ೧೦ನೇ ಸ್ಥಾನ ದೊರೆಯುತ್ತದೆ. ಆ ಹತ್ತು ಭಾಷೆಗಳನ್ನು ಅನುಭವ ಹಾಗೂ ಜ್ಞಾನದ ವಾಹಕಗಳಾಗಿ ನೋಡಿದಾಗ ಕನ್ನಡ ಭಾಷೆಯು ಕೃಷಿ ಉತ್ಪಾದನೆಯಿಂದ ಹಿಡಿದು ಔದ್ಯಮಿಕ ಉತ್ಪಾದನೆಯವರೆಗೆ ಮಾತ್ರವಲ್ಲದೆ ಮನೋರಂಜನೆಯಿಂದ ಹಿಡಿದು ಆಳವಾದ ತತ್ವಜ್ಞಾನದ ವಿಚಾರ ಸರಣಿಯನ್ನೂ ಹೊಂದಿದೆ. ಈ ರೀತಿಯಾದ ಮೂರೂ ಆಯಾಮಗಳಲ್ಲಿ ಭಾಷೆಗಳನ್ನು ಪರಿಗಣಿಸಿದಾಗ ಕನ್ನಡ ಭಾಷೆಯು ಜಗತ್ತಿನ ಭಾಷೆಗಳಲ್ಲಿ ೬ ಅಥವಾ ೭ನೇ ಸ್ಥಾನವನ್ನು ಪಡೆಯುತ್ತದೆ.

ಈ ಹಿನ್ನೆಲೆಯಲ್ಲಿ ಕೇವಲ ಪ್ರಾಥಮಿಕ ಹಂತಗಳಲ್ಲಿ ಮಾತ್ರವಲ್ಲ, ಪಿಎಚ್.ಡಿ. ಪದವಿಯ ವರೆಗೂ ಕನ್ನಡದ ಬಳಕೆಯಾಗದೇ ಇರುವುದು ಶೋಚನೀಯ ಸಂಗತಿ. ಮಾಹಿತಿ ತಂತ್ರಜ್ಞಾನವನ್ನೂ ಒಳಗೊಂಡಂತೆ ಎಲ್ಲ ಹಂತಗಳಲ್ಲೂ ಕನ್ನಡದ ಬಳಕೆಯಾಗಬೇಕೆಂಬುದು ನನ್ನ ವಾದ. ಆದರೆ ಭಾಷಾಭಿಮಾನವು ಭಾಷಾಂಧತೆಯಾಗಿ ಪರಿವರ್ತನೆ ಯಾದರೆ ಅದು ನಮ್ಮನ್ನು ಕುರುಡರು ಹಾಗೂ ಕುಬ್ಜರನ್ನಾಗಿಸುತ್ತದೆ. ಕಾರಣ ಪ್ರಾಥಮಿಕ ಶಾಲೆಗಳು, ಕಾಲೇಜುಗಳು ಹಾಗೂ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಮೂರರಿಂದ ನಾಲ್ಕು ಭಾಷೆಗಳು ಬಳಕೆಯಾಗಬೇಕೆಂಬುದು ನನ್ನ ಅಭಿಪ್ರಾಯ. ಭಾಷೆಗಳು ಪರಸ್ಪರ ಅಭಿವೃದ್ಧಿಗೆ ಪೂರಕವಾಗಿದ್ದು, ಕಳೆದ ೩೦೦ ವರ್ಷಗಳಲ್ಲಿ ಇಂಗ್ಲಿಷ್ ಹಾಗೂ ಕನ್ನಡ ಭಾಷೆಗಳು ಪರಸ್ಪರ ಕೊಡುಕೊಂಡಿದ್ದು ಹೆಮ್ಮೆಯ ವಿಷಯ. ನಾನು ಶೈಕ್ಷಣಿಕ ಉದ್ದೇಶಕ್ಕಾಗಿ ಕನ್ನಡ ಮಾತ್ರವಲ್ಲ, ಕನ್ನಡ ಮತ್ತು ಇತರ ಭಾಷೆಗಳನ್ನೊಳಗೊಂಡ ಭಾಷಾ ನೀತಿಯ ಪರವಾಗಿದ್ದೇನೆ.

**ಹೊಸತು** : ಈಗಾಗಲೇ ತಾವು ಕನ್ನಡ ಭಾಷೆ ಎಲ್ಲ ಹಂತಗಳಲ್ಲೂ ಕಲಿಕಾ ಮಾಧ್ಯಮವಾಗ ಬೇಕೆಂದು ತಿಳಿಸಿದ್ದೀರಿ. ಭಾಷೆಗಳು ಸಂವಹನ ಹಾಗೂ ಸಾಹಿತ್ಯದ ಬೆಳವಣಿಗೆ ಅಥವಾ ಹಿನ್ನಡೆಯ ಮೇಲೆ ಜ್ಞಾನ ಕೇಂದ್ರಗಳು ಹಾಗೂ ಮಾಧ್ಯಮಗಳು ಹೆಚ್ಚಿನ ಪ್ರಭಾವ ಬೀರಬಲ್ಲವೇ? ಈ ಕುರಿತು ತಮ್ಮ ಅಭಿಪ್ರಾಯವೇನು?

**ಜಿ. ಎನ್. ದೇವಿ** : ಸುಮಾರು ೧೫೦೦ ವರ್ಷಗಳ ಕ್ರಿಯಾತ್ಮಕ ಸಾಹಿತ್ಯ, ತತ್ವಶಾಸ್ತ್ರೀಯ ರಚನೆ ಹಾಗೂ ಭೌಗೋಳಿಕ ಹರಿವನ್ನು ಗಮನಿಸಿದಾಗ ಕನ್ನಡ ಭಾಷೆಯ ಅಭಿವೃದ್ಧಿಯಲ್ಲಿ ಜ್ಞಾನ ಕೇಂದ್ರಗಳಾಗಲಿ ಅಥವಾ ಮಾಧ್ಯಮಗಳ ಪಾತ್ರವಾಗಲಿ ಕೇವಲ ೨೦೦ ವರ್ಷಗಳಿಗೆ ಸೀಮಿತವಾಗಿರುವುದು ಎದ್ದುಕಾಣುತ್ತದೆ. ಆದರೆ ಭಾಷೆಯ ಬುನಾದಿ, ಅದರ ಬೆಳವಣಿಗೆ ಅಥವಾ ಜನರಿಂದ ಪೋಷಣೆಯಾದ ವಿವಿಧ ವಿನ್ಯಾಸಗಳು, ಜ್ಞಾನ ಕೇಂದ್ರಗಳು ಹಾಗೂ ಮಾಧ್ಯಮಗಳ ಪ್ರಭಾವ ವಲಯದ ಆಚೆಗೆ ನಿರ್ಮಿತವಾಗಿವೆ.



ಮಾಧ್ಯಮ ಕೇವಲ ಭಾಷೆಯ ಒಂದು ಅಂಗವಾದರೆ ಶೈಕ್ಷಣಿಕ ಜೀವನ ಅಥವಾ ಬುದ್ಧಿಜೀವಿ ಜೀವನ ಅದರ ಇನ್ನೊಂದು ಅಂಗ. ಭಾಷೆಯ ಶೈಕ್ಷಣಿಕ ಬಳಕೆ ಇನ್ನೂ ಹೆಚ್ಚಿನ ಶೈಕ್ಷಣಿಕ ಅಭಿವೃದ್ಧಿಗೆ ಬಳಕೆಯಾಗುತ್ತದೆ. ಮಾಧ್ಯಮಗಳು ಕೇವಲ ಭಾಷೆಯನ್ನು ಬಳಸುವ ವಾಹಿನಿ ಗಳಾಗಿವೆಯೇ ಹೊರತು ಹೆಚ್ಚಿನ ಕೊಡುಗೆ ಯನ್ನೇನೂ ನೀಡಿಲ್ಲ. ಶ್ರಮಜೀವಿಗಳ ಜೀವನ ಹಾಗೂ ಶ್ರಮಿಕ ಪದ್ಧತಿಗಳು ವಿವಿಧ ರೀತಿಯಲ್ಲಿ ಭಾಷೆಗಳಿಗೆ ಕೊಡುಗೆಗಳನ್ನು ನೀಡಿವೆ. ಅದೇ ರೀತಿ ವಲಸೆ ವಿಧಾನಗಳು ಭಾಷೆ ಬೆಳವಣಿಗೆ ಮತ್ತು ಅದರ ವೈವಿಧ್ಯತೆಗೆ ಕಾರಣವಾಗಿವೆ. ಕ್ರಿಯಾಶೀಲ ಬರಹಗಾರರು ಕೂಡಾ ಭಾಷೆಯ ಬೆಳವಣಿಗೆಗೆ ಕೊಡುಗೆಗಳನ್ನು ನೀಡಿದ್ದಾರೆ. ಈ ದೃಷ್ಟಿಯಲ್ಲಿ ಸಾಹಿತ್ಯ, ನಾಟಕ, ಜನಪದ ಕಾವ್ಯ – ಗಾಯನ ಹಾಗೂ ಕಥೆಗಳು ಬಹು ಮುಖ್ಯ ಸ್ಥಾನ ಪಡೆಯುತ್ತವೆ. ಭಾಷೆಗಳ ಬೆಳವಣಿಗೆಗೆ ಇನ್ನೊಂದು ಪ್ರಮುಖ ಕಾರಣವೆಂದರೆ ಹಳೆಯ ಹಾಗೂ ಹೊಸ ತಲೆಮಾರುಗಳ ನಡುವಿನ ಸಂಬಂಧ. ಆದರೆ ದುರದೃಷ್ಟಕರ ಸಂಗತಿಯೆಂದರೆ ಆ ಸಂಬಂಧಗಳು ಇಂದು ಕಳಚಿಬೀಳುತ್ತಿವೆ. ತಂತ್ರಜ್ಞಾನ ಆಧಾರಿತ ಸಂವಹನದಿಂದಾಗಿ ಇಂದು ನಮ್ಮಲ್ಲಿ ಯಂತ್ರ ಸಾಧನಗಳ ಮೂಲಕ ಹೆಚ್ಚಿನ ಸಂವಹನ ನಡೆಯುತ್ತಿದ್ದು, ನೈಜ ಸಂವಹನ ಕಡಿಮೆ ಪ್ರಮಾಣದಲ್ಲಿ ನಡೆಯುತ್ತಿದೆ. ಈ ಅಸಮತೋಲನ ವನ್ನು ನಿವಾರಿಸಲು ಕೆಲವು ನವೀನ ಸಾಮಾಜಿಕ ನಡವಳಿಕೆಗಳನ್ನು ಹಾಗೂ ಸಾಮಾಜಿಕ ಅವಕಾಶ ಗಳನ್ನು ರೂಪಿಸಲು ಭಾಷಾ ಹಾಗೂ ಸಾಂಸ್ಕೃತಿಕ ಕಾರ್ಯಕರ್ತರು ಜ್ಞಾನ ಕೇಂದ್ರಗಳು ಹಾಗೂ ಮಾಧ್ಯಮಗಳಾಚೆಗೆ ಶ್ರಮಿಸಬೇಕಾಗಿದೆ.

**ಹೊಸತು** : ಅನೇಕ ಬಾರಿ ತಾವು ಭಾಷಾ ವೈವಿಧ್ಯತೆ, ಸಾಂಸ್ಕೃತಿಕ ವೈವಿಧ್ಯತೆ ಹಾಗೂ ಜೀವ ವೈವಿಧ್ಯತೆಗಳ ಹಾಗೂ ಅವುಗಳ ಅಂತರ್ ಸಂಬಂಧಗಳ ಬಗ್ಗೆ ಮಾತನಾಡಿದ್ದೀರಿ. ಬದಲಾಗು ತ್ತಿರುವ ಜಾಗತಿಕ ಹವಾಮಾನದ ಹಿನ್ನೆಲೆಯಲ್ಲಿ ಈ ಸಂಬಂಧಗಳನ್ನು ಹೇಗೆ ವಿಶ್ಲೇಷಿಸುವಿರಿ?

**ಜಿ. ಎನ್. ದೇವಿ** : ಇಂದಿನ ವಿಸ್ತೃತ ವ್ಯಾಪ್ತಿಯ ಭಾಷೆಗಳು ಆದಿಕಾಲದ ಸಮುದಾಯಗಳು ಕಾಡಿನ ಬೇಟೆಯಿಂದ, ಕೃಷಿ ಜೀವನ ಪದ್ಧತಿಗೆ ಹೊಂದಿಕೊಂಡಾಗ ಉಗಮವಾದವು. ಅಂದು ಹೊಸ ಜೀವನ ಪದ್ಧತಿಯಲ್ಲಿ ಮನುಷ್ಯ ವಿವಿಧ ಜೀವಸಂಕುಲಗಳ ಜೊತೆಗೆ ಸಹಬಾಳ್ವೆಯನ್ನು ಒಗ್ಗೂಡಿಸಿಕೊಳ್ಳಬೇಕಾಗಿತ್ತು. ಇಂದು ನಾವು ಹೊಸ ಅರ್ಥವ್ಯವಸ್ಥೆಯತ್ತ ಕಾಲಿಡುತ್ತಿದ್ದೇವೆ. ಕೃಷಿಯ ನಂತರ ಔದ್ಯೋಗಿಕ ಉತ್ಪಾದನೆಗಳನ್ನು ದಾಟಿ ನೈಜ ಉತ್ಪಾದನೆ, ಯಾವುದೇ ತೆರನಾದ ನೈಜ ಶ್ರಮಗಳಿರದ ಕೃತ್ರಿಮ ಆರ್ಥಿಕತೆಯ ಕಡೆಗೆ ದಾಪುಗಾಲಿಡುತ್ತಿದ್ದೇವೆ. 'ಬಂಡವಾಳ ಬಂಡವಾಳ ವನ್ನೇ ಹುಟ್ಟುಹಾಕುತ್ತದೆ' ಎಂಬ ಹೊಸ ಸೂತ್ರ ನಮ್ಮ ಮುಂದಿದೆ. ಇಂತಹ ಸಂದರ್ಭದಲ್ಲಿ ಅಗಾಧ ಪ್ರಮಾಣದಲ್ಲಿ ಭಾಷೆಗಳು ನಾಶವಾಗು ವುದನ್ನು ನಾವು ಗಮನಿಸುತ್ತಿದ್ದೇವೆ. ಇದರೊಟ್ಟಿಗೆ ಜೀವ ಪರಿಸರ ಹಾಗೂ ಸಾಂಸ್ಕೃತಿಕ ಪರಿಸರಗಳ ಮೂಲಗಳೂ ನಾಶವಾಗುವದು ಆಶ್ಚರ್ಯಪಡ ಬೇಕಾದ ಸಂಗತಿಯೇನಲ್ಲ.

**ಹೊಸತು** : ಇದೀಗ ತಮ್ಮ ಆದಿವಾಸಿ ಅಕಾಡೆಮಿ ಮತ್ತು ಪ್ರಸಿದ್ಧ ತೇಜಗಡ್ ಪ್ರಯೋಗದ ಬಗ್ಗೆ ಮಾತನಾಡೋಣ. ಪ್ರಸಿದ್ಧ ಪ್ರಾಧ್ಯಾಪಕರಾಗಿದ್ದ ತಾವು ಬರೋಡಾದಂತಹ ನಗರ ಪ್ರದೇಶದಿಂದ ಗುಜರಾತಿನ ಆದಿವಾಸಿ ಚಟುವಟಿಕೆಗಳಲ್ಲಿ ಭಾಗವಹಿಸಲು ಮುಂದಾಗಿದ್ದಕ್ಕೆ ಕಾರಣಗಳೇನು?

**ಜಿ. ಎನ್. ದೇವಿ** : ಹತ್ತೊಂಬತ್ತನೇ ಶತಮಾನ ದುದ್ದಕ್ಕೂ ಸಾಮಾಜಿಕ ಅಭಿವೃದ್ಧಿ ಪ್ರಯತ್ನಗಳು ಜಾತ್ಯತೀತ ಸಮಾಜವನ್ನು ನಿರ್ಮಿಸುವತ್ತ ಕೇಂದ್ರೀಕೃತವಾಗಿದ್ದವು. ಆದರೆ ಪರಿಣಾಮ ಹಾಗಾಗಲಿಲ್ಲ. ಬದಲಾಗಿ ಜಾತಿ ವ್ಯವಸ್ಥೆ ಇನ್ನಷ್ಟು ಜಟಿಲವಾಗಿರುವುದು ಕಂಡುಬಂದಿದೆ. ಇದನ್ನೆಲ್ಲ ಗಮನಿಸುತ್ತಿದ್ದ ನಾನು ಜಾತಿ ವ್ಯವಸ್ಥೆಯ ಆಚೆಗೆ ಸಮಸ್ಯೆಗೆ ಪರಿಹಾರವಿದೆಯೇ ಎಂದು

ಯೋಚಿಸುತ್ತಿದ್ದೆ. ಭಾರತದಲ್ಲಿ ಇಂತಹದೊಂದು ಅವಕಾಶವಿರುವುದು ಬುಡಕಟ್ಟು ಜನಾಂಗದಲ್ಲಿ ಎಂದು ಮನಗಂಡ ನಾನು ಸಮಾಜವನ್ನು ಬುಡಕಟ್ಟು ಜನಾಂಗದ ದೃಷ್ಟಿಕೋನದಿಂದ ನೋಡಲು ತೇಜಗಢ್‌ಗೆ ಹೋಗಲು ನಿರ್ಧರಿಸಿದೆ. ತೇಜಗಢ್, ಗುಜರಾತ್, ಮಧ್ಯಪ್ರದೇಶ, ಮಹಾರಾಷ್ಟ್ರ ಹಾಗೂ ರಾಜಸ್ಥಾನ ರಾಜ್ಯಗಳ ಗಡಿಪ್ರದೇಶಗಳಿಗೆ ಹತ್ತಿರದಲ್ಲಿರುವ ಒಂದು ಆದಿವಾಸಿ ಗ್ರಾಮವಾಗಿರುವುದರಿಂದ ನಮಗೆ ನಾಲ್ಕು ರಾಜ್ಯಗಳ ಆದಿವಾಸಿ ಜನರ ಜೊತೆಗೆ ಸಂಪರ್ಕ ಏರ್ಪಡಲು ಸಾಧ್ಯವಾಗಿತ್ತು. ಮೊದಮೊದಲು ನಾನು ಅವರೊಂದಿಗೆ ಮಾತನಾಡುತ್ತ ಅವರನ್ನು ಅರ್ಥಮಾಡಿಕೊಳ್ಳಲು ಸಮಯ ಕಳೆದೆ. ನಂತರ ನಾನು ಅವರ ಧ್ವನಿಯು ಜಗತ್ತಿನ ಇತರರಿಗೆ ಕೇಳಿಸಲೆಂದು ಒಂದು ವೇದಿಕೆಯನ್ನು ಸೃಷ್ಟಿಸಿದೆ. ಈ ರೀತಿಯ ಒಂದು ಪ್ರಯೋಗದಿಂದ ಹುಟ್ಟಿದ್ದು 'ಆದಿವಾಸಿ ಅಕಾಡೆಮಿ'. ಆದಿವಾಸಿ ಅಕಾಡೆಮಿಯನ್ನು ನಾನು ಸೃಷ್ಟಿಸಿದೆ ಎಂದು ಹೇಳುವದಕ್ಕಿಂತಲೂ ತಮಗೆ ಹೇಳುವದಕ್ಕೆ ಸಾಕಷ್ಟಿದೆ ಎಂಬ ಸತ್ಯವನ್ನು ಮನಗಂಡ ಆದಿವಾಸಿ ಜನತೆಯಿಂದಲೇ ಸೃಷ್ಟಿಯಾಯಿತು ಎಂದು ಹೇಳಬಯಸುತ್ತೇನೆ. ಅಷ್ಟೊಂದು ಜನ ಆದಿವಾಸಿಗಳ ವಿಚಾರ ಹಾಗೂ ವಿಷಯಗಳನ್ನು ಆಲಿಸುವುದರ ಮೂಲಕ ಈ ಸಂಸ್ಥೆ ನಿರ್ಮಾಣವಾಯಿತು. ಜಾತೀಯತೆ ಎಂಬ ವ್ಯಸನದಿಂದ ಹೊರಬರಲು ಈ ದೇಶ ಆದಿವಾಸಿಗಳ ಅನಿಸಿಕೆಗಳಿಗೆ ಕಿವಿಗೊಡಲಿ ಎಂದು ನಾನು ಬಯಸುತ್ತೇನೆ.

**ಹೊಸತು :** ಭಾರತೀಯ ಸಮಾಜ ಪುರಾತನವಾಗಿದ್ದರೂ ಅದು ನಿರಂತರ ಬದಲಾವಣೆಯನ್ನು ಹೊಂದುತ್ತಿರುವ ಸಮಾಜ. ಹಳೆಯದನ್ನಷ್ಟು ಉಳಿಸಿಕೊಂಡು ಹೊಸದಕ್ಕೆ ಕಾಲಿಡುವ ಈ ಸಂದರ್ಭದಲ್ಲಿ ಸಮಕಾಲೀನ ಬೆಳವಣಿಗೆಗಳು ಒಳ್ಳೆಯದೆಲ್ಲವನ್ನೂ ಕೊಚ್ಚಿಹಾಕುತ್ತಿರುವಂತೆ ಭಾಸವಾಗುತ್ತಿದೆ. ಈ ಕುರಿತು ತಮ್ಮ ಅಭಿಪ್ರಾಯವೇನು?

**ಜಿ. ಎನ್. ದೇವಿ :** ಕಳೆದ ನಾಲ್ಕು ಶತಮಾನಗಳಲ್ಲಿ ಪಾಶ್ಚಿಮಾತ್ಯ ಸಮಾಜವು ವೈಜ್ಞಾನಿಕ ದೃಷ್ಟಿಕೋನ, ವೈಚಾರಿಕತೆ ಹಾಗೂ ಸಾರ್ವತ್ರಿಕ ಮತಾಧಿಕಾರಗಳ ಆಧಾರದ ಮೇಲೆ ಆಧುನಿಕತೆಯನ್ನು ಹುಟ್ಟುಹಾಕಿತು. ಆದರೆ ಭಾರತೀಯ ಸಮಾಜದಲ್ಲಿ ಆಧುನಿಕತೆಯನ್ನು ಸ್ವಯಂ ಅನುಭವದಿಂದ ಪಡೆಯದೆ ಪಶ್ಚಿಮದ ದೇಶಗಳಲ್ಲಿ ಹುಟ್ಟುಹಾಕಲಾದ ಆಧುನಿಕತೆಯನ್ನೇ ನಕಲು ಮಾಡಿಕೊಂಡೆವು. ಭಾರತೀಯ ಸಮಾಜಕ್ಕೆ ಇದೊಂದು ಬಾಹ್ಯ ಸೇರ್ಪಡೆ ಆಗಿತ್ತು. ಆದರೆ ಭಾರತೀಯ ಸಮಾಜದಲ್ಲಿಯೇ ಎಂಟನೇ ಶತಮಾನದಿಂದೀಚೆಗೆ ಹೊಸ ಪ್ರಶ್ನೆಗಳನ್ನು ಕೇಳುವಂತಹ ಬದಲಾವಣೆಯ ಪ್ರಕ್ರಿಯೆಯನ್ನು ಕಾಣಬಹುದಾಗಿದೆ. ಸಂತ ತುಕಾರಾಮ, ಕಬೀರ, ಮೀರಾ, ಬಸವ ಹಾಗೂ ಅಕ್ಕ ಮಹಾದೇವಿಯಂಥವರು ಸ್ಥಾಪಿತ ಧರ್ಮಶಾಸ್ತ್ರಗಳಲ್ಲದೆ ಸಾಮಾಜಿಕ ಸಂಪ್ರದಾಯಗಳನ್ನೂ ಪ್ರಶ್ನಿಸಲಾರಂಭಿಸಿದರು. ನಮ್ಮ ಆಧುನಿಕ ಭಾರತ ಈ ಅಸಂಪ್ರದಾಯಿಕ ನೆಲೆಗಟ್ಟಿನ ಮೇಲೆ ನಿರ್ಮಾಣವಾಗಬೇಕಾಗಿತ್ತು, ನಮ್ಮ ಸಮಸ್ಯೆಗಳಿಗೆ ನಮ್ಮದೇ ಆದ ಪ್ರಶ್ನೆಗಳ ಮೂಲಕ ನಮ್ಮದೇ ಆದ ಉತ್ತರಗಳನ್ನು ಕಂಡುಕೊಳ್ಳಬೇಕಾಗಿತ್ತು. ಆದರೆ ನಾವು "ನಮ್ಮ ವಿಷಯಗಳು ಹಾಗೂ ಅವರ ಪರಿಹಾರಗಳ" ಮಧ್ಯೆ ಹೊಯ್ದಾಡುತ್ತಿದ್ದೇವೆ. ನಾವಿಂದು ಅಸ್ಪಷ್ಟ ಪರಂಪರೆಗಳತ್ತ ವಾಲದೆ ಆಧುನಿಕತೆಯ ವಿಚಾರವನ್ನು ಪ್ರಶ್ನಿಸಿದ್ದಾದರೆ ಬದಲಾವಣೆ ಹಾಗೂ ಸಾಮಾಜಿಕ ಮುನ್ನಡೆ ಸಾಧ್ಯ. ಬದಲಾವಣೆಯ ಗತಿ ನಮ್ಮ ಬೌದ್ಧಿಕ, ಸಾಂಸ್ಕೃತಿಕ ಹಾಗೂ ಭಾವನಾತ್ಮಕ ಸಾಮರ್ಥ್ಯಗಳಿಗೆ ಅನುಗುಣವಾಗಿರಬೇಕು. ನಮಗೀಗ ಹೆಚ್ಚಿನ ಆತ್ಮಾವಲೋಕನ ಹಾಗೂ ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳುವ ಅವಶ್ಯಕತೆ ಇದೆ. ದುರ್ದೈವವಶಾತ್ ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಪ್ರಶ್ನೆಗಳನ್ನು ಕೇಳುವುದೇ ಒಂದು ಅಪರಾಧ ಎನ್ನುವ ಮಟ್ಟಕ್ಕೆ ತಲುಪಿದ್ದೇವೆ. ಇದು ನಿಜಕ್ಕೂ ಖೇದಕರ ಸಂಗತಿ.

**ಹೊಸತು :** ಭಾಷೆ, ಸಂಸ್ಕೃತಿ ಹಾಗೂ ಸಾಮಾಜಿಕ ಮೌಲ್ಯಗಳು ಉತ್ಪಾದನಾ ಸಲಕರಣೆಗಳ ಒಡೆತನ, ಉತ್ಪಾದನಾ ಸಂಬಂಧಗಳು ಹಾಗೂ ಆಸ್ತಿ ಹಂಚಿಕೆಯ ಮೇಲೆ ಅವಲಂಬಿತವಾಗಿವೆ ಎಂಬುದು ಮಾರ್ಕ್ಸ್‌ವಾದದ

ಒಂದು ಆಯಾಮ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಭಾರತೀಯ ಸಮಾಜದ ಕಾಲಘಟ್ಟವನ್ನು ಹೇಗೆ ವಿಶ್ಲೇಷಿಸುವಿರಿ?

**ಜಿ. ಎನ್. ದೇವಿ :** ಕಾರ್ಲ್ ಮಾರ್ಕ್ಸ್ ಒಬ್ಬ ಅದ್ಭುತ ಚಿಂತಕರಾಗಿದ್ದರು. ಅವರ ಚಿಂತನೆಯ ಕಾಲಘಟ್ಟದಲ್ಲಿ ಜನ ಭೂಮಿಯನ್ನು ತ್ಯಜಿಸಿ ಗ್ರಾಮೀಣ ಪ್ರದೇಶಗಳಿಂದ ಪಟ್ಟಣ ಪ್ರದೇಶಗಳತ್ತ ವಲಸೆ ಹೋಗುತ್ತಿರುವ ಹಾಗೂ ಔದ್ಯಮೀಕರಣಗೊಳ್ಳುತ್ತಿದ್ದ ಬಂಡವಾಳಶಾಹಿ ಸಮಾಜದ ವಿಶ್ಲೇಷಣೆಯಾಗಿತ್ತು. ಹೀಗಾಗಿ, ಸಾಮೂಹಿಕವಾಗಿ ಉತ್ಪಾದಿಸಿದ್ದನ್ನು ಸಮನಾಗಿ ಹಂಚುವುದು ಸಮತಾ ಸಮಾಜ ನಿರ್ಮಾಣದ ಮಾರ್ಗವೆನಿಸಿತ್ತು. ಭಾರತದ ಪರಿಸ್ಥಿತಿ ಹಾಗಿರಲಿಲ್ಲ. ಭೂಮಿಯನ್ನು ತ್ಯಜಿಸಿ ಗ್ರಾಮೀಣ ಪ್ರದೇಶಗಳಿಂದ ನಗರ ಪ್ರದೇಶಗಳತ್ತ ನಡೆದ ವಲಸೆ ಪ್ರಕ್ರಿಯೆ ಅಷ್ಟು ಸರಳವಾಗಿರಲಿಲ್ಲ. ಅದು ಅತೀ ಕ್ಲಿಷ್ಟಕರವಾಗಿತ್ತು. ನಮ್ಮ ಗ್ರಾಮೀಣ ಜನತೆ ಪಟ್ಟಣಗಳತ್ತ ನಡೆದಾಗ ಅವರು ತಮ್ಮ ಜೊತೆಗೆ ಗ್ರಾಮೀಣತೆಯನ್ನೂ ಕೊಂಡೊಯ್ದರು. ಭಾರತದಲ್ಲಿ ಗ್ರಾಮಗಳ ರಚನೆ ಎಷ್ಟು ವಿಶಿಷ್ಟವಾಗಿದೆ ಎಂದರೆ, "ನೀವು ಒಬ್ಬ ವ್ಯಕ್ತಿಯನ್ನು ಗ್ರಾಮದಿಂದ ಹೊರತರಬಹುದೇ ಹೊರತು ವ್ಯಕ್ತಿಯಿಂದ ಗ್ರಾಮೀಣವನ್ನು ಹೊರತರುವದು ದುರ್ಲಭ."

ಈ ವಿಚಾರದಲ್ಲಿ ಭಾರತದಲ್ಲಿ ಮಾರ್ಕ್ಸ್‌ನ ಹತ್ತಿರಕ್ಕೆ ಬಂದವರು ಡಾ॥ ಅಂಬೇಡ್ಕರ್. ನಮ್ಮ ಸಮಾಜದಲ್ಲಿ ಸಮಾನತೆಯನ್ನು ಹೇಗೆ ಅರ್ಥೈಸಬೇಕು ಹಾಗೂ ಅದನ್ನು ಹೇಗೆ ಸಾಧಿಸಬೇಕೆಂಬುದನ್ನು ಅವರು ಸರಿಯಾಗಿ ಅರಿತುಕೊಂಡಿದ್ದರು.

**ಹೊಸತು :** ತಮ್ಮ ಪಿಎಚ್.ಡಿ. ಪ್ರೌಢ ಪ್ರಬಂಧ ಅರವಿಂದರ ತತ್ವಶಾಸ್ತ್ರಕ್ಕೆ ಸಂಬಂಧಿಸಿದ್ದಾಗಿದೆ. ಇತ್ತೀಚಿನ ದಿನಗಳಲ್ಲಿ ಅರವಿಂದರ ಬಗ್ಗೆ ಚರ್ಚೆಯಾಗುತ್ತಿಲ್ಲ ಹಾಗೂ ಪ್ರಸ್ತಾವನೆ ಕೂಡಾ ಇಲ್ಲವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಅರವಿಂದರ ವಿಚಾರಗಳ ಸ್ಥಾನವೇನು?

**ಜಿ. ಎನ್. ದೇವಿ :** ಶ್ರೀ ಅರವಿಂದರು ಭವಿಷ್ಯತ್ತಿನ ಕವಿಗಳಾಗಿದ್ದರು. ಅವರ ಭವಿಷ್ಯದ ಪರಿಕಲ್ಪನೆ ಅತ್ಯಂತ ಸಮಂಜಸವಾದುದೂ ಹಾಗೂ ವಿವೇಚನೆಯಿಂದ ಕೂಡಿದುದೂ ಆಗಿತ್ತು. ಗಾಂಧೀಜಿ ಹಾಗೂ ಅಂಬೇಡ್ಕರ್ ಅವರು ನಮಗೆ ಸಂಘರ್ಷದ ದರ್ಶನ ಮಾಡಿಸಿದರೆ, ಅರವಿಂದರು ಭವಿಷ್ಯದಲ್ಲಿ ನಾವು ಹೇಗೆ ರೂಪುಗೊಳ್ಳಬೇಕೆಂದು ನಿರೂಪಿಸಿದ್ದರು. ಇಡೀ ಜಗತ್ತು ಇಂತಹ ಒಂದು ಮಾದರಿಗಾಗಿ ಹಾತೊರೆಯುತ್ತಿರುವಾಗ ಭವಿಷ್ಯತ್ತಿನಲ್ಲಿ ಅರವಿಂದರು ಇನ್ನಷ್ಟು ಪ್ರಸ್ತುತರಾಗುತ್ತಾರೆ. ಭಾಷೆಗಳ ಭವಿಷ್ಯ ಕುರಿತು ನನ್ನ ಅನೇಕ ವಿಚಾರಗಳು ಶ್ರೀ ಅರವಿಂದರ ಆಲೋಚನೆಗಳ ಪ್ರಭಾವದಿಂದ ಹೊರಹೊಮ್ಮಿವೆ.

**ಹೊಸತು :** ಇತ್ತೀಚೆಗೆ ತಾವು "ದಕ್ಷಿಣಾಯಣ" ಎಂಬ ಚಳುವಳಿಯನ್ನು ಪ್ರಾರಂಭಿಸಿದ್ದೀರಿ. ಇದರ ಹಿಂದಿನ ಆಲೋಚನೆಗಳೇನು?

**ಜಿ. ಎನ್. ದೇವಿ :** ನಮ್ಮ ಋತುಮಾನಗಳಲ್ಲಿ ಕೆಲಸಮಯ ಹಗಲಿಗಿಂತಲೂ ರಾತ್ರಿಗಳು ದೀರ್ಘವಾಗಿದ್ದು, ದೀರ್ಘ ಕತ್ತಲೆಯ ರಾತ್ರಿಗಳಲ್ಲಿ ಜೀವಿಗಳು ಭಯಪಡುತ್ತವೆ. ಇಂತಹ ಪರಿಸ್ಥಿತಿಯಲ್ಲಿ "ದಕ್ಷಿಣಾಯಣ" ವಿಚಾರ ಭಯವನ್ನು ಅಳಿಸಿ, ನಿರ್ಭಯತೆಯನ್ನು ಬೆಳೆಸಿ, ಅರುಣೋದಯದ ಭರವಸೆಯನ್ನು ನೀಡುವ ಒಂದು ಹೆಜ್ಜೆಯಾಗಿದೆ. ಇದು ದೇಶದ ಅನೇಕ ಬುದ್ಧಿಜೀವಿಗಳು, ಬರಹಗಾರರು, ಕಲಾಕಾರರು ಹಾಗೂ ಚಿಂತಕರ ಚಳುವಳಿಯಾಗಿದೆ. ಸಮಾನಮನಸ್ಕ ಬುದ್ಧಿಜೀವಿಗಳು ವಿವಿಧತೆ, ಪ್ರಜಾಸತ್ತೆ, ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗೂ ಮಾನವ ಜೀವನದ ಘನತೆಯಲ್ಲಿ ವಿಶ್ವಾಸ ಉಳ್ಳವರಾಗಿದ್ದಾರೆ. "ದಕ್ಷಿಣಾಯಣ"ಕ್ಕೆ ಇದೀಗ ಒಂದು ವರ್ಷ ತುಂಬುತ್ತಿದ್ದು, ಮುಂದಿನ ದಿನಗಳಲ್ಲಿ ರಾಷ್ಟ್ರೀಯ ಸಮ್ಮೇಳನ ಹಾಗೂ ಆ ಮೂಲಕ ಭಾರತೀಯ ಭಾಷೆಗಳಲ್ಲಿ ವೈಚಾರಿಕತೆಯನ್ನು ಪ್ರಚೋದಿಸಲು ಉದ್ದೇಶಿಸಲಾಗಿದೆ. ಇದೊಂದು ದೀರ್ಘಕಾಲೀನ ವೇದಿಕೆಯಾಗಲಿದ್ದು, ಇದನ್ನು ಯಾವುದೇ ಪಕ್ಷ, ಸರಕಾರ ಅಥವಾ ಪ್ರಭುತ್ವಕ್ಕೆ ತಳಕುಹಾಕಿ ನೋಡುವಂತಿಲ್ಲ. ಅದು ಕೇವಲ ಸದ್ಯಕ್ಕಲ್ಲ, ಮುಂಬರುವ ಯುಗಗಳಿಗಾಗಿ ರೂಪಿಸಿರುವ ಒಂದು ಪ್ರಯತ್ನ. ಭಾರತದಂತಹ ಬಹುಸಾಂಸ್ಕೃತಿಕ ರಾಷ್ಟ್ರಕ್ಕೆ ಈ ಬಗೆಯ ಒಂದು ವೇದಿಕೆಗೆ ವಿಪುಲ ಅವಕಾಶಗಳಿವೆ.

**ಹೊಸತು :** ಡಾ॥ ನರೇಂದ್ರ ದಾಭೋಲ್ಕರ್, ಶ್ರೀ ಗೋವಿಂದ ಪಾನ್ಸರೆ ಹಾಗೂ ಪ್ರೊಫೆಸರ್ ಎಂ. ಎಂ. ಕಲಬುರ್ಗಿ ಇಂತಹ ಬುದ್ಧಿಜೀವಿಗಳ ವ್ಯವಸ್ಥಿತ ಹತ್ಯೆಗಳ ವಿರುದ್ಧ ತಾವು ಚಳುವಳಿಯನ್ನು ಹಮ್ಮಿಕೊಂಡಿದ್ದೀರಿ. ಇಲ್ಲಿಯವರೆಗೆ ಮೂರೂ ಹತ್ಯೆಗಳ ಸಂಬಂಧ ಯಾವುದೇ ಸಮಾಧಾನಕರ ಪ್ರಗತಿ ಕಂಡುಬಂದಿಲ್ಲ. ತಮ್ಮ ಮುಂದಿನ ನಡೆ ಏನು?

**ಜಿ. ಎನ್. ದೇವಿ :** ಬುದ್ಧಿಜೀವಿಗಳ ವ್ಯವಸ್ಥಿತ ಹತ್ಯೆಗೆ ಸಂಬಂಧಿಸಿದಂತೆ 'ಇದೀಗ ಸಾಕು! ಇಷ್ಟಕ್ಕೆ ಸಾಕು!' ಎನ್ನುವ ಕಾಲವೀಗ ಬಂದಿದೆ. ಅಸುರಕ್ಷತೆಯನ್ನು ಅನುಭವಿಸುತ್ತಲೇ ಕೇವಲ ಸರಕಾರವೇ ನಮ್ಮನ್ನು ರಕ್ಷಿಸಲಿ ಎನ್ನುವುದಕ್ಕಿದು ಸಕಾಲವಲ್ಲ. ಇದು ಕೇವಲ ಕಾಯ್ದೆ ಹಾಗೂ ಸುವ್ಯವಸ್ಥೆಯ ಪ್ರಶ್ನೆಯಲ್ಲ. ಇದು ಜನತೆಯ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಿರುವ ಗೌರವದ ಪ್ರಶ್ನೆಯಾಗಿದೆ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ರಕ್ಷಿಸಲು ನಾವು ಮಾಡಬೇಕಾದ ಕನಿಷ್ಠ ಕಾರ್ಯವೆಂದರೆ ಅನ್ಯಾಯದ ವಿರುದ್ಧ ಎದ್ದು ನಿಂತು ಮಾತನಾಡುವುದು. ಇದಕ್ಕೂ ಹೆಚ್ಚಿನದನ್ನು ನಾನೇನೂ ಮಾಡುತ್ತಿಲ್ಲ. ಧಾರವಾಡಕ್ಕೆ ಬಂದು ನೆಲೆಸಿದ ನಂತರ ನಾನು ನಿಭಾಯಿಸಿದ್ದು ಈ ಕನಿಷ್ಠ ಕರ್ತವ್ಯ. ನನ್ನ ನಡಿಗೆ ಉತ್ತಮ ಫಲಗಳನ್ನು ನೀಡುವತ್ತ ಸಾಗಿದರೆ ನನಗೆ ಸಂತೋಷಪಡಲು ಕಾರಣ ಉಂಟು. ಕೇವಲ ಕೆಲವು ವ್ಯಕ್ತಿಗಳನ್ನು ಅಥವಾ ಹಂತಕರನ್ನು ಬಂಧಿಸುವದು ಮುಖ್ಯವಲ್ಲ. ಮಾನವ ಘನತೆಯನ್ನು ಗೌರವಿಸುವುದನ್ನು ನಮ್ಮ ಸಮಾಜಕ್ಕೆ ತಿಳಿಸಿಕೊಡುವ ಪ್ರಯತ್ನವನ್ನು ನಾವು ಮಾಡಬೇಕಿದೆ. ಸಾರ್ವತ್ರಿಕ ಸಂವಾದದ ಸಂಸ್ಕಾರ ನಮ್ಮಲ್ಲಿ ಬೆಳೆದರೆ ಅದೇ ನಮ್ಮ ಪ್ರಯತ್ನಗಳ ಫಲ ಎಂದು ನಾನು ನಂಬಿದ್ದೇನೆ.


ಡಾ॥ ಗಣೇಶ ದೇವಿ ಅವರೊಂದಿಗೆ ಡಾ॥ ರಾಜೇಂದ್ರ ಪೋದ್ದಾರ, ಡಾ॥ ಸಂಜೀವ ಕುಲಕರ್ಣಿ

*(ಈ ಸಂದರ್ಶನದಲ್ಲಿ ಸಹಾಯ ನೀಡಿದ ಶ್ರೀ ಷಣ್ಮುಖ ಭವಾನಿ, ಉಳಪ್ಪ ಮೇಸ್ತ್ರಿ, ಬಸವರಾಜ ಹಿತ್ತಲಮನಿ, ಕೃಷಿ ವಿಶ್ವವಿದ್ಯಾಲಯ, ಧಾರವಾಡ ಹಾಗೂ ಸಂತೋಷ ಇವರುಗಳ ಸಹಾಯವನ್ನು ಸ್ಮರಿಸಲಾಗಿದೆ).*

ಸಂದರ್ಶಕರು : **ಡಾ॥ ರಾಜೇಂದ್ರ ಪೋದ್ದಾರ**
ಪ್ರಾಧ್ಯಾಪಕರು, ಕೃಷಿ ವಿಶ್ವವಿದ್ಯಾಲಯ, ಧಾರವಾಡ

**ಡಾ॥ ಸಂಜೀವ ಕುಲಕರ್ಣಿ**
ಪರಿಸರ ತಜ್ಞರು, ಧಾರವಾಡ




ಶಾಲೆಯ ಓಟದ ಸ್ಪರ್ಧೆಯಲ್ಲಿ ತರಗತಿಗೆ ಅವಳು ಮೊದಲ ಸ್ಥಾನ ಪಡೆದಾಗ ಬಂದ ಬಹುಮಾನ ಅದಾಗಿತ್ತು. ಮಿರಿ ಮಿರಿ ಮಿಂಚುವ ಆ ತಟ್ಟೆಯನ್ನು ಅಮ್ಮನ ಇಷ್ಟಕ್ಕೆ ವಿರುದ್ಧವಾಗಿ ಅವಳು 'ಟೈಗರ್, ಇದು ನಿಂಗೆ, ತಗೋ' ಅಂತ ತನ್ನ ಮುದ್ದಿನ ನಾಯಿಗೆ ಕೊಟ್ಟುಬಿಟ್ಟಿದ್ದಳು. ಅವತ್ತಿನಿಂದ ಟೈಗರ್ ಆ ತಟ್ಟೆಯನ್ನು ಅತ್ತಿತ್ತ ಕದಲಿಸಿ ಕರಕರ ಸದ್ದು ಮಾಡಿಕೊಂಡು ಅನ್ನ ತಿನ್ನುವಾಗ ಅವಳಿಗೇನೋ ಅನಿರ್ವಚನೀಯ ಖುಷಿ. ಗೆಲುವಿನ ಒಂದು ನೆನಪು ಆ ತಟ್ಟೆಯ ಜೊತೆ ಬೆಸೆದುಕೊಂಡಿದ್ದರಿಂದ ಈಗ ಅದು ಬೇರೊಬ್ಬರ ಕೈ ಪಾಲಾಗಿದ್ದು ಏನೋ ಅಮೂಲ್ಯವಾದುದನ್ನು ಕಳೆದುಕೊಂಡ ಭಾವನೆಯನ್ನು ಅವಳಲ್ಲಿ ಮೂಡಿಸಿತ್ತು.

# ಮೌನದಲ್ಲಿ ಹೂತುಹೋದ ಅಚ್ಚರಿ

**ಕೆ. ಎಸ್. ರವಿಕುಮಾರ್**

ಅಚ್ಚರಿ ಎಂಟು ವರ್ಷದ ಹುಡುಗಿ. ತುಂಟಿ. ಮುದ್ದು ಕಿರಿಕಿರಿಯೂ ಹೌದು. ಅವಳು ಪುಂಖಾನುಪುಂಖವಾಗಿ ಪ್ರಶ್ನೆ ಕೇಳುವಾಗ ಯಾರಿಗಾದರೂ ತಾಳ್ಮೆ ತಪ್ಪುವುದು ಗ್ಯಾರಂಟಿ ಅನ್ನಿ. ಸದಾ ಚಟುವಟಿಕೆ, ಸದಾ ಚಡಪಡಿಕೆ. ಅವಳು ಶಾಲೆಯಲ್ಲಿ ಇರುವಷ್ಟು ಹಾಗೂ ನಿದ್ರಿಸಿದಷ್ಟು ಹೊತ್ತು ಮಾತ್ರ ಹೆತ್ತವರಿಗೆ ವಿಶ್ರಾಂತಿ. ತರಗತಿಯಲ್ಲಿ ಅವಳು ಬಾಯಿ ತೆರೆದ ಕೂಡಲೆ ಟೀಚರ್ 'ಹುಶ್ !' ಎಂದು ತುಟಿಯ ಮೇಲೆ ಬೆರಳಿಡುತ್ತಿದ್ದರು. ಹೆಚ್ಚಿನ ಓದನ್ನು ಬೇಡುವ ಅವಳ ಹಲವು ಅನುಮಾನಗಳಿಗೆ ಅವರ ಬಳಿ ಸಮಾಧಾನಕರ ಉತ್ತರವಿರುತ್ತಿರಲಿಲ್ಲ.



ಒಂದು ದಿನ ಅವಳು "ಟೀಚರ್, ನಿಜ ಹೇಳಿ ಆಕಾಶ ಎಷ್ಟು ಎತ್ತರವಿದೆ" ಎಂದು ಕೇಳಿದ್ದಳು. ಹೇಳುವುದು ನಿಜವೋ, ಸುಳ್ಳೋ ಅನ್ನೋದಕ್ಕಿಂತ ಆಕಾಶ ಇರುವ ಎತ್ತರ ಟೀಚರ್‌ಗೆ ತಿಳಿದೇ ಇರಲಿಲ್ಲ. ಯಾಕೆಂದರೆ ಆಕಾಶ ಎನ್ನುವುದೇ ಇಲ್ಲವಲ್ಲ. 'ಅದಿಲ್ಲ' ಎಂದರೆ ಇನ್ನಷ್ಟು ಪ್ರಶ್ನೆಗಳು.

"ಟೀಚರ್, ಗೊರಿಲ್ಲ ಯಾಕೆ ಹಾಡೋಲ್ಲ ?" ಮತ್ತೊಂದು ದಿವಸ ಕೇಳಿದ್ದಳು.

"ಮನುಷ್ಯರು ಸಂಗೀತ ಕಲಿಯೋಕೆ ವರ್ಷಗಟ್ಟಲೆ ಸಮಯ ಬೇಕು. ಗೊರಿಲ್ಲಾಗೆ ಬೇರೆ ಕಲಿಸ್ಬೇಕಾ ? ಸುಮ್ನೆ ಕುತ್ಕೋ" ಎಂದು ಟೀಚರ್ ಗೊಣಗಿದ್ದರು.

ಇನ್ನೊಮ್ಮೆ "ಸೈಕಲ್‌ಗೆ ಚಕ್ರಗಳು ಹಿಂದೆ ಮುಂದೆ ಇರದೆ ಅಕ್ಕ ಪಕ್ಕ ಯಾಕಿರಬಾರದು ?" ಎಂದು ಪ್ರಶ್ನೆ ಎಸೆದಿದ್ದಳು. ಪಾಠದ ಟ್ರ್ಯಾಕ್ ಬೇರೆ ದಿಕ್ಕಿಗೆ ಹೊರಳುತ್ತದೆ ಎಂಬ ಕಸಿವಿಸಿಯ ಜೊತೆಗೆ ಅವಳ 'ಎಷ್ಟು' 'ಯಾಕೆ' ಗಳಿಗೆಲ್ಲ ತತ್‌ಕ್ಷಣ ಉತ್ತರಿಸುವುದು ಟೀಚರ್‌ಗಳಿಗೆ ಬಹಳ ತ್ರಾಸವಾಗಿತ್ತು. ಆದರೆ ಅಚ್ಚರಿಯ ಕುರಿತು ಎಷ್ಟೇ ಗೊಣಗಿಕೊಂಡರೂ ಅವಳೊಂದು ವಿಶೇಷ ಪ್ರತಿಭೆ ಎಂದು ಎಲ್ಲರಿಗೂ ಅನ್ನಿಸಿತ್ತು. ಪ್ರಶ್ನೆ ಕೇಳುವಾಗ ಅವಳ ನಿಷ್ಕಳಂಕ ಮುಖಭಾವ ಎಂತಹವರನ್ನೂ ಸೆಳೆದುಬಿಡುತ್ತಿತ್ತು.

ಅವಳ ನೆಚ್ಚಿನ ನಾಯಿ ಟೈಗರ್ ಇತ್ತೀಚೆಗೆ ಜಾಂಡೀಸ್‌ನಿಂದ ತೀರಿಕೊಂಡಿತು. ಆ ವಾರವೆಲ್ಲ ಅವಳು ಮಂಕಾಗಿದ್ದಳು. ಪ್ರಶ್ನೆಗಳನ್ನು ದೂರ ಸರಿಸಿದ್ದಳು. ಅವಳ ಮೌನದಿಂದ ಮನೆ ಮತ್ತು ಶಾಲೆಯಲ್ಲಿ ಎಲ್ಲರಿಗೂ ವಿಚಿತ್ರ ಕಿರಿಕಿರಿ. ಏನನ್ನೋ ಕಳೆದುಕೊಂಡ ದುಗುಡತನ. ಒಂದು ಬೆಳಿಗ್ಗೆ ಅವಳ ಅಮ್ಮ ಸ್ಟೀಲ್ ತಟ್ಟೆಯನ್ನು ಭಿಕ್ಷೆ ಬೇಡಲು ಬಂದ ಮುದುಕಿಗೆ ಕೊಡುವುದನ್ನು ಅಚ್ಚರಿ ಕಂಡಳು.

"ಅಮ್ಮ ಅದನ್ ಯಾಕೆ ಅವರಿಗೆ ಕೊಟ್ಟೆ ?"

"ಟೈಗರ್ ಊಟ ಮಾಡ್ತಿದ್ದ ತಟ್ಟೆ ಅಲ್ವೇನೆ ? ಎಷ್ಟಾದ್ರೂ ನಾಯಿ ಮುಟ್ಟಿದ್ದು ಮೈಲಿಗೆ ಕಣೇ."

"ಮೈಲಿಗೆ ?"

"ಅಂದ್ರೆ ಗಲೀಜು. ಭಿಕ್ಷುಕರು ಅದನ್ನೆಲ್ಲ ನೋಡ್ತಾರ. ಹೊಸ ತಟ್ಟೆ ತಗೋಳೋಕೆ ಅವರತ್ರ ಸಾಧ್ಯ ಇಲ್ಲ. ಪಾಪ, ಊಟ ಮಾಡ್ಕೊಳ್ಲಿ ಬಿಡು" ಧಾರಾಳಿ ಅಮ್ಮ ಪ್ರತಿಕ್ರಿಯಿಸಿದಳು.

"ನಮಗೆ ಗಲೀಜು ಅನ್ನೋದು ಅವರಿಗೂ ಗಲೀಜು ಅಲ್ವೇನಮ್ಮ ?"

"ಅವರಿಗೆ ನಡೆಯುತ್ತೆ ಬಿಡು. ಅವರೆಲ್ಲ ಯಾವ ಯಾವ ಕೀಳ್ ಜಾತಿಗ್ ಸೇರಿದೋರು ?" ಅಮ್ಮನ ವಿಶ್ಲೇಷಣೆ.

"ಕೀಳ್ ಜಾತಿ, ಹಾಗಂದ್ರೇನು ?"

"ಅಂದ್ರೆ ನಾವು ಮುಟ್ಟಬಾರದವ್ರು ಅಂತ"

"ಮುಟ್ಟಬಾರದು ಅಂತ ಯಾರ್ ಹೇಳಿದ್ದು ?"

"ಶುರುವಾಯಿತ ನಿನ್ ಪ್ರಶ್ನೆ? ಒಂದ್ ವಾರ ಬಾಯಿ ಸುಮ್ಮನಿದ್ದದ್ದೇ ಹೆಚ್ಚು ಅಂತೀನಿ. ಇಷ್ಟಕ್ಕೂ ಅವರ ಬಗ್ಗೆ ತಲೆಕೆಡಿಸಿಕೊಂಡು ನಿನಗೇನಾಗ್ ಬೇಕು ? ಹೋಗು ಪುಸ್ತಕ ಜೋಡಿಸ್ಕೊಂಡು ಶಾಲೆಗೆ ರೆಡಿಯಾಗು, ತಿಂಡಿ ತಿನ್ನೋಕಿದೆ ಇನ್ನೂ." ಅಮ್ಮ ತಾಕೀತು ಮಾಡಿದಳು.

ಅವಳನ್ನು ಕೇಳದೆ ತಟ್ಟೆಯನ್ನು ಇನ್ನೊಬ್ಬರಿಗೆ ಕೊಟ್ಟಿದ್ದು ಅಚ್ಚರಿಗೆ ನಿಜಕ್ಕೂ ಬೇಸರ ತಂದಿತ್ತು. ಶಾಲೆಯ ಓಟದ ಸ್ಪರ್ಧೆಯಲ್ಲಿ ತರಗತಿಗೆ ಅವಳು ಮೊದಲ ಸ್ಥಾನ ಪಡೆದಾಗ ಬಂದ ಬಹುಮಾನ ಅದಾಗಿತ್ತು. ಮಿರಿ ಮಿರಿ

ಮಿಂಚುವ ಆ ತಟ್ಟೆಯನ್ನು ಅಮ್ಮನ ಇಷ್ಟಕ್ಕೆ ವಿರುದ್ಧವಾಗಿ ಅವಳು 'ಟೈಗರ್ ಇದು ನಿಂಗೆ, ತಗೋ' ಅಂತ ತನ್ನ ಮುದ್ದಿನ ನಾಯಿಗೆ ಕೊಟ್ಟುಬಿಟ್ಟಿದ್ದಳು. ಅವತ್ತಿನಿಂದ ಟೈಗರ್ ಆ ತಟ್ಟೆಯನ್ನು ಅತ್ತಿತ್ತ ಕದಲಿಸಿ ಕರಕರ ಸದ್ದು ಮಾಡಿಕೊಂಡು ಅನ್ನ ತಿನ್ನುವಾಗ ಅವಳಿಗೇನೋ ಅನಿರ್ವಚನೀಯ ಖುಷಿ. ಗೆಲುವಿನ ಒಂದು ನೆನಪು ಆ ತಟ್ಟೆಯ ಜೊತೆ ಬೆಸೆದುಕೊಂಡಿದ್ದರಿಂದ ಈಗ ಅದು ಬೇರೊಬ್ಬರ ಕೈ ಪಾಲಾಗಿದ್ದು ಏನೋ ಅಮೂಲ್ಯವಾದುದನ್ನು ಕಳೆದುಕೊಂಡ ಭಾವನೆಯನ್ನು ಅವಳಲ್ಲಿ ಮೂಡಿಸಿತ್ತು. ಆದರೂ "ತಟ್ಟೆ ಹೋದ್ರೆ ಹೋಯ್ತು, ಅದನ್ನು ತಗೊಂಡು ಏನ್ ಮಾಡ್ಲಿ, ಟೈಗರ್ರೇ ಇಲ್ಲವಲ್ಲ?" ಎಂದು ಕ್ರಮೇಣ ಸಮಾಧಾನ ಮಾಡಿಕೊಂಡಿದ್ದಳು.

ಆವತ್ತು ಶಾಲೆಗೆ ಹೋದರೂ ಅಚ್ಚರಿಯ ಮನಸ್ಸಿನಲ್ಲಿ ಎರಡು ಪದಗಳು ಬಲವಾಗಿ ಬೇರೂರಿದ್ದವು: ಒಂದು ಕೀಳು ಜಾತಿ, ಇನ್ನೊಂದು ಮುಟ್ಟಬಾರದವರು. ಇದರ ಬಗ್ಗೆ ಕ್ಲಾಸ್ ಟೀಚರ್‌ನ್ನು ಕೇಳಬೇಕು ಅನ್ನಿಸಿತು. "ಸರ್, ಕೀಳ್ ಜಾತಿ ಅಂದ್ರೆ ಏನು, ಮತ್ತೆ ಮುಟ್ಟಬಾರದವರು ಅಂದ್ರೆ ಯಾರು?" ಟೀಚರ್ ಕಣ್ಣು ಕಿರಿದು ಮಾಡಿಕೊಂಡರು. ನಂತರ ಸಡಿಲಗೊಂಡ ಅವರ ಮುಖದಲ್ಲಿ ಒಂದು ವಿಷಾದದ ಛಾಯೆ ಸರಿದುಹೋಯಿತು. ಅವರ ಗಂಭೀರ ಮೌನವನ್ನು ಕಂಡು ಅಚ್ಚರಿಯೇ ಸುಮ್ಮನಾದಳು. ಆದರೆ ಪ್ರಶ್ನೆ ಹಾಗೆಯೇ ಉಳಿಯಿತು.

ಅಚ್ಚರಿ ಗಣಿತದಲ್ಲಿ ಕೊಂಚ ಹಿಂದೆ ಎಂದು ಅವಳನ್ನು ಮನೆಪಾಠಕ್ಕೆ ಕಳುಹಿಸಲಾಗುತ್ತಿತ್ತು. ಒಂದು ಸಂಜೆ ಅಚ್ಚರಿಯ ಹೊರತಾಗಿ ಬೇರೆಲ್ಲ ಮಕ್ಕಳು ಮನೆಗೆ ಮರಳಿದರು.

"ಯಾಕೆ ಅಚ್ಚರಿ, ಮನೆಗಿನ್ನೂ ಹೊರಟಿಲ್ಲ ?"

"ಸರ್, ಒಂದು ಪ್ರಶ್ನೆ ಕೇಳ್ಲಾ ?"

"ಯಾವ ಲೆಕ್ಕ ನಿಂಗೆ ಕಷ್ಟ ಅನ್ನಿಸ್ತಿದೆ ?"

"ಲೆಕ್ಕ ಅಲ್ಲ ಸರ್. ನಮ್ಮಮ್ಮ ಹೇಳಿದ ಎರಡು ವಿಷಯ ನಂಗೆ ಅರ್ಥ ಆಗ್ಲಿಲ್ಲ. ನಿಮಗೆ ಗೊತ್ತಿರಬೌದು"

"ಏನವು ?"

"ಸರ್, ಕೀಳ್ ಜಾತಿ ಅಂದ್ರೆ ಏನು? ಮುಟ್ಟಬಾರದವರು ಅಂದ್ರೆ ಯಾರು?"

"ನಿಂಗ್ಯಾಕೆ ಇದೆಲ್ಲ ? ಚೆನ್ನಾಗಿ ಓದಿ ಮುಂದೆ ಬರೋದ್ರ ಬಗ್ಗೆ ಯೋಚ್ನೆ ಮಾಡು. ಆದ್ರೂ ಹೇಳ್ತೀನಿ ಕೇಳು. ಯಾಕೆಂದರೆ ಪ್ರಶ್ನೆ ಕೇಳೋದು ನಿನ್ ಹಕ್ಕಲ್ವ. ನಮ್ಮ ಧರ್ಮ ಶಾಸ್ತ್ರಗಳು ಮುಟ್ಟಬಾರದವರನ್ನೇ ಕೀಳು ಜಾತಿಯವರು ಅಂತ ವಿವರಿಸಿವೆ" ಎಂದು ಮೇಷ್ಟ್ರು ಮೂಗಿನ ಮೇಲೆ ಬಿದ್ದಿದ್ದ ಕುಂಕುಮದ ಹುಡಿಯನ್ನು ಒರೆಸಿಕೊಂಡರು.

"ಅವರು ಹ್ಯಾಗಿರ್ತಾರೆ ?"

"ಕೊಳಕಾಗಿರ್ತಾರೆ, ಒರಟರು. ಭಾಷೆ, ನಡವಳಿಕೆಯಲ್ಲಿ ಸಂಸ್ಕಾರ ಇರೋಲ್ಲ. ಯಾವ ಪ್ರಾಣಿಯ ಮಾಂಸನಾದ್ರೂ ತಿಂತಾರೆ. ನೇಮ ನಿಷ್ಠೆಯ ಶಿಸ್ತಿನ ಜೀವನ ನಡೆಸೋಲ್ಲ. ಅವರಲ್ಲಿ ಹೆಚ್ಚಾಗಿ ಕಳ್ಳಕಾಕರು ಇರ್ತಾರೆ."

ಭಿಕ್ಷೆ ಬೇಡಲು ಮನೆಗೆ ಬಂದಿದ್ದ ಮುದುಕಿ ಕಳ್ಳಿಯಂತೇನು ಅಚ್ಚರಿಗೆ ಅನ್ನಿಸಿರಲಿಲ್ಲ. ದೊಣ್ಣೆ ಊರುತ್ತ ಮಂದಗತಿಯಲ್ಲಿ ನಡೆಯುತ್ತಿದ್ದ ಆಕೆಯ ಚಿತ್ರ ಕಣ್ಣಿಗೆ ತೇಲಿ ಬಂತು.

"ಅವರೇಕೆ ಕಳ್ಳರಾಗಿರ್ತಾರೆ ?"

"ಯಾಕೆಂದ್ರೆ ಅವರು ಕೀಳು ಜಾತಿಗೆ ಸೇರಿದವರು."

ಗೊಂದಲ ಒಂದು ಸುತ್ತು ಸುತ್ತಿ ಬಂದು ಮತ್ತೆ ಎದುರಿಗೆ ನಿಂತಿತು. ಅಚ್ಚರಿಗೆ ಸಮಾಧಾನವಾಗಲಿಲ್ಲ. ಮೇಷ್ಟ್ರಿಗೆ 'ಬರ್ತೀನಿ' ಎಂದೆಂದು ಮನೆಗೆ ಮರಳಿದಳು.

ಆ ರಾತ್ರಿ ಅವಳಿಗೆ ಫಕ್ಕನೆ ನಿದ್ದೆ ಬರಲಿಲ್ಲ. ಭಿಕ್ಷುಕಿ, ಕೀಳು ಜಾತಿ, ಮುಟ್ಟಬಾರದವರು, ನೇಮ ನಿಷ್ಠೆ, ಸಂಸ್ಕಾರ, ಕಳ್ಳಕಾಕರು...ಥತ್, ತಲೆ ಗಿರ್ ಎನ್ನತೊಡಗಿತು. ಅವಳ ಎಳೆಯ ಶಬ್ದಕೋಶಕ್ಕೆ ವಿವರಣೆಗೆ ದಕ್ಕದ ಶಬ್ದಗಳೇ ಬಂದು ಸೇರುತ್ತಿದ್ದವು. ಅವುಗಳ ಯೋಚನೆಯಲ್ಲಿ ಅವಳು ಹೋಮ್ ವರ್ಕ್ ಮಾಡೋದನ್ನೇ ಮರೆತಿದ್ದಳು. ಈಗ ನೆನಪಾಗಿ ಮಾಡಿಯೇ ಮಲಗಿದಳು. ನಿದ್ದೆ ಬಂತು.

✶ ✶ ✶

ಗಣೇಶನ ಹಬ್ಬಕ್ಕೆ ಎಂಟು ದಿನವಿತ್ತು. ಶನಿವಾರ ಮಧ್ಯಾಹ್ನ ಹುಡುಗರ ಗುಂಪೊಂದು ಅಚ್ಚರಿಯ ಮನೆಗೆ ಬಂತು. "ಆಂಟಿ, ನಾವು ಮೊದಲ್ನೆ ಸಾರಿ ನಮ್ಮ ಬೀದಿಲಿ ಗಣಪತಿ ಕೂರುಸ್ತಾ ಇದಿವಿ, ಎಷ್ಟು ಕೊಡ್ತೀರಿ ?" ಎಂದು ಗುಂಪಿನ ನಾಯಕ ಗಗನ್ ಕೇಳಿದ. ಅಚ್ಚರಿಯ ಅಮ್ಮ ಅವನ ಕೈಲಿದ್ದ ಡಬ್ಬಿಗೆ ೫೦ರ ಒಂದು ನೋಟು ತುರುಕಿ ಒಳ ನಡೆದಳು. ಆ ಹೊತ್ತಿಗೆ ಅಲ್ಲಿಗೆ ಬಂದ ಅಚ್ಚರಿ ಅಮ್ಮ ದುಡ್ಡು ಕೊಟ್ಟಿದ್ದನ್ನು ಬೆರಗುಗಣ್ಣಿಂದ ಕಂಡಳು. ಹುಡುಗರ ಗುಂಪಿನಲ್ಲಿ ಅಚ್ಚರಿ ಹೋಗುವ ಶಾಲೆಯ ಏಳನೇ ತರಗತಿ ವಿದ್ಯಾರ್ಥಿ ಯಜ್ಞೇಶ್ ಕೂಡಾ ಇದ್ದ. ಅವಳನ್ನು ಕಂಡು ನಸು ನಕ್ಕ. ಕಡೆಯಲ್ಲಿ ಬೆನ್ನು ತಿರುಗಿಸಿ ಹೊರಟ ಅವನನ್ನು ಅಚ್ಚರಿ ಕರೆದು ಕೇಳಿದಳು "ನೀವೆಲ್ಲ ಭಿಕ್ಷೆ ಬೇಡೋಕೆ ಬಂದಿದ್ದ, ಅಂದ್ರೆ ನೀವೆಲ್ಲ ಕೀಳು ಜಾತಿಗೆ ಸೇರಿದವರ ?" ಅವಳ ಪ್ರಶ್ನೆಗೆ ಅವಾಕ್ಕಾದ ಯಜ್ಞೇಶ್ ವಿಚಿತ್ರ ನೋಟ ಬೀರಿ ಉತ್ತರಿಸದೆ ಹೊರಟುಹೋದ. ಭಿಕ್ಷೆ ಬೇಡೋರನ್ನು ಗೇಟಿನೊಳಗೆ ಬರಲು ಅಮ್ಮ ಯಾಕೆ ಬಿಟ್ಟಳು ? ಅಮ್ಮನ ಪ್ರಕಾರ ಬಂದವರೆಲ್ಲ ಕೊಳಕಾಗಿರಬೇಕಿತ್ತು. ಆದರೆ ಎಲ್ಲರೂ ಸ್ವಚ್ಛ ಬಟ್ಟೆ ತೊಟ್ಟಿದ್ದರು. ಅವಳಿಗೆ ವಿಚಿತ್ರ ಅನಿಸಿತು.

ಸೋಮವಾರ ಅಚ್ಚರಿ ಎಂದಿನಂತೆ ಶಾಲೆಗೆ ಹೋದಳು. ಎರಡನೇ ಪೀರಿಯಡ್ ಮುಗಿದ ಕೂಡಲೇ 'ಹೆಡ್ ಮಾಸ್ಟರ್ ಚೇಂಬರ್‌ಗೆ ಬರಬೇಕಂತೆ' ಎಂದು ಅವಳಿಗೆ ಬುಲಾವ್ ಬಂತು. ಕ್ಲಾಸ್ ಟೀಚರ್ ಜೊತೆ ಅಲ್ಲಿಗೆ ಹೋದರೆ ಯಜ್ಞೇಶ್ ನಿಂತಿದ್ದ. ಅವನ ಪಕ್ಕ ಮಧ್ಯವಯಸ್ಸಿನ ಒಬ್ಬ ಗಂಡಸು, ಒಬ್ಬ ಹೆಂಗಸು ಸೆಟೆದು ಕುಳಿತಿದ್ದರು. ಹೆಡ್‌ಮಾಸ್ಟರ್ ಹುಬ್ಬು ಗಂಟಿಕ್ಕಿಕೊಂಡಿದ್ದರು. ವಾತಾವರಣ ಬಿಗುವಾಗಿತ್ತು. ಎಲ್ಲರ ಕಣ್ಣುಗಳು ಅವಳನ್ನೇ ದಿಟ್ಟಿಸುತ್ತಿದ್ದವು. ಅಚ್ಚರಿಗೆ ಭಯವೇ ಆಯಿತು.

"ನೀನು ಯಜ್ಞೇಶ್‌ಗೆ ಏನು ಕೇಳಿದೆ, ಅಚ್ಚರಿ ?" ಹೆಡ್‌ಮಾಸ್ತ್ರ ದನಿ ತುಂಬ ಗಡುಸಾಗಿತ್ತು.

"ನಾನಾ ? ಏನು ಕೇಳಿಲ್ಲ, ಸರ್. ಈಗ್ಲೇ ಅವರನ್ ನೋಡ್ತಾ ಇರೋದು" ಅಚ್ಚರಿಯ ದನಿ ನಡುಗುತ್ತಿತ್ತು.

"ಸುಳ್ಳು ಹೇಳಬೇಡ, ನೀವು ಭಿಕ್ಷುಕರ, ಕೀಳು ಜಾತಿಯವ್ರ ಅಂತ ಕೇಳಿದಿಯಂತೆ ?" ಹೆಡ್‌ಮಾಸ್ತ್ರು ಮುಗಿಸುವ ಮುನ್ನವೇ ಯಜ್ಞೇಶನ ಅಪ್ಪ "ಚೋಟುದ್ದ ಇದಿಯಾ, ನಮ್ಮಂತ ಮೇಲು ಜಾತಿನ ಕೀಳು ಅಂತೀಯಾ ? ಭಿಕ್ಷುಕರು ಅಂತ ಬೇರೆ ಅವಮಾನಿಸ್ತೀಯಾ ? ನಿಮ್ಮ ಅಪ್ಪ ಅಮ್ಮ ಏನ್ ಕಲ್ಸಿದಾರೆ ನಿನಗೆ ?" ಒರಟಾಗಿ ಗದರಿದರು. "ನೀವಾದ್ರೂ ಇಂತಹ ಮಕ್ಕಳಿಗೆ ಬುದ್ಧಿವಾದ ಹೇಳ್‌ಬಾರ್ದಾ ಸರ್ ?" ಎಂದು ಹೆಡ್‌ಮಾಸ್ಟ್ರಿಗೆ ಒಂದು ಕೊಂಕು ಎಸೆದರು. ಪೋಷಕರನ್ನು ಎದುರು ಹಾಕಿಕೊಂಡು ಶಾಲೆ ನಡೆಸುವುದು ಕಷ್ಟ ಎಂಬ ವ್ಯಾವಹಾರಿಕ ವಾಸ್ತವಕ್ಕೆ ಮಾತ್ರ ಕಟ್ಟುಬಿದ್ದಿದ್ದ ಆ ಹೆಡ್‌ಮಾಸ್ಟ್ರಿಗೆ ಅಚ್ಚರಿಯ ನಿಷ್ಕಪಟ ಸ್ವಭಾವ ಅರ್ಥವಾಗುವುದಾದರೂ ಹೇಗೆ ?

'ಮನೆಯ ಬಾಗಿಲಲ್ಲಿ ಆಡಿದ ಮಾತಿಗೆ ಶಾಲೆಯಲ್ಲಿ ವಿಚಾರಣೆ ಯಾಕೆ' ಎಂದು ಕೇಳಲಾಗದಷ್ಟು ಮುಗ್ಧಳಾಗಿದ್ದ ಅಚ್ಚರಿ ಸುಮ್ಮನೆ ಅಳುತ್ತ ನಿಂತಳು. ಅವಮಾನ, ಅಂಜಿಕೆ ಎಲ್ಲ ಅವಳನ್ನು ಕುಸಿಯುವಂತೆ ಮಾಡಿದವು. ಕಣ್ಣೀರು ಧಾರಾಕಾರ ಇಳಿಯುತ್ತಿತ್ತು. ಅವಳ ನಿಸ್ಸಹಾಯಕ ಸ್ಥಿತಿ ನೋಡಿ ಯಜ್ಞೇಶನ ಅಮ್ಮನಿಗೆ ಏನನ್ನಿಸಿತೊ ಏನೋ "ಹೋಗ್ಲಿಬಿಡಿ ಮೇಸ್ಟ್ರೆ, ಚಿಕ್ಕುಡುಗಿ. ಇವಳಪ್ಪ ಅಮ್ಮನ ಕರೆಸಿ ಇವಳಿಗೆ ಒಳ್ಳೆ ಸಂಸ್ಕಾರ ಕಲಿಸೋಕೆ ಹೇಳಿ" ಎಂದರು.

"ಇನ್ನು ಮೇಲೆ ಅದು ಇದು ಅಂತ ಪ್ರಶ್ನೆ ಕೇಳೋದು ನಿಲ್ಸು, ಈಗ ನಡಿ ಕ್ಲಾಸಿಗೆ" ಹೆಡ್‌ಮಾಸ್ತ್ರು ಕೊಂಚ ಹೆಚ್ಚೇ ಎನ್ನಬಹುದಾದ ಏರುದನಿಯಲ್ಲಿ ಗದರಿದರು. ಅಚ್ಚರಿ ಕಣ್ಣೊರೆಸಿಕೊಂಡು ತರಗತಿಗೆ ಬಂದಳು. ಕಾರಿಡಾರಿನಲ್ಲಿ ಬರುವಾಗ ಕ್ಲಾಸ್ ಟೀಚರ್ ಅವಳ ತಲೆ ಸವರಿ ಕಣ್ಣಲ್ಲೇ ಸಮಾಧಾನ ಹೇಳಿದರು.

ಕಡೆಗೂ ನಿಖರ ಉತ್ತರ ದಕ್ಕದ ಪ್ರಶ್ನೆಗಳೊಂದಿಗೆ ಅವಳ ಬದುಕಿನ ಮೊಟ್ಟ ಮೊದಲ ಅವಮಾನದ ಪ್ರಸಂಗ ಹೀಗೆ ಕೊನೆಗೊಂಡಿತು. ಜೊತೆಗೆ ಪ್ರಶ್ನೆ ಕೇಳಬೇಕೆಂಬ ತುಡಿತಕ್ಕೂ ಬ್ರೇಕ್ ಬಿದ್ದಿತು. ಅಚ್ಚರಿ ಮೌನವನ್ನು ಹೆಚ್ಚು ಪ್ರೀತಿಸತೊಡಗಿದಳು. ತನ್ನ ಆಲೋಚನೆಗಳನ್ನು ಪಠ್ಯಪುಸ್ತಕಗಳಿಂದಾಚೆ ಒಯ್ಯುವ ಪ್ರಯತ್ನಗಳಿಗೆ ಕ್ರಮೇಣ ವಿಮುಖಳಾದಳು.

**ಕೆ. ಎಸ್. ರವಿಕುಮಾರ್**
ಭಾರತೀಯ ಜೀವ ವಿಮಾ ನಿಗಮ, ಅಂಚೆ ಪೆಟ್ಟಿಗೆ ಸಂಖ್ಯೆ ೯, ಹಾಸನ – ೫೭೩ ೨೦೧

# ಅನಂತದಲ್ಲಿ ಮುರಳೀರವ

**ಡಾ॥ ಶ್ರೀಕಾಂತಂ ನಾಗೇಂದ್ರ ಶಾಸ್ತ್ರೀ**

ಮೊದಲು ಆಂಧ್ರದ ಸರ್ಕಾರಿ ಸಂಗೀತ ಕಾಲೇಜಿನಲ್ಲಿ ಪ್ರಾಧ್ಯಾಪಕ ವೃತ್ತಿಯನ್ನು ಪ್ರಾರಂಭಿಸಿದ ಬಾಲಮುರಳಿಯವರಿಗೆ ಕಾರಣಾಂತರಗಳಿಂದ ತಮ್ಮ ರಾಜ್ಯವನ್ನು ಬಿಡಬೇಕಾಗಿ ಬಂದಾಗ ಅವರಿಗೆ ಅನ್ನಿಸಿದ್ದು ಮದರಾಸಿನ ನೆಲೆ. ಅಲ್ಲಿಗೆ ಹೋಗಿ ನೆಲೆಸಿ ಅಲ್ಲಿನ ಸ್ಥಳೀಕರೂ ಬೆರಗಾಗುವಂತೆ ತಮಿಳನ್ನು ಮಾತನಾಡುವುದೇನು, ಅದರಲ್ಲಿ ರಚನೆ ಮಾಡುವಷ್ಟು ಸಾಮರ್ಥ್ಯ ಪಡೆದು ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ 'ಸಂಗೀತ ಕಲಾನಿಧಿ'ಯಾಗುವಷ್ಟು ಬೆಳೆದು ನಿಂತದ್ದು ಅವರ ಮಹತ್ತರ ಸಾಧನೆ.



ಈ ಲೇಖನವು ಕೇವಲ ಡಾ॥ ಬಾಲಮುರಳಿಕೃಷ್ಣ ಅವರ ಸ್ತುತಿಗೋಸ್ಕರವೇ ಎಂದು ಬರೆಯ ಹೊರಟದ್ದಲ್ಲ. ಅವರಂಥವರಿಗೆ ಅದು ಅಗತ್ಯವೂ ಅಲ್ಲ. ಅವರ ಸಂಗೀತ ಎಂದಿಗೂ ಅಜರ–ಅಮರ. ಅವರು ಅನಂತದಲ್ಲಿ ಲೀನವಾಗಿದ್ದರೂ ಅವರ ಸಂಗೀತ ರವವು ಅನಂತದಲ್ಲಿ ಎಂದಿಗೂ ಉಳಿಯುವಂಥದ್ದು. ಆದ್ದರಿಂದ ಈ ಲೇಖನ ಅವರಂಥ ಒಬ್ಬ ಮೇರು ಕಲಾವಿದ ರೂಪುಗೊಂಡುದರ ಹಿಂದೆ ಇರಬಹುದಾದ ಸಾಧ್ಯತೆಗಳನ್ನು ವೈಯಕ್ತಿಕ ದೃಷ್ಟಿಕೋನದ ವಿಶ್ಲೇಷಣೆಯಲ್ಲಿ ಮೂಡಿಸಹೊರಟ ಲೇಖನ.

ಡಾ॥ ಮಂಗಳಂಪಲ್ಲಿ ಬಾಲಮುರಳಿಕೃಷ್ಣ ಗಾಯಕ, ವಾದಕ, ಬೋಧಕ, ವಾಗ್ಮಿ, ವಾಗ್ಗೇಯಕಾರ, ನಟ, ಸಂಗೀತ ನಿರ್ದೇಶಕ... ಹೀಗೆ ಬಹುಮುಖವಾದ ಒಂದು ವಜ್ರ. ಭುವನದ ಭಾಗ್ಯವೋ, ಆಯಾ ಕಲೆಯು ಹಲವು ಕಾಲದ ತಪಸ್ಸಿನಿಂದ ತನ್ನ ಅಸ್ತಿತ್ವವನ್ನು ಜಗತ್ತಿಗೆ ಸಾರಲು ಹೆರುವ ಒಂದು ಶ್ರೇಷ್ಠ ಸಂತಾನವೋ, ಯುಗಯುಗಗಳಲ್ಲಿ ಒಮ್ಮೊಮ್ಮೆ ಮಾತ್ರ ಕಂಡುಬರುವ ಅವತಾರವೋ ಎಂಬೆಲ್ಲ ಆಸ್ತಿಕರ, ಕಲಾರಸಜ್ಞರ ಹೃದಯಾಂತರಾಳದ ಭಾವನೆಯ ಮಾತುಗಳ ಮೂರ್ತ ರೂಪವೆಂದರೆ ಅತಿಶಯೋಕ್ತಿಯೇನಲ್ಲ.

ಹೆಸರಿನಲ್ಲಿ ಮಂಗಳಂಪಲ್ಲಿ ಇದ್ದರೂ ಹುಟ್ಟಿದ್ದು ಶಂಕರಗುಪ್ತಂ ಎಂಬ ಗ್ರಾಮವೊಂದರಲ್ಲಿ, ಓದಿದ್ದು ಕೆಲವೇ ತರಗತಿಗಳನ್ನು!

ಪ್ರತಿಭಾ ಕವಚಯುಕ್ತರಾಗಿ ಜನಿಸಿದ ಅವರು ಇತರ ವಿಷಯಗಳಲ್ಲಿನ ವ್ಯುತ್ಪತ್ತಿ ಜ್ಞಾನವನ್ನು ಅಷ್ಟು ದೊಡ್ಡ ಮಟ್ಟಕ್ಕೆ ರೂಢಿಸಿಕೊಂಡದ್ದು ಆಶ್ಚರ್ಯವೇ ಸರಿ. ಎಷ್ಟೋ ಕಲಾವಿದರಿಗೆ ಮನೆಯ ವಾತಾವರಣವೇ ನಿಜವಾದ ಪಾಠಶಾಲೆ. ಪಟ್ಟಾಭಿರಾಮಯ್ಯ ದಂಪತಿಗಳು ಸ್ವತಃ ಸಂಗೀತ ವಿದ್ವಾಂಸರು. ಇವರ ಮಗನಾಗಿ, ಬಾಲ್ಯದಿಂದಲೇ ಅರಳಿದ ಪ್ರತಿಭೆಯ ಜೊತೆಗೆ ಸಂಗೀತ ವಾತಾವರಣವೂ ಅವರಲ್ಲಿದ್ದ ಸುಪ್ತಸಂಗೀತ ಶತಪತ್ರ ಕುಸುಮವು ವಿಕಸಿತವಾಗುವುದಕ್ಕೆ ಸಹಕಾರಿಯಾಯಿತು.

"ತಾವು ಸಂಗೀತವನ್ನು ಕಲಿತದ್ದಲ್ಲ. ಸಂಗೀತವೇ ತನ್ನನ್ನು ಮಾಧ್ಯಮವನ್ನಾಗಿಸಿಕೊಂಡಿದೆಯೆಂದೂ ತಾವು ಎಂದೂ ಸಾಧನೆಯೆಂದು ಕುಳಿತವರಲ್ಲ. ತತ್‌ಕ್ಷಣದಲ್ಲಿ ಪಡಿಮೂಡುವ ಅಭಿಜಾತ ಕಲೆಯು ತನ್ನಿಂದ ಹೊರಹೊಮ್ಮುತ್ತದೆ" ಎಂದು ಅವರು ಹೇಳಿಕೊಂಡಿರುವುದು ಭಾಗಶಃ ನಿಜವಷ್ಟೆ. ಅವರ ವ್ಯುತ್ಪತ್ತಿ ಸಂಚಯನಕ್ಕೆ ಅವರು ಪರಿಶ್ರಮಪಟ್ಟಿರುವುದು ಸುಳ್ಳೇನಲ್ಲ. ಅವರೇ ಒಂದು ಸಂದರ್ಶನದಲ್ಲಿ ಹೇಳಿರುವಂತೆ ಪಾರುಪಲ್ಲಿ ರಾಮಕೃಷ್ಣಯ್ಯ ಪಂತುಲುರವರ ಬಳಿ ತಾವು ಅಭ್ಯಾಸಕ್ಕೆ ಹೋಗುತ್ತಿದ್ದಾಗ ತಮ್ಮ ಹಿರಿಯ ಮಿತ್ರ ಡಾ॥ ನೂಕಲ ಚಿನ್ನ ಸತ್ಯನಾರಾಯಣರವರು ಸೈಕಲ್ಲಿನಲ್ಲಿ ಬಾಲಮುರಳಿ ಅವರ ತಂದೆಯವರ ಬಳಿ ಕಲಿಯಲು ಬಂದರೆ, ತಾವು ಮೋಟರ್‌ಬೈಸಿಕಲ್ಲಿನಲ್ಲಿ ಪಂತುಲುರವರ ಮನೆಗೆ ಹೋಗುತ್ತಿದ್ದುದ್ದನ್ನು ಮತ್ತು ಇಬ್ಬರೂ ಒಂದೆಡೆ ಕುಳಿತು ವೈಯೋಲಿನ್ ನುಡಿಸಿಕೊಂಡು ಸಾಧನೆ ಮಾಡುತ್ತಿದ್ದುದರ ಬಗ್ಗೆ ಹೇಳಿದ್ದಾರೆ. ಸಾಧನೆ ಇಲ್ಲದೆ ಕಲೆ ಒಲಿಯುವುದಾದರೂ ಹೇಗೆ? ಎಂತಹ 'ಕಾರಣ ಜನ್ಮ'ರೂ ಸಾಧನೆಯಿಲ್ಲದಿದ್ದರೆ ಬೆಳೆಯುವುದೆಂತು? ಇಂತಹ ಒಂದು ಮೇರು ಕಲಾವಿದ ರೂಪುಗೊಳ್ಳಲು ಮಾಡಬೇಕಾದ ಸಾಧನೆಗಳೆಷ್ಟೆಂಬುದನ್ನು ಅವರು ಬಾಯಿಬಿಟ್ಟು ಹೇಳಿದಿದ್ದರೆ ಅದು ಮುಂದಿನ ಜನಾಂಗಕ್ಕೆ ಅವರ ಮತ್ತೊಂದು ದೊಡ್ಡ ಸಂಗೀತದ ಕೊಡುಗೆಯಾಗುತ್ತಿತ್ತೇನೋ! ಎಷ್ಟೋ ರಹಸ್ಯಗಳು ಹೀಗೆಯೇ ಮರೆಯಲ್ಲಿದ್ದು ವ್ಯಕ್ತಿಗಳ ಹಿಂದೆಯೇ ಹೋಗಿಬಿಡುವುದು ಬಹಳ ದುರಂತಮಯ ಸಂಗತಿ. ಆದರೂ ಅವರ ಬದುಕಿನ ಕೆಲವು ಹಂತಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಈ ಅಂಶದ ಒಳ ಹೊಳಹುಗಳು ಸಿಗುತ್ತವೆ.

**ಸಾಧನೆಯ ಹಾದಿ**

ಆ ಕಾಲಕ್ಕೆ ಜಿ.ಎನ್.ಬಿ. ಕರ್ನಾಟಕ ಸಂಗೀತದಲ್ಲಿ ಹೊಸ ವಾಯ್ಸ್ ಮಾಡ್ಯುಲೇಶನ್‌ಅನ್ನು ತಂದವರು. ಅವರ ಪ್ರಭಾವ ಬಾಲಮುರಳಿಯವರ ಮೇಲೆ ಆಗಿರುವುದನ್ನು ಅವರ ಪ್ರಾರಂಭದ ರೆಕಾರ್ಡುಗಳಲ್ಲಿ ಕಾಣಬಹುದಾಗಿದೆ. ಕಂಠವನ್ನು ಹುರಿಗೊಳಿಸುವ ಹಾಗೂ ಬಾಯಿಯ ಕುಹರವನ್ನು ಆ ಮಾಡ್ಯುಲೇಶನ್‌ಗೆ ಹೆಚ್ಚಾಗಿ ದುಡಿಸಿಕೊಳ್ಳುವ ಜಿ. ಎನ್. ಬಿ.ಯವರ ಈ ಜಾಣ್ಮೆಯನ್ನು ಬಾಲಮುರಳಿಯವರು ಸ್ವೀಕರಿಸಿ, ತದನಂತರ ಅದನ್ನು ತ್ರಿಸ್ಥಾಯಿಗಳಲ್ಲೂ ಲೀಲಾಜಾಲವಾಗಿ

ಹಾಡುವ ಹಾಗೆ ಪರಿವರ್ತಿಸಿಕೊಂಡರು. ಅವರ ಕಂಠವನ್ನು ಕೇಳಿದಾಗ ಕರ್ನಾಟಕದ ಬಿ. ಎಸ್. ರಾಜ ಅಯ್ಯಂಗಾರ್, ಚಿಂತಲಪಲ್ಲಿ ರಾಮಚಂದ್ರರಾವ್ ಅಥವಾ ಮದ್ರಾಸಿನ ಎಸ್. ಜಿ. ಕಿಟ್ಟಪ್ಪ ಮುಂತಾದವರು ಜನ್ಮತಃ ಬಂದ ಶಾರೀರವಲ್ಲವೆಂಬುದು ನಿರ್ವಿವಾದಿತ. ಅದು ಹುಟ್ಟಿನಿಂದ ಬಂದದ್ದಲ್ಲ; ಸಾಧನೆಯ, ಯೋಜನೆಯ ಫಲದಿಂದ, ಛಲದಿಂದ ಬಂದದ್ದು. ಆದ್ದರಿಂದಲೇ ಬಿರ್ಕಾಗಳು, ಅಕಾರಗಳನ್ನು ಅವರು ದ್ರುತಕಾಲದಲ್ಲಿ ಹಾಡುವಾಗ ಅದು ಶಾರೀರದ ಗಟ್ಟಿತನದಿಂದ ಬರದೆ ಜಾಣ್ಮೆಯಿಂದ ಹತ್ತಿಯಂತೆ ಹಗುರವಾಗಿ, ಆದರೆ ಲೀಲಾಜಾಲವಾಗಿ ಬರುತ್ತಿದ್ದದ್ದೇ ಹೆಚ್ಚು. ಆಧುನಿಕ ಮೈಕ್ ತಂತ್ರಜ್ಞಾನವನ್ನು ಅತ್ಯಂತ ಸೊಗಸಾಗಿ ಬಳಸಿಕೊಂಡರೂ ಸಹ. ಆದ್ದರಿಂದಲೇ ಅವರಂತೆಯೇ ಹಾಡಹೊರಟ ಅನೇಕರ ಹಿಂಡು ಹಿಂಡುಗಳೇ ಹುಟ್ಟಿಕೊಂಡವು. ಕೆಲವರಿಗೆ ಅವರ ಶೇಕಡ ೭೦ರಷ್ಟು ಧ್ವನಿ ಹೋಲಿಕೆಯಾಗುವಂತೆ ಸಾಧ್ಯವಾಗಿದ್ದು ಸಹ. ಬಾಲಮುರಳಿಯವರ ಶಾರೀರದ ಹಿಂದೆ ತರ್ಕಬದ್ಧವಾದ, ವೈಜ್ಞಾನಿಕ ಆಲೋಚನೆ, ಸಾಧನೆ ಇರುವುದನ್ನು ಕಾಣಬಹುದು.

**ಮದ್ರಾಸಿನ ನೆಲೆ ಮತ್ತು ವಿವಾದಗಳು**

ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಕರ್ನಾಟಕದಲ್ಲಿ ಹುಟ್ಟಿದ ಹಿನ್ನೆಲೆ ಇದ್ದರೂ ಮದರಾಸಿನಲ್ಲಿ ಮೆಚ್ಚುಗೆ ಗಳಿಸಿಕೊಂಡ ನಂತರವೇ ತವರು ರಾಜ್ಯಗಳಲ್ಲಿ ಗುರ್ತಿಸುವ ದುರ್ವಿಧಿ ದಕ್ಷಿಣ ಭಾರತದ ಕಲಾವಿದರದ್ದು. ಮೊದ ಮೊದಲು ಆಂಧ್ರದ ಸರ್ಕಾರಿ ಸಂಗೀತ ಕಾಲೇಜಿನಲ್ಲಿ ಪ್ರಾಧ್ಯಾಪಕ ವೃತ್ತಿಯನ್ನು ಪ್ರಾರಂಭಿಸಿದ ಬಾಲಮುರಳಿಯವರಿಗೆ ಕಾರಣಾಂತರಗಳಿಂದ ತಮ್ಮ ರಾಜ್ಯವನ್ನು ಬಿಡಬೇಕಾಗಿ ಬಂದಾಗ ಅವರಿಗೆ ಅನ್ನಿಸಿದ್ದು ಮದರಾಸಿನ ನೆಲೆ. ಅಲ್ಲಿಗೆ ಹೋಗಿ ನೆಲೆಸಿ ಅಲ್ಲಿನ ಸ್ಥಳೀಕರೂ ಬೆರಗಾಗುವಂತೆ ತಮಿಳನ್ನು ಮಾತನಾಡುವುದೇನು, ಅದರಲ್ಲಿ ರಚನೆ ಮಾಡುವಷ್ಟು ಸಾಮರ್ಥ್ಯ ಪಡೆದು ಮದ್ರಾಸ್ ಮ್ಯೂಸಿಕ್ ಅಕಾಡೆಮಿಯ 'ಸಂಗೀತ ಕಲಾನಿಧಿ'ಯಾಗುವಷ್ಟು ಬೆಳೆದು ನಿಂತದ್ದು ಅವರ ಮಹತ್ತರ ಸಾಧನೆ. ಔಡುವ (೫ ಸ್ವರ), ಷಾಡವ (೬ ಸ್ವರ) ಮುಂತಾದ ರಾಗಗಳಿದ್ದಾಗ ಕೇವಲ ಸ್ವರಾಂತರ (೪ ಸ್ವರ) ರಾಗಗಳನ್ನು ಸೃಷ್ಟಿಮಾಡಿದ ಬಾಲಮುರಳಿಯವರ ಬಗ್ಗೆ ಆಗ್ಗೆ ಸ್ಥಳೀಯರಲ್ಲಿ ಹಿರಿಯರೆನಿಸಿಕೊಂಡಿದ್ದವರು ಕರುಬಿರಬೇಕು. ಇದೆಲ್ಲಾ ಬಾಲಮುರಳಿಯವರ ಸೃಷ್ಟಿಯಲ್ಲ; ಈಗಾಗಲೇ ಇವೆಲ್ಲವೂ ಇವೆ ಎಂಬ ಆರೋಪಕ್ಕೆ ಪ್ರತಿಯಾಗಿ ಅದನ್ನು ಕೋರ್ಟಿನ ಮೆಟ್ಟಿಲೇರಿಸಿದರು ಬಾಲಮುರಳಿಯವರು. ಅವರೇ ಸೃಷ್ಟಿಸಿದ ಮಹತಿ, ಪ್ರತಿಮಧ್ಯಮಾವತಿ, ಗಣಪತಿ, ಮೊದಲಾದ ರಾಗಗಳಿಗೆ ಎಲ್ಲೆಡೆ ಜನರಿಂದ ಅದ್ಭುತ ಸ್ವಾಗತ ಸಿಕ್ಕಿತು. ಕುಮಾರಿ ಜಯಲಲಿತಾರವರ ಮೇಲೂ ಒಂದು ರಾಗ ಸೃಷ್ಟಿಸಿದ್ದುಂಟು ! ಹೊಸ ಪ್ರಯೋಗಗಳಿಗೆ ಸದಾ ತೆರೆದುಕೊಂಡಿದ್ದ ಬಾಲಮುರಳಿಯವರು ತಾಳಗಳಲ್ಲೂ 'ಮುಖೀ' ತಾಳಗಳೆಂಬ ಕಲ್ಪನೆ ಮಾಡಿದ್ದುಂಟು. ಆಂಧ್ರದ ಆದಿಭಟ್ಲ ನಾರಾಯಣದಾಸು ಅವರು 'ಮುಖೀ' ತಾಳಗಳನ್ನು ಇವರಿಗಿಂತ ಮೊದಲೇ ಸೃಷ್ಟಿಸಿದ್ದರಿಂದ ಬಾಲಮುರಳಿಯವರು ತಮ್ಮ ಸೃಷ್ಟಿಯ 'ಮುಖೀ' ತಾಳಗಳಿಗೆ ಆಯಾ ತಾಳ ಜಾತಿಯ ಹೆಸರು ಕೊಟ್ಟು 'ಖಂಡ ಮುಖೀ', 'ತಿಶ್ರ ಮುಖೀ' ಎಂದೆಲ್ಲ ಕರೆದುಕೊಂಡರು. ಜಗತ್ತಿನ ಎಲ್ಲ ಸಂಗೀತ ಪದ್ಧತಿಗಳ ಕುರಿತು ಅವರು ಗೌರವ ಹೊಂದಿದ್ದು, ಜುಗಲ್‌ಬಂದಿ ಕಾರ್ಯಕ್ರಮಗಳಲ್ಲಿ ಕರ್ನಾಟಕ ಸಂಗೀತವನ್ನು ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರತಿನಿಧಿಸುವ ಏಕೈಕ ವ್ಯಕ್ತಿಯೆನಿಸುವ ಮಟ್ಟಕ್ಕೆ ಬೆಳೆದು ನಿಂತರು. ಯುವಜನತೆಯ ಜೊತೆ ಸರಾಗವಾಗಿ ಬೆರೆತರು.

**ನಟನೆ–ರಚನೆ**

ತೆಲುಗಿನ 'ಭಕ್ತ ಪ್ರಹ್ಲಾದ' ಚಿತ್ರದಲ್ಲಿ ನಾರದನ ಪಾತ್ರದಲ್ಲಿ ಕಾಣಿಸಿಕೊಂಡ ಅವರು ಅಂಥದೇ ಪಾತ್ರಗಳು ಬರತೊಡಗಿದಾಗ ಬೇಡವೆಂದರು. ಬಂಗಾಳಿ ಭಾಷೆಯೂ ಸೇರಿದಂತೆ ಅನೇಕ ಭಾಷೆಗಳಲ್ಲಿ, ಅನೇಕ ಭಾಷೆಯ ಚಲನಚಿತ್ರಗಳಲ್ಲಿ ಹಾಡಿ, ಸಂಗೀತ ಸಂಯೋಜಿಸಿ, ನಿರ್ದೇಶಿಸಿ, ರಾಷ್ಟ್ರೀಯ ಪುರಸ್ಕಾರಗಳನ್ನು ಪಡೆದರು. ಅವರು ಮಾಡಿದ ರಚನೆಗಳನ್ನು ಕಂಡ ಅವರ ಅಭಿಮಾನಿಗಳು 'ಅಭಿನವ ತ್ಯಾಗರಾಜ' ಎಂದೆಲ್ಲಾ ಕರೆಯುವ ಮಟ್ಟಕ್ಕೆ ಹೋಗಿದ್ದುಂಟು. ಆದರೆ ಅದಕ್ಕೆ ನಿರಾಕರಣೆಗಿಂತ ಒಂದು ನಗುವೇ ಅವರ ಪ್ರತ್ಯುತ್ತರವಾಗಿರುತ್ತಿತ್ತು!! ಅವರ ರಚನೆಗಳು ಕಳಪೆಯಾದವುಗಳಲ್ಲ. ಶ್ಲೇಷೆ, ಅಲಂಕಾರಯುಕ್ತ ಮಾತು, ಚಮತ್ಕೃತಿಯುಕ್ತವಾದ ಧಾತುಗಳು ಅವರ ರಚನೆಗಳಲ್ಲಿವೆ. ತಾವು ಉತ್ತುಂಗಕ್ಕೇರಿದ ನಂತರ ಕಚೇರಿಗಳಲ್ಲಿ ತಮ್ಮ ರಚನೆಗಳಿಗೇ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಾಗ ಬೇಸರ ವ್ಯಕ್ತಪಡಿಸಿದ ಪ್ರಸಂಗಗಳೂ ನಡೆದುಹೋದವು. ಸ್ವರ ಪ್ರಸ್ತಾರದಲ್ಲಿ ಲೀಲಾಜಾಲದ ಜೊತೆಗೆ ಇದ್ದಕ್ಕಿದ್ದಂತೆ ಮೇಲೊಂದು ಕೆಳಗೊಂದು ಸ್ವರ ಹಾಡಿದಾಗ ಜನರು ಆ ಸ್ವರೂಪವನ್ನು 'ಬಾಲಮುರಳೀ ಹಾಡಿದ ಹಾಗೆ' ಎಂದೇ ಆ ಚಮತ್ಕೃತಿಯನ್ನು ಕರೆದದ್ದಿದೆ.

**ಬಾರದ ಭಾರತರತ್ನ**

ಹುಟ್ಟಿದ ಪ್ರತಿಯೊಬ್ಬರಿಗೂ ಸಾವು ತಪ್ಪಿದ್ದಲ್ಲ, ಆದರೆ ಕಲಾವಿದ ಸತ್ತಾಗ ಕೆಲವೊಮ್ಮೆ ಸೃಷ್ಟಿಯಾಗುವ ಕಂದಕ ಎಷ್ಟೋ ಬಾರಿ ಶತಮಾನಗಳ ಕಾಲ ಭರ್ತಿಯಾಗುವುದಿಲ್ಲ. ಸಂಗೀತ ಕ್ಷೇತ್ರದಲ್ಲಿ ಭಾರತರತ್ನ ಪ್ರಶಸ್ತಿ ಪಡೆದವರಲ್ಲಿ ಎಲ್ಲರೂ ಕೇವಲ ತಮ್ಮ ತಮ್ಮ ಗಾಯನ–ವಾದನಗಳಿಗೆ ಮತ್ತು ತಕ್ಕಮಟ್ಟಿಗೆ ಸಂಗೀತ ಸಂಯೋಜನೆಗಳನ್ನು ಮಾಡಿರುವರು. ಆದರೆ ಬಾಲಮುರಳಿಯವರಂತೆ ಬಹುಶ್ರುತರಾಗಿ ಗಾಯನ, ವಯೋಲಾ, ಮೃದಂಗ, ಖಂಜರಿ ವಾದ್ಯಗಳಲ್ಲಿನ ಪ್ರಬಲವಾದ ಸಾಧನೆ, ಸಂಗೀತ ಸಂಯೋಜನೆ, ಸಂಗೀತ ನಿರ್ದೇಶನ, ರಾಗ–ತಾಳ ನಿರ್ಮಿತಿ, ವಾಗ್ಗೇಯ ಕರ್ತೃತ್ವ ಬೋಧನೆ, ನಟನೆ, ಹಿನ್ನೆಲೆ ಗಾಯನ ಮುಂತಾದ ಎಲ್ಲ ರಂಗಗಳಲ್ಲಿಯೂ ಅದ್ವಿತೀಯ ಸಾಧನೆ ಮಾಡಿದವರಿಲ್ಲ. ಪದ್ಮವಿಭೂಷಣರಾದರೂ ಇಂತಹ ಒಬ್ಬ ಮಹಾನ್ ಕಲಾವಿದನಿಗೆ ಭಾರತರತ್ನ ಪ್ರಶಸ್ತಿ ಅವರು ದೇಹಸ್ಥರಾಗಿದ್ದಾಗಲೇ ಬಂದಿದ್ದರೆ ಚೆನ್ನಾಗಿತ್ತು. ನಿಜವಾಗಿಯೂ ಕೇಂದ್ರ ಸರ್ಕಾರ ಹಾಗೂ ಭಾರತ ದೇಶವು ಸಂಗೀತ ಕಲೆಯ ಮೂರ್ತರೂಪಕ್ಕೆ ಸನ್ಮಾನಿಸುವ ಅವಕಾಶವನ್ನು ಕಳೆದುಕೊಂಡೇಬಿಟ್ಟಿತು ಎಂದರೆ ಅತಿಶಯೋಕ್ತಿಯಲ್ಲ.

ಡಾ॥ ಶ್ರೀಕಾಂತಂ ನಾಗೇಂದ್ರ ಶಾಸ್ತ್ರೀ
೬೩/೧, 'ಲಲಿತಾ ನಿವಾಸ', ೧ನೇ 'ಡಿ' ಅಡ್ಡರಸ್ತೆ, ೩ನೇ ಮುಖ್ಯರಸ್ತೆ, ಮತ್ತಿಕೆರೆ, ಬೆಂಗಳೂರು – ೫೪




ಪ್ರಸ್ತುತ ಸಂದರ್ಭದಲ್ಲಿ ತಾಂಡವವಾಡುತ್ತಿರುವ ಹಸಿವು, ಬಡತನ, ನಿರುದ್ಯೋಗ, ಭ್ರಷ್ಟಾಚಾರ, ಅತ್ಯಾಚಾರ, ಅರಾಜಕತನ, ಜಾತಿವಾದ, ಕೋಮುವಾದ ಮುಂತಾದ ಪಿಡುಗುಗಳನ್ನು ಕೇವಲ ವಿಶ್ಲೇಷಣೆ, ವಿಮರ್ಶೆ, ಟೀಕೆಗಳಿಂದ ನಿರ್ಮೂಲನೆ ಮಾಡಲಾಗುವುದಿಲ್ಲ. ಅವುಗಳ ನಿರ್ಮೂಲನೆಗಾಗಿ ನಿರ್ದಿಷ್ಟ ನಿಲುವು, ಜನಪರ ಕಾಳಜಿ, ತಾತ್ವಿಕ ಬದ್ಧತೆ ಹೊಂದಿದ ಪರ್ಯಾಯ ವ್ಯವಸ್ಥೆಯ ಕನಸು ಹೊಂದಿದ ಜನಪರ ಚಳುವಳಿಗಳ ಅವಶ್ಯಕತೆ ಇದೆ. ಸ್ವಾತಂತ್ರ್ಯ ಪೂರ್ವದಿಂದಲೂ ಇಂಥ ಜನಪರ, ಸಾಮೂಹಿಕ ಸಂಘಟನೆಗಳು ತಮ್ಮ ಹೋರಾಟದ ಮೂಲಕ ದೇಶದ ಸ್ವಾತಂತ್ರ್ಯಕ್ಕೂ, ಸ್ವಾತಂತ್ರ್ಯಾನಂತರ ಭಾರತದಲ್ಲಿ ಆರೋಗ್ಯಪೂರ್ಣ ಸಮಾಜ ನಿರ್ಮಾಣಕ್ಕೂ ಕಾರಣವಾಗಿವೆ. ಇಂದಿನ ಸಾಮಾಜಿಕ – ರಾಜಕೀಯ ಸಂದರ್ಭದಲ್ಲಿ ಜನಪರ ಚಳುವಳಿಗಳು ಕ್ರಿಯಾಶೀಲಗೊಂಡು, ಐಕ್ಯತೆಯಿಂದ ಹೋರಾಡಿ ಪರ್ಯಾಯ ರಾಜಕೀಯ – ಸಾಮಾಜಿಕ ವ್ಯವಸ್ಥೆಯ ನಿರ್ಮಾಣಕ್ಕೆ ಮುನ್ನಡೆಯಬೇಕಿದೆ. ಈ ಹಿನ್ನೆಲೆಯಲ್ಲಿ ಇಂದಿನ ಜನಪರ ಚಳುವಳಿಗಳ ಸ್ಥಿತಿಗತಿಗಳ ಕುರಿತು, ಅವುಗಳ ಐತಿಹಾಸಿಕ ಜವಾಬ್ದಾರಿಯ ಕುರಿತು, ಆಯಾ ಕ್ಷೇತ್ರಗಳ ಪರಿಣತರು ತಮ್ಮ ಅಭಿಪ್ರಾಯಗಳನ್ನು 'ಹೊಸತು' ಓದುಗರೊಡನೆ ಹಂಚಿಕೊಂಡಿದ್ದಾರೆ. ಓದುಗರ ಅಭಿಪ್ರಾಯ, ಪ್ರತಿಕ್ರಿಯೆ ಸೂಚನೆಗಳಿಗೆ ಸ್ವಾಗತವಿದೆ.

– ಸಂ






# ಜಾಗತೀಕರಣ ಮತ್ತು ಭಾಷೆಗಳು

**ಇಂದಿನ ಜಾಗತೀಕರಣ ಯುಗದಲ್ಲಿ ಮನುಷ್ಯರ ಮನಸ್ಸುಗಳು ವ್ಯಾಪಾರೀಕರಣ ಪ್ರಕ್ರಿಯೆಗೆ ಒಳಪಟ್ಟಿವೆ. ಈ ವ್ಯಾಪಾರೀಕರಣ ಪ್ರಕ್ರಿಯೆಯ ಭಾಷೆಯನ್ನು ಮತ್ತು ಅದರ ಜೊತೆಗಿನ ಇತಿಹಾಸ, ಜಾನಪದ, ಸಂಸ್ಕೃತಿ ಇತ್ಯಾದಿ ಮನುಷ್ಯ ಸಂಬಂಧದ ಎಲ್ಲವನ್ನೂ ಅವಸಾನದ ಅಂಚಿಗೆ ತಳ್ಳುತ್ತಿರುವುದು ವಿಷಾದದ ವಿಚಾರ.**

**ಡಾ॥ ಎಚ್. ಎಸ್. ಗೋಪಾಲ ರಾವ್**

'ಹೊಸತು' ಪತ್ರಿಕೆಯ ೨೦೧೬ರ ನವೆಂಬರ್ ಸಂಚಿಕೆಯಲ್ಲಿ ಪ್ರಕಟವಾದ ಎಂ. ಅಬ್ದುಲ್ ರೆಹಮಾನ್ ಪಾಷ ಅವರ 'ಮಾತೃಭಾಷೆಗಳ ಸಂರಕ್ಷಣೆ : ಸಾಧಕ, ಬಾಧಕಗಳು' ಎಂಬ ಲೇಖನ ನನ್ನನ್ನು ಬಹುವಾಗಿ ಕಾಡಿದೆ. ಒಬ್ಬ ವ್ಯಕ್ತಿಯ ಸಾವನ್ನೇ ನಾವು ದೊಡ್ಡ ನಷ್ಟ ಎಂದು ಪರಿಗಣಿಸುತ್ತೇವೆ. ಅಂತಹ ಸಂದರ್ಭದಲ್ಲಿ ಒಂದು ಭಾಷೆಯ ಸಾವು ಎನ್ನುವುದು ಯಾವುದೇ ಭಾಷೆಯ ಬಗ್ಗೆ ಗೌರವವಿರುವ ಯಾರನ್ನಾದರೂ ಕಾಡದೇ ಇರಲು ಸಾಧ್ಯವಿಲ್ಲ. ಯಾವುದೇ ಒಬ್ಬ ವ್ಯಕ್ತಿಯ ಸಾವು ನಿಶ್ಚಿತ ಮತ್ತು ಅನಿವಾರ್ಯ. ಇದು ಎಲ್ಲರಿಗೂ ತಿಳಿದ ಸಂಗತಿ. ಆದರೂ ಯಾವುದೇ ವ್ಯಕ್ತಿಯ ಸಾವಿನಿಂದ ಇಡೀ ಲೋಕಕ್ಕೇ ದೊಡ್ಡ ನಷ್ಟವಾಯಿತು ಎನ್ನುವ ಮಾತುಗಳನ್ನು ಆಡುತ್ತೇವೆ. ಇದು ಭಾವನಾತ್ಮಕವಾಗಿ ಸಹಜ. ಯಾವುದೇ ಸಾವಿನ ಬಗ್ಗೆ ಯಾರೂ ನಿರ್ಲಿಪ್ತರಾಗಿರಲು ಸಾಧ್ಯವಿಲ್ಲ. ಎಷ್ಟೇ ಕಡಿಮೆ ಅವಧಿಯದಾದರೂ, ನಡುವಿನ ಭಾವನಾತ್ಮಕ ಸಂಬಂಧಗಳು ದುಃಖಕ್ಕೆ ಕಾರಣವಾಗುತ್ತವೆ. ಇನ್ನು ಒಂದು ಭಾಷೆಯೇ ಅವಸಾನಗೊಂಡಿತು ಎಂದು ತಿಳಿದಾಗ ಭಾಷೆಯ ಬಗ್ಗೆ ಪ್ರೀತಿ ಇರುವ ಯಾರಿಗಾದರೂ ವಿಷಾದ ಕಾಡದೆ ಇರುವುದಿಲ್ಲ.

ಭಾಷೆಯ ಬಗೆಗಿನ ಅಧ್ಯಯನ ಮುಂದುವರಿದಂತೆ, ಭಾಷೆಯ ಅವಸಾನವೂ ಸಹಜ ಎಂದು ಸ್ಪಷ್ಟವಾಗುತ್ತದೆ. ಅದು ನನ್ನೊಬ್ಬನ ಭಾಷೆಯಾದರೆ, ಅದರ ಅವಸಾನದ ನಂತರ ಚಿಂತಿಸಲು ನಾನೇ

ಇರುವುದಿಲ್ಲ ಎಂಬ ಸಮಾಧಾನ ಇರಬಹುದು. ಆದರೆ ಭಾಷೆ ಒಂದು ಸಮುದಾಯಕ್ಕೆ ಸೇರಿದ್ದು. ಆದ್ದರಿಂದ ಒಂದು ಭಾಷೆಯ ಅವಸಾನ ಎಂದರೆ ಒಂದು ಸಮುದಾಯದ ಅವಸಾನ ಎಂಬುದು ಸ್ಪಷ್ಟ. ಸಮುದಾಯ ವೆಂದಾಗ, ಅದರ ಜೊತೆಗೆ ಅದರ ಸಂಸ್ಕೃತಿ, ಭಾಷೆ, ಸಾಹಿತ್ಯ ಇತ್ಯಾದಿ ಅನೇಕ ಮೂರ್ತ ಮತ್ತು ಅಮೂರ್ತ ವಿಚಾರಗಳೂ ಸೇರಿಕೊಳ್ಳುತ್ತವೆ. ಜಾನಪದ ಸಾಹಿತ್ಯ ಮತ್ತು ಮೌಖಿಕ ಸಾಹಿತ್ಯಗಳೂ ನೇರವಾಗಿ ಭಾಷೆಯನ್ನು ಅವಲಂಬಿಸಿರುತ್ತವೆ. ಅವುಗಳನ್ನು ಪ್ರಸ್ತಾಪಿಸದೆ ಜೀವನಗಾಥೆ ಅಪೂರ್ಣವಾಗುತ್ತದೆ. ಪ್ರಾಕೃತ ಭಾಷೆಯ ಸಾವು ಎಂದರೆ ಆ ಕಾಲದ ಒಟ್ಟಾರೆ ಸಂಸ್ಕೃತಿಯ ಅವಸಾನ; ಆಗ ಅಶೋಕನೂ ಅಪ್ರಮುಖನಾಗುತ್ತಾನೆ; ಅವನ ಶಾಸನಗಳ ಮೂಲಕ ತಿಳಿದ ಸಂಸ್ಕೃತಿಯೂ ಗೌಣವಾಗುತ್ತದೆ. ಇದರಲ್ಲಿ ಯಾವುದೇ ವಿಶೇಷವಿಲ್ಲ, ಇವೆಲ್ಲವೂ ಸಹಜ ಎಂದು ಮೌನವಹಿಸುವುದು, ಆಲೋಚಿಸಬಲ್ಲ ಶಕ್ತಿ ಇರುವ ಮನುಷ್ಯನಿಗೆ ಕಷ್ಟ. ಆ ಬಗ್ಗೆ ಚಿಂತಿಸಿ, ಸಾಧ್ಯವಾದರೆ ಆ ಭಾಷೆಯನ್ನು ಉಳಿಸಿಕೊಂಡು, ಅದರ ಮೂಲಕ ಸಾಹಿತ್ಯ ಕೃತಿಗಳಲ್ಲಿ ದಾಖಲಿತಗೊಂಡಿರುವ ಸಂಸ್ಕೃತಿ, ಆಚಾರ, ವಿಚಾರಗಳನ್ನು ಮುಂದಿನ ಜನಾಂಗಕ್ಕೆ ವರ್ಗಾಯಿಸುವುದು ವರ್ತಮಾನದ ಕರ್ತವ್ಯ. ಮನುಷ್ಯ ಹಾದುಬಂದ ಹಾದಿಯನ್ನು ನೆನಪು ಮಾಡಿಕೊಳ್ಳುತ್ತಲೇ, ಮುಂದಿನ ಹಾದಿಯನ್ನು ಗುರುತಿಸಿಕೊಳ್ಳಬೇಕು. ಮಾರ್ಗದರ್ಶನಕ್ಕೆ ಏನೂ ಇರದಿದ್ದರೆ, ಹಾದಿ ತಪ್ಪಿ, ವಿನಾಶ ಸಂಭವಿಸುವ ಸಾಧ್ಯತೆಗಳೇ ಹೆಚ್ಚಾಗಿರುತ್ತವೆ. ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಆಸಕ್ತಿ ಇರುವ ಯಾರಿಗೇ ಆದರೂ ಒಂದು ಭಾಷೆಯ ಸಾವು ಎಂದರೆ ಒಂದು ಜನಾಂಗದ ಸಾವು ಮತ್ತು ಅದನ್ನು ಇಳೆಗೆ ಬೆಸೆದಿರುವ ಕೊಂಡಿಯ ಸಾವು. ಇಂತಹ ಸಾವುಗಳು ಮನುಷ್ಯ ಬೆಳೆದು ಬಂದ ಬಗೆಯನ್ನು ಮರೆಯಲು ಕಾರಣಗಳಾಗುತ್ತವೆ. ವರ್ತಮಾನಕ್ಕಷ್ಟೇ ಜೋತುಬಿದ್ದ ಮತ್ತು ವ್ಯಾಪಾರೀಕರಣವನ್ನು ಮಾತ್ರ ಗೌರವಿಸುವ ಹಣವಂತರು ಇಂತಹ ಸಾವುಗಳ ಬಗ್ಗೆ ಚಿಂತಿಸಲೂ ಸಾಧ್ಯವಿಲ್ಲ. ಆಧುನೀಕರಣ ಎನ್ನುವುದು ಒಂದು ಅರ್ಥಪೂರ್ಣ ಬದಲಾವಣೆ. ಅದು ಕೇವಲ ಮಾರುಕಟ್ಟೆಯನ್ನು ಅವಲಂಬಿಸಿದರೆ ದುರಂತಕ್ಕೆ ಅವಕಾಶವಾಗುತ್ತದೆ. ಬದಲಿಗೆ ಮಾನವ ಕುಲದ ಒಳಿತಿಗೆ ಸಂಬಂಧಿಸಿದರೆ ಸುಖ ಮತ್ತು ನೆಮ್ಮದಿಗೆ ದಾರಿಯಾಗುತ್ತದೆ. ಬದಲಾವಣೆಗಳನ್ನು ಯಾರೂ ನಿರಾಕರಿಸಲಾಗುವುದಿಲ್ಲ. ಬದಲಾವಣೆಗಳನ್ನು ಒಪ್ಪಿಕೊಂಡೇ ಮುಂದಿನ ನಡೆಗೆ ಸಿದ್ಧವಾಗಬೇಕು.

ರೆಹಮಾನ್ ಪಾಷ ಅವರು ತಮ್ಮ ಲೇಖನದಲ್ಲಿ ಹೇಳುವಂತೆ, ಭಾಷೆಗಳು ಸಾಯುತ್ತವೆ. ಕ್ರಿ. ಪೂ. ೮೦೦೦ದ ವೇಳೆಗೆ ಜಗತ್ತಿನಲ್ಲಿ ೨೦,೦೦೦ ಭಾಷೆಗಳಿದ್ದವು. ಇಂದು ಆ ಸಂಖ್ಯೆ ೬೯೦೦ಕ್ಕೆ ಇಳಿದಿದೆ. ಅಂದರೆ ೧೩,೧೦೦ ಭಾಷೆಗಳು ಅವಸಾನಗೊಂಡಿವೆ. ಈಗಲೂ ಹಲವು ಮಾತೃಭಾಷೆಗಳು ಅವಸಾನದ ಹಾದಿಯಲ್ಲಿವೆ. ಭಾರತದಲ್ಲೇ ಸುಮಾರು ೧೬೫೦ ಮಾತೃಭಾಷೆ ಗಳಿವೆ. ಇವುಗಳ ಪೈಕಿ ೧೦ ಲಕ್ಷಕ್ಕಿಂತ ಹೆಚ್ಚು ಜನ ಮಾತನಾಡುವ ಭಾಷೆಗಳು ಕೇವಲ ೧೫೦. ಈಗಲೂ ಕೆಲವು ಭಾಷೆಗಳು ಅವಸಾನದ ಅಂಚಿನಲ್ಲಿವೆ.

ಭಾಷೆಯು ಅವಸಾನಗೊಳ್ಳಲು ಅದರ ಬಳಕೆ ಅಂತ್ಯಗೊಳ್ಳುವುದೇ ಆಗಿದೆ. ಯಾವುದೇ ಭಾಷೆ ಬಳಸಿದಂತೆ ಬೆಳೆಯುತ್ತದೆ. ಬಳಸುವ ಜನರೇ ಇಲ್ಲವಾದಾಗ ಭಾಷೆ ಅಳಿಯುತ್ತದೆ. ಭಾರತಕ್ಕೇ ಸೇರಿದ ಅಂಡಮಾನ್ ದ್ವೀಪದ ಬೋ ಭಾಷೆ ಅಳಿಯಲು ಅದೇ ಕಾರಣ. ಅದನ್ನು ಬಳಸುತ್ತಿದ್ದ ಒಬ್ಬಳೇ ಒಬ್ಬಳು ಮಹಿಳೆ ಬೋ ಸೀನಿಯರ್ ಸತ್ತಾಗ, ಬೋ ಭಾಷೆ ಅಳಿಯಿತು. ರೆಹಮಾನ್ ಪಾಷ ಅವರು ಗುರುತಿಸಿರುವ ಪ್ರಕಾರ ಕರ್ನಾಟಕದಲ್ಲಿ ಪ್ರಸ್ತುತ ಸುಮಾರು ೫೦ಕ್ಕೂ ಹೆಚ್ಚು ವಿಭಿನ್ನ ಮಾತೃಭಾಷೆಗಳಿವೆ. ಇವುಗಳ ಪೈಕಿ ಕೊರಗ, ಬಡಗ, ಯರವ, ಇರುಳ, ಸೋಲಿಗ, ಗೌಳಿ, ಸಿದ್ಧಿ, ಹಕ್ಕಿಪಿಕ್ಕಿ, ಜೇನುಕುರುಬ ಮತ್ತು ಬೆಟ್ಟಕುರುಬ ಇತ್ಯಾದಿ ಭಾಷೆಗಳು ಅವಸಾನದ ಅಂಚಿನಲ್ಲಿವೆ. ಈ ಅಳಿವಿಗೆ ಉದ್ಯೋಗವನ್ನು ಅರಸಿಕೊಂಡು ವಲಸೆಹೋಗುವುದೂ ಒಂದು ಕಾರಣ ಎಂದು ಹೇಳಲಾಗುತ್ತದೆ. ಇದರ ಜೊತೆಗೆ ಆಯಾ ಮಾತೃಭಾಷೆಗಳಲ್ಲಿನ ಸಂವಹನದ ಕೊರತೆಯೂ ಕಾರಣ. ಕನ್ನಡಕ್ಕೆ ಸಂಬಂಧಿಸಿದಂತೆ, ಕರ್ನಾಟಕಕ್ಕೆ ಉದ್ಯೋಗದ ಕಾರಣದಿಂದ ವಲಸೆ ಬಂದ ಬಹುತೇಕ ಜನ ಸ್ಥಳೀಯ, ಎಂದರೆ ಕನ್ನಡ ಭಾಷೆಯನ್ನು ಕಲಿಯುತ್ತಿಲ್ಲ. ಉದ್ಯೋಗಾವಕಾಶಗಳು ಯಾವುದೇ ಭಾಷೆಯನ್ನು ನಿಯಂತ್ರಿಸಬಹುದು.

ಡಾ॥ ರಹಮತ್ ತರೀಕೆರೆಯವರು ಅನುವಾದಿಸಿರುವ ಗೂಗಿ ವಾ ಥಿಯೊಂಗೊ ಅವರ ವಸಾಹತು ಪ್ರಜ್ಞೆ ಮತ್ತು ವಿಮೋಚನೆ ಕೃತಿಯು ಭಾಷೆಗಳ ಅವಸಾನದ ಬಗ್ಗೆ ಹಲವು ಒಳನೋಟಗಳಿಗೆ ದಾರಿ ಮಾಡಿದೆ. ಇದು ಜಾಗತೀಕರಣದ ಹಿನ್ನೆಲೆಯಲ್ಲಿ ಇಂಗ್ಲಿಶ್ ಭಾಷೆಯ ಪ್ರಭಾವವನ್ನು ಅರ್ಥ ಮಾಡಿಕೊಳ್ಳಲು ನೆರವಾಗುತ್ತದೆ. 'ಜಗತ್ತಿನ ಸಂಪರ್ಕಕ್ಕೆ ಇಂಗ್ಲಿಶ್ ಕೊರೆದ ಕಿಂಡಿ' ಎಂಬ ನಂಬಿಕೆ ಹೆಚ್ಚಾಗುತ್ತಿದೆ. ಜಾಗತೀಕರಣಕ್ಕೂ ಇಂಗ್ಲಿಶ್ ಭಾಷೆಗೂ, ಇತರ ಭಾಷೆಗಳ ಅಳಿವಿಗೂ ಸಂಬಂಧವಿದೆ ಎಂದು ಇದರಿಂದ ಸ್ಪಷ್ಟವಾಗುತ್ತದೆ.

ಜಾಗತೀಕರಣವು ಮಾರುಕಟ್ಟೆಯ ಕಾರಣದಿಂದ ಸೃಷ್ಟಿಯಾದ ವ್ಯವಸ್ಥೆ. ಇಲ್ಲಿ ಆರ್ಥಿಕ ಉದಾರೀಕರಣವೂ ಸೇರಿಕೊಂಡು, ಇಡೀ ವಿಶ್ವವೇ ಒಂದು ಹಳ್ಳಿ ಎಂಬ ಭಾವದೊಂದಿಗೆ ಮಾರುಕಟ್ಟೆಯನ್ನು ಉದ್ಧಾರ ಮಾಡುವ ಹುನ್ನಾರದಲ್ಲಿ ವಿಶ್ವದ ಸಂಸ್ಕೃತಿಯನ್ನೂ ಹರಾಜಿಗಿಟ್ಟಿದೆ. ಇಂಗ್ಲಿಶ್ ಬಾರದವನು ದಡ್ಡ, ಕೆಲಸಕ್ಕೆ ಬಾರದವನು, ಅಸಂಸ್ಕೃತ, ಅನಾಗರಿಕ, ಎಂಬಿತ್ಯಾದಿ ಭಾವನೆಗಳನ್ನು ಬಿತ್ತಿ, ಬೆಳೆಸುತ್ತಿದೆ.

ಬ್ರಿಟಿಶರ ವಸಾಹತುವಾಗಿದ್ದ ಕೀನ್ಯಾದ ಗೂಗಿ ವಾ ಥಿಯೊಂಗೊ, ಇಂಗ್ಲಿಶನ್ನು ಕಲಿತು, ಇಂಗ್ಲಿಶನ್ನೇ ಕಲಿಸಿ, ಮೊದಲಿಗೆ ಇಂಗ್ಲಿಶಿನಲ್ಲೇ ಸಾಹಿತ್ಯ ರಚನೆ ಮಾಡಿದವರು. ಕ್ರಮೇಣ ತಮ್ಮ ಸಾಹಿತ್ಯ ರಚನೆಗೆ ತಮ್ಮ ಮಾತೃಭಾಷೆಯಾದ ಗೀಕೂಯುವನ್ನೇ ಆಯ್ಕೆಮಾಡಿಕೊಂಡರು. ಈ ಸಂದರ್ಭದಲ್ಲಿ ಮೊದಲಿಗೆ ಇಂಗ್ಲಿಶನ್ನೇ ತಮ್ಮ ಕಾವ್ಯಸೃಷ್ಟಿಗೆ ಮಾಧ್ಯಮವಾಗಿ ಆಯ್ದುಕೊಂಡಿದ್ದ ಕನ್ನಡದ ಕುವೆಂಪು, ನಂತರ ಕನ್ನಡಕ್ಕೆ ಬದ್ಧರಾದದ್ದು ನೆನಪಾಗುತ್ತದೆ. ಜೊತೆಗೆ ಕನ್ನಡ, ತಮಿಳು ಮತ್ತು ಇಂಗ್ಲಿಶ್ ಭಾಷೆಗಳಲ್ಲಿ ಅಚ್ಚುಕಟ್ಟಾಗಿ ಬರೆದ ಎ. ಕೆ. ರಾಮಾನುಜನ್ ನೆನಪಾಗುತ್ತಾರೆ.

ಆಫ್ರಿಕದ ಮೂಲನಿವಾಸಿಗಳಲ್ಲಿ ಬುಡಕಟ್ಟು ಜನಾಂಗದವರೇ ಹೆಚ್ಚು. ಸಾಮ್ರಾಜ್ಯಶಾಹಿಗಳ ಆಕ್ರಮಣದಿಂದ ತಮ್ಮ ಸ್ವಾತಂತ್ರ್ಯದ ಜೊತೆಗೆ ತಮ್ಮದಾದ ಸಂಸ್ಕೃತಿ, ಭಾಷೆ, ಸಾಹಿತ್ಯ ಇತ್ಯಾದಿಗಳೆಲ್ಲವನ್ನೂ ಕಳೆದುಕೊಂಡು ಇಂಗ್ಲಿಶ್ ಭಾಷೆಗೆ ಬಲವಂತವಾಗಿ ಹೊಂದಿಕೊಂಡವರು ಅಲ್ಲಿಯ ಮೂಲನಿವಾಸಿಗಳು. ಅದನ್ನು ಅರಿತ ಗೂಗಿ, ವಿಚಾರಗಳ ಅಭಿವ್ಯಕ್ತಿಗಾಗಿ ತಮ್ಮ ಮಾತೃಭಾಷೆ ಗೀಕೂಯುವನ್ನು ಆಯ್ಕೆ ಮಾಡಿಕೊಂಡರು. ಅವರು ಇಂಗ್ಲಿಶನ್ನು ಚೆನ್ನಾಗಿ ತಿಳಿದಿದ್ದರು. ಆದರೂ ಅವರಿಗೆ ಪ್ರಿಯವಾದದ್ದು ಗೀಕೂಯು. ಜಾಗತೀಕರಣದಿಂದ ಭಾಷೆಗಳ ಮೇಲೆ ಆಗುತ್ತಿರುವ ದುಷ್ಪ್ರಭಾವಗಳ ಬಗ್ಗೆ ವಿಶ್ಲೇಷಿಸಿರುವ ಗೂಗಿ ಪ್ರಭುತ್ವವೇ ಸಾಕಿಕೊಂಡ ಬುದ್ಧಿಜೀವಿಗಳು ಮತ್ತು ಆಸ್ಥಾನ ಪಂಡಿತರು ಹಾಗೂ ಪತ್ರಕರ್ತರು ಸಾಮ್ರಾಜ್ಯಶಾಹಿಯ ಭಾಷೆಯನ್ನು ತಲೆಯ ಮೇಲೆ ಹೊತ್ತು ಮೆರೆಯುತ್ತಿದ್ದಾರೆ ಎಂದು ಗಮನಿಸಿದ್ದಾರೆ. ಪಶ್ಚಿಮದ ಆರ್ಥಿಕ ಬಂಡವಾಳ ಹೂಡಿಕೆಯನ್ನು ಮುಕ್ತವಾಗಿ ಸ್ವಾಗತಿಸುವ ಯಾವುದೇ ದೇಶ, ಅದಕ್ಕೆ ತನ್ನ ಅನೇಕ ಸ್ವಾತಂತ್ರ್ಯ ಮತ್ತು ವೈಶಿಷ್ಟ್ಯತೆಗಳ ಬಲಿ ಕೊಡುವುದು ಅನಿವಾರ್ಯ ಎಂಬುದು ಗೂಗಿ ಅವರ ಅಭಿಪ್ರಾಯ. ಜಗತ್ತನ್ನು ಬದಲಿಸುವ ಕನಸನ್ನು ಹೊತ್ತ ಜಾಗತೀಕರಣ ನನಸು ಮಾಡುವುದು ಆಯಾ ಪ್ರದೇಶಗಳ ವೈಶಿಷ್ಟ್ಯಗಳ ನಾಶವನ್ನು ಎಂಬ ವಾಸ್ತವವನ್ನು ಅರ್ಥಮಾಡಿಕೊಳ್ಳುವುದು ಅನಿವಾರ್ಯ. ಬದಲಾವಣೆ ಜೀವಂತಿಕೆಯ ಲಕ್ಷಣವೆನ್ನುವುದು ನಿಜವಾದರೂ, ಇಂತಹ ಬದಲಾವಣೆಗಳು ಸಂಹಾರಪ್ರೇರಿತವಾದವು. ಆಫ್ರಿಕದ ಜನತೆ ಯುರೋ ಅಮೆರಿಕನ್ ಬಾಹುಗಳ ಯಮಹಿಡಿತದಿಂದ ಹೊರಬರಲು ದಣಿವರಿಯದ ಹೋರಾಟ ಮಾಡುತ್ತಿದೆ ಎಂದು ತಿಳಿದಿರುವ ಗೂಗಿ, ಬಹಳ ಹಿಂದೆಯೇ ಯೂರೋಪಿನ ಬಂಡವಾಳಶಾಹಿ ಶಕ್ತಿಗಳು ತಾವು ಗೆದ್ದ ಪ್ರದೇಶಗಳನ್ನು ಹತ್ತಾರು ವಸಾಹತುಗಳನ್ನಾಗಿ ವಿಂಗಡಿಸಿಕೊಂಡು ಅದಕ್ಕೆ ತಮ್ಮದೇ ಹೆಸರುಗಳನ್ನು ಇಟ್ಟುಕೊಂಡ ವಿಧಾನದಲ್ಲೇ ಭಾಷೆಯ ಮೇಲುಗೈಯನ್ನು ಗುರುತಿಸಬಹುದು. ಇಂಗ್ಲಿಶ್ ಮಾತನಾಡುವ ಆಫ್ರಿಕನ್ ದೇಶಗಳು, ಫ್ರೆಂಚ್ ಮಾತನಾಡುವ ಆಫ್ರಿಕನ್ ದೇಶಗಳು, ಪೋರ್ಚುಗೀಸ್ ಮಾತನಾಡುವ ಆಫ್ರಿಕನ್ ದೇಶಗಳು ಇತ್ಯಾದಿ. ಆಫ್ರಿಕಾ ದೇಶವು ಯಾವ ಸಾಮ್ರಾಜ್ಯಶಾಹಿಗಳ ಪಾಲಿಗೆ ದಕ್ಕಿತೋ, ಆ ಸಾಮ್ರಾಜ್ಯಶಾಹಿಗಳ ಭಾಷೆ ಆಯಾ ಪ್ರದೇಶಗಳಲ್ಲಿ ಮೇಲುಗೈ ಸಾಧಿಸಿತು. ಅವರೆಗೆ ಅಲ್ಲಿ ಬೇರೂರಿದ್ದ ಭಾಷೆ ಕ್ರಮೇಣ ಬಳಸುವಿಕೆ ಕಡಿಮೆಯಾಗಿ ಅವಸಾನದ ಅಂಚು ತಲುಪಿತು. ಸದ್ಯದಲ್ಲೇ ಭಾರತ ಮಾತ್ರವಲ್ಲದೆ, ಅನೇಕ ಪ್ರದೇಶಗಳ ಪ್ರಾದೇಶಿಕ ಮತ್ತು ಮಾತೃಭಾಷೆಗಳು ಅವಸಾನದ ಅಂಚಿನಲ್ಲಿ ಬಂದು ನಿಲ್ಲುವ ಸಂದರ್ಭ ಎದುರಾಗುವುದು ದೂರದ ಮಾತಲ್ಲ.

೧೯೬೨ರಲ್ಲಿ ಉಗಾಂಡಾದಲ್ಲಿ ಇಂಗ್ಲಿಶ್‌ನಲ್ಲಿ ಬರೆಯುತ್ತಿದ್ದ ಆಫ್ರಿಕನ್ ಲೇಖಕರ ಸಮ್ಮೇಳನ ನಡೆಯಿತು. ಅದರಲ್ಲಿ ಭಾಗವಹಿಸಿದ್ದ ಬಹುತೇಕರು ಇಂಗ್ಲಿಶ್‌ನ ಜೊತೆಗೆ ಯೂರೋಪಿನ ಮತ್ತೊಂದು ಭಾಷೆಯಲ್ಲಿ ಬರೆಯುವ ಸಾಮರ್ಥ್ಯ ಪಡೆದಿದ್ದರು. ಇದರಿಂದ ಇಂಗ್ಲಿಶ್‌ನಲ್ಲಿ ಬರೆಯುತ್ತಿದ್ದ ಲೇಖಕರು ಮತ್ತು ಆಫ್ರಿಕನ್ ಭಾಷೆಗಳಲ್ಲಿ ಬರೆಯುತ್ತಿದ್ದ ಲೇಖಕರು ಎಂಬ ವಿಂಗಡಣೆ ಮಾಡಲಾಗಿತ್ತು. ಅಕಡೆಮಿಕ್ ಮತ್ತು ನಾನ್‌ಅಕಡೆಮಿಕ್ ಎಂಬ ಪ್ರತ್ಯೇಕ ಗುಂಪುಗಳನ್ನು ಗುರುತಿಸಲು ಸಾಧ್ಯವಾಗುವಂತಹ ಅಂತಹ ಪರಿಸ್ಥಿತಿಯು ಒಡೆದು ಆಳುವ ನೀತಿಗೆ ಇಂಬುಕೊಟ್ಟಿತ್ತು. ಗೂಗಿ ನೆನಪು ಮಾಡಿಕೊಂಡಿರುವಂತೆ, ಅವರು ಬಾಲ್ಯದಲ್ಲಿ ಹೊಲದಲ್ಲಿ ಕೆಲಸ ಮಾಡುವಾಗ ಕೇಳಿದ್ದು ಗೀಕೂಯಿ ಭಾಷೆಯನ್ನು ಮತ್ತು ಗೀಕೂಯಿ ಕಥೆಗಳನ್ನು. ನಾವೂ ಅಷ್ಟೆ ನಮ್ಮ ಬಾಲ್ಯದಲ್ಲಿ, ವಿಶೇಷವಾಗಿ ಗ್ರಾಮೀಣರು ಕೇಳಿದ್ದು ಕನ್ನಡ ಭಾಷೆಯನ್ನು ಮತ್ತು ನಮ್ಮ ಅಜ್ಜಿ ಕನ್ನಡದಲ್ಲಿ ಹೇಳುತ್ತಿದ್ದ ಕಥೆಗಳನ್ನು. ನಮ್ಮ ಜೊತೆಗಾರರ ಜಗಳ, ಪ್ರೀತಿ, ವಿಶ್ವಾಸಗಳೆಲ್ಲ



*ಗೂಗಿ ವಾ ಥಿಯೊಂಗೊ*

ಅಭಿವ್ಯಕ್ತಿಗೊಳ್ಳುತ್ತಿದ್ದುದು ಕನ್ನಡ ಭಾಷೆಯಲ್ಲಿ; ನಮ್ಮಂತೆಯೇ ತಮಿಳು, ತೆಲುಗು, ಮಲೆಯಾಳಂ, ಮರಾಠಿ ಮತ್ತಿತರ ಭಾಷಿಕರ ಬಾಲ್ಯವೂ ಆಯಾ ಮಾತೃಭಾಷೆಗಳನ್ನು ಕೇಳುವ ಮೂಲಕವೇ ಕಳೆದಿದೆ. ಆದ್ದರಿಂದ ನಮಗೆ ಇನ್ನೂ ಅವೆಲ್ಲವೂ ನೆನಪಿನಲ್ಲಿ ಉಳಿದಿವೆ. ನಗರವಾಸಿಗಳಿಗೆ ಮಾತೃಭಾಷೆ ಅಥವಾ ಪ್ರಾದೇಶಿಕ ಭಾಷೆಗಳಿಗಿಂತ ಇಂಗ್ಲಿಶ್ ಭಾಷೆ ಹೆಚ್ಚು ಸಮೀಪವಾಗಿರುತ್ತದೆ. ನನ್ನ ವೈಯಕ್ತಿಕ ಅಭಿಪ್ರಾಯದ ಪ್ರಕಾರ ಗ್ರಾಮೀಣರ ಬದುಕು ಸಹಜ ಮತ್ತು ನಗರವಾಸಿಗಳ ಬದುಕಿನಲ್ಲಿ ಸ್ವಲ್ಪ ಕೃತಕತೆಗೆ ಕಾರಣ ಅಲ್ಲಿ ಆಡಂಬರ ಅನಿವಾರ್ಯ. ನಾನು ಗ್ರಾಮೀಣ ಪ್ರದೇಶದಲ್ಲಿ ಸಂಚರಿಸುವಾಗ, ಗ್ರಾಮೀಣರ ಬಾಯಿಯಿಂದ ಕೇಳುವ ಕೆಲವು ಶಬ್ದಗಳು ಕಟು ಎನ್ನುವುದಕ್ಕಿಂತ ಹಿತವಲ್ಲ ಎನಿಸಿದರೂ, ಅದು ಅವರ ಸಹಜ ಅಭಿವ್ಯಕ್ತಿ. ಯಾರೂ ಯಾರನ್ನೂ ಬೇಕೆಂದೇ ಬೈಯುವುದಿಲ್ಲ; ಬೈಗುಳಗಳಲ್ಲಿ ಅಶ್ಲೀಲ ಶಬ್ದಗಳು ಬೆರೆತಿದ್ದರೂ, ಅವು ಉದ್ದೇಶಪೂರ್ವಕವಲ್ಲ.

ಗೂಗಿ ಕಲಿತ ಕಾಲಕ್ಕೇ ಇಂಗ್ಲಿಶ್ ಶಿಕ್ಷಣ ಮಾಧ್ಯಮದ ಶಾಲೆಗಳಲ್ಲಿ ಸ್ಥಳೀಯ ಗೀಕೂಯಿ ಭಾಷೆಯಲ್ಲಿ ಮಾತನಾಡಿದರೆ ದಂಡ ಮತ್ತು ಶಿಕ್ಷೆ ವಿಧಿಸಲಾಗುತ್ತಿತ್ತು. ಗೂಗಿ ಹೇಳುವುದು ಜಾಗತೀಕರಣ ಎಂದು ಈಗ ಹೆಸರಿಡಲಾಗಿರುವ ಕಾಲಕ್ಕೂ ಮೊದಲಿನ ವಸಾಹತುಶಾಹಿ ವ್ಯವಸ್ಥೆಯ ಕಾಲ. ಇದು ಇತ್ತೀಚಿನ ದಿನಗಳಲ್ಲೂ ಕರ್ನಾಟಕದ ಮಾತ್ರವೇ ಅಲ್ಲದೆ ಭಾರತದ ಯಾವುದೇ ಭಾಗದ ಇಂಗ್ಲಿಶ್ ಶಿಕ್ಷಣ ಮಾಧ್ಯಮದ ಶಾಲೆಗಳಲ್ಲಿ ಮುಂದುವರಿದಿರುವ ಪದ್ಧತಿ. ಅಂದರೆ ಇದು ಇಂಗ್ಲಿಶ್ ಭಾಷೆಯು ಸ್ಥಳೀಯ ಭಾಷೆಗಳ ಮೇಲೆ ಮಾಡುತ್ತಿರುವ ದಾಳಿ. ಇದು ಸ್ವಂತಿಕೆಯನ್ನು ಮಾರಿಕೊಂಡು ಗುಲಾಮೀತನಕ್ಕೆ ಒಳಗಾಗಿರುವ ಸನ್ನಿವೇಶ ಎಂದು ಎಲ್ಲ ಶಿಕ್ಷಣತಜ್ಞರಿಗೂ ತಿಳಿದಿದೆ. ಆಳುವವರು ಇದರ ಅರಿವಿದ್ದೂ ಇಂಗ್ಲಿಶನ್ನು ಎದುರುಹಾಕಿಕೊಳ್ಳುವ ಸಾಹಸಕ್ಕೆ ಕೈಹಾಕುವ ಪ್ರಯತ್ನ ಮಾಡುವುದಿಲ್ಲ. ಒಂದು ಭಾಷೆಯನ್ನು ಅಳಿವಿನ ಅಂಚಿಗೆ ನೂಕುವುದು ಸ್ವಯಂಪ್ರೇರಿತ ಆತ್ಮಹತ್ಯೆಗಿಂತ ಕಡಿಮೆಯಲ್ಲ. ಒಂದು ಅರ್ಥದಲ್ಲಿ ಬೇರೆ ಬೇರೆ ಕಾರಣಗಳಿಗೋಸ್ಕರ ಪ್ರಪಂಚದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ವಲಸೆ ಹೋಗಲು ಆರಂಭಿಸಿದ ಕಾಲದಿಂದಲೂ ಭಾಷೆಗೆ ಸಂಬಂಧಿಸಿದ ಈ ಜಿಜ್ಞಾಸೆ ಇದ್ದೇ ಇದೆ. ಭಾರತ, ಈಜಿಪ್ಟ್, ಮೆಸಪೊಟೇಮಿಯಾ, ಗ್ರೀಸ್, ಚೈನಾ ಇತ್ಯಾದಿ ದೇಶಗಳಲ್ಲಿ ನಾಗರಿಕತೆ ಬೆಳೆಯುತ್ತಿದ್ದಂತೆ ವ್ಯಾಪಾರ ಮಾತ್ರವಲ್ಲದೆ, ಇತರ ದೇಶಗಳ ಧರ್ಮ, ಆಚಾರ–ವಿಚಾರಗಳ ಬಗ್ಗೆ ತಿಳಿಯಲು ಜನರು ಒಂದೆಡೆಯಿಂದ ಮತ್ತೊಂದೆಡೆಗೆ ಪ್ರಯಾಣ ಮಾಡತೊಡಗಿದಾಗಲೇ ಭಾಷೆಗಳ ನಡುವಿನ ಕೊಡು–ಕೊಳೆ ಆರಂಭವಾಯಿತು. ಇದು ಪರಸ್ಪರ ಸ್ನೇಹ ಮತ್ತು ವಿಶ್ವಾಸಗಳ ವರ್ಧನೆಗೆ ಸಹಕಾರಿಯಾಯಿತು. ಇದರಿಂದ ದ್ವೇಷ ಬೆಳೆಯಲಿಲ್ಲ. ಬದಲಿಗೆ ಮಿತ್ರತ್ವ ಹೆಚ್ಚಿತು; ಪರಸ್ಪರ ತಿಳಿವಳಿಕೆ ಹೆಚ್ಚಿತು. ಎಲ್ಲಿಯವರೆಗೆ ಯಾವುದೇ ದೇಶದ ಜನ ಪರಸ್ಪರ ಸಂವಹನಕ್ಕಾಗಿ ಭಾಷೆಯನ್ನು ಆಶ್ರಯಿಸಿದರೋ, ಅಲ್ಲಿಯವರೆಗೆ ಯಾವುದೇ ಸಮಸ್ಯೆ ಕಾಣಿಸಿಕೊಂಡಂತಿಲ್ಲ. ನೋಡಿದ ಪ್ರದೇಶಗಳನ್ನು ತಮ್ಮ ವ್ಯಾಪಾರ ವಹಿವಾಟಿಗೆ ಬಳಸಿಕೊಂಡು, ಅವುಗಳ ಮೇಲೆ ಯಜಮಾನಿಕೆ ಸ್ಥಾಪಿಸಿದ ನಂತರ, ಆಕ್ರಮಿಸಿದ ಪ್ರದೇಶದ ಜನರನ್ನು ತಮ್ಮ ಅಧೀನರಾಗಿ ಮತ್ತು ಗುಲಾಮರಂತೆ ಕಂಡಾಗ ಯಜಮಾನರ ಭಾಷೆಯನ್ನು ಅನಿವಾರ್ಯವಾಗಿ ಆಕ್ರಮಿತ ಪ್ರದೇಶದ ಜನ ಕಲಿಯಲೇಬೇಕಾಯಿತು. ಆಕ್ರಮಿಸಿದವರು ಸ್ಥಳೀಯ ಇತಿಹಾಸ ಮತ್ತು ಸಂಸ್ಕೃತಿಯನ್ನು ತಮಗೆ ಬೇಕಾದಷ್ಟು ಮಟ್ಟಿಗೆ ತಿಳಿಯಲು ಸಂಶೋಧನೆ ಮಾಡಿದರು, ತಿಳಿದುಕೊಂಡರು. ಇದರಿಂದ ಭಾರತೀಯರಿಗೆ ಉಪಯೋಗವಾಗಿದೆ. ತಮಗೇ ತಿಳಿದಿರದ ಅನೇಕ ಸತ್ಯಸಂಗತಿಗಳನ್ನು ಪಾಶ್ಚಾತ್ಯ ಸಂಶೋಧಕರಿಂದ ತಿಳಿಯಲು

ಸಾಧ್ಯವಾಯಿತು. ಆಳುವ ಅಧಿಕಾರಿಗಳು ತಮ್ಮ ವಸಾಹತು ಇಲ್ಲಿ ನಿರಂತರವಾಗಿ ಮುಂದುವರಿಯುತ್ತದೆ ಎಂದು ತಿಳಿದಿದ್ದ ಕಾರಣವೂ ಭಾರತದ ಇತಿಹಾಸ ಮತ್ತು ಸಂಸ್ಕೃತಿ ಕುರಿತು ಹೆಚ್ಚಿನ ಶೋಧ ಮತ್ತು ಪರಿಶೋಧಗಳಿಗೆ ಕಾರಣವಾಗಿದೆ ಎಂಬುದೂ ಅಲ್ಲಗಳೆಯುವ ವಿಚಾರವೇನಲ್ಲ.

೧೯೮೦ರ ನಂತರ ಜಾಗತೀಕರಣದ ಪರಿಕಲ್ಪನೆಯು ಇಡೀ ಜಗತ್ತನ್ನು ಆವರಿಸಿ, ಆ ಆವರಣದೊಳಗೆ ಇರಬೇಕಾದ್ದು ಏನು ಎನ್ನುವುದನ್ನು ಜಾಗತೀಕರಣದ ಪ್ರತಿಪಾದಕರೇ ನಿರ್ಧರಿಸಿದಂತೆ ಕಾಣುತ್ತದೆ. ಇಡೀ ವಿಶ್ವವೇ ಒಂದು ಗ್ರಾಮ ಎಂಬ ಪರಿಕಲ್ಪನೆಯೊಂದಿಗೆ ವಿಶ್ವವನ್ನು ಒಂದು ಮಾಡುವ, ಎಂದರೆ ಒಂದಾಗಿ ಕಾಣುವ ಪ್ರಯತ್ನ ಎಂದು ಭಾವಿಸಿದರೆ ಸರಿ ಎಂಬುದು ಆರಂಭದಲ್ಲಿ ಜಾಗತೀಕರಣದ ಬಗ್ಗೆ ಇದ್ದ ಪರಿಕಲ್ಪನೆ. ಆಗ ಕುವೆಂಪು ಅವರ ವಿಶ್ವಮಾನವ ತತ್ತ್ವ ನೆನಪಾಗುತ್ತಿತ್ತು. ಕಾಲಕ್ರಮೇಣ ಅರಿವಾದದ್ದು ಅದು ಕುವೆಂಪು ಅವರ ಪರಿಕಲ್ಪನೆಯಲ್ಲ; ಬದಲಿಗೆ, ಇಡೀ ವಿಶ್ವವನ್ನು ಆರ್ಥಿಕ ಉದಾರೀಕರಣದ ನೆಪದಲ್ಲಿ ಒಂದು ಮಾರುಕಟ್ಟೆಯನ್ನಾಗಿ ಬದಲಾಯಿಸುವುದು ಎಂದು. ಕೆಲವು ಸಾಮ್ರಾಜ್ಯಶಾಹಿಗಳು ತಮ್ಮ ಆರ್ಥಿಕ ಬಲವನ್ನು ಪ್ರದರ್ಶಿಸುವ ಮತ್ತು ಹಂಚುವ ನೆಪದಲ್ಲಿ ಆರ್ಥಿಕವಾಗಿ ದುರ್ಬಲವಾಗಿರುವ ದೇಶಗಳ ಭಾಷೆಯೂ ಸೇರಿದಂತೆ ಇಡೀ ಸಂಸ್ಕೃತಿಯನ್ನು ಒತ್ತೆಯಿಟ್ಟು ಕೊಳ್ಳುವುದು ಜಾಗತೀಕರಣದ ಗುರಿ ಇರುವಂತೆ ತೋರುತ್ತದೆ. ಮಾರುಕಟ್ಟೆಯ ನೆಪದಲ್ಲಿ ಬೇರೆಬೇರೆ ದೇಶಗಳ ಎಷ್ಟೋ ಪ್ರಾಕೃತಿಕ ಸಂಪತ್ತು ಬಲಿಷ್ಠ ರಾಷ್ಟ್ರಗಳ ಸ್ವಾಮ್ಯಕ್ಕೆ ಸೇರಿವೆ. ಯಾವ ಸದ್ದುಗದ್ದಲವೂ ಇಲ್ಲದಂತೆ ಹಲವು ದೇಶಗಳ ಮಾರುಕಟ್ಟೆ ಮಾತ್ರವಲ್ಲದೆ ಸಂಸ್ಕೃತಿಯನ್ನೂ ವಶಪಡಿಸಿಕೊಂಡಿರುವವರು ಹೇಳಿದಂತೆ ಕೇಳಿಕೊಂಡು ಬದುಕಬೇಕಾದ ಅನಿವಾರ್ಯ ಪರಿಸ್ಥಿತಿ ಈಗ ಎದುರಾಗಿದೆ.

ಈ ನಿಟ್ಟಿನಲ್ಲಿ ಗೂಗಿ ವಾ ಥಿಯೊಂಗೊ ಅವರ 'ವಸಾಹತು ಪ್ರಜ್ಞೆ ಮತ್ತು ವಿಮೋಚನೆ' ಕೃತಿಯ ಮೂಲಕ ಆಫ್ರಿಕಾದಲ್ಲಿ ಭಾಷೆಗೆ ಸಂಬಂಧಿಸಿದಂತಿರುವ ಅನೇಕ ಸಮಸ್ಯೆಗಳ ಬಗ್ಗೆ ತಿಳಿಯುತ್ತದೆ. ಭಾರತದಲ್ಲೂ ಆಫ್ರಿಕಾದಂತಹ ಪರಿಸ್ಥಿತಿಯು ಇರುವುದಾದರೂ, ಇಲ್ಲಿನ ಭಾಷೆಗಳು ಆಗಲೇ ಚೆನ್ನಾಗಿ ಬೆಳೆದಿದ್ದುವಾದ್ದರಿಂದ ವಸಾಹತುಶಾಹಿ ಆಡಳಿತದ ಕಾಲದಲ್ಲಿ ಇಂಗ್ಲಿಶ್ ಮೇಲುಗೈ ಸಾಧಿಸಲು ಹೆಣಗಾಡಬೇಕಾಯಿತು. ಆದರೆ ಜಾಗತೀಕರಣದ ನೆಪದಲ್ಲಿ ಇಂಗ್ಲಿಶ್ ಮೇಲುಗೈ ಸಾಧಿಸುತ್ತಿರುವುದು ಸ್ಪಷ್ಟ; ಆದರೆ ಸಂಘರ್ಷಗಳು ನಡೆಯುತ್ತಿರುವುದು ಭಾರತೀಯ ಭಾಷೆಗಳ ನಡುವೆ. ಉತ್ತರ ಭಾರತದವರು ಮೇಲುಗೈ ಸಾಧಿಸುತ್ತಾರೆ ಎಂಬ ಕಾರಣದಿಂದ ಹಿಂದಿಯ ವಿರುದ್ಧ, ಸಂಸ್ಕೃತ ಮೇಲುಗೈ ಸಾಧಿಸುತ್ತದೆ ಎಂದು ಗೋಕಾಕ್ ವರದಿಯ ವಿಚಾರದಲ್ಲಿ ಪ್ರತಿಭಟನೆಗಳು ನಡೆದರೂ ಇಂಗ್ಲಿಶ್ ಭಾಷೆಯು ಎಲ್ಲ ರಂಗಗಳಲ್ಲೂ ಮೇಲುಗೈ ಸಾಧಿಸುತ್ತಿರುವುದನ್ನು ಯಾರೂ ಪ್ರತಿಭಟಿಸುತ್ತಿಲ್ಲ.

ವಿಶ್ವಸಂಸ್ಥೆಯು ಅವಸಾನಗೊಳ್ಳುತ್ತಿರುವ ಭಾಷೆಗಳಿಗೆ ಸಂಬಂಧಿಸಿದಂತೆ ಒಂದು ಕಾರ್ಯಯೋಜನೆಯನ್ನೇ ಹಮ್ಮಿಕೊಂಡು, ಈಗಾಗಲೇ ಅವಸಾನಗೊಂಡಿರುವ ಮತ್ತು ಅವಸಾನದ ಅಂಚಿನಲ್ಲಿರುವ ಭಾಷೆಗಳಿಗೆ ಸಂಬಂಧಿಸಿದಂತೆ, ಅಂತಹ ಭಾಷೆಗಳ ಉಳಿವಿಗೆ ಪ್ರಯತ್ನಗಳನ್ನು ನಡೆಸಿದೆ. ಕೆನಡಾದ ವಿದ್ವಾಂಸ ಜೋರ್ಡಾನ್ ಪಿಯರ್‌ಸನ್‌ನ ಪ್ರಕಾರ ಆರ್ಥಿಕವಾಗಿ ಪ್ರಬಲವಾದ ರಾಷ್ಟ್ರಗಳಲ್ಲಿ ಆರ್ಥಿಕತೆಯ ಋಣಾತ್ಮಕ ಪ್ರಭಾವ ಮತ್ತು ರಾಜಕೀಯ ಮತ್ತು ಶೈಕ್ಷಣಿಕ ಕಾರಣಗಳಿಂದಾಗಿ ಭಾಷೆಗಳು ಆತಂಕವನ್ನು ಅನುಭವಿಸುತ್ತಿವೆ. ಅಲ್ಲಿ ಭಾಷೆ, ಸಂಸ್ಕೃತಿಗಳು ಅಮುಖ್ಯವಾಗಿ ಆರ್ಥಿಕ ಪ್ರಾಬಲ್ಯವಷ್ಟೇ ಮುಖ್ಯವಾಗುತ್ತದೆ. ವ್ಯಾಪಾರಕ್ಕೆ ಎಂದೂ ಭಾಷೆ ಮುಖ್ಯವಲ್ಲ. ಒಂದು ಜನಾಂಗದ ಅಸ್ಮಿತೆಯನ್ನು ಉಳಿಸುವ ಭಾಷೆಯು ನಶಿಸಿದರೆ, ಆ ಜನಾಂಗವೇ ಇಲ್ಲವಾದಂತೆ ಎಂಬುದು ಕಠೋರ ಸತ್ಯ. ಅದರೊಡನೆ ಅದರ ಜಾನಪದ, ಇತಿಹಾಸ, ಸಂಸ್ಕೃತಿ, ಆಚಾರ–ವಿಚಾರಗಳೆಲ್ಲವೂ ಮರೆಯಾಗುತ್ತವೆ.

ಒಂದು ಅಂದಾಜಿನ ಪ್ರಕಾರ ಪ್ರಪಂಚದಲ್ಲಿ ಕ್ರಿಯಾಶೀಲವಾಗಿದ್ದ ಸುಮಾರು ೬೦೦೦ಕ್ಕೂ ಹೆಚ್ಚು ಭಾಷೆಗಳ ಪೈಕಿ ಈಗಾಗಲೇ ಶೇಕಡ ೨೫ರಷ್ಟು ಮರೆಯಾಗಿವೆ. ೧೫ನೆಯ ಶತಮಾನದಿಂದೀಚೆಗೆ ಸುಮಾರು ೪೦೦೦ದಿಂದ ೯೦೦೦ ಭಾಷೆಗಳು ಅವಸಾನಗೊಂಡಿವೆ. ಇದಕ್ಕೆ ಕಾರಣ ಆ ಭಾಷೆಯನ್ನು ಬಳಸುವ ಜನರೇ ಇಲ್ಲವಾಗುವುದು. ಲೇಖನದ ಮೊದಲೇ ತಿಳಿಸಿರುವಂತೆ ಅಂಡಮಾನ್ ದ್ವೀಪದ ಬೋ ಭಾಷೆಯನ್ನು ಆಡಬಲ್ಲ ಒಬ್ಬಳೇ ಒಬ್ಬಳು ಮಹಿಳೆ ೨೦೧೬ರಲ್ಲಿ ಮರಣಹೊಂದಿದಾಗ, ಅವಳ ಜೊತೆಗೇ ಆ ಭಾಷೆಯೂ ಇಲ್ಲವಾಯಿತು.

ಯಾವುದೇ ಭಾಷೆಯನ್ನು ಮಾತೃಭಾಷೆಯಾಗಿ ಉಳ್ಳವರು ಆ ಭಾಷೆಯನ್ನೇ ತಮ್ಮ ಆಪ್ತ ವಲಯದಲ್ಲಿ ಬಳಸುವುದರಿಂದಾದರೂ ಆ ಭಾಷೆ ಉಳಿಯುತ್ತದೆ. ಬಳಸದ ಭಾಷೆ ಎಂದಿಗೂ ಬೆಳೆಯಲು ಸಾಧ್ಯವಿಲ್ಲ. ಇತ್ತೀಚಿನ ದಿನಗಳಲ್ಲಿ ಭಾರತದ ಗ್ರಾಮೀಣ ಪ್ರದೇಶಗಳಲ್ಲೂ ಇಂಗ್ಲಿಶ್ ಭಾಷೆಯ ಯಜಮಾನಿಕೆ ಅಧಿಕಗೊಳ್ಳುತ್ತಿದೆ. ಶಿಕ್ಷಣ ಕ್ಷೇತ್ರದಲ್ಲಂತೂ ಇಂಗ್ಲಿಶ್ ಎಷ್ಟರಮಟ್ಟಿನ ಮೇಲುಗೈ ಸಾಧಿಸಿದೆ ಎಂದರೆ ಇಂಗ್ಲಿಶ್ ಮಾತನಾಡಲು ಬರದವನು ನಾಗರಿಕನೇ ಅಲ್ಲ ಎಂಬ ಭಾವ ದಟ್ಟವಾಗುತ್ತಿದೆ. ಕನ್ನಡವನ್ನಷ್ಟೇ ಮಾತನಾಡುವವನು ಸ್ಥಳೀಯನಾಗಿ ಉಳಿಯುತ್ತಾನೆ. ಇಂಗ್ಲಿಶ್‌ನಲ್ಲಿ ವ್ಯವಹರಿಸುವುದು ಶಿಷ್ಟಾಚಾರವಾಗುತ್ತಿದೆ. ಇದು ಕೇವಲ ಕನ್ನಡದ ಮತ್ತು ಕರ್ನಾಟಕದ ಪರಿಸ್ಥಿತಿ ಎಂದು ತಿಳಿಯಬೇಕಾಗಿಲ್ಲ. ಭಾರತದ ಬೇರಾವುದೇ ಪ್ರದೇಶದ ಪ್ರಾದೇಶಿಕ ಭಾಷೆಯ ಪರಿಸ್ಥಿತಿಯೂ ಇದೇ ಆಗಿದೆ. ತಮ್ಮ ಅಸ್ತಿತ್ವಕ್ಕಾಗಿ ಸ್ಪರ್ಧೆ ನಡೆಯಬೇಕಾದ್ದು ಭಾರತದ ಪ್ರಾದೇಶಿಕ ಭಾಷೆಗಳು ಮತ್ತು ಇಂಗ್ಲಿಶ್‌ನ ನಡುವೆ; ವಿಪರ್ಯಾಸ ಎಂದರೆ ಸ್ಪರ್ಧೆ ಆಗುತ್ತಿರುವುದು ಪ್ರಾದೇಶಿಕ ಭಾಷೆಗಳ ನಡುವೆ. ಒಡೆದು ಆಳುವ ನೀತಿಯನ್ನು ಬ್ರಿಟಿಷರ ಭಾಷೆಯಾದ ಇಂಗ್ಲಿಶೂ ಕಾಪಾಡಿಕೊಂಡು ಬಂದಿದೆ. ಇಂದು ಬಹುತೇಕ ಭಾಷೆಗಳ ವಿನಾಶಕ್ಕೆ ಕಾರಣವಾಗಿರುವುದು ಇಂಗ್ಲಿಶ್ ಎಂಬುದರಲ್ಲಿ ಅನುಮಾನವಿಲ್ಲ. ಜಾಗತೀಕರಣ ಎಂದಾಗ ತಕ್ಷಣ ನೆನಪಾಗುವುದು ಇಂಗ್ಲಿಶ್ ಭಾಷೆ. ಅದು ಇಲ್ಲದೆ ಜೀವಜಗತ್ತಿನ ಒಂದು ಹುಲ್ಲುಕಡ್ಡಿಯೂ ಅಲುಗಾಡುವುದಿಲ್ಲ. ಅಧಿಕಾರಕ್ಕಷ್ಟೇ ಅಂಟಿಕೊಂಡ ಅಧಿಕಾರಿಗಳಿಗಂತೂ ಇಂಗ್ಲಿಶ್ ಪರಮ ಪೂಜನೀಯ. ಆಳಿಸಿಕೊಳ್ಳುವ ಜನರಿಗೆ ಇಂಗ್ಲಿಶ್ ಜ್ಞಾನ ಇರಲೇಬೇಕಾಗಿಲ್ಲ ಎಂಬ ಸಾಮಾನ್ಯ ತಿಳಿವಳಿಕೆಯೂ ಆಳುವವರಿಗೆ ಇದ್ದಂತಿಲ್ಲ. ಅಧಿಕಾರಿಗಳ ಯಾವುದೇ ಆದೇಶ ಅವರಿಗೆ, ಅಂದರೆ ಅಧಿಕಾರಿಗಳಿಗೆ ಅರ್ಥವಾಗುವಂತಿದ್ದರೆ ಸಾಕು. ಭಾರತದಂತಹ ಬಹುಭಾಷಿಕ ರಾಷ್ಟ್ರದಲ್ಲಿ ಕೇಂದ್ರ ಸರ್ಕಾರದ ಸಂವಿಧಾನಾತ್ಮಕ ನಡವಳಿಕೆಗಳು ಯಾವ ಭಾಷೆಯಲ್ಲಿರಬೇಕು ಎಂಬುದೇ ಅಸ್ಪಷ್ಟವಾಗಿರುವಂತಿದೆ. ಹಿಂದಿಯಲ್ಲಿ ವ್ಯವಹರಿಸಿದರೆ ದಕ್ಷಿಣದವರಿಗೆ ತಿಳಿಯುವುದಿಲ್ಲ. ಪ್ರಾದೇಶಿಕ ಭಾಷೆಗಳಿಗೆ ಪ್ರದೇಶಗಳ ಮಿತಿ ಇರುವುದರಿಂದ ಇಡೀ ರಾಷ್ಟ್ರಕ್ಕೆ ಅನ್ವಯಿಸುವಂತೆ ಬಳಸಬೇಕಾದ ಭಾಷೆ ಯಾವುದು ಎಂಬ ಬಗ್ಗೆ ಸ್ಪಷ್ಟತೆ ಇಲ್ಲ. ತ್ರಿಭಾಷಾ ಸೂತ್ರವನ್ನು ಒಪ್ಪಿಕೊಳ್ಳಲಾಗಿದ್ದರೂ, ಪ್ರಾಧಾನ್ಯತೆ ಇರುವುದು ಇಂಗ್ಲಿಶಿಗೆ ಮಾತ್ರ. ಜಗತ್ತಿನ ಅರ್ಧ ಭಾಗದ ಜನ ಹೆಚ್ಚಾಗಿ ಬಳಸುವುದು ಏಳು ಭಾಷೆಗಳನ್ನು ಮಾತ್ರ. ಅವುಗಳಲ್ಲಿ ಮೊದಲ ಸ್ಥಾನ ಚೈನೀ, ನಂತರದ ಸ್ಥಾನ ಸ್ಪ್ಯಾನಿಷ್. ಜನ ಹೆಚ್ಚಾಗಿ ಮಾತನಾಡುವ ಇತರ ಭಾಷೆಗಳೆಂದರೆ ಹಿಂದಿ, ಫ್ರೆಂಚ್, ಬಂಗಾಳಿ, ಪೋರ್ಚುಗೀಸ್ ಇತ್ಯಾದಿ. ಈಗಿರುವ ಭಾಷೆಗಳ ಪೈಕಿ ೨೨ನೆಯ ಶತಮಾನಕ್ಕೆ ಈಗಿರುವ ಭಾಷೆಗಳಲ್ಲಿ ಶೇಕಡ ೧೦ರಷ್ಟು ಭಾಷೆಗಳು ಮಾತ್ರ ಉಳಿದಿರುತ್ತವೆ ಎಂಬ ಅಂದಾಜಿದೆ.

ನಮ್ಮ ಆಸಕ್ತಿ ಕನ್ನಡ ಭಾಷೆಗೆ ಸಂಬಂಧಿಸಿದಂತಿರುವುದು ಸಹಜ. ಏಕೆಂದರೆ ಅದು ನಮ್ಮ ತಾಯ್ನುಡಿ. ನಮ್ಮ ತಾಯಿ ನಮ್ಮೊಡನೆ ಆಡಿದ ಮಾತು ಮತ್ತು ನಮಗೆ ಕಲಿಸಿದ ಮಾತು. ಮನೆಯಲ್ಲಿ ನಮ್ಮ ತಾತ, ಅಜ್ಜಿಯ ಜೊತೆ ಆಡಿದ ಮಾತು. ಗೆಳೆಯರೊಡನೆ ಆಡಿದ ಮಾತು. ನಮ್ಮ ಎಲ್ಲ ಭಾವನೆಗಳನ್ನು ನಿಸ್ಸಂಕೋಚವಾಗಿ ಹಂಚಿಕೊಂಡ ಮಾತು. ಕರ್ನಾಟಕ ರಾಜ್ಯದ ಅಧಿಕೃತ ಭಾಷೆಯೆಂದೂ ಸಾಂವಿಧಾನಿಕವಾಗಿ ಒಪ್ಪಿತವಾಗಿರುವ ಕನ್ನಡ ಭಾಷಾ ಮಾಧ್ಯಮದಲ್ಲಿ ಶಿಕ್ಷಣ ಪಡೆಯಲೂ ನ್ಯಾಯಾಲಯದ ಮೆಟ್ಟಲು ಏರಬೇಕಾಗಿದೆ. ಗಣರಾಜ್ಯವಾದ ಭಾರತವನ್ನು ರಾಜ್ಯಗಳಾಗಿ ವಿಭಾಗ ಮಾಡುವಾಗ ನಮ್ಮ ಸಂವಿಧಾನ ಅನುಸರಿಸಿದ್ದು ಭಾಷಾವಾರು ತತ್ತ್ವವನ್ನು. ಇದರ ಹಿಂದೆ ಇದ್ದ ಮಹದುದ್ದೇಶ ಆಯಾ ಪ್ರಾಂತೀಕರ ಭಾಷೆ ಆಯಾ ಪ್ರಾಂತ್ಯದ ಭಾಷೆಯೇ ಆಗಿರತಕ್ಕದ್ದು ಮತ್ತು ಅವರಿಗೆ ಆಯಾ ಭಾಷೆಯಲ್ಲೇ ಆಡಳಿತ ಲಭ್ಯವಾಗಬೇಕು ಮತ್ತು ಇದರಿಂದ ಆಯಾ ಪ್ರಾಂತ್ಯಗಳ ಭಾಷೆಯ ಸದುಪಯೋಗ ಆಗುತ್ತದೆ ಎಂಬುದು. ರಾಷ್ಟ್ರೀಯ ಮಟ್ಟದಲ್ಲಿ ಹಿಂದಿಯನ್ನು ಆಡಳಿತ ಭಾಷೆಯಾಗಿ ಹೊಂದಿರುವ ತೀರ್ಮಾನವನ್ನೂ ಆಗಲೇ ಮಾಡಲಾಗಿತ್ತು. ನಮ್ಮನ್ನು ಹಿಂದೆ ಆಳಿದ್ದವರು ಇಂಗ್ಲಿಶಿನಲ್ಲಿ ಆಡಳಿತ ನಡೆಸುತ್ತಿದ್ದುದರಿಂದ ಅದನ್ನು ಅವಶ್ಯಕತೆ ಇರುವವರೆಗೆ ಮಾತ್ರ ಮುಂದುವರಿಸಿಕೊಂಡು ಹೋಗಲು ಅವಕಾಶ ಮಾಡಿಕೊಳ್ಳಲಾಯಿತು. ಅವಶ್ಯಕತೆ ಇರುವವರೆಗೆ ಎಂಬ ಮಾತಿಗೆ ಇಂದೂ ವಿರಾಮವನ್ನು ಘೋಷಿಸಲಾಗಿಲ್ಲ; ಇದರಿಂದ ಬ್ರಿಟಿಷರು ಹೋದರೂ, ಅವರ ಪರವಾಗಿ ಇಂಗ್ಲಿಶ್ ನಮ್ಮನ್ನು ಆಳುತ್ತಿದೆ ಎಂಬ ಸತ್ಯವನ್ನು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಗಿದೆ. ಜಾಗತೀಕರಣದ ಸಂದರ್ಭದಲ್ಲಿ ಇಂಗ್ಲಿಶ್ ಸಂವಹನ ಭಾಷೆಯಾಗಿ ಬಳಕೆಯಾಗುತ್ತಿರುವುದರಿಂದ ಇಂಗ್ಲಿಶ್ ಕಲಿಕೆ ಅನಿವಾರ್ಯ ಎಂಬ ಸ್ಥಿತಿಯನ್ನು ನಾವೇ ಸೃಷ್ಟಿಸಿಕೊಂಡಿದ್ದೇವೆ. ಬಹುರಾಷ್ಟ್ರೀಯ ಸಂಸ್ಥೆಗಳಲ್ಲಿ ಉದ್ಯೋಗವನ್ನು ಹುಡುಕಿಕೊಂಡು ಹೋಗುವ ಜನರಿಗೆ ಇಂಗ್ಲಿಶ್ ಹೊಟ್ಟೆಪಾಡಿನ ಭಾಷೆ. ಆದ್ದರಿಂದ ಇಂಗ್ಲಿಶನ್ನು ಕಲಿಯಲೇ ಬೇಕಾಗಿದೆ. ಉದ್ಯೋಗ ಅನಿಶ್ಚಿತವಾಗಿರುವ ಕುಟುಂಬಗಳಲ್ಲಿ ಮಕ್ಕಳು ದುಡಿಯುವ ಯಂತ್ರಗಳಷ್ಟೇ ಆಗಿದ್ದಾರೆ. ಮಕ್ಕಳನ್ನು ಜ್ಞಾನವಿಕಾಸಕ್ಕಾಗಿ ಸಿದ್ಧಗೊಳಿಸುವ ಜವಾಬ್ದಾರಿಯನ್ನು ಪೋಷಕರು ಒಪ್ಪಿಕೊಂಡಿಲ್ಲ ಎನ್ನುವ ಅನುಮಾನ ಇತ್ತೀಚೆಗೆ ತೀವ್ರವಾಗಿ ಕಾಡುತ್ತಿದೆ. ಇದು ಮಕ್ಕಳ ಬುದ್ಧಿಶಕ್ತಿಗೆ ಆಗುತ್ತಿರುವ ಅವಮಾನ.

ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯಾಗಿ ಬಳಕೆಯಾಗಬೇಕೆಂಬ ನಿಟ್ಟಿನಲ್ಲಿ ಈವರೆಗೆ ೩೬ ಆದೇಶಗಳು, ಶಿಕ್ಷಣದಲ್ಲಿ ಕನ್ನಡವನ್ನು ಕುರಿತು ೫೦ಕ್ಕೂ ಹೆಚ್ಚು ಆದೇಶಗಳು, ಕನ್ನಡಿಗರಿಗೆ ಉದ್ಯೋಗದ ವಿಚಾರವಾಗಿ ೧೫ಕ್ಕೂ ಹೆಚ್ಚು ಆದೇಶಗಳು ರಾಜ್ಯ ಸರ್ಕಾರದಿಂದ ಹೊರಬಿದ್ದಿವೆ. ಮಕ್ಕಳಿಗೆ ಮಾತೃಭಾಷೆಯಲ್ಲಿ ಶಿಕ್ಷಣ ಕುರಿತು ಆದೇಶಗಳಿದ್ದರೂ, ನ್ಯಾಯಾಲಯದಲ್ಲಿ ಅವುಗಳನ್ನು ಪ್ರಶ್ನಿಸಲಾಗಿದೆ. ಆದೇಶಗಳು ಕಾರ್ಯರೂಪಕ್ಕೆ ಬರದಂತೆ ತಡೆಯಲಾಗಿದೆ.

ಜಾಗತೀಕರಣವು ಎಲ್ಲವನ್ನೂ ವ್ಯಾಪಾರೀಕರಣಗೊಳಿಸುತ್ತಿದೆ ಎಂಬುದರ ಅರಿವು ಎಲ್ಲರಿಗೂ ಇದೆ; ಎಲ್ಲರೂ ವ್ಯಾಪಾರಿಗಳೇ ಆಗಲು ಬಯಸುವುದರಿಂದ ಮನುಷ್ಯರ ಮನಸ್ಸುಗಳೂ ವ್ಯಾಪಾರಕ್ಕೆ ಬದ್ಧವಾಗಿವೆ. ಈ ವ್ಯಾಪಾರೀಕರಣ ಪ್ರಕ್ರಿಯೆಯು ಭಾಷೆಯನ್ನು ಮತ್ತು ಅದರ ಜೊತೆಗಿನ ಇತಿಹಾಸ, ಜಾನಪದ, ಸಂಸ್ಕೃತಿ ಇತ್ಯಾದಿ ಮನುಷ್ಯ ಸಂಬಂಧದ ಎಲ್ಲವನ್ನೂ ಅವಸಾನದ ಅಂಚಿಗೆ ತಳ್ಳುತ್ತಿರುವುದು ವಿಷಾದದ ವಿಚಾರ.

ಇತರ ಭಾಷೆಗಳಿರಲಿ, ಇಂಗ್ಲಿಶೂ ತನ್ನ ಬನಿಯನ್ನು ಕಳೆದುಕೊಳ್ಳುತ್ತಿದೆ. ವ್ಯಾಪಾರ ನಿಲ್ಲುವುದು ಮಾತುಗಳನ್ನು ಪೋಲು ಮಾಡುವುದರಲ್ಲಲ್ಲ. ಅದನ್ನು ಸಾಂಕೇತಿಕವಾಗಿ ಬಳಸುವುದರಲ್ಲಿ ವ್ಯಾಪಾರಿಯ ಜಾಣತನ ಇರುತ್ತದೆ. ಈಗ ಇಂಗ್ಲಿಶ್ ಭಾಷೆಯೂ ಸಂಕೇತಗಳ ಮಟ್ಟಕ್ಕೆ ಬಂದು ನಿಂತಿದೆ. ಆದ್ದರಿಂದ ಇಂಗ್ಲಿಶ್ ಭಾಷೆ ಕೂಡ ಒಂದಲ್ಲ ಒಂದು ದಿನ ಅವಸಾನಗೊಂಡು ಕೇವಲ ಕೂಡು, ಕಳೆ, ಗುಣಿಸು, ಭಾಗಿಸು ಎಂಬ ಸಂಕೇತಗಳು ಮತ್ತು ಅಂಕೆಗಳು ಉಳಿದರೆ ಆಶ್ಚರ್ಯವಿಲ್ಲ. ಆ ದಿನಗಳು ಬಾರದಂತೆ ಮತ್ತು ನಮ್ಮ ಇತಿಹಾಸ, ಸಾಹಿತ್ಯ, ಜಾನಪದ, ಒಟ್ಟಾರೆಯಾಗಿ ಸಂಸ್ಕೃತಿಯನ್ನು ಭಾಷೆಯ ಮೂಲಕ ಉಳಿಸಿಕೊಳ್ಳುವ ಪ್ರಯತ್ನಗಳನ್ನು ನಾವೇ ಮಾಡಬೇಕು. ಅದಕ್ಕೂ ಜಾಗತೀಕರಣದತ್ತ ಮುಖ ಮಾಡಿ ಕೂರುವುದು ಕ್ರೌರ್ಯಕ್ಕೆ ಮತ್ತೊಂದು ಉದಾಹರಣೆಯಾದೀತು.

**ಡಾ॥ ಎಚ್. ಎಸ್. ಗೋಪಾಲ ರಾವ್**
'ಅಕ್ಷರ', ಐ.ವೈ.ಡಿ. ೩ನೇ ರಸ್ತೆ, ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೨ ೧೨೩




# ಪರಿಸರ

## ವಿಕಾಸದ ದಾರಿ–ನಾಶ ಮತ್ತು ರಕ್ಷಣೆಯ ಹೋರಾಟ

ನಮ್ಮ ನಡುವಿನ ಪರಿಸರವನ್ನು ಜೀವಿ ಮತ್ತು ನಿರ್ಜೀವಿಗಳ ಸಂಗಮ ಎಂದು ಹೇಳಬಹುದು. ಇಲ್ಲಿ ಜೀವಿ ಮತ್ತು ನಿರ್ಜೀವಿಗಳು ಹವಾಮಾನ, ವಾತಾವರಣ, ನೈಸರ್ಗಿಕ ಶಕ್ತಿಗಳು ಮತ್ತು ಪ್ರಕ್ರಿಯೆಗಳ ನಡುವೆ ಸಂಬಂಧ, ಸಮನ್ವಯತೆ, ಸಹಕಾರವನ್ನು ಹೊಂದಿರುವ ಒಟ್ಟೂ ಸಮೂಹವೇ ಪರಿಸರ. ಪರಿಸರ ಜೀವಿಗಳ ಆವಾಸಸ್ಥಾನ. ಪ್ರಪಂಚದಲ್ಲಿ ಸುಮಾರು ಹತ್ತು ಕೋಟಿಗೂ ಅಧಿಕ ಜನ ಕಾಡಿನಲ್ಲೇ ವಾಸವಾಗಿದ್ದು, ೧೬೦ ಕೋಟಿಗೂ ಅಧಿಕ ಜನ ತಮ್ಮ ಜೀವನಾವಶ್ಯಕತೆಗೆ ಕಾಡನ್ನೇ ನಂಬಿಕೊಂಡಿದ್ದಾರೆ. ಅರಣ್ಯಗಳು ಶೇಕಡ ೮೦ರಷ್ಟು ಭೂಮಿಯ ಜೀವ ವೈವಿಧ್ಯಕ್ಕೆ ನೆಲೆಯಾಗಿವೆ. ಭೂಮಿಯಲ್ಲಿ ಇಂದು ಸಂಪೂರ್ಣ ಸ್ವಾಭಾವಿಕ ಪರಿಸರ ಇಲ್ಲವೆಂಬಷ್ಟರ ಮಟ್ಟಿಗೆ ಮಾನವ ತನ್ನ ಅನುಕೂಲಕ್ಕೆ ತಕ್ಕಂತೆ ಎಲ್ಲಾ ಪ್ರದೇಶದಲ್ಲಿ ಚಟುವಟಿಕೆಗಳನ್ನು ಹೊಂದಿದ್ದಾನೆ. ಮರುಭೂಮಿಯಿಂದ ಹಿಡಿದು ಮಳೆ–ಕಾಡುಗಳ ವರೆಗೆ, ಸಾಗರದಿಂದ ಹಿಡಿದು ಹಿಮಪ್ರದೇಶದವರೆಗೆ ಮನುಷ್ಯ ಪರಿಸರವನ್ನು ತನ್ನ ವಾಸಸ್ಥಳವನ್ನಾಗಿ ಮಾರ್ಪಾಟು ಮಾಡಿಕೊಂಡಿರುವುದು ಮಾತ್ರವಲ್ಲದೆ ತನ್ನ ಅನುಕೂಲಕ್ಕೆ ಮತ್ತು ಲಾಭಕ್ಕೆ ತಕ್ಕಂತೆ ಸ್ವೇಚ್ಛೆಯಾಗಿ ಬದಲಾವಣೆ ಕೂಡ ಮಾಡಿದ್ದಾನೆ. ಕೃಷಿಭೂಮಿ, ಬೃಹತ್ ಅಣೆಕಟ್ಟುಗಳು, ನಗರಗಳು, ಕಾಲುವೆಗಳು, ಕೈಗಾರಿಕೆಗಳು, ರಸ್ತೆ, ರೈಲು, ಹಡಗು, ಜಲಾಂತರ್ಗಾಮಿ, ವಿಮಾನಗಳು, ಬಾಹ್ಯಾಕಾಶ ಹೀಗೆ ಭೂಮಿಯ ಮೇಲೆ, ನೀರಿನ ಮೇಲೆ, ವಾತಾವರಣದಲ್ಲಿ ಸಾಗರದ ತಳದಲ್ಲಿ ಮನುಷ್ಯನ ಚಟುವಟಿಕೆ ಇಲ್ಲದ ಪ್ರದೇಶವೇ ಇಲ್ಲ. ಇದ್ದರೆ ಅದು ಭೂಗರ್ಭದ ಒಳಗೆ ಮತ್ತು ಸಂಪೂರ್ಣ ಅಂತರಿಕ್ಷದ ಉದ್ದಗಲ, ಭವಿಷ್ಯದಲ್ಲೂ ಅದನ್ನು ತಲುಪುವ ಹುಮ್ಮಸ್ಸು ನಮ್ಮದು.

ಸ್ಕಾಟ್‌ಲೆಂಡ್‌ನ ಪ್ರಸಿದ್ಧ ಇತಿಹಾಸಕಾರ, ತತ್ವಜ್ಞಾನಿ, ಶಿಕ್ಷಕ, ವಿಡಂಬನ ಸಾಹಿತ್ಯ ಕೃತಿಕಾರ ಥಾಮಸ್ ಕಾರ್ಲೈಲ್, ಜೊಹಾನ್ ಊಲ್ಫ್ ಗ್ಯಾಂಗ್ ಗೋಯೇತೆ; ಜರ್ಮನಿಯ ರಾಜಕಾರಣಿ ಮತ್ತು ಲೇಖಕ, ತನ್ನ ಲೇಖನದಲ್ಲಿ "ಉಮ್ಗೆಬಂಗ್" ಪದವನ್ನು ಅನುವಾದ ಮಾಡುತ್ತಾ "ಎನ್ವೆರನ್ಮೆಂಟ್" (ಪರಿಸರ) ಎಂಬ ಪದವನ್ನು ಮೊದಲ ಬಾರಿಗೆ ಬಳಸಿದನು.

ಮಾನವರ ವಿಕಾಸದಲ್ಲಿ ಕೆಲವು ಪ್ರಮುಖ ಕಾಲಘಟ್ಟವನ್ನು ಇತಿಹಾಸಕಾರರು ಗುರುತಿಸುತ್ತಾರೆ. ಪುರಾತನ ಶಿಲಾಯುಗದಲ್ಲಿ, ಅಲೆಮಾರಿಯಾಗಿದ್ದ ಮಾನವ ಚಿಕ್ಕ ಚಿಕ್ಕ ಗುಂಪುಗಳಲ್ಲಿ ವಾಸ ಮಾಡುವುದು, ಕಲ್ಲಿನ ಆಯುಧ, ಬೆಂಕಿಯ ಹುಡುಕಾಟ, ಚಕ್ರದ ತಯಾರಿ, ಕೃಷಿಯ (ಬಿತ್ತಿ ಬೆಳೆಯುವ ಕಲಿಕೆ) ಮತ್ತು ಲೋಹಗಳ ಸಂಶೋಧನೆ, ಮೊದಲ ಹಂತದ ವಿಕಾಸ. ಕೃಷಿಯನ್ನು ಕಂಡುಹಿಡಿದು, ಮರದ ನೇಗಿಲು ನಂತರ ಕಬ್ಬಿಣ ನೇಗಿಲು ಕಂಡುಹಿಡಿಯುವವರೆಗೂ

**ಎ. ವಿ. ಕೃಷಿಕ**

ಮನುಷ್ಯ ಸ್ವಾಭಾವಿಕ ಪರಿಸರದಲ್ಲೇ ಪರಿಸರ ದೊಂದಿಗೆ ಹೊಂದಿಕೊಂಡು ಅತ್ಯಲ್ಪ ಮಾರ್ಪಾಟು ಗಳೊಂದಿಗೆ ಬದುಕುತ್ತಿದ್ದ. ಯಾವಾಗ ಜನಸಂಖ್ಯೆ ಹೆಚ್ಚಾಗಿ ಆಹಾರಕ್ಕೆ ಹೆಚ್ಚಿನ ಬೇಡಿಕೆ ಬಂದಿತೋ, ಅದೇ ಸಮಯಕ್ಕೆ ಕಬ್ಬಿಣದ ಆವಿಷ್ಕಾರವಾಗಿ ನೇಗಿಲು ಗಟ್ಟಿಯಾಯಿತು, ಆಗ ಸಣ್ಣ ಪ್ರಮಾಣದ ಅರಣ್ಯ ನಾಶ, ಮಣ್ಣಿನ ಬದಲಾವಣೆ ಪ್ರಕ್ರಿಯೆ ಶುರುವಾಯಿತು. ಗೊಬ್ಬರದ ಬಳಕೆ, ಆಧುನಿಕ ರಾಸಾಯನಿಕಯುಕ್ತ ಕೃಷಿಯ ಪರಿಚಯವಿಲ್ಲದ ಕಾರಣ ಕೃಷಿಭೂಮಿ ಈಗಿರುವಂತೆ ಒಂದೇ ಕಡೆ ಇರುವ ಬದಲು ಮಣ್ಣಿನ ಫಲವತ್ತತೆ ಕಡಿಮೆ ಯಾದಂತೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ವರ್ಗವಾಗುತ್ತಿತ್ತು. ಆದರೂ ಇದೊಂದು ಚಕ್ರದ ಮಾದರಿ ಕೆಲವೇ ಪ್ರದೇಶದಲ್ಲಿ ನಡೆಯುತ್ತಿತ್ತು (ಈ ಬಗೆಯ ಕೃಷಿಯನ್ನು ಇಂದಿಗೂ ಹಲವು ಆದಿವಾಸಿ ಜನಾಂಗಗಳಲ್ಲಿ ಗಮನಿಸಬಹುದು, ಇದನ್ನು ಶಿಫ್ಟ್ ಕಲ್ಟಿವೇಷನ್ ಎಂದು ಕರೆಯಲಾಗುತ್ತದೆ). ಜನಸಂಖ್ಯೆ ಬೆಳೆಯುತ್ತಾ, ಸಮಾಜಗಳು ವಿಕಾಸವಾಗುತ್ತಾ, ವ್ಯಾಪಾರ ವಹಿವಾಟು ವೃದ್ಧಿಯಾಗುತ್ತಾ, ತಂತ್ರಜ್ಞಾನಗಳು ಉನ್ನತೀಕರಣಗೊಳ್ಳುತ್ತಾ ಭೂಮಿಯ ಮಾರ್ಪಾಟು ಮತ್ತಷ್ಟು ಹೆಚ್ಚಾಯಿತು. ಇವೆಲ್ಲವೂ ಸಮುದಾಯದ ಆಹಾರದ ಒಂದು ಸೀಮಿತ ಉದ್ದೇಶಕ್ಕೆ, ಕಡಿಮೆ ಪ್ರಮಾಣದಲ್ಲಿ ಪರಿಸರಕ್ಕೆ ಹೆಚ್ಚಿನ ಧಕ್ಕೆ ಉಂಟುಮಾಡದಂತೆ ಇದ್ದವು.

ಹದಿನಾಲ್ಕು ಮತ್ತು ಹದಿನಾರನೇ ಶತಮಾನದ

ನಡುವೆ "ಮಹಾ ಪುನರುತ್ಥಾನ" ಸಂಭವಿಸಿ ಕಲೆ, ಸಾಹಿತ್ಯ, ಚಿಂತನೆಯಲ್ಲಿ ಚರ್ಚಿನ ಧಾರ್ಮಿಕ ಕಟ್ಟುಪಾಡುಗಳನ್ನು ಮೀರಿದ ಕ್ರಾಂತಿಕಾರಕ ಬದಲಾವಣೆ ಆಯಿತು. ಇದು ಎರಡನೆಯ ಹಂತದ ಬೃಹತ್ ಪ್ರಮಾಣದ ಪರಿಸರ ನಾಶಕ್ಕೂ ಕಾರಣವಾಯಿತು. ಈ ಮಹಾ ಪುನರುತ್ಥಾನದ ಕಾರಣ ರಾಜಕೀಯ ಚಿಂತನೆಗಳಿಂದಾಗಿ ಇಂದಿನ ಯುರೋಪ್ ಪ್ರದೇಶದಲ್ಲಿ ಗಮನಾರ್ಹ ಬದಲಾವಣೆ ಆಯಿತು. ಹೆಚ್ಚಿನ ಸಮಯದಲ್ಲಿ ಅನಾನುಕೂಲ ವಾತಾವರಣ ಇದ್ದೂ, ನಿಸರ್ಗದ ಕಠಿಣತೆಗೆ ಹೊಂದಿಕೊಂಡು ಸಂಘರ್ಷ ಮಾಡುವುದನ್ನು ಕಲಿತ ಯುರೋಪ್ ಮತ್ತು ಮಧ್ಯಪ್ರಾಚ್ಯದ ಮರುಭೂಮಿಯ ಜನರಲ್ಲಿ ಹೊಸ ವೈಚಾರಿಕ ಅಲೆ ಸೃಷ್ಟಿಯಾಯಿತು. ಈ ಭಾಗದ ಜನರು ಆಗಾಗಲೇ ಜಗತ್ತಿನ ಹಲವು ಪ್ರದೇಶದ ಜೊತೆಗೆ ವ್ಯಾಪಾರ ವ್ಯಾವಹಾರಿಕ ಸಂಬಂಧ ಹೊಂದಿದ್ದರೂ "ಮಹಾ ಪುನರುತ್ಥಾನ" ಅದಕ್ಕೆ ಹೊಸತನವನ್ನು ತಂದಿತು. ಯುರೋಪಿನ ರಾಜ ವಂಶಸ್ಥರು ತಮ್ಮ ಚಿಕ್ಕ ರಾಜ್ಯಗಳ ವ್ಯವಹಾರದಿಂದ ಸಮುದ್ರಗಳ ಮಂಥನಕ್ಕೆ ಕೈ ಹಾಕಿದರು. ಅಲ್ಲದೆ, ಸಂಶೋಧನೆಗೆ ವಿಜ್ಞಾನಿಗಳಿಗೆ ಪ್ರೋತ್ಸಾಹ ಕೊಟ್ಟರು. ೧೭೬೦–೧೮೪೦ರ ನಡುವಿನ ಈ ಸಮಯದಲ್ಲಿ ಇದು ಕೈಗಾರಿಕಾ ಕ್ರಾಂತಿಗೆ ನಾಂದಿ ಹಾಡಿತು. ಯುರೋಪಿನ ವಸಾಹತುಶಾಹಿ ಆಡಳಿತ ಜಗತ್ತನ್ನು ತನ್ನ ಕಪಿಮುಷ್ಟಿಗೆ ತೆಗೆದುಕೊಳ್ಳುತ್ತ, ಸಂಪದ್ಭರಿತ ಏಷಿಯಾ, ಆಫ್ರಿಕ, ಅಮೇರಿಕ ಖಂಡದ ನೈಸರ್ಗಿಕ ಸೊತ್ತು ಮತ್ತು ಕಠಿಣ ಪರಿಶ್ರಮ ಮಾಡಬಲ್ಲ ಜನರನ್ನು ಬಳಸಿಕೊಂಡು ಯುರೋಪಿನ ಕೈಗಾರಿಕೆಗಳಿಗೆ ಕಚ್ಚಾ ವಸ್ತುಗಳನ್ನು ಸಾಗಿಸಲು ಶುರು ಮಾಡಿದರು. ಕೈಗಾರಿಕಾ ಕ್ರಾಂತಿ ಹೊಸ ಆವಿಷ್ಕಾರಗಳು ಹೊಸ ಉತ್ಪಾದನಾ ಸಂಶೋಧನೆಗಳಿಗೆ ನಾಂದಿಯಾಯಿತು. ಕೈಗಾರಿಕೆಗಳು ಎಗ್ಗಿಲ್ಲದೆ ಬೆಳೆದವು. ಈಗೇನು ನಾವು ಬಡ ರಾಷ್ಟ್ರಗಳು ಎಂದು ಕರೆದುಕೊಳ್ಳುತ್ತೇವೆಯೋ ಅವೆಲ್ಲ ಗುಲಾಮಗಿರಿಗೆ ತಳ್ಳಲ್ಪಟ್ಟವು. ಮಿತಿಮೀರಿದ ಉತ್ಪಾದನೆ, ಪರಿಸರ ಸ್ವೇಚ್ಛಾಚಾರದ ದುರ್ಬಳಕೆ, ಪರಿಸರದಿಂದ ನಾವು ಎಂಬುದರ ಬದಲಿಗೆ ನಾವು ಮಾತ್ರ ಪರಿಸರ, ನಾವು ಮಾಡಿದ್ದೆಲ್ಲ ಸರಿ ಎಂಬ ಹಠಮಾರಿ ಧೋರಣೆ ಜಗತ್ತಿನ ಅಂತ್ಯಕ್ಕೆ ಗಡಿಯಾರ ಸಿದ್ಧಗೊಳಿಸಿ ಕೈಗಾರಿಕಾ ಕ್ರಾಂತಿಯ ಸಮಯದಲ್ಲೇ ಇಂದು "ಪರಿಸರದ ಟೈಂಬಾಂಬ್" ಎಂದು ಗುರುತಿಸಲಾಗಿರುವ, ಇಂಗಾಲಕ್ಕಿಂತ ೩೬ ಪಟ್ಟು ಹೆಚ್ಚು ಶಕ್ತಿಶಾಲಿಯಾಗಿರುವ ಹಸಿರುಮನೆ ಅನಿಲಗಳಲ್ಲಿ ಒಂದಾದ ಮೀಥೇನ್ ಹೊರಸೂಸುವ ಬೃಹತ್ ಅಣೆಕಟ್ಟುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಕಟ್ಟಲಾಯಿತು. ೧೩೦೦ಕ್ಕೆ ಮಾನವರಿಗೆ ಕಲ್ಲಿದ್ದಲಿನ ಬಳಕೆ ಗೊತ್ತಿದ್ದರೂ ಅದರ ಬಳಕೆ ವೈಪರೀತ್ಯಕ್ಕೆ ಹೋಗಿ ವಿಪರೀತ ಪ್ರಮಾಣದ ಪರಿಸರ ನಾಶ ಮತ್ತು ವಾಯುಮಾಲಿನ್ಯಕ್ಕೆ ಕಾರಣವಾಗಿದ್ದು ಕೈಗಾರಿಕಾ ಕ್ರಾಂತಿಯ ಸಮಯದಲ್ಲೇ. ವಸಾಹತುಶಾಹಿ ಅತಿರೇಕಕ್ಕೆ ಕಾಡುಪ್ರಾಣಿಗಳ ಹತ್ಯೆ, ಆದಿವಾಸಿಗಳ ಶೋಷಣೆ, ಹಡಗು, ಕಟ್ಟಡ ನಿರ್ಮಾಣಕ್ಕೆ, ಅರಣ್ಯ ನಾಶ ಇವು ಲೆಕ್ಕಕ್ಕೇ ಸಿಗದಷ್ಟು ಹೆಚ್ಚಾದವು. ಕೆಲವೊಂದು ಪ್ರಭೇದಗಳ ಸಾಮೂಹಿಕ ಅಂತ್ಯಕ್ಕೆ ಮತ್ತು ಇಂದು ನಾವು ಗೊತ್ತುಮಾಡಿಕೊಂಡಿರುವ "ವಿನಾಶಕ್ಕೆ ಹತ್ತಿರವಾಗಿರುವ ಪ್ರಭೇದಗಳು" ಎಂಬ ಪರಿಸ್ಥಿತಿಗೆ ಕಾರಣವಾಯಿತು. ಇಂದು ನಾವು ಸಸ್ಯ, ಪ್ರಾಣಿ ಇತ್ಯಾದಿ ಜೀವಿಗಳ ವರ್ಗೀಕರಣವನ್ನು ಹೆಚ್ಚಿನ ಪ್ರಮಾಣದಲ್ಲಿ ಮಾಡಿದ್ದೇವೆ, ಆದರೆ ಇದನ್ನು ಮಾಡದ ಕಾಲದಲ್ಲಿ ಆಗಿರುವ ಪರಿಸರ ವಿನಾಶದಲ್ಲಿ ವರ್ಗೀಕರಣ ಮಾಡದ ಎಷ್ಟು ಜೀವಿಗಳು ನಶಿಸಿರಬಹುದು ಎಂಬುದು ಊಹೆಗೂ ನಿಲುಕದ ಪ್ರಶ್ನೆ (ಭೂಮಿಯಲ್ಲಿ ಒಂದು ಕೋಟಿಗೂ ಮೀರಿದ ಜೀವವೈವಿಧ್ಯವಿದೆ ಅದರಲ್ಲಿ ಕೇವಲ ಹದಿನಾರು ಲಕ್ಷದಷ್ಟು ಜೀವಿಗಳ ಬಗ್ಗೆ ಅಧ್ಯಯನ ಆಗಿದೆ). ನೈಸರ್ಗಿಕ ಪರಿಸರದ ಭಾಗವಾಗಿ, ಕಾಡಿನೊಂದಿಗೆ ಜೀವಿಗಳೊಂದಿಗೆ ಒಡನಾಟ ಹೊಂದಿದ್ದ, ಪರಿಸರ ಸಂರಕ್ಷಣೆಗೆ ಸಮತೋಲನಕ್ಕೆ ಶ್ರಮಿಸಿದ್ದ (ಇಂದಿಗೂ ಶ್ರಮಿಸುತ್ತಿರುವ) ಸಾವಿರಾರು ಸಂಖ್ಯೆಯ ಆದಿವಾಸಿಗಳು, ಅವರ ಭಾಷೆ,

ಸಂಸ್ಕೃತಿ, ಆಚರಣೆ ವಸಾಹತುಶಾಹಿ ದಬ್ಬಾಳಿಕೆಗೆ ಸಂಪೂರ್ಣ ನಾಶವಾಯಿತು. ಸಂಪೂರ್ಣ ನಾಶವಾಗದ ಆದಿವಾಸಿ ಗುಂಪುಗಳು ಆಧುನಿಕ ಕಾಯಿಲೆಗಳು ಆಡಂಬರದ ಜೀವನಶೈಲಿಗೆ ವಿಘಟನೆಗೊಳಗಾಗಿ ಸತ್ತೂ ಬದುಕಿದಂತಿವೆ.

ಮೂರನೆಯ ಹಂತದ ಪರಿಸರ ವಿನಾಶ ಆಗಿದ್ದು, ೧೯ನೇ ಶತಮಾನ ಮತ್ತು ೨೦ನೇ ಶತಮಾನದ ಮೊದಲಲ್ಲಿ ತಯಾರಿಸಿದ ಪ್ಲಾಸ್ಟಿಕ್, ಸಿಮೆಂಟು ಮತ್ತು ಹೊಸದಾಗಿ ಕಂಡುಹಿಡಿದ ಕಚ್ಚಾತೈಲ ಮತ್ತದರ ಸಂಸ್ಕರಣೆ. ೧೮೦೦ರ ಸುಮಾರಿಗೆ "ಚಾರ್ಲ್ಸ್ ಗುಡಾಯರ್" ಕಂಡುಹಿಡಿದ "ವಲ್ಕನೈಸೆಷನ್" ಪ್ರಕ್ರಿಯೆಯಿಂದ ೧೮೫೬ರಲ್ಲಿ "ಅಲೆಕ್ಸಾಂಡರ್ ಪಾರ್ಕ್ಸ್" ಮೊದಲ ಮಾನವ ನಿರ್ಮಿತ ಪ್ಲಾಸ್ಟಿಕ್ ಕಂಡುಹಿಡಿದ. ಇದಕ್ಕೂ ಮುಂಚೆ ನಿಸರ್ಗದಲ್ಲಿ ಲಭ್ಯವಿರುವ ಅಂಟು ವಸ್ತುಗಳನ್ನು ಉಪಯೋಗಿಸಿ ಜೈವಿಕ ಪ್ಲಾಸ್ಟಿಕ್ ೧೬೦೦ರ ಸುಮಾರಿಗೆ ಇತ್ತು. ಇಂದು ನಾವು ಬಳಸುತ್ತಿರುವುದು ಅಜೈವಿಕ ಪ್ಲಾಸ್ಟಿಕ್ ಪರಿಸರಕ್ಕೆ ಮಾರಕವಾದುದು (೨,೭೦,೦೦೦ ಟನ್‌ನಷ್ಟು ಕಿರು ಮತ್ತು ಮಧ್ಯಮ ಗಾತ್ರದ ಪ್ಲಾಸ್ಟಿಕ್ ವಸ್ತುಗಳು ಸಾಗರದಲ್ಲಿ ತೇಲುತ್ತಿವೆ ಎಂದು ಒಂದು ಅಧ್ಯಯನ ತಿಳಿಸಿದೆ. ಇದು ಜಲಚರಗಳ ದೇಹವನ್ನು ಹೊಕ್ಕು ಆಹಾರ ಸರಪಳಿಯನ್ನು ಈಗಾಗಲೇ ಪ್ರವೇಶಿಸಿದೆ). ೧೮೨೪ (ಸಿಮೆಂಟ್), ೧೮೫೯ (ಆಯಿಲ್ ಕ್ರೀಕ್ ಎಂಬುದು ಪೆನ್ಸಿಲ್ವೇನಿಯ ಪ್ರದೇಶದಲ್ಲಿ ಕಂಡು ಹುಡುಕಿದ ಕಚ್ಚಾ ತೈಲ). ಹಸಿರುಮನೆ ಅನಿಲದ ಒಟ್ಟೂ ಉತ್ಪಾದನೆಯಲ್ಲಿ ಕೇವಲ ೫% ಸಿಮೆಂಟ್ ಕಾರ್ಖಾನೆಗಳಿಂದ ಬರುತ್ತದೆ. ಸಿಮೆಂಟ್ ಉತ್ಪಾದನೆ ಹೆಚ್ಚಿನ ಶಕ್ತಿಯನ್ನು ಬಳಸುತ್ತದೆ ಮತ್ತು ಹೆಚ್ಚಿನ ಇಂಗಾಲವನ್ನು ಹೊರಸೂಸುತ್ತದೆ. ಒಂದು ಅಂದಾಜಿನಂತೆ ೧ ಟನ್ ಸಿಮೆಂಟ್ ಉತ್ಪಾದಿಸಲು ೪.೭ ಮಿಲಿಯನ್ ಬಿ. ಟಿ.ಯು. ಶಕ್ತಿ (೪೦೦ ಪೌಂಡ್ಸ್ ಕಲ್ಲಿದ್ದಲಿನಷ್ಟು) ಬೇಕು. ಅದು ಸುಮಾರು ೧ ಟನ್ ಇಂಗಾಲವನ್ನು ಉತ್ಪಾದಿಸುತ್ತದೆ (೧ ಟನ್ ಸಿಮೆಂಟು = ೧ ಟನ್ ಇಂಗಾಲದ ಡೈಯಾಕ್ಸೈಡ್ = ೧ ಕಾರ್ಬನ್ ಕ್ರೆಡಿಟ್). ೨೦೦೦ನೇ ಇಸವಿಯಲ್ಲಿ ಮಾಡಿದ ಅಧ್ಯಯನದ ಪ್ರಕಾರ ಕೇವಲ ಸಿಮೆಂಟು ಕಾರ್ಖಾನೆಗಳಿಂದ ೮೨೯ ಮಿಲಿಯನ್ ಮೆಟ್ರಿಕ್ ಟನ್ ಇಂಗಾಲದ ಡಯಾಕ್ಸೈಡ್ ವಾತಾವರಣಕ್ಕೆ ಬಿಡುಗಡೆ ಆಗಿದೆ. ಇಂದಿನ ಪ್ರಮುಖ ಹತ್ತು ಸಿಮೆಂಟ್ ತಯಾರಿಕಾ ರಾಷ್ಟ್ರಗಳೆಂದರೆ, ಚೀನಾ (೨೪೮೨.೪೨ ಮಿಲಿಯನ್ ಮೆಟ್ರಿಕ್ ಟನ್ ವಾರ್ಷಿಕ), ಭಾರತ (೨೮೫.೮೩), ಅಮೇರಿಕ (೮೦.೩೬), ಇರಾನ್ (೭೭.೯೫), ಇಂಡೋನೇಷಿಯಾ (೭೪.೩೨), ಬ್ರೆಜಿಲ್ (೭೨.೫೭), ಟರ್ಕಿ (೭೧.೬೩), ರಷ್ಯ (೬೭.೩೯), ವಿಯೆಟ್ನಾಮ್ (೬೬.೮೧), ಜಪಾನ್ (೫೫.೩೫). ವಾರ್ಷಿಕ ೪೦೦೦ ಮಿಲಿಯನ್ ಟನ್‌ಗೂ ಹೆಚ್ಚಿನ ಸಿಮೆಂಟ್ ಜಗತ್ತಿನಾದ್ಯಂತ ಉತ್ಪಾದನೆಯಾಗುತ್ತಿದೆ ಮತ್ತು ಇದು ಪ್ರತಿ ವರ್ಷ ಹೆಚ್ಚಾಗುತ್ತಿದೆ ಎಂಬುದು ಆಘಾತಕಾರಿ ಸಂಗತಿ.

ಇಂದು ಜಗತ್ತು ಗುರುತಿಸಿರುವ "ಜಾಗತಿಕ ತಾಪಮಾನ"ಕ್ಕೆ ನೇರ ಕಾರಣವಾಗಿರುವ ಹಸಿರುಮನೆ ಅನಿಲ ಪ್ರಕ್ರಿಯೆಯನ್ನು ೧೮೨೪ ರಲ್ಲೇ ಜೋಸೆಫ್ ಫೌರಿಯರ್ ವಿವರಿಸಿದ್ದರು. ಪ್ರಮಾಣಬದ್ಧವಾಗಿ ೧೮೯೬ರಲ್ಲಿ ಸ್ವಾಂಟೆ ಅರ್ರೇಹ್ನಿಸ್ ಹೇಳಿದರು. ಅಲೆಕ್ಸಾಂಡರ್ ಗ್ರಹಾಂಬೆಲ್ "ಪಳೆಯುಳಿಕೆ ಇಂಧನವನ್ನು ಉರಿಸುವುದರಿಂದ ಹಸಿರುಮನೆ ಪರಿಣಾಮ ಆಗುತ್ತದೆ ಮತ್ತು ಇದರ ಒಟ್ಟು ಪರಿಣಾಮ ಬಿಸಿ ಮನೆಯಲ್ಲಿ ಇರುವಂತೆ ಆಗಿರುತ್ತದೆ" ಎಂದು ಗುರುತಿಸಿದ್ದರು. ಹಸಿರುಮನೆ ಅನಿಲದ ಒಟ್ಟು ಉತ್ಪಾದನೆಯಲ್ಲಿ ಮೊದಲ ಸ್ಥಾನ ಪಳೆಯುಳಿಕೆ ಇಂಧನದಿಂದ ಉತ್ಪಾದಿಸುವ ವಿದ್ಯುಚ್ಛಕ್ತಿಯಿಂದ (೩/೧ ಭಾಗ), ನಂತರ ಪೆಟ್ರೋಲಿಯಂ ಪದಾರ್ಥಗಳನ್ನು ದಹಿಸುವ ಸಂಚಾರದಿಂದ (೩/೧ ಭಾಗ), ಪಳೆಯುಳಿಕೆ ಇಂಧನ ದಹಿಸುವ ಮತ್ತು ರಾಸಾಯನಿಕ ಪ್ರಕ್ರಿಯೆಯಲ್ಲಿ ಅನಿಲ ಉತ್ಪಾದಿಸುವ ಕಾರ್ಖಾನೆಗಳು, ಗೃಹಬಳಕೆ, ಕೃಷಿ ಸಂಬಂಧಿ ಚಟುವಟಿಕೆ (ಮುಖ್ಯವಾಗಿ ಪ್ರಾಣಿ ಸಾಕಣೆ ಮತ್ತು ಬತ್ತದ ಕೃಷಿ), ಇಂಗಾಲಕ್ಕಿಂತ ಅತಿ ಹೆಚ್ಚು ಪ್ರಬಲವಾದ ಮೀಥೇನ್ ಅನಿಲವನ್ನು ವಾತಾವರಣಕ್ಕೆ ಯಥೇಚ್ಛವಾಗಿ ಬಿಡುವ ಅಣೆಕಟ್ಟುಗಳು (೩/೧ ಭಾಗ).

**೧೫ ಪ್ರಮುಖ ಹಸಿರುಮನೆ ಅನಿಲ ಉತ್ಪಾದಕ ಕ್ಷೇತ್ರಗಳು**

ವಿದ್ಯುಚ್ಛಕ್ತಿ ಉತ್ಪಾದನಾ ಕೇಂದ್ರಗಳು – ೨೫–೩೦%
ಮನೆಗಳು – ೧೧%
ಸಂಚಾರ – ೧೦.೫%
ಅರಣ್ಯ ನಾಶ, ಭೂಮಿಯ ಮಾರ್ಪಾಟು – ೧೦.೩%
ಕೈಗಾರಿಕೆಗಳು – ೮.೩%
ವಾಣಿಜ್ಯೋಪಯೋಗಿ ಕಟ್ಟಡಗಳು – ೭%
ಸಿಮೆಂಟ್, ಸಿರಾಮಿಕ್, ಗಾಜು ಉತ್ಪಾದನೆ – ೬%
ಪ್ರಾಣಿ / ಪಕ್ಷಿ ಸಾಕಣೆ – ೫.೫%
ಕಬ್ಬಿಣ ಮತ್ತು ಉಕ್ಕು ತಯಾರಿಕೆ – ೪.೮%
ಕೃಷಿಭೂಮಿ – ೪.೪%
ರಾಸಾಯನಿಕ ಮತ್ತು ಪೆಟ್ರೋಕೆಮಿಕಲ್ ಕಾರ್ಖಾನೆ – ೪.೩%
ಕಚ್ಚಾತೈಲ ಮತ್ತು ಅನಿಲ ಉತ್ಪಾದನೆ – ೩.೧%
ಕಸ ಮತ್ತು ಬಳಸಿದ ನೀರು – ೩%
ಕಲ್ಲಿದ್ದಲು ಗಣಿಗಾರಿಕೆ – ೧.೮%
ವಿಮಾನ – ೧.೫%

ಈ ವರ್ಷದ ಮೇ ೨೩ರಂದು ಅಂಟಾರ್ಟಿಕಾದ ದಕ್ಷಿಣ ಧ್ರುವ ಸಂಶೋಧನಾ ಕೇಂದ್ರದಲ್ಲಿ ವಾತಾವರಣದ ಇಂಗಾಲದ ಪ್ರಮಾಣ ೧೯೫೫–೬೦ರ ಸುಮಾರಿಗೆ ೩೧೦ ಇದ್ದದ್ದು ೪೦೦ ಪಿಪಿಎಂ (೦.೦೪% ವಾತಾವರಣದ ಒಟ್ಟು ಅನಿಲದಲ್ಲಿ ಇಂಗಾಲದ ಪ್ರಮಾಣ)ಗೆ ತಲುಪಿತು. ಜಗತ್ತಿನ ಹೆಚ್ಚು ಇಂಗಾಲದ ಉತ್ಪತ್ತಿ ಆಗುವುದು ಉತ್ತರದಲ್ಲಿ. ಹಾಗಾಗಿ ದಕ್ಷಿಣ ಧ್ರುವದಲ್ಲೇ ಇಂಗಾಲದ ಪ್ರಮಾಣ ೪೦೦ರ ಗಡಿ ದಾಟಿದೆ ಎಂದಾದಲ್ಲಿ ಜನಬಾಹುಳ್ಯದ ನಾವು ವಾಸಿಸುವ ಉತ್ತರ ಗೋಳಾರ್ಧದಲ್ಲಿ ಇಂಗಾಲದ ಪ್ರಮಾಣ ಇದಕ್ಕಿಂತ ಹೆಚ್ಚಿರಬೇಕು. ಭೂಮಿಯ ಸಮತೋಲನಕ್ಕೆ ಇಂಗಾಲದ ಗಡಿ ೩೫೦ ಪಿಪಿಎಂ ಗಿಂತ ಕಡಿಮೆ ಇರಬೇಕು. ೧೫ ಮಿಲಿಯನ್ ವರ್ಷದಲ್ಲಿ ಮೊದಲಬಾರಿಗೆ ಇಂಗಾಲದ ಪ್ರಮಾಣ ಇಷ್ಟು ಪ್ರಮಾಣದಲ್ಲಿ ಹೆಚ್ಚಾಗಿದೆ ಎಂದು ರಾಷ್ಟ್ರೀಯ ಸಾಗರ ಮತ್ತು ವಾತಾವರಣದ ವಿಚಾರಗಳ ಕಾರ್ಯಭಾರ ಮಾಡುವ ಸಂಸ್ಥೆ ಹೇಳಿದೆ. ಈ ಹಿಂದೆ ಇಂಗಾಲದ ಪ್ರಮಾಣ ಇಷ್ಟು ಹೆಚ್ಚಾಗಿದ್ದಾಗ ಮನುಷ್ಯರ ವಿಕಾಸವೇ ಆಗಿರಲಿಲ್ಲ ಹಾಗಾಗಿ ನಮಗಿದು ಹೊಸ ಬೆಳವಣಿಗೆ ಮತ್ತು ಇದು ಇಷ್ಟು ತೀವ್ರವಾಗಿರುವುದಕ್ಕೂ ನಾವೇ ಕಾರಣ. ಇಂಗಾಲದ ಪ್ರಮಾಣ ೭೦೦೦ ಪಿಪಿಎಂ (ಕ್ಯಾಂಬ್ರೀಯನ್ ಸಮಯದಲ್ಲಿ) ಇಂದ ೧೮೦ ಪಿಪಿಎಂ (ಪ್ಲಿಸ್ಟೋಸಿನ್ ಹಿಮಯುಗ)ವರೆಗೂ ನಮ್ಮ ಭೂಮಿಯ ವಾತಾವರಣದಲ್ಲಿ ಇತ್ತೆಂದು ಅಧ್ಯಯನಗಳು ಹೇಳಿವೆ.

ಜಗತ್ತಿನ ಅತೀ ಅಗತ್ಯದ ಅತೀ ಸೂಕ್ಷ್ಮವಾದ ಅರಣ್ಯದಲ್ಲಿ ಒಂದಾದ ಸಮಭಾಜಕ ವೃತ್ತದ ಬಳಿಯ ಮಳೆಕಾಡು ಇಂದಿಗೂ ಬೃಹತ್ ಪ್ರಮಾಣದಲ್ಲಿ ನಾಶವಾಗುತ್ತಿದೆಯಂತೆ. ಪ್ರತಿ ವರ್ಷ ೪೬–೫೮ ಮಿಲಿಯನ್ ಚದರ ಮೈಲು ಅರಣ್ಯ ಪ್ರತೀ ವರ್ಷ ನಾಶವಾಗುತ್ತದೆಯಂತೆ. ಹಾಗಾದರೆ ಅರ್ಧ ದಶಕದಲ್ಲಿ ಅಮೆಝಾನ್ ಪ್ರದೇಶ ೧೭% ಅರಣ್ಯ ಕಳೆದುಕೊಂಡೀತು, ಸುಮಾತ್ರಾ ಪ್ರದೇಶ (ಮಲೇಶಿಯ, ಇಂಡೋನೇಶಿಯಾ ಪಾಮ್ ಎಣ್ಣೆಯ ೮೫% ಉತ್ಪಾದಕ ದೇಶಗಳು) ಪಾಮ್ ಎಣ್ಣೆ ಮರ ಮತ್ತು ತೊಗಟೆ ಉತ್ಪತ್ತಿ ಕೆಲಸದಿಂದ ೮೫% ಅರಣ್ಯ ನಾಶವಾಗಿ ಕೇವಲ ಈ ಪ್ರದೇಶದ ಕಾಡುಗಳಿಗೆ ಸೀಮಿತವಾದ ಒರೆಂಗುಟಾನ್ ಕಪಿ ಜಾತಿಯ ಪ್ರಾಣಿಯು ವಿನಾಶದಂಚಿಗೆ ತಳ್ಳಲ್ಪಟ್ಟಿದೆ. ನಮ್ಮ ದೇಶದಲ್ಲಿ ಒಮ್ಮೆ ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದ ಹುಲಿ ಬ್ರಿಟಿಷರ ಬೇಟೆಯ ಚಟಕ್ಕೆ ಮತ್ತು ಕಾಯಿಲೆಗೆ ಬಲಿಯಾಗಿ ವಿನಾಶದ ಅಂಚಿನಲ್ಲಿರುವ ಪ್ರಾಣಿ ಆಗಿದೆ, ಒಂಟಿ ಕೊಂಬಿನ ಘೇಂಡಾಮೃಗಗಳು, ಆಫ್ರಿಕಾದ ಆನೆಗಳು ಪ್ರತಿ ದಿನ ಹತ್ತಾರು ಸಂಖ್ಯೆಯಲ್ಲಿ ಸಾಯುತ್ತಿವೆ. ಸುಮಾತ್ರಾ ಪ್ರದೇಶದಲ್ಲಿ ಅರಣ್ಯ ನಾಶ ಈಗಿರುವಂತೆಯೇ ಮುಂದುವರಿದರೆ ಇನ್ನು ೨೦ ವರ್ಷದಲ್ಲಿ ಅರಣ್ಯಗಳು ಸಂಪೂರ್ಣವಾಗಿ ನಾಶವಾಗಲಿವೆ ಎಂದು ಅಧ್ಯಯನವೊಂದು ತಿಳಿಸಿದೆ. ಪ್ರಪಂಚದ ೬೭% ಅರಣ್ಯ ಭಾರತ, ಅಮೇರಿಕ, ರಷ್ಯ, ಬ್ರೆಝಿಲ್, ಕೆನಡಾ, ಚೀನಾ, ಡೆಮಾಕ್ರಟಿಕ್ ರಿಪಬ್ಲಿಕ್ ಆಫ್ ಕಾಂಗೊ, ಆಸ್ಟ್ರೇಲಿಯಾ, ಇಂಡೊನೇಶಿಯಾ ಮತ್ತು ಸುಡಾನ್ ದೇಶದಲ್ಲೇ ಇದೆ. ಭಾರತದ ೨೨% ಭಾಗದಲ್ಲಿ ಅರಣ್ಯ ಇದೆ ಎಂದು ೨೦೧೧ರಲ್ಲಿ ಅಮೇರಿಕಾದ ಸಂಸ್ಥೆಯ ವರದಿ ಹೇಳುತ್ತದೆ, ಆರೋಗ್ಯವಂತ ಪ್ರಪಂಚಕ್ಕೆ ೩೦% ಅರಣ್ಯದ ಮುಚ್ಚಿಗೆ ಅಗತ್ಯವಾಗಿದೆ. ವಾಣಿಜ್ಯೋಪಯೋಗಿ ಉದ್ದೇಶಕ್ಕೆ ಕೆಲವೇ ಅಸಮರ್ಪಕ

ಜಾತಿಯ ಮರಗಳನ್ನು ನಿತ್ಯಹರಿದ್ವರ್ಣ ಕಾಡು ಕಡಿದು ಬೆಳೆಯುವುದು ಕೂಡ ಪರಿಸರ ನಾಶವೇ. ಅಕೇಶಿಯ, ಪಾಮ್, ನೀಲಗಿರಿ, ಸಿಲ್ವರ್ ಓಕ್, ತೇಗ ಇತ್ಯಾದಿ ಜಾತಿಯ ಗಿಡಗಳನ್ನು ಬ್ರಿಟಿಷರ ಕಾಲದಿಂದಲೂ ನಮ್ಮ ದೇಶದಲ್ಲಿ ನೆಡುತ್ತ ಬರಲಾಗುತ್ತಿದೆ.

ಭೂಮಿಯ ನಾಲ್ಕೂವರೆ ಬಿಲಿಯನ್ ಆಯಸ್ಸಿನಲ್ಲಿ ೫ ಭಾರೀ ಪ್ರಳಯ ಮತ್ತು ಪ್ರಳಯದ ನಂತರದ ಸಮತೋಲನ ಘಟ್ಟ ಸಂಭವಿಸಿದ್ದು ನಾವೀಗ ೫ನೇ ಪ್ರಳಯ ಮತ್ತು ೬ನೇ ಪ್ರಳಯದ ಮಧ್ಯದ ಸಮತೋಲನ ಘಟ್ಟ (ಇಂಟ್ರಾಗ್ಲೇಸಿಯಲ್)ದಲ್ಲಿ ಇದ್ದೇವೆ. ಭೂಮಿಯ ತಾಪಮಾನ ಕ್ರಮೇಣ ಏರುತ್ತಾ ಏರುತ್ತಾ ಮಳೆ ಕಡಿಮೆಯಾಗಿ ನೀರಿನ ಮೂಲ ಬತ್ತುತ್ತ ಒಂದು ಮಟ್ಟ ತಲುಪಿದಂತೆ ತಾಪಮಾನ ಇಳಿಯುತ್ತಾ ಜಗತ್ತು ಸಂಪೂರ್ಣ ಹಿಮ ಕವಚದಲ್ಲಿ ಬಂದಿಯಾಗುವ ಜಾಗತಿಕ ಪ್ರಕ್ರಿಯೆ ಈ ಮಹಾ ಪ್ರಳಯ. ಪ್ರತಿ ಪ್ರಳಯದಲ್ಲೂ ಒಂದಿಷ್ಟು ಜೀವಿಗಳ ಅವಸಾನ, ಹೊಸ ಜೀವಿಗಳ ವಿಕಾಸ ಆಗಿದೆ. ಇಂದು ನಾವು ನೋಡುತ್ತಿರುವ ಜಾಗತಿಕ ತಾಪಮಾನ ಮತ್ತು ಮಾರುತಗಳ ಬದಲಾವಣೆ, ಬರಗಾಲ, ಅತಿವೃಷ್ಟಿ ಇತ್ಯಾದಿ ಬದಲಾವಣೆಗಳು ನಿಸರ್ಗದತ್ತವಾಗಿ ಆಗದೆ, ಅವು ನಾವೇ ಮಾಡಿಕೊಂಡ ಅನಾಹುತಗಳು.

ಯುರೋಪಿನ ಪರಿಸರ ನಾಶದ ಬಗ್ಗೆ ಮೊದಲಿಗೆ ಧ್ವನಿ ಎತ್ತಿದ್ದು ಹತ್ತೊಂಬತ್ತನೆಯ ಶತಮಾನದ ಕವಿಗಳು ಮತ್ತು ಚಿಂತಕರು. ತಮ್ಮ ಕವನಗಳ ಮೂಲಕ, ಲೇಖನಗಳ ಮೂಲಕ ಪರಿಸರ ಜಾಗೃತಿಗೆ ಮುಂದಡಿಯಿಟ್ಟರು. ವಿಲಿಯಂ ವರ್ಡ್ಸ್‌ವರ್ತ್ ಎಂಬ ಆಂಗ್ಲ ಸಾಹಿತ್ಯದ ರೊಮ್ಯಾಂಟಿಕ್ ಕವಿ ಪರಿಸರದ ಕುರಿತಾಗಿನ ಕಾವ್ಯಧಾರೆಗೆ ಪ್ರಸಿದ್ಧರು.

ಪರಿಸರ ಹೋರಾಟಗಳು ಹಲವು ಮಜಲಿನವು. ಒಂದು ಪ್ರದೇಶದ ಗಣಿಗಾರಿಕೆ ಅಥವಾ ಬದಲಾದ ವಾತಾವರಣದ ಕುರಿತಾದ ಹೋರಾಟದಿಂದ ಹಿಡಿದು ಸಂಪೂರ್ಣ ಪರಿಸರ ಹೋರಾಟದವರೆಗೂ ಸ್ಥಳೀಯ ಮಟ್ಟದಿಂದ ಅಂತರರಾಷ್ಟ್ರೀಯ ಮಟ್ಟದವರೆಗೆ ಹೋರಾಟ ವ್ಯಾಪ್ತಿ ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಹಿರಿದಾಗಿದೆ. ಇದು ಸಾಮಾನ್ಯ ಜನರು ತಮ್ಮ ಜೀವನಾಧಾರವಾದ ಅರಣ್ಯ ಹಕ್ಕುಗಳಿಗಾಗಿ ಹೋರಾಡುವುದು (ಉದಾಹರಣೆ : ಆದಿವಾಸಿಗಳನ್ನು ಒಕ್ಕಲೆಬ್ಬಿಸುವುದರ ವಿರುದ್ಧದ ಹೋರಾಟ), ಸ್ಥಳೀಯ ಮಟ್ಟದ ಪರಿಸರ ಬಿಕ್ಕಟ್ಟಿಗೆ ಹೊರಡುವ ಸಂಘಟನೆಗಳು (ಉದಾಹರಣೆ : ಎಂಡೋಸಲ್ಫಾನ್ ವಿರುದ್ಧದ ಹೋರಾಟ, ಭೋಪಾಲ್ ಅನಿಲ ದುರಂತ ಸಂತ್ರಸ್ತರ ಹೋರಾಟ, ಅಣು ಕೈಗಾರಿಕೆ ವಿದ್ಯುತ್‌ಸ್ಥಾವರ ವಿರುದ್ಧದ ಹೋರಾಟ, ಅಣೆಕಟ್ಟು, ನದಿ ತಿರುವು ಇತ್ಯಾದಿ), ಸರ್ಕಾರೇತರ ಸಂಸ್ಥೆಗಳು (ಉದಾಹರಣೆ : ಪರಿಸರ ಅಧ್ಯಯನ, ವಾತಾವರಣದ ಅಧ್ಯಯನ ಸರ್ಕಾರಕ್ಕೆ ವರದಿ ಇತ್ಯಾದಿ), ಸರ್ಕಾರಗಳು (ಉದಾಹರಣೆ : ಕಾನೂನು, ನಿಯಮ, ಪ್ರತ್ಯೇಕ ಪ್ರಾಧಿಕಾರ, ನ್ಯಾಯಮಂಡಳಿ ಸ್ಥಾಪನೆ, ಅಂತರರಾಷ್ಟ್ರೀಯ ಒಪ್ಪಂದಗಳಿಗೆ ಸಹಿ ಇತ್ಯಾದಿ), ಅಂತರರಾಷ್ಟ್ರೀಯ ಮಟ್ಟದ ಪರಿಸರ ಸಂರಕ್ಷಣೆಯ ವೇದಿಕೆ, ಹೀಗೆ ಹತ್ತು ಹಲವು ಜನರನ್ನು ಹೊಂದಿರುವ ಹೋರಾಟದ ಸಾಗರ.

**ಭಾರತ ಉಪಖಂಡದಲ್ಲಿ ಪರಿಸರ ನಾಶ, ಸಂರಕ್ಷಣೆ ಮತ್ತು ಜನರ ಹೋರಾಟಗಳು**

ಈ ದೇಶದ ತತ್ವಜ್ಞಾನಿಗಳು ಬಹಳ ಹಿಂದೆಯೇ ಪರಿಸರ ಸಂರಕ್ಷಣೆಯ ಕುರಿತಾಗಿನ ತಮ್ಮ ಕಾಳಜಿಯನ್ನು, ಸಂರಕ್ಷಣೆಯ ಅನಿವಾರ್ಯತೆಯನ್ನು ಗ್ರಂಥಗಳ ಮೂಲಕ ಬೋಧನೆಯ ಮೂಲಕ ತಿಳಿಸಿರುವುದು ನಮಗೆ ಲಭ್ಯವಿದೆ. ಅಗ್ನಿಪುರಾಣ, ಬುದ್ಧನ ಬೋಧನೆ, ಮೌರ್ಯರ ಆಡಳಿತ ನಂತರ ಮೊಘಲರು ಪರಿಸರ ಸಂರಕ್ಷಣೆಯ ಕುರಿತಾಗಿನ ವಿಚಾರಕ್ಕೆ ಮನ್ನಣೆ ಗಳಿಸಿದ್ದಾರೆ. ಈ ದೇಶದಲ್ಲಿ ಆಧುನಿಕ ಮಾನವರ ಹಿಂದಿನ, ಅರೆ ಮಾನವರ ಇತಿಹಾಸ ಸುಮಾರು ಹದಿನೇಳು ಲಕ್ಷ ವರ್ಷಗಳ ಹಿಂದಕ್ಕೆ ಹೋಗುತ್ತದೆ, ಇಲ್ಲಿಯೇ ವಿಕಾಸವಾದ ಮತ್ತು ಆಫ್ರಿಕಾ ಖಂಡದಿಂದ ವಲಸೆ ಬಂದ ಜನಾಂಗಗಳು ಇದರಲ್ಲಿ ಸೇರಿದ್ದಾರೆ. ಸಮಭಾಜಕ ವೃತ್ತದ ಮೇಲೆ ಮತ್ತು ಕೆಳಗಿನ ೨೩.೫ ಡಿಗ್ರಿ ಪ್ರದೇಶ ಸೂರ್ಯನ ಸಂಪೂರ್ಣ ಶಕ್ತಿಯನ್ನು ಪಡೆದು ಕೊಳ್ಳುತ್ತದೆ. ಈ ಪ್ರದೇಶದಲ್ಲಿ ಉತ್ತಮ ಮಳೆ, ದಿನದ ೧೨ ಗಂಟೆ ಸಮೃದ್ಧ ಬೆಳಕು, ಇದರ ಕಾರಣ ವೈವಿಧ್ಯಮಯ ಜೀವರಾಶಿ, ನೈಸರ್ಗಿಕ ಸಂಪತ್ತು, ಮಳೆಕಾಡು ಇವೆ. ಆದಿವಾಸಿಗಳು ಈ ಪ್ರದೇಶದ ಪರಿಸರ ಸಂರಕ್ಷಣೆಯನ್ನೇ ತಮ್ಮ ಜೀವನದ ಭಾಗವಾಗಿ ಸ್ವೀಕರಿಸಿದ್ದಾರೆ. ಕಾನ್ ದೇವತೆಗಳು, ಕೆಲವು ಪ್ರಾಣಿಗಳನ್ನು, ಮರವನ್ನು ತಮ್ಮ ಹಿರಿಯ ತಲೆಮಾರೆಂದು ಗುರುತಿಸಿ ಅದರ ಸಂರಕ್ಷಣೆ, ಹಲವಾರು ಆಚರಣೆಗಳು ಅವರ ಜೀವನದಲ್ಲಿ ಮುಖ್ಯ ಅಂಶಗಳು. ತಮ್ಮ ಅಗತ್ಯಕ್ಕೆ ತಕ್ಕಂತೆ ಮಿತ ಬಳಕೆಯಿಂದ ಅರಣ್ಯ ಉತ್ಪನ್ನಗಳನ್ನು ಬಳಸುತ್ತಾ ಉಳಿಸುತ್ತಾ ಬಂದವರಿಗೆ ಮೊದಲ ಆಘಾತ ಆದದ್ದು ಬ್ರಿಟಿಷ್ ವಸಾಹತುಶಾಹಿ ಭಾರತಕ್ಕೆ ಬಂದಾಗ. ವ್ಯಾಪಾರಕ್ಕಾಗಿ ಬಂದ ಬ್ರಿಟಿಷರಿಗೆ ಇಲ್ಲಿನ ಅರಣ್ಯೋತ್ಪನ್ನದ ಬಗ್ಗೆ ಸಹಜವಾಗಿಯೇ ಆಸಕ್ತಿ ಇತ್ತು, ಸುಮಾರು ನೂರು ವರುಷಗಳ ಕಾಲ ನೇರವಾಗಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಖಾಸಗಿ ಸ್ವತ್ತಿನಂತೆ ಇದ್ದ ಬಹುಪಾಲು ಭಾರತ ಉಪಖಂಡದ ಸಮೃದ್ಧ ಅರಣ್ಯದ ಉತ್ಪನ್ನಗಳು ಹಡಗು ಕಟ್ಟಲು, ರೈಲು, ಮರಮುಟ್ಟು, ಇದ್ದಿಲು, ಕಾರ್ಖಾನೆ ಕಚ್ಚಾವಸ್ತು, ಉರುವಲು, ಕೃಷಿ ವಿಸ್ತರಣೆ ಇತ್ಯಾದಿಗಳಿಗೆ ಬರಿದಾಗುವುದು ಶುರುವಾಯಿತು. ಕೈಗಾರಿಕಾ ಕ್ರಾಂತಿಯಿಂದ ತಯಾರುಗೊಂಡ ರೈಲು ನಮ್ಮ ದೇಶ ಪ್ರವೇಶಿಸಿದ್ದು ಈ ಲೂಟಿಯ ಉದ್ದೇಶಕ್ಕೆ. ರೈಲ್ವೆ ಹಳಿಯ ಸ್ಲೀಪರ್ ಕೆಲಸಕ್ಕೆ ನಿತ್ಯಹರಿದ್ವರ್ಣದ ಗಟ್ಟಿಮುಟ್ಟು ಮರಗಳಾದ "ಬಲಿಗೆಯಂತಹ" ಮರಗಳು ಬೃಹತ್ ಪ್ರಮಾಣದಲ್ಲಿ ಕಡಿಯಲ್ಪಟ್ಟವು. ಉಪಖಂಡದ ಅಧಿಕಾರ ಕಂಪನಿ ಕಡೆಯಿಂದ ಬ್ರಿಟಿಷ್ ಸರ್ಕಾರದ ವಶಕ್ಕೆ ಕ್ರಮೇಣ ಹಸ್ತಾಂತರವಾಗುವ ಸಮಯದಲ್ಲೇ ಬ್ರಿಟನ್‌ನಲ್ಲಿ ಕೈಗಾರಿಕಾ ಕ್ರಾಂತಿಯಿಂದ ಉಂಟಾದ ವಾಯುಮಾಲಿನ್ಯದ ಕುರಿತು ಜನ ಹೋರಾಟ ನಡೆಯಿತು. ಆ ಪರಿಣಾಮವೇ ೧೮೬೩ರಲ್ಲಿ ಅಲ್ಕಲೀ ಕಾನೂನು ಜಾರಿಗೆ ಬಂತು.

ಪ್ರಪಂಚದಲ್ಲೇ ಮೊದಲ ಬಾರಿಗೆ ಅರಣ್ಯ ಇಲಾಖೆಯನ್ನು ೧೮೬೫ರ ಹೊತ್ತಿಗೆ ಭಾರತದಲ್ಲಿ ಸ್ಥಾಪಿಸಲಾಯಿತು. ಇದಕ್ಕೂ ಮುಂಚೆ ೧೮೦೦ರ ಹೊತ್ತಿಗೆ ಕಂಪನಿ ಸರ್ಕಾರ ಮಲಬಾರ್ ಪ್ರದೇಶ ಇತ್ಯಾದಿ ಕಡೆಗಳಲ್ಲಿ ಬೆಲೆ ಬಾಳುವ ತೇಗ ಸಸಿ ನೆಡಲು ಪ್ರಯತ್ನ ಆರಂಭಿಸಿತು. "ವೈಜ್ಞಾನಿಕ ತಳಹದಿಯ" ಮೇಲೆ ಪರಿಸರ ಸಂರಕ್ಷಣೆ ಮಾಡುವಲ್ಲಿ ಭಾರತ ಎಲ್ಲಾ ದೇಶಗಳಿಗಿಂತ ಮುಂದೆ ಇತ್ತು ಎಂದು, ೧೮೪೨ರಲ್ಲಿ ಮದರಾಸು ಕಂದಾಯ ಇಲಾಖೆ ಸ್ಥಳೀಯವಾಗಿ ಅರಣ್ಯ ಸಂರಕ್ಷಣೆ ಕಾರ್ಯವನ್ನು "ಸಸ್ಯಶಾಸ್ತ್ರಜ್ಞ ಅಲೆಕ್ಸಾಂಡರ್ ಗಿಬ್ಸನ್" ನೇತೃತ್ವದಲ್ಲಿ ಪರಿಸರ ಸಂರಕ್ಷಣೆಯ ಕಾರ್ಯವನ್ನು ಇತಿಹಾಸದಲ್ಲಿ ದಾಖಲಿಸಲಾಗಿದೆ. ಯಾವ ಅರಣ್ಯ ಸಂರಕ್ಷಣೆಯ ನೆಪದಲ್ಲಿ ಕಾನೂನುಗಳು ಬಂದವೋ, ಅರಣ್ಯ ಇಲಾಖೆ ಹುಟ್ಟಿತೋ, ಅರಣ್ಯವನ್ನು ಜನರಿಂದ ಕಿತ್ತುಕೊಂಡು ಕಂಪನಿ / ಸರ್ಕಾರದ ಕಾನೂನುಬದ್ಧ ಮತ್ತು ಏಕಸ್ವಾಮ್ಯ ಲೂಟಿಗೆ ರಹದಾರಿ ನಿರ್ಮಿಸಿತು. ಬ್ರಿಟಿಷರು ಅರಣ್ಯದ ಬಹುಪಾಲನ್ನು ತಮ್ಮಲ್ಲೇ ಇಟ್ಟುಕೊಂಡು ಉಳಿದವನ್ನು ತಮ್ಮ ಸಾಮಂತ ರಾಜರು, ಜಮೀನ್ದಾರರ ಸುಪರ್ದಿಗೆ ಬಿಟ್ಟಿತು. ಸರ್ಕಾರ ತಂದ ಅರಣ್ಯ ಇಲಾಖೆ, ಅರಣ್ಯ ಕಾಯ್ದೆ (೧೮೬೫, ೧೮೭೮, ೧೯೨೭), ಭೂ ಸ್ವಾಧೀನ ಕಾಯ್ದೆ (೧೮೯೪) ಇವೆಲ್ಲವೂ ಕಾಡಿನ ಮತ್ತು ನಾಡಿನ ಸಂಪೂರ್ಣ ಅಧಿಕಾರವನ್ನು ಬ್ರಿಟಿಷ್ ಸರ್ಕಾರಕ್ಕೆ ನೀಡಿತು. ಕಾಡಿನ ಉತ್ಪನ್ನಗಳ ಬಳಕೆ ಮೇಲೆ ನಿಯಂತ್ರಣ, ಮರ ಕಡಿಯಲು ಸರ್ಕಾರದ ಅನುಮತಿ, ಸಾಗುವಾನಿ, ನೀಲಗಿರಿ, ಅಕೇಶಿಯ ಇತ್ಯಾದಿ ಏಕ ಅರಣ್ಯ ಕೃಷಿ, ಸಾರ್ವಜನಿಕ ಉದ್ದೇಶವೆಂದು ಹೇಳಿ ಮರಗಳ ಕಡಿತಲೆ ಇತ್ಯಾದಿ ಅಂಶಗಳನ್ನು ಒಳಗೊಂಡಿತ್ತು (ಅಕೇಶಿಯ, ನೀಲಗಿರಿ, ಅಲ್ಲಲ್ಲಿ ಕಾಣಸಿಗುವ ಸಾಗುವಾನಿ (ತೇಗ) ಏಕ ಪ್ರಕಾರ ಅರಣ್ಯ ಕೃಷಿ ೧೮೫೫ರಲ್ಲಿ ಲಾರ್ಡ್ ಡಾಲ್ಹೌಸಿ ಮಲಬಾರ್ ಪ್ರದೇಶದಲ್ಲಿ ಶುರು ಮಾಡಿದ ಕಾರ್ಯಕ್ರಮ). ಗಿರಿಜನರ ಕೃಷಿ ಸಂಸ್ಕೃತಿಯ ಭಾಗವಾಗಿದ್ದ "ವರ್ಗಾವಣೆ ಕೃಷಿಯನ್ನು" ೧೮೬೦ರಲ್ಲಿ ಬ್ರಿಟಿಷ್ ಆಧಿಪತ್ಯ ನಿಷೇಧ ಮಾಡಿತು.

ಸರ್ಕಾರಗಳು ಒಂದು ಕಡೆ ಬಂಡವಾಳಶಾಹಿಯನ್ನು ಬೆಂಬಲಿಸಿದರೆ, ಮತ್ತೊಂದು ಕಡೆ ಒತ್ತಡ ಹೆಚ್ಚಾದಾಗ ಪರಿಸರ ಸಂರಕ್ಷಣೆ ನಾಟಕ ಕಾನೂನು ಮಾಡುವ ಮೂಲಕ ಮಾಡುವುದು ನಡೆದೇ ಬಂದಿದೆ. ಅದರಲ್ಲಿ ಮುಖ್ಯವಾದವು ೧೮೫೩ರ ಸಮುದ್ರ ತೀರದ (ಬಾಂಬೆ ಮತ್ತು ಕೊಲಾಬಾ) ಶುಚಿತ್ವ ಕಾಯ್ದೆ, ೧೮೫೭ರ ಓರಿಯೆಂಟಲ್ ಅನಿಲ ಕಂಪನಿ ಕಾಯ್ದೆ, ೧೮೬೦ರ ಭಾರತೀಯ ದಂಡಸಂಹಿತೆ, ೧೯೦೫, ೧೯೧೨ರ ಬಂಗಾಳದ

ಮತ್ತು ಬಾಂಬೆ ಹೊಗೆ ಶುದ್ಧತೆಯ ಕಾನೂನು. ಸ್ವತಂತ್ರ ಭಾರತದಲ್ಲಿ ಬ್ರಿಟಿಷರ ಕಾನೂನು, ಕಾಯ್ದೆಯನ್ನೇ ಮುಂದುವರೆಸಿಕೊಂಡು ಬಂದ ಭಾರತದ ಸರ್ಕಾರಗಳು ಮೊದಲ ಬಾರಿಗೆ ೧೯೭೬ರಲ್ಲಿ ಸಂವಿಧಾನಕ್ಕೆ ತಿದ್ದುಪಡಿ ತರುವ ಮೂಲಕ ಸರ್ಕಾರವೇ ಪರಿಸರವನ್ನು ಉತ್ತಮಗೊಳಿಸುವುದು ಮತ್ತು ಪರಿಸರ ಸಂರಕ್ಷಣೆ ಮಾಡುವುದು, ಕಾಡಿನ ಮತ್ತು ವನ್ಯಜೀವಿಗಳ ರಕ್ಷಣೆ ಮಾಡುವುದು ಎಂದು ತಿದ್ದುಪಡಿ ತಂದಿತು. ೧೯೭೪ರಲ್ಲಿ ನೀರಿನ ಮಾಲಿನ್ಯ ನಿಯಂತ್ರಣ ಕಾಯ್ದೆ, ೧೯೮೦ರ ಪರಿಸರ ಸಂರಕ್ಷಣೆ ಕಾಯ್ದೆ, ೧೯೮೧ರ ವಾಯುಮಾಲಿನ್ಯ ತಡೆ ಕಾಯ್ದೆ, ಭೋಪಾಲ್ ಅನಿಲ ದುರಂತದ ನಂತರ ೧೯೮೫ರಲ್ಲಿ ಪ್ರತ್ಯೇಕ ಪರಿಸರ ಮತ್ತು ಅರಣ್ಯ ಸಚಿವಾಲಯ, ತರುವಾಯ ೧೯೮೬ರ ಪರಿಸರ ಸಂರಕ್ಷಣಾ ಕಾಯ್ದೆ ಹಾಗೂ ೨೦೦೦ದ ಶಬ್ದ ಮಾಲಿನ್ಯ ತಡೆ ಮತ್ತು ನಿಯಂತ್ರಣ ಕಾಯ್ದೆ ಇತ್ಯಾದಿ ಸರ್ಕಾರದ ಮಟ್ಟದ ಪರಿಸರ ಸಂರಕ್ಷಣೆಯ ವಿವಿಧ ಕ್ರಮಗಳು.

ಪರಿಸರ ಸಂರಕ್ಷಣೆಗೆ ಸರ್ಕಾರ, ಅಂತರರಾಷ್ಟ್ರೀಯ ಮಟ್ಟದ ಪ್ರಯತ್ನದ ಜೊತೆಗೆ ಎರಡು ಗುಂಪಿನ ಪರಿಸರವಾದಿಗಳು ಕೆಲಸ ಮಾಡುತ್ತಿದ್ದಾರೆ. ಮೊದಲ ಗುಂಪಿನ ಪರಿಸರವಾದಿಗಳು ನಗರಕ್ಕೆ ಸೀಮಿತವಾದ ಆಲೋಚನೆ ಹೊಂದಿದ್ದು, ಪರಿಸರದ ಮೊದಲ ಶತ್ರು ಮಾನವ ಹಾಗಾಗಿ ಸಂರಕ್ಷಣೆಗೆ ಮಾನವ, ನೈಸರ್ಗಿಕ ಪರಿಸರದಲ್ಲಿ ಇರಲೇಕೂಡದು, ಕಾಡನ್ನು ಜನರಹಿತ ವಾಗಿಸಿ, ದೂರದರ್ಶನದಲ್ಲಿ ಅಥವಾ ಪ್ರವಾಸೋದ್ಯಮದ ಮೂಲಕ ಆಗಾಗ ಹಣ ಕೊಟ್ಟು ನೋಡುವ ಮಾರುಕಟ್ಟೆ ಎಂದು ಪರಿಗಣಿಸುವ ಗುಂಪು. ಇವರಿಗೆ ಜನರ ಹೋರಾಟದಲ್ಲಿ ನಂಬಿಕೆ ಇಲ್ಲ, ಆದರೂ ಇವರ ಪ್ರಭಾವ ಸರ್ಕಾರದ ಮಟ್ಟದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚಿದೆ. ಏಕೆಂದರೆ ಪರಿಸರ ನಾಶದ ಬಂಡವಾಳಶಾಹಿಗಳು ಅದಕ್ಕೆ ಜೊತೆಯಾಗುವ ಸರ್ಕಾರಗಳ ನಡುವೆ ಕೊಂಡಿಯಂತೆ ಈ ಪರಿಸರವಾದಿಗಳು ಇದ್ದಾರೆ. ಇವರು ಸರ್ಕಾರದ ಪರಿಸರ ಕುರಿತಾದ ಕಾನೂನು ರೂಪಿಸುವಲ್ಲಿ ಮುಖ್ಯ ಪಾತ್ರವಹಿಸುವುದಲ್ಲದೆ, ಉನ್ನತ ಮಟ್ಟದ ಸಮಿತಿಗಳಲ್ಲಿ ಸದಸ್ಯರಾಗಿದ್ದುಕೊಂಡು ಅರಣ್ಯ ಇಲಾಖೆ ಮತ್ತು ಸರ್ಕಾರವನ್ನು ತಮ್ಮ ಚಿಂತನೆಯತ್ತ ಪ್ರಭಾವಿಸುವ ಕೆಲಸ ಮಾಡುತ್ತಾರೆ.

"ಭೂಮಿಯ ಆರೋಗ್ಯಕ್ಕೆ ಎಲ್ಲೆಡೆ ಅರಣ್ಯ ಮತ್ತು ಜೀವವೈವಿಧ್ಯ ಇರುವ ಅವಶ್ಯಕತೆ ಇಲ್ಲ; ಬದಲಾಗಿ, ಕೆಲವೇ ಸೀಮಿತ (ಸೂಕ್ಷ್ಮ ಪರಿಸರಗಳು) ಪ್ರದೇಶದಲ್ಲಿ ಇಡಿಯ ಪ್ರಪಂಚದ ಸಮತೋಲನಕ್ಕೆ ಬೇಕಾಗುವಷ್ಟು ಕಾಡು ಸಂರಕ್ಷಿಸಿ ಇಟ್ಟರೆ ಸಾಕು ಎಂಬ ವಾದವನ್ನು ಮುಂದಿಟ್ಟು ಶ್ರೀಮಂತ ರಾಷ್ಟ್ರಗಳು ನಮ್ಮ ದೇಶದ ಜೀವನ ಶೈಲಿಯನ್ನು ಬದಲಾಯಿಸಲು ಸಾಧ್ಯವಿಲ್ಲ, ಬದಲಾಗಿ ಇನ್ನೂ ಆಧುನಿಕತೆಗೆ ತೆರೆದುಕೊಳ್ಳುತ್ತಿರುವ ಭಾರತದಂತಹ ದೇಶಕ್ಕೆ ಹಣ ಕೊಡುತ್ತೇವೆ, ನೀವು ಅರಣ್ಯ ಪ್ರದೇಶದಿಂದ ಜನರನ್ನು ಬಿಡಿಸಿ ಸಂರಕ್ಷಣೆ ಮಾಡಿ" ಎಂದು ಸರ್ಕಾರಕ್ಕೆ ಮತ್ತು ಇಂತಹ ವಾದವನ್ನು ಪುರಸ್ಕರಿಸುವ ಈ ಪರಿಸರವಾದಿಗಳಿಗೆ ಹಣ ಕೊಡುತ್ತಿದೆ. ಕೇವಲ ದೇಶಗಳು ಮಾತ್ರವಲ್ಲದೆ, ಪರಿಸರ ವಿನಾಶದಲ್ಲಿ ಮುಂಚೂಣಿಯಲ್ಲಿರುವ ಕೆಲವು ತೈಲ ಕಂಪನಿಗಳು, ಗಣಿಗಾರಿಕೆಯ ಕಂಪನಿಗಳು, ಸಿದ್ಧವಸ್ತು ತಯಾರಿಕೆ ಮಾಡುವ ಕಂಪನಿಗಳು "ಸಾಮಾಜಿಕ ಜವಾಬ್ದಾರಿ" ಎಂದು ತಾವು ಕೂಡ ಪರಿಸರ ಸ್ನೇಹಿ ಎಂದು ತೋರಿಸಿಕೊಳ್ಳಲು ಈ ಪರಿಸರವಾದಿಗಳಿಗೆ ಹಣ ಕೊಡುತ್ತಿವೆ. ಅದಕ್ಕಾಗಿಯೇ ಸಮಭಾಜಕ ವೃತ್ತದ ಬಳಿಯ ರಾಷ್ಟ್ರಗಳಲ್ಲಿ ಅತಿ ಹೆಚ್ಚಿನ ರಾಷ್ಟ್ರೀಯ ಉದ್ಯಾನಗಳು, ಸಂರಕ್ಷಿತ ಅರಣ್ಯ ಇತ್ಯಾದಿ ಜನರನ್ನು ಒಕ್ಕಲೆಬ್ಬಿಸಿ ಸ್ಥಾಪಿಸಲಾಗಿದೆ. ಅರಣ್ಯ ಪ್ರದೇಶದಲ್ಲಿ ರೆಸಾರ್ಟ್, ಸಫಾರಿ ಇತ್ಯಾದಿ ಪ್ರವಾಸೋದ್ಯಮ ಸಂಬಂಧಿ ಚಟುವಟಿಕೆಗಳನ್ನು ದೊಡ್ಡ ಪ್ರಮಾಣದಲ್ಲಿ ಈ ಪರಿಸರವಾದಿಗಳ ಸಹಕಾರ ದೊಂದಿಗೆ ಮಾಡಲಾಗುತ್ತಿದೆ. ಇಕೊ ಟೂರಿಸಂ, ಮೆಡಿಸಿನಲ್ ಪ್ಲ್ಯಾಂಟ್ ಕೋರ್ ಏರಿಯಾ, ಇತ್ಯಾದಿ ಉದ್ದೇಶಗಳಿಂದ ನಮ್ಮ ದೇಶದಲ್ಲಿ ೧೦೩ ರಾಷ್ಟ್ರೀಯ ಉದ್ಯಾನಗಳು, ದೇಶದ ಒಟ್ಟೂ ಭೂಭಾಗದ ೧.೨೩% ಪ್ರದೇಶದಲ್ಲಿ ಸ್ಥಾಪಿಸಲಾಗಿದೆ. ಇದರ ಜೊತೆಗೆ ೫೧೫ ವನ್ಯಜೀವಿ ಸಂರಕ್ಷಿತ ಪ್ರದೇಶಗಳನ್ನು ಅಳಿವಿನಂಚಿನಲ್ಲಿರುವ ಪ್ರಭೇದಗಳ ರಕ್ಷಣೆಯ ಹೆಸರಿನಲ್ಲಿ ಸ್ಥಾಪಿಸಲಾಗಿದೆ. ದೂರದರ್ಶನ ವಾಹಿನಿಗಳಾದ ನ್ಯಾಷನಲ್ ಜಿಯೋಗ್ರಫಿ, ಡಿಸ್ಕವರೀ, ಅನಿಮಲ್ ಪ್ಲ್ಯಾನೆಟ್ ಇತ್ಯಾದಿ ವಾಹಿನಿಗಳಲ್ಲಿ ತೋರಿಸುವ ಬಹುತೇಕ ಎಲ್ಲ ಸಾಕ್ಷ್ಯಚಿತ್ರಗಳು

ಇಂತಹ ರಕ್ಷಿತಾರಣ್ಯ ಪ್ರದೇಶದಲ್ಲೇ ಚಿತ್ರೀಕರಣ ಗೊಂಡಿವೆ. ಕಳೆದ ವರ್ಷ "ಪರಿಸರವಾದಿ ವಾಲ್ಮೀಕಿ ಥಾಪರ್" ಅವರು ಸರ್ಕಾರಕ್ಕೊಂದು ವರದಿ ಸಲ್ಲಿಸಿದ್ದಾರೆ, ಅದರಲ್ಲಿ ನಮ್ಮ ದೇಶದಲ್ಲೂ ಖಾಸಗಿ ಒಡೆತನದ ವನ್ಯಜೀವಿಧಾಮವನ್ನು ವಿಶೇಷ ಆರ್ಥಿಕ ವಲಯದಂತೆ "ವಿಶೇಷ ವನ್ಯಜೀವಿ ವಲಯ"ವನ್ನು ಸ್ಥಾಪಿಸಿ ಅಲ್ಲಿ ಖಾಸಗಿ ಹೂಡಿಕೆ, ಸಂಶೋಧನೆ, ಪ್ರವಾಸೋದ್ಯಮ ಇತ್ಯಾದಿ ಸೌಕರ್ಯ ಮಾಡಿಕೊಡುವ ಪ್ರಸ್ತಾವನೆ ಇದೆ. ಪರಿಸರ ಸಂರಕ್ಷಣೆಯಲ್ಲೂ ಬಂಡವಾಳಶಾಹಿ ಶಕ್ತಿಗಳು ಕಡಿಮೆ ಮಾಲಿನ್ಯ ಮಾಡುವ ದೇಶಗಳಿಂದ ಅಥವಾ ಕೈಗಾರಿಕೆಯಿಂದ ಹೆಚ್ಚು ಮಾಲಿನ್ಯ ಮಾಡುವ ದೇಶಗಳು ಮತ್ತು ಕಂಪನಿಗಳು "ಕಾರ್ಬನ್ ಕ್ರೆಡಿಟ್" ಎಂಬ ವ್ಯವಹಾರ ಮಾಡುವ ಮೂಲಕ ಪ್ರವೇಶಿಸಿವೆ.

ಮತ್ತೊಂದು ಗುಂಪು ಜನರ ಹೋರಾಟದಿಂದ ರೂಪುಗೊಂಡ, ಮಾನವ ಪರಿಸರದ ಒಂದು ಅಂಗ, ಮಾನವರನ್ನು ನೈಸರ್ಗಿಕ ಅರಣ್ಯದಿಂದ ಹೊರಗಿಟ್ಟು ಪರಿಸರ ಸಂರಕ್ಷಣೆ ಸಾಧ್ಯವಿಲ್ಲ, ಬದಲಾಗಿ ಅವರನ್ನೊಳಗೊಂಡ ಒಗ್ಗೂಡಿದ ಹೋರಾಟ ಆಗಬೇಕು ಹಾಗೂ ಪರಿಸರ ನಾಶ ಹೆಚ್ಚಾಗಿ ಆಗಿರುವುದು ನಗರೀಕರಣ, ಕೈಗಾರಿಕೀಕರಣ ಇತ್ಯಾದಿ ಆಧುನಿಕ ಚಿಂತನೆಯಿಂದಲೇ ಹೊರತು ಪರಿಸರಸ್ನೇಹಿ ಸಹಬಾಳ್ವೆ, ಸಂಸ್ಕೃತಿ ಇರುವ ರೈತಾಪಿಯಿಂದ ಅಲ್ಲ ಎಂದು ಹೇಳುವ ಗುಂಪು. ಇವರು ಪರಿಸರಕ್ಕೆ ಮಾರಕವಾದ ಪರಿಸರ ಸೂಕ್ಷ್ಮ ಪ್ರದೇಶ ದಲ್ಲಿನ ಗಣಿಗಾರಿಕೆ (ತುಂಗ-ಭದ್ರಾ ಉಳಿಸಿ ಹೋರಾಟ), ಅಣೆಕಟ್ಟು ನಿರ್ಮಾಣ (ನರ್ಮದಾ ಉಳಿಸಿ ಹೋರಾಟ), ಅರಣ್ಯದ ಖಾಸಗೀಕರಣ ಆದಿವಾಸಿಗಳ ಒಕ್ಕಲೇಳಿಸುವುದರ ವಿರುದ್ಧ (ಕುದುರೆಮುಖ ರಾಷ್ಟ್ರೀಯ ಉದ್ಯಾನ ವಿರೋಧಿ ಹೋರಾಟ), ಮಾಲಿನ್ಯ ವಿರೋಧಿ ಹೋರಾಟ (ಎಮ್.ಆರ್.ಪಿ.ಎಲ್., ಬಳ್ಳಾರಿ ಗಣಿಗಾರಿಕೆಯ ವಿರುದ್ಧ ಹೋರಾಟಗಳು, ಕೈಗಾ, ಕುಂದಕೋಳಂ ಅಣುಸ್ಥಾವರ, ಉಷ್ಣ ವಿದ್ಯುತ್‌ಸ್ಥಾವರ ವಿರೋಧಿ ಹೋರಾಟ) ಇತ್ಯಾದಿ.

ಮುಂದುವರಿದ ರಾಷ್ಟ್ರಗಳ ಎರಡು ಶತಮಾನಕ್ಕೂ ಮೀರಿದ ಪರಿಸರ ನಾಶದ ಕಾರಣ ಇಂದು ಜಗತ್ತು ಸಂದಿಗ್ಧ ಪರಿಸ್ಥಿತಿಯನ್ನು ಎದುರಿಸುತ್ತಿದೆ. ವಸಾಹತುಶಾಹಿ ಶಕ್ತಿಗಳ ಕೈಯಲ್ಲಿ ಶೋಷಣೆ ಅನುಭವಿಸಿದ ಭಾರತದಂತಹ ರಾಷ್ಟ್ರಗಳು ತಮ್ಮಲ್ಲಿ ಇನ್ನೂ ಉಳಿದಿರುವ ಅರಣ್ಯ ಸರಳ ಜೀವನಶೈಲಿಯ ಕಾರಣ ಭೂಮಿಯ ರಕ್ಷಣೆಗೆ ಮತ್ತೆ ತ್ಯಾಗ ಮಾಡುವಂತಹ ಪರಿಸ್ಥಿತಿ ನಮ್ಮಲ್ಲಿದೆ. ಅದಕ್ಕಾಗಿ ಅರಣ್ಯಗಳನ್ನು ಸಂರಕ್ಷಣೆಗಾಗಿ ಜನರಹಿತರನ್ನಾಗಿಸುವುದು ಅಥವಾ ದೇಶದ ಅಭಿವೃದ್ಧಿ ಹೆಸರಿನಲ್ಲಿ ಮೊದಲು ಜೀವನ ಕಳೆದುಕೊಳ್ಳುವುದು ದೇಶದ ಆದಿವಾಸಿಗಳು. ಆದಿವಾಸಿಗಳು ಈ ದೇಶದಲ್ಲಿ ಬ್ರಿಟಿಷ್ ಆಧಿಪತ್ಯದ ವಿರುದ್ಧ ಹೋರಾಡಿದವರಲ್ಲಿ ಮೊದಲಿಗರು. ೧೭೮೦ರಲ್ಲಿ ಬಾಬ ತಿಲ್ಕಾ ಮಂಝಿ ಬ್ರಿಟಿಷರ ವಿರುದ್ಧ ಬಂಡಾಯ ನಡೆಸಿ ಗಲ್ಲುಶಿಕ್ಷೆಗೆ ಗುರಿಯಾದರು. ನಂತರ ಸಿಧೋ ಕಾನ್ಹು, ಬಿರ್ಸಾ ಮುಂಡ, ಫುಲೋ ಝನೋ, ನೀಲಾಂಬರ್-ಪೀತಾಂಬರ್ ಇತರ ಆದಿವಾಸಿ ನಾಯಕರು ತಮ್ಮ ಸಮುದಾಯದೊಂದಿಗೆ ಅರಣ್ಯ ಹಕ್ಕಿಗಾಗಿ ಹೋರಾಡಿದರು. ಅರಣ್ಯ ಸಂರಕ್ಷಕ ಸಮುದಾಯದ ಮೇಲಿನ ದಾಳಿ ಅವ್ಯಾಹತವಾಗಿ ಬ್ರಿಟಿಷ್ ಸರ್ಕಾರದಲ್ಲಿ, ನಂತರ ಸ್ವಾತಂತ್ರ್ಯ ಬಂದಮೇಲೂ ನಡೆಯಿತು. ಸ್ವಾತಂತ್ರ್ಯಾನಂತರ ನೆಹರು ಪ್ರಗತಿಪರವಾದ "ಆದಿವಾಸಿ ಪಂಚಶೀಲ ತತ್ವವನ್ನು" ಪ್ರಸ್ತುತಪಡಿಸಿದರು. ಅದರ ಪ್ರಕಾರ ಆದಿವಾಸಿಗಳನ್ನು ಅವರ ಅವಸ್ಥಾನದಿಂದ ಬಿಡಿಸದೆ ಅಲ್ಲೇ ಇರಲು ಬಿಡುವುದು, ಅವರ ಸಂಸ್ಕೃತಿ ಕಲೆ ಇತ್ಯಾದಿಯನ್ನು ಗುರುತಿಸುವುದು, ಯುವ ಆದಿವಾಸಿಗಳಿಗೆ ಶಿಕ್ಷಣ ಕೊಟ್ಟು ನಾಯಕತ್ವ ಗುಣ ಬೆಳೆಸುವುದು, ಆದಿವಾಸಿಗಳ ಸರಳ ಸ್ವ-ಆಡಳಿತ ಪದ್ಧತಿಗೆ ಮನ್ನಣೆ ಮತ್ತು ಕೊನೆಯದಾಗಿ ಅವರ ಜೀವನ ಮತ್ತೆ ಸುಧಾರಣೆ ಮಾಡುವ ಧ್ಯೇಯ ಹೊಂದಿತ್ತು. ಆದರೆ ಆಗ ತಾನೇ ಸ್ವಾತಂತ್ರ್ಯ ಹೊಂದಿದ್ದ ದೇಶಕ್ಕೆ ಆಧುನಿಕತೆಗೆ ತೆರೆದುಕೊಂಡು ಆಧುನಿಕ ಅಭಿವೃದ್ಧಿ ಪಥದಲ್ಲಿ ಸಾಗುವ ಕಾರಣಕ್ಕೆ ಈ ತತ್ವವನ್ನು ಕೇವಲ ಹೇಳಿಕೆಗೆ ಸೀಮಿತಗೊಳಿಸಿ, ಅಣೆಕಟ್ಟುಗಳನ್ನು "ಆಧುನಿಕ ಭಾರತದ ದೇವಸ್ಥಾನ" ಎಂದು ಕರೆದು ದೇಶದಾದ್ಯಂತ ಬೃಹತ್ ಅಣೆಕಟ್ಟುಗಳನ್ನು ನಿರ್ಮಿಸಲಾಯಿತು. ಕಲ್ಲಿದ್ದಲು, ಕಬ್ಬಿಣ ಇತ್ಯಾದಿ ಖನಿಜಗಳ ಗಣಿಗಾರಿಕೆ ಪರಿಸರ ಸಂರಕ್ಷಣೆಯ ಎಲ್ಲಾ ಮಾನದಂಡಗಳನ್ನು ಮೀರಿ ನಡೆಯಿತು. ಇಷ್ಟೆಲ್ಲ ಸಂಕಷ್ಟದ ನಡುವೆಯೂ ಪಾಠ ಕಲಿಯದೆ ಬಂಡವಾಳಶಾಹಿ ಕಂಪನಿಗಳಿಗೆ ಅನುವಾಗುವಂತೆ ಪ್ರಸ್ತುತ ಕೇಂದ್ರ ಸರ್ಕಾರ "ಹಸಿರು ಸುಧಾರಣೆ" ತಂದಿದೆ, ಇದರ ಮೂಲಕ ವನ್ಯಜೀವಿಧಾಮದ ಸುತ್ತಲಿನ ಜಾಗವನ್ನು ಗಣಿಗಾರಿಕೆ ಇತ್ಯಾದಿ ಉದ್ದೇಶಗಳಿಗೆ ವನ್ಯಜೀವಿ ಮತ್ತು ಅರಣ್ಯ ತಜ್ಞರ ಸಮಿತಿಯ ಪೂರ್ವ ಪರವಾನಗಿ ಇಲ್ಲದಂತೆ ಹಣಕ್ಕೆ (ಹೆಕ್ಟೇರ್‌ಗೆ ೪೩,೦೦೦ದಂತೆ, ಅರಣ್ಯ ಹಾನಿ ಪರಿಹಾರ ಮೊತ್ತದೊಂದಿಗೆ, ಈ ಪ್ರಕಾರ ೩ ಯೋಜನೆಯನ್ನು ದೇಶದಲ್ಲಿ ರೂಪಿಸಲಾಗಿದೆ) ಮಾರುವ ಕೆಲಸ ನಡೆಯುತ್ತಿದೆ. ಈ ದೇಶದಲ್ಲೇ ಏಕೆ, ಪ್ರಪಂಚದಲ್ಲೇ ಪರಿಸರ ನಾಶ ಹೆಚ್ಚಾಗಿ ಆಗಿರುವುದು ಕೆಲವೇ ಸೀಮಿತ ಜನರ ದುರಾಸೆಗೆ ಸರ್ಕಾರಗಳು (ಆಳುವ ವರ್ಗ) ಸಹಕಾರ ಕೊಟ್ಟಿರುವುದರಿಂದ. ನಮ್ಮ ದೇಶದಲ್ಲಿ ಅಣೆಕಟ್ಟುಗಳಿಗೆ ಬಲಿಯಾದ, ಗಣಿಗಾರಿಕೆ ಇತ್ಯಾದಿ ಉದ್ದೇಶಗಳಿಗೆ ಬಲಿಯಾದ ಅರಣ್ಯ ಸಾಮಾನ್ಯ ಜನ ಉರುವಲು ಅಥವಾ ಮರಮುಟ್ಟುಗಳಿಗೆ ನಾಶ ಮಾಡಿದ್ದಕ್ಕಿಂತ ನೂರಾರು ಪಾಲು ಹೆಚ್ಚಿದೆ.




ಕಳೆದ ೧೨೦ ವರುಷಗಳಲ್ಲಿ ಸಾಗರದ ಮಟ್ಟ ೧ ಅಡಿಗಿಂತ ಹೆಚ್ಚಾಗಿದೆ. ಆರ್ಕ್‌ಟಿಕ್ ಸಮುದ್ರ ೧೯೭೯ರಿಂದೀಚೆಗೆ ಪ್ರತಿ ದಶಕದಲ್ಲಿ ೧೩.೪% ಕ್ಷೀಣಿಸುತ್ತಿದೆ. ಸಾಗರದ ಆಮ್ಲೀಯ ಮಟ್ಟ ಮಿಲಿಯನ್ ವರ್ಷದಲ್ಲಿ ಇದೇ ಮೊದಲ ಬಾರಿಗೆ ಹೆಚ್ಚಾಗಿದೆ. ಒಂದೆಡೆ, ಜಪಾನ್ ದೇಶದ ಮೇಲಿನ ವಿಶ್ವಯುದ್ಧದ ಅಣುಬಾಂಬ್ ಸ್ಫೋಟದ ಪರಿಣಾಮ, ಇತ್ತೀಚೆಗಿನ ಫುಕುಶಿಮಾ ಅಣುಸ್ಥಾವರದ ವಿಕಿರಣ ಸೋರಿಕೆಯ ಪಾಠ ಜರ್ಮನಿಯಂತಹ ಶೀತಪ್ರದೇಶಕ್ಕೆ ಹತ್ತಿರವಿರುವ ದೇಶಗಳೇ ಮರುಬಳಕೆ ಇಂಧನದ ಮೂಲಕ ಸ್ವಾವಲಂಬಿಯಾಗಿರುವ ಉದಾಹರಣೆ ನಮ್ಮ ಮುಂದೆ ಇದ್ದರೂ, ಮರುಬಳಕೆ ಇಂಧನದ ಬಳಕೆ ಸಾಧ್ಯವಿದ್ದರೂ ನಮ್ಮ ದೇಶವೂ ಸೇರಿದಂತೆ ಹಲವಾರು ದೇಶಗಳು ವಿದ್ಯುಚ್ಛಕ್ತಿ ಉತ್ಪಾದನೆ ಪೈಪೋಟಿ ಮೇಲೆ ಅಣುಶಕ್ತಿಯನ್ನು ಬಳಸುತ್ತಿವೆ ಮತ್ತು ಅಣುಬಾಂಬ್ ತಯಾರಿಕೆಯಲ್ಲಿ ಮಗ್ನವಾಗಿವೆ. ಕ್ರಾಂತಿಕಾರಿ ಇಂಧನ, ಪಳೆಯುಳಿಕೆ ಇಂಧನಕ್ಕೆ ಪರ್ಯಾಯ ಎಂದೇ ಪರಿಗಣಿಸಿರುವ "ಶೆಲ್ ಅನಿಲ" ಗಣಿಗಾರಿಕೆಯಲ್ಲಿ ದೊಡ್ಡ ದೇಶಗಳೇ ಅಲ್ಲದೆ, ಇತ್ತೀಚೆಗೆ ನಾವೂ ಕೂಡ ಭಾಗಿಯಾಗಿದ್ದೇವೆ. ಈ ಗಣಿಗಾರಿಕೆಗೆ ಅತಿ ಹೆಚ್ಚು ಸಿಹಿ ನೀರು ಬೇಕಾಗಿದೆ ಅಲ್ಲದೆ, ಇದನ್ನು ತೆಗೆಯುವುದು, ಅಂತರ್ಜಲವನ್ನು ವಿಷಮಯಗೊಳಿಸುವುದು, ಭೂಕಂಪನಕ್ಕೆ ಕಾರಣವಾಗಲಿದೆ ಎಂದು ವಿಜ್ಞಾನಿಗಳು ಎಚ್ಚರಿಸಿದ್ದರೂ ಮತ್ತಷ್ಟು ಬಂಡವಾಳ ಹೂಡಲಾಗುತ್ತಿದೆ. ಹಿಮಾಲಯದ ಸೂಕ್ಷ್ಮ ಪರಿಸರದಲ್ಲಿ ಅಣೆಕಟ್ಟುಗಳಂತಹ ಯಾವುದೇ ಚಟುವಟಿಕೆ ನಡೆಸಬಾರದು ಎಂದು ಅಧ್ಯಯನಗಳು ಹೇಳಿದ್ದರೂ ನಾವು ಮತ್ತು ಚೀನಾ ಪೈಪೋಟಿಯ ಮೇಲೆ ಅಲ್ಲಿ ಜಲವಿದ್ಯುತ್ ಉತ್ಪಾದನೆಗೆ ಯೋಜನೆಯ ಬಗ್ಗೆ ಚಿಂತಿಸುತ್ತಿದ್ದೇವೆ.

ಪರಿಸರ ಹೋರಾಟ ನಿಸರ್ಗದ ಸದ್ಬಳಕೆ, ಸ್ವಾವಲಂಬಿ ಅಭಿವೃದ್ಧಿ ಪಥ, ಪರಿಸರದೊಂದಿಗೆ ಸಾಮಾನ್ಯ ಜನರು ಹೊಂದಿಕೊಂಡು ಸುಧಾರಿಸಿಕೊಂಡು ಹೋಗುವಂತಹ ಜೀವನಶೈಲಿ, ಪರಿಸರ ನಾಶದ ಪ್ರಮುಖ ಅಂಶಗಳ ಆಳವಾದ ಅಧ್ಯಯನ ಮತ್ತು ಅದಕ್ಕೆ ಪರ್ಯಾಯ ಮಾರ್ಗಗಳ ಶೋಧನೆ,

ಹೀಗೆ ವಿವಿಧ ಉದ್ದೇಶಗಳನ್ನು ಪರಿಸರ ಸಂರಕ್ಷಣೆ ಮಾಡುವ ನಿಟ್ಟಿನಲ್ಲಿ ಹೊಂದಿವೆ. ಒಂದು ಕಾಲದಲ್ಲಿ ಮನುಷ್ಯನನ್ನು ಪರಿಸರದ ಶತ್ರು ಎಂದು ಆತನನ್ನು ಪರಿಸರ ಸಂರಕ್ಷಣೆಯ ಕಾರಣ ನೈಸರ್ಗಿಕ ಪರಿಸರದಿಂದ ದೂರವಿಡುವ ಪ್ರಯತ್ನ ಬಹಳಷ್ಟು ಆಯಿತು. ಇಂದು ಪರಿಸರ ಹೋರಾಟಗಳು ಮನುಷ್ಯನನ್ನು ಪರಿಸರದ ಒಂದು ಸಮಾನ ಅಂಶವಾಗಿ / ಅಂಗವಾಗಿ ಭಾವಿಸಿ, ಆತನನ್ನು ಪರಿಸರದ ಶತ್ರು ಎಂದು ಪರಿಗಣಿಸದೆ ಮಾನವ ಹಕ್ಕುಗಳು, ಸಮುದಾಯದ ಆರೋಗ್ಯದ ಕಾಳಜಿ ಮತ್ತು ಪರಿಸರದ ಅಂಶಗಳನ್ನೂ ಸೇರಿಸಿಕೊಂಡಿದೆ. ವಿಶ್ವಸಂಸ್ಥೆಯ ನೇತೃತ್ವದ ಭೂ ಶೃಂಗಸಭೆ ೧೯೯೭ರಲ್ಲಿ ಹಸಿರುಮನೆ ಅನಿಲದ ಬಿಡುಗಡೆಯನ್ನು ಪ್ರತೀ ದೇಶಗಳು ಒಂದು ನಿಗದಿತ ಪ್ರಮಾಣದಲ್ಲಿ ಕಡಿತ ಮಾಡಬೇಕು ಎಂದು ನಿಯಮ ರೂಪಿಸಿತ್ತು. ಬಹುತೇಕ ರಾಷ್ಟ್ರಗಳು ನಿಯಮವನ್ನು ಅಂಗೀಕರಿಸಲೂ ಇಲ್ಲ, ಪಾಲಿಸಲೂ ಇಲ್ಲ. ೧೯೯೫ರಲ್ಲಿ ಈ ಒಪ್ಪಂದ ಜಾರಿಗೆ ಬಂತು, ಆನಂತರ ಪ್ರತಿ ವರ್ಷವೂ ಒಂದು ಜಾಗದಲ್ಲಿ ಎಲ್ಲಾ ದೇಶಗಳ ಪ್ರತಿನಿಧಿಗಳು ಒಟ್ಟು ಸೇರಿ ಜಾಗತಿಕ ತಾಪಮಾನದ ಕುರಿತಾದ ಚರ್ಚೆ, ನಿರ್ಬಂಧಗಳ ಕುರಿತಾದ ಸಂಧಾನ ಇತ್ಯಾದಿಗಳನ್ನು ಮಾಡುತ್ತಲೇ ಬರುತ್ತಿವೆ. ಈ ಸಮಾವೇಶವು ಜಾಗತಿಕ ತಾಪಮಾನದ ಕುರಿತಾದ ಅಂತರರಾಷ್ಟ್ರೀಯ ಮಟ್ಟದಲ್ಲಿನ ಚಿಂತನೆಗೆ ಮತ್ತು ಪರಿಸರ ಸಂರಕ್ಷಣೆಯ ಕುರಿತಾದ ಪ್ರಯತ್ನಕ್ಕೆ ನಾಂದಿ ಹಾಡಿವೆ. ಕಳೆದ ವರ್ಷ ಪ್ಯಾರಿಸ್ ಶೃಂಗಸಭೆ ಒಂದು ಒಪ್ಪಂದಕ್ಕೆ ಬಂದಿತು. ಈವರೆಗೆ ೧೯೫ ದೇಶಗಳು ಈ ಒಪ್ಪಂದಕ್ಕೆ ಸಹಿ ಹಾಕಿ ಒಪ್ಪಿಗೆಯನ್ನು ಕೊಟ್ಟಿವೆ. ಇದರಲ್ಲಿ ಭೂಮಿಯ ತಾಪಮಾನವನ್ನು ಕೈಗಾರಿಕಾ ಕ್ರಾಂತಿಗೆ ಮುಂಚಿನ ತಾಪಮಾನಕ್ಕಿಂತ ೨ ಡಿಗ್ರಿ ಸೆಲ್ಸಿಯಸ್ ಏರದಂತೆ ತಡೆ ಮತ್ತು ಹಸಿರುಮನೆ ಅನಿಲಗಳನ್ನು ವಾತಾವರಣಕ್ಕೆ ಬಿಡುವುದನ್ನು ಹಂತಹಂತವಾಗಿ ಕಡಿತಗೊಳಿಸುವುದು, ಹೈಡ್ರೋಫ್ಲೋರೋ ಕಾರ್ಬನ್ ವಾತಾವರಣಕ್ಕೆ ಬಿಡುವುದನ್ನು ಹಂತಹಂತವಾಗಿ ಕಡಿತಗೊಳಿಸುವುದು, ಈ ದೇಶಗಳು ಒಪ್ಪಂದಕ್ಕೆ ಬಂದಿವೆ. ಅಲ್ಲದೆ ಮರುಬಳಕೆ ಇಂಧನ, ಪರಿಸರಸ್ನೇಹಿ ತಂತ್ರಜ್ಞಾನ ವರ್ಗಾವಣೆ, ಸಿರಿವಂತ ರಾಷ್ಟ್ರಗಳು ಬೆಳೆಯುತ್ತಿರುವ ದೇಶಗಳಿಗೆ ಹಿಂದೆ ಮಾಡಿದ್ದ ಮಾತು ಕೂಡ ನಡೆದಿದೆ.

ಒಪ್ಪಂದಗಳು ತಮ್ಮ ಕಡೆ ಇವೆ ಜಗತ್ತು ಯಾವುದರ ಪರಿವೆ ಇಲ್ಲದಂತೆ, ಎಗ್ಗಿಲ್ಲದೆ ಪರಿಸರ ನಾಶಕ್ಕೆ ಹೊಸ ಯೋಜನೆಯನ್ನು ಸಿದ್ಧ ಮಾಡುತ್ತಿದೆ. ಬಂಡವಾಳಶಾಹಿ ಶಕ್ತಿಗಳು, ಬೀಜ ಉತ್ಪಾದನೆ, ಕೀಟನಾಶಕ, ಜೈವಿಕ ತಂತ್ರಜ್ಞಾನದ ಪ್ರಾಣಿ ಮತ್ತು ಸಸ್ಯದ ಉತ್ಪನ್ನದೆಡೆಗೆ ಲಗ್ಗೆ ಇಟ್ಟಿದ್ದು, ಕೃಷಿಯ ವೈವಿಧ್ಯತೆಯನ್ನು ನಾಶಮಾಡಿ, ಆಹಾರವನ್ನು ಕಲುಷಿತಗೊಳಿಸುವುದು ಮಾತ್ರವಲ್ಲದೆ ಪರಿಸರದಲ್ಲಿನ ಅಸಮತೋಲನಕ್ಕೂ ಕಾರಣವಾಗುವುದು. ಧ್ರುವಗಳಲ್ಲಿ ಹಿಮ ಕರಗುವುದು ಹೆಚ್ಚುತ್ತಲೇ ಇದೆ. ಇದು ಹೀಗೇ ಮುಂದುವರಿದರೆ, ಒಂದು ಅಧ್ಯಯನದ ಪ್ರಕಾರ, ಈ ಶತಮಾನ ಮುಗಿಯುವ ಹೊತ್ತಿಗೆ ಸಮುದ್ರದ ಮಟ್ಟದಲ್ಲಿ ೪ ಅಡಿ ಏರಿಕೆ ಆಗಲಿದೆಯಂತೆ. ಹಾಗೆ ಆಗಿದ್ದೇ ಆದಲ್ಲಿ ಈಗಿರುವ ಮನುಷ್ಯ ಬಾಹುಳ್ಯದ ಜನವಸತಿ ಪ್ರದೇಶಗಳು ಸಮುದ್ರ ಪಾಲಾಗಲಿವೆ. ಸಿರಿವಂತ ರಾಷ್ಟ್ರಗಳ ಜನರ ಜೀವನಶೈಲಿ ಬದಲಾಗಬೇಕು, ಬಡ ರಾಷ್ಟ್ರಗಳು ಮತ್ತೊಮ್ಮೆ ಗುಲಾಮಗಿರಿಗೆ ಹೋಗುವಂತೆ ಆಗಬಾರದು. ಅರಣ್ಯದ ಮೇಲಿನ ಹಕ್ಕು ಆದಿವಾಸಿಗಳಿಗೆ ಕೊಟ್ಟು ಸಂಪೂರ್ಣ ಮರುಬಳಕೆ ಇಂಧನದ ಮೂಲಕ ದೇಶಗಳು ಸ್ವಾವಲಂಬನೆ ಸಾಧಿಸಬೇಕು. ಮಳೆ ಈಗಾಗಲೇ ಅನಿಯಮಿತವಾಗಿದೆ, ಅಂತರ್ಜಲ ಗಂಭೀರ ಮಟ್ಟಕ್ಕೆ ಕುಸಿದಿದೆ. ಹೀಗಾಗಿ ನೀರಿನ ಮಿತ ಮತ್ತು ಸಮಯೋಚಿತ ಬಳಕೆ, ಕೃಷಿ ಮತ್ತು ಮನೆ ಬಳಕೆಯಲ್ಲಿ ಬರಬೇಕು, ಕೃಷಿಯನ್ನು ಹೆಚ್ಚು ವೈಜ್ಞಾನಿಕವಾಗಿ ಮತ್ತು ಪರಿಸರಕ್ಕೆ ಪೂರಕವಾಗಿ ಜನಪರಿಸರ ಹೋರಾಟಗಳು ದೇಶೀಯ ಮಟ್ಟದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಸಮನ್ವಯ ಒಕ್ಕೂಟವನ್ನು ರಚಿಸಿಕೊಂಡು ಬಂಡವಾಳಶಾಹಿ ಪ್ರೇರಿತ ಬಡಜನ ವಿರೋಧಿ ಪರಿಸರ ಸಂರಕ್ಷಣೆಯನ್ನು ವಿರೋಧಿಸಬೇಕು. ನಮ್ಮ ದೇಶದ ಅದೃಷ್ಟ ನಾವು ಭೌಗೋಳಿಕವಾಗಿ ಸಮಭಾಜಕ ವೃತ್ತಕ್ಕೆ ಹತ್ತಿರವಿರುವ ಅಂಶ. ಸೂರ್ಯನ ಶಕ್ತಿಯು ಸಮೃದ್ಧವಾಗಿದ್ದು ಅದನ್ನು ಬಳಸಿಕೊಂಡು ಸಾಕಷ್ಟು ಪ್ರಮಾಣದ ಪರಿಸರ ಸಂರಕ್ಷಣೆ ಮಾಡಬಹುದು. ವಿಕೇಂದ್ರೀಕೃತ ಆಡಳಿತ ವ್ಯವಸ್ಥೆ, ಪರಿಸರ ಶಿಕ್ಷಣ, ಪ್ಲಾಸ್ಟಿಕ್ ಬಳಕೆ ಮೇಲೆ ನಿಷೇಧ, ಮಳೆನೀರು ಕೊಯ್ಲು, ಸಿಮೆಂಟ್ ಮತ್ತು ಪಳೆಯುಳಿಕೆ ಇಂಧನದ ಮೇಲೆ ಮಿತಿ ಹೇರುವುದು ಅಥವಾ ಪಡಿತರ ಮೂಲಕ ವಿತರಣೆ, ಹಳ್ಳಿಗಳ ಸ್ವಾವಲಂಬನೆ ಮಾದರಿಯನ್ನು ಹೆಚ್ಚು ಪ್ರಚುರಪಡಿಸುವುದು, ಜನಕೇಂದ್ರಿತ ನಗರಗಳನ್ನು ವಿಕೇಂದ್ರೀಕರಣದ ಮೂಲಕ ಆರೋಗ್ಯವಂತವಾಗಿಸುವುದು, ಪೆಟ್ರೋಲಿಯಂ ಉತ್ಪನ್ನಗಳು, ವಿದ್ಯುಚ್ಛಕ್ತಿ, ಬೆಂಕಿ ಮತ್ತು ನೀರಿನ ಬಳಕೆಯಲ್ಲಿ ಹೆಚ್ಚಿನ ಜವಾಬ್ದಾರಿ ವಹಿಸುವುದು ಇವು ಭುವಿಯ ಈ ಸಂಕಷ್ಟದ ಸಮಯದಲ್ಲಿ ಅತೀ ಮುಖ್ಯವಾಗಿದೆ. ಜನರ ಹೋರಾಟಗಳಿಂದ ಮಾತ್ರವೇ ಇವೆಲ್ಲವೂ ಸಾಧ್ಯ.

**ಎ. ವಿ. ಕೃಷಿಕ**
ಶಾರದಾ ನಗರ, ಪ್ರಧಾನ ಅಂಚೆ ಕಚೇರಿ ಪಕ್ಕ, ಶೃಂಗೇರಿ ಪಟ್ಟಣ ಮತ್ತು ಅಂಚೆ
ಶೃಂಗೇರಿ ತಾಲೂಕು, ಚಿಕ್ಕಮಗಳೂರು ಜಿಲ್ಲೆ

# ಮಾತು ಮೌನವಾದಾಗ



ಮಸ್ತಕ ಮುಸುಕೆಳೆದು ಮಲಗಿದೆ
ಮನ, ಮುದುಡಿ ಎದೆಗೂಡಲಿ ಕುಳಿತಿದೆ
ಕಲ್ಪನೆಗಳ ತೋಟ ಬರುಡಾದರೆ,
ಭಾವಗಳ ನೆಲ ಬಂಜರಾಗಿದೆ.

ನಿಘಂಟುಗಳೀಗ ನನಗೆ, ವ್ಯರ್ಥ
ಪದಗಳೆಲ್ಲ ಮಾಯವಾಗಿ
ಖಾಲಿ ಹಾಳೆಗಳಂತೆ ತೋರುತ್ತಿದೆ
ಬನ್ನಿ ಭಾವಗಳೇ ಮರೆಯಲ್ಲಿ ಕುಳ್ಳದಿರಿ
ನೋವು ಎದೆ ಬಿರಿದು ಹೊರಬರಲು
ತವಕಿಸುತ್ತಿದೆ. ಬನ್ನಿ ಪದಗಳ ಮಾಲೆ ತೊಡಿಸಿ.

ರೆಪ್ಪೆಯ ಪರದೆ ಸರಿಸಿ
ಕಂಬನಿ ತುಳುಕಲು ಹವಣಿಸುತ್ತಿದೆ
ಮುಗುಳ್ನಗೆ ಹೊರಬರಲು
ಅಧರಗಳ ಕದ ತಟ್ಟುತ್ತಿದೆ
ನೆಪಗಳಾಗಿ ಬಂದು ಮನತಣಿಸಿ

ಸರಿಪಡಿಸುವ ಕನಸು,
ಜಗದ ಅಂಕು ಡೊಂಕುಗಳನು
ಅಂತಹ ನುಡಿ ನೀವಾಗ ಬನ್ನಿ
ಬೇಡುತ್ತಿರುವ ಕೈಗಳನ್ನೊಡ್ಡಿ
ಕರುಣೆಯಿಂದ ನನ್ನಿ ಬೊಗಸೆ ತುಂಬಿಬಿಡಿ.

**ಸಹನಾ ಬೇಗಂ**
ಸಂ. ೮೪೮, ೨ನೇ ಮಹಡಿ, ೧ನೇ ಹಂತ, ೨ನೇ ಬ್ಲಾಕ್
೧೯ನೇ ಅಡ್ಡರಸ್ತೆ, ಹೆಚ್.ಬಿ.ಆರ್. ಬಡಾವಣೆ, ಬೆಂಗಳೂರು – ೪೩



ಶ್ರೀ ಸಿದ್ದರಾಮಯ್ಯ
ಸನ್ಮಾನ್ಯ ಮುಖ್ಯಮಂತ್ರಿಗಳು






ಶ್ರೀ ಯು. ಟಿ. ಖಾದರ್
ಮಾನ್ಯ ಆಹಾರ ಮತ್ತು
ನಾಗರೀಕ ಸರಬರಾಜು ಹಾಗೂ
ಗ್ರಾಹಕ ವ್ಯವಹಾರಗಳ ಸಚಿವರು

# ಅನ್ನಭಾಗ್ಯ

## ಇದು ಬರಿ ಯೋಜನೆಯಲ್ಲ

**ಕಡುಬಡವರ ಆತ್ಮವಿಶ್ವಾಸ ಮತ್ತು ಸ್ವಾಭಿಮಾನದ ಸಂಕೇತ**



ಶ್ರೀ ಹಾಜೀ ಶಫೀ ಉಲ್ಲಾ
ಮಾನ್ಯ ಅಧ್ಯಕ್ಷರು



**ಕರ್ನಾಟಕ ಆಹಾರ ಮತ್ತು ನಾಗರಿಕ ಸರಬರಾಜು ನಿಗಮ ನಿಯಮಿತ**
**(ಕರ್ನಾಟಕ ಸರ್ಕಾರದ ಒಂದು ಉದ್ಯಮ)**



ಶ್ರೀ ಶ್ರೀನಿವಾಸ ಎನ್.
ಮಾನ್ಯ ಉಪಾಧ್ಯಕ್ಷರು



## ನಾಡಿನ ಸಮಸ್ತ ಪಡಿತರ ಚೀಟಿ ಫಲಾನುಭವಿಗಳಿಗೂ
## ಹಾಗೂ ಸಮಸ್ತ ನಾಡಿನ ಜನತೆಗೆ ಹೊಸ ವರ್ಷದ ಹಾರ್ದಿಕ ಶುಭಾಶಯಗಳು

# 2017

# ಕಾರ್ಮಿಕ ಚಳುವಳಿಯ ರಾಜಕೀಯ ಸ್ಥಿತಿ–ಗತಿ ಮತ್ತು ಸವಾಲುಗಳು

**ಅಯ್ಯಪ್ಪ ಹೂಗಾರ್**




**ಭಾ**ರತದ ಕಾರ್ಮಿಕ ವರ್ಗ ಚಳುವಳಿಯು ಇಂದು ಅತ್ಯಂತ ಸಂಕಷ್ಟಮಯ ಕಾಲಾವಧಿಯನ್ನು ಹಾದುಹೋಗುತ್ತಲಿದೆ. ಹಾಗೆಂದು ಈ ಸಂಕಷ್ಟಮಯ ಸ್ಥಿತಿ–ಗತಿಯು ಕೇವಲ ಭಾರತದ ಶ್ರಮಜೀವಿ ವರ್ಗಗಳಿಗಷ್ಟೇ ಅಲ್ಲ, ಅಂತರ ರಾಷ್ಟ್ರೀಯ ಕಾರ್ಮಿಕ ಚಳುವಳಿಗೂ ಅನ್ವಯಿಸುತ್ತದೆ ಕೂಡ.

ನಿರಂತರವಾದ ಪ್ರತಿರೋಧದ ನಡುವೆಯೂ ದೇಶದ ಮೇಲೆ ಹೇರಲಾದ ಜಾಗತೀಕರಣ–ಉದಾರೀಕರಣ–ಖಾಸಗೀಕರಣ ನೀತಿಗಳು, ಏನೆಲ್ಲಾ ಅನಾಹುತಗಳನ್ನು ಮಾಡಬಹುದೆಂಬ ಆತಂಕವನ್ನು ದುಡಿಯುವ ವರ್ಗಗಳು ಆರಂಭದಲ್ಲೇ ವ್ಯಕ್ತಪಡಿಸಿದ್ದವೋ, ಅದೆಲ್ಲವೂ ಈ ಕಾಲು ಶತಮಾನದಲ್ಲಿ ನಿಜಗೊಂಡಿದೆ! ಒಂದೆಡೆ ಉತ್ಪಾದನೆಯ ವಿಸ್ತೃತ ಸಾಮಾಜೀಕರಣ ಹಾಗೂ ಇನ್ನೊಂದೆಡೆ ಉತ್ಪಾದನೆಯ ಮೇಲಿನ ಮಾಲೀಕತ್ವದ ವಿಪರೀತ ಖಾಸಗೀ ಕರಣಗಳು ಸಂಪತ್ತಿನ ಕೇಂದ್ರೀಕರಣವನ್ನು ಹಿಂದೆಂದೂ ಕಂಡರಿಯದ ರೀತಿಯಲ್ಲಿ ಹೆಚ್ಚಿಸಿದ್ದು, ಅಸಮಾನತೆಯು ಹದ್ದು ಮೀರಿ ಬೆಳೆದಿದೆ. ಇತ್ತೀಚೆಗೆ ಪ್ರಕಟಿಸಲಾಗಿರುವ ಕೆಲವು ವರದಿಗಳ ಪ್ರಕಾರ, ನಮ್ಮ ದೇಶದ ಶೇ. ೧ರಷ್ಟು ಮಂದಿಯ ಸಂಪತ್ತು, ಇಡೀ ದೇಶದ ಅರ್ಧದಷ್ಟು ಜನರ ಒಟ್ಟು ಸಂಪತ್ತನ್ನು ಮೀರಿ ನಿಂತಿದೆ. ಜನಸಂಖ್ಯೆಯ ಮೇಲ್‌ಸ್ತರದ ಶೇ. ೧೦ರಷ್ಟು ಮಂದಿಯ ಸಂಪತ್ತು ಶೇ. ೭೬.೩ ಆಗಿದ್ದರೆ, ಕೆಳಸ್ತರದ ಶೇ. ೫೦ರಷ್ಟು ಜನರ ಸಂಪತ್ತು ಕೇವಲ ಶೇ. ೪.೧ ಮಾತ್ರ!

ವಾಸ್ತವದಲ್ಲಿ ನವ ಉದಾರವಾದದ ವಕ್ತಾರರು ಜಾಗತೀಕರಣ ನೀತಿಗಳನ್ನು ಆರಂಭಿಸುವಾಗ ಅವುಗಳ ಕುರಿತು ವರ್ಣಿಸಿದುದು ಬೇರೆಯದೇ ಆಗಿತ್ತು. ಅವರು ಈ ನೀತಿಗಳ ಮೂಲಕ ಭಾರತವನ್ನು ಭೂಕೈಲಾಸವನ್ನಾಗಿ ಮಾಡುವ ಭರವಸೆ ಕೊಟ್ಟಿದ್ದರಲ್ಲವೆ? ಆದರೆ ವಿಚಿತ್ರವೆಂದರೆ, ಯಾವ ಜಾಗತೀಕರಣದ ಜಾರಿಯ ಕಾರಣದಿಂದಾಗಿಯೇ ಇಂದು ನಮ್ಮ ದೇಶದ ಉತ್ಪಾದನೆಯ ಪ್ರತಿಯೊಂದು ಕ್ಷೇತ್ರವೂ ಕಠಿಣವಾದ ಬಿಕ್ಕಟ್ಟಿಗೆ ಸಿಕ್ಕಿಹಾಕಿಕೊಂಡು ದುಡಿಯುವ ಜನರ ಪ್ರಾಣ ತೆಗೆಯುತ್ತಿದೆಯೋ, ಹೀಗಾದ್ದಾಗ್ಯೂ, ಅವುಗಳ ಕುರಿತಾಗಿ ಅವರು ಅದೇ ಧೋರಣೆಯನ್ನೇ ಮುಂದುವರಿಸಿರುವದು! ಅದೇ 'ಜೀವ ವಿರೋಧಿ' ನೀತಿಗಳನ್ನೇ ಮತ್ತಷ್ಟು ಕಸುವಿನೊಂದಿಗೆ ಮುನ್ನೊತ್ತಲು ಶ್ರಮಿಸುತ್ತಿರುವದು!

✶ ✶ ✶

೧೯೯೦ರಲ್ಲಿ ಸೋವಿಯತ್ ರಷ್ಯಾ ಮತ್ತು ಪೂರ್ವ ಯುರೋಪಿನ ದೇಶಗಳು, ಅವುಗಳೊಳಗೆ ಪುನರುತ್ಥಾನ ಪಡೆದುಕೊಂಡ ಬಂಡವಾಳವಾದದ ಕಾರಣದಿಂದಾಗಿ, ಜಾಗತಿಕ ಮಾರುಕಟ್ಟೆಯ ತೆಕ್ಕೆಗೆ ಸರಿದುಹೋದಾಗ ಸಾಮ್ರಾಜ್ಯಶಾಹಿ, ಬಂಡವಾಳಶಾಹಿ ಶಕ್ತಿಗಳ ಆನಂದಕ್ಕೆ ಪಾರವೇ ಇರಲಿಲ್ಲ. ಈ ವಿದ್ಯಮಾನದಿಂದಾಗಿ ಪುಳಕಿತರಾಗಿದ್ದ ಬಂಡವಾಳಶಾಹಿ ಪಂಡಿತರು, "ಇನ್ನು ಸಮಾಜವಾದದ ಕತೆ ಮುಗಿಯಿತು, ಏನಿದ್ದರೂ ಬಂಡವಾಳವಾದವೇ ಇತಿಹಾಸದ ಕೊನೆ" ಎಂದು ಗಂಟಲು ಹರಿಯುವಂತೆ ಘೋಷಿಸಿದ್ದರು. ಆದರೆ, ಅವರಿನ್ನೂ ಈ ಕುರಿತ ಸಂಭ್ರಮಾಚರಣೆಯಲ್ಲಿ ಇರುವಾಗಲೇ, ಸಿಯಾಟಲ್‌ನಲ್ಲಿ ಮೈದಾಳಿ ನಿಂತಿದ್ದ ಸಾಮ್ರಾಜ್ಯವಾದ ವಿರೋಧಿ–ಬಂಡವಾಳವಾದ ವಿರೋಧಿ ಬೃಹತ್ ಪ್ರತಿಭಟನೆಗಳು, ಅವರ ಹೇಳಿಕೆಗಳಲ್ಲಿದ್ದ ಅಜ್ಞಾನವನ್ನು ಘೋಷಣೆಗಳಲ್ಲಿದ್ದ ಪೊಳ್ಳುತನವನ್ನು ಅತ್ಯಂತ ಯಶಸ್ವಿಯಾಗಿ ಬಯಲಾಗಿಸಿದ್ದವು. ಆಮೇಲಿನ ಕತೆ ಬಿಡಿ, ಸಾಮ್ರಾಜ್ಯಶಾಹಿ ಶಕ್ತಿಕೇಂದ್ರ ಎಂದೇ ಪರಿಗಣಿಸಲಾಗುವ ವಾಲ್ ಸ್ಟ್ರೀಟ್‌ನಲ್ಲಿ ಸಂಘಟಿತಗೊಂಡ 'ಆಕ್ಯುಪೈ' ಚಳುವಳಿ ಮತ್ತು ಇದನ್ನನುಸರಿಸಿ ಯುರೋಪು ಸೇರಿದಂತೆ ಎಲ್ಲೆಡೆ ಅರಳಿದ ಕಾರ್ಮಿಕರ ಹೋರಾಟಗಳು ಹಾಗೂ ಈ ಎಲ್ಲವುಗಳ 'ಆಗ್ರಹದ ಮೊತ್ತ' ಎಂಬಂತೆ ಅಮೆರಿಕಾದ ಮೇಲೆರಗಿದ ೨೦೦೮ರ ಆರ್ಥಿಕ ಮುಗ್ಗಟ್ಟು ಬಂಡವಾಳವಾದದ ಅನರ್ಥವನ್ನು ಮತ್ತು ಸಾಮ್ರಾಜ್ಯವಾದದ ಮರಣಾಸನ್ನ ಸ್ಥಿತಿಯನ್ನು ಮತ್ತೊಮ್ಮೆ ಸ್ಪಷ್ಟವಾಗಿ ಜಗತ್ತಿನೆದುರು ತೆರೆದಿರಿಸಿದವು. ಆದರೆ ಈ ಯಾವುದರಿಂದಲೂ ಆಳುವ ವರ್ಗಗಳು ಪಾಠ ಕಲಿಯುತ್ತಲೇ ಇಲ್ಲ.

ಹಾಗೆ ನೋಡಿದರೆ ಸೋವಿಯತ್ ರಷ್ಯಾದ ವಿಘಟನೆಯು, ಸಾಮ್ರಾಜ್ಯಶಾಹಿಗಳಿಗೆ ಜಗತ್ತಿನ ಮೇಲೆ ಮತ್ತೊಂದು ಸುತ್ತಿನ ಆಧಿಪತ್ಯ ಸ್ಥಾಪಿಸಲು ಅತ್ಯಂತ ಅನುಕೂಲವಾದ ವಾತಾವರಣವನ್ನು ಸೃಷ್ಟಿಸಿಕೊಟ್ಟದ್ದು ಸುಳ್ಳೇನಲ್ಲ. ದ್ವಿತೀಯ ಜಾಗತಿಕ ಯುದ್ಧದಲ್ಲಿ ಅನುಭವಿಸಿದ ಸೋಲು ಮತ್ತು ಹಿನ್ನಡೆಗಾಗಿ ಕಾರ್ಮಿಕ ವರ್ಗ ಚಳುವಳಿ ಮತ್ತು ಅದರ ರಾಜಕೀಯ ಪ್ರತಿನಿಧಿಯಾದ ಸಮಾಜವಾದಿ ಶಕ್ತಿಗಳ ವಿರುದ್ಧ 'ಸೇಡು ತೀರಿಸಿಕೊಳ್ಳಲು' ಅದು ಕಾಯುತ್ತಿತ್ತು ಮತ್ತು ಇದಕ್ಕಾಗಿ ತುಂಬ ತಾಳ್ಮೆಯೊಂದಿಗೆ ದಶಕಗಳ ಕಾಲದ ಸಿದ್ಧತೆ ನಡೆಸಿತ್ತು ಕೂಡ.

ತನ್ನ ರೂಪ ಮತ್ತು ಸಾರಗಳೆರಡರಲ್ಲೂ ಅಂತರರಾಷ್ಟ್ರೀಯವಾಗಿರುವ ಕಾರ್ಮಿಕ ವರ್ಗ ಚಳುವಳಿಯು ಮಾರ್ಕ್ಸ್‌ವಾದ ಮತ್ತು ಲೆನಿನ್‌ವಾದಗಳ ಸೈದ್ಧಾಂತಿಕ ಅಸ್ತ್ರದೊಂದಿಗೆ ಸನ್ನದ್ಧವಾಗಿ ನಿಂತಾಗ ಅದನ್ನು ಸೋಲಿಸುವದು







ಮಾರ್ಕ್ಸ್ ಮತ್ತು ಲೆನಿನ್

ಸಾಧ್ಯವಿಲ್ಲ ಎಂಬ ಸತ್ಯವನ್ನು ಸ್ವಂತ ಅನುಭವದಿಂದ ಮನದಟ್ಟುಮಾಡಿಕೊಂಡಿದ್ದ ಸಾಮ್ರಾಜ್ಯಶಾಹಿ ಶಕ್ತಿಗಳು ಇವೆರಡನ್ನು ಪರಸ್ಪರ ಬೇರ್ಪಡಿಸುವ ಯೋಜನೆ ಸಿದ್ಧಪಡಿಸಿದ್ದವು. ಆ ಹಿಂದೆ, 'ಒಡೆದು–ಆಳು' ನೀತಿಯ ಮುಖಾಂತರ ಆಡಳಿತ ನಡೆಸುವಾಗ, ಪಡೆದುಕೊಂಡಿದ್ದ ಜಗತ್ತಿನ ಕುರಿತ ಅಪಾರ ಜ್ಞಾನವು ಜೊತೆಗಿದ್ದುದರಿಂದ, ಅದನ್ನು ಬಳಸಿಕೊಂಡು ಸಮಾಜವಾದಿ ಚಳುವಳಿಯೊಳಗೆ ಸೈದ್ಧಾಂತಿಕ ಗೊಂದಲಗಳನ್ನು ಸೃಷ್ಟಿಸುವ ಮೂಲಕ ಒಡಕು ತರುವದು ಅವರ ಗುರಿಯಾಗಿತ್ತು. ಸ್ಟಾಲಿನ್ನರ ನಿಧನದ ನಂತರ, ಸೋವಿಯತ್ ರಷ್ಯಾದಲ್ಲಿ ಕ್ರುಶ್ಚೇವ್ ಅಧಿಕಾರಕ್ಕೇರುವ ಮೂಲಕ ಅದರ ಈ ಯೋಜನೆಯು ಮೂರ್ತ ರೂಪ ಪಡೆಯಿತೆನ್ನಬಹುದು.

ಯಾವ ಸೋವಿಯತ್ ರಷ್ಯಾವನ್ನು ತಮ್ಮ ಅಪ್ರತಿಮ ಮಾರ್ಕ್ಸ್‌ವಾದ – ಲೆನಿನ್‌ವಾದಗಳ ಜ್ಞಾನ ಮತ್ತು ಅನುಭವಗಳ ಮೂಲಕ ಮೂರು ದಶಕಗಳಷ್ಟು ಸುದೀರ್ಘವಾದ ಕಾಲ ಸ್ಟಾಲಿನ್‌ರು ಮುನ್ನಡೆಸಿದ್ದರೋ, ಅದೇ ನೆಲದಲ್ಲಿಯೇ ಕ್ರುಶ್ಚೇವ್, ಆ ಮಹಾನ್ ನಾಯಕ ಸ್ಟಾಲಿನ್ನರ ಮೇಲೆಯೇ ಏಕಾಏಕಿ 'ದುರುಳತನ'ದ, 'ಕ್ರೌರ್ಯ'ದ ಸುಳ್ಳು ಆರೋಪಗಳನ್ನು ಮಾಡುವ ಮೂಲಕ ಚಾರಿತ್ರ್ಯವಧೆ ಆರಂಭಿಸಿಬಿಟ್ಟಿದ್ದರು! ಇದು ಅಲ್ಲಿಯವರೆಗೂ, ಇಂತಹದೊಂದು ಸನ್ನಿವೇಶಕ್ಕಾಗಿ ಕಾಯ್ದು ಕುಳಿತಿದ್ದ ಸಾಮ್ರಾಜ್ಯಶಾಹಿಗಳಿಗೆ ಸುವರ್ಣಾವಕಾಶವಾಗಿ ಮಾರ್ಪಟ್ಟಿತ್ತು. ಅವರು ಕೂಡಲೇ ಇದರ ಲಾಭ ಪಡೆಯಲು ಯೋಜನೆ ರೂಪಿಸಿದರು ಮತ್ತು ಇದಕ್ಕಾಗಿ ಜಾಣ್ಮೆಯಿಂದ ಕ್ರುಶ್ಚೇವ್ ಜೊತೆ ನಂಟು ಬೆಳೆಸಿದ್ದರು! ಹೀಗಾಗಿಯೇ ಸ್ಟಾಲಿನ್ನರ ಮೇಲಿನ ಕ್ರುಶ್ಚೇವ್ ಆರೋಪಗಳಾದ 'ದುರುಳತನ' ಮತ್ತು 'ಕ್ರೌರ್ಯ'ಗಳು 'ಸಮಾಜವಾದ' ಮತ್ತು 'ಕಮ್ಯುನಿಸಂ'ನ ದುರುಳತನ – ಕ್ರೌರ್ಯಗಳಾಗಿ ಬಿಂಬಿಸಲ್ಪಟ್ಟು ಶರವೇಗದೊಂದಿಗೆ ಜಗತ್ತಿನಾದ್ಯಂತ ಪ್ರಚುರಪಡಿಸಲ್ಪಟ್ಟವು. ಸೋವಿಯತ್ ರಷ್ಯಾದಲ್ಲಿ ಜರುಗಿದ ಈ ಘಟನೆ ಸಹಜವಾಗಿಯೇ ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳುವಳಿಯ ಮೇಲೆ ತನ್ನ ಪ್ರಭಾವ ಬೀರುವ ಮೂಲಕ ಅಲ್ಲಿಯವರೆಗೂ ಸಾಮ್ರಾಜ್ಯಶಾಹಿಗಳ ಮೇಲೆ ಹಿಡಿತ ಸಾಧಿಸಿ ಮುನ್ನಡೆಯುತ್ತಲೇ ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳುವಳಿಯ ಹಿನ್ನಡೆಗೆ ಮುನ್ನುಡಿ ಬರೆದುಬಿಟ್ಟಿತು!

* * *

ದ್ವಿತೀಯ ಜಾಗತಿಕ ಯುದ್ಧದ ಸುತ್ತಮುತ್ತಲಿನ ಕಾಲಾವಧಿಯ ಇತಿಹಾಸವನ್ನು ಸರಿಯಾಗಿ ಗಮನಿಸಿದಾಗ ಎರಡು ವಿಷಯಗಳು ಸ್ಪಷ್ಟವಾಗಿ ಗಮನಕ್ಕೆ ಬರಬಲ್ಲವು. ಒಂದು, ಆವರೆಗೂ ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳುವಳಿಯ ಶಕ್ತಿಕೇಂದ್ರವೆನಿಸಿದ್ದ ಕಮ್ಯುನಿಸ್ಟ್ ಇಂಟರ್‌ನ್ಯಾಷನಲ್ ಮತ್ತು ಕಮ್ಯುನಿಸ್ಟ್ ಇನ್‌ಫರ್ಮೇಶನ್ ಬ್ಯೂರೋಗಳ ವಿಸರ್ಜನೆಯಾದರೆ, ಮತ್ತೊಂದು ಸಾಮ್ರಾಜ್ಯಶಾಹಿ ಶಕ್ತಿಗಳಿಂದ ನಡೆದ ವಿಶ್ವಸಂಸ್ಥೆ ಮತ್ತು ಅಂತರರಾಷ್ಟ್ರೀಯ ಹಣಕಾಸು ನಿಧಿ, ವಿಶ್ವ ಬ್ಯಾಂಕು, ಗ್ಯಾಟ್ ಮುಂತಾದ ಅಂತರರಾಷ್ಟ್ರೀಯ ಸಂಸ್ಥೆಗಳ ಸ್ಥಾಪನೆ. ಹಾಗೆಯೇ ಇದರ ಜೊತೆ ಜೊತೆಗೇ ನಡೆದ ಮತ್ತೊಂದು ಮಹತ್ತರ ಘಟನೆಯೆಂದರೆ, ಯುದ್ಧ ತಂದಿಟ್ಟಿದ್ದ ಅಪಾರವಾದ ಹಾನಿ ಮತ್ತು ನಷ್ಟಗಳಿಂದಾಗಿ ಕಂಗೆಟ್ಟಿದ್ದ ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಂದ ಅಮೆರಿಕಾದ ಸಾಮ್ರಾಜ್ಯಶಾಹಿಗಳಿಗೆ ವರ್ಗಾವಣೆಗೊಂಡ ಸಾಮ್ರಾಜ್ಯಶಾಹಿ ಶಿಬಿರದ ನಾಯಕತ್ವ. ವಾಸ್ತವದಲ್ಲಿ ಈ ಬದಲಾವಣೆಯು ಸಾಮ್ರಾಜ್ಯಶಾಹಿಯನ್ನು ತನ್ನನ್ನು ತಾನು ಪುನರ್‌ಸಂಘಟಿಸಿಕೊಳ್ಳುವ ಪ್ರಕ್ರಿಯೆಗೆ ಒಳಪಡಿಸಿತ್ತು. ಇದರಿಂದಾಗಿ ಮೂಲತಃ ಯುದ್ಧಕೋರ ಸ್ವಭಾವದ ಸಾಮ್ರಾಜ್ಯಶಾಹಿಯು ಹೊಸ ಪರಿಸ್ಥಿತಿಗಳಲ್ಲಿ ತಾನೇ ಮುಂದಾಗಿ ನಿಂತು 'ಜಾಗತಿಕ ಶಾಂತಿ'ಯ ಕುರಿತು ಮಾತಾಡಲಾರಂಭಿಸಿತ್ತು! ಅದರ ನವ ಜಾಗತಿಕ ವ್ಯವಸ್ಥೆಯ ಘೋಷಣೆಯೊಂದಿಗೆ ನವ ವಸಾಹತೀಕರಣ ಆರಂಭವಾಗಿತ್ತು!

ಹೀಗೆ, ಇಂತಹದೊಂದು ಜಾಗತಿಕ ಪರಿಸ್ಥಿತಿಯಲ್ಲಿ ಕ್ರುಶ್ಚೇವ್‌ರ ಪರಿಷ್ಕರಣವಾದವು ಹುಟ್ಟಿದುದು ಸಹಜವಾಗಿಯೇ ಇಡೀ ಜಗತ್ತಿನ ಕಾರ್ಮಿಕ ವರ್ಗ ಚಳುವಳಿಯನ್ನು ಗೊಂದಲದ ಮಡುವಿಗೆ ತಳ್ಳಿತ್ತು. ವಾಸ್ತವವಾಗಿ ಸಾಮ್ರಾಜ್ಯಶಾಹಿಯು ಸದ್ದಿಲ್ಲದಂತೆ ಪುನರ್ಸಂಘಟನೆಯಲ್ಲಿ ತೊಡಗಿಕೊಂಡು ತನ್ನ ಶಕ್ತಿಯನ್ನು ವರ್ಧಿಸಿಕೊಳ್ಳುವ ಪ್ರಕ್ರಿಯೆಯಲ್ಲಿದ್ದಾಗ, ಅದು ಅಂದಿನ ಪರಿಸ್ಥಿತಿಯನ್ನು ತಪ್ಪಾಗಿ ಮೌಲ್ಯಾಂಕನ ಮಾಡಿತ್ತು. ಸಮಾಜವಾದಿ ಚಳುವಳಿಯು ಇಂದು "ಬಲಾಢ್ಯವಾಗಿರುವುದರಿಂದ", ಅಂದರೆ "ಸಾಮ್ರಾಜ್ಯಶಾಹಿಯು ಬಲಹೀನವಾಗಿ ಇರುವುದರಿಂದ" ವಿವಿಧ ದೇಶಗಳು ತಮ್ಮ ಕ್ರಾಂತಿಯನ್ನು 'ಕ್ರಾಂತಿಕಾರಿ ಚಳುವಳಿಯ ನಿರ್ಮಾಣದ ಮೂಲಕ'ವಲ್ಲ, ಬದಲಿಗೆ 'ಶಾಂತಿಯಿಂದ' ಅಥವಾ ಬಂಡವಾಳಶಾಹಿ ಪ್ರಜಾತಂತ್ರದ ರಾಜ್ಯವು ಏರ್ಪಡಿಸುವ ಚುನಾವಣೆಗಳಲ್ಲಿ ಬಹುಮತ ಸಾಧಿಸುವ ಮೂಲಕ ಸಮಾಜವಾದಕ್ಕೆ ಪರಿವರ್ತಿತಗೊಳ್ಳಬೇಕು ಎಂದು ತಿಳಿಸಿತ್ತು!

ಹೀಗೆ, ವರ್ಗ ಹೋರಾಟದ ಸ್ಥಳದಲ್ಲಿ ವರ್ಗ ಸಾಮರಸ್ಯವನ್ನು ತಂದಿರಿಸಿದ ಕ್ರುಶ್ಚೇವ್ ಪರಿಷ್ಕರಣವಾದವು ಸಾಮ್ರಾಜ್ಯಶಾಹಿ ನವ ವಸಾಹತೀಕರಣದ ಶರಣಾರ್ಥಿಯಾಗಿ ಮಾರ್ಪಟ್ಟು, ಆವರೆಗೂ ಮಾರ್ಕ್ಸ್‌ವಾದ–ಲೆನಿನ್‌ವಾದಗಳಿಂದ ಶಿಕ್ಷಣ ಪಡೆದು ತನ್ನದೇ ರಾಜ್ಯಗಳನ್ನು ನಿರ್ಮಿಸಿದ್ದ ಮತ್ತು ನಿರ್ಮಿಸಿಕೊಳ್ಳುವ ಹವಣಿಕೆಯಲ್ಲಿದ್ದ ಹಲವಾರು ದೇಶಗಳ ಶ್ರಮಜೀವಿ ವರ್ಗ ಚಳುವಳಿಯನ್ನು ದಿಕ್ಚ್ಯುತಿಗೀಡುಮಾಡಿ ಹಾಳುಗೆಡವಿತ್ತು. ನಮ್ಮ ಭಾರತದ ಕಾರ್ಮಿಕ ವರ್ಗ ಚಳುವಳಿಯೂ ಇದಕ್ಕೆ ಬಲಿಯಾಗಿಬಿಟ್ಟಿತ್ತು.

ಹಾಗೆಂದು ಆ ದಿನಮಾನಗಳಲ್ಲಿ ಕ್ರುಶ್ಚೇವ್ ಪರಿಷ್ಕರಣವಾದಕ್ಕೆ ವಿರೋಧ ಬರಲಿಲ್ಲವೆಂದಲ್ಲ. ವಿರೋಧವು ಇತ್ತು. ಆದರೆ ಅದನ್ನು ಸಕಾಲದಲ್ಲಿ ಸಮರ್ಥವಾಗಿ ಎದುರಿಸಲು ಸಾಧ್ಯ ಮಾಡಿಕೊಳ್ಳದೇ ಹೋಗಿತ್ತು. ೧೯೬೩ರಲ್ಲಿ

ಮಾವೋ–ತ್ಸೆ–ತುಂಗ್‌ರ ನೇತೃತ್ವದಲ್ಲಿ ಚೀನಾದ ಕಮ್ಯುನಿಸ್ಟ್ ಪಕ್ಷವು ಕೈಗೆತ್ತಿಕೊಂಡ ಕ್ರುಶ್ಚೇವ್ ಪರಿಷ್ಕರಣವಾದದ ವಿರುದ್ಧದ ಹೋರಾಟವು ಅದನ್ನು ಖಂಡತುಂಡವಾಗಿ ಬಯಲುಗೊಳಿಸಿದರೂ ಅದು ತುಂಬ ತಡವಾದ ಪ್ರಯತ್ನವಾಗಿತ್ತು. ಅಷ್ಟೊತ್ತಿಗಾಗಲೇ ಸಾಮ್ರಾಜ್ಯವಾದವು ಕ್ರುಶ್ಚೇವ್ ಅವರ ಪರಿಷ್ಕರಣವಾದದ ಲಾಭ ಪಡೆದು, ಅಂತರರಾಷ್ಟ್ರೀಯ ಕಾರ್ಮಿಕ ಚಳುವಳಿಗೆ ಏನೆಲ್ಲಾ ಹಾನಿ ಮಾಡಲು ಸಾಧ್ಯವೋ ಅದೆಲ್ಲವನ್ನೂ ಚಾಕಚಕ್ಯತೆಯಿಂದ ಮಾಡಿ ಮುಗಿಸಿತ್ತು!

* * *

ಹತ್ತೊಂಬತ್ತನೆಯ ಶತಮಾನದ ದ್ವಿತೀಯಾರ್ಧದ ಮೊದಲ ವರ್ಷಗಳಲ್ಲಿ ಬ್ರಿಟಿಷರಿಂದ ರೈಲು ಮಾರ್ಗಗಳ ನಿರ್ಮಾಣ (೧೮೫೩) ಆರಂಭವಾಗುವುದರೊಂದಿಗೆ ಭಾರತದ ಆಧುನಿಕ ಕಾರ್ಮಿಕ ವರ್ಗದ ಉದಯ ಆರಂಭಗೊಂಡಿತೆಂದು ಹೇಳಬಹುದು. ರೈಲು ನಿರ್ಮಾಣವನ್ನು ಅನುಸರಿಸಿ ಆರಂಭವಾದ ಕಲ್ಲಿದ್ದಲು ಗಣಿಗಾರಿಕೆ ಮತ್ತು ಕೃಷಿಯ ವಾಣಿಜ್ಯೀಕರಣದ ಗುರುತುಗಳಾದ ಪ್ಲಾಂಟೇಶನ್‌ಗಳನ್ನು ಆರಂಭಿಸಿದ್ದು ಮತ್ತು ಸೆಣಬು ಹಾಗೂ ಹತ್ತಿಯನ್ನು ಕಚ್ಚಾ ವಸ್ತುವಾಗುಳ್ಳ ಕಾರ್ಖಾನೆಗಳ ಆರಂಭ, ಹೀಗೆ ಕ್ರಮೇಣವಾಗಿ ಬೆಳೆಯಹತ್ತಿದ ಕೈಗಾರಿಕೀಕರಣದೊಂದಿಗೆ ಭಾರತದ ಕಾರ್ಮಿಕ ವರ್ಗವೂ ಬೆಳವಣಿಗೆ ಕಂಡಿತು.

ಈ ದಿನಮಾನಗಳ ಕಾರ್ಮಿಕ ವರ್ಗವು ಬಹುತೇಕ ಭೂಹೀನ ರೈತರು, ಜೀತದಾಳುಗಳು, ಆದಿವಾಸಿಗಳು ಮುಂತಾಗಿ ಹಿಂದುಳಿದ ಸಾಮಾಜಿಕ ಸ್ತರದ ಸದಸ್ಯರನ್ನೇ ಪ್ರಧಾನ ಭಾಗವಾಗಿ ಹೊಂದಿತ್ತಲ್ಲದೆ, ಇದರ ಮಧ್ಯೆ ಅಪಾರ ಸಂಖ್ಯೆಯ ಮಹಿಳಾ ಮತ್ತು ಬಾಲ ಕಾರ್ಮಿಕರೂ ಇದ್ದರು. ಕಾರ್ಮಿಕರ ನೇಮಕಾತಿ ಅಥವಾ ಕೆಲಸದ ಅವಧಿ ಅಥವಾ ಕೂಲಿಯ ವಿಷಯವಾಗಿ ಯಾವ ಕಾನೂನುಗಳೂ ಇರದಿದ್ದಂತಹ, ಆದರೆ ಅವುಗಳಿಗಾಗಿ ಕಾರ್ಮಿಕರು ಅಲ್ಲಲ್ಲಿ ಬಿನ್ನಹಗಳ ಮೂಲಕ ಆಗ್ರಹಗಳನ್ನು ಮಾಡಲಾರಂಭಿಸಿದ್ದಂತಹ ಸಂದರ್ಭದಲ್ಲಿ ಮತ್ತು ಬ್ರಿಟಿಷ್ ಉದ್ಯಮದಾರರಿಗೂ ಇದರ ಅಗತ್ಯವಿದ್ದುದರಿಂದ ೧೮೮೧ರಲ್ಲಿ ಮೊಟ್ಟ ಮೊದಲ ಕಾಯ್ದೆಯಾಗಿ "ಭಾರತ ಫ್ಯಾಕ್ಟರಿ ಕಾಯ್ದೆ"ಯು ರಚನೆಯಾಗಿತ್ತು.

ಮುಗ್ಧರಾಗಿದ್ದ ಕಾರ್ಮಿಕರ ಈ ಪರಿಯ ಶೋಷಣೆಯ ಪರಿಸ್ಥಿತಿಗಳು ಹಲವಾರು ಬುದ್ಧಿಜೀವಿಗಳನ್ನು, ಲೇಖಕರನ್ನು – ಇವರ ನೆರವಿಗೆ ಧಾವಿಸುವಂತೆ ಮಾಡಿದ್ದವು. ಬಂಗಾಳ ಪ್ರಾಂತ್ಯದಲ್ಲಿ ಶಶಿಪಾದ ಬ್ಯಾನರ್ಜಿ ಮತ್ತು ಮುಂಬೈ ಪ್ರಾಂತ್ಯದಲ್ಲಿ ಎನ್. ಎಂ. ಲೋಖಂಡೆಯವರು ಆ ದಿನಗಳಲ್ಲಿನ ಕಾರ್ಮಿಕರಿಗೆ ಅವರ ಹಕ್ಕುಗಳ ಬಗ್ಗೆ ತಿಳಿಯಹೇಳುತ್ತಾ ಅವರಿಗೆ ಶಿಕ್ಷಣ ಕೊಡಬೇಕಾದ ಮಹತ್ವವನ್ನೂ ಮನಗಂಡು ಅಲ್ಲಲ್ಲಿ 'ಕಾರ್ಮಿಕರ ರಾತ್ರಿ ಶಾಲೆಗಳನ್ನು ತೆರೆದಿದ್ದರು. ಕಾರ್ಮಿಕ ಚಳುವಳಿಯ ಪಿತಾಮಹರೆಂದೇ ಗುರುತಿಸಲಾಗುವ ಲೋಖಂಡೆಯವರು ಜ್ಯೋತಿ ಬಾ ಫುಲೆಯವರ ಶಿಷ್ಯರಾಗಿದ್ದರು ಮತ್ತು ಕಾರ್ಮಿಕರಿಗೆಂದೇ 'ದೀನಬಂಧು' ಪತ್ರಿಕೆ ಆರಂಭಿಸಿದ್ದರು.

೧೮೮೫ರಲ್ಲಿ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಸ್ಥಾಪನೆಯಾಗುವ ಮೂಲಕ ಅಲ್ಲಲ್ಲಿ ಹೊಸದಾದ ನಿರೀಕ್ಷೆಗಳು ಹುಟ್ಟಿಕೊಂಡರೂ ಕಾಂಗ್ರೆಸ್‌ನ ನಾಯಕತ್ವವು ಬಹುತೇಕ ಭೂಮಾಲಿಕರು ಮತ್ತು ಬಂಡವಳಿಗರಿಂದ ತುಂಬಿದ್ದರಿಂದ ಕಾರ್ಮಿಕ ವರ್ಗದ ಕುರಿತು ಸಹಾನುಭೂತಿ ಇದ್ದರೂ ಕಾರ್ಮಿಕ ವರ್ಗ ಚಳುವಳಿಯು ಬೆಳೆಯಲು ಅದರಿಂದ ವಿಶೇಷವಾದ ಪ್ರೋತ್ಸಾಹವೇನೂ ಸಿಗಲಿಲ್ಲ. ಆದರೆ ಕಾಲ ಉರುಳುತ್ತಿದ್ದಂತೆ ಹಲವಾರು ಬದಲಾವಣೆಗಳು ಏರ್ಪಟ್ಟವು.

೧೯೦೮ರ ಜೂನ್ ೨೪ರಂದು ಬ್ರಿಟಿಷ್ ಪೊಲೀಸರು ಬಾಲಗಂಗಾಧರ ತಿಲಕರನ್ನು ಬಂಧಿಸಿದಾಗ ದೊಡ್ಡ ಪ್ರಮಾಣದಲ್ಲಿ ಬೀದಿಗಿಳಿದು ಸ್ವಾತಂತ್ರ್ಯದ ಘೋಷಣೆಗಳನ್ನು ಹಾಕುವ ಮೂಲಕ ಮೊಟ್ಟ ಮೊದಲ ಬಾರಿಗೆಂಬಂತೆ ಭಾರತದ ಆಧುನಿಕ ಕಾರ್ಮಿಕ ವರ್ಗವು ತನ್ನ ರಾಜಕೀಯ ಪಾತ್ರದ ಆರಂಭವನ್ನು ಪ್ರಕಟಿಸಿತ್ತು. ತಿಂಗಳುಗಟ್ಟಲೆ ನಡೆದ ಈ ಸಮರಶೀಲ ಹೋರಾಟದಲ್ಲಿ ನೂರಾರು ಜನ ಮೃತಪಟ್ಟರು ಮತ್ತು ಸಾವಿರಾರು ಜನ ಗಾಯಗೊಂಡರು ಹಾಗೂ ದೊಡ್ಡ ಮಟ್ಟದ ದಸ್ತಗಿರಿಗಳು ಕೂಡ ನಡೆದವು.

೧೯೧೭ರಲ್ಲಿ ರಷ್ಯಾದಲ್ಲಿ ನಡೆದ ಕ್ರಾಂತಿಯು ಅಲ್ಲಿನ ಶ್ರಮಜೀವಿ ವರ್ಗದ ರಾಜ್ಯವನ್ನು ಸ್ಥಾಪಿಸಿದುದು ಪ್ರಪಂಚದಾದ್ಯಂತ ಕಾರ್ಮಿಕ ವರ್ಗದ ಮೇಲೆ ಪ್ರಭಾವ ಬೀರಿದಂತೆಯೇ ಭಾರತದ ಕಾರ್ಮಿಕ ವರ್ಗದ ಮೇಲೆಯೂ ದೊಡ್ಡ ಪ್ರಭಾವ ಬೀರಿತ್ತು. ೧೯೧೯ರಲ್ಲಿ ಆರಂಭವಾದ 'ಕಮ್ಯುನಿಸ್ಟ್ ಇಂಟರ್ ನ್ಯಾಷನಲ್' ಭಾರತದ ಪರಿಸ್ಥಿತಿಗಳನ್ನು ವೀಕ್ಷಣೆಗೆ ಒಳಪಡಿಸಿತ್ತು. ೧೯೨೦ರಲ್ಲಿ 'ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್' (ಎಐಟಿಯುಸಿ) ಸ್ಥಾಪನೆಯಾಗುವುದರೊಂದಿಗೆ ಭಾರತದ ಆಧುನಿಕ ಕಾರ್ಮಿಕ ವರ್ಗ ಚಳುವಳಿಯು ಅಖಿಲ ಭಾರತ ರೂಪ ಪಡೆಯಿತು ಮತ್ತು ಆ ಕಾಲಾವಧಿಯಲ್ಲಿ ಇದೊಂದು ಚಾರಿತ್ರಿಕ ಘಟನೆಯಾಗಿತ್ತು ಕೂಡ.

ಎಐಟಿಯುಸಿ ನಾಯಕತ್ವದಲ್ಲಿ ಭಾರತದ ಕಾರ್ಮಿಕ ವರ್ಗ ಹಲವಾರು ಯಶಸ್ವಿ ಹೋರಾಟಗಳನ್ನು ಕೈಗೊಂಡಿತು ಮತ್ತು ಇದರಿಂದಾಗಿಯೇ ಅಂದು ಹಲವಾರು ಕಾರ್ಮಿಕ ಕಾಯ್ದೆಗಳು ರಚಿಸಲ್ಪಟ್ಟವು. ಈಗಲೂ ಜಾರಿಯಲ್ಲಿರುವ, ೧೯೨೩ರ ಗಣಿಗಾರಿಕೆ ಕಾಯ್ದೆ, ೧೯೨೬ರ ಟ್ರೇಡ್ ಯೂನಿಯನ್ ಕಾಯ್ದೆ, ೧೯೩೬ರ ವೇತನ ಪಾವತಿ ಕಾಯ್ದೆ, ೧೯೪೨ರ ವಾರದ ರಜೆ ಕಾಯ್ದೆ ೧೯೪೬ರ ಕೈಗಾರಿಕಾ ನೇಮಕಾತಿ ಕಾಯ್ದೆ ಹಾಗೂ ೧೯೪೭ರ ಏಪ್ರಿಲ್ ೧ರಂದು ಜಾರಿಗೆ ಬಂದ ಕೈಗಾರಿಕಾ ವಿವಾದ ಕಾಯ್ದೆ – ಈ ಎಲ್ಲವುಗಳನ್ನು ಕಾರ್ಮಿಕ ವರ್ಗವು ತನ್ನ ಹೋರಾಟಗಳ ಫಲವಾಗಿ ಪಡೆದುಕೊಂಡಿತು.

೧೯೨೫ರಲ್ಲಿ ಸ್ಥಾಪನೆಯಾದ ಭಾರತ ಕಮ್ಯುನಿಸ್ಟ್ ಪಕ್ಷದ ರಾಜಕೀಯ ನಾಯಕತ್ವವನ್ನು ಪಡೆಯುವುದರೊಂದಿಗೆ ಮತ್ತು ಪಕ್ಷದಿಂದ ತನ್ನ ಪ್ರತ್ಯೇಕತೆಯನ್ನು ಜತನದಿಂದ ಕಾಪಾಡಿಕೊಂಡಿರುವ ಮೂಲಕ ಇಡೀ ಭಾರತದ ಕಾರ್ಮಿಕ ವರ್ಗದ ನಾಯಕತ್ವದ ಕೇಂದ್ರವಾಗಿದ್ದ ಎಐಟಿಯುಸಿಗೆ, ಪಂಡಿತ್ ಜವಾಹರಲಾಲ್ ನೆಹರೂರವರೂ ಒಳಗೊಂಡಂತೆ, ಹಲವಾರು ಉದಾರವಾದಿ ನಾಯಕರು ಅಧ್ಯಕ್ಷರಾಗಿದ್ದರು ಕೂಡ. ಆದರೆ, ಯಾವಾಗ ಅಧಿಕಾರದ ಹಸ್ತಾಂತರದ ದಿನಗಳು ಹತ್ತಿರ ಬರತೊಡಗಿದ್ದವೋ, ಆಗ ನಡೆದ ಬಿರುಸಿನ ರಾಜಕೀಯ ಚಟುವಟಿಕೆಗಳ ಫಲವಾಗಿ – ೧೯೪೭ರ ಮೇ ತಿಂಗಳಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ನಾಯಕತ್ವದಲ್ಲಿ 'ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್' (ಐಎನ್‌ಟಿಯುಸಿ) ಸ್ಥಾಪನೆಯಾಗುವುದರೊಂದಿಗೆ ಭಾರತದ ಕಾರ್ಮಿಕ ವರ್ಗ ಚಳುವಳಿಯಲ್ಲಿ ಮೊದಲ ಪ್ರಧಾನ ಒಡಕು ಮೂಡಿತು. ಈ ಪ್ರಕ್ರಿಯೆ ಅಲ್ಲಿಗೇ ನಿಲ್ಲಲಿಲ್ಲ, ೧೯೪೮ರಲ್ಲಿ ಹಿಂದೂಸ್ತಾನ್ ಮಜ್ದೂರ್ ಸಭಾ (ಎಚ್‌ಎಂಎಸ್) ಮತ್ತು ೧೯೫೫ರಲ್ಲಿ ಜನಸಂಘದ ಭಾರತ್ ಮಜ್ದೂರ್ ಸಭಾ (ಬಿಎಂಎಸ್) ಸ್ಥಾಪನೆಗೊಳ್ಳುವ ಮೂಲಕ ಹಲವಾರು ವಿಭಜನೆಗಳಿಗೆ ಭಾರತದ ಕಾರ್ಮಿಕ ವರ್ಗ ಈಡಾಯಿತು. ಈ ಬೆಳವಣಿಗೆಗಳು ಕಾರ್ಮಿಕರನ್ನು ಸಹಜವಾಗಿಯೇ ಕಳವಳಕ್ಕೀಡುಮಾಡಿದ್ದವು.

* * *

ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಂದ ಅಧಿಕಾರ ವಹಿಸಿಕೊಂಡ ಕಾಂಗ್ರೆಸ್ ಅಂದಿನ ಪರಿಸ್ಥಿತಿಗಳ ಒತ್ತಡದಿಂದಾಗಿ 'ಮಿಶ್ರ ಆರ್ಥಿಕತೆ'ಯನ್ನು ಅಂಗೀಕರಿಸಿತ್ತು. ಕಾರ್ಮಿಕ ಚಳುವಳಿಯೊಳಗೆ ಅದು ಅಧಿಕೃತವಾದ ಒಡಕನ್ನುಂಟುಮಾಡಿದ್ದರೂ ದೇಶದಲ್ಲಿ ಕಮ್ಯುನಿಸ್ಟ್ ಚಳುವಳಿಯು ಪ್ರಬಲವಾಗಿಯೇ ಇತ್ತು ಮತ್ತು ಭಾರತ ಕಮ್ಯುನಿಸ್ಟ್ ಪಕ್ಷವು ಅಧಿಕೃತ ವಿರೋಧ ಪಕ್ಷವಾಗಿ ಬೆಳೆದು ನಿಂತಿತ್ತು. ಅದರ ನೇತೃತ್ವದಲ್ಲಿ ದೇಶಾದ್ಯಂತ ದೊಡ್ಡ ದೊಡ್ಡ ಹೋರಾಟಗಳು ಸಂಘಟಿಸಲ್ಪಟ್ಟಿದ್ದವು.

ಈಗಾಗಲೇ ಮೇಲಿನ ಭಾಗಗಳಲ್ಲಿ ತಿಳಿಸಿರುವಂತೆ, ದ್ವಿತೀಯ ಜಾಗತಿಕ ಯುದ್ಧದ ಕಾಲಾವಧಿಯು ಸಾಮ್ರಾಜ್ಯವಾದದ ಪುನರ್‌ಸಂಘಟನೆಯ ಕಾಲವೂ ಆಗಿದ್ದುದರಿಂದ ಮತ್ತು ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಸೋವಿಯತ್ ಯೂನಿಯನ್ನಿನ ಬೆಂಬಲವಿದ್ದದ್ದು ಹಾಗೂ ದೇಶದೊಳಗೆ ಕಮ್ಯುನಿಸ್ಟ್ ಚಳುವಳಿಯು ಪ್ರಾಬಲ್ಯ ಹೊಂದಿದ್ದುದು – ರೂಪದಲ್ಲಿಯೇ ಆಗಿದ್ದರೂ ಸರಿಯೇ – ಭಾರತದ ಆಳುವ ವರ್ಗಗಳು ಸಮಾಜವಾದವನ್ನು ಒಪ್ಪಿಕೊಳ್ಳುವ ಒತ್ತಾಯಕ್ಕೀಡಾಗಿದ್ದವು. ಭಾರತ ಸರ್ಕಾರದ ಸೋವಿಯತ್ ರಷ್ಯಾದೊಂದಿಗಿನ ಮೈತ್ರಿಯನ್ನು ಈ ಹಿನ್ನೆಲೆಯೊಂದಿಗೆ ಅರ್ಥ ಮಾಡಿಕೊಳ್ಳಬೇಕು.

ಆದರೆ ಇದಾದ ಕೇವಲ ಎರಡು ದಶಕಗಳೊಳಗೆ, ಅಂತರರಾಷ್ಟ್ರೀಯ ಕಮ್ಯುನಿಸ್ಟ್ ಚಳುವಳಿಯೊಳಗೆ ಒಡಕು ಮೂಡಿದುದು ಮತ್ತು ೧೯೬೪ರಲ್ಲಿ ಕಮ್ಯುನಿಸ್ಟ್ ಪಕ್ಷವು ಒಡೆದು ಹೋಳಾದುದು ಭಾರತದ ಕಾರ್ಮಿಕ ಚಳುವಳಿಯನ್ನು ಅಕ್ಷರಶಃ ಕಂಗೆಡಿಸಿತು. ಅದು ಈ ಮೂಲಕ ಸಾಮ್ರಾಜ್ಯಶಾಹಿಗಳ ಪ್ರತಿ ಕ್ರಾಂತಿಕಾರಿ ದಾಳಿಗೆ ಈಡಾಗಿತ್ತು ಮತ್ತು ಈಗಲೂ ಅದೇ ಸ್ಥಿತಿಯಲ್ಲಿದೆ. ಕಾರ್ಮಿಕ ಚಳುವಳಿಯೊಳಗೆ ಮತ್ತು ಕಮ್ಯುನಿಸ್ಟ್ ಚಳುವಳಿಯೊಳಗೆ ವಾಸ್ತವವಾಗಿ ೧೯೬೦ರಿಂದ ಈಚೆಗೆ ನಡೆದಂತಹ "ಸೈದ್ಧಾಂತಿಕ ಹೋರಾಟ"ದ ಮುಖವಾಡದ ಒಡಕುಗಳು ವಾಸ್ತವಿಕ ಪರಿಸ್ಥಿತಿಯನ್ನು ಸರಿಯಾಗಿ ಮೌಲ್ಯಮಾಪನ ಮಾಡದಿದ್ದುದರಿಂದ

ಉಂಟಾದುದು ಹೇಗೋ, ಹಾಗೆಯೇ ಪರಿಸ್ಥಿತಿಯ ಸ್ವತಂತ್ರವಾದ ವಿಶ್ಲೇಷಣೆಗೆ ತೊಡಗದೆ ಉಳಿದ 'ಮಿತಿ'ಯಿಂದ ಜರುಗಿದಂತಹವುಗಳೂ ಆಗಿವೆ. ಇದಕ್ಕೆ ೧೯೬೯ರಲ್ಲಿ ನಡೆದ ಸಿಪಿಐ (ಎಂ. ಎಲ್.) ಮತ್ತು ತದನಂತರ ಅದರೊಳಗೇ ನಡೆದ ಹಲವಾರು ಸುತ್ತಿನ ಒಡಕುಗಳು ಸೂಕ್ತ ಉದಾಹರಣೆಗಳು.

ಎಲ್ಲರಿಗೂ ತಿಳಿದಿರುವಂತೆ ೧೯೧೭ರ ಮಹಾನ್ ಅಕ್ಟೋಬರ್ ಸಮಾಜವಾದಿ ಕ್ರಾಂತಿಯ ಮೂಲಕ ಆರಂಭಗೊಂಡಿರುವ 'ಸಾಮ್ರಾಜ್ಯಶಾಹಿ ಮತ್ತು ಶ್ರಮಜೀವಿ ವರ್ಗಗಳ ಕ್ರಾಂತಿ'ಯ ಈ ಯುಗದಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ಚಳುವಳಿ ಮತ್ತು ಅದರ ಭಾಗವಾಗಿರುವ ಭಾರತದ ಕಾರ್ಮಿಕ ಚಳುವಳಿ ಏನೆಲ್ಲಾ ಹಿನ್ನಡೆಗಳನ್ನು ಅನುಭವಿಸಿದ್ದರೂ ೧೯೨೦ರ ಅದರ ಪ್ರಣಾಳಿಕೆಯಲ್ಲಿ ಪ್ರಧಾನ ಗುರಿಯೆಂದು ಘೋಷಿಸಿದ 'ಸಮಾಜವಾದಿ ಭಾರತದ ನಿರ್ಮಾಣ' ಇಂದಿಗೂ ಕಾರ್ಮಿಕ ಚಳುವಳಿಯ ಪ್ರೀತಿಯ ವಿಷಯವಾಗಿಯೇ ಉಳಿದಿರುವದು ನಿಶ್ಚಿತವಾಗಿಯೂ ಅದರ ಉದಾತ್ತತೆಗೆ ಸಾಕ್ಷಿ.

ಸಾಮ್ರಾಜ್ಯಶಾಹಿಗಳು ಏನೆಲ್ಲಾ ಪ್ರತಿಗಾಮಿ ಪ್ರಯತ್ನಗಳನ್ನು ನಡೆಸಿದರೂ ಶ್ರಮಜೀವಿ ವರ್ಗಗಳನ್ನು ಸಮಾಜವಾದ ಅಥವಾ ಕಮ್ಯುನಿಸಂನಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಶ್ರಮಜೀವಿಗಳು, ಶ್ರಮಜೀವಿ ವರ್ಗ ಸರ್ವಾಧಿಕಾರವನ್ನು ಸ್ಥಾಪಿಸುವದು ಚಾರಿತ್ರಿಕ ಅನಿವಾರ್ಯ.

ಜಾಗತೀಕರಣದ ಹೆಸರಿನಲ್ಲಿ ಸಾಮ್ರಾಜ್ಯಶಾಹಿ ಶಕ್ತಿಗಳು ಮುನ್ನೊತ್ತುತ್ತಿರುವ ನೀತಿಗಳು ಶ್ರಮಿಕರನ್ನು ಕ್ರಮೇಣ ಕಂಗೆಡಿಸುತ್ತಾ ಸಾಗಿವೆ. ತಮ್ಮ ಆಧಿಪತ್ಯ ಉಳಿಸಿ ಕೊಳ್ಳಲು ಎಲ್ಲ ದೇಶದ ಆಳುವ ವರ್ಗಗಳು ಆಯಾ ದೇಶಗಳ ಬಂಡವಾಳಶಾಹಿ ಪೂರ್ವ ಸಾಮಾಜಿಕ ವಿಭೇದಗಳನ್ನು ನವೀಕರಿಸಿಕೊಂಡು ಮುನ್ನೊತ್ತಿರುವಂತೆ, ನಮ್ಮ ದೇಶದಲ್ಲೂ ಧಾರ್ಮಿಕ ಮೂಲಭೂತವಾದ ಮತ್ತು ಜಾತಿವಾದ ಮುಂತಾಗಿ ಎಲ್ಲ ಪ್ರತಿಗಾಮಿ ವಿಭೇದಗಳನ್ನು ಕೆರಳಿಸುತ್ತಾ, ಶ್ರಮಿಕರು ಸಮಾಜವಾದಕ್ಕಾಗಿ ಒಂದು ಪ್ರಚಂಡ ವರ್ಗವಾಗಿ ಒಗ್ಗೂಡದಂತೆ ತಡೆಯಲು ಹಲವಾರು ಪ್ರತಿಗಾಮಿ ಸಿದ್ಧಾಂತಗಳನ್ನು ತಯಾರಿಸಿ ಸಮಾಜದಲ್ಲಿ ಹರಡಲಾಗುತ್ತಿದೆ. ತನ್ನ ಅಧೀನದಲ್ಲಿರುವ ಮಾಧ್ಯಮಗಳನ್ನು ಇದಕ್ಕಾಗಿ ಯಥೇಚ್ಛವಾಗಿ ಬಳಸಿಕೊಳ್ಳುತ್ತಾ ಆಳುವ ವರ್ಗಗಳು ತಮ್ಮ ಯೋಜನೆ ಗೆದ್ದಿದೆಯೆಂದು ಬೀಗಬಹುದಷ್ಟೆ. ಆದರೆ ಇಂತಹ ಬೀಗುವಿಕೆ ತಾತ್ಕಾಲಿಕ ಮಾತ್ರ ಎಂಬುದನ್ನು ಎಡಪಕ್ಷಗಳ ಕರೆಯ ಮೇರೆಗೆ ಇತ್ತೀಚೆಗೆ ನಡೆದ ಕಾರ್ಮಿಕ ವರ್ಗದ ದೇಶವ್ಯಾಪಿ ಮುಷ್ಕರ ಸ್ಪಷ್ಟವಾಗಿ ತೋರಿಸಿಕೊಟ್ಟಿದೆ. ಮುಷ್ಕರ ಮುರಿಯಲು ಸರ್ಕಾರ ಏನೆಲ್ಲಾ ರೀತಿಯಲ್ಲಿ ಪ್ರಯತ್ನಿಸಿದರೂ, ಭಾರತದ ಎಲ್ಲ ಮಹಾನಗರಗಳು, ಪಟ್ಟಣಗಳು, ಸಣ್ಣಪುಟ್ಟ ಹೋಬಳಿ ಕೇಂದ್ರಗಳಲ್ಲೂ ಕೆಂಬಾವುಟಗಳನ್ನು ಹಿಡಿದು ಮೆರವಣಿಗೆ ನಡೆಸಿದ ಸುಮಾರು ಹದಿನೆಂಟು ಕೋಟಿ ಕಾರ್ಮಿಕರು 'ಇಂಕ್ವಿಲಾಬ್ ಜಿಂದಾಬಾದ್', 'ಸಾಮ್ರಾಜ್ಯವಾದ್ ಮುರ್ದಾಬಾದ್', 'ಮೋದಿ ಸರ್ಕಾರಕ್ಕೆ ಧಿಕ್ಕಾರ' ಎಂಬ ಘೋಷಣೆಗಳನ್ನು ಹಾಕಿದುದು ಸಾಮಾನ್ಯ ಸಂಗತಿಯಲ್ಲ.

ಕಾಂಗ್ರೆಸ್ ಸರ್ಕಾರದ ಜನವಿರೋಧಿ ಆಡಳಿತದ ವಿರುದ್ಧದ ಜನರ ಆಕ್ರೋಶದ ಲಾಭ ಪಡೆದು ಅಧಿಕಾರಕ್ಕೆ ಬಂದಿರುವ ಮೋದಿ ಸರ್ಕಾರವು, ತಾನು ಕಾಂಗ್ರೆಸ್‌ಗಿಂತಲೂ ಕಾರ್ಪೊರೇಟ್ ಬಂಡವಾಳದ ಅತ್ಯಂತ ನಿಷ್ಠಾವಂತ ಸೇವಕ ಎಂಬುದನ್ನು ಈಗಾಗಲೆ ಸ್ಪಷ್ಟಪಡಿಸಿದ್ದು, 'ನವ ಉದಾರವಾದದ' ಕುಖ್ಯಾತ ಪ್ರಸ್ತಾವವಾಗಿರುವ 'ಕಾರ್ಮಿಕ ಕಾನೂನುಗಳ ಸುಧಾರಣೆ'ಯ ಕಾರ್ಯಸೂಚಿಯನ್ನು ಲವಲೇಶವೂ ಅಳುಕಿಲ್ಲದಂತೆ ಮುನ್ನೊತ್ತಲು ಈಗ ಎಲ್ಲ ರೀತಿಯ ಸಿದ್ಧತೆ ಮಾಡಿಕೊಂಡಿದೆ. ಬಿಜೆಪಿಯ ರಾಜಸ್ಥಾನದ ಸರ್ಕಾರವು ಮಾಡಿ ಮುಗಿಸಿದ "ಕಾರ್ಮಿಕ ಕಾಯ್ದೆಗಳ ತಿದ್ದುಪಡಿ"ಯು ವಾಸ್ತವವಾಗಿ ಈ ನಿಟ್ಟಿನಲ್ಲಿ ಜರುಗಿದ ಡ್ರೆಸ್ ರಿಹರ್ಸಲ್ ಆಗಿದೆ. ಆದ್ದರಿಂದಲೇ ಕಾರ್ಮಿಕ ಕಾನೂನುಗಳ ತಿದ್ದುಪಡಿಯ ವಿಷಯದಲ್ಲಿ ರಾಜಸ್ಥಾನದ ಸರ್ಕಾರ ಕೈಗೆತ್ತಿಕೊಂಡ ಕ್ರಮಗಳನ್ನು ಮಾದರಿಯಾಗಿಟ್ಟುಕೊಳ್ಳಬೇಕೆಂದು ಎಲ್ಲ ರಾಜ್ಯಗಳಿಗೂ ಪ್ರಧಾನ ಮಂತ್ರಿಗಳ ಕಛೇರಿಯಿಂದ ಪತ್ರ ರವಾನೆಯಾದದ್ದು.

ಕಾರ್ಮಿಕ ವರ್ಗದ ಹಕ್ಕುಗಳ ಕುರಿತಾಗಿ ನಮ್ಮ ದೇಶದಲ್ಲಿರುವ ವಾಸ್ತವಿಕ ಸಂಗತಿ ಏನೆಂಬುದು ಎಲ್ಲರಿಗೂ ಗೊತ್ತಿರುವ ವಿಷಯವೇ ಆಗಿದೆ. ಕಾರ್ಮಿಕ ಕಾನೂನುಗಳು ಅಸ್ತಿತ್ವದಲ್ಲಿರುವಾಗ್ಯೂ ಅವುಗಳಿಗೆ ಬಹುತೇಕ ಕಂಪನಿಗಳ ಆಡಳಿತವು ಕವಡೆಕಾಸಿನ ಕಿಮ್ಮತ್ತನ್ನೂ ಕೊಡದೆ ದರ್ಪ ಮೆರೆಯುವ ಉದಾಹರಣೆಗಳಿಗೆ ನಮ್ಮಲ್ಲಿ ಕೊರತೆಯೇ ? ಬಹುತೇಕ ಕಡೆಗಳಲ್ಲಿ ಇಂದಿಗೂ ಕೂಡ ಬಹುರಾಷ್ಟ್ರೀಯ ಅಥವಾ ರಾಷ್ಟ್ರೀಯ ಕಂಪನಿ ಎಂಬ ಭೇದವಿರದಂತೆ ಕಾರ್ಮಿಕರಿಗೆ ಅವರ ಮೂಲಭೂತ ಹಕ್ಕಾದ "ಸಂಘ ಕಟ್ಟಿಕೊಳ್ಳುವ ಹಕ್ಕನ್ನೇ" ನಿರಾಕರಿಸಲಾಗಿರುವುದು ಸುಳ್ಳೇ ? ಪ್ರತಿನಿತ್ಯ ದೇಶಾದ್ಯಂತ ಒಂದಿಲ್ಲೊಂದು ಕಡೆ ನಡೆಯುತ್ತಲೇ ಇರುವ ಕಾರ್ಮಿಕರ ಮುಷ್ಕರಗಳ ಹಿನ್ನೆಲೆ ಮತ್ತು ಕೆಲವೆಡೆ ಹಿಂಸಾಚಾರದ ರೂಪ ಪಡೆದ ಪ್ರಕರಣಗಳ ಹಿಂದಿನ ವಸ್ತುಸ್ಥಿತಿಗಳನ್ನು ಗಮನಿಸಿದಾಗ ಕಂಡುಬರುವ ಮೊದಲ ವಿಷಯವೇ ಆಡಳಿತ ಮಂಡಳಿಗಳಿಂದ ಜರುಗಿದ ಕಾರ್ಮಿಕ ಕಾನೂನುಗಳ ಸ್ಪಷ್ಟ ಉಲ್ಲಂಘನೆಯೇ ಆಗಿರುತ್ತದೆ ! ಹೀಗಿರುವುದರಿಂದಲೇ ಕಾರ್ಮಿಕ ವರ್ಗದ ಐಕ್ಯ ಚಳುವಳಿಯು ಪ್ರತಿವರ್ಷ ಅಖಿಲ ಭಾರತ ಮುಷ್ಕರದ ಮೂಲಕ ಸರ್ಕಾರದ ಮುಂದಿಡುತ್ತಲೇ ಇರುವ ಬೇಡಿಕೆಗಳ ಪಟ್ಟಿಯಲ್ಲಿನ ಪ್ರಮುಖ ಅಂಶವಾಗಿ "ಕಾರ್ಮಿಕ ಕಾನೂನುಗಳ ಸಮರ್ಪಕ ಅನುಷ್ಠಾನ"ವೂ ಒಂದಾಗಿದ್ದುಕೊಂಡು ಬಂದಿರುತ್ತದೆ. ಆದರೆ ಯಾವುದನ್ನು ಕಟ್ಟುನಿಟ್ಟಾಗಿ ಅನುಷ್ಠಾನ ಮಾಡಬೇಕೆಂದು ಕೋಟ್ಯಂತರ ಕಾರ್ಮಿಕರು ಬೀದಿಗಿಳಿದು ಆಗ್ರಹಿಸುತ್ತಾರೋ ಆ ಕಾನೂನುಗಳನ್ನೇ ತೆಗೆದುಹಾಕುವ ಹೊಸ ಕಾನೂನು ತರಲು ಮೋದಿ ಸರ್ಕಾರ ಈಗ ದೃಢ ಹೆಜ್ಜೆಗಳನ್ನಿಡುತ್ತಿದೆ ! ಭಾರತದ ಕಾರ್ಮಿಕರು ಬೇಕಾದರೆ ಸಾಯಲಿ, ಮೋದಿ ಸರ್ಕಾರಕ್ಕೆ ವಿಶ್ವಬ್ಯಾಂಕಿನ 'ಈಸ್ ಆಫ್ ಡೂಯಿಂಗ್ ಬಿಸಿನೆಸ್'ನ ಪಟ್ಟಿಯಲ್ಲಿ ಮೇಲೇರಿ ಬಂಡವಾಳಶಾಹಿ ವರ್ಗಗಳ ಶಹಬ್ಬಾಶಗಿರಿ ಪಡೆಯುವದು ಮುಖ್ಯ!

'ಸುಧಾರಣೆ'ಯ ಹೆಸರಿನಲ್ಲಿ, ಈಗ ಇರುವಂತಹ ಸುಮಾರು ೪೪ ಪ್ರಮುಖ ಕಾರ್ಮಿಕ ಕಾನೂನುಗಳನ್ನು ತೆಗೆದುಹಾಕಿ, ಅದರ ಜಾಗದಲ್ಲಿ ಐದು 'ಕಾರ್ಮಿಕ ಸಂಹಿತೆ'ಗಳನ್ನು (ಲೇಬರ್ ಕೋಡ್)ಜಾರಿಗೊಳಿಸಲು ಉದ್ದೇಶಿಸಿರುವ ಮೋದಿ ಸರ್ಕಾರವು ವಾಸ್ತವದಲ್ಲಿ ಕಾರ್ಮಿಕರ ಸಂರಕ್ಷಣೆಯ ವಿಷಯದಲ್ಲಿದ್ದ ಸರ್ಕಾರದ ಜವಾಬ್ದಾರಿಯನ್ನೆಲ್ಲಾ ಗಾಳಿಗೆ ತೂರಲು ಉದ್ದೇಶಿಸಿದೆ. ಇವುಗಳ ಜಾರಿಯಿಂದ 'ಉದ್ಯೋಗದ ಭದ್ರತೆ' ಎಂಬುದು ಸಂಪೂರ್ಣವಾಗಿ ರದ್ದಾಗಲಿದ್ದು 'ಹೈರ್ ಅಂಡ್ ಫೈರ್' ಸಾರ್ವತ್ರಿಕವಾದ ಕಾನೂನಾಗಿಬಿಡುವ ಅಪಾಯವಿದೆ. ಈ ರೀತಿಯ ಕಾರ್ಮಿಕ ದ್ರೋಹಿ ಹೊಸ ಕಾನೂನುಗಳನ್ನು ರಾಜ್ಯಸಭೆ ಮತ್ತು ಲೋಕಸಭೆಗಳಲ್ಲಿ ಮಂಡಿಸಲು ಈಗಾಗಲೇ ಸರ್ಕಾರವು ಸರ್ವಸಿದ್ಧತೆಗಳನ್ನು ಮಾಡಿ ಮುಗಿಸಿದ್ದು, ಯಾವಾಗ ಬೇಕಾದರೂ ಅವುಗಳನ್ನು ಮಂಡಿಸಬಹುದಾಗಿದೆ ಮತ್ತು ತನ್ನ ಸಂಖ್ಯಾಬಲವನ್ನು ಬಳಸಿಕೊಂಡು ಅನುಮೋದಿಸಿಕೊಳ್ಳಬಹುದಾಗಿದೆ. ಕಾರ್ಮಿಕ ವರ್ಗದ ಮುಂದೆ ಈಗ ಉಳಿದಿರುವದು ಒಂದೇ ದಾರಿ. ಅದೆಂದರೆ ಹೋರಾಡುವುದು, ದಣಿವರಿಯದೆ ಹೋರಾಡುವುದು.

ಕಾರ್ಮಿಕ ವರ್ಗದ ಸಂಕಷ್ಟಮಯ ಬದುಕಿನ ಕುರಿತು ತನಗೆ ಯಾವುದೇ ರೀತಿಯ ಸಂವೇದನೆಗಳಿಲ್ಲ ಎಂಬುದನ್ನು ಈಗಾಗಲೆ ತನ್ನ ನಡವಳಿಕೆಗಳಿಂದ ಸ್ಪಷ್ಟಪಡಿಸಿರುವ ಮೋದಿ ಸರ್ಕಾರವು ಕಳೆದ ಸೆಪ್ಟೆಂಬರ್ ೨ರಂದು ಜರುಗಿದ ಕಾರ್ಮಿಕರ ಅಖಿಲ ಭಾರತ ಮುಷ್ಕರವನ್ನು ಮುರಿಯಲು ಹಲವಾರು ಬಗೆಯಲ್ಲಿ ಯತ್ನಿಸಿ ವಿಫಲವಾದಾಗ, ಅಂತಿಮ ಅಸ್ತ್ರವೆಂಬಂತೆ ಬಿಎಂಎಸ್ ಮೂಲಕ 'ವಿಜಯದಿವಸ'ವನ್ನಾಗಿ ಆ ದಿನವನ್ನು ಆಚರಿಸುವಂತೆ ಕರೆಕೊಟ್ಟದ್ದು ಕಾರ್ಮಿಕ ವರ್ಗದ ಐಕ್ಯತೆಯನ್ನು ಶತಾಯ ಗತಾಯ ಮುರಿಯಲು ಅದು ಹೊಂದಿರುವ "ಕ್ರಿಮಿನಲ್ ಐಡಿಯಾ"ಗಳಿಗೆ ಸಾಕ್ಷಿಯಾಗಿದೆ. ಅದರ ಈ ರೀತಿಯ ಕೀಳುಮಟ್ಟದ ಮತ್ತು ಶಾಂತಿ ಕದಡುವ ಎಲ್ಲ ಯತ್ನಗಳ ವಿರುದ್ಧವೂ ವರ್ಗಜಾಗೃತ ಕಾರ್ಮಿಕರು ಎಚ್ಚರದಿಂದಿರಬೇಕಿದೆ.

ಬಂಡವಾಳವಾದ ಮತ್ತು ಸಾಮ್ರಾಜ್ಯವಾದಗಳ 'ಜೀವನದ ರಹಸ್ಯ'ವು ಗೊತ್ತಿರುವದು ಮತ್ತು ಅದನ್ನು ಸುಲಭವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಿರುವದು ಶ್ರಮಜೀವಿ ವರ್ಗಕ್ಕೆ ಮಾತ್ರ. ಶ್ರಮಜೀವಿ ವರ್ಗವು ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿಯನ್ನು ಮರ್ದಿಸಬಲ್ಲದು ಎಂಬುದು ಈಗಾಗಲೇ ಇತಿಹಾಸದಲ್ಲಿ ರುಜುವಾತಾಗಿದೆ. ಕುಟಿಲ ತಂತ್ರಗಳನ್ನು ರೂಪಿಸಿ, ಕಾರ್ಮಿಕ ವರ್ಗವನ್ನು ಸಮಾಜವಾದಕ್ಕಾಗಿ ಐಕ್ಯಗೊಳ್ಳದಂತೆ ತಡೆಯುವದರಲ್ಲಿ ಯಶಸ್ವಿಯಾಗಲು ಸಾಧ್ಯವಿರುವವರೆಗಷ್ಟೇ ಬಂಡವಾಳಶಾಹಿ ಬದುಕಿರಬಲ್ಲದು. ಕಾರ್ಮಿಕ ಚಳುವಳಿಯು ಸಮಾಜವಾದಕ್ಕಾಗಿ ಐಕ್ಯಗೊಂಡರೆ ಮತ್ತು ಇತರೆ ಶೋಷಿತ ವರ್ಗ ಸಮೂಹಗಳೊಡನೆ ಐಕ್ಯರಂಗ ನಿರ್ಮಿಸಿಕೊಂಡರೆ ಮರುಕ್ಷಣವೇ ಬಂಡವಾಳಶಾಹಿಯ ಪತನ ಶತಸ್ಸಿದ್ಧ.

**ಅಯ್ಯಪ್ಪ ಹೂಗಾರ್**
ನಂ. ೬೩, ಎಂಐಜಿ–೨, ಗ್ರೂಪ್–೪, ಕೆ.ಎಚ್.ಬಿ. ಕಾಲನಿ, ಹೂಟಗಳ್ಳಿ , ಮೈಸೂರು – ೫೭೦ ೦೧೮

# ಗ್ರಾಹಕ ಚಳವಳಿ ನಡೆದು ಬಂದ ರೀತಿ




ಜಗತ್ತಿನ ಇತಿಹಾಸದಲ್ಲಿ ಅನೇಕ ಜನಪರ ಚಳವಳಿಗಳು ನಡೆದಿವೆ, ನಡೆಯುತ್ತಿವೆ ಹಾಗೂ ಮುಂದೆ ನಡೆಯಲಿವೆ. ಈ ಚಳವಳಿಗಳು ಯಾಕೆ ಮತ್ತು ಹೇಗೆ ಹುಟ್ಟಿಕೊಳ್ಳುತ್ತವೆ ಎಂಬುದನ್ನು ನಿರ್ದಿಷ್ಟವಾಗಿ ಗುರುತಿಸುವುದು ಸುಲಭವಲ್ಲ. ಅಥವಾ ಯಾರು ಈ ಚಳವಳಿಗೆ ಕಾರಣರು ಎಂಬುದನ್ನು ನಿಖರವಾಗಿ ಹೇಳುವುದಕ್ಕೂ ಆಗುವುದಿಲ್ಲ. ಮಾತ್ರವಲ್ಲ, ಕೆಲವೊಂದು ಸಾಮಾಜಿಕ ಚಳವಳಿಗಳ ಬಗ್ಗೆ ದಾಖಲೆಗಳು, ಮಾಹಿತಿ, ಪುರಾವೆ ಇತ್ಯಾದಿ ಇಲ್ಲದ ಕಾರಣ ಆ ಚಳವಳಿಗಳನ್ನು ಜನ ಗುರುತಿಸುವುದಿಲ್ಲ. ಪರಿಸರ ಚಳವಳಿ, ರೈತರ ಚಳವಳಿ, ಮಾನವ ಹಕ್ಕು ಚಳವಳಿ ಇತ್ಯಾದಿ ವಿಷಯಗಳಲ್ಲಿ ಸಾಕಷ್ಟು ಮಾಹಿತಿ ಸಂಗ್ರಹವಾಗಿದೆ. ಈ ವಿಷಯ ಕುರಿತ ಅನೇಕ ಸಂಶೋಧನೆಗಳು ನಡೆದಿವೆ. ವಿಪುಲವಾದ ದಾಖಲೆಗಳು ಲಭ್ಯವಿವೆ. ಮುಖ್ಯವಾಗಿ ಕೆಲವೊಂದು ಸಾಮಾಜಿಕ ಚಳವಳಿಗಳು ಮಾನವ ಅಭಿವೃದ್ಧಿಯ ಸಂಕೇತವಾಗಿ ಬೆಳೆದಿವೆ. ಆದ್ದರಿಂದ ಅದನ್ನು ಅಭ್ಯಾಸ ಮಾಡುವ ಪ್ರತ್ಯೇಕ ಶಿಸ್ತು ಹುಟ್ಟಿದೆ. ಆದರೆ ಜನಸಾಮಾನ್ಯರಿಗೆ ಅತ್ಯಂತ ಅಗತ್ಯವಾದ ಗ್ರಾಹಕ ಹಕ್ಕುಗಳ ಬಗ್ಗೆ ಇದಾವುದರ ಮನ್ನಣೆಯೂ ದೊರಕಿಲ್ಲ. ಗ್ರಾಹಕರ ಹಕ್ಕುಗಳ ಬಗ್ಗೆ ಇದುವರೆಗೆ ಆಗಿರುವ ಪ್ರಯತ್ನವನ್ನು ಚಳವಳಿ ಎಂದು ಕರೆಯಬಹುದೆ ಎಂಬ ಅನುಮಾನ ಉದ್ಭವಿಸಿದರೂ ಆಶ್ಚರ್ಯವಿಲ್ಲ. ಆದರೆ ಗ್ರಾಹಕರ ಹಕ್ಕುಗಳಿಗೆ ಸಂಬಂಧಿಸಿದ ಹೋರಾಟ, ಚಳವಳಿ ಮತ್ತು ಪ್ರಯತ್ನ ಅರವತ್ತರ ದಶಕದಿಂದಲೇ ಆರಂಭವಾಗಿದ್ದು, ಅದನ್ನು ಸಮಗ್ರವಾಗಿ ಪರಿಶೀಲಿಸಿ, ದಾಖಲಿಸ ಬೇಕಾಗಿದೆ. ಈ ಹಿನ್ನೆಲೆಯಲ್ಲಿ ಬಳಕೆದಾರರ ಹಕ್ಕುಗಳ ಬಗ್ಗೆ ನಡೆದಿರುವ ಪ್ರಯತ್ನಗಳ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಈ ಲೇಖನದ ಉದ್ದೇಶ.

ಗ್ರಾಹಕರ ಸಂರಕ್ಷಣೆಯನ್ನು ಮಾರುಕಟ್ಟೆಯೊಂದಿಗೆ ಅಭ್ಯಾಸ ಮಾಡಬೇಕಾಗುತ್ತದೆ. ಕಾರಣ ಗ್ರಾಹಕ ಮತ್ತು ಮಾರುಕಟ್ಟೆ ಎರಡೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಮಾರುಕಟ್ಟೆ ಇರುವುದೇ ಗ್ರಾಹಕರಿಗಾಗಿ. ಗ್ರಾಹಕರಿಲ್ಲದಿದ್ದರೆ ಮಾರುಕಟ್ಟೆಯ ಅವಶ್ಯಕತೆ ಇರುವುದಿಲ್ಲ. ಅದೇ ರೀತಿ ಮಾರುಕಟ್ಟೆಯಿಲ್ಲದೆ ಗ್ರಾಹಕ ತನ್ನ ಜೀವನ ಸಾಗಿಸಲು ಸಾಧ್ಯವಿಲ್ಲ. ಗ್ರಾಹಕರು ತಮ್ಮ ಅಗತ್ಯಗಳನ್ನು ತಾವೇ ಪೂರೈಸಿಕೊಳ್ಳುತ್ತಿದ್ದ ಕಾಲದಲ್ಲಿ ಸಮಸ್ಯೆಗಳು ಇರಲಿಲ್ಲವೆಂದಲ್ಲ. ಸಮಸ್ಯೆಗಳು ಇಂದಿನಷ್ಟು ಗೊಂದಲಮಯವಾಗಿ, ಸಂಕೀರ್ಣ ವಾಗಿರಲಿಲ್ಲ. ಯಾವಾಗ ಗ್ರಾಹಕರ ಮತ್ತು ತಯಾರಕರ ನಡುವಿನ ಅಂತರ ಹೆಚ್ಚಾಯಿತೋ ಆಗ ಗ್ರಾಹಕರು ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಯಿತು. ಸಮಸ್ಯೆ ಉದ್ಭವಿಸಿದಂತೆ ಗ್ರಾಹಕ ಚಳವಳಿ ಕಾಣತೊಡಗಿತು.

---

**ವೈ. ಜಿ. ಮುರಳೀಧರನ್**

ಗ್ರಾಹಕರನ್ನು ರಕ್ಷಿಸುವ ಪ್ರಯತ್ನ ಅಥವಾ ಗ್ರಾಹಕ ಚಳವಳಿಯ ಕುರುಹುಗಳನ್ನು ಸಾವಿರಾರು ವರ್ಷಗಳ ಹಿಂದೆ ನೋಡಬಹುದು. ಹಮ್ಮುರಾಬಿ ತನ್ನ ಸಂಹಿತೆಯಲ್ಲಿ ಸರಕುಗಳಿಗೆ ಗರಿಷ್ಠ ಬೆಲೆಯನ್ನು ಸೂಚಿಸಿದ್ದಾನೆ. ತಯಾರಕರು ಮತ್ತು ಮಾರಾಟಗಾರರು ವಂಚನೆ ಮಾಡಿದಲ್ಲಿ ಅವರನ್ನು ಯಾವ ಶಿಕ್ಷೆಗೆ ಗುರಿಪಡಿಸಬೇಕು ಎಂಬುದನ್ನು ವಿವರವಾಗಿ ಹೇಳಿದ್ದಾನೆ. ಆಹಾರ ಕಲಬೆರಕೆ ಮಾಡುವವರನ್ನು ಬಂಧಿಸಿ, ತಲೆ ಬೋಳಿಸಿ, ಊರಿನ ಮುಖ್ಯ ಬೀದಿಗಳಲ್ಲಿ ಮೆರವಣಿಗೆ ಮಾಡಬೇಕೆಂದು ಹೇಳಿದ್ದಾನೆ. ಮುಸ್ಲಿಂ ಆಡಳಿತದಲ್ಲಿ ಗ್ರಾಹಕರ ರಕ್ಷಣೆಗೆ ಕೆಲವೊಂದು ಕ್ರಮ ಜಾರಿಯಲ್ಲಿತ್ತು. ತೂಕ ಮತ್ತು ಅಳತೆಗೆ ಸಂಬಂಧಿಸಿದ ನಿಯಮವನ್ನು ಮುಸ್ಲಿಂ ಆಡಳಿತಗಾರರು ನಿರ್ವಹಿಸುತ್ತಿದ್ದರು. ಇತರೆ ದೇಶಗಳಲ್ಲೂ ಗ್ರಾಹಕರ ರಕ್ಷಣೆಗೆ ಅನೇಕ ಕಾನೂನುಗಳು ಜಾರಿಯಲ್ಲಿದ್ದವು. ಸುಮಾರು ೩೫೦೦ ವರ್ಷಗಳ ಹಿಂದೆ ಟರ್ಕಿಯಲ್ಲಿ ಆಹಾರ ಸುರಕ್ಷತೆ ಬಗ್ಗೆ ಬಳಕೆದಾರರ ನೀತಿಸಂಹಿತೆ ಜಾರಿಯಲ್ಲಿತ್ತು. ಆದರೆ ಗ್ರಾಹಕರ ಸಂರಕ್ಷಣೆಗೆ ಅಂತರರಾಷ್ಟ್ರೀಯ ಮನ್ನಣೆ ದೊರೆತಿದ್ದು ಬ್ರಿಟಿಷ್ ಆಳ್ವಿಕೆಯಲ್ಲಿ. ಬ್ರಿಟಿಷರು ಇಡೀ ದೇಶಕ್ಕೆ ಅನ್ವಯಿಸುವ ಕಾನೂನು ವ್ಯವಸ್ಥೆಯನ್ನು ಜಾರಿಗೊಳಿಸಿದ ಪರಿಣಾಮ ಸ್ಥಳೀಯ ಪದ್ಧತಿಗಳು ಕೊನೆಗೊಂಡು, ಗ್ರಾಹಕರಿಗೆ ಅನುಕೂಲವಾಯಿತು. ಅಮೇರಿಕದಲ್ಲಿ ಹದಿನೆಂಟನೇ ಶತಮಾನದಲ್ಲೇ ಗ್ರಾಹಕರ ಹಿತರಕ್ಷಣೆ ಬಗ್ಗೆ ಕಾನೂನುಗಳನ್ನು ಅಳವಡಿಸಲಾಗಿತ್ತು. ಕಂಪನಿಗಳು ಆರಂಭವಾಗುತ್ತಿದ್ದ ಸಮಯದಲ್ಲಿ ಸಮಾಜದ ಆರ್ಥಿಕ ಸಂಪನ್ಮೂಲಗಳು ಕೆಲವೇ ಕಂಪನಿಗಳು ಮತ್ತು ಗುಂಪುಗಳಲ್ಲಿ ಕೇಂದ್ರೀಕೃತ ವಾಗುವುದನ್ನು ತಪ್ಪಿಸಲು ೧೮೯೦ರಲ್ಲಿ ಶೆರ್ಮನ್ ಕಾಯ್ದೆಯನ್ನು ಜಾರಿಗೊಳಿಸಲಾಯಿತು. ೧೯೧೪ರಲ್ಲಿ ಫೆಡರಲ್ ಟ್ರೇಡ್ ಕಮಿಷನ್ ಕಾಯ್ದೆಯನ್ನು ಹೊರಡಿಸುವ ಮೂಲಕ ಗ್ರಾಹಕ ಹಿತರಕ್ಷಣೆಗೆ ಹೆಚ್ಚು ಪ್ರಾಮುಖ್ಯತೆ ನೀಡಲಾಯಿತು. ಎರಡು ಅಥವಾ ಹೆಚ್ಚು ಕಂಪನಿಗಳು ವಿಲೀನಗೊಳ್ಳುವುದರಿಂದ ಗ್ರಾಹಕರಿಗೆ ತೊಂದರೆ ಉಂಟಾಗುತ್ತದೆ ಎಂಬುದನ್ನು ಗಮನಿಸಿ ಸರ್ಕಾರ ಅದೇ ವರ್ಷ ಕ್ಲೇಟನ್ ಕಾಯ್ದೆಯನ್ನು ಜಾರಿಗೊಳಿಸಿತು. ಇದರಿಂದ ಮಾರುಕಟ್ಟೆಯಲ್ಲಿ ಏಕಸ್ವಾಮ್ಯತೆಯನ್ನು ತಪ್ಪಿಸಿತು.

ಮಾರುಕಟ್ಟೆಯಲ್ಲಿ ಆಗುತ್ತಿದ್ದ ವಂಚನೆಯನ್ನು ಪರಿಗಣಿಸಿದ ಜಾನ್ ಎಫ್. ಕೆನಡಿ ೧೯೬೨ರಲ್ಲಿ ಅಮೇರಿಕದ ನಾಗರಿಕರಿಗೆ ಬಿಲ್ ಆಫ್ ಕನ್ಸ್ಯೂಮರ್ ರೈಟ್ಸ್ ಎಂಬ ಕಾಯ್ದೆಯನ್ನು ಹೊರಡಿಸಿದರು. ಈ ಕ್ರಮ ಅಮೇರಿಕದಲ್ಲಿ ಮಾತ್ರವಲ್ಲ, ಇಡೀ ವಿಶ್ವದಲ್ಲಿ ಗ್ರಾಹಕ ಜಾಗೃತಿಗೆ ಹೊಸ ಚೈತನ್ಯ ನೀಡಿತು. ಆ ಹೊತ್ತಿಗಾಗಲೆ ಗ್ರಾಹಕರ ರಕ್ಷಣೆಗಾಗಿ ಅನೇಕ ಸ್ವಯಂಸೇವಾ ಸಂಸ್ಥೆಗಳು ಸ್ಥಾಪನೆಗೊಂಡಿದ್ದವು. ಮುಖ್ಯವಾಗಿ, ಕನ್ಸ್ಯೂಮರ್ಸ್ ಯೂನಿಯನ್ ಎಂಬ ಬಹು ದೊಡ್ಡ ಗ್ರಾಹಕ ಸಂಸ್ಥೆ ಜನ್ಮತಾಳಿತು. ಇದು ಈಗ



ಕನ್ಸ್ಯೂಮರ್ ಇಂಟರ್‌ನ್ಯಾಷನಲ್ ಎಂದು ಮಾರ್ಪಟ್ಟಿದೆ. ಅರವತ್ತರ ದಶಕದಲ್ಲಿ ಗ್ರಾಹಕ ಸಂರಕ್ಷಣೆಯ ಚರಿತ್ರೆಯಲ್ಲಿ ಮರೆಯಲಾಗದ ಘಟನೆ ಜರುಗಿತು. ಪ್ರಿನ್ಸ್‌ಟನ್ ವಿಶ್ವವಿದ್ಯಾಲಯದಲ್ಲಿ ವ್ಯಾಸಂಗ ಮಾಡುತ್ತಿದ್ದ ಕಾನೂನು ವಿದ್ಯಾರ್ಥಿಯೊಬ್ಬ ಅಮೇರಿಕದ ಕಾರುಗಳನ್ನು ಮತ್ತು ಸಂಭವಿಸುತ್ತಿದ್ದ ಅಪಘಾತಗಳ ಬಗ್ಗೆ 'ಅನ್‌ಸೇಫ್ ಅಟ್ ಎನಿ ಸ್ಪೀಡ್' ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದ. ಪ್ರತಿಷ್ಠಿತ ಜನರಲ್ ಮೋಟಾರ್ಸ್ ಕಂಪನಿಯ ಕಾರು ಎಷ್ಟು ಅಪಾಯಕಾರಿ ಎಂಬುದನ್ನು ಸಾಬೀತುಪಡಿಸಿದ. ಕಂಪನಿ ನ್ಯಾಯಾಲಯದಲ್ಲಿ ಮಾನನಷ್ಟ ಮೊಕದ್ದಮೆ ಹೂಡಿದರೂ ಫಲಕಾರಿಯಾಗಲಿಲ್ಲ. ಕೊನೆಗೆ, ವಿದ್ಯಾರ್ಥಿಗೆ ಲಕ್ಷಾಂತರ ಡಾಲರ್ ಪರಿಹಾರ ನೀಡಿತು. ಆ ಹಣವನ್ನು ಬಳಸಿಕೊಂಡು ವಿದ್ಯಾರ್ಥಿ ಹೊಸ ಗ್ರಾಹಕ ಸಂಸ್ಥೆ ಸ್ಥಾಪಿಸಿದ. ಆ ವಿದ್ಯಾರ್ಥಿಯೇ ರಾಲ್ಫ್ ನೇಡರ್ ಮತ್ತು ಆತ ಸ್ಥಾಪಿಸಿದ ಸಂಸ್ಥೆಯ ಹೆಸರು ಪಬ್ಲಿಕ್ ಸಿಟಿಜನ್. ನೇಡರ್ ಗ್ರಾಹಕ ಚಳವಳಿಯ ನೇತೃತ್ವ ವಹಿಸಿಕೊಂಡ ಮೇಲೆ ಅಮೇರಿಕ ಮಾತ್ರವಲ್ಲ, ಇಡೀ ವಿಶ್ವದಲ್ಲಿ ಅನೇಕ ಗ್ರಾಹಕರ ಪರ ಕಾನೂನುಗಳು ಬಂದವು. ಆಹಾರ ಕಲಬೆರಕೆ, ಹಾದಿ ತಪ್ಪಿಸುವ ಜಾಹೀರಾತು ಇತ್ಯಾದಿಗಳ ಜೊತೆಗೆ ಬಳಕೆದಾರರ ರಕ್ಷಣೆಗೆ ಕನ್ಸ್ಯೂಮರ್ ಪ್ರಾಡಕ್ಟ್ ಸೇಫ್ಟಿ ಕಮಿಷನ್ ಎಂಬ ಸಂಸ್ಥೆಯನ್ನೂ ಸ್ಥಾಪಿಸಲಾಯಿತು.

ಕೆನಡಿ ನೀಡಿದ ಹಕ್ಕುಗಳನ್ನು ಆಧಾರವಾಗಿ ಇಟ್ಟುಕೊಂಡು ವಿಶ್ವಾದ್ಯಂತ ಗ್ರಾಹಕ ಸಂಸ್ಥೆಗಳು ಗ್ರಾಹಕರ ಸಂರಕ್ಷಣೆಗೆ ಪ್ರತ್ಯೇಕ ಕಾನೂನು ರಚಿಸುವಂತೆ ಸರ್ಕಾರಗಳನ್ನು ಒತ್ತಾಯಿಸಲು ಒಂದು ಚಳವಳಿಯನ್ನೇ ಆರಂಭಿಸಿದವು. ಜೊತೆಗೆ, ವಿಶ್ವದ ಎಲ್ಲಾ ರಾಷ್ಟ್ರಗಳು ಇದನ್ನು ಅನುಸರಿಸುವಂತೆ ಮಾಡಲು ವಿಶ್ವಸಂಸ್ಥೆ ಸೂಚನೆ ನೀಡುವಂತೆ ಒತ್ತಾಯಿಸಿದವು. ಇದರ ಫಲವಾಗಿ ಏಪ್ರಿಲ್ ೧೯೮೫ರಲ್ಲಿ ವಿಶ್ವಸಂಸ್ಥೆಯು 'ಯು ಎನ್ ಗೈಡ್‌ಲೈನ್ಸ್ ಆನ್ ಕನ್ಸ್ಯೂಮರ್ ಪ್ರೊಟೆಕ್ಷನ್' ಎಂಬ ಘೋಷಣೆಯನ್ನು ಸಿದ್ಧಪಡಿಸಿತು. ಭಾರತವೂ ಸೇರಿದಂತೆ ಅನೇಕ ರಾಷ್ಟ್ರಗಳು ಅದಕ್ಕೆ ತಮ್ಮ ಸಹಮತ ಸೂಚಿಸಿದವು. ಈ ಘೋಷಣೆಯನ್ನು ಆಧರಿಸಿ ಭಾರತ ಸರ್ಕಾರವು ೧೯೮೬ರ ಡಿಸೆಂಬರ್ ತಿಂಗಳಲ್ಲಿ ಗ್ರಾಹಕ ಸಂರಕ್ಷಣಾ ಕಾಯ್ದೆಯನ್ನು ಜಾರಿಗೊಳಿಸಿತು. ಕಾಯ್ದೆಯು ಕೇಂದ್ರ ಸರ್ಕಾರದ ದಿನಾಂಕ ೨೪.೧೨.೧೯೮೬ರ ಗೆಜೆಟ್‌ನಲ್ಲಿ ಪ್ರಕಟಿಸಿದ ಕಾರಣ ಆ ದಿನವನ್ನು ರಾಷ್ಟ್ರೀಯ ಗ್ರಾಹಕರ ದಿನವನ್ನಾಗಿ ಆಚರಿಸಲಾಗುತ್ತಿದೆ. ಜೊತೆಗೆ ಕೆನಡಿ ನೀಡಿದ ಹಕ್ಕುಗಳ ಸ್ಮರಣಾರ್ಥ ಮಾರ್ಚ್ ೧೫ರಂದು ವಿಶ್ವ ಗ್ರಾಹಕರ ಹಕ್ಕುಗಳ ದಿನವನ್ನು ಆಚರಿಸಲಾಗುತ್ತಿದೆ.

ವಿಶ್ವದ ಗ್ರಾಹಕರ ಹಕ್ಕುಗಳ ಚರಿತ್ರೆಯನ್ನು ಗಮನಿಸಿದಾಗ ಅದು ಬೆಳೆದು ಬಂದ ರೀತಿಯನ್ನು ನಾಲ್ಕು ನೆಲೆಗಳಲ್ಲಿ ವಿಶ್ಲೇಷಿಸಬಹುದು. ಮೊದಲನೆಯದು, ಉದಾರತ್ವ ಅಥವಾ ಲಿಬರಲ್. ಇದರ ಪ್ರಕಾರ ಸಮಾಜದಲ್ಲಿ ಯಾವುದೇ ತಪ್ಪು ಅಥವಾ ಲೋಪವಿಲ್ಲ. ಆದರೆ ಮಾರಾಟಗಾರರು ಮತ್ತು ಗ್ರಾಹಕರ ಮಧ್ಯೆ ಒಂದು ರೀತಿಯ ಅಸಮತೋಲನವಿದ್ದು, ಅದರಿಂದ ಗ್ರಾಹಕರ ಶೋಷಣೆ ಆಗುತ್ತಿದೆ. ಇದನ್ನು ಸರಿಪಡಿಸಲು ಸೂಕ್ತ ಕ್ರಮ ಅಗತ್ಯ. ಎರಡನೆಯದು, ವಿಮರ್ಶಾತ್ಮಕ ಅಥವಾ ಕ್ರಿಟಿಕಲ್ ದೃಷ್ಟಿಕೋನ. ಇದರ ಪ್ರಕಾರ ಜನರಲ್ಲಿ ಕೊಳ್ಳುಬಾಕ ಸಂಸ್ಕೃತಿ ಇದೆ. ತಯಾರಕರು ಮತ್ತು ಮಾರಾಟಗಾರರು ಮೋಸಮಾಡುತ್ತಾರೆ. ಇವರಿಬ್ಬರ ನಡುವೆ ನಡೆಯುತ್ತಿರುವ ಸಮರವನ್ನು ತಡೆಗಟ್ಟಲು ಅಥವಾ ಶಮನಮಾಡಲು ಪ್ರಯತ್ನಿಸಬೇಕು. ಮೂರನೆಯದು, ಜವಾಬ್ದಾರಿಯುತ ಅಥವಾ ರೆಸ್ಪಾನ್ಸಿಬಲ್ ತತ್ವ. ಇದರ ಪ್ರಕಾರ ಕೊಳ್ಳುವಿಕೆಯನ್ನು ವಿಸ್ತಾರವಾಗಿ ಪರಿಗಣಿಸಲಾಗುತ್ತದೆ. ಬಳಕೆದಾರರು ತಮ್ಮ ಜವಾಬ್ದಾರಿಯನ್ನು ಅರಿತು ಆದಷ್ಟೂ ಸಂಪನ್ಮೂಲವನ್ನು ರಕ್ಷಿಸಬೇಕು, ಉಳಿಸಬೇಕು ಇತ್ಯಾದಿ ಇಲ್ಲಿನ ಅಂಶಗಳು. ಕಡೆಯದಾಗಿ, ಕ್ರಾಂತಿಕಾರಕ ಅಥವಾ ರ್‍ಯಾಡಿಕಲ್ ತತ್ತ್ವ. ಇದರ ಪ್ರಕಾರ ಸಮಾಜದಲ್ಲಿರುವ ಅಸಮತೋಲನ, ಸಾಮಾಜಿಕ ಅನ್ಯಾಯ, ಉದ್ಯಮ ನಡೆದುಕೊಳ್ಳುವ ರೀತಿ ಇತ್ಯಾದಿ ಬಳಕೆದಾರರಿಗೆ ಮಾರಕವಾಗಿರುತ್ತದೆ. ಇದನ್ನು ಸರಿಪಡಿಸಲು ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆ ಕ್ರಮ ಕೈಗೊಳ್ಳಬೇಕು.

ಮೇಲೆ ಹೇಳಿದ ತತ್ತ್ವಗಳ ಹಿನ್ನೆಲೆಯಲ್ಲಿ ಗ್ರಾಹಕ ಚಳವಳಿ ಬೆಳೆದು ಬಂದಿರುವ ರೀತಿಯನ್ನು ಅಥವಾ ಈಗಿರುವ ಸ್ಥಿತಿಯನ್ನು ವಿಶ್ಲೇಷಿಸಬಹುದು. ಇತರೆ ಸಾಮಾಜಿಕ ಚಳವಳಿಗಳಂತೆ, ಗ್ರಾಹಕ ಚಳವಳಿಯಲ್ಲಿ ನಾಲ್ಕು ಘಟ್ಟಗಳನ್ನು ಗುರುತಿಸಬಹುದು. ಮೊದಲನೆಯದು, ಆಂದೋಳನದ ಘಟ್ಟ. ಈ ಹಂತದಲ್ಲಿ ಕೆಲ ವ್ಯಕ್ತಿಗಳು ಅಥವಾ ಸಂಸ್ಥೆಗಳು ಗ್ರಾಹಕರ ಸಂರಕ್ಷಣೆಯನ್ನು ತಮ್ಮ ಜೀವನದ ಗುರಿ ಎಂದು ಭಾವಿಸಿ ಅದಕ್ಕಾಗಿ ಹೋರಾಟ ಆರಂಭಿಸುತ್ತಾರೆ. ಎರಡನೆಯ ಘಟ್ಟ ಜನಪ್ರಿಯತೆಯ ಘಟ್ಟ. ಒಂದು ಆಂದೋಳನವಾಗಿ ಆರಂಭವಾದ ಚಳವಳಿಯನ್ನು ಜನ ಕ್ರಮೇಣ ಒಪ್ಪಿಕೊಳ್ಳಲು ಆರಂಭಿಸುತ್ತಾರೆ. ಸಮಾಜದ ಇತರೆ ಸಂಸ್ಥೆಗಳು ಗ್ರಾಹಕರ ಹಿತವನ್ನು ರಕ್ಷಿಸಲು ಕ್ರಮ ಕೈಗೊಳ್ಳುತ್ತವೆ. ಮೂರನೆಯದು, ಸಂಘಟನಾ ಘಟ್ಟ. ಈ ಹಂತದಲ್ಲಿ ಗ್ರಾಹಕರ ರಕ್ಷಣೆಗೆಂದೇ ಪ್ರತ್ಯೇಕ ಸಂಸ್ಥೆಗಳು ಹುಟ್ಟಿಕೊಳ್ಳುತ್ತವೆ. ನಾಲ್ಕನೆಯ ಘಟ್ಟದಲ್ಲಿ ಗ್ರಾಹಕ ಸಂರಕ್ಷಣೆಯ ಜವಾಬ್ದಾರಿಯನ್ನು ಸರ್ಕಾರವೇ ವಹಿಸಿಕೊಳ್ಳುತ್ತದೆ. ಅಂದರೆ, ಗ್ರಾಹಕ ರಕ್ಷಣೆ ಆಡಳಿತಗಾರರ ತೆಕ್ಕೆಯಲ್ಲಿರುತ್ತದೆ. ಈ ನಾಲ್ಕು ಘಟ್ಟಗಳು ಒಂದಾದ ಮೇಲೆ ಮತ್ತೊಂದು ಎಂದು ಹೇಳುವಂತಿಲ್ಲ ಅಥವಾ ಎಲ್ಲ ದೇಶಗಳಲ್ಲೂ ಒಂದೇ ಘಟ್ಟದಲ್ಲಿರುತ್ತವೆ ಎಂದು ಹೇಳುವಂತಿಲ್ಲ.

ಗ್ರಾಹಕ ಚಳವಳಿಯ ಬೆಳವಣಿಗೆಯನ್ನು ಮತ್ತೊಂದು ನೆಲೆಯಲ್ಲಿ ವಿಶ್ಲೇಷಿಸಬಹುದು. ಒಂದು ವಿಷಯ ಅಥವಾ ಪ್ರಕರಣ ಅಥವಾ ಒಬ್ಬ ನಾಯಕನ ಆಗಮನ ಗ್ರಾಹಕ ಚಳವಳಿಗೆ ಕಾರಣವಾಗಿರುವುದನ್ನು ಗಮನಿಸಬಹುದು. ಒಂದು ವಿಶಿಷ್ಟ ವಿಷಯ ಅನೇಕ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಚಳವಳಿಗೆ ಕಾರಣವಾಗಿರುವಂತೆ, ಗ್ರಾಹಕ ಚಳವಳಿಗೂ ಕಾರಣವಾಗಿದೆ. ಅರವತ್ತರ ದಶಕದಲ್ಲಿ ಪ್ರಕಟವಾದ ರಾಚೆಲ್ ಕಾರ್ಸನ್ ಬರೆದ 'ದ ಸೈಲೆಂಟ್ ಸ್ಪ್ರಿಂಗ್' ಎಂಬ ಪುಸ್ತಕ ಇಡೀ ವಿಶ್ವದ ಗಮನ ಸೆಳೆಯಿತು. ಅದರಲ್ಲಿ ಕಾರ್ಸನ್ ಔದ್ಯೋಗೀಕರಣವು ಹೇಗೆ ಪರಿಸರವನ್ನು ನಾಶಪಡಿಸುತ್ತಿದೆ ಎಂಬುದನ್ನು ದಾಖಲಿಸಿದ್ದ. ವಿಶೇಷವಾಗಿ ಬೃಹತ್ ಕಂಪನಿ ಮಾಲೀಕರು ತಮ್ಮ ಲಾಭವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಪರಿಸರವನ್ನು ನಿರ್ಲಕ್ಷಿಸಿದ್ದನ್ನು ದಾಖಲಿಸಿದ್ದ. ಇದೇ ಸಮಯದಲ್ಲಿ ಗ್ರಾಹಕರ ವಿಷಯಕ್ಕೆ ಸಂಬಂಧಪಟ್ಟ ಮತ್ತೊಂದು ಪುಸ್ತಕ ಪ್ರಕಟವಾಯಿತು. ಜಾಹೀರಾತು ಹೇಗೆ ಗ್ರಾಹಕರನ್ನು ವಂಚಿಸುತ್ತಿದೆ ಎಂಬುದನ್ನು ವ್ಯಾನ್ ಪ್ಯಾಕಾರ್ಡ್ ತನ್ನ ಮಹತ್ವದ ಪುಸ್ತಕ "ದ ಹಿಡನ್ ಪರ್ಸುಯೇಡರ್ಸ್"ನಲ್ಲಿ ವಿವರಿಸಿದ್ದಾನೆ. ಗ್ರಾಹಕರನ್ನು ಸೆಳೆಯುವ ತಂತ್ರ ಈ ಜಾಹೀರಾತು. ಇದರ ಬಗ್ಗೆ ಈಗಲೂ ಚರ್ಚೆ ನಡೆಯುತ್ತಿದೆ. ಈ ಪುಸ್ತಕ ಪ್ರಕಟವಾದಾಗಿನಿಂದ ಗ್ರಾಹಕ ಸಂರಕ್ಷಣೆ ವಿಷಯದ ಜೊತೆ ಜಾಹೀರಾತು ಹಾಸುಹೊಕ್ಕಾಗಿದೆ. ಮತ್ತೊಂದು ಪುಸ್ತಕ ರಾಲ್ಫ್ ನೇಡರ್‌ನ "ಅನ್‌ಸೇಫ್ ಅಟ್ ಎನಿ ಸ್ಪೀಡ್."

ಪುಸ್ತಕಗಳು ಅಥವಾ ವಿಷಯಗಳೇ ಅಲ್ಲದೆ, ಕೆಲವೊಂದು ಘಟನೆಗಳು ಗ್ರಾಹಕ ಜಾಗೃತಿಗೆ ಕಾರಣವಾಗಿರುವುದನ್ನು ನೋಡಬಹುದು. ಉದಾಹರಣೆಗೆ ಭೋಪಾಲ್ ಅನಿಲ ದುರಂತ ಗ್ರಾಹಕರ ಸುರಕ್ಷತೆಯ ಬಗ್ಗೆ ಸಾಕಷ್ಟು ಕಾಳಜಿಗೆ ಕಾರಣವಾಯಿತು. ನಾಗರಿಕರ ರಕ್ಷಣೆಗಾಗಿ ಕೇಂದ್ರ ಸರ್ಕಾರ ಪಬ್ಲಿಕ್ ಲಯಬಿಲಿಟಿ ಕಾಯ್ದೆಯನ್ನು ಜಾರಿಗೊಳಿಸಿತು. ೧೯೧೧ರಲ್ಲಿ ನ್ಯೂಯಾರ್ಕ್ ನಗರದಲ್ಲಿ ಟ್ರಯಾಂಗಲ್ ಶರ್ಟ್‌ವೈಸ್ಟ್ ಫ್ಯಾಕ್ಟರಿಯಲ್ಲಿ ಸಂಭವಿಸಿದ ಅಗ್ನಿ ದುರಂತದಲ್ಲಿ ಸುಮಾರು ೧೪೬ ಕಾರ್ಮಿಕರು ಸುಟ್ಟು ಬೂದಿಯಾದರು. ಮತ್ತೆ ಕೆಲ ಕಾರ್ಮಿಕರು ಕಟ್ಟಡದಿಂದ ಧುಮುಕಿ ಅಸುನೀಗಿದರು. ಇದೂ ಸಹ ಗ್ರಾಹಕರ ಸುರಕ್ಷತೆಯತ್ತ ಗಮನ ಹರಿಸಲು ಕಾರಣವಾಯಿತು. ಅಣುಸ್ಥಾವರಗಳಿಂದ ಆಗುವ ಅನಾಹುತವೂ ಗ್ರಾಹಕರ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಥಾಲಿಡೊಮೈಡ್ ಎಂಬ ಔಷಧವನ್ನು ಸೇವಿಸಿದ ಗರ್ಭಿಣಿಯರು ಅಂಗವೈಕಲ್ಯವಿರುವ ಶಿಶುಗಳಿಗೆ ಜನ್ಮ ನೀಡಿದ್ದು ಸಹ ಔಷಧ ಸುರಕ್ಷತಾ ಚಳವಳಿಗೆ ಕಾರಣವಾಯಿತು. ಇದೇ ರೀತಿ ಕೆಲವು ನಾಯಕರು ಗ್ರಾಹಕರ ಹಕ್ಕುಗಳ ಚಳವಳಿಗೆ ಕಾರಣರಾಗಿದ್ದಾರೆ. ಉದಾಹರಣೆಗೆ ಮಾರ್ಟಿನ್ ಲೂಥರ್ ಕಿಂಗ್ ಜೂನಿಯರ್, ಮಹಾತ್ಮ ಗಾಂಧಿ ಮುಂತಾದವರು. ಇವರುಗಳು ನೇರವಾಗಿ ಗ್ರಾಹಕರ ವಿಷಯಗಳಿಗೆ ಹೋರಾಡದಿದ್ದರೂ, ಪರೋಕ್ಷವಾಗಿ ಗ್ರಾಹಕರ ಆಂದೋಳನಕ್ಕೆ ತಮ್ಮ ಕೊಡುಗೆ ನೀಡಿದ್ದಾರೆ.

**ವೈ. ಜಿ. ಮುರಳೀಧರನ್**
ಸದಸ್ಯರು : ಕೇಂದ್ರ ಗ್ರಾಹಕ ಸಂರಕ್ಷಣಾ ಪರಿಷತ್ತು, ಭಾರತ ಸರ್ಕಾರ
ನಂ. ೯೦೦, 'ಸಂಧ್ಯಾರಾಗ', ೧ನೇ ಹಂತ, ೧ನೇ ಫೇಸ್, ಚಂದ್ರಾ ಲೇಔಟ್, ೧೫ನೇ ಅಡ್ಡರಸ್ತೆ, ನಾಗರಭಾವಿ, ಬೆಂಗಳೂರು – ೭೨




# ‘ಸಮಗ್ರತೆ’ ಮಹಿಳಾ ಚಳುವಳಿಯ ಗುಣವಾಗಬೇಕು




**೨೦೧೨ರ ಡಿಸೆಂಬರ್ ೧೬ರಂದು ದೆಹಲಿಯ ಪ್ಯಾರಾ ಮೆಡಿಕಲ್ ವಿದ್ಯಾರ್ಥಿನಿಯ ಮೇಲೆ ಪೈಶಾಚಿಕ ಅತ್ಯಾಚಾರ ಇಡೀ ದೇಶವನ್ನು ತಲ್ಲಣಗೊಳಿಸಿತು. ಈ ಅತ್ಯಾಚಾರ ನಡೆದ ಘೋರಸ್ವರೂಪ ದೇಶದ ಅಂತಃಶಕ್ತಿಯನ್ನೇ ಬಡಿದೆಬ್ಬಿಸಿತು. ದೇಶಾದ್ಯಂತ ಇದನ್ನು ಪ್ರತಿಭಟಿಸಿ ಜನ ಸ್ವಯಂಪ್ರೇರಣೆಯಿಂದ ಬೃಹತ್‌ಸಂಖ್ಯೆಯಲ್ಲಿ ಬೀದಿಗಿಳಿದು ಪ್ರತಿಭಟಿಸಿದರು.**

*“ಕೋಟಿ ಕೋಟಿ ಕಷ್ಟಗಳಲ್ಲಿ ಲಕ್ಷಾಂತರ ನೋವುಗಳಲ್ಲಿ*
*ನೀ ಹುಟ್ಟಿ ಬೆಳೆದೆಯಮ್ಮ ನನ್ನ ತಂಗಿ ಅನಸೂಯ........”*

೧೯೭೯ರಲ್ಲಿ ಕೋಲಾರದ ಹುಣಸೇಕೋಟೆಯ ಅನಸೂಯಮ್ಮನ ಮೇಲೆ ನಡೆದ ಅತ್ಯಾಚಾರ ಮತ್ತು ಅವಳ ತಂದೆ ಶೇಷಗಿರಿಯಪ್ಪನ ಕೊಲೆಯನ್ನು ಪ್ರತಿಭಟಿಸಿ ದಲಿತ ಸಂಘರ್ಷ ಸಮಿತಿಯ ನೇತೃತ್ವದಲ್ಲಿ ಕೋಲಾರ ಮತ್ತು ಬೆಂಗಳೂರಿನಲ್ಲಿ ನಡೆದ ಪ್ರತಿಭಟನಾ ಕಾರ್ಯಕ್ರಮಗಳಲ್ಲಿ ಮೊಳಗಿದ ಈ ಹಾಡು ಮುಂದೆ ನಡೆದ ಹಲವಾರು ಮಹಿಳಾ ಕಾರ್ಯಕ್ರಮಗಳಲ್ಲಿ ತಪ್ಪದೆ ಕೇಳಿಬರುತ್ತಿದ್ದ ಹೋರಾಟದ ಹಾಡಾಗಿತ್ತು. ಕರ್ನಾಟಕದ ಮಹಿಳಾ ಚಳುವಳಿಯಲ್ಲಿ ಈ ಘಟನೆ ಮತ್ತು ಹೋರಾಟ ಒಂದು ಮಹತ್ವದ ಮೈಲಿಗಲ್ಲು. ಹೆಣ್ಣಿನ ನೋವು ಮತ್ತು ಅವಳ ಮೇಲಾಗುವ ಅತ್ಯಾಚಾರದ ಪ್ರತಿಭಟನೆಗೆ ಅನಸೂಯಮ್ಮ ಮಾದರಿಯಾದದ್ದು ಇದಕ್ಕೆ ಕಾರಣ. ಈ ಸಂದರ್ಭದಲ್ಲಿ ಸಮಾಜದ ಎಲ್ಲ ಪ್ರಗತಿಪರ ಸಂಘಟನೆಗಳೂ ಈ ಪ್ರತಿಭಟನೆಯಲ್ಲಿ ಭಾಗಿಯಾದದ್ದು ಒಂದು ಗಮನಾರ್ಹವಾದ ಅಂಶ.

ಎಪ್ಪತ್ತರ ದಶಕದಲ್ಲಿ ಕರ್ನಾಟಕದಲ್ಲಿ ಕ್ರಿಯಾಶೀಲವಾದ ಮಹಿಳಾ ಚಳುವಳಿ ತನ್ನ ಬೆನ್ನಿಗೆ ಒಂದು ದೀರ್ಘವಾದ ಮಹಿಳಾ ಪರಂಪರೆಯನ್ನು ಕಟ್ಟಿಕೊಂಡಿತ್ತು. ಜೊತೆಗೆ ತನ್ನ ನೆಲದಲ್ಲಿ ತುರ್ತುಪರಿಸ್ಥಿತಿಗೆ ತಿರುಗಿಬಿದ್ದ ಮನೋದಾರ್ಢ್ಯವನ್ನು ಹೊಂದಿತ್ತು. ಎಲ್ಲಕ್ಕಿಂತ ಮುಖ್ಯವಾಗಿ ವಿಶ್ವಸಂಸ್ಥೆ ಕರೆ ಕೊಟ್ಟ ಅಂತರರಾಷ್ಟ್ರೀಯ ಮಹಿಳಾ ವರ್ಷ ಮತ್ತು ಮಹಿಳಾ ದಶಕದ ಮೂಲ ಪ್ರೇರಣೆಯನ್ನು ತನ್ನೊಡಲಲ್ಲಿ ಉಸಿರಾಗಿಸಿಕೊಂಡಿತ್ತು. ಅಲ್ಲದೆ, ಕೇಂದ್ರ ಸರ್ಕಾರ ಹೊರತಂದ ‘ಸಮಾನತೆಯೆಡೆಗೆ’ ವರದಿಯು ಅದರ ಕೈದೀವಿಗೆಯಾಗಿತ್ತು. ಇದರೊಂದಿಗೆ ಅಂತರರಾಷ್ಟ್ರೀಯ ಬೆಳವಣಿಗೆಗಳನ್ನು ಅರಗಿಸಿಕೊಳ್ಳುವ ಶಕ್ತಿಯನ್ನೂ ಹೊಂದಿತ್ತು. ಇದೊಂದು ವಿಶಿಷ್ಟ ಸಾಮಾಜಿಕ ಪಲ್ಲಟದ ಸಂದರ್ಭ. ಈ ಕಾಲಘಟ್ಟದಲ್ಲಿ ದೇಶ ಎದುರಿಸಿದ ತುರ್ತು ಪರಿಸ್ಥಿತಿಯನ್ನು ಪ್ರತಿಭಟಿಸಲೆಂದು ವಿವಿಧ ಜನವರ್ಗಗಳು ಸಂಘಟಿತವಾಗಿ ಕ್ರಿಯಾಶೀಲವಾದವು. ದಲಿತ ಸಂಘರ್ಷ ಸಮಿತಿ, ಸಮುದಾಯ ರಂಗಚಳುವಳಿ, ಬಂಡಾಯ ಸಾಹಿತ್ಯ ಸಂಘಟನೆ, ಮಹಿಳಾ ಸಂಘಟನೆಗಳು, ಕಾರ್ಮಿಕ ಸಂಘಟನೆಗಳು, ರೈತ ಸಂಘಟನೆ, ಪರಿಸರ ಚಳುವಳಿ, ಸಮಾಜವಾದಿ ಸಂಘಟನೆಗಳು ಮತ್ತು ಎಡ ಸಂಘಟನೆಗಳು – ಹೀಗೆ ಒಟ್ಟಾರೆಯಾಗಿಯೂ ಮತ್ತು ಪ್ರತ್ಯೇಕವಾಗಿಯೂ ಈ ಸಂಘಟನೆಗಳು ಕ್ರಿಯಾಶೀಲವಾಗಿದ್ದವು. ಇದೊಂದು ಚಳುವಳಿಗಳ ಉತ್ಕರ್ಷದ ಕಾಲವಾಗಿತ್ತು. ಅಂದು ಅಂತರ್ಜಾತೀಯ ವಿವಾಹ, ಸರಳ ಮದುವೆ, ವರದಕ್ಷಿಣೆ ನಿಷೇಧ – ಮುಂತಾದ ಆದರ್ಶಗಳನ್ನಿಟ್ಟುಕೊಂಡ ಚಳುವಳಿಗಾರರು ಅದನ್ನು ವಾಸ್ತವದಲ್ಲಿ ನಿಜಮಾಡಲು ಶ್ರಮಿಸುತ್ತಿದ್ದರು. ಈ ಸಂಘಟನೆಗಳ ನಡುವೆ ಇದ್ದ ಕೊಡು–ಕೊಳುಗೆಗಳಿಂದಾಗಿ ಮಹಿಳಾ ಚಳುವಳಿ ಬಲ ಪಡೆದುಕೊಂಡು ಮೇಲೆದ್ದು ನಿಂತಿತು .

ಎಪ್ಪತ್ತರ ದಶಕದಲ್ಲಿ ಆರಂಭವಾದ ಸ್ತ್ರೀ ನೇತೃತ್ವದ ಮಹಿಳಾ ಚಳುವಳಿಯು ಮಧ್ಯಮ ವರ್ಗ ಮತ್ತು ಮೇಲು ಜಾತಿಗಳ ಮಹಿಳೆಯರ ಕೈಯಲ್ಲಿದ್ದುದು ಸಹಜವೇ ಆಗಿತ್ತು. ಅಂದು ಸಾಂಪ್ರದಾಯಿಕ ಶಿಕ್ಷಣದ ಜೊತೆಗೆ, ಇಂಗ್ಲಿಷ್ ಶಿಕ್ಷಣಕ್ಕೆ ತೆರೆದುಕೊಂಡ ಮಹಿಳೆಯರು ರಾಷ್ಟ್ರೀಯ ಮತ್ತು ಜಾಗತಿಕ ವಿಚಾರಧಾರೆಗಳ ತಿಳಿವಿನಿಂದ ಒಂದು ಹೊಸ ಎಚ್ಚರವನ್ನು ತಮ್ಮಲ್ಲಿ ಮೂಡಿಸಿಕೊಂಡರು. ಎಪ್ಪತ್ತರ ದಶಕದಲ್ಲಿ ಕಮ್ಯೂನಿಸಂ ಪ್ರಬಲವಾಗಿದ್ದ ಕಾಲ. ಆರಂಭದಲ್ಲಿ ಎಡಚಿಂತನೆಗೆ

**ಡಾ॥ ಎನ್. ಗಾಯತ್ರಿ**

ತೆರೆದುಕೊಂಡ ಮಹಿಳೆಯರು ಮಹಿಳಾ ಚಳುವಳಿಯಲ್ಲಿ ಆಸಕ್ತಿ ವಹಿಸಿದರು. ಅದರಲ್ಲೂ ವಿಶೇಷವಾಗಿ ವಿಶ್ವವಿದ್ಯಾಲಯಗಳಲ್ಲಿ, ಕಾಲೇಜುಗಳಲ್ಲಿ ಕೆಲಸಮಾಡುವ ಶಿಕ್ಷಕಿಯರು ಮತ್ತು ಬರಹಗಾರ್ತಿಯರು ತಮ್ಮ ಓದಿನಿಂದ ದಕ್ಕಿದ ವಿಚಾರಧಾರೆಗಳಿಂದ ಹೆಣ್ಣಿನ ಹಕ್ಕು ಮತ್ತು ಸ್ವಾತಂತ್ರ್ಯದ ಬಗ್ಗೆ ಪ್ರಶ್ನೆಗಳನ್ನು ಎತ್ತಿದರು.

*ತೂರಬೇಡಿ ಗಾಳಿಗೆ ಹೆಣ್ತನದ ಘನತೆಯ,*
*ಜೀವ ಕೊಡುವ ಜೀವ ಇದು ಕಡಿಮೆ ಯಾರಿಗೆ?*
*ನಾಚಬೇಡಿ ಹೆಣ್ತನಕೆ ತಲೆಯೆತ್ತಿ ನಿಲ್ಲಿರಿ*
*ನಾಚಬೇಕು ತುಳಿದವರು ಮನುಜಾತಿಗೆ ಸೇರಿದವರು* (ವಿಜಯಾ ದಬ್ಬೆ)

ಹೀಗೆ ಹೆಣ್ತನದ ಘನತೆಯನ್ನು ಎತ್ತಿಹಿಡಿದ ಆ ಕಾಲದ ಚಳುವಳಿಯೂ ಏಕಮುಖವಾಗೇನೂ ಇರಲಿಲ್ಲ. ಹಾಗೆ ನೋಡಿದರೆ ಜಗತ್ತಿನ ಯಾವ ಮೂಲೆಯಲ್ಲಿಯೂ ಸ್ತ್ರೀವಾದಿ ಚಳುವಳಿ ಮತ್ತು ಸ್ತ್ರೀವಾದ ಏಕಾಕಾರವನ್ನು ಪಡೆದಿಲ್ಲ. ರಾಜಕೀಯ ಪಕ್ಷಗಳ ಮಹಿಳಾ ಸಂಘಟನೆಗಳು, ಶ್ರಮಿಕ ಮಹಿಳಾ ಶಕ್ತಿ, ಸ್ವಾಯತ್ತ ಮಹಿಳಾ ಸಂಘಟನೆಗಳು ಮತ್ತು ಸರ್ಕಾರೇತರ ಮಹಿಳಾ ಸಂಘಟನೆಗಳು (ಎನ್.ಜಿ.ಓ)– ಎಂದು ಹಲವು ಬಗೆಯ, ಹಲವು ನಿಲುವಿನ ಮಹಿಳಾ ಗುಂಪುಗಳು ಕಾರ್ಯ ನಿರ್ವಹಿಸಿದವು. ಈ ಮಹಿಳೆಯರೇ ಮಹಿಳಾ ದಿನಾಚರಣೆಯ ಪ್ರಾಮುಖ್ಯತೆಯನ್ನು ಜನರಿಗೆ ಮನವರಿಕೆ ಮಾಡಿ, ಮಾಧ್ಯಮಗಳಿಗೂ ಪರಿಚಯಿಸಿ ಕಾರ್ಯಕ್ರಮಗಳನ್ನು ಸಂಯುಕ್ತವಾಗಿ ಆಚರಿಸುವ ಪರಂಪರೆಯನ್ನು ಹುಟ್ಟುಹಾಕಿದರು. ಕೆಲವರಿಗೆ ನಾಯಕತ್ವ ಮುಖ್ಯವಾದರೆ, ಮತ್ತೆ ಕೆಲವರಿಗೆ ಸೋದರಿತ್ವ ಮುಖ್ಯ. ಕೆಲವರಿಗೆ ಮಹಿಳಾ ಮೀಸಲಾತಿ ಬೇಡ. ಹೀಗೆ ಹಲವಾರು ತಾತ್ವಿಕ ಭಿನ್ನಾಭಿಪ್ರಾಯಗಳು ಇವರ ನಡುವೆ ಇದ್ದವು. ಇವರುಗಳು ಪಾಶ್ಚಾತ್ಯ ತಾತ್ವಿಕ ಸಿದ್ಧಾಂತಗಳನ್ನು ತಮ್ಮ ತಾತ್ವಿಕ ವಿಶ್ಲೇಷಣೆಗೆ ಬಳಸಿಕೊಂಡರೂ ಪ್ರಾಯೋಗಿಕವಾಗಿ ಸ್ಥಳೀಯ ಸಮಸ್ಯೆಗಳಿಗೆ ಸ್ಪಂದಿಸಿ, ಅದರ ಆಧಾರದ ಮೇಲೆಯೇ ಮಹಿಳೆಯರನ್ನು ಸಂಘಟಿಸಿದರು. ಮಹಿಳಾ ಅಧ್ಯಯನ ಮತ್ತು ಹೋರಾಟಕ್ಕೆ ಬೇಕಾದ ಅಸ್ತಿಭಾರವನ್ನು ನಿರ್ಮಿಸಿದ್ದು ಈ ಕಾಲಘಟ್ಟದ ಮಹಿಳಾ ಚಳುವಳಿಯ ಕೊಡುಗೆಯಾಗಿದೆ.

ಅಂತರರಾಷ್ಟ್ರೀಯ ಮಹಿಳಾ ವರ್ಷದಿಂದ ಆರಂಭವಾಗಿ ಮುಂದುವರಿದ ಮಹಿಳಾ ದಶಕದ ಚಟುವಟಿಕೆಗಳು ಕರ್ನಾಟಕದಲ್ಲಿ ಹಲವಾರು ಮಹಿಳಾ ಸಂಘಟನೆಗಳನ್ನು ಹುಟ್ಟುಹಾಕಿದವು. ಮೈಸೂರಿನ ಸಮತಾ, ಬೆಂಗಳೂರಿನ ವಿಮೋಚನಾ, ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಮಾನಸ, ಜನವಾದಿ ಮಹಿಳಾ ಸಂಘಟನೆ, ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್ ಕರ್ನಾಟಕ ಘಟಕ, ಮಹಿಳಾ ಸಾಂಸ್ಕೃತಿಕ ಸಂಘಟನೆ, ಮಹಿಳಾ ಮುನ್ನಡೆ, ಹೀಗೆ ಇನ್ನೂ ಹಲವಾರು...... ಈ ಸಂಘಟನೆಗಳಲ್ಲಿ ಕೆಲವರು ಸಮತಾ ವಾರ್ತಾ ಪತ್ರ, ವಿಮೋಚನಾ ವಾರ್ತಾ ಪತ್ರ, ಅಚಲ, ಮಾನಸ, ಜಾಗೃತಿ ಮತ್ತು ಸಂವೇದಿ ಮುಂತಾದ ಪತ್ರಿಕೆಗಳು ಸ್ಥಾಪಿತ ವ್ಯವಸ್ಥೆಯ ವಿರುದ್ಧ ಹೋರಾಟ ನಡೆಸಬೇಕೆಂಬ ತಾತ್ವಿಕತೆಯ ನೆಲೆಗಟ್ಟನ್ನು ಹೊಂದಿದ್ದು ಮಹಿಳಾ ಚಳುವಳಿಯ ಭಾಗವಾಗಿ ಕಾರ್ಯ ನಿರ್ವಹಿಸಿದವು.

**ಮಹಿಳಾ ಚಳುವಳಿಯ ತಾತ್ವಿಕತೆ**

ಈ ಅವಧಿಯಲ್ಲಿ ಕ್ರಿಯಾಶೀಲವಾಗಿದ್ದ ಮಹಿಳಾ ಸಂಘಟನೆಗಳು ಪುರುಷಸೃಷ್ಟಿಯಾಗಿದ್ದ ಚರಿತ್ರೆ, ಚಿಂತನೆ, ವ್ಯವಸ್ಥೆ ಎಲ್ಲವುಗಳ ಅಧಿಕಾರ ಲೋಕಕ್ಕೆ ಲಗ್ಗೆಯಿಟ್ಟು 'ಸಾಮಾಜಿಕ ನ್ಯಾಯ' ಮತ್ತು 'ಮಾನವ ಹಕ್ಕು'ಗಳು ಎಂಬ ಪರಿಭಾಷೆಯಲ್ಲಿ ತನ್ನದೇ ವಿಶಿಷ್ಟ ಅನುಭವದ ನೆಲೆಯಿಂದ ಪ್ರಶ್ನೆಗಳನ್ನೊಡ್ಡಿ ಮಹಿಳೆಯರ ಅಸ್ಮಿತೆಗಾಗಿ ಹೋರಾಟ ನಡೆಸಿದ್ದವು. ಅತ್ಯಾಚಾರ, ವರದಕ್ಷಿಣೆ ಸಮಸ್ಯೆ, ಮತೀಯ ಕಾನೂನುಗಳಲ್ಲಿನ ಕುಂದುಕೊರತೆ ಮುಂತಾದ ಕೌಟುಂಬಿಕ ಸಮಸ್ಯೆಗಳಿಗೆ ಪರಿಹಾರವನ್ನು ದೊರಕಿಸಿಕೊಳ್ಳಲು ಇದ್ದ ಕಾನೂನಿನಲ್ಲಿ ಬದಲಾವಣೆ ತರಲು ಹೋರಾಟ ನಡೆಸಿದ ಈ ಕಾಲದ ಮಹಿಳಾ ಚಳುವಳಿ ಹೆಚ್ಚು ಶಕ್ತಿಯುತವಾಗಿ ಸಂಘಟನೆಗೊಂಡಿತು. ಲಿಂಗತಾರತಮ್ಯ, ಪಿತೃಪ್ರಧಾನ ವ್ಯವಸ್ಥೆಯೊಳಗಿನ ಹೆಣ್ಣಿನ ನೆಲೆಯ ನಿಜ ಸ್ವರೂಪ, ಈ ವ್ಯವಸ್ಥೆ ರೂಪಿಸಿರುವ

ಸಂಸ್ಕೃತಿ ಹಾಗೂ ಸಾಂಸ್ಕೃತಿಕ ಅಭಿವ್ಯಕ್ತಿಯಾದ ಸಾಹಿತ್ಯ, ಕಲೆಗಳ ವಿಶ್ಲೇಷಣೆ ಮಾಡಿ, ಜ್ಞಾನಶಿಸ್ತುಗಳ ಚೌಕಟ್ಟುಗಳನ್ನು ಅನಾವರಣಗೊಳಿಸಿ ಸತ್ಯವನ್ನು ಶೋಧಿಸುವ ಕೆಲಸವನ್ನು ಈ ಸಂದರ್ಭದ ಪ್ರಗತಿಪರ ಸಂವೇದನೆಯು ರೂಪಿಸಿದ್ದು, ಇವೆಲ್ಲವುಗಳ ಪರಿಣಾಮವಾಗಿ ಅದೊಂದು ಚಳುವಳಿಯ ಸ್ವರೂಪವನ್ನು ಪಡೆಯಿತು.

ಈ ಸಂದರ್ಭದ ಮಹಿಳಾ ಚಳುವಳಿಗೆ ಹೆಣ್ಣಿನ ಅಸ್ಮಿತೆಯನ್ನು ಕಂಡುಕೊಳ್ಳುವುದು ಅಂದಿನ ಅಗತ್ಯವಾಗಿತ್ತು. ಮಹಿಳಾ ಚಳುವಳಿಯ ಕಾರ್ಯಕರ್ತರು ಮಹಿಳಾ ಸಮಸ್ಯೆಗಳನ್ನು ರಾಜಕೀಯ ಪ್ರಶ್ನೆಗಳಾಗಿ ಕಂಡರು. "ವೈಯಕ್ತಿಕವೂ ರಾಜಕೀಯವೇ" ಎಂದು ಹೇಳುತ್ತಾ, ಕ್ರೌರ್ಯವನ್ನು ವ್ಯಕ್ತಿಯ ವರ್ತನೆಯಾಗಿ ಮಾತ್ರ ನೋಡದೆ ಅಧಿಕಾರದ ಪರಿಭಾಷೆಯಲ್ಲಿ ಅದನ್ನು ವಿವರಿಸಿದರು. ಅಧಿಕಾರ ಹೇರುವಿಕೆಯಿಂದ ಉದ್ಭವಿಸುವ ವರದಕ್ಷಿಣೆ ಸಾವುಗಳು, ಅತ್ಯಾಚಾರ ಪ್ರಕರಣಗಳು, ಕೌಟುಂಬಿಕ ದೌರ್ಜನ್ಯಗಳು, ದುಡಿಯುವ ಸ್ಥಳಗಳಲ್ಲಿ ನಡೆಯುವ ಲೈಂಗಿಕ ಕಿರುಕುಳಗಳು – ಇವೆಲ್ಲವೂ ಕಾನೂನಿನ ಶಿಕ್ಷೆಗೆ ಒಳಪಡಬೇಕಾದಂತಹವು ಎಂದು ಹೇಳುತ್ತಲೇ, ಅವುಗಳ ನಿವಾರಣೋಪಾಯಕ್ಕೆ ಅಗತ್ಯವಾದ ಕಾನೂನನ್ನು, ಕಾನೂನಿನ ಸುಧಾರಣೆಗಳನ್ನು ಜಾರಿಗೊಳಿಸುವ ಬಗ್ಗೆ ಒತ್ತಿ ಹೇಳಿದವು. ಈ ಸಮಸ್ಯೆಗಳನ್ನು ಚರ್ಚಿಸುವಾಗ ಎಲ್ಲಿಯೂ ಆ ಸಮಸ್ಯೆಗಳಿಗೆ ಪುರುಷನನ್ನು ವ್ಯಕ್ತಿಗತವಾಗಿ ಕಾರಣವಾಗಿಸದೆ, ಸಮಾಜದ ಪುರುಷ ಪ್ರಾಧಾನ್ಯತೆಯನ್ನು ಕೇಂದ್ರವಾಗಿ ಗುರಿಪಡಿಸಲಾಯಿತು. ಅಲ್ಲದೆ, ಹೆಣ್ಣಿನ ಆರೋಗ್ಯ ಸಮಸ್ಯೆಗಳು ಕೇವಲ ದೈಹಿಕ ನೋವುಗಳಾಗದೆ ಸಾಮಾಜಿಕ, ಆರ್ಥಿಕ ಆಯಾಮಗಳನ್ನು ಪಡೆದುಕೊಂಡವು.

ಸಾಹಿತಿಗಳು, ಕಾಲೇಜು ಅಧ್ಯಾಪಕರು ಮತ್ತು ಬಿಳಿ ಕಾಲರ್ ಉದ್ಯೋಗಸ್ಥ ಮಹಿಳೆಯರು ಕ್ರಿಯಾಶೀಲವಾಗಿ ತೊಡಗಿಕೊಂಡಿದ್ದ ಮಹಿಳಾ ಚಳುವಳಿಯ ಈ ಕಾಲಘಟ್ಟವು 'ಮಹಿಳಾ ಅಸ್ಮಿತೆ'ಯನ್ನು ಕಂಡುಕೊಳ್ಳುವ ಕ್ರಿಯಾಶೀಲ ಗಳಿಗೆಯಾಗಿತ್ತು. ಇವರುಗಳು ಬೀದಿಗಿಳಿದು ಸಾಮಾಜಿಕ ವಲಯದಲ್ಲಿ ದುಡಿದಷ್ಟೇ ತೀವ್ರವಾಗಿ ಕಲೆ, ಸಾಹಿತ್ಯ ಮತ್ತು ಸಾಂಸ್ಕೃತಿಕ ರಂಗದಲ್ಲಿಯೂ ಹೆಣ್ಣಿನ ನೆಲೆಯಿಂದ ಪರಂಪರೆಯನ್ನು ಕಟ್ಟಿಕೊಡುವ ಕಾಯಕದಲ್ಲಿ ಸಂಭ್ರಮದಿಂದ ತೊಡಗಿಕೊಂಡರು. ಹೀಗಾಗಿ ಅನಸೂಯಮ್ಮನ ಮೇಲಾದ ಅತ್ಯಾಚಾರವನ್ನು ಪ್ರತಿಭಟಿಸಲು ತೊಡಗಿಕೊಂಡ ಹೋರಾಟದಲ್ಲಿದ್ದ ತೀವ್ರತೆಯಷ್ಟೇ, ಸ್ತ್ರೀವಾದಿ ತಾತ್ವಿಕತೆಯನ್ನು ಕಟ್ಟಿಕೊಡುವ ಶಿಬಿರಗಳು, ವಿಚಾರ ಸಂಕಿರಣಗಳು, ಮುಂತಾಗಿ ಸಾಹಿತ್ಯ ಚರಿತ್ರೆಯಲ್ಲಿ ಮರೆಯಾದ ಲೇಖಕಿಯರನ್ನು ಮತ್ತು ಸಾಮಾಜಿಕ ಕ್ಷೇತ್ರದ ಹೋರಾಟಗಾರರನ್ನು ಸಂಶೋಧಿಸಿ ಪ್ರಕಟಿಸುವ ಉತ್ಸಾಹವನ್ನು ತೋರಿದರು. ಈ ಚಟುವಟಿಕೆಗಳು ಪ್ರಧಾನ ವಾಹಿನಿಯ ಕೆಲವು ಪ್ರಮುಖ ವಿಮರ್ಶಕರಿಗೆ ಅಬ್ಬರದ ಸ್ತ್ರೀವಾದಿ ಹೋರಾಟವೆಂತಲೂ, ಪುರುಷ ದ್ವೇಷಿ ಚಟುವಟಿಕೆಗಳೆಂಬಂತೆಯೂ ತೋರಿ ಅವು ಕಟು ಟೀಕೆಗೆ ಒಳಗಾದವು. ಹಾಗೆಯೇ ಎಡಪಕ್ಷಗಳ ಸಂಘಟನೆಗಳಿಗೆ 'ಸ್ತ್ರೀವಾದ' ಎನ್ನುವುದು ಕಾರ್ಮಿಕರನ್ನು ಒಡೆಯುವ ಮಂತ್ರವೆಂಬ ತಪ್ಪು ಕಲ್ಪನೆಯಿಂದಾಗಿ ಅದು ಸ್ವಲ್ಪಮಟ್ಟಿನ ದೂಷಣೆಗೆ ಒಳಗಾಯಿತು.

**ಅಸ್ಮಿತೆಯ ರಾಜಕೀಯ**

*ನಾನು ನೀನು ಅವಳು ಇವಳು*
*ಹೆಣ್ಣಾಗಿ ನೊಂದವರು*
*ಕೈಗೆ ಕೈಗೆ ಕೂಡಿಸವ್ವಾ*
*ಹೊಸ ಜಗತ್ತು ನಮ್ಮದು. (ವಿಜಯಾ ದಬ್ಬೆ)*

ಹೀಗೆಂದ ಆರಂಭದ ಮಹಿಳಾ ಚಳುವಳಿ ಹೆಣ್ಣಿನ ನೋವಿನ ವಿವಿಧ ನೆಲೆಗಳನ್ನು ಗಮನಿಸಿರಲಿಲ್ಲ. ಅದಕ್ಕೆ ಮುಖ್ಯ ಕಾರಣ, ಎಂಭತ್ತರ ದಶಕದ ಮಧ್ಯಮವರ್ಗದ ಸ್ತ್ರೀವಾದಿ ಚಳುವಳಿ ಜಾತಿ ಪ್ರಶ್ನೆಯನ್ನು ಪ್ರತ್ಯೇಕವಾಗಿ ನೋಡಲಿಲ್ಲ. ಮುಖ್ಯವಾಗಿ, ಮಧ್ಯಮ ವರ್ಗದ, ವಿದ್ಯಾವಂತ ಹಾಗೂ ಮೇಲುಜಾತಿಯ ಮಹಿಳೆಯರೇ ಚಳುವಳಿಯ ನೇತೃತ್ವ ವಹಿಸಿದ್ದರಿಂದಲೂ ಜಾತಿ ಪ್ರಶ್ನೆ ಮುನ್ನೆಲೆಗೆ ಬರಲಿಲ್ಲ.

ಜಾತಿ, ಧರ್ಮ, ಭಾಷೆ, ಜನಾಂಗ ಮತ್ತು ಸಮುದಾಯಗಳನ್ನು ಆಧರಿಸಿದ ಅಪಾರ ಭಿನ್ನತೆಗಳಿರುವ ಹಾಗೂ ಹಲವಾರು ವಿಧದ ಸಾಮಾಜಿಕ ದಮನಗಳಿರುವ ಭಾರತದಂತಹ ದೇಶದಲ್ಲಿ ಐಡೆಂಟಿಟಿಯ ರಾಜಕೀಯ ವ್ಯಾಪಕವಾಗಿದ್ದು ೧೯೯೦ರ ನಂತರದ ದಿನಗಳಲ್ಲಿ ಹೀಗೆ ಅಸ್ಮಿತೆಯನ್ನು ಗುರುತಿಸಿಕೊಳ್ಳುವುದು ಕೇವಲ ಒಂದು ಸಾಂಸ್ಕೃತಿಕ ಪ್ರಕ್ರಿಯೆಯಾಗಿ ಮಾತ್ರ ಉಳಿಯಲಿಲ್ಲ, ಅದೊಂದು ರಾಜಕೀಯ ಪರಿಕಲ್ಪನೆಯೂ ಆಯಿತು. ಅಸ್ಮಿತೆಯ ರಾಜಕೀಯದಲ್ಲಿ ವ್ಯಕ್ತಿಗಳು ತಮ್ಮನ್ನು ತಾವು ಹುಟ್ಟಿದ ಜಾತಿ, ಧರ್ಮ, ಸಮುದಾಯ ಮತ್ತು ಆಯ್ಕೆಯ ಲಿಂಗಗಳ ಮೂಲಕ ಗುರುತಿಸಿಕೊಳ್ಳುತ್ತಲೇ ತಮ್ಮ ಹಕ್ಕುಗಳ ಸಮರ್ಥನೆಗಾಗಿ ಸಂಘಟಿತರಾಗುತ್ತಿದ್ದಾರೆ. ಅಂಚಿಗೆ ತಳ್ಳಲ್ಪಟ್ಟ ದಲಿತ, ಬುಡಕಟ್ಟು ಮತ್ತು ಅಲ್ಪಸಂಖ್ಯಾತ ಗುಂಪುಗಳು ಮತ್ತು ಲೈಂಗಿಕ ಕಾರ್ಯಕರ್ತರು ಮತ್ತು ಇಲ್ಲಿಯವರೆಗೂ ಅಗೋಚರವಾಗಿದ್ದ ಲೈಂಗಿಕ ಅಲ್ಪಸಂಖ್ಯಾತರು ಈ ಅವಧಿಯಲ್ಲಿ ತಮ್ಮ ಅಸ್ಮಿತೆಯನ್ನು ಸ್ಥಾಪಿಸುತ್ತಾ ತಮ್ಮ ಹಕ್ಕುಗಳಿಗಾಗಿ ತಮ್ಮ ಸಮುದಾಯಗಳ ಸಂಘಟನೆಯನ್ನು ಬಲಪಡಿಸಿಕೊಳ್ಳುತ್ತಾ ಹೊರಟರು.

೧೯೯೫ರಲ್ಲಿ 'ನ್ಯಾಷನಲ್ ಫೆಡರೇಷನ್ ಫಾರ್ ದಲಿತ್ ವಿಮೆನ್' ಸ್ಥಾಪನೆಯಾದ ನಂತರ ದಲಿತ ಪ್ರಶ್ನೆಗಳು ಹೆಚ್ಚು ಮುನ್ನೆಲೆಗೆ ಬಂದವು. ಈ ಪ್ರಯತ್ನದಲ್ಲಿ ಕರ್ನಾಟಕದ ರೂತ್ ಮನೋರಮಾ ಅವರ ಪ್ರಯತ್ನ ಹಿರಿದಾದದ್ದು. ಗೋಪಾಲ್ ಗುರು ಬರೆದ 'ದಲಿತ್ ವಿಮೆನ್ ಟಾಕ್ ಡಿಫರೆಂಟ್ಲಿ' ಪುಸ್ತಕ ಮತ್ತು ಅದಕ್ಕೆ ಸುದೀರ್ಘ ಪ್ರತಿಕ್ರಿಯೆ ನೀಡಲು ಶರ್ಮಿಳಾ ರೇಗೆಯವರು ಸಂಪಾದಿಸಿದ 'ರೈಟಿಂಗ್ ಆನ್ ಜೆಂಡರ್' ಮತ್ತು ಉಮಾ ಚಕ್ರವರ್ತಿಯವರು ಬರೆದ 'ಜೆಂಡರಿಂಗ್ ಕಾಸ್ಟ್' ಇತ್ಯಾದಿ ಪುಸ್ತಕಗಳು ಮಹಿಳಾ ಚಳುವಳಿಯೊಳಗೆ ಜಾತಿ ಪ್ರಶ್ನೆಯನ್ನು, ಬ್ರಾಹ್ಮಣೀಯ ಪಿತೃ ಪ್ರಧಾನತೆಯನ್ನು ಗಂಭೀರವಾಗಿ ಚರ್ಚಿಸಿದವು. ಆ ನಂತರ ಹುಟ್ಟಿಕೊಂಡ ಸ್ತ್ರೀವಾದವು ಎತ್ತಿದ ಚರ್ಚೆಗಳು ಮಹಿಳಾ ಚಳುವಳಿಯಲ್ಲಿ ಜಾತಿ ಪ್ರಶ್ನೆಯನ್ನು ಗಂಭೀರವಾಗಿ ಪರಿಗಣಿಸುವಂತೆ ಮಾಡಿತು. ಲಿಂಗ ಮತ್ತು ಜಾತಿ ನೆಲೆಗಳನ್ನು ಪ್ರಮುಖವಾಗಿ ಪರಿಗಣಿಸಿದಾಗಲೇ ಶೋಷಣೆಯ ನೆಲೆಯನ್ನು ಸಮಗ್ರವಾಗಿ ಗ್ರಹಿಸಲು ಸಾಧ್ಯ ಎಂದು ದಲಿತ ಸ್ತ್ರೀವಾದವು ನಂಬುತ್ತದೆ. ಕಸ ಬಾಚುವ ಪೌರ ಕಾರ್ಮಿಕರು, ದೇವದಾಸಿ ಪದ್ಧತಿ ಮತ್ತು ದುಡಿಯುವ ದೇಹವನ್ನೇ ಬಂಡವಾಳ ಮಾಡಿಕೊಂಡಂತಹ ಕೆಲವೊಂದು ವೃತ್ತಿಗಳಲ್ಲಿ ದಲಿತ ಹೆಣ್ಣುಮಕ್ಕಳೇ ಹೆಚ್ಚಿನ ಸಂಖ್ಯೆಯಲ್ಲಿರುವುದನ್ನು ಮತ್ತು ಅವರ ಸ್ಥಿತಿ ಹೀನಾಯ ಸ್ಥಿತಿಯಲ್ಲಿರುವುದನ್ನು ಮನಗಂಡು ಅವರ ಸಮಸ್ಯೆಗಳನ್ನು ಕೇಂದ್ರವಾಗಿರಿಸಿ ಕೊಂಡು ಅವರನ್ನೆಲ್ಲಾ ಸಂಘಟಿಸುವ ಪ್ರಯತ್ನ ಮಾಡಲಾಗುತ್ತಿದೆ. ಆರಂಭದ ಮಹಿಳಾ ಚಳುವಳಿಯಿಂದ ಬಂದ ನಾಯಕಿಯರೇ ಈ ದಲಿತ ಮಹಿಳೆಯರನ್ನು ಸಂಘಟಿಸುವ ನೇತೃತ್ವ ವಹಿಸಿರುವುದನ್ನೂ ಕಾಣಬಹುದಾಗಿದೆ.

ಇದೇ ಸಂದರ್ಭದಲ್ಲಿ ಬಯಲಿಗೆ ಬಂದ ಲೈಂಗಿಕ ಅಲ್ಪಸಂಖ್ಯಾತರ ಚಳುವಳಿಯು ಲಿಂಗತ್ವದ ಪರಿಕಲ್ಪನೆಯನ್ನು ಮತ್ತೆ ಪುನರ್ಚರ್ಚಿಸುವಂತೆ ಮಾಡಿತು. ಆರಂಭದಲ್ಲಿ ಮಹಿಳಾ ಚಳುವಳಿಯು ಕ್ರಿಯಾಶೀಲವಾಗಿದ್ದಾಗ ದ್ವಿಲಿಂಗತ್ವವನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡು ತನ್ನ ತಾತ್ವಿಕ ಪರಿಕಲ್ಪನೆಯನ್ನು ಕಟ್ಟಿಕೊಂಡಿತ್ತು. ಸಮಾಜದ ಒಪ್ಪಿತ ಮೌಲ್ಯಗಳಿಗನುಗುಣವಾಗಿ ಬಾಳಲಾಗದ ಗಂಡಾಗಿ ಹುಟ್ಟಿ ಹೆಣ್ಣು ಮನಸ್ಸಿನಲ್ಲಿ ಬದುಕಬಯಸುವ ಮತ್ತು ಗಂಡಾಗಿ ಹುಟ್ಟಿ ಹೆಣ್ಣು ಮನಸ್ಸಿನೊಳಗೆ ಬದುಕಬಯಸುವವರ ಹಕ್ಕು ಮತ್ತು ಸಮಸ್ಯೆಗಳನ್ನು ಇದುವರೆಗಿನ ಮಹಿಳಾ ಚಳುವಳಿ ಪರಿಗಣಿಸಿಯೇ ಇರಲಿಲ್ಲ. ತಮ್ಮ ಅಸ್ಮಿತೆಯನ್ನು ಸಾಮಾಜಿಕವಾಗಿ ಬಹಿರಂಗವಾಗಿ ಪ್ರಕಟಿಸಿ ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಿದ ಲೈಂಗಿಕ ಅಲ್ಪಸಂಖ್ಯಾತರ ಬಗೆಗಿನ ಮಾಹಿತಿ ಇದ್ದಕ್ಕಿದ್ದಂತೆ ಹೊಸ ಅನುಭವ ಲೋಕವನ್ನು ತೆರೆದಿಟ್ಟಿತು. ಲೈಂಗಿಕ ಅಲ್ಪಸಂಖ್ಯಾತರೆಂಬ ವಿಶಾಲ ಛತ್ರಿಯಡಿ ಗೇ, ಲೆಸ್ಬಿಯನ್‌ರಂತಹ ಸಲಿಂಗಕಾಮಿಗಳು ಮತ್ತು ದ್ವಿಲಿಂಗ ಹಾಗೂ ವಿಭಿನ್ನ ಅಂತರ್ಲಿಂಗೀಯರೂ ಸೇರಿಕೊಂಡರು.

ಲೈಂಗಿಕ ಅಲ್ಪಸಂಖ್ಯಾತರು ತಮ್ಮ ಬಗ್ಗೆ ಬಹಿರಂಗವಾಗಿ ಮಾತನಾಡಿ, ತಮ್ಮ ವಿಚಾರಗಳನ್ನು ಮತ್ತು ಹಕ್ಕುಗಳನ್ನು ವ್ಯಕ್ತಪಡಿಸುವುದೇ ಚಳುವಳಿಯ ಒಂದು ಬಹುಮುಖ್ಯ ಅಂಗವಾಗಿದ್ದಾರೆ. ಈ ದಿಕ್ಕಿನಲ್ಲಿ ಸ್ಮೈಲ್ ವಿದ್ಯಾರವರ




ಆತ್ಮಕಥನ 'ನಾನು ಅವನಲ್ಲ, ಅವಳು' ತಮಿಳಿನಿಂದ ಕನ್ನಡಕ್ಕೆ ಬಂದದ್ದು ಮತ್ತು ಅದು ಕನ್ನಡದ ಚಿತ್ರವಾಗಿ ರಾಷ್ಟ್ರಪ್ರಶಸ್ತಿ ಪಡೆದದ್ದು ಬಹುಮುಖ್ಯ ಸಂಗತಿಗಳಾಗಿವೆ. ಹಾಗೆಯೇ ಎ. ರೇವತಿಯವರ ಆತ್ಮಕಥನ 'ಬದುಕು ಬಯಲು' ಕನ್ನಡದಲ್ಲಿ ಲಭ್ಯವಾಗಿರುವುದೂ ಕೂಡ ಕನ್ನಡ ನೆಲದಲ್ಲಿ ಈ ಸಮುದಾಯದ ಬಗೆಗಿನ ಚಳುವಳಿಗೆ ಬಲ ತಂದಿದೆ. ಹಿಜ್ರಾ ಅಥವಾ ಅಂತರ್ಲಿಂಗೀಯರು (ಟ್ರಾನ್ಸ್‌ಜೆಂಡರ್) ಬೆಂಗಳೂರಿನಲ್ಲಿ 'ಸಂಗಮ', 'ಜೀವ', ಕರ್ನಾಟಕ ಲೈಂಗಿಕ ಅಲ್ಪಸಂಖ್ಯಾತರ ವೇದಿಕೆ, ಕರ್ನಾಟಕ ಲೈಂಗಿಕ ಕಾರ್ಮಿಕರ ಯೂನಿಯನ್, ಲೆಸ್ಬಿಟ್, 'ಒಂದೆಡೆ' ಮುಂತಾದ ಎನ್.ಜಿ.ಒ. ಗಳಲ್ಲಿ ಸಂಘಟಿತರಾಗಿ ಅವರ ಹಕ್ಕು, ಬಾಧ್ಯತೆಗಳಿಗಾಗಿ ಹೋರಾಡುತ್ತಿದ್ದಾರೆ.

ಸಲಿಂಗಿಗಳ ನಡುವಿನ ಲೈಂಗಿಕ ಸಂಬಂಧವನ್ನು ಅಪರಾಧೀಕರಣ ಗೊಳಿಸಿದ್ದ ಇಂಡಿಯನ್ ಪೀನಲ್ ಕೋಡ್ ಸೆಕ್ಷನ್ ೩೭೭ಕ್ಕೆ ತಿದ್ದುಪಡಿ ತಂದು ಅಂತಹ ಸಂಬಂಧಗಳನ್ನು ಅಪರಾಧಮುಕ್ತವಾಗಿಸಿದ ಜುಲೈ ೨, ೨೦೦೯ರ ದೆಹಲಿ ಹೈಕೋರ್ಟ್ ತೀರ್ಪು ಕೂಡ ಇವರ ಹೋರಾಟಕ್ಕೆ ಸಂದ ಜಯವಾಗಿದೆ. ಸುಪ್ರೀಂ ಕೋರ್ಟ್ ಏಪ್ರಿಲ್ ೧೫, ೨೦೧೪ರಂದು ನೀಡಿದ ತೀರ್ಪಿನ ಅನ್ವಯ ಅಂತರ್ಲಿಂಗೀಯ ಸಮುದಾಯದವರಿಗೆ ತೃತೀಯ ಲಿಂಗೀಯರ ಸ್ಥಾನಮಾನವನ್ನು ಕೊಟ್ಟು ಅವರಿಗೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ಗುಂಪಿನವರಿಗೆ ನೀಡುವ ಸ್ಥಾನಮಾನ ಕೊಡ ಬೇಕೆಂದು ಮತ್ತು ವಿದ್ಯಾಭ್ಯಾಸ ಮತ್ತು ಉದ್ಯೋಗಗಳಲ್ಲಿ ಅವಕಾಶವನ್ನು ನೀಡಬೇಕೆಂಬ ತೀರ್ಪು ನೀಡಿರುವುದು ಅವರ ಹೋರಾಟಕ್ಕೆ ಸಂದ ಜಯವೇ ಆಗಿದೆ.

**ಜಾಗತೀಕರಣದ ಅಬ್ಬರದಲ್ಲಿ ............**

ಅಂತರರಾಷ್ಟ್ರೀಯ ನೆಲೆಯಲ್ಲಿ ಉಂಟಾದ ರಾಜಕೀಯ ಬದಲಾವಣೆಗಳು ಹೆಣ್ಣಿನ ಬದುಕಿನ ಮೇಲೂ ಮಹತ್ತರ ಪ್ರಭಾವ ಬೀರಿದವು. ಸೋವಿಯೆತ್ ರಷ್ಯಾದ ಪತನದ ನಂತರ ಅಧಿಕಾರ ಬಣದ ಅಸಮತೋಲನದಿಂದ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಕಾರ್ಯಶೈಲಿ ಬದಲಾಯಿತು. ೧೯೯೧ರಲ್ಲಿ ವಿಶ್ವ ಬ್ಯಾಂಕ್ ಮತ್ತು ಇತರ ಹಣಕಾಸು ಸಂಸ್ಥೆಗಳ ಒತ್ತಾಯದಿಂದ ಕೇಂದ್ರ ಸರ್ಕಾರವು ತಂದ ಹೊಸ ಆರ್ಥಿಕ ಹಾಗೂ ಕೈಗಾರಿಕಾ ನೀತಿಯ ವಿಷವ್ಯೂಹವು ೧೯೯೪ರ ಏಪ್ರಿಲ್ ೧೫ರಂದು ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕುವುದರೊಂದಿಗೆ ಪೂರ್ಣವಾಯಿತು. ಸಂವಿಧಾನದಲ್ಲಿದ್ದ ಸಮಾಜವಾದಿ ಧೋರಣೆಗಳು, ಸಾಮಾಜಿಕ ನ್ಯಾಯವಿರಬೇಕೆಂಬ ಕಾಳಜಿಗಳು ಕಣ್ಮರೆಯಾಗಿ ಮನುಷ್ಯನ ಅಸ್ತಿತ್ವವನ್ನು ಮಾರುಕಟ್ಟೆಯೇ ನಿರ್ಣಯಿಸುವಂತಾಯಿತು. ಈ ಜಾಗತೀಕರಣದ ಬಿರುಗಾಳಿಯು ಎಲ್ಲ ಸಾಮಾಜಿಕ ಚಳುವಳಿಗಳನ್ನು ಅಲ್ಲಾಡಿಸಿತು. ಸಹಜವಾಗಿಯೇ, ಮಹಿಳಾ ಚಳುವಳಿಯು ತನ್ನ ಬಿರುಸು ಕಳೆದು ಕೊಂಡಿತು ಮತ್ತು ಸ್ವರೂಪವನ್ನು ಬದಲಾಯಿಸಿತು. ಸಬಲೀಕರಣದ ಘೋಷಣೆಯೊಂದಿಗೆ ಆರ್ಥಿಕ ಕಾರ್ಯಕ್ರಮಗಳ ಮೇಲೆ ಬಿದ್ದ ಒತ್ತು ಚಳುವಳಿಯ ದಿಕ್ಕು, ದೆಸೆಗಳನ್ನು ಬದಲಾಯಿಸಿತು. ಈ ಕಾಲಘಟ್ಟದಲ್ಲಿನ ಸಮಾಜದ ಸಮಸ್ಯೆಗಳೂ ಭಿನ್ನ ಸ್ವರೂಪ ತಳೆದವು. ಮಹಿಳೆಯರ ಮೇಲಿನ ಆ್ಯಸಿಡ್ ದಾಳಿ ಮತ್ತು ಮರ್ಯಾದಾ ಹತ್ಯೆಗಳು ಮಹಿಳಾ ಚಳುವಳಿಗೆ ಮುಖ್ಯ ಸವಾಲುಗಳಾದವು. ಬಾಬ್ರಿ ಮಸೀದಿ ಮತ್ತು ಗುಜರಾತ್ ಗಲಭೆಯ ಪ್ರಕರಣಗಳ ನಂತರ ಕೋಮುವಾದಿ ಸಂಘರ್ಷಗಳು ಉಲ್ಬಣಗೊಂಡು ಮಹಿಳೆಯರ ಹಕ್ಕುಗಳ ಮೇಲೆ ಧರ್ಮ ಮತ್ತು ಜಾತಿಯ ಗದಾಪ್ರಹಾರ ಹೆಚ್ಚಾಯಿತು.

ಭಾರತದಲ್ಲಿ ಜಾಗತೀಕರಣ ಮತ್ತು ಮಾರುಕಟ್ಟೆ ಸಂಸ್ಕೃತಿ ಮಹಿಳಾ ಚಳುವಳಿಯ ಸ್ವರೂಪವನ್ನೇ ಬದಲಾಯಿಸಿವೆ. ಸರ್ಕಾರಿ ಕಾರ್ಯಕ್ರಮಗಳು ಮತ್ತು ಯೋಜನೆಗಳು ಮಹಿಳಾ ಸಬಲೀಕರಣವನ್ನು ತಮ್ಮ ಅಗತ್ಯಕ್ಕೆ ತಕ್ಕಂತೆ ರೂಪಿಸಿಕೊಳ್ಳುತ್ತಾ, ಚಳುವಳಿಯನ್ನು ಹತ್ತಿಕ್ಕುತ್ತಿವೆ. ಕೆಲವೊಮ್ಮೆ ಚಳುವಳಿಯ ಅಜೆಂಡಾಗಳನ್ನು ತಮ್ಮ ಅಜೆಂಡಾಗಳಾಗಿ ಮಾಡಿಕೊಂಡು ಚಳುವಳಿಕಾರರನ್ನು ತಮ್ಮ ಕಾರ್ಯಕ್ರಮದ ಪ್ರಚಾರಕರನ್ನಾಗಿಸುತ್ತಿವೆ. ಇದರಿಂದಾಗಿ ಹಕ್ಕುಗಳ ಸಮರ್ಥನೆ ಮತ್ತು ಸಮಾಜದಲ್ಲಿ ನೀತಿ ನಿರೂಪಕರಾಗುವುದಕ್ಕಿಂತ ಹೆಚ್ಚಾಗಿ ಮಹಿಳೆಯರು ಫಲಾನುಭವಿಗಳ ಪಾತ್ರದಲ್ಲಿಯೇ ತೃಪ್ತಿಪಟ್ಟುಕೊಳ್ಳುವಂತಾಗಿದೆ. ಈ ಎಲ್ಲ ಅಂಶಗಳನ್ನು ಗಮನಿಸುತ್ತಾ ಮಹಿಳಾ ಚಳುವಳಿ ತನ್ನ ಹೋರಾಟದ ಕಾರ್ಯತಂತ್ರವನ್ನು ರೂಪಿಸುತ್ತಿದೆ.

೨೦೧೨ರ ಡಿಸೆಂಬರ್ ೧೬ರಂದು ದೆಹಲಿಯ ಪ್ಯಾರಾ ಮೆಡಿಕಲ್ ವಿದ್ಯಾರ್ಥಿನಿಯ ಮೇಲೆ ಜರುಗಿದ ಪೈಶಾಚಿಕ ಅತ್ಯಾಚಾರ ಇಡೀ ದೇಶವನ್ನು ತಲ್ಲಣಗೊಳಿಸಿತು. ಈ ಅತ್ಯಾಚಾರ ನಡೆದ ಘೋರಸ್ವರೂಪ ದೇಶದ ಅಂತಃಶಕ್ತಿಯನ್ನೇ ಬಡಿದೆಬ್ಬಿಸಿತು. ದೇಶಾದ್ಯಂತ ಇದನ್ನು ಪ್ರತಿಭಟಿಸಿ ಜನ ಸ್ವಯಂ ಪ್ರೇರಣೆಯಿಂದ ಬೃಹತ್‌ಸಂಖ್ಯೆಯಲ್ಲಿ ಬೀದಿಗಿಳಿದು ಪ್ರತಿಭಟಿಸಿದರು. ಕರ್ನಾಟಕದಾದ್ಯಂತ ಹಲವಾರು ನಗರ ಹಾಗೂ ಪಟ್ಟಣಗಳಲ್ಲಿ ಜನರು ತಮ್ಮ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ರಾಜ್ಯದ ಹಲವಾರು ಭಾಗಗಳಲ್ಲಿ ಹೆಣ್ಣಿನ ಮೇಲೆ ಅವ್ಯಾಹತವಾಗಿ ನಡೆಯುತ್ತಲೇ ಬರುತ್ತಿದ್ದ ದೌರ್ಜನ್ಯಗಳನ್ನು ಪ್ರತಿಭಟಿಸಲೆಂದು ವಿಶಾಲವಾದ ವೇದಿಕೆಯನ್ನು ರೂಪಿಸುವ ದಿಕ್ಕಿನಲ್ಲಿ ಆಗ ಹುಟ್ಟಿಕೊಂಡದ್ದು 'ಕರ್ನಾಟಕ ಮಹಿಳಾ ದೌರ್ಜನ್ಯ ವಿರೋಧಿ ಒಕ್ಕೂಟ'. ೨೦೧೩ರಿಂದ ಒಕ್ಕೂಟವು ಮಂಗಳೂರು, ಮೈಸೂರು, ಬೆಂಗಳೂರು ಮತ್ತು ಬಿಜಾಪುರದಲ್ಲಿ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಆಚರಿಸುತ್ತಾ ಬಂದಿದೆ. ಸಮಾಜದ ವಿವಿಧ ಜನ ವರ್ಗಗಳ ಗುಂಪುಗಳನ್ನು ಒಳಗೊಂಡ ಈ ವೇದಿಕೆ ಮಹಿಳೆಯರಿಗೆ ವಿಶಾಲವಾದ ವೇದಿಕೆಯಾಗಿದೆಯೆಂಬುದು ನಿಜವಾದರೂ ಕರ್ನಾಟಕದ ಸಂಘಟಿತ ಶ್ರಮಶಕ್ತಿ ಇನ್ನೂ ಇದರಲ್ಲಿ ಪೂರ್ಣವಾಗಿ ಭಾಗವಹಿಸಬೇಕಾದ ಅಗತ್ಯವಿದೆ.

ಕ್ಸೆರಾಕ್ಸ್ ಇಲ್ಲದ ಕಾಲದಿಂದ ನಡೆದು ಬಂದ ಮಹಿಳಾ ಚಳುವಳಿ ಇಂದು ವಾಟ್ಸಾಪ್, ಫೇಸ್‌ಬುಕ್ ಮತ್ತು ಈಮೇಲ್‌ನಂತಹ ಸಾಮಾಜಿಕ ಜಾಲತಾಣಗಳ ಹಾಗೂ ಮಲ್ಟಿ ಚಾನೆಲ್‌ಗಳ ಕಾಲದವರೆಗೆ ವ್ಯಾಪಕವಾಗಿ ಬೆಳೆದಿದೆ. 'ಮಹಿಳೆಯರೇ ಒಗ್ಗೂಡಿ' ಎನ್ನುತ್ತಿದ್ದ ಕಾಲದಿಂದ ಇಂದು 'ನೆಟ್ ವರ್ಕಿಂಗ್' ಯುಗಕ್ಕೆ ಕಾಲಿಟ್ಟಿದೆ. ಕರ್ನಾಟಕದ ವಿವಿಧ ಮೂಲೆಯ ಮಹಿಳೆಯರನ್ನು ಹತ್ತಿರಕ್ಕೆ ತರುವ ಜಾಲ ಅವರನ್ನು ಒಗ್ಗೂಡಿಸುವ ಬಂಧವೂ ಆಗಬೇಕಿದೆ. ನಿರ್ಭಯ ಪ್ರಕರಣದಲ್ಲಿ ಮಹಿಳೆಯರು ಬೃಹತ್ ಸಂಖ್ಯೆಯಲ್ಲಿ ತೋರಿಸಿದ ಪ್ರತಿಭಟನೆಗೆ ಸಮಸ್ಯೆಯ ಗಂಭೀರ ಸ್ವರೂಪದಷ್ಟೇ, ಇಂದಿನ ಸಮೂಹ ಮಾಧ್ಯಮಗಳ ಪಾಲೂ ಇತ್ತು. ಸಮರ್ಥ ನಾಯಕತ್ವವಿಲ್ಲದೆಯೂ ಭುಗಿಲೆದ್ದ ರೋಷದಿಂದ ಅನ್ಯಾಯವನ್ನು ಪ್ರತಿಭಟಿಸಿ ಬೆಂಗಳೂರಿನಲ್ಲಿ ಬೀದಿಗಿಳಿದ ಗಾರ್ಮೆಂಟ್ ಮಹಿಳಾ ಕೆಲಸಗಾರರ ಪ್ರತಿಭಟನೆಗೆ ಅವರ ಮೇಲಾಗಿರುವ ಅನ್ಯಾಯದ ತೀವ್ರತೆಯಷ್ಟೇ, ಸಮೂಹ ಮಾಧ್ಯಮಗಳು ನೀಡುವ ಮಾಹಿತಿ ಲೋಕವೂ ಕಾರಣವಾಗಿವೆ. ಈ ರೀತಿ ಮಾಧ್ಯಮಗಳಲ್ಲಿ ದಾಖಲಾಗದ ಎಷ್ಟೋ ಮಹಿಳಾ ಚಟುವಟಿಕೆಗಳು ನಗರ, ಪಟ್ಟಣಗಳಿಂದ ಹೊರಗೆ ಗ್ರಾಮೀಣ ಪ್ರದೇಶ ಗಳಲ್ಲೂ ರಾಜ್ಯಾದ್ಯಂತ ಸದ್ದಿಲ್ಲದೆ ಕಾರ್ಯ ನಿರ್ವಹಿಸುತ್ತಾ ಮಹಿಳೆಯರ ಹಿತಕ್ಕಾಗಿ ದುಡಿಯುತ್ತಿವೆ. ಅಷ್ಟೇ ಅಲ್ಲದೆ, ಸಮಾಜದ ಕೆಳಸ್ತರದಲ್ಲಿ ದುಡಿಯುತ್ತಿರುವ ಅಸಂಖ್ಯಾತ ದುಡಿಯುವ ಮಹಿಳೆಯರು ಸಂಘಟಿತವಾಗಿರಲಿ, ಇಲ್ಲದಿರಲಿ ಅವರು ಮಹಿಳಾ ಚಳುವಳಿಯ ಭಾಗವಾಗುವಂತೆ ನೋಡಿಕೊಂಡಾಗ ಮಾತ್ರ ಮಹಿಳಾ ಚಳುವಳಿಯ ಶಕ್ತಿ ಹೆಚ್ಚುತ್ತದೆ. ಅದೇ ಇಂದಿನ ಸದ್ಯದ ತುರ್ತು. ಬಹುತ್ವ ಮತ್ತು ಸಮಗ್ರತೆ ಮಹಿಳಾ ಚಳುವಳಿಯ ಮುಖ್ಯ ಗುಣವಾಗಬೇಕು.

**ಡಾ॥ ಎನ್ ಗಾಯತ್ರಿ**
೨೦೧, 'ಸ್ಕೈಲೈನ್ ಗೋಲ್ಡನ್ ರೇಸ್' ಛತ್ರಂ ಬ್ಲಾಕ್, ಕೆಂಪೇಗೌಡ ನಗರ
ಗವೀಪುರಂ, ಬೆಂಗಳೂರು – ೫೬೦ ೦೧೯




ಇದುವರೆಗೆ ಅಲ್ಪಸಂಖ್ಯಾತರ ಸಾಮಾಜಿಕ-ಆರ್ಥಿಕ ಸ್ಥಿತಿಗತಿಗಳ ಕುರಿತು ಹಲವು ಆಯೋಗಗಳು ಮತ್ತು ಸಮಿತಿಗಳು ರಚಿಸಲ್ಪಟ್ಟಿವೆ. ಅನೇಕ ಅಧ್ಯಯನ ಕೃತಿಗಳು ಪ್ರಕಟವಾಗಿವೆ. ಆದರೆ ಅವುಗಳ ಮೂಲಕ ದೊರೆತ ಅಂಕಿ-ಅಂಶಗಳನ್ನು ಯಥಾರ್ಥವಾಗಿ ಬಳಸಿಕೊಳ್ಳಲಾಗಿದೆಯೇ ಎಂಬ ಪ್ರಶ್ನೆ ನಮ್ಮ ಮುಂದಿದೆ. ಕೇಂದ್ರ ಸರ್ಕಾರಗಳು ಮತ್ತು ರಾಜ್ಯ ಸರ್ಕಾರಗಳು, ಕರ್ನಾಟಕವೂ ಒಳಗೊಂಡಂತೆ, ಅಲ್ಪಸಂಖ್ಯಾತರ ಸಾಮಾಜಿಕ-ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ನಿಟ್ಟಿನಲ್ಲಿ ಸರಣಿರೂಪದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತ ಬಂದಿವೆ. ಆದರೆ ಅವು ಈ ಸಮುದಾಯಗಳನ್ನು ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಎಷ್ಟರ ಮಟ್ಟಿಗೆ ಒಳಗೊಳಿಸಿವೆಯೆಂಬುದು ಅಸ್ಪಷ್ಟವಾಗಿಯೇ ಇದೆ.

# ಕರ್ನಾಟಕ ರಾಜ್ಯದ ಅಲ್ಪಸಂಖ್ಯಾತರ ಸ್ಥಿತಿಗತಿ
## - ಒಂದು ಪಕ್ಷಿನೋಟ

**ಮ. ಶ್ರೀ. ಮುರಳಿ ಕೃಷ್ಣ**

ನಮ್ಮ ದೇಶದ ಸಂವಿಧಾನದ ಅನುಚ್ಛೇದ ೨೯-೩೦ ಮತ್ತು ೩೫೦ಎ - ೩೫೦ಬಿಗಳಲ್ಲಿ 'ಅಲ್ಪಸಂಖ್ಯಾತರು' (ಬಹುವಚನ ರೂಪ) ಎಂಬ ಪದವನ್ನು ಬಳಸಲಾಗಿದೆ. ಆದರೆ ಯಾರು ಅಲ್ಪಸಂಖ್ಯಾತರು ಎಂದು ವ್ಯಾಖ್ಯಾನಿಸಲಾಗಿಲ್ಲ. ೧೯೨೮ರಲ್ಲಿ ಮಂಡಿಸಲಾದ ಮೋತಿಲಾಲ್ ನೆಹರು ವರದಿಯಲ್ಲಿ ಅಲ್ಪಸಂಖ್ಯಾತರಿಗೆ ರಕ್ಷಣೆಯನ್ನು ನೀಡುವುದರ ಬಗೆಗೆ ಆಶಯವನ್ನು ವ್ಯಕ್ತಪಡಿಸಲಾಗಿತ್ತು. ಆದರೆ ಅದರಲ್ಲೂ ಯಾರು ಈ ಅಲಸಂಖ್ಯಾತರು ಎಂಬುದರ ಕುರಿತು ವಿವರಣೆ ಇರಲಿಲ. ಆದರೆ ಸಾಂವಿಧಾನಿಕ ಉಪಬಂಧಗಳ ಅನ್ವಯ ಅಲ್ಪಸಂಖ್ಯಾತರ (ಭಾಷೀಯ ಅಥವಾ ಮತಧಾರ್ಮಿಕ) ಹಿತಕ್ಕೆ ಸರ್ಕಾರ ಬದ್ಧವಾಗಿರಬೇಕಾಗುತ್ತದೆ.

೨೦೧೧ರ ಜನಗಣತಿಯ ಪ್ರಕಾರ ನಮ್ಮ ದೇಶದ ಜನಸಂಖ್ಯೆ ೧೨೧ ಕೋಟಿಯಷ್ಟಿತ್ತು. ಅವರಲ್ಲಿ ಹಿಂದೂಗಳು ಶೇ. ೭೯.೮, ಮುಸಲ್ಮಾನರು ಶೇ. ೧೪.೨, ಕಿರಿಸ್ತಾನರು ಶೇ. ೨.೩, ಸಿಖ್ಖರು ಶೇ. ೧.೭, ಬೌದ್ಧರು ಶೇ. ೦.೭, ಜಿನರು ಶೇ. ೦.೪, ಇತರ ಮತಧಾರ್ಮಿಕ ಪಂಥಗಳಿಗೆ ಸೇರಿದವರು ಶೇ. ೦.೯ ಮತ್ತು ವ್ಯಕ್ತಪಡಿಸದ ಮತಧಾರ್ಮಿಕದವರು ಶೇ. ೦.೧ರಷ್ಟಿದ್ದರು. ಅಂದರೆ ಈ ಜನಗಣತಿಯಿಂದ ಹಿಂದೂಗಳು ನಮ್ಮ ದೇಶದಲ್ಲಿ ಬಹುಸಂಖ್ಯಾತರಾಗಿದ್ದಾರೆ ಎಂಬುದು ವೇದ್ಯವಾಗುತ್ತದೆ. ಮಣಿಪುರ, ಅರುಣಾಚಲಪ್ರದೇಶ, ಮಿಜೋರಾಂ, ನಾಗಾಲ್ಯಾಂಡ್, ಮೇಘಾಲಯ, ಲಕ್ಷದ್ವೀಪ, ಪಂಜಾಬ್, ಜಮ್ಮು ಮತ್ತು ಕಾಶ್ಮೀರಗಳನ್ನು ಹೊರತುಪಡಿಸಿ, ಇತರ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ ಹಿಂದೂಗಳು ಬಹುಸಂಖ್ಯಾತರಾಗಿದ್ದಾರೆ. ರಾಷ್ಟ್ರೀಯ ಮಟ್ಟದಲ್ಲಿ ಹಿಂದೂ ಮತಧರ್ಮ ಹೊರತಾದ ಇತರ ಮತಧಾರ್ಮಿಕರನ್ನು ಅಲ್ಪಸಂಖ್ಯಾತರೆಂದು ಪರಿಗಣಿಸಲಾಗುತ್ತದೆ. ಅಲ್ಪಸಂಖ್ಯಾತರಲ್ಲಿ ಮುಸಲ್ಮಾನರ ಇಸ್ಲಾಂ ಅತಿ ದೊಡ್ಡ ಮತಧರ್ಮವಾಗಿದೆ. (ಭಾರತದಲ್ಲಿರುವ ಮುಸಲ್ಮಾನರ ಸಂಖ್ಯೆ ವಿಶ್ವದಲ್ಲೇ ಎರಡನೇ ಸ್ಥಾನದಲ್ಲಿದೆ). ನಂತರದ ಸ್ಥಾನದಲ್ಲಿ ಕ್ರಮವಾಗಿ ಕಿರಿಸ್ತಾನರು, ಸಿಖ್ಖರು, ಬೌದ್ಧರು, ಜಿನರು ಮತ್ತು ಪಾರ್ಸಿಗಳಿದ್ದಾರೆ. ನಮ್ಮ ದೇಶದ ಅಲ್ಪಸಂಖ್ಯಾತರ ವ್ಯಾಪ್ತಿಯನ್ನು ಗಮನಿಸಿದಾಗ ಒಂದು ಕುತೂಹಲಕಾರಿ ಅಂಶ ಗೋಚರಿಸುತ್ತದೆ. ಅದೆಂದರೆ ರಾಷ್ಟ್ರೀಯ ಮಟ್ಟದಲ್ಲಿ ಅಲ್ಪಸಂಖ್ಯಾತವಾಗಿರುವ ಒಂದು ಮತಧರ್ಮದವರು ಕೆಲವು ರಾಜ್ಯಗಳು ಅಥವಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಬಹುಸಂಖ್ಯಾತವಾಗಿರುವ ನಿದರ್ಶನಗಳು ನಮ್ಮೆದುರಿಗಿವೆ. ಜಮ್ಮು ಮತ್ತು ಕಾಶ್ಮೀರ ರಾಜ್ಯ ಮತ್ತು ಲಕ್ಷದ್ವೀಪಗಳಲ್ಲಿ ಮುಸಲ್ಮಾನರು ಬಹುಸಂಖ್ಯಾತರಾಗಿದ್ದಾರೆ. ಹಾಗೆಯೇ ನಾಗಾಲ್ಯಾಂಡ್, ಮಿಝೋರಾಂ, ಮೇಘಾಲಯಗಳಲ್ಲಿ ಕಿರಿಸ್ತಾನರು ಮತ್ತು ಪಂಜಾಬ್‌ನಲ್ಲಿ ಸಿಖ್ಖರು ಬಹುಸಂಖ್ಯಾತರಾಗಿದ್ದಾರೆ.

ಆಕ್ಸ್‌ಫರ್ಡ್ ಆಂಗ್ಲ ನಿಘಂಟಿನಲ್ಲಿ ಜನಸಂಖ್ಯೆಯ ಅರ್ಧಕ್ಕಿಂತಲೂ ಕಡಿಮೆಯಿರುವ ಗುಂಪುಗಳು ಅಲ್ಪಸಂಖ್ಯಾತವೆಂದು ವಿವರಿಸಲ್ಪಟ್ಟಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಯಾವ ಗುಂಪುಗಳು ಅಲ್ಪಸಂಖ್ಯಾತವೆಂದು ವ್ಯಾಖ್ಯಾನಿಸಲಾಗಿಲ್ಲ. ವಿಶ್ವಸಂಸ್ಥೆ ಸಹ ಈ ವಿಷಯ ಸಂಬಂಧಿಸಿದಂತೆ ಯಾವ ತೆರನಾದ ಪರಿಭಾಷೆಯನ್ನೂ ಬಳಸಿಲ್ಲ ಎಂಬುದು ಗಮನೀಯ ಸಂಗತಿ. ಸಂವಿಧಾನದ ಅನುಚ್ಛೇದ ೩೦ (೧) ಅನ್ವಯ ಅಲ್ಪಸಂಖ್ಯಾತ ಎಂಬುದರ ಅರ್ಥ ನಿರೂಪಣೆಯನ್ನು ಹೇಗೆ ಮಾಡಬೇಕು ಎಂಬುದನ್ನು, (ಒಂದು ಘಟಕಕ್ಕೆ ಸಂಬಂಧಿಸಿದಂತೆ) ಸರ್ವೋಚ್ಚ ನ್ಯಾಯಾಲಯ ಟಿ. ಎಂ. ಎ. ಪೈ ಫೌಂಡೇಶನ್ ಮತ್ತು ಇತರರು ಹಾಗೂ (V/s) ಕರ್ನಾಟಕ ರಾಜ್ಯ ಮತ್ತು ಇತರರ ಮೊಕದ್ದಮೆಯಲ್ಲಿ ಹೀಗೆಂದು ತೀರ್ಪು ನೀಡಿತು : "ಒಂದು ರಾಜ್ಯದ ಜನಸಂಖ್ಯೆಗೆ (ಡೆಮೊಗ್ರಫಿ) ಸಂಬಂಧಿಸಿದಂತೆ ಒಂದು ಭಾಷಾ ಅಥವಾ ಮತಧಾರ್ಮಿಕ ಅಲ್ಪಸಂಖ್ಯಾತ ಲಕ್ಷಣವನ್ನು ಗುರುತಿಸಬೇಕೇ ವಿನಾ ದೇಶದ ಒಟ್ಟು ಜನಸಂಖ್ಯೆಯ ಆಧಾರದಡಿ ಅಲ್ಲ."



ಭಾರತದ ರಾಜಕೀಯ–ಆರ್ಥಿಕ ಸಂಕಥನದಲ್ಲಿ ೧೯೪೭ರ ತರುವಾಯ ಅಲ್ಪಸಂಖ್ಯಾತರಿಗೆ ಸಂಬಂಧಿಸಿದ ವಿಷಯ ಅನೇಕ ಚರ್ಚೆ, ವಿಚಾರ ವಿನಿಮಯಗಳ ವಸ್ತುವಾಗಿದೆ. ಅದು ಸಂಕೀರ್ಣವಾಗಿರುವುದರ ಜೊತೆಗೆ ವಿವಾದಾತ್ಮಕವೂ ಆಗಿದೆ. ಸ್ವಾತಂತ್ರ್ಯದ ಪ್ರಾರಂಭಿಕ ವರ್ಷಗಳಲ್ಲಿ ಜವಹರಲಾಲ್ ನೆಹರುವಿನ ಕಲ್ಪನೆಯ ಕೂಸಾಗಿದ್ದ 'ಕಲ್ಯಾಣ ರಾಜ್ಯ' ನಿಧಾನವಾಗಿ ಅನುಷ್ಠಾನಗೊಳ್ಳಲು ತೊಡಗಿದಾಗ ಅಲ್ಪಸಂಖ್ಯಾತರ ಏಳಿಗೆ ಕೂಡ ದೇಶದ ಸರ್ವಾಂಗೀಣ ಅಭಿವೃದ್ಧಿಯ ದೃಷ್ಟಿಯಿಂದ ಮುಖ್ಯ ಎಂಬ ಅಂಶಕ್ಕೆ ಒತ್ತನ್ನು ನೀಡಲಾಯಿತು. ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳು ಸಹ ಇದಕ್ಕೆ ಪುಷ್ಟಿಯನ್ನು ನೀಡಿವೆ; ಎತ್ತಿ ಹಿಡಿದಿವೆ. ಈ ಬೆಳವಣಿಗೆಯ ಹಿಂದಿನ ಕೆಲವು ಅಂಶಗಳತ್ತ ತುಸು ಗಮನವನ್ನು ಹರಿಸೋಣ.

ಬ್ರಿಟಿಷರ ನಿರ್ಗಮನದ ತರುವಾಯ ನಮ್ಮ ಆರ್ಥಿಕತೆಯಲ್ಲಿ ಬಡತನ, ನಿರುದ್ಯೋಗ ಮತ್ತು ಅಸಮಾನತೆಗಳು ತಾಂಡವವಾಡುತ್ತಿದ್ದವು. ಇವುಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಅಂದಿನ ನಾಯಕರು ಆರ್ಥಿಕ ಅಭಿವೃದ್ಧಿಯ ಅಡಿಪಾಯಕ್ಕೆ ಬೇಕಾದ ಸೂಕ್ತ ವ್ಯವಸ್ಥೆಗಳನ್ನು ಜಾರಿಮಾಡಲು ಸನ್ನದ್ಧರಾದರು. ಅದರಂತೆ ೧೯೫೧ರಲ್ಲಿ ಪಂಚವಾರ್ಷಿಕ ಯೋಜನೆಗಳ ಶಕೆ ಪ್ರಾರಂಭವಾಯಿತು. ಈ ಪರಿಯ ಯೋಜನೆಗಳಿಂದ ಆರ್ಥಿಕ ಬೆಳವಣಿಗೆಯಲ್ಲಿ ಏರುಮುಖ ಕಂಡುಬಂದಿತು. ಆದರೆ ಈ ಬೆಳವಣಿಗೆಯಲ್ಲಿ ಏರುಪೇರುಗಳಿದ್ದವು. ಕ್ಷೇತ್ರೀಯ, ಪ್ರಾಂತೀಯ ಮತ್ತು ಸಾಮುದಾಯಿಕ ಅಸಮಾನತೆಗಳಿಂದ ಈ ಬೆಳವಣಿಗೆ ಸಮರ್ಪಕ ಮತ್ತು ಸಮಂಜಸವೆನಿಸಲಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆರ್ಥಿಕ ಬೆಳವಣಿಗೆಯ ಫಲಶ್ರುತಿ ಎಲ್ಲವನ್ನೂ ಒಳಗೊಂಡಿರಲಿಲ್ಲ. ಈ ಹಿನ್ನೆಲೆಯಲ್ಲಿ ಹನ್ನೊಂದನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಈ ಸಂಗತಿಯನ್ನು ಸೂಕ್ತವಾಗಿ ಎದುರಿಸಲು ಹೊಸ ಪಥದಲ್ಲಿ ಸಾಗಲು ನಿರ್ಧರಿಸಲಾಯಿತು. ಹನ್ನೆರಡನೆಯ ಪಂಚವಾರ್ಷಿಕ ಯೋಜನೆಯ ಸಮಯದಲ್ಲೂ ಈ ಕಾರ್ಯತಂತ್ರಕ್ಕೆ ವಿಶೇಷ ಗಮನವನ್ನು ನೀಡಲಾಯಿತು. ಸುಸ್ಥಿರ, ಒಳಗೊಳ್ಳುವ ಬೆಳವಣಿಗೆ ಇದರ ಮುಖ್ಯ ಗುರಿಯಾಗಿತ್ತು. ಆಯಾಯ ರಾಜ್ಯಗಳ ಯೋಜನಾ ಇಲಾಖೆ ಕೂಡ ಈ ದಿಶೆಯಲ್ಲಿ ಕಾರ್ಯಪ್ರವೃತ್ತವಾಯಿತು.

ಇದುವರೆಗೆ ಅಲ್ಪಸಂಖ್ಯಾತರ ಸಾಮಾಜಿಕ–ಆರ್ಥಿಕ ಸ್ಥಿತಿಗತಿಗಳ ಕುರಿತು ಹಲವು ಆಯೋಗಗಳು ಮತ್ತು ಸಮಿತಿಗಳು ರಚಿಸಲ್ಪಟ್ಟಿವೆ. ಅನೇಕ ಅಧ್ಯಯನ ಕೃತಿಗಳು ಪ್ರಕಟವಾಗಿವೆ. ಆದರೆ ಅವುಗಳ ಮೂಲಕ ದೊರೆತ ಅಂಕಿ–ಅಂಶಗಳನ್ನು ಯಥಾರ್ಥವಾಗಿ ಬಳಸಿಕೊಳ್ಳಲಾಗಿದೆಯೇ ಎಂಬ ಪ್ರಶ್ನೆ ನಮ್ಮ ಮುಂದಿದೆ. ಕೇಂದ್ರ ಸರ್ಕಾರಗಳು ಮತ್ತು ರಾಜ್ಯ ಸರ್ಕಾರಗಳು, ಕರ್ನಾಟಕವೂ ಒಳಗೊಂಡಂತೆ, ಅಲ್ಪಸಂಖ್ಯಾತರ ಸಾಮಾಜಿಕ–ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ನಿಟ್ಟಿನಲ್ಲಿ ಸರಣಿರೂಪದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತ ಬಂದಿವೆ. ಆದರೆ ಅವು ಈ ಸಮುದಾಯಗಳನ್ನು ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಎಷ್ಟರ ಮಟ್ಟಿಗೆ ಒಳಗೊಳಿಸಿವೆಯೆಂಬುದು ಅಸ್ಪಷ್ಟವಾಗಿಯೇ ಇದೆ.

ಈ ವಿಷಯದ ಆಳ, ವಿಸ್ತಾರ ಹಾಗೂ ವ್ಯಾಪ್ತಿ ದೊಡ್ಡದಿರುವುದರಿಂದ, ಸ್ಥಳಾವಕಾಶ ಕಡಿಮೆಯಿರುವುದರಿಂದ, ಕರ್ನಾಟಕ ಮತಧಾರ್ಮಿಕ ಅಲ್ಪಸಂಖ್ಯಾತರ ಕೆಲವು ವಿಷಯಗಳ ಬಗೆಗೆ ಇಲ್ಲಿ ಚರ್ಚಿಸಲಾಗಿದೆ. ಇತ್ತೀಚಿನ ವರ್ಷಗಳಲ್ಲಿ ಲೈಂಗಿಕ ಅಲ್ಪಸಂಖ್ಯಾತರಿಗೆ ಸಂಬಂಧಿಸಿದಂತೆ ಹಲವು ವಿದ್ಯಮಾನಗಳು ಜರುಗಿವೆ. ಇವು ಸಹ ಈ ಬರಹದಲ್ಲಿ ಅಡಕಗೊಂಡಿಲ್ಲ. ಹಾಗಾಗಿ, ಅಲ್ಪಸಂಖ್ಯಾತರಿಗೆ ಸಂಬಂಧಿಸಿದಂತೆ, ಈ ಬರಹ ಒಂದು ಪಕ್ಷಿನೋಟವನ್ನು ಮಾತ್ರ ನೀಡುತ್ತದೆ, ಅಷ್ಟೆ.

ನಮ್ಮ ರಾಜ್ಯದಲ್ಲಿ ಜನಸಂಖ್ಯೆಯ ಸುಮಾರು ಶೇ. ೧೬ರಷ್ಟು ಅಲ್ಪಸಂಖ್ಯಾತರಿದ್ದಾರೆ. ಅವರಲ್ಲಿ ಅಗ್ರ ಸ್ಥಾನದಲ್ಲಿರುವವರು ಮುಸಲ್ಮಾನರು. ನಂತರ ಕ್ರಮವಾಗಿ ಕಿರಿಸ್ತಾನರು ಮತ್ತು ಜಿನರು ಮುಖ್ಯ ಅಲ್ಪಸಂಖ್ಯಾತ

ಸಮುದಾಯದವರಾಗಿದ್ದಾರೆ. ಮುಸಲ್ಮಾನರು ಮತ್ತು ಕಿರಿಸ್ತಾನರು ಬೆಂಗಳೂರು, ದಕ್ಷಿಣ ಕನ್ನಡ, ಕಲ್ಬುರ್ಗಿ ಪ್ರದೇಶಗಳಲ್ಲಿ, ಜಿನರು ಹಾಸನ, ಬೆಳಗಾವಿ ಮತ್ತು ಬೆಂಗಳೂರು ಪ್ರದೇಶಗಳಲ್ಲಿ, ಬೌದ್ಧರು ಕಲ್ಬುರ್ಗಿ, ಚಾಮರಾಜನಗರ ಮತ್ತು ಬೆಂಗಳೂರು ಪ್ರದೇಶಗಳಲ್ಲಿ, ಸಿಖ್ಖರು ಬೀದರ್ ಮತ್ತು ಬೆಂಗಳೂರು ಪ್ರಾಂತ್ಯಗಳಲ್ಲಿ ಮತ್ತು ಬೆಂಗಳೂರು ಮಹಾನಗರದಲ್ಲಿ ಪಾರ್ಸಿಗಳು ಹೆಚ್ಚಾಗಿದ್ದಾರೆ. ದಕ್ಷಿಣ ಕನ್ನಡ, ಬೀದರ್, ಬೆಂಗಳೂರು ನಗರ, ಕಲ್ಬುರ್ಗಿ ಮತ್ತು ಧಾರವಾಡ ಪ್ರಾಂತ್ಯಗಳಲ್ಲಿ ಅಲ್ಪಸಂಖ್ಯಾತರ ಜನಸಂಖ್ಯೆ ಜಾಸ್ತಿಯಿದೆ ಎಂದು ತಿಳಿದುಬರುತ್ತದೆ.

ಈ ಕೆಳಗಿನ ಮಾಹಿತಿಗಳು ಅಲ್ಪಸಂಖ್ಯಾತರ ಸ್ಥಿತಿಗಳನ್ನು ಕುರಿತಂತೆ ಒಂದು ಚಿತ್ರಣವನ್ನು ನೀಡುತ್ತವೆ :

T ಕಿರಿಸ್ತಾನರನ್ನು ಹೊರತುಪಡಿಸಿ, ಇತರ ಮತಧಾರ್ಮಿಕ ಅಲ್ಪಸಂಖ್ಯಾತರಲ್ಲಿ ಮಹಿಳೆಯರಿಗೆ ಸಂಬಂಧಿಸಿದಂತೆ ಲಿಂಗ ಅನುಪಾತ ಆಶಾದಾಯಕವಾಗಿಲ್ಲ. ರಾಜ್ಯಮಟ್ಟದ ಸರಾಸರಿಗೆ ಹೋಲಿಸಿದಾಗ ಮುಸಲ್ಮಾನರು, ಬೌದ್ಧರು, ಜಿನರು ಮತ್ತು ಸಿಖ್ಖರಲ್ಲಿ ಮಹಿಳೆಯರ ದಾಮಾಶಾ (ಪಾಲು) ಕಡಿಮೆಯಿದೆ. ೨೦೧೧ರ ಜನಗಣತಿಯ ಅನ್ವಯ ಕರ್ನಾಟಕದಲ್ಲಿ ಪುರುಷರು ಮತ್ತು ಮಹಿಳೆಯರ ಅನುಪಾತ ೧೦೦೦:೯೭೩ರಷ್ಟಿತ್ತು. ಸಿಖ್ಖರಲ್ಲಿ ಮಹಿಳೆಯರ ಪಾಲು ಶೇ. ೪೨.೫ರಷ್ಟಿದ್ದರೆ ಬೌದ್ಧರಲ್ಲಿ ಅದು ಶೇ. ೪೭.೬ರಷ್ಟಿದೆ.

T ಹಿಂದೂಗಳು ಮತ್ತು ಮುಸಲ್ಮಾನ ಮಹಿಳೆಯರ ಮದುವೆಯ ಸರಾಸರಿ ವಯಸ್ಸು ಹೆಚ್ಚು ಕಡಿಮೆ ಒಂದೇ ಆಗಿದೆ. ಆದರೆ ನಗರ ಪ್ರದೇಶಗಳಲ್ಲಿ ಹಿಂದೂಗಳಿಗೆ ಹೋಲಿಸಿದಾಗ ಮುಸಲ್ಮಾನರ ಮತ್ತು ಬೌದ್ಧ ಮಹಿಳೆಯರದ್ದು ಕಡಿಮೆಯಿದೆ.

T ಹಿಂದೂಗಳಿಗೆ ಹೋಲಿಸಿದಾಗ, ಮುಸಲ್ಮಾನರು ಬೌದ್ಧರು ಮತ್ತು ಜಿನರಲ್ಲಿ ಫಲವಂತಿಕೆಯ (ಫರ್ಟಿಲಿಟಿ) ಪ್ರಮಾಣ ಜಾಸ್ತಿಯಿದೆ. ಹೀಗಾಗಿ ಈ ಸಮುದಾಯಗಳ ಜನಸಂಖ್ಯೆಯ ವಾರ್ಷಿಕ ಸರಾಸರಿ ಬೆಳವಣಿಗೆಯ ಪ್ರಮಾಣ ಹೆಚ್ಚಿನ ಮಟ್ಟದಲ್ಲಿದೆ.

T ಕಿರಿಸ್ತಾನರು ಮತ್ತು ಸಿಖ್ಖರನ್ನು ಹೊರತುಪಡಿಸಿ ಅಲ್ಪಸಂಖ್ಯಾತರಲ್ಲಿ ಜನಸಂಖ್ಯೆಯ ವಾರ್ಷಿಕ ಸರಾಸರಿ ಬೆಳವಣಿಗೆಯ ಪ್ರಮಾಣ ಹೆಚ್ಚಾಗಿರುವುದರಿಂದ ಅವರಲ್ಲಿ ಮಕ್ಕಳ ಸಂಖ್ಯೆಯೂ ಹೆಚ್ಚಿದೆ.

T ರಾಜ್ಯದ ಸರಾಸರಿ ಸಂಖ್ಯೆಗೆ ಹೋಲಿಸಿದಾಗ, ಅಲ್ಪಸಂಖ್ಯಾತರ ಸಾಕ್ಷರತೆ ನಿರಾಶಾದಾಯಕವಾಗಿಲ್ಲ. ಆದರೆ ಬೌದ್ಧರಲ್ಲಿ ಸಾಕ್ಷರತೆಯ ಮಟ್ಟ ಕಡಿಮೆಯಿದೆ. ಪುರುಷರಿಗೆ ಹೋಲಿಸಿದಾಗ, ಕಿರಿಸ್ತಾನರು ಮತ್ತು ಜಿನರನ್ನು ಹೊರತುಪಡಿಸಿ ಮಹಿಳೆಯರ ಸಾಕ್ಷರತೆಯ ಪ್ರಮಾಣ ತುಂಬ ಕಡಿಮೆಯಿದೆ. ಶಾಲಾ ಶಿಕ್ಷಣ ಸಂಬಂಧಿಸಿದಂತೆ ಬೆಂಗಳೂರು ಪ್ರಾಂತ್ಯದಲ್ಲಿ ಮುಸಲ್ಮಾನರು ಮತ್ತು ಜಿನರು, ಬೆಳಗಾವಿ ಪ್ರಾಂತ್ಯದಲ್ಲಿ ಮುಸಲ್ಮಾನರು ಮತ್ತು ಸಿಖ್ಖರು ಮತ್ತು ಮೈಸೂರು ಪ್ರಾಂತ್ಯದಲ್ಲಿ ಮುಸಲ್ಮಾನ ಮಕ್ಕಳು ಸ್ಥಳೀಯ ಸರಕಾರಿ ಶಾಲೆಗಳಲ್ಲಿ ಓದುತ್ತಿದ್ದಾರೆ. ಹಿಂದೂಗಳಿಗೆ ಹೋಲಿಸಿದಾಗ ಗ್ರಾಮೀಣ ಪ್ರದೇಶಗಳ ಮುಸಲ್ಮಾನ ಮತ್ತು ಜಿನ ವಿದ್ಯಾರ್ಥಿಗಳು, ನಗರ ಪ್ರದೇಶಗಳ ಮುಸಲ್ಮಾನ, ಕಿರಿಸ್ತಾನ ಮತ್ತು ಜಿನ ವಿದ್ಯಾರ್ಥಿಗಳ ಹಾಜರಾತಿ ಅನುಪಾತ (ಯಾವುದೇ ಬಗೆಯ ಶಿಕ್ಷಣವಿರಲಿ) ಕಡಿಮೆಯಿದೆ. ೫–೨೯ ವಯೋಮಾನದವರ ಗುಂಪಿನಲ್ಲಿ ಶಾಲೆಯಲ್ಲಿ ದಾಖಲಾತಿಯಾಗದವರಲ್ಲಿ ಮುಸಲ್ಮಾನರೇ ಜಾಸ್ತಿಯಿದ್ದಾರೆ. ಉನ್ನತ ಶಿಕ್ಷಣದಲ್ಲಿ (ಡಿಪ್ಲೋಮ, ಪದವಿ, ಸ್ನಾತಕೋತ್ತರ) ಗ್ರಾಮೀಣ ಮತ್ತು ನಗರ ಪ್ರದೇಶಗಳ ಹಿಂದೂಗಳ ಸಂಖ್ಯೆಗಿಂತ ಮುಸಲ್ಮಾನ, ಕಿರಿಸ್ತಾನ ಮತ್ತು ಜಿನರ ಸಂಖ್ಯೆ ಕಡಿಮೆಯಿದೆ. ಇವುಗಳಿಂದ ಅಲ್ಪಸಂಖ್ಯಾತರಲ್ಲಿ ಬಹುಸಂಖ್ಯಾತರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ ಎಂಬ ಅಂಶ ಬಹಿರಂಗಗೊಳ್ಳುತ್ತದೆ.




ಆರೋಗ್ಯದ ವಿಚಾರದಲ್ಲಿ, ಬಹುಸಂಖ್ಯಾತ ಕೋಮಿಗೆ ಹೋಲಿಸಿದಾಗ, ಗ್ರಾಮೀಣ ಮತ್ತು ನಗರ ಪ್ರದೇಶಗಳ ಕಿರಿಸ್ತಾನರು ಮತ್ತು ಜಿನರ ಅಸ್ವಸ್ಥತೆಯ ಪ್ರಮಾಣ ಜಾಸ್ತಿಯಿದೆ. ಈ ಪರಿಸ್ಥಿತಿ ಮಹಿಳೆಯರಲ್ಲಿ ಅಧಿಕವಾಗಿರುವುದು ಆತಂಕಕಾರಿ ವಿಷಯ. ಆದರೆ ಅಚ್ಚರಿಯ ಸಂಗತಿಯೆಂದರೆ ಮುಸಲ್ಮಾನರಲ್ಲಿ ಈ ಪ್ರಮಾಣ ಕಡಿಮೆಯಿದೆ. ಶಿಶು ಮರಣದರ ಆರೋಗ್ಯ ಸ್ಥಿತಿಯ ಒಂದು ಸೂಚಕ. ಕರ್ನಾಟಕದಲ್ಲಿ ಇದರ ಪ್ರಮಾಣ ಜಾಸ್ತಿಯಿದೆ. ಅಂದರೆ ರಾಷ್ಟ್ರೀಯ ಸರಾಸರಿಗಿಂತ ಅದು ಹೆಚ್ಚಿನ ಮಟ್ಟದಲ್ಲಿರುವುದು ಶುಭಸೂಚಕವಲ್ಲ. ಮುಸಲ್ಮಾನರಲ್ಲಿನ ಶಿಶು ಮರಣದರ ರಾಷ್ಟ್ರೀಯ ಸರಾಸರಿಗಿಂತ ಜಾಸ್ತಿಯಿದ್ದರೂ, ಅದು ಹಿಂದೂ ಸಮುದಾಯಗಳಿಗೆ ಹೋಲಿಸಿದಾಗ ಕಡಿಮೆಯಿದೆ ! ಹೆಚ್ಚಿನ ಮುಸಲ್ಮಾನ ಮಕ್ಕಳು ಅತಿಸಾರದಿಂದ (ಡಯಾರಿಯ) ಬಳಲುತ್ತಿರುವುದು ಅನೇಕ ಸರ್ವೇಕ್ಷಣಗಳಿಂದ ತಿಳಿದುಬರುವ ಸಂಗತಿ. ಶಿಶುಮರಣಕ್ಕೆ ಇದೊಂದು ಪ್ರಬಲ ಕಾರಣವಾಗಿದೆ.

ಅಲ್ಪಸಂಖ್ಯಾತರಲ್ಲಿ ಹೆಚ್ಚಿನ ಮಂದಿ ಸರಕಾರಿ ಆಸ್ಪತ್ರೆಗಳ ಸೌಲಭ್ಯಗಳನ್ನು ಬಳಸುವುದರ ಬದಲು ಖಾಸಗಿರಂಗದ ವೈದ್ಯಕೀಯ ಸೇವೆಗಳಿಗೆ ಮೊರೆಹೋಗುತ್ತಾರೆ. ಹೀಗಾಗಿ ಅವರು ಅಧಿಕ ವೆಚ್ಚವನ್ನು ಭರಿಸಬೇಕಾಗುತ್ತದೆ. ಸರಕಾರಿ ಕ್ಷೇತ್ರದ ವೈದ್ಯಕೀಯ ಸಂಸ್ಥೆಗಳಲ್ಲಿರುವ ಅದಕ್ಷತೆ, ಸೌಕರ್ಯಗಳ ಕೊರತೆ, ದೂರದ ಆಸ್ಪತ್ರೆಗಳು, ಕಾಯುವಿಕೆಯಲ್ಲಿ ವ್ಯಯವಾಗುವ ಹೆಚ್ಚಿನ ಸಮಯ, ಆಸ್ಪತ್ರೆಗಳ ಸಿಬ್ಬಂದಿಯ ಗೈರುಹಾಜರಾಗಿರುವಿಕೆ, ಅತೃಪ್ತಿಕರ ಸೇವೆಗಳು ಇತ್ಯಾದಿ ಕಾರಣಗಳಿಂದ ಹೆಚ್ಚಿನ ಮಂದಿ ಸರಕಾರಿ ಆಸ್ಪತ್ರೆಗಳನ್ನು ಎಡತಾಕಲು ಹಿಂಜರಿಯುತ್ತಾರೆ. ಆರೋಗ್ಯ ವಿಮೆಯ ಸೌಲಭ್ಯ ಇನ್ನೂ ಹೆಚ್ಚಿನ ಜನರಿಗೆ ತಲುಪಿಲ್ಲ. ಅನೇಕರಿಗೆ ಈ ಪರಿಯ ಸೌಲಭ್ಯ ಇದೆ ಎಂಬುದರ ಅರಿವೇ ಇಲ್ಲ.

ಗ್ರಾಮೀಣ ಪ್ರದೇಶಗಳಲ್ಲಿನ ಅಧಿಕ ಸಂಖ್ಯೆಯ ಅಲ್ಪಸಂಖ್ಯಾತರು ಭೂವಂಚಿತರಾಗಿದ್ದಾರೆ (ಬಹುಸಂಖ್ಯಾತ ಹಿಂದೂ ಸಮುದಾಯದವರಿಗೆ ಹೋಲಿಸಿದಾಗ). ಇನ್ನು ಭೂಹಿಡುವಳಿದಾರರ ಪೈಕಿ ಸಣ್ಣ ಮತ್ತು ಅತಿಸಣ್ಣ ರೈತರೇ ಹೆಚ್ಚಾಗಿದ್ದಾರೆ. ಕಡಿಮೆ ಇಳುವರಿ ಮತ್ತು ನೀರಾವರಿ ಸೌಲಭ್ಯಗಳ ಅಲಭ್ಯತೆ ಇವುಗಳಿಂದ ಅವರು ಹೆಚ್ಚಾಗಿ ಬಾಧಿತರಾಗಿದ್ದಾರೆ. ಗೇಣಿದಾರರಾಗಿಯೂ ಹೆಚ್ಚಿನ ಮಂದಿ ಕಾರ್ಯನಿರತರಾಗಿದ್ದಾರೆ. ಏಕೆಂದರೆ ಭೂ ಒಡೆತನದಿಂದ ಅವರಿಗೆ ಬರುವ ಆದಾಯ ಕಡಿಮೆಯಿದ್ದು, ಹೆಚ್ಚುವರಿ ಸಂಪಾದನೆಗಾಗಿ ಈ ಮಾರ್ಗೋಪಾಯಕ್ಕೆ ಶರಣಾಗಿದ್ದಾರೆ. ಅಲ್ಲದೆ ಅನೇಕ ಜನ ದಿನಗೂಲಿ ನೌಕರರಾಗಿ ಕೆಲಸ ಮಾಡುತ್ತಿದ್ದಾರೆ. ಸರಕಾರಿ ಮತ್ತು ಕಾರ್ಪೊರೇಟ್ ಸೇವಾ ವಲಯಗಳಲ್ಲಿ ಅವರ ಪ್ರಾತಿನಿಧ್ಯ ಗಮನೀಯವಾಗಿ ಕಡಿಮೆಯಿದೆ. ಅಸಂಘಟಿತ ಕ್ಷೇತ್ರದಲ್ಲಿ ಹೆಚ್ಚಿನ ಸಂಖ್ಯೆಯ ದುಡಿಮೆಗಾರರಿದ್ದಾರೆ. ಹೀಗಾಗಿ ಅವರ ಆರ್ಥಿಕ ಮಟ್ಟ ಹಿಂದೂಗಳಿಗೆ ಹೋಲಿಸಿದಾಗ ಕಡಿಮೆಯಿದೆ. ಈ ಕಾರಣದಿಂದ ಅಲ್ಪಸಂಖ್ಯಾತರಲ್ಲಿ, ಅದರಲ್ಲೂ ಮುಖ್ಯವಾಗಿ ಮುಸಲ್ಮಾನರಲ್ಲಿ, ಬಾಲಕಾರ್ಮಿಕರು ಹೆಚ್ಚಾಗಿದ್ದಾರೆ. ೧೦–೧೫ ವಯೋಮಾನದ ಮಕ್ಕಳ ಪೈಕಿ, ಹಿಂದೂಗಳಿಗೆ ಹೋಲಿಸಿದಾಗ, ಮುಸಲ್ಮಾನ ಗಂಡು ಮತ್ತು ಹೆಣ್ಣು ಮಕ್ಕಳು ಜಾಸ್ತಿಯಿದ್ದಾರೆ.

ವರ್ಷಗಳು ಉರುಳುತ್ತಿರುವಂತೆ ನಮ್ಮ ಸಮಾಜದಲ್ಲಿ ನೂತನ ಬೆಳವಣಿಗೆಯೊಂದು ಕಂಡುಬರುತ್ತಿದೆ. ಇತ್ತೀಚಿನ ದಶಕಗಳಲ್ಲಿ ಅನೇಕ ಅಲ್ಪಸಂಖ್ಯಾತರು ಕಡಿಮೆ ಆರ್ಥಿಕ ವರಮಾನದ ಕಾರ್ಯಗಳಲ್ಲಿ ತೊಡಗುತ್ತಿದ್ದಾರೆ. ಹಿಂದೆ ನಮ್ಮಲ್ಲಿ ಜಾತಿ–ಆಧಾರಿತ ವೃತ್ತಿ ಶ್ರೇಣೀಕರಣವಿತ್ತು. ಪ್ರಸ್ತುತ ಮತಧಾರ್ಮಿಕ ಆಧಾರಿತ ವೃತ್ತಿ ಶ್ರೇಣೀಕರಣ ನೆಲೆಗೊಳ್ಳುತ್ತಿದೆ. ಇದು ನೀತಿ ನಿರೂಪಕರಿಗೆ ಒಂದು ಸವಾಲಾಗಿ ಪರಿಣಮಿಸಿದೆ.

ಬಹುಸಂಖ್ಯಾತ ಮತ್ತು ಅಲ್ಪಸಂಖ್ಯಾತ ಸಮುದಾಯಗಳ ನಡುವಿನ

ಆದಾಯ ಅಸಮಾನತೆ ಇತ್ತೀಚಿನ ವರ್ಷಗಳಲ್ಲಿ ವೃದ್ಧಿಸುತ್ತಿದೆ. ಜೊತೆಗೆ ಒಂದು ಅಚ್ಚರಿಯ ಅಂಶವನ್ನೂ ಗಮನಿಸಬೇಕು. ಅಲ್ಪಸಂಖ್ಯಾತ ಸಮುದಾಯಗಳ ನಡುವೆ ಸಹ ಇಂತಹ ಅಸಮಾನತೆ ನಿಧಾನವಾಗಿ ಏರುಮುಖದ ಚಲನೆಯ ಹಾದಿಯನ್ನು ಹಿಡಿಯುತ್ತಿದೆ. ಕಿರಿಸ್ತಾನರ ನಡುವೆ ಈ ಅಂತರ ಜಾಸ್ತಿಯಿದೆ.

ಜೀವನ ಆಧಾರಕ್ಕೆ ಕಡಿಮೆ ವರಮಾನ ಮೂಲ ವಾಗಿರುವುದರಿಂದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಅಲ್ಪಸಂಖ್ಯಾತರಲ್ಲಿ ಬಡತನ ಹೆಚ್ಚಿದೆ. ಮುಸಲ್ಮಾನರಲ್ಲಿ ಇದು ಗಹನವಾಗಿದೆ. ಕಿರಿಸ್ತಾನರಲ್ಲಿ ಪರಿಸ್ಥಿತಿ ಸ್ವಲ್ಪ ಉತ್ತಮವಾಗಿದೆ ಎನ್ನಬಹುದು. ಮೈಸೂರು ಮತ್ತು ಬೆಂಗಳೂರು ಪ್ರಾಂತ್ಯಗಳ ಜೊತೆ ತುಲನೆ ಮಾಡಿದಾಗ ಕಲ್ಬುರ್ಗಿ ಮತ್ತು ಬೆಳಗಾವಿ ಪ್ರಾಂತ್ಯಗಳಲ್ಲಿ ಅಲ್ಪಸಂಖ್ಯಾತರಲ್ಲಿ ಬಡತನ ಹೆಚ್ಚಿದೆ. ಕಲ್ಬುರ್ಗಿ ಮತ್ತು ಬೆಳಗಾವಿ ಹಿಂದುಳಿದ ಪ್ರದೇಶಗಳಾಗಿರುವುದರಿಂದ ಸಹಜವಾಗಿ ಅಲ್ಲಿ ಬಡತನದ ಮಟ್ಟ ಜಾಸ್ತಿಯಿದೆ. ಇನ್ನೊಂದು ದಾಖಲಾರ್ಹ ವಿಚಾರವೆಂದರೆ – ಇತರರಿಗಿಂತ ಅಲ್ಪಸಂಖ್ಯಾತರಿಗೆ ಉದಾರೀಕರಣ ನೀತಿಗಳು ಹೆಚ್ಚಿನ ಘಾತವನ್ನು ನೀಡಿದೆ. ಇಂತಹ ನೀತಿಗಳಿಂದ ಲಾಭವನ್ನು ಪಡೆಯಲು ಅವರಿಗೆ ಶಕ್ಯವಾಗಿಲ್ಲ.

ಸಾಮಾಜಿಕ ಮತ್ತು ಶೈಕ್ಷಣಿಕ ಹಿಂದುಳಿದಿರುವಿಕೆ, ಕಡಿಮೆ ಮಟ್ಟದ ಭೂಒಡೆತನ ಮತ್ತು ಆದಾಯ, ಸಾಂಸ್ಥಿಕ ನೀತಿಗಳಿಗೆ ಕುಂಠಿತ ಪ್ರವೇಶ ಇತ್ಯಾದಿ ಋಣಾತ್ಮಕ ಅಂಶಗಳು ಅಲ್ಪಸಂಖ್ಯಾತ ಕಡಿಮೆ ಜೀವನ ಮಟ್ಟಕ್ಕೆ ಕಾರಣಗಳಾಗಿವೆ. ಅವರ ವಾಸಸ್ಥಾನಗಳು ಹಾಗೂ ನಾಗರಿಕ ಸೌಲಭ್ಯಗಳನ್ನು ಗಮನಿಸಿದಾಗ ಈ ವಿಷಯ ಸ್ಪಷ್ಟವಾಗುತ್ತದೆ. ಹೆಚ್ಚಿನ ಸಂಖ್ಯೆಯ ಮುಸಲ್ಮಾನರು ಮತ್ತು ಕಿರಿಸ್ತಾನರು ಕೊಳೆಗೇರಿಗಳಲ್ಲಿ ವಾಸಿಸುತ್ತಿದ್ದಾರೆ. ಅವರ ನಿವಾಸಗಳು ಚಿಕ್ಕದಾಗಿರುತ್ತವೆ. ಕಡಿಮೆ ಸೌಲಭ್ಯಗಳು ಸಹ. ಮುಸಲ್ಮಾನರು ವಾಸಿಸುವ ಪ್ರದೇಶಗಳಲ್ಲಿ ನೀರಿನ ಅಭಾವ ಸಾಮಾನ್ಯವಾಗಿ ಕಂಡುಬರುವ ಸಂಗತಿ. ಗ್ರಾಮೀಣ ಪ್ರದೇಶಗಳಲ್ಲಿ ಅವರ ಜೊತೆ ಅನೇಕ ಜನರು ಶೌಚಾಲಯ ವ್ಯವಸ್ಥೆಯಿಂದ ವಂಚಿತರಾಗಿದ್ದಾರೆ. ಬೀದಿದೀಪಗಳ ಸೌಲಭ್ಯಗಳ ಕೊರತೆಯೂ ಅವರನ್ನು ಕಾಡುತ್ತಿದೆ.

ನಮ್ಮಲ್ಲಿ ಇನ್ನೂ ಪ್ರಜಾಪ್ರಭುತ್ವ ಆಳವಾಗಿ ಬೇರೂರಿಲ್ಲ. ಅದು ಕೆನೆಪದರುಗಳಿಗೆ ಸೀಮಿತವಾಗಿದೆ ಎಂದರೆ ಅತಿಶಯೋಕ್ತಿ ಅಥವಾ ತಪ್ಪಾಗುವುದಿಲ್ಲ. ಸಂಸತ್ತು, ವಿಧಾನಸಭೆ ಮತ್ತು ಪಂಚಾಯತ್‌ಗಳಲ್ಲಿ ಅಲ್ಪಸಂಖ್ಯಾತರ ಪ್ರಾತಿನಿಧ್ಯ ಅವರ ಸಂಖ್ಯೆಗನುಗುಣವಾಗಿ ಇಲ್ಲ.






# ಈ ದಾರಿಗೆ ಮುಖವಾಡವಿದೆ

ಬೇಡವೆಂದಷ್ಟು ಬರುತ್ತಿದೆ
ಮತ್ತದೇ ಮುಖ !
ಮಾರಿಕೊಂಡ ಮುಖ...
ರಿಮೋಟು ಕಂಟ್ರೋಲುದಾರ
ಒತ್ತಿದಷ್ಟು ಬಟನು
ಓಡುತ್ತದೆ, ನಗುತ್ತದೆ
ನಿಲ್ಲುತ್ತದೆ; ಮಾತಾಡುತ್ತದೆ
ಇಲ್ಲದಾಗ ಯಾರೂ ಬಿಕೋ
ಎಂದಳುತ್ತದೆ...
ನಗು–ಅಳು ಎರಡೂ ಸಹಜಿಲ್ಲ
ಈ ದಾರಿಗೆ ಮುಖವಾಡವಿದೆ

ಛೆ ! ಎಷ್ಟು ಮಡ್ಡ ಮನಸ್ಸಿದು
ಆಕಾಶವನು ನಂಬುತ್ತಿದೆ
ಹಾರಲಾಗದು ಏಣಿ ಇಲ್ಲದ ಎತ್ತರವನು
ಕೊಲ್ಲಲಾಗದು ಬೆಳ್ಳಬೆಳಕಿನ ಕನಸನು
ಮತ್ತದೇ ಮುಖ !
ನಂಬಿಕೆಯ ಅಳು ಹೊತ್ತು
ಕನವರಿಸಿದ್ದು ರೂಪಕದ ಭಾಷೆ
ಕಿವಿ ತೆರೆಯದ ಕಿವುಡು
ಕಿಚ್ಚಿಗೆ ಪುತಗುಟ್ಟಿದ ಚೀರಾಟ
ಮೊನ್ನೆ ಓದಿದ್ದು ನಿಮ್ಮದೇ...
ಓ ! ಹಾಡೇ ಥ್ಯಾಂಕ್ಸ್...
ಥೂ ! ಮಂಕಿಗಿಷ್ಟು ಬೆಂಕಿ...
ಬಹಿರಂಗದಲಿ ಬಯಲಾಗಿಸುವ ಹೆಣಗಾಟ
ಬಯಲಿಗೆಷ್ಟು ಛಂದದ ನಗು
ಬಣ್ಣ ನುಂಗಿದ ವೈಯಾರ
ಬಯಲ ತುಂಬಿದ ಬಿಸಿಲ ಹೊಟ್ಟೆಯಲಿ
ಬಿಸಿಲ ಕೋಲುಗಳ ನರ್ತನ !

ಮಾತು ಬಂದ ಮೇಲೂ...
ಸನ್ನೆ ಜಾರಿಯಲ್ಲಿದೆ; ಸನ್ನೆ ಎಂದರೆ ಸಂಚು
ಹೊಂಚು ಹಾಕುವುದು ಜೀವ ಬಲಿಗೆ
ಮರುಪಯಣವೊಂದು ಕೊನೆಯ ಬಿಂದುವಿನತ್ತ
ಸೋಲೇ ? ಅಲ್ಲಲ್ಲ ಎಚ್ಚರ !
ಅದೇ ಮುಖ ಎಚ್ಚರಿಸಿದ್ದು...
ಈ ದಾರಿಗೆ ಮುಖವಾಡವಿದೆ.

**ಡಾ|| ಅನಸೂಯ ಕಾಂಬಳೆ**
ಕನ್ನಡ ಅಧ್ಯಯನ ಕೇಂದ್ರ, ಕರ್ನಾಟಕ ವಿಶ್ವವಿದ್ಯಾಲಯ
ಸ್ನಾತಕೋತ್ತರ ವಿಭಾಗ, ಕೆರಿಮತ್ತಿ ಹಳ್ಳಿ, ಹಾವೇರಿ – ೫೮೧ ೧೧೦

ಯಡ್ಯೂರಪ್ಪ ಸರ್ಕಾರದ ಅವಧಿಯಲ್ಲಿ ಅಲ್ಪಸಂಖ್ಯಾತ ಸಮುದಾಯಗಳ ಶಾಸಕರ ಸಂಖ್ಯೆ ಗಮನಾರ್ಹವಾಗಿ ಕಡಿಮೆಯಾಗಿತ್ತು. ಅವರ ಸಂಪುಟದಲ್ಲಿ ಕೇವಲ ಒಬ್ಬ ಅಲ್ಪಸಂಖ್ಯಾತ ಸಮುದಾಯದ ಸಚಿವರಿದ್ದರು. ಸದಾನಂದ ಗೌಡ ಮತ್ತು ಜಗದೀಶ ಶೆಟ್ಟರ್ ಅವರ ಸಂಪುಟದಲ್ಲಿ ಒಬ್ಬ ಮುಸಲ್ಮಾನ ಸಚಿವ ಸಹ ಇರಲಿಲ್ಲ. ಸಿದ್ದರಾಮಯ್ಯ ಸರ್ಕಾರದಲ್ಲಿ ಮೂರು ಮುಸಲ್ಮಾನ ಸಚಿವರು ಮತ್ತು ಕಿರಿಸ್ತಾನ, ಜಿನ ಸಮುದಾಯಗಳಿಂದ ಒಬ್ಬೊಬ್ಬ ಸಚಿವರಿದ್ದಾರೆ. ರಾಜಕೀಯ ಪ್ರಕ್ರಿಯೆಗಳಲ್ಲಿ ಅಲ್ಪಸಂಖ್ಯಾತರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಮಾಡುವ ನಿಟ್ಟಿನಲ್ಲಿ ಅವರಲ್ಲಿ ಜಾಗೃತಿ ಮೂಡಿಸಬೇಕು.

ಕರ್ನಾಟಕ ಸರಕಾರ ಅಲ್ಪಸಂಖ್ಯಾತರ ಹಿತದಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ವಸತಿ, ನೈರ್ಮಲ್ಯ ಸೌಕರ್ಯ, ಉಚಿತ ವಿದ್ಯುಚ್ಛಕ್ತಿ ಸಂಪರ್ಕ, ಕೌಶಲ ಅಭಿವೃದ್ಧಿ, ಉಚಿತ ಶಿಕ್ಷಣ (ವಿದ್ಯಾರ್ಥಿವೇತನಗಳನ್ನು ಒಳಗೊಂಡಂತೆ), ಆಹಾರ ಭದ್ರತೆ, ಸಾಂಸ್ಥಿಕ ಸಾಲ ಮತ್ತು ಆರೋಗ್ಯ ಸೌಕರ್ಯಗಳಿಗೆ ಪ್ರವೇಶಾವಕಾಶ ಇತ್ಯಾದಿ ಅನುಕೂಲಗಳನ್ನು ಕಲ್ಪಿಸಿದೆ. ಆದರೆ ಇವುಗಳಿಗೆ ಸಂಬಂಧಿಸಿದಂತೆ ಅಲ್ಪಸಂಖ್ಯಾತರ ನಡುವೆ ಜಾಗೃತಿ ತೀರ ಕಡಿಮೆಯಿದೆ. ಹೀಗಾಗಿ, ಯೋಜನೆಗಳ ಲಾಭಗಳು ಸೀಮಿತವಾಗಿವೆ ಹಾಗೂ ಹೆಚ್ಚು ಜನರನ್ನು ತಲುಪುತ್ತಿಲ್ಲ.

ನಮ್ಮ ರಾಜ್ಯ ಸರ್ಕಾರಗಳು, ಬೆಳವಣಿಗೆಯಲ್ಲಿ ಅಲ್ಪಸಂಖ್ಯಾತರನ್ನು ಒಳಗೊಳ್ಳಲು ಅನೇಕ ಕ್ರಮಗಳನ್ನು ಕೈಗೊಂಡಿವೆ. ಆದರೆ ಈ ದಿಶೆಯಲ್ಲಿ ಅಲ್ಪಸಂಖ್ಯಾತರಿಗೆ ಒಂದು ವಿಶೇಷ ಅಭಿವೃದ್ಧಿ ಯೋಜನೆಯೊಂದನ್ನು ಜಾರಿಗೊಳಿಸುವುದರ ಅವಶ್ಯಕತೆ ಇದೆ. ಅಲ್ಪಸಂಖ್ಯಾತರಲ್ಲಿರುವ ಬಡತನದ ಶಮನ, ಅವರ ಜೀವನ ಸಾಕ್ಷರತೆ ಮತ್ತು ವಿದ್ಯಾಮಟ್ಟಗಳಲ್ಲಿ ಸುಧಾರಣೆ, ಹಾಗೂ ಜೀವನ ಹಾಗೂ ಆಸ್ತಿಗಳ ರಕ್ಷಣೆ ಇವುಗಳು ಈ ಅಭಿವೃದ್ಧಿ ಯೋಜನೆಯ ಗುರಿಗಳಾಗಿರಬೇಕು. ಇದಕ್ಕೊಂದು ಸ್ಪಷ್ಟವಾದ ಕಾಲಾವಧಿಯನ್ನು ನಿಗದಿಪಡಿಸಬೇಕು.

ನಮ್ಮ ರಾಜ್ಯ ಸರ್ಕಾರ ೨೦೧೫–೨೦೧೬ರ ಬಜೆಟ್‌ನಲ್ಲಿ ಅಲ್ಪಸಂಖ್ಯಾತರ ಕಲ್ಯಾಣಕ್ಕಾಗಿ ರೂ. ೧೦೦೦ ಕೋಟಿಯಷ್ಟು ನೀಡಲಾಗುತ್ತದೆ ಎಂದು ಘೋಷಿಸಿತ್ತು. ಅಂದರೆ ರಾಜ್ಯದ ಜನಸಂಖ್ಯೆಯ ಶೇ. ೧೬ರಷ್ಟಿರುವ ಮಂದಿಗೆ ಇಷ್ಟು ಮೊತ್ತದ ಹಣ ಅವರ ಏಳಿಗೆಗಾಗಿ ನಿಗದಿಪಡಿಸಲಾಗಿತ್ತು. ಆದರೆ ರಾಜ್ಯ ಸರ್ಕಾರದ ಯೋಜನೆಯಲ್ಲಿ (೨೦೧೫–೧೬) ತೆಗೆದಿರಿಸಲಾಗಿದ್ದ ಒಟ್ಟು ಮೊತ್ತ ರೂ. ೭೨,೫೯೭ ಕೋಟಿಯಷ್ಟಿತ್ತು. ಇದರಲ್ಲಿ ಅಲ್ಪಸಂಖ್ಯಾತರ ಕಲ್ಯಾಣದ ಪಾಲು ಶೇ. ೧.೪. ಇದು ಅಷ್ಟೊಂದು ಸ್ಫೂರ್ತಿದಾಯಕ ಮೊತ್ತವಲ್ಲ. ಈ ವಿಚಾರಕ್ಕೆ ಸಂಬಂಧಿಸಿದಂತೆ, ಇನ್ನೂ ಹೆಚ್ಚಿನ ಹಣ ವಿನಿಯೋಗಿಸಬೇಕೆಂದು ಕೆಲವು ವಿಶೇಷಜ್ಞರ ಅಭಿಮತ. ಅಲ್ಪಸಂಖ್ಯಾತರ ಸಾಮಾಜಿಕ–ಆರ್ಥಿಕ ಬೆಳವಣಿಗೆಗಳು ನಿರೀಕ್ಷಿಸಿದ ಮಟ್ಟದಲ್ಲಿ ಜರುಗದೇ ಇರುವುದಕ್ಕೆ ಈ ಅಂಶವೂ ಒಂದು ಪ್ರಮುಖ ಕಾರಣ ಎಂಬುದು ಅಂತಹವರ ಒಂದು ವಿಶ್ಲೇಷಣೆ.

ನಮ್ಮ ದೇಶದ ಇತರೆಡೆಗಳಲ್ಲಿ ಜರೂರಾಗಿರುವಂತೆ, ನಮ್ಮ ರಾಜ್ಯದಲ್ಲೂ ಅಲ್ಪಸಂಖ್ಯಾತರ ಮೇಲೆ ಅನೇಕ ತೆರನಾದ ಆಕ್ರಮಣಗಳು ಇತ್ತೀಚಿನ ದಶಕಗಳಲ್ಲಿ ಹೆಚ್ಚಾಗಿ ಜರುಗುತ್ತ ಬಂದಿರುವುದು ಒಂದು ಕಳವಳಕಾರಿ ಬೆಳವಣಿಗೆಯೇ ಸರಿ. ಕೆಲವು ವಿಶ್ಲೇಷಕರು, ಯಾವುದೇ ಒಂದು ಮತಧರ್ಮದ ಸಂಖ್ಯೆಯಲ್ಲಿ ಕಡಿಮೆಯಿರುವ ಗುಂಪು ತಮ್ಮ ಮತಧರ್ಮಕ್ಕೆ ಅಪಾಯ ತಟ್ಟುತ್ತಿದೆ ಎಂಬ ಕಾರಣದಿಂದ ಅನೇಕ ಕಾನೂನುಬಾಹಿರ ಚಟುವಟಿಕೆಗಳಲ್ಲಿ ತೊಡಗಿ, ಹೆಚ್ಚಿನ ಸಂಖ್ಯೆಯ ಮೌನ ಬಹುಸಂಖ್ಯಾತರಲ್ಲಿ ಒಂದು ರೀತಿಯ ಭಯದ ವಾತಾವರಣವನ್ನುಂಟುಮಾಡುವುದನ್ನು 'ಸಾಂಸ್ಕೃತಿಕ ಪೊಲೀಸ್‌ಗಿರಿ' ಎಂದು ಕರೆಯುತ್ತಾರೆ. ಆದರೆ ನಿಜಾರ್ಥದಲ್ಲಿ ಅದು 'ಅನೈತಿಕ ಪೊಲೀಸ್‌ಗಿರಿ' ಅಥವಾ ಗೂಂಡಾಗಿರಿಯೇ ಆಗಿದೆ. ಕೋಮುವಾದ ಮತ್ತು ಮೂಲಭೂತವಾದದ ಮೂಲಕ ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವುದು ಈ 'ಅನೈತಿಕ' ಪೊಲೀಸರ ಧ್ಯೇಯೋದ್ದೇಶ. ನಮ್ಮ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯನ್ನು 'ಬುದ್ಧಿವಂತರ ಜಿಲ್ಲೆ' ಎಂದು ಕರೆಯುವುದುಂಟು. ಆದರೆ ಇತ್ತೀಚಿನ ದಶಕಗಳಲ್ಲಿ ಅದೊಂದು ಕೋಮು–ಮೂಲಭೂತವಾದ ಪ್ರಯೋಗಶಾಲೆಯಾಗಿ ಪರಿವರ್ತನೆಯಾಗಿದೆಯೇನೋ ಎನ್ನುವಷ್ಟರ ಮಟ್ಟಿಗೆ ಅಲ್ಲಿ ಅಹಿತಕಾರಿ, ಸಮಾಜ–ವಿಭಜಕ ಕರಾಳ ಘಟನಾವಳಿಗಳು ಪುನರಾವರ್ತನೆಯಾಗುತ್ತಿರುವುದು ತಲ್ಲಣಕಾರಿಯಾದ ಸಂಗತಿ. ನಿಜ, ಎಲ್ಲ ಬಗೆಯ ಕೋಮುವಾದ ಮತ್ತು ಮೂಲಭೂತವಾದಗಳನ್ನು ಎಚ್ಚೆತ್ತ ಜನತೆ ಸಾರಾಸಗಟಾಗಿ ತಿರಸ್ಕರಿಸಬೇಕು. ಇದಕ್ಕೆ ಸಂಬಂಧಿಸಿದಂತೆ ಎರಡನೇ ಮಾತಿಲ್ಲ. ತಮ್ಮೆಲ್ಲ ಅಂತರಗಳನ್ನು ಬದಿಗಿಟ್ಟು ಪ್ರಗತಿಪರರು ಈ ವಿಷಯದಲ್ಲಾದರೂ ಹೆಗಲಿಗೆ ಹೆಗಲು ಕೊಟ್ಟು ಸಮರ್ಥವಾಗಿ ಇಂತಹ ವಿಚ್ಛಿದ್ರಕಾರಿ ಪ್ರಕ್ರಿಯೆಗಳ ವಿರುದ್ಧ ಪ್ರತಿರೋಧವನ್ನು ಒಡ್ಡಬೇಕು. ಈ ದಿಶೆಯಲ್ಲಿ ಪ್ರಯತ್ನಗಳೇ ಆಗಿಲ್ಲ ಎಂದರೆ ತಪ್ಪಾಗುತ್ತದೆ. ಆದರೆ ಅವು ಒಂದು ಸಂಯುಕ್ತ ರೂಪದಲ್ಲಿ ಜರುಗಿದರೆ ಹೆಚ್ಚಿನ ಪರಿಣಾಮ ಬೀರಬಲ್ಲದು.

ಅಲ್ಪಸಂಖ್ಯಾತರು ಎಲ್ಲಿದ್ದರೂ ಅಲ್ಪಸಂಖ್ಯಾತರೇ. ಅವರಲ್ಲಿ ಸಾಮಾನ್ಯವಾಗಿ ಒಂದು ಬಗೆಯ ಅಳುಕು, ಕಳವಳ ಮನೆಮಾಡಿರುತ್ತದೆ. ಆದುದರಿಂದ ಅವರು 'ಅಸ್ಮಿತೆ' ಎಂಬ ರಕ್ಷಾಕವಚದೊಳಗೆ ಇರುತ್ತಾರೆ. ಇದು ಒಂದು ತೆರನಾದ ಪ್ರತ್ಯೇಕ ಕೂಪಗಳ ಹೀನತೆಗೆ ಎಡೆಮಾಡಿಕೊಡುತ್ತದೆ.

**ಲೈಂಗಿಕ ಅಲ್ಪಸಂಖ್ಯಾತರು**

ಅಸ್ಮಿತೆಯನ್ನು ಪುನರ್ ಸ್ಥಾಪಿಸಿಕೊಳ್ಳುವ ಚಳುವಳಿಯ ಭಾಗವಾಗಿ ಲೈಂಗಿಕ ಅಲ್ಪಸಂಖ್ಯಾತರ ಸಂಘಟನೆ ಮತ್ತು ಚಟುವಟಿಕೆಗಳನ್ನು ಗಮನಿಸಬಹುದು. ತಮ್ಮ ಅಸ್ಮಿತೆಯನ್ನು ಸಾಮಾಜಿಕವಾಗಿ ಬಹಿರಂಗವಾಗಿ ಪ್ರಕಟಿಸಿ ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಿದ ಲೈಂಗಿಕ ಅಲ್ಪಸಂಖ್ಯಾತರ ಬಗೆಗಿನ ಮಾಹಿತಿ ಇದ್ದಕ್ಕಿದ್ದಂತೆ ಹೊಸ ಅನುಭವ ಲೋಕವನ್ನು ತೆರೆದಿಟ್ಟಿತು. ಲೈಂಗಿಕ ಅಲ್ಪಸಂಖ್ಯಾತರೆಂಬ ವಿಶಾಲ ಛತ್ರಿಯಡಿ ಗೇ, ಲೆಸ್ಬಿಯನ್‌ರಂತಹ ಸಲಿಂಗಕಾಮಿಗಳು ಮತ್ತು ದ್ವಿಲಿಂಗ ಹಾಗೂ ವಿಭಿನ್ನ ಅಂತರ್ಲಿಂಗೀಯರೂ ಸೇರಿಕೊಳ್ಳುತ್ತಾರೆ. ಲೈಂಗಿಕ ಅಲ್ಪಸಂಖ್ಯಾತರು ತಮ್ಮ ಬಗ್ಗೆ ಬಹಿರಂಗವಾಗಿ ಮಾತನಾಡಿ, ತಮ್ಮ ವಿಚಾರಗಳನ್ನು ಮತ್ತು ಹಕ್ಕುಗಳನ್ನು ವ್ಯಕ್ತಪಡಿಸುವುದೇ ಚಳುವಳಿಯ ಒಂದು ಬಹುಮುಖ್ಯ ಅಂಗವಾಗಿದೆ. ಬೆಂಗಳೂರಿನಲ್ಲಿ ಈ ಸಮುದಾಯದ ಹಲವಾರು ಮಂದಿ 'ಸಂಗಮ', 'ಜೀವ', ಕರ್ನಾಟಕ ಲೈಂಗಿಕ ಅಲ್ಪಸಂಖ್ಯಾತರ ವೇದಿಕೆ, ಕರ್ನಾಟಕ ಲೈಂಗಿಕ ಕಾರ್ಮಿಕರ ಯೂನಿಯನ್, ಲೆಸ್ಬಿಟ್, 'ಒಂದೆಡೆ' ಮುಂತಾದ ಎನ್.ಜಿ.ಒ.ಗಳಲ್ಲಿ ಸಂಘಟಿತರಾಗಿ ಅವರ ಹಕ್ಕು, ಬಾಧ್ಯತೆಗಳಿಗಾಗಿ ಹೋರಾಡುತ್ತಿದ್ದಾರೆ.

ಸಲಿಂಗಿಗಳ ನಡುವಿನ ಲೈಂಗಿಕ ಸಂಬಂಧವನ್ನು ಅಪರಾಧೀಕರಣಗೊಳಿಸಿದ್ದ ಇಂಡಿಯನ್ ಪೀನಲ್ ಕೋಡ್ ಸೆಕ್ಷನ್ ೩೭೭ಕ್ಕೆ ತಿದ್ದುಪಡಿ ತಂದು ಅಂತಹ ಸಂಬಂಧಗಳನ್ನು ಅಪರಾಧಮುಕ್ತವಾಗಿಸಿದ ಜುಲೈ ೨, ೨೦೦೯ರ ದೆಹಲಿ ಹೈಕೋರ್ಟ್ ತೀರ್ಪು ಕೂಡ ಇವರ ಹೋರಾಟಕ್ಕೆ ಸಂದ ಜಯವಾಗಿದೆ. ಸುಪ್ರೀಂ ಕೋರ್ಟ್ ಏಪ್ರಿಲ್ ೧೫, ೨೦೧೪ರಂದು ನೀಡಿದ ತೀರ್ಪು ಅಂತರ್ಲಿಂಗೀಯ ಸಮುದಾಯದವರಿಗೆ ತೃತೀಯ ಲಿಂಗೀಯರ ಸ್ಥಾನಮಾನವನ್ನು ಕೊಟ್ಟು ಅವರಿಗೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ಗುಂಪಿನವರಿಗೆ ನೀಡುವ ಸ್ಥಾನಮಾನ ಕೊಡಬೇಕೆಂದು ಮತ್ತು ವಿದ್ಯಾಭ್ಯಾಸ ಮತ್ತು ಉದ್ಯೋಗಗಳಲ್ಲಿ ಅವಕಾಶವನ್ನು ನೀಡಬೇಕೆಂಬ ತೀರ್ಪು ನೀಡಿದೆ.

ಇನ್ನೊಂದು ವಿಷಯ. ನಮ್ಮಲ್ಲಿ ಅಲ್ಪಸಂಖ್ಯಾತರ ಮೇಲೆ ಆಕ್ರಮಣಗಳಾದಾಗ ಎಡಪಂಥೀಯರು, ಪ್ರಜಾಸತ್ತಾತ್ಮಕ ಶಕ್ತಿಗಳು, ಉದಾರಪಂಥಿಗಳು ಹಾಗೂ ಇತರ ಪ್ರಗತಿಪರರು ತಮ್ಮ ದನಿಯನ್ನು ಇವುಗಳ ವಿರುದ್ಧ ಎತ್ತುತ್ತ ಬಂದಿದ್ದಾರೆ. ಇದೇ ರೀತಿಯಲ್ಲಿ ಅವರು ನಮ್ಮ ನೆರೆಯ ದೇಶಗಳಾದ ಪಾಕಿಸ್ತಾನ, ಬಾಂಗ್ಲಾದೇಶ, ಶ್ರೀಲಂಕ, ಮಯ್ನಮಾರ್ ಅಥವಾ ಇನ್ಯಾವುದೇ ದೇಶಗಳಲ್ಲಿ ಅಲ್ಪಸಂಖ್ಯಾತರ ಮೇಲೆ ಹಲ್ಲೆಗಳಾದಾಗ ಪ್ರತಿಭಟನೆಗಳನ್ನು ಮಾಡಬೇಕು. ವಿಸ್ತೃತ ನೆಲೆಯಲ್ಲಿ ಇಂತಹ ಅನೇಕ ಇತ್ಯಾತ್ಮಕ ಚಟುವಟಿಕೆಗಳು ನಿರಂತರವಾಗಿ ಜರುಗಿದಲ್ಲೇ ಅಲ್ಪಸಂಖ್ಯಾತರು ಭದ್ರ, ನೆಮ್ಮದಿಯ ನಾಳೆಗಳನ್ನು ನಿರೀಕ್ಷಿಸಬಹುದು.

*(**ಆಧಾರ:** ಕರ್ನಾಟಕ ರಾಜ್ಯ ಸರ್ಕಾರ ಪ್ರಾಯೋಜಿಸಿದ ಸಂಶೋಧನ ಯೋಜನೆಯ "ಕರ್ನಾಟಕದ ಅಲ್ಪಸಂಖ್ಯಾತರ ಸಮಾಜೋ ಆರ್ಥಿಕ ಪರಿಸ್ಥಿತಿ" ಅಧ್ಯಯನದ ವರದಿ [ನ್ಯಾಷನಲ್ ಸ್ಕೂಲ್ ಆಫ್ ಇಂಡಿಯಾ ವಿಶ್ವವಿದ್ಯಾನಿಲಯದ ಸಂಶೋಧಕರ ತಂಡ] ಮತ್ತು ಇತರ ಆಧಾರಗಳು.)*

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೪, ೩ನೇ ಕ್ರಾಸ್, ರಾಜ್ ಗಾರ್ಡನಿಯ ಲೇಔಟ್,
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧






# ನಾನೊಬ್ಬ ವಿಶಿಷ್ಟ ಮಹಿಳೆ

**ಸುಂ**ದರಾಂಗನೆಯರಿಗೆ ಬಿಡದ ಸೋಜಿಗ
ಅದೇನಿದೀ ನನ್ನ ಬೆಡಗಿನ ಗುಟ್ಟು
ನನ್ನಂದವೇನೂ ಸೂಜಿಗಲ್ಲಲ್ಲ,
ನನಗೆ ಗೊತ್ತು, ನನ್ನ ಮೈಕಟ್ಟು
ಜಾಹಿರಾತಿನ ಲಲನೆಯರ ಮಾಟವೂ ಅಲ್ಲ

ಅದೇನೆಂದು ಹೇಳ ಹೊರಟರೆ
ದಿಟವಲ್ಲವದು ಎನ್ನುವರು
ಆದರೂ ಹೇಳ್ತೀನಿ ಕೇಳ್ರೇ !
ನನ್ನೀ
ನಿಡಿದಾದ ಬಾಹುಗಳಲ್ಲಿ
ನಿತಂಬಗಳ ಬಾಹುಳ್ಯದಲ್ಲಿ
ನಡಗೆಯ ದಾಪಿನಲ್ಲಿ
ತುಟಿಗಳ ಕೊಂಕಿನಲ್ಲಿ

ನಾನು
ಒಂದು ಹೆಣ್ಣು! ಕಣ್ರಮ್ಮ
ವಿಶಿಷ್ಟವಾದ ಹೆಣ್ಣು
ಹೆಣ್ಣುಗಳಲ್ಲೇ ವಿಶಿಷ್ಟ ಅದೇ
ನಾನು
ಸದ್ದಿಲ್ಲದೆ ಸುಳಿವಿಡದೆ ನಾ
ಅಂಗಳದ ಒಳಸುಳಿಯ
ನೆರೆದವರೆಲ್ಲ ದಿಗ್ಗನೆ
ಎದ್ದು ನಿಲುವರು
ಮಂಡಿಯೂರುತ್ತ ಕೆಲವರು ನನ್ನ ಸುತ್ತುಗಟ್ಟಿ
ಮುತ್ತುವರು ಝೇಂಕರಿಸುವ ಜೇನ್ನೊಣಗಳಂತೆ

ಅದೇನೆಂದು ಹೇಳ್ತೀನಿ ಕೇಳ್ರೇ
ಅದು ನನ್ನೀ
ಕಣ್ಣೊಳಗಿನ ಕಾಂತಿ
ಹಲ್ಲುಗಳ ಹೊಳೆಪು
ನಡುವಿನ ನಾಟ್ಯ
ಪಾದಗಳ ಲಾಲಿತ್ಯ

ನಾನು
ಒಂದು ಹೆಣ್ಣು! ಕಣ್ರಮ್ಮ

ವಿಶಿಷ್ಟವಾದ ಹೆಣ್ಣು
ಹೆಣ್ಣುಗಳಲ್ಲೆ ವಿಶಿಷ್ಟ ಅದೇ
ನಾನು
ಗಂಡಸರೇ ಬೆರಗಾಗಿದ್ದಾರೆ
ಅದೇನ್ಕಂಡ್ರೀ ಇವಳಲ್ಲಿ !
ಅವರೂ ಪರದಾಡ್ತಾರೆ
ಪಾಪ ! ಆಗೊಲ್ಲ ಅವರಿಗೆ ತಿಳಿಯಲು
ತೋರಿಸಹೋದರೆ, ಅಂತಾರೆ
ಇಲ್ಲ, ಏನೂ ಕಾಣ್ತಿಲ್ವೆ

ನಾ ಹೇಳ್ತೀನಿ ಕೇಳ್ರಪ್ಪಾ !
ಅದು ನನ್ನ
ಬೆನ್ನ ಬಾಗಿನಲ್ಲಿ
ನಗೆಯ ಬೆಂಗದಿರಲ್ಲಿ
ಎದೆಯ ಉಟ್ಟಿನಲ್ಲಿ
ತೋರ್ಕೆಯ ಕಂಪಿನಲ್ಲಿ

ನಾನು ಒಂದು ಹೆಣ್ಣು! ಕಣ್ರಪ್ಪಾ!
ವಿಶಿಷ್ಟ ಹೆಣ್ಣು
ಹೆಣ್ಣುಗಳಲ್ಲೇ ವಿಶಿಷ್ಟ
ಅದೇ ನಾನು.

ತಿಳೀತಲ್ಲಾ ಈಗ
ನಾನು ನನ್ನ ತಲೆ ತಗ್ಗಿಸೋಲ್ಲ
ಯಾಕೆ ಅಂತ
ಏರುದನಿಯ ಹಂಗಿಲ್ಲದೆ
ಕುಳಿದು ಕುಪ್ಪಳಿಸದೆ
ನಿನ್ನ ಮುಂದೆ
ಹಗೂರಾಗಿ ಹಾಯ್ದು ಹೋದಾಗ
ನನ್ನ ನೋಡಿ
ನೀ ಹೆಮ್ಮೆಪಡಬೇಕು

ಎಲ್ರೂ ಕೇಳಿಸ್ಕೊಳ್ಳಿ
ಅದು, ಆ ಗುಟ್ಟು ಏನು ಅಂತ
ಅದು ನನ್ನ ಮೆಟ್ಟಿನ ಹಿಮ್ಮಡಿಯ
ಹಿತವಾದ ದನಿ
ನನ್ನ ಮುಂಗುರುಳು
ನಾ ವಿರಮಿಸುವ ನನ್ನ ಅಂಗೈ
ನಾನು ಒಬ್ಬ ಹೆಣ್ಣು! ಕಣ್ರಪ್ಪಾ
ವಿಶಿಷ್ಟವಾದ ಹೆಣ್ಣು
ಹೆಣ್ಣುಗಳಲ್ಲೇ ವಿಶಿಷ್ಟ
ಅದೇ ನಾನು.

ಮೂಲ : **ಮಾಯಾಂಗೆಲೊ,** ಅನುವಾದ : **ಕೆ. ಎಸ್. ಪಾರ್ಥಸಾರಥಿ**
ಪ್ಲಾಟ್ #೧೧೦೫, 'ಪೂರ್ವ ಏಟ್ರಿಯ ಪ್ಲಾಟೀನ', ಅಶ್ವಥ್‌ನಗರ, ಆರ್.ಎಂ.ವಿ. ಬಡಾವಣೆ, ಬೆಂಗಳೂರು–೫೬೦ ೦೯೪

# ರೈತ ಚಳುವಳಿಗಳ ಮುಂದಿರುವ ಮುನ್ನೋಟ

## ಐಕ್ಯ ಹೋರಾಟ

ಪಿ. ವಿ. ಲೋಕೇಶ್

**ಭಾ**ರತದಂತಹ ದೇಶದಲ್ಲಿ ರಾಜಕಾರಣಕ್ಕೆ ಹೊಸ ತಿರುವು ಕೊಡಬಲ್ಲ ಶಕ್ತಿಯನ್ನು "ಚಳುವಳಿಗಳು" ಹೊಂದಿದ್ದವು ಎಂಬುದನ್ನು ನಮ್ಮ ಇತಿಹಾಸ ಹಲವು ಸಂದರ್ಭಗಳಲ್ಲಿ ಎತ್ತಿ ತೋರಿಸಿದ್ದಿದೆ. ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ನಡೆದ ಸ್ವಾತಂತ್ರ್ಯ ಚಳುವಳಿ ಇದಕ್ಕೊಂದು ಸ್ಪಷ್ಟ ಉದಾಹರಣೆ ಎಂಬುದು ಇಂದಿಗೆ ಬಹಳ ಹಳೆಯ ಮಾತಾಗುತ್ತದೆ. ಏಕೆಂದರೆ ಬ್ರಿಟಿಷರಿಂದ ಸ್ವತಂತ್ರಗೊಂಡ ಆರೇಳು ದಶಕಗಳ ನಂತರದ ಭಾರತದಲ್ಲೀಗ ಎರಡು ತಲೆಮಾರಿನ ಪೀಳಿಗೆ ಹಿಂದೆ ಸರಿದು ಮೂರನೇ ತಲೆಮಾರಿನ ಹೊಸ ಪೀಳಿಗೆ ಮುನ್ನೆಲೆಗೆ ಬರುತ್ತಿದೆ. ಹೀಗೆ ಬದಲಾದ ತಲೆಮಾರುಗಳ ಹೊಸ ಪೀಳಿಗೆಗೆ ನಮ್ಮ ಸ್ವಾತಂತ್ರ್ಯ ಚಳುವಳಿಯಲ್ಲಿ ಕಾರ್ಮಿಕರು, ರೈತರು, ವಿದ್ಯಾರ್ಥಿ–ಯುವಜನರು ತಮ್ಮ ತಮ್ಮ ಪ್ರತ್ಯೇಕ ಸಂಘಟನೆಗಳೊಂದಿಗೆ ಬ್ರಿಟಿಷರ ವಿರುದ್ಧ ತೋರಿದ ಐಕ್ಯತಾ ಚಳುವಳಿಯ ಸಂದೇಶ ಬಹಳ ಪ್ರಸ್ತುತವಾಗಿದೆ. ಸ್ವಾತಂತ್ರ್ಯಾನಂತರವೂ ಸಹ ಭಾರತದಲ್ಲಿ ಈ ವಿಭಾಗದ ಸಂಘಟನೆಗಳ ಚಳುವಳಿಯ ರಾಜಕೀಯ ಕೊಡುಗೆಯ ಮಹತ್ವವನ್ನು ಅಲ್ಲಗಳೆಯುವಂತಿಲ್ಲ. ಮಾತ್ರವಲ್ಲ, ಅವು ಇಂದಿಗೂ ಪ್ರಸ್ತುತ ಎಂಬುದನ್ನೂ ನಿರಾಕರಿಸಲಾಗದು.

ಈ ಐತಿಹಾಸಿಕತೆಯ ಹಿನ್ನೆಲೆಯಲ್ಲಿ, ನಮ್ಮ ರಾಜ್ಯದಲ್ಲಿ "ಚಳುವಳಿಗಳ ರಾಜಕಾರಣ" ಅಥವಾ "ಹೋರಾಟಗಳ ರಾಜಕೀಯದ" ಪ್ರಸ್ತುತತೆಯನ್ನು ಚರ್ಚಿಸುವುದು ಅಗತ್ಯವೆನಿಸುತ್ತದೆ. ಈ ನಿಟ್ಟಿನಲ್ಲಿ 'ಹೊಸತು' ಪತ್ರಿಕೆಯ ವಾರ್ಷಿಕ ವಿಶೇಷಾಂಕದಲ್ಲಿ ಕರ್ನಾಟಕದ ರೈತ–ಕಾರ್ಮಿಕ–ದಲಿತ ಚಳುವಳಿಗಳ ಬಗ್ಗೆ ಅವಲೋಕನ ಮಾಡುವುದು ಒಂದು ಉತ್ತಮ ಪ್ರಯತ್ನ. ಅದರ ಭಾಗವಾಗಿ ರಾಜ್ಯದ ರೈತ ಚಳುವಳಿಯ ಮುನ್ನೋಟವನ್ನು ಈ ಲೇಖನದ ಮೂಲಕ ಓದುಗರ ಮುಂದಿಡುತ್ತಿದ್ದೇನೆ. ದೇಶದೆಲ್ಲೆಡೆಯಂತೆ ನಮ್ಮ ರಾಜ್ಯದ ರೈತ ಚಳುವಳಿಗೂ ತನ್ನದೇ ಆದ ದೀರ್ಘ ಇತಿಹಾಸವಿದೆ. ಬ್ರಿಟಿಷರ ಆಡಳಿತಕ್ಕಿಂತಲೂ ಹಿಂದಿನ ರಾಜ ಮಹಾರಾಜ, ಪಾಳೇಗಾರರ ಆಳ್ವಿಕೆಯ ಕಾಲದಲ್ಲೂ ಪ್ರಾದೇಶಿಕ, ಪ್ರಾಂತಗಳ ಸೀಮಿತ ಮಟ್ಟದಲ್ಲಿ ರೈತ ಬಂಡಾಯ ವಿವಿಧ ರೂಪಗಳಲ್ಲಿ ಪ್ರಕಟವಾಗಿ ಹಲವು ಬದಲಾವಣೆಗೆ ಕಾರಣವಾದ ಘಟನೆಗಳ ಆಮೂಲಾಗ್ರ ವಿವರಗಳನ್ನು ಇಲ್ಲಿ ಪ್ರಸ್ತಾಪಿಸುತ್ತಿಲ್ಲ. ಬ್ರಿಟಿಷರ ಆಳ್ವಿಕೆ ಮತ್ತು ಸ್ವಾತಂತ್ರ್ಯದ ನಂತರದ ಕೆಲ ದಶಕಗಳ ಕಾಲ ನಡೆದ ಇನಾಂ ರದ್ದತಿ, ಗೇಣಿದಾರಿ ರದ್ದತಿ, ಭೂಮಿತಿ ಹಾಗೂ ಭೂ ಸುಧಾರಣಾ ಕಾನೂನುಗಳಿಗಾಗಿ ೧೯೪೫ರಿಂದ ೧೯೭೫ರ ದಶಕಗಳವರೆಗೆ ನಡೆದ ಹಲವು ರೈತ ಹೋರಾಟಗಳ ವಿವರಗಳನ್ನು ಇಲ್ಲಿ ದಾಖಲಿಸುತ್ತಿಲ್ಲ. ಹಾಗಾಗಿ ಇದನ್ನು ರೈತ ಹೋರಾಟದ ಇತಿಹಾಸವೆಂದಾಗಲೀ, ಆಳವಾದ ವಿಶ್ಲೇಷಣೆ ಎಂದಾಗಲೀ ಪರಿಗಣಿಸಬೇಕಾಗಿಲ್ಲ. ಬದಲಾಗಿ, ೧೯೮೦–೯೦ರ ದಶಕಗಳ ಅವಧಿಯ ಕರ್ನಾಟಕದಲ್ಲಿ ಕಂಡುಬಂದ ದಲಿತ–ರೈತ–ಕಾರ್ಮಿಕ ಚಳುವಳಿಗಳ ಸಮಕಾಲೀನ ರಾಜಕೀಯ ಪ್ರಭಾವದ ಹಿನ್ನೋಟವನ್ನು ನೆನಪಿಸಿಕೊಂಡು ಪ್ರಸ್ತುತ ಸಂದರ್ಭಕ್ಕೆ ಬೇಕಾಗಿರುವ ರೈತ ಚಳುವಳಿಗಳಿಗೆ ಮರೆತ ಮುನ್ನೋಟವನ್ನು ಪ್ರಸ್ತಾಪಿಸುತ್ತಿದ್ದೇನೆ.




ಪ್ರಸ್ತುತ ಸಂದರ್ಭದ ಕೃಷಿರಂಗದ ಬಿಕ್ಕಟ್ಟನ್ನು ಗಮನಿಸಿದರೆ, ೧೯೮೦ರ ದಶಕಕ್ಕೂ ಹಿಂದಿನ ಕಾಲಘಟ್ಟದಲ್ಲಿದ್ದ ಭೂ ಸುಧಾರಣೆ ಬೇಡಿಕೆಗಿಂತಲೂ ಮುಖ್ಯವಾದ ಹಲವು ಮೂಲಭೂತ ಸಮಸ್ಯೆಗಳು ಎದ್ದು ಕಾಣುತ್ತಿವೆ. ಅವುಗಳಲ್ಲಿ ರೈತರ ಬೆಳೆಗಳಿಗೆ ಅಗತ್ಯವಾದ ವೈಜ್ಞಾನಿಕ ಬೆಲೆ ನಿಗದಿ ಮತ್ತು ಮೂಲ ಸೌಕರ್ಯ ಕೊರತೆ ಎರಡೂ ಬಹುಮುಖ್ಯವಾಗಿ ಕಾಣುತ್ತವೆ. ೧೯೮೦ರ ದಶಕಕ್ಕೂ ಹಿಂದೆ ಜಾರಿಗೆ ತರಲಾಗಿದ್ದ ಹಲವು ಭೂ ಸುಧಾರಣಾ ಕ್ರಮಗಳ ಅಸಮರ್ಪಕ ನೀತಿಯಿಂದ ಅವೈಜ್ಞಾನಿಕವಾದ ಅಸಮಾನ ಭೂ ಹಂಚಿಕೆಯ ಪರಿಣಾಮ ಇಂದು ಉಂಟಾಗಿರುವ ಬಗರ್‌ಹುಕುಂ ರೈತರ ಭೂ ಒಡೆತನದ ಪ್ರಶ್ನೆ ಈಗಲೂ ಸಹ ಪ್ರಮುಖ





ಸಮಸ್ಯೆಯಾಗಿಯೇ ಉಳಿದಿದೆ. ವಿಶೇಷವೆಂದರೆ ೧೯೮೦–೯೦ರ ದಶಕದಲ್ಲಿ ರೈತರ ಬೆಳೆಗಳಿಗೆ ವೈಜ್ಞಾನಿಕ ಬೆಲೆ ಹಾಗೂ ಮೂಲಭೂತ ಕೃಷಿ ಸೌಲಭ್ಯ ಮತ್ತು ಸಾಲ ನೀತಿಗಳ ಜೊತೆಗೆ ಸರ್ಕಾರಿ ಭೂಮಿ ಸಾಗುವಳಿ ಸಕ್ರಮದ ಬಗ್ಗೆ ಎತ್ತಲಾದ ಬೇಡಿಕೆಗಳು ಇಂದಿಗೂ ಪೂರ್ಣಗೊಂಡಿಲ್ಲ. ಆದರೆ ಅಂದು ಈ ಬೇಡಿಕೆಗಳಿಗಾಗಿ ಅಂದಿನ ರೈತ ಚಳುವಳಿ ಉಂಟುಮಾಡಿದ್ದ ಸಂಚಲನೆ ಇಂದಿನ ರೈತ ಸಮುದಾಯದಲ್ಲಿ ಉಳಿದಿಲ್ಲ. ಅಂದಿನ ರೈತ ಚಳುವಳಿ ಮುಂದಿಟ್ಟಿದ್ದ ಈ ಮೂಲಭೂತ ಬೇಡಿಕೆಗಳಿಗಾಗಿ ನಡೆದ ಹೋರಾಟ ರಾಜ್ಯ ರಾಜಕಾರಣದ ಅಧಿಕಾರ ಗದ್ದುಗೆಯನ್ನು ಅಲುಗಾಡಿಸಿ ಅಧಿಕಾರ ಸ್ಥಾನಪಲ್ಲಟಕ್ಕೆ ಕಾರಣವಾಗಿ ಗಮನ ಸೆಳೆದಿತ್ತು. ಅಂದು ರೈತ ಚಳುವಳಿ ಎತ್ತಿದ್ದ ಬೆಲೆ ನಿಗದಿ, ಸಾಲ ನೀತಿ, ಮೂಲ ಸೌಕರ್ಯ ಹಾಗೂ ಬಗರ್‌ಹುಕುಂ ಸಾಗುವಳಿ, ಬರ ಪರಿಹಾರದ ಚಳುವಳಿಗಳ ಲಾಭ ಪಡೆದು ಅಧಿಕಾರಕ್ಕೆ ಬಂದ ಸರ್ಕಾರಗಳು ಚಿಲ್ಲರೆ ಸುಧಾರಣಾ ಕ್ರಮಗಳ ಹೊರತಾಗಿಯೂ ಮೂಲಭೂತ ಸಮಸ್ಯೆ ಹಾಗೇ ಉಳಿದಿದೆ. ರೈತ ಚಳುವಳಿ ಮಾತ್ರ ಹರಿದು ಹಂಚಿಹೋಗಿ ಅಧಿಕಾರ ರಾಜಕಾರಣ ಭದ್ರವಾಗಿದೆ. ರೈತರ ರಾಜಕಾರಣ ಛಿದ್ರವಾಗಿದೆ.

೧೯೮೦–೯೦ರ ದಶಕದಲ್ಲಿದ್ದ ರೈತ ಚಳುವಳಿ ತನ್ನ ರಾಜಕೀಯ ಮುನ್ನೋಟ ಮರೆತ ಪರಿಣಾಮವೇ ಇಂದಿನ ರೈತರ ದುಸ್ಥಿತಿಗೆ ಕಾರಣವೆಂಬ ಟೀಕೆಗಳೂ ಕೇಳಿಬರುವಂತಾಗಿದೆ. ಕೃಷಿ ಬಿಕ್ಕಟ್ಟಿನ ಜಾಗತಿಕ ಆಯಾಮವನ್ನು ಗಮನಿಸಿದರೆ ಅದು ಕೇವಲ ಕರ್ನಾಟಕಕ್ಕೆ ಮಾತ್ರ ಸೀಮಿತವಾದುದೆಂದು ಒಪ್ಪಲಾಗದು. ಈಗಿನ ರೈತರ ಸಂಕಷ್ಟಕ್ಕೆ ಡೆಂಕಲ್ ನೀತಿ ಆಧಾರಿತ ಗ್ಯಾಟ್ ಒಪ್ಪಂದ ಕಾರಣವೆಂಬುದು ಸ್ಪಷ್ಟ. ಆದರೆ ೧೯೯೦ರ ದಶಕದಲ್ಲಿಯೇ ಈ ಗ್ಯಾಟ್ ಒಪ್ಪಂದದ ಅಪಾಯಗಳನ್ನು ಅರಿತು ಅದರ ಜಾರಿ ವಿರುದ್ಧ ಚಳುವಳಿ ಸಂಘಟಿಸಿದ್ದ ದಿ॥ ನಂಜುಂಡಸ್ವಾಮಿ ಯವರಿಗೆ ಅದನ್ನು ಎದುರಿಸಲು ಅಗತ್ಯವಾದ ಸಮಾನ ಮನಸ್ಕರಾದ ಕಮ್ಯುನಿಸ್ಟರು, ದಲಿತರು, ಮತ್ತಿತರ ಚಳುವಳಿ ನಿರತ ಸಂಘಟನೆಗಳೊಂದಿಗೆ ರಾಜಕೀಯ ಪರ್ಯಾಯ ವೇದಿಕೆ ರಚನೆ ಹೊಳೆಯಲಿಲ್ಲ ಎಂಬುದು ಆಕಸ್ಮಿಕವಲ್ಲವಾದರೂ ಇಂದಿನ ಸಂದರ್ಭಕ್ಕೆ ಅದೊಂದು ದುರಂತ.

ಎಡ–ಬಲ–ಮಧ್ಯಮ ಪಂಥೀಯ ಎಂಬ ಯಾವುದೇ ಸಿದ್ಧಾಂತದ ಹಿನ್ನೆಲೆಯಲ್ಲಿ ವಾದಿಸಿದರೂ ಸಹ ದೇಶದ ಆಹಾರ ಸಂಪತ್ತಿನ ಸೃಷ್ಟಿಕರ್ತರು ಈ ರೈತ ಸಮುದಾಯ ಎಂಬುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಹಾಗಾಗಿಯೇ ರೈತರನ್ನು "ಅನ್ನದಾತ" ಎಂದೇ ಕರೆಯಲಾಗುತ್ತದೆ. ದೇಶದ ವಾಸ್ತವ ಸ್ಥಿತಿಯನ್ನು ಗಮನಿಸಿದರೆ ಭಾರತೀಯ ಬಹುಸಂಖ್ಯಾತರು ಈ ಕೃಷಿ ಉದ್ಯೋಗವನ್ನೇ ಅವಲಂಬಿಸಿದ್ದಾರೆ. ಇದರ ಪ್ರಮಾಣ ಎಷ್ಟೇ ಸೂಕ್ಷ್ಮಾತಿ ಸೂಕ್ಷ್ಮವಾಗಿ ವಿಭಾಗಿಸಿದರೂ ಶೇ. ೬೮ಕ್ಕಿಂತ ಹೆಚ್ಚಿದೆ. ಕರ್ನಾಟಕಕ್ಕೂ ಸಹ ಇದೇ ಮಾನದಂಡ ಅನ್ವಯವಾಗುತ್ತದೆ. ಹೀಗೆ ಇಡೀ ಸಮಾಜಕ್ಕೆ ಬೇಕಾದ ಆಹಾರ ಭದ್ರತೆಯ ಸಂಪತ್ತಿನ ಸೃಷ್ಟಿಕರ್ತರಾದ ರೈತ ಸಮುದಾಯ ತಾವು ಸೃಷ್ಟಿಸಿದ ಸಂಪತ್ತಿನ ನಿರ್ವಹಣೆ ಮತ್ತು ವಿತರಣೆ ಮಾಡುವ ರಾಜಕೀಯ ಅಧಿಕಾರ ಪಡೆಯುವಷ್ಟು ಸಂಘಟಿತವಾಗಿಲ್ಲ ಎಂಬುದು ನಮ್ಮ ವ್ಯವಸ್ಥೆಯ ಲೋಪ. ಇಂತಹ ವ್ಯವಸ್ಥೆಯ ಲೋಪವನ್ನು ಗುರುತಿಸಿ "ಹಾಲು–ಮೊಟ್ಟೆ–ಮಾಂಸ ನಿಮಗೆ, ಕುರಿ–ಕೋಳಿ–ಹಸುವಿನ ಸಾಲ ನಮಗೆ. ಇದೆಂತಹ ನ್ಯಾಯ ? ಇದು ಅನ್ಯಾಯ !!" ಎಂದು ಇಡೀ ಸಮಾಜಕ್ಕೆ ಸವಾಲು ಹಾಕುವ ಘೋಷಣೆ ಮೂಲಕ ರಾಜ್ಯದ ರೈತರಲ್ಲಿ ರೋಮಾಂಚನ ಉಂಟುಮಾಡಿದ್ದ ರೈತ ಚಳುವಳಿ ನೋಡುನೋಡುತ್ತಿದ್ದಂತೆ "ಎಡವಿಬಿದ್ದಾಗ ಆಳಿಗೊಂದು ಕಲ್ಲು" ಎಂಬ ದಾಳಿಗೆ ಸಿಕ್ಕಿ ದಿಕ್ಕಾಪಾಲಾಗಿದೆ. ಈ ನೋವು ಇಂದಿಗೂ ಬಹುತೇಕ ಎಲ್ಲ ರೈತ ನಾಯಕರನ್ನು ಮಾತ್ರವಲ್ಲ, ರೈತ ಚಳುವಳಿಯ ಹಿತೈಷಿಗಳು ಹಾಗೂ ರಾಜಕೀಯ ಪರ್ಯಾಯ ಬಯಸುವ ಎಲ್ಲರನ್ನೂ ಕಾಡುತ್ತಿದೆ.

ಈ ದುರಂತಕ್ಕೆ ಏನು ಕಾರಣ ? ಯಾರು ಕಾರಣ ? ಯಾವುದು ಸರಿ ? ಯಾವುದು ತಪ್ಪು ? – ಎಂಬೆಲ್ಲಾ ಪ್ರಶ್ನೆಗಳಿಗೆ ಉತ್ತರ ಹುಡುಕುತ್ತಾ ಪರಸ್ಪರ ದೂಷಿಸುತ್ತಾ ಅಥವಾ ಗತವೈಭವವನ್ನು ನೆನಪಿಸುತ್ತಾ ಇತರರನ್ನು ಹಳಿಯುತ್ತಾ ಸಿನಿಕರಾಗಿ ಕೂರುವ ಕಾಲ ಇದಲ್ಲ ಎಂಬುದು ಇಂದಿನ ಕಟುವಾಸ್ತವ. ಹಾಗೆಂದು ಸರಿ ತಪ್ಪುಗಳನ್ನು ಗುರುತಿಸಿ ಪಾಠ ಕಲಿಯಬೇಕೆಂಬ ಇತಿಹಾಸದ ಸೂಚನೆಯನ್ನು ನಿರಾಕರಿಸಬೇಕಾಗಿಲ್ಲ. ಆದರೆ ಈ ಸರಿ ತಪ್ಪಿನ ಸೈದ್ಧಾಂತಿಕ ಚರ್ಚೆಯಲ್ಲಿ ಕೂದಲು ಸೀಳುವ ವಾದದಲ್ಲಿ ಮುಳುಗಿ ವ್ಯರ್ಥ ಕಾಲಹರಣ ಮಾಡುವ ಬದಲು ಈಗಿನ ಕಾಲದ ಕರೆಯ ತುರ್ತನ್ನು ಅರ್ಥಮಾಡಿಕೊಂಡು ಕಾರ್ಯ ಪ್ರವೃತ್ತರಾಗಬೇಕಾದ್ದು ಆದ್ಯತೆ ಆಗಬೇಕು. ಹಾಗಾದರೆ ಇಂದಿನ ಕಾಲದ ಕರೆ ಯಾವುದು ? ಈ ಕರೆಯ ತುರ್ತು ಕಾರ್ಯ ಯಾವುದು ? ಕಾರ್ಯಕ್ರಮ ಮತ್ತು ತಕ್ಷಣದ ಮಾರ್ಗ ಹಾಗೂ ಅಂತಿಮ ಗುರಿ ಇವುಗಳನ್ನು ಗುರುತಿಸಿಕೊಂಡಲ್ಲಿ ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬಹುದು.

ಸುತ್ತುಬಳಸಿನ ತಾತ್ವಿಕ ಉತ್ತರಕ್ಕಿಂತ ನೇರವಾಗಿ ಹೇಳಬಹುದಾದರೆ ರಾಜ್ಯದಲ್ಲಿರುವ ಎಲ್ಲ ಬಣ್ಣಗಳ ಮತ್ತು ಬಣಗಳ ರೈತ ಸಂಘಟನೆಗಳ ಐಕ್ಯ ಹೋರಾಟದ ವೇದಿಕೆಯ ರಚನೆ ಇಂದಿನ ಆದ್ಯತೆ ಆಗಬೇಕು. ಇಂತಹ ವೇದಿಕೆಯ ರಚನೆಗೆ ಸದ್ಯ ಅಸ್ತಿತ್ವದಲ್ಲಿರುವ ಯಾವ ರೈತ ಸಂಘಟನೆಗಳೂ ವಿಸರ್ಜನೆ ಆಗಿ ಹೊಸ ವಿಲೀನವಾಗಬೇಕಾಗಿಲ್ಲ. ಮತ್ತು ಅದಕ್ಕಾಗಿ ಈ ವಿವಿಧ ಬಣಗಳ ಮಧ್ಯೆ ಇರಬಹುದಾದಂತಹ ಅಭಿಪ್ರಾಯ ವ್ಯತ್ಯಾಸ ಅಥವಾ ಭಿನ್ನಾಭಿಪ್ರಾಯಗಳ ನಡುವೆಯೂ ಎಲ್ಲ ಬಣಗಳೂ ಸರ್ವೇಸಾಮಾನ್ಯವಾಗಿ ಪ್ರತಿಪಾದಿಸುವ ಹಾಗೂ ಒತ್ತಾಯಿಸುವ ರೈತ ಸಮುದಾಯದ ಸಾಮಾನ್ಯ ಬೇಡಿಕೆಗಳು ಹಾಗೂ ಅದಕ್ಕಾಗಿ ಕನಿಷ್ಠ ಕಾರ್ಯಕ್ರಮಗಳು ಆಧಾರವಾಗಿರಬೇಕು. ಇದನ್ನು ಸಂಕ್ಷಿಪ್ತವಾಗಿ ವಿವರಿಸುವುದಾದರೆ ಕಾರ್ಮಿಕ

## ಪ್ರೇಕ್ಷಕ

ಥಿಯೇಟರಿಗೆ ಬಂದು
ಚಿತ್ರ ನೋಡುವವರಿಲ್ಲ ಎಂದು
ನಿರ್ಮಾಪಕರ ಅಳಲು
ವಿಧಾನಸೌಧದಲ್ಲಿ ಕುಳಿತು
ನೀಲಿಚಿತ್ರ ನೋಡುವವರೂ
ನಮ್ಮಲ್ಲಿ ಇಹರು !

**ಕಾಸರಗೋಡು ಅಶೋಕ್ ಕುಮಾರ್**
ಮಂಗಳೂರು – ೫೭೫ ೦೦೮

ಸಂಘಟನೆಗಳ ಜಂಟಿ ಹೋರಾಟ ಸಮಿತಿ, ಬ್ಯಾಂಕ್ ನೌಕರರ ಜಂಟಿ ಕ್ರಿಯಾ ಸಮಿತಿ ಅಥವಾ ಸರ್ಕಾರಿ ನೌಕರರ ಜಂಟಿ ವೇದಿಕೆಗಳನ್ನು ಉದಾಹರಿಸ ಬಹುದು. ಹಾಗೆಂದ ಮಾತ್ರಕ್ಕೆ ರೈತ ನಾಯಕರು ಟ್ರೇಡ್ ಯೂನಿಯನ್ ಶೈಲಿಯಲ್ಲಿ ರೈತ ಸಂಘಟನೆಗಳು ಕಾರ್ಯ ನಿರ್ವಹಿಸಬೇಕೆ ಎಂದು ಮೂಗು ಮುರಿಯಬೇಕಾಗಿಲ್ಲ. ಕಾರ್ಮಿಕ ಸಂಘಟನೆಗಳ ಕಾರ್ಯ ಶೈಲಿ ಕಾರ್ಯಾಚರಣೆ ಗಳಂತೆ ರೈತ ಸಂಘಟನೆ ನಡೆಸುವುದು ಸಾಧ್ಯವೂ ಇಲ್ಲ, ಸಾಧುವೂ ಅಲ್ಲ. ಆದರೆ ಅವುಗಳ ವಿಶಾಲ ತಳಹದಿಯ ಐಕ್ಯ ವೇದಿಕೆ ಮತ್ತು ಹೋರಾಟದ ಸ್ಥೂಲ ಮಾದರಿಯನ್ನಷ್ಟೆ ಉದಾಹರಣೆಯಾಗಿ ತೆಗೆದುಕೊಳ್ಳಬಹುದು.

ಈ ನಿಟ್ಟಿನಲ್ಲಿ ಕೆಲವು ನಿರ್ದಿಷ್ಟ ವಾಸ್ತವ ಸಂಗತಿಗಳನ್ನು ಚರ್ಚಿಸಬಹುದು. ಇಂದು ರಾಜ್ಯದ ರೈತ ಸಂಘಟನೆಗಳನ್ನು ಗಮನಿಸಿದರೆ ಕಬ್ಬು ಬೆಳೆಗಾರರು, ತೆಂಗು ಬೆಳೆಗಾರರು, ಅಡಿಕೆ, ತೊಗರಿ, ದಾಳಿಂಬೆ, ಕಾಫಿ, ಹತ್ತಿ, ತರಕಾರಿ, ಭತ್ತ, ರಾಗಿ, ಜೋಳ ಬೆಳೆಗಾರರೆಂದು ಮತ್ತು ಬಗರ್‌ಹುಕುಂ ಸಾಗುವಳಿದಾರರೆಂದು ಬಿಡಿಬಿಡಿ ಸಂಘಟನೆಗಳು ಕಾರ್ಯ ನಿರ್ವಹಿಸುತ್ತಾ ಸಂದರ್ಭದ ಬೇಡಿಕೆ ಅನುಸಾರ ಚಳುವಳಿಗಳಲ್ಲಿ ನಿರತವಾಗಿವೆ. ಆದರೆ ಇವರೆಲ್ಲರನ್ನೂ ಸಮಾನವಾಗಿ ಒಳಗೊಳ್ಳುವ ವೈಜ್ಞಾನಿಕ ಬೆಲೆ ನಿಗದಿ, ಮೂಲಭೂತ ಸೌಕರ್ಯಗಳ, ಸಾಲ, ಬಡ್ಡಿ, ಮಾರುಕಟ್ಟೆ ನೀತಿಗಳು ಎಲ್ಲ ರೈತರನ್ನೂ ಒಟ್ಟುಗೂಡಿಸಬಲ್ಲವು ಮತ್ತು ಈ ಸಮಸ್ಯೆ ನಿವಾರಿಸಿ ಬೇಡಿಕೆ ಈಡೇರಿಸುವುದು ನೇರವಾಗಿ ಆಳುವ ಸರ್ಕಾರಗಳ ನೀತಿಗಳನ್ನು ಅವಲಂಬಿಸಿರುತ್ತದೆ. ಇದರ ಸಂಕ್ಷಿಪ್ತ ತಾತ್ಪರ್ಯವಿಷ್ಟೆ; ಸಮಾನ ಬೇಡಿಕೆಗಾಗಿ ಸಮಾನ ಎದುರಾಳಿ ವಿರುದ್ಧ ಕ್ರಮ. ಇದರ ಭಾಗಿದಾರಿ ಸಂಘಟನೆಗಳು ಸ್ವತಂತ್ರವಾಗಿರುತ್ತವೆ ಆದರೆ ನಿರ್ದಿಷ್ಟ ಸಂದರ್ಭ ಮತ್ತು ನಿರ್ದಿಷ್ಟ ಕಾರ್ಯಾಚರಣೆ ಎದುರಾದಾಗ ಮಾತ್ರ ಸ್ವಯಂ ಒಪ್ಪಿತವಾದ ನಿರ್ದಿಷ್ಟ ಕಟ್ಟುಪಾಡಿಗೆ ಒಳಪಡುತ್ತವೆ.

ಇಂದಿನ ಸರ್ಕಾರಗಳು ಮತ್ತು ರಾಜಕೀಯ ನೀತಿ ರೀತಿಗಳನ್ನು ಮತ್ತು ಇಡೀ ವ್ಯವಸ್ಥೆ ಗಮನಿಸಿದಾಗ ಕೃಷಿರಂಗ ಮತ್ತು ಕೃಷಿನಿರತ ರೈತ ಎಂತಹ ತಾತ್ಸಾರಕ್ಕೆ ಒಳಗಾಗಿದೆ/ಒಳಗಾಗಿದ್ದಾನೆ ಹಾಗೂ ಆಹಾರ ಸಂಪತ್ತಿನ ಸೃಷ್ಟಿಕರ್ತ ಬಹುಸಂಖ್ಯಾತ ಅನ್ನದಾತನನ್ನು ಹೇಗೆ ಒಡೆದು ಆಳುತ್ತಾ ಹಾಳುಮಾಡಲಾಗುತ್ತಿದೆ ಎಂಬುದನ್ನು ಇಲ್ಲಿ ಪ್ರತ್ಯೇಕವಾಗಿ ವಿವರಿಸಬೇಕಾಗಿಲ್ಲ. ರೈತ ತಯಾರಿಸಿದ ವಸ್ತು ಮತ್ತು ಅದರ ಬೆಲೆ ಎಷ್ಟಿರಬೇಕೆಂದು ನಿರ್ಧರಿಸುವ ಅಧಿಕಾರವನ್ನು ಕೈಗಾರಿಕೋದ್ಯಮಿಗಳಿಗೆ ನೀಡುವ ಮತ್ತು ಕಾರ್ಮಿಕರಿಗೆ ಕನಿಷ್ಠ ವೇತನ ಇಷ್ಟಿರಲೇಬೇಕೆಂದು ನಿಗದಿಪಡಿಸುವ ನಮ್ಮ ಸರ್ಕಾರ, ಕೋರ್ಟು, ಕಾನೂನುಗಳು ರೈತನ ಬೆಳೆಗೆ ನ್ಯಾಯವಾದ ಬೆಲೆ ಮತ್ತು ಜೀವನಾವಶ್ಯಕ ಕನಿಷ್ಠ ಆದಾಯ ನಿಗದಿಮಾಡಿಲ್ಲವೆಂಬ ದಶಕಗಳ ಹಳೆಯ ನುಡಿಯನ್ನು ನೆನಪಿಸಿಕೊಂಡರೆ ಮಾತ್ರ ಉಳಿದೆಲ್ಲಾ ಸಮಸ್ಯೆಗಳು ಅರ್ಥವಾಗುತ್ತವೆ. ಕೈಗಾರಿಕಾ ಅಭಿವೃದ್ಧಿಯೇ ದೇಶದ ಪ್ರಗತಿ ಎಂಬ ನೀತಿಯ ದೃಷ್ಟಿಯಲ್ಲಿ ನೋಡಿದರೂ ಸಹ ನಮ್ಮ ಕೃಷಿರಂಗ ಕೈಗಾರಿಕಾ ಚಟುವಟಿಕೆಯಲ್ಲಿ ಮುಖ್ಯ ಪಾತ್ರ ವಹಿಸುತ್ತಿದೆ. ಕೈಗಾರಿಕೆಗಳಿಗೆ ಬೇಕಾದ ಹಲವು ಹತ್ತು ಕಚ್ಚಾ ಸಾಮಗ್ರಿಗಳನ್ನು ಕೃಷಿರಂಗ ಪೂರೈಸುತ್ತದೆ. ಹತ್ತಿ, ಎಣ್ಣೆಕಾಳು, ಕಬ್ಬು, ಹೂವು ಹಣ್ಣುಗಳಾದಿಯಾಗಿ ಪಶುಸಂಗೋಪನೆ ಬಹಳಷ್ಟನ್ನು ಇಲ್ಲಿ ಉದಾಹರಿಸ ಬಹುದು. ಹಾಗಾಗಿ ರೈತ ಕೇವಲ ಆಹಾರ ಸಂಪತ್ತಿನ ಸೃಷ್ಟಿಕರ್ತ ಮಾತ್ರವಲ್ಲ, ಹಲವು ಕೈಗಾರಿಕೆಗಳಿಗೆ ಅಗತ್ಯವಾದ ಕಚ್ಚಾ ಸಾಮಗ್ರಿಯ ಉತ್ಪಾದಕನೂ ಆಗಿ ನಿಜಾರ್ಥದಲ್ಲಿ ಕಾರ್ಮಿಕ ವರ್ಗದಂತೆ ಸಂಪತ್ತಿನ ನೇರ ಸೃಷ್ಟಿಕರ್ತನ ಪಾತ್ರಧಾರಿಯೂ ಆಗಿದ್ದಾನೆ. ಹಾಗಾಗಿ ತನ್ನ ನಿತ್ಯ ಬದುಕಿಗೆ ಅಗತ್ಯವಾದ ಆರ್ಥಿಕ ಬೇಡಿಕೆಗಳಿಗೆ ಐಕ್ಯ ಹೋರಾಟ ನಡೆಸಲು ಒಂದು ವೇದಿಕೆ ಬೇಕಾಗಿರುವುದು ರೈತ ಸಂಘಟನೆಗಳ ಇಂದಿನ ತುರ್ತು ಆದ್ಯತೆ ಆಗಬೇಕು. ಹಾಗಾಗಿ ಕೇವಲ ಆರ್ಥಿಕ ಬೇಡಿಕೆಗಳಿಗಾಗಿ ಒಂದಾಗಿ ಚಳುವಳಿ ಮಾಡಿದರೆ ಸಾಕೆ ಎಂಬ ಸಹಜ ಪ್ರಶ್ನೆಗೂ ಉತ್ತರ ಕಂಡುಕೊಳ್ಳುವುದು ಎರಡನೇ ಹಂತ.

ನಮ್ಮ ದೇಶದ ಆರ್ಥಿಕತೆ ಮೇಲೆ ದಟ್ಟವಾಗಿ ಆವರಿಸಿಕೊಂಡಿರುವ ಬಹುರಾಷ್ಟ್ರೀಯ ಕಾರ್ಪೊರೇಟ್ ದಂಧೆಕೋರರ ಪರವಾದ ಕೈಗಾರಿಕಾ ನೀತಿ ಮತ್ತು ಇಡೀ ವಿಶ್ವವನ್ನೇ ಒಂದು ಮಾರುಕಟ್ಟೆಯನ್ನಾಗಿ ಪರಿವರ್ತಿಸಿ ಅದನ್ನು ತಮ್ಮ ವ್ಯಾಪಾರಿ ಹಿಡಿತದಲ್ಲಿಟ್ಟುಕೊಂಡು ನಮ್ಮ ಸಮಗ್ರ ಕೃಷಿಯನ್ನು ನಿಯಂತ್ರಿಸುತ್ತಿರುವ ನೀತಿಗಳು ಹಾಗೂ ಅದರ ಬಾಲಬಡುಕರಾಗಿರುವ ನಮ್ಮ ಸರ್ಕಾರಗಳ ನೀತಿಗಳು ರೈತರ ಸಂಕಷ್ಟಕ್ಕೆ ಕಾರಣವಾಗುತ್ತಿವೆ. ಈ ಬೃಹತ್ ಶಕ್ತಿಯ ನೀತಿ ಬದಲಿಸಲು ಕೇವಲ ಆರ್ಥಿಕ ಬೇಡಿಕೆಗಳ ಚಳುವಳಿಯಿಂದ ಸಾಧ್ಯವಿಲ್ಲ. ಈಗಿನ ಬಹುರಾಷ್ಟ್ರೀಯ ಕಾರ್ಪೊರೇಟ್ ರಾಜಕೀಯ ವ್ಯವಸ್ಥೆ ತಮ್ಮ ಮೂಲಭೂತ ಸೂಪರ್ ಪ್ರಾಫಿಟ್ ಎಂಬ ಶೋಷಣೆಗೆ ತಂತ್ರಗಳನ್ನು ಬದಲಾಯಿಸುತ್ತದೆಯೆ ವಿನಾ ಮೂಲ ನೀತಿಯನ್ನು ಬಿಟ್ಟುಕೊಡುವುದಿಲ್ಲ. ಇಂತಹ ಸಂದರ್ಭದಲ್ಲಿ ಇಂದಿನ ಕಾರ್ಪೊರೇಟ್ ರಾಜಕಾರಣವನ್ನೇ ಬದಲಿಸುವಂತಹ ಪರ್ಯಾಯ ರಾಜಕೀಯ ಚಳುವಳಿಗೆ ಮುಂದಾಗುವುದು ರೈತರ ಎರಡನೇ ಹಂತದ ಗುರಿಯಾಗಿರಬೇಕು. ಈ ಹಂತದ ರಾಜಕೀಯ ಪರ್ಯಾಯ ಚಳುವಳಿಯಲ್ಲಿ ತಮ್ಮ ಜೊತೆಗೂಡುವ ಮತ್ತು ತಮ್ಮಂತೆಯೆ ದೇಶದ ಇತರ ಸಂಪತ್ತು ಸೃಷ್ಟಿಸುವ ಕಾರ್ಮಿಕ ವರ್ಗದ ಸಂಘಟನೆ ಗಳೊಂದಿಗೆ ಚಳುವಳಿಯನ್ನು ಒಗ್ಗೂಡಿಸುವುದು ಈ ಎರಡನೇ ಹಂತದ ಆದ್ಯತೆ ಆಗಬೇಕಿದೆ.

ಈ ಎರಡೂ ಸಂದರ್ಭಗಳಲ್ಲಿ ಒಂದಂಶವನ್ನು ಯಾರೂ ಮರೆಯುವಂತಿಲ್ಲ. ದೇಶದ ಸಂಪತ್ತು ಸೃಷ್ಟಿಯ ಎರಡು ಪ್ರಮುಖ ವಿಭಾಗಗಳಾದ ಕೃಷಿ ಮತ್ತು ಕೈಗಾರಿಕಾ ರಂಗಗಳು ಉತ್ಪಾದನಾ ಕ್ಷೇತ್ರದ ಅವಿಭಾಜ್ಯ ಅಂಗವಾಗಿದ್ದರೂ ಸಹ ಭಾರತದ ವಿಶಿಷ್ಟ ಜಾತಿಗಳ ಸಂರಚನೆಯಲ್ಲಿ ಅತ್ಯಂತ ಕೆಳಹಂತದಲ್ಲಿದ್ದು, ಅಸ್ಪೃಶ್ಯತೆಯ ನೋವಿನೊಂದಿಗೆ ಆರ್ಥಿಕವಾಗಿ ಸಾಮಾಜಿಕವಾಗಿ ರಾಜಕೀಯ ವಾಗಿ ಶೋಷಿತವಾದ ದಲಿತ ಚಳುವಳಿಯನ್ನು ಮರೆಯುವಂತಿಲ್ಲ. ಅವರ ಸಕ್ರಿಯ ಪಾಲ್ಗೊಳ್ಳುವಿಕೆ ಇಲ್ಲದೆ ಯಾವ ರಾಜಕೀಯ ಪರ್ಯಾಯವೂ ಅರ್ಥಪೂರ್ಣವಲ್ಲ. ಮಾತ್ರವಲ್ಲ, ಅದು ಪರಿಪೂರ್ಣವೂ ಅಲ್ಲ. ಹೀಗೆ ಒಂದೆಡೆ ಆರ್ಥಿಕ ಬೇಡಿಕೆಗಳಿಗಾಗಿ, ಮತ್ತೊಂದೆಡೆ ರಾಜಕೀಯ ಪರ್ಯಾಯಕ್ಕಾಗಿ ವಿಶಾಲ ತಳಹದಿಯ ಐಕ್ಯ ಚಳುವಳಿ ಮುಂದುವರಿದಂತೆ ಅದರ ಅನುಭವದ ಆಧಾರದಲ್ಲಿ ಅಂತಿಮ ಗುರಿ ಮತ್ತು ದಾರಿ ಎರಡೂ ಸ್ಪಷ್ಟವಾಗುತ್ತಾ ಸಾಗುತ್ತದೆ. ಈ ನಿಟ್ಟಿನಲ್ಲಿ ರಾಜ್ಯದ ರೈತ ಚಳುವಳಿ ಸಂವಾದಿಸಲಿ, ಸ್ಪಂದಿಸಲಿ, ರಾಜ್ಯಕ್ಕೆ ಹೊಸ ದಿಕ್ಕು ತೋರಲಿ. "ಒಂದಾಗು ಇಲ್ಲ ನಾಶವಾಗು" ಎಂಬ ಇತಿಹಾಸದ ಮಾತನ್ನು ಆಲಿಸಲಿ.

**ಪಿ. ವಿ. ಲೋಕೇಶ್**
ಘಾಟೆ ಭವನ, ವೈಯಾಲಿಕಾವಲ್, ಬೆಂಗಳೂರು – ೫೬೦ ೦೦೩

ಕಾವ್ಯಲೋಕ

## ಗಜ಼ಲ್

ಬಂದವರು ಒಂದು ದಿನ ಮರಳಿ ಹೋಗಲೇಬೇಕಲ್ಲ
ಬಹುದೂರದ ದಾರಿಯ ಹಿಡಿದು ಸಾಗಲೇಬೇಕಲ್ಲ

ನೂರಾರು ಬಣ್ಣದ ಚಿಟ್ಟೆಗಳು ಕುಣಿಯುತಿವೆ ಕಣ್ಣಲ್ಲಿ
ಎಲ್ಲಕ್ಕೂ ವಿದಾಯ ಹೇಳಿ ಹೊರಡಲೇಬೇಕಲ್ಲ

ಕಂಡುಂಡ ಖಾಲಿ ಕಣ್ಣಿನಲಿ ಉರಿಯುತಿದೆ ಬದುಕಿನ ಚಿತೆ
ಬೂದಿಯಾಗುವ ಮುನ್ನ ಕ್ಷಣಗಳ ಎಣಿಸಲೇಬೇಕಲ್ಲ

ಕೂಡಿದ್ದು ಕಳೆದದ್ದು ನೋಡಿದ್ದು ಅನುಭವಿಸಿದವುಗಳ
ನೆನಪಿನ ಸುರುಳಿ ಸುತ್ತಿಟ್ಟು ಬರಿಗೈಯಾಗಲೇಬೇಕಲ್ಲ

ಎಣ್ಣೆ ತೀರಿದೆ ಬತ್ತಿಯೂ ಕರಕಾಗುತ್ತಿದೆ ಸಿದ್ಧ
ಗಾಳಿಗೊಡ್ಡಿದ ದೀಪ ಒಮ್ಮೆ ಆರಲೇಬೇಕಲ್ಲ

**ಸಿದ್ಧರಾಮ ಹಿರೇಮಠ ಕೂಡ್ಲಿಗಿ**
ಬಾಪೂಜಿ ನಗರ, ಕೂಡ್ಲಿಗಿ – ೫೮೩ ೧೩೫, ಬಳ್ಳಾರಿ ಜಿಲ್ಲೆ





# ಮತ್ತೊಮ್ಮೆ ಬೀಸುವುದೆ ಆ ಚಂಡ ಪವನ?

ಲಂಕೇಶರು ಒಂದು ಮಾತು ಹೇಳಿದ್ದರು. ಇತಿಹಾಸದಲ್ಲಿ ನಿರಂತರವಾಗಿ ಪ್ರೀತಿ ಮತ್ತು ಸತ್ಯ ಸೋಲುತ್ತಲೇ ಬಂದಿದ್ದರೂ, ನಾವು ಸೋಲುವ ಪ್ರೀತಿ ಮತ್ತು ಸತ್ಯದ ಕಡೆಯೇ ನಿಲ್ಲುತ್ತೇವೆ ಎಂದು. ದಲಿತ ಸಂಘರ್ಷ ಸಮಿತಿಯ ಹುಟ್ಟಿನ ಹಿನ್ನೆಲೆಯ ನೈತಿಕ ಆಶಯ ಈ ಸೋಲುವ ಜಾಯಮಾನದ ಪ್ರೀತಿ ಮತ್ತು ಸತ್ಯವನ್ನೇ ಒಳಗೊಂಡಿತ್ತಾದ್ದರಿಂದ ನಾವು ಸೋಲುವ ಆ ಮೆಟ್ಟಿಲನ್ನೇ ಮತ್ತೆ ಹತ್ತುವುದು ಹೇಗೆಂದು ಪ್ರಯತ್ನಿಸುತ್ತೇವೆ. ಇದು ತಾತ್ಕಾಲಿಕವಾದ ಸೋಲು ಮಾತ್ರವೇ. ರಾಜ್ಯಾದ್ಯಂತ ವ್ಯಾಪಕವಾಗಿ ಸಾವಿರಾರು ಪ್ರಾಮಾಣಿಕ ದಲಿತ ಚಳವಳಿಗಾರರು ಮತ್ತು ಕಾರ್ಯಕರ್ತರು ಹತಾಶರಾಗಿದ್ದರೂ, ಎದೆಗುಂದುವ ಅವಶ್ಯಕತೆ ಇಲ್ಲವೆಂದೇ ನಾನಂತೂ ನಂಬಿದ್ದೇನೆ. ಯಾಕೆಂದರೆ ಚಳವಳಿಗಳ ಸಹಜ ನಡೆಯೇ ಹಾಗಿರುವಂತಹದ್ದು. ಲೋಕಾಯತರು, ಬುದ್ಧನನ್ನೂ ಒಳಗೊಂಡಂತೆ ಶ್ರಮಣ ಪರಂಪರೆಯ ಧೀರೋದಾತ್ತವಾಗಿ ದಾಖಲಿಸಿದ ಪ್ರತಿಭಟನೆಯ ಅಂಶಗಳು, ಬಂಡುಕೋರ ಪರಂಪರೆಯ ಅಧ್ಯಾತ್ಮ ಮಾರ್ಗಗಳು, ತತ್ವಪದಗಳು, ಭಕ್ತಿ ಚಳವಳಿ, ಸಂತರು, ನಾಥ-ಸಿದ್ಧ ಪಂಥಗಳು, ವಚನ ಚಳವಳಿ ಮತ್ತು ತೀರ ಇತ್ತೀಚೆಗಿನ ಜ್ಯೋತಿಬಾ ಫುಲೆ, ನಾರಾಯಣ ಗುರು, ಪೆರಿಯಾರ್‌ರಿಂದ ಬಾಬಾ ಸಾಹೇಬರವರೆಗೂ ಈ ನೆಲದಲ್ಲಿ ಸ್ವಾಭಿಮಾನ ಮತ್ತು ಆತ್ಮಗೌರವದ ಸುದೀರ್ಘ ಚಾರಿತ್ರಿಕ ಪರಂಪರೆಯೇ ನಮ್ಮ ಬೆನ್ನಿಗಿದೆ. ಎಲ್ಲರೂ ಆಯಾ ಕಾಲಕ್ಕೆ ತಮತಮಗೆ ಸರಿಕಂಡಂತೆ ಲೋಕ ದರ್ಶನಗಳನ್ನು ಮಂಡಿಸಿದವರೇ; ತಾತ್ವಿಕ ಮೀಮಾಂಸೆಗಳನ್ನು ಮುಂದಿಟ್ಟವರೇ. ಅವರಲ್ಲಿ ಯಾರೊಬ್ಬರೂ ಹಠದಿಂದ ತಮ್ಮ ಗ್ರಹಿಕೆಯೇ ಅಂತಿಮವೆಂದು ಭಾವಿಸಿರಲಿಲ್ಲ. ಇದು ನಿರಂತರವಾಗಿ ಎದುರೀಜುವ ಪ್ರಕ್ರಿಯೆಯೆಂದೇ ಎಲ್ಲರೂ ತಿಳಿದಿದ್ದರು. ದಲಿತ ಚಳವಳಿಯು ಕೂಡ ಅಂತಹುದೇ ಪ್ರಕ್ರಿಯಾತ್ಮಕವಾದ ಅಗ್ನಿಪರೀಕ್ಷೆಯ ಕಾಲಘಟ್ಟದ ಹೊಸಿಲನ್ನು ಮೆಟ್ಟಿ ಇಂದು ನಿಂತಿದೆಯಷ್ಟೇ. ನಾವು ಈ ಬಗೆಯ ಕಾಲಘಟ್ಟದಲ್ಲಿರುವುದರಿಂದ ಜವಾಬ್ದಾರಿಯುತವಾಗಿ ಈ ಜಟಿಲವಾದ ಸವಾಲನ್ನು ಎದುರಿಸುವುದು ಹೇಗೆಂಬ ಬಗ್ಗೆಯಷ್ಟೇ ಯೋಚಿಸಬೇಕಿದೆ.

ಇತಿಹಾಸದ ಸ್ವಾಭಿಮಾನೀ ಹೋರಾಟದ ಪರಂಪರೆಯಲ್ಲಿ ದಲಿತರ ಭಾಗವಹಿಸುವಿಕೆಯ ಕುರಿತಂತೆ ಅಲ್ಲಲ್ಲಿ ಪ್ರಸ್ತಾಪಗಳಿದ್ದರೂ, ಕರ್ನಾಟಕದ ಮಟ್ಟಿಗೆ ಪೂರ್ಣ ಪ್ರಮಾಣದಲ್ಲಿ ಅಸ್ಪೃಶ್ಯ ಜನಾಂಗಗಳು ತಮ್ಮ ವಿಮೋಚನೆಗಾಗಿ ಕಡು ಎಚ್ಚರದೊಂದಿಗೆ ಮೊಟ್ಟ ಮೊದಲ ಬಾರಿಗೆ ಬಂಡೆದ್ದದ್ದು ದಲಿತ ಸಂಘರ್ಷ ಸಮಿತಿಯ ಮೂಲಕವೇ. ಆಂದೋಲನವೊಂದು ಸ್ಫೋಟಗೊಳ್ಳಲು ಅನಿವಾರ್ಯವಾದ ಚಾರಿತ್ರಿಕ ಒತ್ತಡದ ಕುದಿಯೂ ಆಗ ದಸಂಸದ ಬೆನ್ನಿಗಿತ್ತು. ಅಕ್ಷರಸ್ಥರಾದ ಮೊದಲ ತಲೆಮಾರಿನ ದಲಿತ ಲೇಖಕ-ಕಲಾವಿದರ ಪ್ರತಿಭಟನಾತ್ಮಕ ಆಲೋಚನೆಗಳೊಂದಿಗೆ ಬಸವಲಿಂಗಪ್ಪನವರ ಬೂಸಾ ಪ್ರಕರಣವೂ ಚಿಮ್ಮುಹಲಗೆಯಂತೆ ಜೊತೆಗೂಡಿತು. ಬಾಬಾ ಸಾಹೇಬರ ಪ್ರಖರ ಚಿಂತನೆಗಳು, ಇತಿಹಾಸದ ಉದ್ದಕ್ಕೂ ಪ್ರತಿಪಾದಿಸುತ್ತಲೇ ಬಂದಿದ್ದ ನಿಸರ್ಗ ಸಹಜವಾದ ಮಾನವೀಯ ತರ್ಕಗಳು ಹಾಗೂ ದಲಿತರ ಹೋರಾಟದಲ್ಲಿ ಅಂತರ್ಗತವಾಗಿದ್ದ ನೈತಿಕ ಸತ್ವವೇ ಆಗ ದಲಿತ ಚಳವಳಿಯ ಪ್ರೇರಕ ಸಿದ್ಧಾಂತವಾಗಿತ್ತು. ಇತಿಹಾಸದಲ್ಲಿ ಮೊದಲ ಬಾರಿಗೆ ಪೂರ್ಣ ಪ್ರಮಾಣದ ದಲಿತ ಚಳವಳಿಯೊಂದು ಹೀಗೆ ಕುಡಿಯೊಡೆದಾಗ ಇದಕ್ಕಿಂತಲೂ ಹೆಚ್ಚಿನ ಸಿದ್ಧತೆಯನ್ನು ಅಪೇಕ್ಷಿಸುವುದು ಸಾಧ್ಯವಿಲ್ಲದ ವಿಚಾರವಾಗಿತ್ತು. ಯಾಕೆಂದರೆ ದಲಿತ ಸಮುದಾಯಕ್ಕಾಗಲೀ ಅಥವಾ ದಲಿತ ಚಳವಳಿಯ ನಾಯಕತ್ವಕ್ಕಾಗಲೀ ತಮ್ಮೆದುರಿಗಿದ್ದ ತುರ್ತು ತಮ್ಮ ಆಲೋಚನೆ ಬೇರೆಡೆಗೆ ಹೊರಳದಂತೆ ಆಗ ನಿರ್ಬಂಧಿಸಿತ್ತು. ದಲಿತರ ಮೇಲಿನ ಹಲ್ಲೆ, ಕೊಲೆಗಳು, ಅಸ್ಪೃಶ್ಯತೆಯ ಅಪಮಾನಗಳು, ಅತ್ಯಾಚಾರದಂತಹ ದಬ್ಬಾಳಿಕೆಗಳನ್ನು ತುರ್ತಂಬಂತೆ ತಡೆಯಬೇಕಿತ್ತು. ಕಿತ್ತುತಿನ್ನುವ ಹಸಿವು, ಜೀತದಿಂದ ಕನಿಷ್ಠ ಸ್ವಾಭಿಮಾನದ ಹಾಗೂ ಸ್ವಾವಲಂಬನೆಯ ಬದುಕಿನತ್ತ ಹೊರಳಲು ಭೂಮಿ ಹೋರಾಟಗಳೊಂದಿಗೆ, ಜೀತವಿಮುಕ್ತಿಯ ಹೋರಾಟಗಳನ್ನೂ ರೂಪಿಸ ಬೇಕಿತ್ತು. ಭವಿಷ್ಯದ ತಲೆಮಾರಿಗೆ ಶಿಕ್ಷಣ ಮತ್ತು ನೌಕರಿಯ ಮೂಲಕ ಆರ್ಥಿಕ ಭದ್ರತೆಯ ತಕ್ಷಣದ ಬೇಡಿಕೆಗಳತ್ತಲೂ ತೀವ್ರ ಗಮನ ಹರಿಸಬೇಕಿತ್ತು. ಈ ಬಗೆಯ ಹೋರಾಟಗಳೊಂದಿಗೆ, ಅವು ಹೊಸದಾಗಿ ಸೃಷ್ಟಿಸುವ ಸವಾಲುಗಳನ್ನು ಸಮರ್ಥವಾಗಿ ಎದುರಿಸಲು ಎಂತಹ ಹೋರಾಟದ ತಂತ್ರಗಳನ್ನು ಕಂಡುಕೊಳ್ಳಬೇಕೆಂಬ ಅಂಶದತ್ತಲೇ ಚಳವಳಿಯ ಗಮನ ಕೇಂದ್ರೀಕೃತವಾಗಿತ್ತು. ಈ ನೆಲದಲ್ಲಿ ಹುಟ್ಟಿನ ಹಿನ್ನೆಲೆಯ ಅಸ್ಪೃಶ್ಯತೆಯ ಕಾರಣದಿಂದ ತಲೆದೋರುವ ಜಾತಿ ಅಸಹನೆಯ ಸ್ವರೂಪ ಅತ್ಯಂತ ಭೀಕರವಾದುದು. ಚರಿತ್ರೆಯ ಈ ಯಾತನಾಮಯವಾದ ಭಾರವನ್ನು ದಲಿತರಷ್ಟೇ ಅನುಭವಿಸಿ ಬಲ್ಲರು. ಸಾವಿರಾರು ವರ್ಷಗಳಿಂದ ತಮ್ಮ ಆಜನ್ಮಸಿದ್ಧ ಹಕ್ಕೆಂಬಂತೆ ದಲಿತರನ್ನು ತುಳಿದ ಕಾಲುಗಳಿಗಿದ್ದ ಪರಿಣತಿಯೇ ದಲಿತರ ಈ ಸ್ವಾಭಿಮಾನೀ ಚಳವಳಿಯನ್ನು ಹೇಗೆ ನಿಸ್ಸಹಾಯಕವಾಗಿಸಬೇಕು, ಹೇಗೆ ನಾಶಗೊಳಿಸಬೇಕೆಂಬ ಅದೆಷ್ಟು ನಾಜೂಕಿನ ಯೋಜನೆಗಳನ್ನು ರೂಪಿಸಿತೋ ಬಲ್ಲವರಾರು ? ಅದು ಯಾವಾಗ, ಎಲ್ಲೆಲ್ಲಿ, ಹೇಗೆ ಮತ್ತು ಯಾರ್‍ಯಾರ ಮೂಲಕ ಅರಿವಿಗೆ ಬಾರದಂತೆ ಜಾರಿಯಾಯಿತೋ ಹೇಳಬಲ್ಲವರಾದರೂ ಯಾರು? ಜಾತಿಯೇ ಸಾಮರ್ಥ್ಯ ಮತ್ತು ಬಲವಾಗಿ ಪರಿವರ್ತಿತಗೊಳ್ಳುವ ಬಲಾಢ್ಯ ಸವರ್ಣೀಯರು ಹುಟ್ಟುಹಾಕುವ ಚಳವಳಿಗಳಿಗೆ, ಜಾತಿ ಕಾರಣದಿಂದಲೇ ಅಸಹನೆಗೆ ಈಡಾಗುವ ದಲಿತರ

ಲಕ್ಷ್ಮೀಪತಿ ಕೋಲಾರ



ಆಂದೋಲನಗಳಿಗೂ ನಡುವೆ ಅಗಾಧವಾದ ವ್ಯತ್ಯಾಸ ಮತ್ತು ಅಂತರಗಳಿವೆ. ಈ ಅಂಶವನ್ನು ಯಾರೂ ಕಡೆಗಣಿಸುವಂತೆಯೇ ಇಲ್ಲ.

ಯಾವುದೇ ಚಳವಳಿಯಲ್ಲಿ ಎಲ್ಲರೂ ಕೇಳುವುದು ಸಮಾನವಾದ ಗೌರವ–ಘನತೆಯ ಬದುಕು, ಜಾತಿ ಮತ್ತು ಶೋಷಣಾಮುಕ್ತ ಸಮಾಜ ಹಾಗೂ ಈ ದೇಶದ ಸಂಪತ್ತು ಮತ್ತು ಅಧಿಕಾರದಲ್ಲಿ ಪಾಲು. ಅದಕ್ಕಾಗಿ ಆರ್ಥಿಕ ಹಾಗೂ ರಾಜಕೀಯ ಸಿದ್ಧಾಂತವೊಂದಕ್ಕೆ ಬದ್ಧವಾಗಿಯೇ ಎಲ್ಲ ಚಳವಳಿಗಳೂ ಹುಟ್ಟಿದ್ದು. ಹಾಗೆ ನಿರ್ದಿಷ್ಟ ಸಿದ್ಧಾಂತಕ್ಕೆ ಬದ್ಧವಾಗಿದ್ದ ಚಳವಳಿಗಳೂ ಇಂದು ತಬ್ಬಲಿಗಳಂತಾಗಿವೆ. ಸಮರ್ಥ ನಾಯಕತ್ವವಿಲ್ಲದೆ ಅರಾಜಕವಾಗಿವೆ. ಅಂದರೆ ಚಳವಳಿಗಳೆಲ್ಲವುಗಳ ಏಕಕಾಲದ ನಿರಸನ ಸ್ಥಿತಿಯ ಹಿಂದೆ ಸಮಾನವಾದ ಹಾಗೂ ಬಾಹ್ಯದ ಕಾರಣಗಳೂ ಅಡಗಿವೆ ಎಂಬುದು ಸ್ಪಷ್ಟವಾಗುತ್ತದೆ. ಅದರೊಂದಿಗೆ ಆಂತರಿಕವೆನ್ನಬಹುದಾದ ದೌರ್ಬಲ್ಯಗಳೇ ಚಳವಳಿಗಳನ್ನು ನಿಃಸತ್ವಗೊಳಿಸಬೇಕೆಂಬುವವರ ಆಯುಧಗಳಾಗಿಯೂ ಪರಿವರ್ತಿತಗೊಂಡಿವೆ ಎಂಬ ಮಾತಲ್ಲೂ ಆಂಶಿಕ ಸತ್ಯವಡಗಿರಬಹುದು. ಚಳವಳಿಯೊಂದರ ಔನ್ನತ್ಯ ಮತ್ತು ಪತನಗಳನ್ನು ಚಾರಿತ್ರಿಕ ಕಾಲಘಟ್ಟದ ಹಿನ್ನೆಲೆಯಲ್ಲಿಯೇ ಪರಿಭಾವಿಸುವುದು ಎಲ್ಲಕ್ಕಿಂತಲೂ ಹೆಚ್ಚು ಸೂಕ್ತವೆಂಬುದು ನನ್ನ ನಂಬಿಕೆ.

ದಲಿತ ಸಂಘರ್ಷ ಸಮಿತಿ ಪ್ರಾರಂಭದ ತನ್ನ ತುರ್ತು ಬೇಡಿಕೆಗಳು ಒಂದು ಸೀಮಿತ ಹಂತದವರೆಗಾದರೂ ಈಡೇರುತ್ತಿದ್ದಂತೆಯೇ ನಿಧನಿಧಾನವಾಗಿ ನಿರಸನಗೊಳ್ಳತೊಡಗಿತು. ಅಂದರೆ ದಲಿತ ಚಳಿವಳಿಯನ್ನು ಹುಟ್ಟುಹಾಕಿದಾಗ ಯಾವ್ಯಾವ ಸಮಸ್ಯೆಗಳನ್ನು ತತ್‌ಕ್ಷಣದಲ್ಲಿ ಎದುರ್ಗೊಳ್ಳಬೇಕೆಂದು ಉದ್ದೇಶಿಸಲಾಗಿತ್ತೋ ಅದೇ ಆ ಚಳವಳಿಯ ಚಾಲಕ ಇಂಧನವಾಗಿ ಪರಿಣಮಿಸಿತ್ತು. ಇಂಧನ ಖಾಲಿಯಾಗುತ್ತಿದ್ದಂತೆಯೇ ಮುಂದೇನು ಎಂಬ ಸೈದ್ಧಾಂತಿಕ ಗೊಂದಲವೇ ಜಟಿಲ ಸಮಸ್ಯೆಯಾಗಿ ಬಗೆಹರಿಯದಂತೆ ಕಾಡತೊಡಗಿತು. ಬಹುಶಃ ಈ ಸಮಸ್ಯೆಯನ್ನು ದಲಿತ ಚಳವಳಿಯ ನಾಯಕತ್ವವೇ ಗ್ರಹಿಸಲಿಲ್ಲವೋ, ಅಥವಾ ಗ್ರಹಿಸಿದರೂ ಬಗೆಹರಿಸಲಾಗಲಿಲ್ಲವೋ ತಿಳಿಯುತ್ತಿಲ್ಲ. ದಲಿತ ಚಳವಳಿಯ ನಾಯಕತ್ವಕ್ಕೆ ಎದುರಾಗುತ್ತಿದ್ದ ಪ್ರತಿ ಸಮಸ್ಯೆಯೂ ಅನುಭವಕ್ಕೆ ಹೊರತಾದ ಹೊಸ ಸ್ವರೂಪದ ಸಮಸ್ಯೆಯೇ ಆಗಿರುತ್ತಿತ್ತಾಗಿ ಅದನ್ನು ಸೂಕ್ತ ಸಮಯದಲ್ಲಿ ಹಾಗೂ ಅತ್ಯಂತ ಸಮಂಜಸವಾದ ರೀತೀಲಿ ಬಗೆಹರಿಸಿಕೊಳ್ಳುವ ತಾತ್ವಿಕ ಸಿದ್ಧತೆಯೂ ಇರುತ್ತಿರಲಿಲ್ಲವೆನಿಸುತ್ತೆ. ಹಾಗಾಗಿಯೇ ಕ್ರಮೇಣವಾಗಿ ಅರಾಜಕತೆ ತಲೆ ಹಾಕತೊಡಗಿತು. ಆ ಸಂದರ್ಭದ ಸಂಕೀರ್ಣತೆಯೂ ಬಗೆಹರಿಸಿಕೊಳ್ಳಲಾಗದಷ್ಟು ತಾತ್ವಿಕವಾಗಿ ಜಟಿಲವಾದುದೇ ಆಗಿತ್ತು. ಯಾಕೆಂದರೆ ದಲಿತ ಚಳವಳಿಯಲ್ಲಿ ಅಂಬೇಡ್ಕರ್‌ವಾದಿಗಳ ಸಂಖ್ಯೆಯೇ ಹೆಚ್ಚಿದ್ದರೂ ಲೋಹಿಯಾ ಸಮಾಜವಾದಿಗಳೂ, ಮಾರ್ಕ್ಸ್‌ವಾದಿಗಳೂ, ಮಾವೋವಾದದತ್ತ ಆಸಕ್ತಿ ಹೊಂದಿದ್ದವರನ್ನೇನೂ ಕಡೆಗಣಿಸುವಂತಿರಲಿಲ್ಲ. ಇದರೊಂದಿಗೆ ವಿಶಾಲ ತಳಹದಿಯಲ್ಲಿ ಎಡರಾಜಕಾರಣದತ್ತ ಒಲವಿದ್ದವರು, ಸಿದ್ಧಾಂತಗಳ ಅರಿವಿಲ್ಲದಿದ್ದರೂ ಪ್ರಗತಿಪರ ಮನೋಧರ್ಮ ಹೊಂದಿದ್ದವರೂ ಅನೇಕರಿದ್ದರು. ಅದರೊಂದಿಗೆ ಈ ಸಮಾಜದ ದುರದೃಷ್ಟವೆಂಬಂತೆ ಜಾತಿವಿರೋಧ ಮತ್ತು ವರ್ಗವಿರೋಧಗಳೆಂಬ ಸಮಾನ ಗುರಿ ಮತ್ತು ಆಶಯದ ಅವಳಿ–ಜವಳಿ ಪರಿಕಲ್ಪನೆಗಳು ಒಂದಕ್ಕೊಂದು ವಿರುದ್ಧ ದಿಕ್ಕಿನಲ್ಲಿ ಚಲಿಸುವ ಹಠ ತೊಟ್ಟಂತಿದ್ದವು. ಇಂದಿಗೂ ಅವುಗಳ ದಿಕ್ಕು ಕಿಂಚಿತ್ತೂ ಬದಲಾಗಿಲ್ಲ. ಜಾತಿ ಮೂಲಕದ ನಿರಂತರ ದಬ್ಬಾಳಿಕೆಗೆ ಒಳಗಾಗಿದ್ದ ದಲಿತ ಮನಸ್ಸಿಗೆ ಜಾತಿ ಸಮಸ್ಯೆಯನ್ನು ಯಃಕಶ್ಚಿತ್ತವಾಗಿಸುವ ವರ್ಗ ಹೋರಾಟದ ಪರಿಕಲ್ಪನೆ ಸುಲಭದಲ್ಲಿ ಜೀರ್ಣವಾಗುವುದಿರಲಿ, ಸ್ವೀಕಾರಾರ್ಹವೂ ಅಲ್ಲವೆಂಬಂತಾಗಿತ್ತು. ಆದರೂ ಸ್ವತಃ ಬಾಬಾಸಾಹೇಬ್ ಅಂಬೇಡ್ಕರ್ ಅವರೇ ಕಮ್ಯುನಿಸ್ಟ್ ತತ್ವದ ಸೌಂದರ್ಯಾತ್ಮಕತೆಯನ್ನು ಇಷ್ಟಪಟ್ಟಿದ್ದರಲ್ಲದೇ ಅದು ತಮ್ಮ ಹೋರಾಟದ ವಿನ್ಯಾಸಕ್ಕೆ ಸಮೀಪದ್ದೆಂಬಂತೆ ಭಾವಿಸಿದ್ದೂ ಉಂಟು. ಮುಂಬೈನ ಟ್ರೇಡ್ ಯೂನಿಯನ್ ನಾಯಕರ ಇಬ್ಬಗೆಯ ವರ್ತನೆಗಳೇ ಅಂಬೇಡ್ಕರರ ಕಮ್ಯುನಿಸಂ ಕುರಿತ ನಿಲುವುಗಳನ್ನು ಹೆಚ್ಚು ಪ್ರಭಾವಿಸಿದ್ದವೆಂದು



ಗೇಲ್ ಓಮ್‌ವೆಟ್ ಅವರು ಒಂದೆಡೆ ತಮ್ಮ ಅಭಿಪ್ರಾಯವನ್ನು ದಾಖಲಿಸಿದ್ದಾರೆ. ಅದರ ನಡುವೆಯೂ ಅವರು ಕಮ್ಯುನಿಸ್ಟ್ ತತ್ವವನ್ನು ಗಂಭೀರವಾಗಿ ಪರಿಗಣಿಸಿದ್ದರೆಂಬುದನ್ನು ಅವರ 'ಬುದ್ಧ ಮತ್ತು ಕಾರ್ಲ್ ಮಾರ್ಕ್ಸ್' ಕೃತಿಯ ಮೂಲಕವೇ ನಾವು ಅರಿಯಬಹುದಾಗಿದೆ.

ಹೀಗೆ ದಲಿತ ಚಳವಳಿ ನಿರ್ದಿಷ್ಟವಾದ ಒಂದು ಹಂತದಲ್ಲಿ ಸಂಸ್ಕೃತಿ ಕುರಿತ ನಿಲುವುಗಳೊಂದಿಗೆ ಸೈದ್ಧಾಂತಿಕ ವಿಸ್ತರಣೆಗೆ ತನ್ನನ್ನು ಒಳಗುಮಾಡಿಕೊಳ್ಳಲಿಲ್ಲ ವೆಂಬುದು ಕೂಡ ಅಷ್ಟರಮಟ್ಟಿಗೆ ಒಂದು ಗಂಭೀರ ಲೋಪವಾಗಿಯೇ ಕಾಣಿಸುತ್ತದೆ. ಜಾತಿ ವಿನಾಶಕ್ಕಾಗಿ ಜಾತಿ ಆಧಾರಿತ ಸಂಘಟನೆಯೆಂಬ ಲೋಹಿಯಾ ಅವರ ಪರಿಕಲ್ಪನೆಯನ್ನು ಪ್ರಜ್ಞಾಪೂರ್ವಕವಾಗಿ ಒಪ್ಪಿಯೋ ಅಥವಾ ಸಹಜ ಇಲ್ಲವೇ ಆಕಸ್ಮಿಕವೋ ಎಂಬಂತೆ ದಲಿತ ಚಳವಳಿಯ ತಳಹದಿ ರೂಪುಗೊಂಡಿತು. ಪ್ರಾರಂಭದಲ್ಲಿ ದಲಿತ ಎಂಬ ಪದಕ್ಕೆ ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಶೋಷಣೆಗೊಳಪಟ್ಟ ಎಲ್ಲ ತಳವರ್ಗದವರೂ ದಲಿತರೇ ಎಂಬ ಮಹಾರಾಷ್ಟ್ರದ ದಲಿತ್ ಪ್ಯಾಂಥರ್ಸ್‌ನ ವ್ಯಾಖ್ಯಾನವನ್ನೇ ದಸಂಸ ಕೂಡ ತಾತ್ವಿಕವಾಗಿ ಒಪ್ಪಿತ್ತು. ಆದರೆ ಈ ಜಾತಿಗ್ರಸ್ತ ಸಮಾಜದ ನಡೆ ಹೇಗಿತ್ತೆಂದರೆ ಕೇವಲ ಅಸ್ಪೃಶ್ಯ ಜನಾಂಗಗಳು ಮಾತ್ರವೇ ದಲಿತ ಚಳವಳಿಯನ್ನು ಅಪ್ಪಿಕೊಂಡು ಉಳಿದ ತಳಜಾತಿಗಳು ಚಳವಳಿಯನ್ನೇ ಅಸ್ಪೃಶ್ಯತೆಯಿಂದ ಕಾಣುವಂತಾದುದು ಜಾತಿ ವ್ಯವಸ್ಥೆಯ ಭೀಕರತೆಗೆ ಕನ್ನಡಿ ಹಿಡಿದಂತಿತ್ತು. ಜಾತಿಯ ಈ ಕಟುಗ್ರ ವಾಸ್ತವ ದಲಿತ ನಾಯಕತ್ವವನ್ನು ಮತ್ತಷ್ಟು ಬೆಚ್ಚಿ ಬೀಳಿಸಿತು. ಯಾವ ಜಾತಿಪದ್ಧತಿ ತಮ್ಮನ್ನು ಅಸ್ಪೃಶ್ಯರನ್ನಾಗಿಸಿ, ಜೀತ–ನಿರಂತರ ಅಪಮಾನದ ಯಾತನಾಮಯ ಬದುಕಿಗೆ ದೂಡಿದೆಯೋ ಆ ಜಾತಿಪದ್ಧತಿಯ ವಿನಾಶವೊಂದೇ ಕ್ರಾಂತಿಯ ಮುನ್ನುಡಿಯಾಗಬಲ್ಲದೆಂದು ಗಟ್ಟಿಯಾಗಿ ನಂಬುವಂತಾಯಿತು. ದೇವನೂರ ಮಹಾದೇವ ಅವರು ದಸಂಸದ ರಾಜ್ಯ ಸಂಚಾಲಕರಾಗಿದ್ದಾಗ ದಲಿತ ಕೇರಿಗಳಲ್ಲಿ ಕುಡಿವ ನೀರನ್ನಿಟ್ಟು ಅದನ್ನು ಕುಡಿಯುವಂತೆ ಸವರ್ಣೀಯ ಸಮಾಜಕ್ಕೆ ಪ್ರೀತಿಯ ಆಹ್ವಾನ ನೀಡಲಾಗಿತ್ತು. ರೈತ ಚಳವಳಿ, ಕಾರ್ಮಿಕರ ಚಳವಳಿ, ಆದಿವಾಸಿ ಚಳವಳಿ, ಮಹಿಳಾ ಚಳವಳಿ, ಎಡಪಂಥೀಯ ಚಳವಳಿಗಳೆಲ್ಲವೂ ಬಲಗೊಂಡಿದ್ದ ಆ ಸಂದರ್ಭದಲ್ಲೇ ದಲಿತರು ಮುಟ್ಟಿದ್ದ ನೀರನ್ನು ಈ ನೆಲದ ಸವರ್ಣೀಯ ಮನಸ್ಸು ದಯನೀಯವಾಗಿ ಎಂಬಂತೆ ತಿರಸ್ಕರಿಸಿತ್ತು. ತಾವು ಮುಟ್ಟಿದ ನೀರನ್ನು ಸಹಿತ ಕುಡಿಯಲೊಪ್ಪದ ಸವರ್ಣೀಯ ನಾಯಕತ್ವದ ಇತರೆ ಚಳವಳಿಗಳೊಂದಿಗೆ ದಲಿತ ಚಳವಳಿ ಸಾಮರಸ್ಯವನ್ನು ಸಾಧಿಸುವುದು ಎಷ್ಟು ಕಷ್ಟಸಾಧ್ಯದ ಸಂಗತಿಯಾಗಬಲ್ಲದೆಂಬುದನ್ನು ಅರಿತೇ ದಲಿತ ನಾಯಕತ್ವ ಸುಸ್ತಾಗಿರಲಿಕ್ಕೂ ಸಾಧ್ಯ. ರೈತ ಚಳವಳಿಯ ವಿಚಾರ ಸಂಕಿರಣವೊಂದರಲ್ಲಿ ಕೋಟಿಗಾನಹಳ್ಳಿ ರಾಮಯ್ಯ ಮತ್ತು ಇಂದೂಧರ ಹೊನ್ನಾಪುರ ಅವರು ಪ್ರೇಕ್ಷಕರ ಸಾಲಲ್ಲಿ ಕೂತಿದ್ದನ್ನು ಗಮನಿಸಿದ ಮೇಲ್ಜಾತಿಯ ರೈತ ಚಳವಳಿಗಾರರು 'ಎರಡು ಕರಿಮೀನುಗಳು ಬಂದವೇ...' ಎಂಬ ಕೀಳು ಅಭಿರುಚಿಯ ಟೀಕೆ ಮಾಡಿದ್ದರ ಬಗ್ಗೆ ರಾಮಯ್ಯ ಅವರು ಬರೆದರೆಂಬ ನೆನಪು ನನಗೆ. ಇಂತಹ ಹಲವಾರು ಸಂಗತಿಗಳು ಎಲ್ಲ ಬಗೆಯ ಪ್ರಗತಿಪರ ಹಾಗೂ ಎಡಚಿಂತನೆಗಳ ಆಚೆಗೂ ವ್ಯಾಪಿಸಿಕೊಂಡಿರುವ ಜಾತ್ಯಂಧ ಮನಸ್ಸಿನ ವಿಕೃತಿಗಳಿಗೆ ಪ್ರತ್ಯಕ್ಷ ಸಾಕ್ಷಿಯಾದವಲ್ಲದೆ ಜಾತಿಭೀತಿಯ ದಲಿತರ ಅನುಮಾನಗಳನ್ನು ಮತ್ತಷ್ಟು ದೃಢ ಹಾಗೂ ಬಲಪಡಿಸಿದವು. ಇಂತಹ ಹಿನ್ನೆಲೆಯಲ್ಲಿ ಯಾವ ಸಿದ್ಧಾಂತದ ಮಡಿಲು ಕ್ಷೇಮವೆಂದು ನಂಬಬಹುದಾಗಿತ್ತು? ಈ ಜಾತಿ ತಲ್ಲಣಗಳೇ ದಲಿತ ಚಳವಳಿ ಸ್ಪಷ್ಟವಾದ ಒಂದು ಸೈದ್ಧಾಂತಿಕ ನಿಲುವನ್ನು ಸ್ವೀಕರಿಸಲು ಹಿಂಜರಿಯುವಂತೆ ಮಾಡಿದ್ದಿರಲೂ ಸಾಧ್ಯವಿದೆ.

ವಿಶೇಷವಾಗಿ ದಲಿತ ಸಮುದಾಯಕ್ಕೆ ಮತ್ತು ಸಾಮಾನ್ಯ ನೆಲೆಯಿಂದ ಇಡೀ ಸಮಾಜಕ್ಕೆ ಅನ್ವಯವಾಗುವಂತೆ ಅಂಬೇಡ್ಕರ್ ಅವರ ತಾತ್ವಿಕ ಅಂಶ ಗಳನ್ನು ಒಂದು ಸಿದ್ಧಾಂತವನ್ನಾಗಿ ರೂಪಿಸುವುದಂತೂ ಅಷ್ಟೇ ಜಟಿಲವಾದ ಕೆಲಸವಾಗಬಲ್ಲದು. ಅಂಬೇಡ್ಕರ್ ತಾತ್ವಿಕತೆಯೊಂದಿಗೆ ಬೌದ್ಧ ಧರ್ಮ ಹಾಗೂ ಭೌತವಾದೀ ನೆಲೆಯ ಮಾರ್ಕ್ಸ್‌ವಾದವನ್ನೋ, ಲೋಹಿಯಾವಾದವನ್ನೋ ಕಸಿಮಾಡುವ ಪವಾಡವಾದರೂ ಹೇಗೆ ಸಂಭವಿಸಬಲ್ಲದು? ಅಂಬೇಡ್ಕರ್ ಅವರು 'ನನ್ನ ಇಡೀ ಸಾಮಾಜಿಕ ತಾತ್ವಿಕತೆ ಮೂರು ಪದಗಳಲ್ಲಿ ಅಡಗಿದೆ: 'ಸ್ವಾತಂತ್ರ್ಯ, ಸೋದರತೆ ಮತ್ತು ಸಮಾನತೆ' ಎಂದಿದ್ದಾರೆ. ಆದರೆ 'ತಮ್ಮ ತಾತ್ವಿಕತೆ ಬಗೆಗೆ ಹೇಳುವಾಗ ಅಂಬೇಡ್ಕರ್ ಅವರು ತಮ್ಮ ತಾತ್ವಿಕ ದೃಷ್ಟಿಕೋನವನ್ನು ಹೇಳಿದರೇ ಹೊರತು ತತ್ವವನ್ನಲ್ಲ' ಎಂದು ಆನಂದ್ ತೇಲ್ತುಂಬ್ಡೆ ಅವರು ಬಾಬಾಸಾಹೇಬರ ಚಿಂತನೆ–ಬರಹಗಳೆಲ್ಲವೂ ಇಡೀ ಸಮಾಜವೊಂದರ ಸಮಗ್ರ ಬದಲಾವಣೆಯ ಪ್ರಯೋಗದಲ್ಲಿ ಅನ್ವಯಿಸ ಬಹುದಾದ ಪರಿಪೂರ್ಣವಾದ ಆರ್ಥಿಕ ಹಾಗೂ ರಾಜಕೀಯ ಸಿದ್ಧಾಂತವಾಗಿ ರೂಪುಗೊಂಡಿಲ್ಲವೆಂಬ ಅಂಶದತ್ತಲೇ ಗಮನ ಸೆಳೆಯುತ್ತಾರೆ. ಹೀಗೆ ಮೊದಲ ಹಂತದ ದಲಿತ ಚಳವಳಿ ತನ್ನ ಸಹಜ ನಿಲುಗಡೆಯ ಸ್ಥಿತಿ ತಲುಪಿದ ನಂತರದಲ್ಲಿ ವಿಲಕ್ಷಣ ಹಾಗೂ ಸಂದಿಗ್ಧವಾದ ಕವಲು ದಾರಿಯಲ್ಲಿ ಬಂದು ನಿಂತುಬಿಟ್ಟಂತಿದೆ. 'ಅಂಬೇಡ್ಕರ್‌ವಾದಿಗಳ ಬಿಕ್ಕಟ್ಟು ಮತ್ತು ಭವಿಷ್ಯದ ಸವಾಲುಗಳು' ಎಂಬ ತಮ್ಮ ಲೇಖನದಲ್ಲಿ (ಅನು: ಡಾ॥ ಎಚ್. ಎಸ್. ಅನುಪಮ / ಸಂವಾದ) ಆನಂದ್ ತೇಲ್ತುಂಬ್ಡೆ ಅವರು ಮುಂದುವರಿದು 'ಅಂಬೇಡ್ಕರ್ ಅವರದ್ದು ದೊಡ್ಡ ಹುಡುಕಾಟ. ಅವರ ವಾಸ್ತವ ಸಮಸ್ಯೆಗಳಿಗೆ ಪಾರಂಪರಿಕ ಜ್ಞಾನಭಂಡಾರದ ಯಾವ ತತ್ವಶಾಸ್ತ್ರವೂ ನೆರವಿಗಿರಲಿಲ್ಲ... ಅವರ ಹುಡುಕಾಟದ ಹಿಂದಿನ ಆಳ ಸುಳಿಗಳನ್ನು ತೂಗಿ ಒಂದು ಮೌಲ್ಯಯುತ ತಾತ್ವಿಕತೆಯನ್ನು ಕಟ್ಟಬೇಕು. ಸಮಕಾಲೀನ ಸಮಸ್ಯೆಗಳನ್ನು ಎದುರಿಸಲು ತಕ್ಕಂತೆ ಅದನ್ನು ನಿರ್ವಚಿಸಿಕೊಳ್ಳಬೇಕು. ಹೀಗೆ ಪುನರ್ ನಿರ್ಮಿಸಿಕೊಳ್ಳುವ ಹಾದಿಯಲ್ಲಿ ಅದರ ಮಿತಿಗಳನ್ನರಿತು ಮೀರಲು ಯತ್ನಿಸಬಹುದು' ಎಂಬೆಲ್ಲಾ ಆಶಾವಾದದ ಮಾತುಗಳನ್ನಾಡಿದ್ದಾರೆ. ಕಷ್ಟಸಾಧ್ಯವಾದ ಈ ಪ್ರಕ್ರಿಯೆಯಲ್ಲಿ ದಲಿತ ಸಮುದಾಯ ಎದುರಿಸಬಹುದಾದ ಮತ್ತೂ ಹಲವು ಸವಾಲುಗಳ ಕುರಿತಂತೆಯೂ ಮಾತಾಡಿದ್ದಾರೆ. 'ದಲಿತ ಚಳವಳಿಯ ಉದ್ದೇಶಿತ ಗುರಿ ಯಾವುದು? ಜಾತಿ ನಾಶ ಮಾಡುವುದೋ ಅಥವಾ ಆಳುವ ಜಾತಿಯಾಗುವುದೋ? ಜಾತಿವಿನಾಶ ನಮ್ಮ ಗುರಿಯಾದರೆ ಎಲ್ಲವನ್ನೂ ಏಕೆ ಜಾತಿಯ ದೃಷ್ಟಿಕೋನದಿಂದ ನೋಡುತ್ತೇವೆ? ಜಾತಿ ಆಧಾರಿತ ಸಂಘಟನೆಗಳನ್ನು ಕಟ್ಟಿ ಜಾತಿ ನಾಶ ಮಾಡಲು ಸಾಧ್ಯವೇ? ಜಾತಿ ಅಲ್ಲದಿದ್ದರೆ ಸಂಘಟನೆಯ ಮೂಲಾಧಾರ ಯಾವುದಾಗಿರಬೇಕು?' ಎಂಬ ಈಗಾಗಲೇ ಹಲವಾರು ಬಾರಿ ತೀವ್ರ ಚರ್ಚೆಗೆ ಒಳಗಾದ ಅಂಶಗಳನ್ನೇ ಪ್ರಸ್ತಾಪಿಸಿದ್ದಾರೆ.

ದಲಿತರು ಯಾವ ಜಾತಿ ನೆಲೆಯ ಕಾರಣದಿಂದಾಗಿಯೇ ಅಸ್ಪೃಶ್ಯತೆಯ ಬರ್ಬರ ಅವಮಾನಗಳಿಗೆ ವಿನಾಕಾರಣ ತುತ್ತಾಗಿದ್ದಾರೋ ಅದೇ ಜಾತಿ ನೆಲೆಯಿಂದಲೇ ಸಂಘಟಿತರಾಗಿ ಹೋರಾಡ ಬೇಕೆಂಬುದು ತರ್ಕಸಹಜ ನಿಲುವಾಗಿದೆ. ನೊಂದವರಿಗೆ ತಾನೇ ನ್ಯಾಯ ಕೇಳುವ, ಅನ್ಯಾಯವನ್ನು ಪ್ರತಿಭಟಿಸುವ ನೈತಿಕ ಹಕ್ಕಿರುವುದು? ದಲಿತರು ತಮ್ಮ ಹೋರಾಟವನ್ನು ಹೇಗೆ ರೂಪಿಸಿಕೊಳ್ಳಬೇಕೆಂದು ಅಸ್ಪೃಶ್ಯತೆಯ ಕಹಿ ಅನುಭವವೇ ಇಲ್ಲದ ಮೂರನೆಯವರು ನಿರ್ಧರಿಸುವುದು ಹೇಗೆ ತಾನೇ ಸಮಂಜಸವಾಗಬಲ್ಲದು? ದಲಿತರಲ್ಲಿ ಅಂತಹ ಮಾನವೀಯ ನಂಬಿಕೆ ಅಥವಾ ಆತ್ಮವಿಶ್ವಾಸ ಚಿಗುರುವಂತೆ ಮೇಲ್ಜಾತಿಯ ಜನ ನಡೆದುಕೊಂಡದ್ದಾದರೂ ಎಲ್ಲಿದೆ, ಅಪವಾದಗಳನ್ನು ಹೊರತುಪಡಿಸಿದರೆ?

'ಜಾತಿ ವಿನಾಶಕ್ಕಾಗಿಯೇ ಜಾತಿ ಆಧಾರಿತ ಸಂಘಟನೆ' ಎಂಬುದು ದಲಿತ ಸಂಘರ್ಷ ಸಮಿತಿಯ ನಿಜವಾದ ಆಶಯವಾಗಿದ್ದದ್ದು. ಆದರೆ ಇದು ಒಂದು



ಘೋಷವಾಕ್ಯದಂತಾಗಿ, ದಲಿತ ಚಳವಳಿಯ ಪ್ರತಿಯೊಬ್ಬ ಕಾರ್ಯಕರ್ತನಿಗೂ ಇದೇ ತಮ್ಮ ಹೋರಾಟದ ತಾತ್ವಿಕ ತಿರುಳು ಎಂಬುದು ಮನದಟ್ಟಾಗಿ ಬದ್ಧತೆಯಾಗಿ ಪ್ರಕಟವಾಗಬೇಕಿತ್ತು. ಬಹುಶಃ ಅದು ನಿರೀಕ್ಷಿತ ಪ್ರಮಾಣದಲ್ಲಿ ನೆರವೇರಲಿಲ್ಲ. ಹಾಗಾಗಿಯೇ ತಾತ್ವಿಕವಾಗಿ ಗಟ್ಟಿಯಿಲ್ಲದ, ದೂರದರ್ಶಿತ್ವವಿಲ್ಲದ ಅನೇಕರು ಇಂದು ಉಪಜಾತಿಗಳ ದುರಂತಮಯ ರಾಜಕಾರಣದಲ್ಲಿ ಮುಳುಗೇಳುವಂತಾಗಿದೆ. ಆದ್ದರಿಂದಲೇ ಆನಂದ್ ತೇಲ್ತುಂಬ್ಡೆಯಂತಹವರು 'ಜಾತಿ ನಿರಪೇಕ್ಷವಾಗಿರುವ ಬದಲು ಜಾತಿ ಅಸ್ಮಿತೆಯೊಂದಿಗೆ ರೂಪುಗೊಂಡಿರುವುದೇ' ಚಳವಳಿಯನ್ನು ನಿಃಸತ್ವವಾಗಿಸಿದೆ ಎಂಬ ನಿಲುವಿಗೆ ಬರಲು ಕಾರಣವಾಗಿದೆ. 'ಸೈದ್ಧಾಂತಿಕ ಸ್ಪಷ್ಟತೆ ಇದ್ದಾಗಲೇ ಈ ವ್ಯವಸ್ಥೆ ಚಳವಳಿಯೊಂದನ್ನು, ಅದರಲ್ಲೂ ವಿಶೇಷವಾಗಿ ದಲಿತರೇ ಕಟ್ಟಿದ ಆಂದೋಲನವನ್ನು ಗೊಂದಲಗೊಳಿಸಬಲ್ಲದು; ಅಂತಹುದರಲ್ಲಿ ಸೈದ್ಧಾಂತಿಕ ಸ್ಪಷ್ಟತೆಯೂ ಇಲ್ಲವೆಂದಾದಾಗ ಚಳವಳಿಯನ್ನು ದುರ್ಬಲಗೊಳಿಸುವುದು ತೀರಾ ಸುಲಭದ ಕೆಲಸವಾಗಲ್ಲದೆಂಬ' ತೇಲ್ತುಂಬ್ಡೆ ಅವರ ಗ್ರಹಿಕೆಯಲ್ಲಿ ಸತ್ಯವಿದೆ ಎನಿಸುತ್ತದೆ. ಅದರ ಪರಿಣಾಮ ಊಹಾತೀತವಾಗಿತ್ತು. ಅಗೋಚರವಾದ ರೀತೀಲಿ ಚಳವಳಿಯನ್ನಿಡೀ ಆವರಿಸಿಕೊಂಡುಬಿಟ್ಟಿತು. ತಾನು ಎದುರಿಸಬೇಕೆಂದಿದ್ದ ಜಾತಿಯ ಬರ್ಬರತೆ ಮತ್ತು ಅಮಾನವೀಯತೆಯೇ ತನ್ನ ಮೌಲ್ಯವಾಗುವುದೆಂದರೇನರ್ಥ? ದಲಿತ ಚಳವಳಿ ಅರಾಜಕತೆಯತ್ತ ಹೊರಳಿದ ಘಳಿಗೆಯಲ್ಲಿ ಅಗೋಚರ ರೀತಿಯಲ್ಲಿ ಉಪಜಾತಿ ರಾಜಕಾರಣ ನಡೆಯುತ್ತಿದ್ದುದು ಇಂದು ಬಹಿರಂಗವಾಗಿ ತನ್ನ ವಿಕೃತ ಚಹರೆಗಳನ್ನು ಪ್ರಕಟಪಡಿಸತೊಡಗಿದೆ. ತೇಲ್ತುಂಬ್ಡೆ ಹೇಳುವಂತೆ 'ಎದುರಾಳಿಯ ಆಟವನ್ನು ನಾವು ಅನುಕರಿಸಬಾರದು. ಎದುರಾಳಿ ಶತ್ರುವಂತೆಯೇ ನಾವೂ ಆಡತೊಡಗಿದರೆ ನಮ್ಮ ಸೋಲಿನ ದಾರಿಯನ್ನು ನಾವೇ ತೆರೆದುಕೊಂಡಂತೆ.' ಬಹಿರಂಗದಲ್ಲಿ ಜಾತ್ಯತೀತರಂತೆ ಪೋಸು ನೀಡಿ ಅಂತರಂಗದಲ್ಲಿ ಜಾತಿ-ಜನಾಂಗೀಯದ ಗುಟ್ಟಿನ ಅಜೆಂಡಾ ಇಟ್ಟುಕೊಂಡು ವರ್ತಿಸುವ ಹಿಂದುತ್ವವಾದಿಗೂ ದಲಿತ ಚಳವಳಿಯ ಎಡ ತಾತ್ವಿಕ ಹಿನ್ನೆಲೆಯಿಂದ ಬಂದವರಿಗೂ ಆಗ ಏನಂತಹ ವ್ಯತ್ಯಾಸ ಉಳಿಯುವುದಿಲ್ಲ! ಶತ್ರುವಿನ ಆಶಯವಾಗಿರುವ ನಮ್ಮ ಸರ್ವನಾಶವನ್ನು ನಮಗೆ ನಾವೇ ತಂದುಕೊಳ್ಳುವುದು ಯಾವ ಸೀಮೆಯ ವಿವೇಕವೋ ನನಗಂತೂ ತಿಳಿಯುತ್ತಿಲ್ಲ. ದಲಿತ ಚಳವಳಿಯ ಚರ್ಚಾ ಶಿಬಿರಗಳಲ್ಲಿ ಕಲಿತ ಪಾಠಗಳು ಎಲ್ಲಿ ಹೋಗಿ ಮುಖ ಮರೆಸಿಕೊಂಡಿವೆ? ನಾವೇ ಎಡ-ಬಲವೆಂದು ಉಪಜಾತಿ ರಾಜಕಾರಣ ಮಾಡುವುದು ಸಮರ್ಥನೀಯವಾದರೆ ಭೂಮಾಲೀಕ ಮೇಲ್ಜಾತಿಯವರು, ಉತ್ತಮರೆಂದು ಸ್ವಯಂ ಘೋಷಿಸಿಕೊಳ್ಳುವವರು ದಲಿತರ ಬಗ್ಗೆ ಅಸ್ಪೃಶ್ಯತೆಯನ್ನಾಚರಿಸುವುದನ್ನು ತಪ್ಪೆಂದು ಹೇಳಲು ನೈತಿಕ ದನಿಯಾದರೂ ನಮ್ಮಲ್ಲಿ ಉಳಿದೀತೆ? ಎಚ್ಚರದ ಮನಸ್ಥಿತಿಯ ಒಬ್ಬ ಸಾಧಾರಣ ದಲಿತ ವ್ಯಕ್ತಿಯೂ ಅರಿತಿರಬಹುದಾದ ಸಾಮಾನ್ಯ ವಿವೇಕವಿದಲ್ಲವೇ? ಆ ಕನಿಷ್ಠ ಸಾಮಾನ್ಯ ವಿವೇಕವನ್ನೂ ನಾವು ಕಳೆದುಕೊಳ್ಳುವಂತಾದುದಾದರೂ ಹೇಗೆ? ದಲಿತ ಚಳವಳಿಯೊಳಗೆ ಈ ಚಾರಿತ್ರಿಕ ವಿಪರ್ಯಾಸದ ಪವಾಡ ಸಂಭವಿಸಿದ್ದಾದರೂ ಹೇಗೆಂಬುದು ನನಗಂತೂ ಬಗೆಹರಿಯಲಾಗದ ಒಗಟಾಗಿದೆ. ಹೀಗೆ ಉಪಜಾತಿಗಳಾಗಿ ಛಿದ್ರಗೊಳ್ಳಲು ಅಷ್ಟು ಅಗಾಧ ಪ್ರಮಾಣದ, ದಶಕಗಳ ಕಾಲದ ಚಳವಳಿಯಾದರೂ ಯಾಕೆ ಬೇಕಿತ್ತು? ಸಾವಿರಾರು ಪ್ರಾಮಾಣಿಕ ಕಾರ್ಯಕರ್ತರು ಕಟ್ಟಿದ ಚಾರಿತ್ರಿಕ ಮಹತ್ವದ ದಲಿತ ಚಳವಳಿಯ ಉಪ ಉತ್ಪನ್ನವೊಂದು ನಾವು ನಡೆದ ದಾರಿಗೆ ವಿರುದ್ಧ ದಿಕ್ಕಿನದಾಗಿದ್ದರೂ ಪ್ರತಿಭಟಿಸುವುದೋ, ತಪ್ಪನ್ನು ಸರಿಪಡಿಸುವುದೋ ಒತ್ತಟ್ಟಿಗಿರಲಿ, ಒಪ್ಪಿ ಆಚರಿಸುವುದೆಂದರೇನರ್ಥ? ಬುದ್ಧ, ಬಸವ, ಅಂಬೇಡ್ಕರ್ ತತ್ವಗಳಿಗೆ ಇದಕ್ಕಿಂತಲೂ ಘೋರ ಅವಮಾನ ಎಸಗುವುದು ಸಾಧ್ಯವೇ?

ಬ್ರಾಹ್ಮಣೇತರ ಎಲ್ಲ ಜಾತಿಗಳವರೂ ಎಡ-ಬಲಗಳಾಗಿದ್ದವರೇ, ಇದೇನೂ ಕೇವಲ ಅಸ್ಪೃಶ್ಯರಿಗಷ್ಟೇ ಮೀಸಲಾದುದಲ್ಲ. ಇದರ ಮೂಲ ಬಹುಶಃ ಕಂಚಿಯೇ ಇರಬೇಕು. ಬಹುಶಃ ಏಳನೇ ಶತಮಾನಕ್ಕೂ ಹಿಂದಿನದ್ದಾಗಿರಬಹುದಾದ ಪಣಕಟ್ಟು ವ್ಯವಸ್ಥೆಯಿದು. ಆದರೆ ಕಾಲಕ್ರಮೇಣ ಉಳಿದೆಲ್ಲಾ ಜಾತಿಗಳವರೂ ತಮಗಂಟಿಕೊಂಡ ಈ ಎಡ-ಬಲಗಳ ಉಪಾದಿಯನ್ನು ಅನಗತ್ಯವೆಂದು ಭಾವಿಸಿ ಕಿತ್ತು ಬಿಸುಟರೆಂದು ಕಾಣುತ್ತೆ. ಆದರೆ ಒಂಬತ್ತು ಪಣಕಟ್ಟಿನ ಒಂಬತ್ತು ಜಾತಿಗಳ ಪಟ್ಟಿಯಲ್ಲಿ ಕೊನೆಯವರಾಗಿದ್ದವರು ಮತ್ತು ಹದಿನೆಂಟು ಪಣಕಟ್ಟಿನ ಹದಿನೆಂಟು ಜಾತಿಗಳ ಪಟ್ಟಿಯಲ್ಲಿ ಕೊನೆಯವರಾಗಿದ್ದ ಅಸ್ಪೃಶ್ಯ ಕುಲಗಳು ಮಾತ್ರ ಇಂದಿಗೂ ಈ ಎಡ-ಬಲಗಳನ್ನು ಅದೊಂದು ಅನರ್ಘ್ಯ ಆಸ್ತಿಯೇನೋ ಎಂಬಂತೆ ಅಷ್ಟು ಜತನವಾಗಿ ಉಳಿಸಿಕೊಂಡು ಬಂದಿರುವುದು ನಿಜಕ್ಕೂ ದುರಂತವೇ ಸರಿ. ಈ ಎಡ-ಬಲಗಳೇ ನಮ್ಮ ಪೂರ್ವಿಕರನ್ನು ಒಡೆದಾಳಲು ನಮ್ಮ ಶತ್ರುಗಳ ಪೂರ್ವಿಕರು ಬಳಸಿದ ತೀಕ್ಷ್ಣ ಆಯುಧಗಳು. ಆ ಶತ್ರು ರೂಪಿಸಿಟ್ಟಿರುವ ನಮ್ಮ ಪಾಲಿನ ಪ್ರಾಣಾಘಾತಕ ಆಯುಧಗಳನ್ನು ಈಗ ಪುನಃ ನಾವೇ 'ಜಾಗ್ರತ ದಲಿತರು' ಮಸೆಯುತ್ತ ಕೂತಿದ್ದೇವಲ್ಲ? ಇದು ಶಿಕ್ಷಣ-ಸಂಘಟನೆ-ಹೋರಾಟದ ಯಾವ ಹಂತದಲ್ಲಾದರೂ ಕಲಿಯುವ ಪಾಠಗಳಾಗಿವೆಯೇನು? ಜಾತಿ ಪದ್ಧತಿಯಿಂದ ಅತಿ ಹೆಚ್ಚು ಯಾತನೆಯನ್ನು ಅನುಭವಿಸಿರುವ ನಾವೇ ಜಾತಿಗೆ ಇಷ್ಟು ಅಂಟಿಕೂತರೆ, ಜಾತಿಯಿಂದ ಅತಿ ಹೆಚ್ಚು ಲಾಭ ಪಡೆದವರು ಹೇಗೆ ತಾನೇ ಜಾತಿ ಬಿಟ್ಟಾರು? ಅಷ್ಟು ದೊಡ್ಡ ಅರಿವಿನ ಚಳವಳಿಯ ನಂತರ ನಾವು ಆರಂಭದ ಬಿಂದುವಿಗಿಂತಲೂ ಎರಡು ಹೆಜ್ಜೆ ಹಿಂದೆ ಸರಿದು ನಿಂತಂತಿಲ್ಲವೇ? ಇದು ದಲಿತ ಚಳವಳಿಯಲ್ಲಿದ್ದವರೆಲ್ಲರೂ ತಮಗೆ ತಾವೇ ಕೇಳಿಕೊಳ್ಳಬೇಕಾದ ಪ್ರಶ್ನೆಗಳೆಂದು ಭಾವಿಸಿದ್ದೇನೆ.

ಎಡ-ಬಲಕ್ಕೂ ಪೂರ್ವಕಾಲದ ದಲಿತ ಸಂಸ್ಕೃತಿಯ ಚರಿತ್ರೆಯೊಂದನ್ನು ದಲಿತ ಚಳವಳಿ ಕಟ್ಟಿಕೊಳ್ಳಲು ಸಾಧ್ಯವಾಗಿದ್ದಿದ್ದರೆ, ಆ ಪ್ರಪ್ರಾಚೀನ ಸಂಸ್ಕೃತಿಯ ಮೂಲಕವೇ ದಲಿತ ಅಸ್ಮಿತೆಯನ್ನು ರೂಪಿಸಿಕೊಂಡಿದ್ದಿದ್ದರೆ ಬಹುಶಃ ಈ ಛಿದ್ರೀಕರಣದ ಅಪಾಯದಿಂದ ಬಚಾವಾಗಬಹುದಿತ್ತೇನೋ? ಈ ಸದ್ಯ ಅಧಿಕಾರ, ಆರ್ಥಿಕ ಹಾಗೂ ಸಾಂಸ್ಕೃತಿಕ ರಾಜಕಾರಣದಲ್ಲಿ ನನಗಂತೂ ಸಾಂಸ್ಕೃತಿಕ ರಾಜಕಾರಣವೇ ಮುಖ್ಯವೆಂದು ಅನಿಸಿದೆ. ಆದರೆ ದಲಿತ ಚಳವಳಿ ಸಂಸ್ಕೃತಿ ಸಂಗತಿಗಳನ್ನು ಅಂಚಿಗೆ ಸರಿಸಿದ್ದು ಹಾಗೂ ಸೈದ್ಧಾಂತಿಕ ಗೊಂದಲಗಳನ್ನು ಬಗೆಹರಿಸಿಕೊಳ್ಳಲಾಗದೇ ಹೋದದ್ದು ಮತ್ತು ಕವಲು ದಾರಿಯಲ್ಲಿ ಬಂದು ನಿಂತು ಸ್ಥಗಿತಗೊಂಡ ಸಂದರ್ಭದಲ್ಲಿ ಸೃಷ್ಟಿಯಾದ ಅರಾಜಕತೆಯನ್ನು ನಿಭಾಯಿಸದೇ ಹೋದದ್ದು ಇಂದಿನ ದಲಿತ ಚಳವಳಿಯ ತಾತ್ಕಾಲಿಕ ನಿಲುಗಡೆಯ ಸ್ಥಿತಿಗೆ ಕಾರಣವೆಂದು ಭಾವಿಸುವಂತಾಗಿದೆ. ಮತ್ತೆ ದಲಿತ ಆಂದೋಲನವೊಂದು ತಲೆಯೆತ್ತಲು ಅಗತ್ಯವಾದ ಚಾರಿತ್ರಿಕ ಕಾಲಘಟ್ಟವೊಂದು ಸಮೀಪಿಸುತ್ತಿದೆಯೆಂದೇ ನನಗಂತೂ ಅನಿಸಿದೆ. ಆಗ ಚಳವಳಿಯ ಹೊಣೆ ಹೊರಲು ಮುಂದಾಗುವ ಹೆಗಲುಗಳು ಯಾವುದೇ ಆದರೂ ಬೆನ್ನಿಗೆ ಆನಿಕೊಂಡಂತೆಯೇ ಇರುವ ಇತಿಹಾಸದಿಂದ ಪಾಠಗಳನ್ನು ಕಲಿಯುವುದು ಖಂಡಿತ ಅನಿವಾರ್ಯವೆಂಬುದು ನನ್ನ ನಂಬಿಕೆ. 'ಮತ್ತೊಮ್ಮೆ ಬೀಸುವುದೇ ಆ ಚಂಡ ಪವನ' ಎಂಬ ನನ್ನ ಮೇಷ್ಟ್ರು ಎಚ್. ಜಿ. ಸಣ್ಣಗುಡ್ಡಯ್ಯ ಅವರ ಕವಿತೆ ಇಲ್ಲಿ ನೆನಪಾಗುತ್ತಿದೆ.

**ಲಕ್ಷ್ಮೀಪತಿ ಕೋಲಾರ**
೪೦೫, ಶ್ರೀ ಆರ್ಕಿಡ್ ಅಪಾರ್ಟ್‌ಮೆಂಟ್ಸ್, ಶಿವನಗರ, ರಾಜಾಜಿನಗರ, ಬೆಂಗಳೂರು – ೫೬೦ ೦೧೦

# ಚರಿತ್ರೆಯ ರಚನೆಯಲ್ಲಿ ೧೭೮೯ರ ಫ್ರಾನ್ಸಿನ ಕ್ರಾಂತಿ

**ಡಾ॥ ಕೆ. ಮೋಹನ್‌ಕೃಷ್ಣ ರೈ**

**ಜಾ**ಗತಿಕ ಚರಿತ್ರೆಯನ್ನು ಅಧ್ಯಯನ ನಡೆಸುವ ಸಂದರ್ಭದಲ್ಲಿ ಕೆಲವು ಸಂಗತಿಗಳು ಚರಿತ್ರೆಕಾರರನ್ನು ಡಿಸ್ಟರ್ಬ್ ಮಾಡುತ್ತಲೇ ಇರುತ್ತವೆ. ಅಂಥ ಸಂಗತಿಗಳಲ್ಲಿ ಫ್ರಾನ್ಸ್ ದೇಶದಲ್ಲಿ ನಡೆದ ಕ್ರಾಂತಿಯೂ ಒಂದು. ಫ್ರಾನ್ಸ್‌ನಲ್ಲಿ ಕ್ರಾಂತಿಗಳು ಒಂದರಮೇಲೊಂದರಂತೆ ನಡೆಯುತ್ತಲೇ ಹೋದವು. ಅದೇ ರೀತಿ ಚಕ್ರಾಧಿಪತ್ಯವೂ ಒಂದರ ಮೇಲೊಂದರಂತೆ ಸ್ಥಾಪನೆಗೊಳ್ಳುತ್ತಲೇ ಹೋಯಿತು. ೧೭೮೯, ೧೮೩೦ ಹಾಗೂ ೧೮೪೮ರಲ್ಲಿ ಕ್ರಾಂತಿಗಳು ನಡೆದರೆ, ಬೂರ್ಬನ್ ಚಕ್ರಾಧಿಪತ್ಯ ಕೊನೆಗೊಂಡ ಬಳಿಕ ನೆಪೋಲಿಯನ್ ಬೋನಾಪಾರ್ಟೆ, ೧೮ನೆಯ ಲೂಯಿ, ೧೦ನೆಯ ಚಾರ್ಲ್ಸ್, ಲೂಯಿ ಫಿಲಿಪ್ಪಿ, ಮೂರನೆಯ ನೆಪೋಲಿಯನ್ ಇವರುಗಳ ಚಕ್ರಾಧಿಪತ್ಯ ಕ್ರಾಂತಿಗಳ ನಡುವೆಯೇ ಅಸ್ತಿತ್ವಕ್ಕೆ ಬಂತು. ಕೊನೆಗೂ ಚಕ್ರಾಧಿಪತ್ಯ ಕೊನೆಗೊಂಡು ಗಣರಾಜ್ಯ ವ್ಯವಸ್ಥೆ ಅಸ್ತಿತ್ವಕ್ಕೆ ಬಂತು. ಈ ಪಲ್ಲಟಗಳು ಚರಿತ್ರೆಕಾರರನ್ನು ಡಿಸ್ಟರ್ಬ್ ಮಾಡಿ ವಿವಿಧ ಚಾರಿತ್ರಿಕ ದೃಷ್ಟಿಕೋನಗಳಿಂದ ಫ್ರಾನ್ಸ್‌ನ ರಾಜಕೀಯ ಬೆಳವಣಿಗೆಗಳನ್ನು ವಿಶ್ಲೇಷಿಸುವಂತೆ ಮಾಡಿದವು. ಫ್ರಾನ್ಸಿನಲ್ಲಿ ಅಧಿಕಾರವನ್ನು ಹೊಂದಿದ್ದ, ಅಧಿಕಾರಕ್ಕಾಗಿ ಹಾತೊರೆಯುತ್ತಿದ್ದ ಹಾಗೂ ಅಧಿಕಾರದಿಂದ ವಂಚಿತರಾಗಿದ್ದ ಜನವರ್ಗಗಳು ಕ್ರಾಂತಿಯ ಸಂದರ್ಭದಲ್ಲಿ ಪರಸ್ಪರ ನಡೆಸಿದ ಸಂಘರ್ಷ ಹಾಗೂ ಹೊಂದಾಣಿಕೆಗಳು ಕ್ರಾಂತಿಯ ಮೂಲ ಉದ್ದೇಶವನ್ನು ಮರೀಚಿಕೆಯನ್ನಾಗಿಸಿ ಬದಲಾವಣೆಯ ಹೆಸರಿನಲ್ಲಿ ಅಧಿಕಾರ ರಾಜಕಾರಣವೇ ಪ್ರಧಾನವಾಗಿ ನಡೆಯುವಂತೆ ಮಾಡಿದವು. ಇದರ ಪರಿಣಾಮವಾಗಿ ಕೆಳವರ್ಗದ ಜನತೆ ಮತ್ತೊಮ್ಮೆ ಶ್ರೀಮಂತವರ್ಗ ಹಾಗೂ ಮಧ್ಯಮವರ್ಗದ ಸ್ವಾರ್ಥ ರಾಜಕಾರಣಕ್ಕೆ ತಮ್ಮನ್ನು ಅರ್ಪಿಸಿಕೊಳ್ಳಬೇಕಾಯಿತು. ಕ್ರಾಂತಿಯ ಯಶಸ್ಸಿಗೆ ಇವರು ಕಾರಣರಾದರೂ, ಕ್ರಾಂತಿಯ ಲಾಭವನ್ನು ಪಡೆಯುವಲ್ಲಿ ಇವರು ವಿಫಲರಾಗಬೇಕಾಯಿತು. ಈ ಎಲ್ಲ ಅಂಶಗಳನ್ನು ಪ್ರಧಾನವಾಗಿಟ್ಟುಕೊಂಡು ೧೭೮೯ರ ಕ್ರಾಂತಿಯನ್ನು ವಿದ್ವಾಂಸರು ನೋಡಿದ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ. ಇದು ಫ್ರಾನ್ಸಿನ ಕ್ರಾಂತಿಯ ಕುರಿತಾದ ಚರಿತ್ರೆ ರಚನೆಗಳನ್ನು ಮರುಓದುವ ಪ್ರಯತ್ನವೂ ಹೌದು.

ಫ್ರಾನ್ಸಿನಲ್ಲಿ ೧೭೮೯ರಲ್ಲಿ ಜರುಗಿದ ಕ್ರಾಂತಿಯ ಚರಿತ್ರೆ ರಚನಾಶಾಸ್ತ್ರದ ದೃಷ್ಟಿಯಿಂದ ಮಹತ್ವಪೂರ್ಣ ಘಟನೆಯೆನಿಸಿದೆ. ಈ ಕ್ರಾಂತಿಯ ಸ್ವರೂಪದ ಕುರಿತು ಅನೇಕ ವಾದ–ವಿವಾದಗಳು ಈಗಾಗಲೇ ನಡೆದಿವೆ ಹಾಗೂ ನಡೆಯುತ್ತಿವೆ. ಕ್ರಾಂತಿಯ ಹುಟ್ಟು, ಬೆಳವಣಿಗೆ ಹಾಗೂ ಸಂದರ್ಭಕ್ಕನುಗುಣವಾಗಿ ಅದು ಪಡೆದುಕೊಂಡ ವಿವಿಧ ಆಯಾಮಗಳು ಚರಿತ್ರೆಕಾರರಿಗೆ ಸಂಶೋಧನೆಯ ವಸ್ತುವಾಗಿವೆ. ಈ ಕ್ರಾಂತಿಯನ್ನು ಪರಿಪೂರ್ಣವಾಗಿ ಸಾಮಾಜಿಕ ಕ್ರಾಂತಿಯೆಂದು ಕೆಲವರು, ಮತ್ತಿತರರು ಇದನ್ನು ರಾಜಕೀಯ ಕ್ರಾಂತಿಯೆಂದು ವಾದಿಸುತ್ತಾರೆ. ಕ್ರಾಂತಿಯ ಸ್ವರೂಪಕ್ಕೆ ಸಂಬಂಧಪಟ್ಟಂತೆ ವಿದ್ವಾಂಸರುಗಳಲ್ಲಿ ಒಮ್ಮತವಿಲ್ಲ. ಫ್ರಾನ್ಸಿನ ಕ್ರಾಂತಿಯನ್ನು ಶ್ರೀಮಂತ ವರ್ಗದ ಕ್ರಾಂತಿ, ಮಧ್ಯಮ ವರ್ಗದ ಕ್ರಾಂತಿ, ಸಾಮಾನ್ಯ ವರ್ಗದ ಕ್ರಾಂತಿ, ಪ್ರಜಾಪ್ರಭುತ್ವವಾದಿ ಕ್ರಾಂತಿ ಮುಂತಾಗಿ ಬೇರೆ ಬೇರೆ ಸೈದ್ಧಾಂತಿಕ ಚೌಕಟ್ಟುಗಳ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸಲಾಗಿದೆ. ಈ ಲೇಖನದಲ್ಲಿ ಈ ರೀತಿಯ ವ್ಯಾಖ್ಯಾನಗಳಿಗೆ ಹೆಚ್ಚಿನ ಒತ್ತು ನೀಡಲಾಗಿದೆ. ಏಕೆಂದರೆ ಕ್ರಾಂತಿಯ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ತಾತ್ವಿಕ ಕಾರಣಗಳು ಹಾಗೂ ಕ್ರಾಂತಿ ಬೆಳೆದುಬಂದ ಬಗೆಯ ಸಾಂಪ್ರದಾಯಿಕ ವಿಶ್ಲೇಷಣೆಯ ಗಡಿಯನ್ನು ದಾಟುವ ಅಗತ್ಯವಿದೆ. ಕ್ರಾಂತಿಯ ನಿಜಸ್ವರೂಪವನ್ನು ಅರಿತುಕೊಳ್ಳಲು ಈ ರೀತಿಯ ಮರುವ್ಯಾಖ್ಯಾನಿಸುವ ಪ್ರಕ್ರಿಯೆಯು ಅನಿವಾರ್ಯವೂ ಹೌದು.

ಫ್ರಾನ್ಸಿನ ಕ್ರಾಂತಿಯ ಸ್ವರೂಪದ ಕುರಿತು ಚರ್ಚೆ ನಡೆಸುವಾಗ ಅದೊಂದು ಸುಧಾರಣೆಯಂತೆಯೂ ಕಂಡುಬರುತ್ತದೆ. ಸುಧಾರಣೆಗೆ ಕ್ರಾಂತಿಯ ಅಗತ್ಯವಿದ್ದರೂ ಇವೆರಡೂ ಬೇರೆ ಬೇರೆಯವೇ ಆಗಿವೆ. ಪ್ರಜ್ಞಾವಂತ ಅರಸರುಗಳ ಆಳ್ವಿಕೆ ಹಾಗೂ ಕ್ರಾಂತಿಯ ಸಮಯದಲ್ಲಾದ ಬದಲಾವಣೆಗಳನ್ನು ಗಮನಿಸುವಾಗ ಅನೇಕ ಸಾಮ್ಯತೆಗಳು ಕಂಡುಬರುತ್ತವೆ. ಹದಿನೆಂಟನೆಯ ಶತಮಾನದ ಯೂರೋಪನ್ನು 'ಪ್ರಜ್ಞಾವಂತ ರಾಜ ಪ್ರಭುತ್ವದ ಯುಗ' ಎಂಬುದಾಗಿಯೂ ಕರೆಯಲಾಗಿದೆ. ಈ ಪ್ರಜ್ಞಾವಂತ ಅರಸರುಗಳು ಮತ್ತು ಮಂತ್ರಿಗಳು ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಈ ಸುಧಾರಣೆಗಳು ತತ್ವಜ್ಞಾನಿಗಳ ಸಿದ್ಧಾಂತಗಳಲ್ಲಿ ಅಡಕವಾಗಿರುವ ಅಂಶಗಳೇ ಆಗಿದ್ದವು. ಈ ಸುಧಾರಣೆಗಳು, ನಿರಂಕುಶ ಆಡಳಿತವೂ ಇದ್ದುದರಿಂದಾಗಿ ಅಷ್ಟೊಂದು ಸುಲಭವಾಗಿ ಜಾರಿಗೆ ಬರುವಂತಿರಲಿಲ್ಲ. ಇದಕ್ಕೆ ಕ್ರಾಂತಿಯ ಅನಿವಾರ್ಯತೆ ಇತ್ತು. ಕ್ರಾಂತಿಯುದ್ದಕ್ಕೂ ಪ್ರಜ್ಞಾವಂತ ಅರಸರುಗಳ ಆಳ್ವಿಕೆಯಲ್ಲಿ ಯೋಜಿತ ಸುಧಾರಣೆಯನ್ನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಜಾರಿಗೆ ತರುವ ಪ್ರಯತ್ನ ನಡೆಯುತ್ತಿತ್ತು ಎಂಬುದಾಗಿಯೂ ವ್ಯಾಖ್ಯಾನಿಸಬಹುದು. ರಾಷ್ಟ್ರೀಯ ಏಕತೆ, ಆಡಳಿತದ ಸುಧಾರಣೆ,

ಸವಲತ್ತುಗಳನ್ನು ರದ್ದುಪಡಿಸುವುದು, ಗುಲಾಮ ಪದ್ಧತಿ ಮತ್ತು ಊಳಿಗಮಾನ್ಯ ಪದ್ಧತಿಯನ್ನು ರದ್ದುಗೊಳಿಸುವುದು, ಸಂವಿಧಾನಾತ್ಮಕ ನೀತಿಗಳನ್ನು ಜಾರಿಗೆ ತರುವುದು, ಚುನಾವಣೆಗಳನ್ನು ನಡೆಸುವುದು ಇವೇ ಮುಂತಾದ ಉದ್ದೇಶಗಳನ್ನು ಕ್ರಾಂತಿಯು ಹೊಂದಿತ್ತು. ಇದು ಪ್ರಜ್ಞಾವಂತ ಅರಸರುಗಳ ಪ್ರಣಾಳಿಕೆಯೂ ಆಗಿತ್ತು.

ಕ್ರಾಂತಿ ನಡೆದರೂ ಫ್ರಾನ್ಸಿನಲ್ಲಿ ರಾಜಪ್ರಭುತ್ವ ಕೊನೆಗೊಳ್ಳಲಿಲ್ಲ. ೧೬ನೆಯ ಲೂಯಿಯ ಮರಣದ ನಂತರ ರಾಜಪ್ರಭುತ್ವ ಫ್ರಾನ್ಸಿನಿಂದ ಮರೆಯಾಗುವ ಸಾಧ್ಯತೆ ಇದ್ದರೂ ೧೮ನೆಯ ಲೂಯಿ ಹೊಸ ಸಂವಿಧಾನಾತ್ಮಕ ಸುಧಾರಣೆಯೊಡನೆ ಅಧಿಕಾರಕ್ಕೆ ಬಂದ. ಕ್ರಾಂತಿಯ ಶಿಶುವೇ ಆಗಿದ್ದ ನೆಪೋಲಿಯನ್ ಬೋನಾಪಾರ್ಟೆ ಕ್ರಾಂತಿಯ ತತ್ವಗಳನ್ನು ಗಾಳಿಗೆ ತೂರಿದ್ದ. ನಂತರ ಬಂದ ಲೂಯಿ ಫಿಲಿಪ್ಪಿ ಮತ್ತು ಮೂರನೆಯ ನೆಪೋಲಿಯನ್ ಸರ್ವಾಧಿಕಾರಿಗಳೇ ಆಗಿದ್ದರು. ಅಂದರೆ ೧೭೮೯ರಲ್ಲಿ ನಡೆದ ಕ್ರಾಂತಿ ಕೊನೆಗೊಂಡದ್ದು ೧೮೭೧ರಲ್ಲಿ. ೧೮೭೧ರಲ್ಲಿ ನಡೆದ ಸೆಡಾನ್ ಯುದ್ಧದಲ್ಲಿ ಮೂರನೆಯ ನೆಪೋಲಿಯನ್ ಪ್ರಷ್ಯಾದ ವಿರುದ್ಧ ಸೋತಾಗ ಫ್ರಾನ್ಸನ್ನು ಗಣರಾಜ್ಯವೆಂದು ಘೋಷಿಸಲಾಯಿತು. ಇದು ಕ್ರಾಂತಿಯ ಉದ್ದೇಶವಾಗಿತ್ತು. ೧೭೮೯ರ ಕ್ರಾಂತಿಯಿಂದಾಗಿ ಫ್ರಾನ್ಸಿನಲ್ಲಿ ಅಸ್ತಿತ್ವದಲ್ಲಿದ್ದ ಸರ್ಕಾರದ ಸ್ವರೂಪದಲ್ಲಿ ಬದಲಾವಣೆಯಾಯಿತು. ಅಂದರೆ ನಿರಂಕುಶ ರಾಜಪ್ರಭುತ್ವದಿಂದ ಸಂವಿಧಾನಾತ್ಮಕ ರಾಜಪ್ರಭುತ್ವಕ್ಕೆ ಒಟ್ಟು ವ್ಯವಸ್ಥೆ ಪರಿವರ್ತನೆಗೊಂಡಿತು. ರಾಜಪ್ರಭುತ್ವ ಹೊಸ ರೂಪವನ್ನು ಪಡೆದುಕೊಂಡಿತು. ಇಲ್ಲಿ ರಾಜಪ್ರಭುತ್ವದ ಎಲ್ಲ ಧೋರಣೆಗಳು ಆದೇಶದಂತಿರದೆ ಹೊಂದಾಣಿಕೆಯ ರೂಪದ್ದಾಗಿದ್ದವು. ಇಲ್ಲಿ ನಾವು ಗಮನಿಸಬೇಕಾದ ಬಹುಮುಖ್ಯ ಅಂಶವೆಂದರೆ ಕ್ರಾಂತಿಯ ಸಂದರ್ಭದಲ್ಲಿ ಅಧಿಕಾರವನ್ನು ಪಡೆದುಕೊಂಡದ್ದು ಮಧ್ಯಮವರ್ಗದ ರಾಜಕೀಯ.



ಚರಿತ್ರೆಕಾರರು ಈ ಬೆಳವಣಿಗೆಯನ್ನು ಮಧ್ಯಮ ವರ್ಗದ ರಾಜಪ್ರಭುತ್ವವೆಂದೇ ಕರೆದಿದ್ದಾರೆ. ಜನಸಾಮಾನ್ಯರಿಗೆ ಫ್ರಾನ್ಸಿನಲ್ಲಿದ್ದ ಹಳೆಯ ವ್ಯವಸ್ಥೆ ಮತ್ತು ಹೊಸ ಮಧ್ಯಮ ವರ್ಗದಲ್ಲಿ ವ್ಯತ್ಯಾಸವನ್ನು ಕಾಣಲು ಸಾಧ್ಯವಾಗಲಿಲ್ಲ. ಇದು ಊಳಿಗಮಾನ್ಯ ವ್ಯವಸ್ಥೆ ಸಡಿಲಗೊಂಡು ಬಂಡವಾಳಶಾಹಿ ವ್ಯವಸ್ಥೆಯ ಆಗಮನದ ಹಂತವಾಗಿತ್ತು. ಈ ಅಂಶವನ್ನು ಆಲ್ಬರ್ಟ್ ಸಬೂಲ್‌ರವರ 'ಅಂಡರ್‌ಸ್ಟಾಂಡಿಂಗ್ ದಿ ಫ್ರೆಂಚ್ ರೆವಲ್ಯೂಷನ್' ಗ್ರಂಥದಲ್ಲಿ ಗಮನಿಸಬಹುದು.

ಫ್ರಾನ್ಸಿನಲ್ಲಿ ಪಾದ್ರಿಗಳು ಮತ್ತು ಶ್ರೀಮಂತ ವರ್ಗದವರು ವಿಶೇಷ ಹಕ್ಕುಬಾಧ್ಯತೆಗಳನ್ನು ಅನುಭವಿಸುತ್ತಿದ್ದರು. ಫ್ರಾನ್ಸ್‌ನ ಒಟ್ಟು ಜನಸಂಖ್ಯೆಯಲ್ಲಿ ಇವರು ಅಲ್ಪಸಂಖ್ಯಾತರಾಗಿದ್ದರೂ ಬಹುಪಾಲು ಭೂಮಿ ಹಾಗೂ ಸಂಪತ್ತು ಇವರ

ಅಧೀನದಲ್ಲಿದ್ದವು. ಊಳಿಗಮಾನ್ಯ ವ್ಯವಸ್ಥೆ ಇನ್ನೂ ಬಿಗಿಯಾಗಿಯೇ ಇತ್ತು. ಆದರೆ ಶ್ರೀಮಂತವರ್ಗ ಹೊಂದಿದ್ದ ಅಧಿಕಾರ ಮತ್ತು ಸವಲತ್ತು ಬೂರ್ಬನ್ ಅರಸರುಗಳಿಗೆ ತಮ್ಮ ವಂಶಪಾರಂಪರ್ಯದ ಆಳ್ವಿಕೆಯನ್ನು ಮುಂದುವರಿಸಿಕೊಂಡು ಹೋಗುವಲ್ಲಿ ತಡೆಗೋಡೆಯಾಗಿ ಪರಿಣಮಿಸಿತು. ಶ್ರೀಮಂತ ವರ್ಗದ ಅಧಿಕಾರವನ್ನು ಸೀಮಿತಗೊಳಿಸುವ ಉದ್ದೇಶದಿಂದ ರಾಜಪ್ರಭುತ್ವ ಕೆಲವೊಂದು ಮಾರ್ಪಾಡುಗಳನ್ನು ಮಾಡಿಕೊಂಡಿತು. ಇದು ವಿರೋಧದ ರೂಪದಲ್ಲಿರದೆ ಹೊಂದಾಣಿಕೆಯ ಅಥವಾ ಓಲೈಸುವ ರೀತಿಯದ್ದಾಗಿತ್ತು. ಶ್ರೀಮಂತ ವರ್ಗದ ರಾಜಕೀಯ ಅಧಿಕಾರ ಮತ್ತು ಸವಲತ್ತುಗಳನ್ನು ಕಸಿದುಕೊಂಡು ಅವರಿಗೆ ಸಾಮಾಜಿಕ ಸವಲತ್ತುಗಳನ್ನು ನೀಡಲಾಯಿತು. ಈ ವ್ಯವಸ್ಥೆ ರಾಜಪ್ರಭುತ್ವದ ಸಾಮರ್ಥ್ಯವನ್ನು ಅವಲಂಬಿಸಿಕೊಂಡಿರುತ್ತಿತ್ತು. ೧೪ನೆಯ ಲೂಯಿಯ ಆಳ್ವಿಕೆಯ ಸಂದರ್ಭದಲ್ಲಿ ಈ ಪ್ರಯತ್ನವನ್ನು ಮಾಡಲಾಯಿತು. ಶ್ರೀಮಂತ ವರ್ಗದ ವಿರೋಧವನ್ನು ತಪ್ಪಿಸಲು ಅವರನ್ನು ಕೋರ್ಟಿನ ಸದಸ್ಯರನ್ನಾಗಿ ಮಾಡಲಾಯಿತು. ಆದರೆ ೧೪ನೆಯ ಲೂಯಿಯ ಮರಣದ ನಂತರ ರಾಜಕೀಯ ಸ್ಥಿತಿಗತಿಗಳು ಬದಲಾದವು. ೧೫ನೆಯ ಲೂಯಿ ಮತ್ತು ೧೬ನೆಯ ಲೂಯಿ ಶ್ರೀಮಂತ ವರ್ಗದ ಜನರನ್ನು ಹಿಡಿತದಲ್ಲಿಟ್ಟುಕೊಳ್ಳುವಷ್ಟು ಸಮರ್ಥರಾಗಿರಲಿಲ್ಲ. ಈ ಸಂದರ್ಭದಲ್ಲಿಯೇ ಶ್ರೀಮಂತ ವರ್ಗದವರು ನಿರಂಕುಶ ಪ್ರಭುತ್ವವನ್ನು ವಿರೋಧಿಸಿ ಅಧಿಕಾರದಲ್ಲಿ ಸಮಾನ ಹಕ್ಕನ್ನು ಪ್ರತಿಪಾದಿಸಿದರು. ಅರಸರ ಆಳ್ವಿಕೆಯ ವಿರುದ್ಧ ಶ್ರೀಮಂತ ವರ್ಗದ ಹೋರಾಟ ಇಲ್ಲಿಂದಲೇ ಆರಂಭಗೊಂಡಿತು. ಈ ಬದಲಾವಣೆಯನ್ನೇ ಪ್ರಧಾನವಾಗಿಟ್ಟುಕೊಂಡು ಫ್ರಾನ್ಸಿನ ಕ್ರಾಂತಿ ಶ್ರೀಮಂತ ವರ್ಗದ ಕ್ರಾಂತಿಯಾಗಿ ಆರಂಭಗೊಂಡಿತು ಎಂಬುದಾಗಿ ವ್ಯಾಖ್ಯಾನಿಸಲಾಗಿದೆ. ಆದರೆ ಇದನ್ನು ಕ್ರಾಂತಿ ಎಂಬುದಾಗಿ ಕರೆಯಲು ಸಾಧ್ಯವಿಲ್ಲ. ಏಕೆಂದರೆ ತಮ್ಮ ವೈಯಕ್ತಿಕ ಹಿತಾಸಕ್ತಿಗಳನ್ನು ಈಡೇರಿಸುವುದೇ ಶ್ರೀಮಂತ ವರ್ಗದ ಉದ್ದೇಶವಾಗಿತ್ತು.

ಸಾಮಾಜಿಕವಾಗಿ ಸ್ಥಾನಮಾನಗಳಿದ್ದರೂ ರಾಜಕೀಯವಾಗಿ ಶ್ರೀಮಂತ ವರ್ಗದ ಎಲ್ಲ ಸವಲತ್ತುಗಳನ್ನು ಕಿತ್ತುಕೊಳ್ಳಲಾಗಿತ್ತು. ಈ ಕಾರಣಕ್ಕಾಗಿಯೇ ಬೂರ್ಬನ್ ಅರಸರುಗಳ ನಿರಂಕುಶ ಪ್ರಭುತ್ವವನ್ನು ವಿರೋಧಿಸಿ ಅಧಿಕಾರದಲ್ಲಿ ಸಮಪಾಲನ್ನು ಅಥವಾ ಸಮಾನ ಹಕ್ಕನ್ನು ಪ್ರತಿಪಾದಿಸಲಾಯಿತು. ಇಲ್ಲಿ ಊಳಿಗಮಾನ್ಯ ಪದ್ಧತಿಯ ಮುಂದುವರಿಕೆಯೂ ಪ್ರಮುಖ ಅಂಶವಾಗಿತ್ತು. ಅರಸಕೇಂದ್ರಿತ ವ್ಯವಸ್ಥೆ ೧೬ನೆಯ ಲೂಯಿಯ ಆಳ್ವಿಕೆಯ ಸಂದರ್ಭದಲ್ಲಿ ಸಡಿಲವಾಗಿದ್ದರಿಂದಾಗಿ ಶ್ರೀಮಂತ ವರ್ಗ ಅಧಿಕಾರವನ್ನು ಪಡೆಯಲು ಹಾತೊರೆಯುತ್ತಿತ್ತು. ಇವರು ಅಧಿಕಾರ ಮತ್ತು ಸ್ವಾತಂತ್ರ್ಯದ ಜೊತೆಗೇ ಸವಲತ್ತುಗಳನ್ನೂ ಯಾಚಿಸುತ್ತಿದ್ದರು. ಈ ಉದ್ದೇಶಕ್ಕಾಗಿಯೇ ಎಸ್ಟೇಟ್-ಜನರಲ್ಸ್‌ನ ಸಭೆ ಕರೆಯುವುದನ್ನು ಶ್ರೀಮಂತ ವರ್ಗ ವಿರೋಧಿಸಿತು. ಏಕೆಂದರೆ ಎಸ್ಟೇಟ್-ಜನರಲ್ಸ್‌ನ ಸಭೆಯನ್ನು ಕರೆದರೆ ಮೂರನೆಯ ಎಸ್ಟೇಟ್ ತನ್ನ ಹಕ್ಕನ್ನು ಪ್ರತಿಪಾದಿಸುತ್ತದೆ ಮತ್ತು ಬೇಡಿಕೆಗಳನ್ನು ಮುಂದೊಡ್ಡುತ್ತದೆ ಎನ್ನುವ ಆತಂಕ ಹಾಗೂ ಭಯ ಶ್ರೀಮಂತ ವರ್ಗಕ್ಕಿತ್ತು. ಈ ಕಾರಣಕ್ಕಾಗಿಯೇ ೧೬೧೪ರಿಂದ ಎಸ್ಟೇಟ್ -ಜನರಲ್ಸ್‌ನ ಸಭೆಯನ್ನು ಫ್ರಾನ್ಸಿನಲ್ಲಿ ಕರೆದಿರಲಿಲ್ಲ. ಆದರೆ ೧೭೮೯ರಲ್ಲಿ ಮೂರನೆಯ ಎಸ್ಟೇಟ್‌ನ ಒತ್ತಡಕ್ಕೆ ಮಣಿದು ಸಭೆಯನ್ನು ಕರೆಯಲೇ ಬೇಕಾಯಿತು. ಇದನ್ನು ಶ್ರೀಮಂತ ವರ್ಗ ಬಲವಾಗಿ ವಿರೋಧಿಸಿತಾದರೂ ಅದರ ವಿರೋಧ ಅಷ್ಟೇನೂ ಪರಿಣಾಮಕಾರಿಯಾಗಿರಲಿಲ್ಲ. ಆದರೆ ಈ ಸಭೆ ಮೂರನೆಯ ಎಸ್ಟೇಟ್ ತಮ್ಮ ಪ್ರಣಾಳಿಕೆಯನ್ನು ರೂಪಿಸುವುದಕ್ಕೆ ಸಹಕಾರಿಯಾಯಿತು. ಈ ಹಿನ್ನೆಲೆಯಿಂದಾಗಿ ಕ್ರಾಂತಿಯ ಆರಂಭದ ದಿನಗಳಲ್ಲಿ ವ್ಯಕ್ತವಾದ ವಿರೋಧವನ್ನು ಶ್ರೀಮಂತ ವರ್ಗದ ವಿರೋಧ ಎಂಬುದಾಗಿ ಚರಿತ್ರೆಕಾರರು ಪ್ರತಿಪಾದಿಸಿದ್ದಾರೆ. ಸಾಗ್ನೇಕ್ ತನ್ನ 'ದಿ ಹಿಸ್ಟರಿ ಆಫ್ ಫ್ರಾನ್ಸ್' ಎಂಬ ಗ್ರಂಥದಲ್ಲಿ ಫ್ರಾನ್ಸಿನ ಕ್ರಾಂತಿ ಶ್ರೀಮಂತ ವರ್ಗದ ಕ್ರಾಂತಿಯಾಗಿ ಆರಂಭವಾಯಿತು ಎಂಬುದಾಗಿ ವಿವರಿಸುತ್ತಾನೆ. ಇದೇ ರೀತಿಯ ಅಭಿಪ್ರಾಯಗಳನ್ನು ಬಾರ್ನೆವ್, ತಿಯರ್ಸ್, ಗಿಸೆಟ್ ಮುಂತಾದ ವಿದ್ವಾಂಸರ ಗ್ರಂಥಗಳಲ್ಲೂ ಕಾಣಬಹುದು.

ಬಾರ್ನೆವ್ ತನ್ನ 'ಇಂಟ್ರಡಕ್ಷನ್ ಟು ದಿ ಫ್ರೆಂಚ್ ರೆವಲ್ಯೂಷನ್' ಗ್ರಂಥದಲ್ಲಿ ಶ್ರೀಮಂತ ವರ್ಗ ಹುಟ್ಟುಹಾಕಿದ ಅನೇಕ ಊಳಿಗಮಾನ್ಯ ಸಂಸ್ಥೆಗಳು ಹೊಸ ವ್ಯವಸ್ಥೆಯ ಆಗಮನವನ್ನು ತಡೆಹಿಡಿದ ಬಗೆಯನ್ನು ಚರ್ಚಿಸುತ್ತಾನೆ. ಇಲ್ಲಿ ಹೊಸ ವ್ಯವಸ್ಥೆಯೆಂದರೆ ಕಾರ್ಲ್ ಮಾರ್ಕ್ಸ್‌ರವರ 'ಕಮ್ಯೂನಿಸ್ಟ್ ಮ್ಯಾನಿಫೆಸ್ಟೋ ಮತ್ತು ದಾಸ್ ಕ್ಯಾಪಿಟಲ್'ನಲ್ಲಿ ಚರ್ಚಿಸಿರುವಂತಹ ಸಾಮಾಜಿಕ ಮತ್ತು ಆರ್ಥಿಕ ಕ್ರಾಂತಿ. ಅಂದರೆ ಸಂಪತ್ತು ಮತ್ತು ಅಧಿಕಾರದ ಮರುಹಂಚುವಿಕೆ ಎಂದರ್ಥ. ಫ್ರಾನ್ಸಿನ ಕ್ರಾಂತಿಯನ್ನು ಸಾಮಾಜಿಕ ಹಿನ್ನೆಲೆಯಿಂದ ಲೆಪಬ್ರೆವ್, ಬಾರ್ನೆವ್, ಜೂರಿಸ್, ಆಲರ್ಡ್, ಮಥಾಯಿಸ್ ಮುಂತಾದ ಅನೇಕ ವಿದ್ವಾಂಸರು ಅಧ್ಯಯನ ನಡೆಸಿದ್ದಾರೆ. ಇವರ ಪ್ರಕಾರ ಫ್ರಾನ್ಸಿನ ಕ್ರಾಂತಿ ಹಿಂದಿನಿಂದಲೇ ನಡೆದು ಬಂದ ಆರ್ಥಿಕ ಮತ್ತು ಸಾಮಾಜಿಕ ವಿಕಸನದ ಪರಿಣಾಮ. ಈ ಪ್ರಕ್ರಿಯೆ ನಿರಂತರವಾಗಿದ್ದು, ಇದು ಮಧ್ಯಮ ವರ್ಗವು ಅಧಿಕಾರ ಮತ್ತು ಸಂಪತ್ತನ್ನು ಹೊಂದುವಂತೆ ಮಾಡಿತು. ಆದರೆ ಈ ರೀತಿಯ ವ್ಯಾಖ್ಯಾನಗಳನ್ನು ಆರ್. ಆರ್. ಪಾಮರ್, ಆಲ್‌ಫ್ರೆಡ್ ಕೋಬ್ಬನ್ ಮುಂತಾದ ವಿದ್ವಾಂಸರು ವಿರೋಧಿಸಿದರು.




ಆರ್. ಆರ್. ಪಾಮರ್ ತನ್ನ 'ದಿ ಏಜ್ ಆಫ್ ದಿ ಡೆಮಾಕ್ರ್ಯಾಟಿಕ್ ರೆವಲ್ಯೂಷನ್' ಎಂಬ ಗ್ರಂಥದಲ್ಲಿ ಜೆಯಾನ್ ಜೂರಿಸ್‌ನಿಂದ ಜೋರ್ಜ್ ಲೆಪಬ್ರೆವ್‌ವರೆಗಿನ ಚರಿತ್ರೆ ರಚನೆಯನ್ನು ಸಂಪೂರ್ಣವಾಗಿ ಅಲ್ಲಗಳೆಯುತ್ತಾನೆ. ಇವನು ಫ್ರೆಂಚ್ ಕ್ರಾಂತಿ ಊಳಿಗಮಾನ್ಯ ವಿರೋಧಿ ಮತ್ತು ಮಧ್ಯಮ ವರ್ಗದ ಸ್ವರೂಪದ್ದು ಎನ್ನುವ ವಾದವನ್ನು ಒಪ್ಪುವುದಿಲ್ಲ. ಅದೇ ರೀತಿ ರಾಷ್ಟ್ರೀಯ ಕ್ರಾಂತಿ ಎನ್ನುವ ವಾದವನ್ನೂ ತಳ್ಳಿಹಾಕುತ್ತಾನೆ. ಪಾಮರ್‌ನ ಪ್ರಕಾರ ಫ್ರಾನ್ಸಿನ ಕ್ರಾಂತಿ ಪ್ರಜಾಪ್ರಭುತ್ವವಾದಿ ಕ್ರಾಂತಿ ಅಥವಾ ಅಟ್ಲಾಂಟಿಕ್ ಕ್ರಾಂತಿ. ಫ್ರಾನ್ಸಿನಲ್ಲಾದ ಬದಲಾವಣೆ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿನ ರಾಜಕೀಯ ಬದಲಾವಣೆಯ ಪ್ರತಿಫಲನ ಎಂಬ ತತ್ವವನ್ನು ಮಂಡಿಸುತ್ತಾನೆ. ಅವನ ಪ್ರಕಾರ "ಇದು ಪ್ರಥಮ ಬಾರಿಗೆ ಅಮೆರಿಕಾದಲ್ಲಿನ ಬ್ರಿಟಿಷ್ ವಸಾಹತು ನೆಲೆಗಳಲ್ಲಿ ೧೭೬೩ರಿಂದ ಆರಂಭಗೊಂಡಿತು. ಅಲ್ಲಿ ಅಟ್ಲಾಂಟಿಕ್ ಮಹಾಸಾಗರ ಮಹತ್ವದ ಪಾತ್ರವನ್ನು ವಹಿಸಿತು. ಫ್ರಾನ್ಸಿನಲ್ಲಿ ಕ್ರಾಂತಿ ಆರಂಭವಾಗುವ ಮೊದಲು ಸ್ವಿಟ್ಜರ್‌ಲೆಂಡ್, ನೆದರ್‌ಲೆಂಡ್ಸ್ ಮತ್ತು ಐರ್ಲೆಂಡ್‌ಗಳಲ್ಲಿ ಕ್ರಾಂತಿ ಕಾಣಿಸಿಕೊಂಡಿತ್ತು. ಅಲ್ಲಿ ಪ್ರಜಾಸತ್ತಾತ್ಮಕ ಬೆಳವಣಿಗೆಗಳು ಕಂಡುಬಂದವು. ಈ ಕಾರಣಕ್ಕಾಗಿ ಫ್ರಾನ್ಸಿನ ಕ್ರಾಂತಿಯನ್ನು ಪ್ರಜಾಪ್ರಭುತ್ವವಾದಿ ಅಥವಾ ಅಟ್ಲಾಂಟಿಕ್ ಕ್ರಾಂತಿ ಎಂಬುದಾಗಿ ಗುರುತಿಸಲಾಗಿದೆ." ಪಾಮರ್‌ರವರ ಪ್ರಕಾರ ಈ ಬೆಳವಣಿಗೆಯ ಲಾಭವನ್ನು ಪಡೆದುಕೊಂಡವರು ಮಧ್ಯಮ ವರ್ಗದ ಜನರು. ಆದ್ದರಿಂದಲೇ ಮಧ್ಯಮ ವರ್ಗದ ಕ್ರಾಂತಿ ಸ್ವಾಭಾವಿಕವಾಗಿತ್ತು ಹಾಗೂ ಅದು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿನ ಕ್ರಾಂತಿಯ ಆಮದು ಮಾತ್ರ ಆಗಿದೆ ಎನ್ನುವ ನಿಲುವನ್ನು ಪಾಮರ್‌ರವರು ತಳೆಯುತ್ತಾರೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿನ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಪರಿಸ್ಥಿತಿ ಫ್ರಾನ್ಸಿಗಿಂತ ಭಿನ್ನವಾಗಿತ್ತು ಎನ್ನುವ ಅಂಶವನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಫ್ರಾನ್ಸಿನ ಕ್ರಾಂತಿಯನ್ನು ಅಟ್ಲಾಂಟಿಕ್ ಕ್ರಾಂತಿ

ಶುಭಾಶಯಗಳೊಂದಿಗೆ

# ಫೆಡರಲ್ ಮೊಗಲ್ ಗೋಯಟ್ಸೆ ಇಂಡಿಯ ಎಂಪ್ಲಾಯೀಸ್ ಅಸೋಸಿಯೇಷನ್

ನೋಂ. ಸಂ. DRT (B-1) TUA/45/78-79

ನಂ. 2037, 3ನೇ ಘಟ್ಟ, 4ನೇ 'ಬಿ' ಅಡ್ಡರಸ್ತೆ., ಯಲಹಂಕ ಉಪನಗರ, ಬೆಂಗಳೂರು – 560 064



ಕಾಂ. ಹೆಚ್. ಮಹದೇವನ್, ಅಧ್ಯಕ್ಷರು



ಕಾಂತರಾಜ
ಹಿರಿಯ ಉಪಾಧ್ಯಕ್ಷರು



ದಿನಕರನ್
ಕಿರಿಯ ಉಪಾಧ್ಯಕ್ಷರು



ಕೃಷ್ಣಮೂರ್ತಿ
ಪ್ರಧಾನ ಕಾರ್ಯದರ್ಶಿ



ರಾಮಚಂದ್ರ
ಜಂಟಿ ಕಾರ್ಯದರ್ಶಿ



ದಿಲೀಪ
ಸಹ ಕಾರ್ಯದರ್ಶಿ



ರಾಮಚಂದ್ರಪ್ಪ
ಸಂಘಟನಾ ಕಾರ್ಯದರ್ಶಿ



ಬಸವರಾಜು
ಖಜಾಂಚಿ

ಅಥವಾ ಪ್ರಜಾಪ್ರಭುತ್ವವಾದಿ ಕ್ರಾಂತಿ ಎನ್ನುವ ನಿರ್ಣಯವನ್ನು ಕೈಗೊಳ್ಳುವುದು ತಪ್ಪಾಗುತ್ತದೆ.

ಆಲ್‌ಫ್ರೆಡ್ ಕೋಬ್ಬನ್ ಫ್ರಾನ್ಸಿನ ಸಂಪ್ರದಾಯ ವಾದಿ ವಿಚಾರಧಾರೆಯನ್ನು ವಿರೋಧಿಸಿದನು. ಕೋಬ್ಬನ್ ಪಾಮರ್‌ನಂತೆಯೇ ಊಳಿಗಮಾನ್ಯ ವಿರೋಧಿ ಮತ್ತು ಮಧ್ಯಮ ವರ್ಗದ ಕ್ರಾಂತಿ ಎಂಬ ಸಿದ್ಧಾಂತವನ್ನು ಒಪ್ಪುವುದಿಲ್ಲ. ಇಲ್ಲಿ ಚರ್ಚೆಗೆ ಬರುವ ವಸ್ತುಗಳೆಂದರೆ ಊಳಿಗಮಾನ್ಯ ವಿರೋಧಿ ಮತ್ತು ಶ್ರೀಮಂತ ವರ್ಗದ ವಿರೋಧಿ ಹಾಗೂ ಇದು ನಿಜವಾಗಿಯೂ ಮಧ್ಯಮ ವರ್ಗ ಮತ್ತು ಬಂಡವಾಳಶಾಹಿತ್ವದ ಸಮಾಜವಾಗಿ ರೂಪು ಗೊಂಡಿದೆಯೇ ಎನ್ನುವ ಸಂಗತಿ. ಬಾರ್ನೆವ್, ತಿಯರ್ಸ್, ಗಿಸೆಟ್‌ರವರ ಬರಹಗಳಲ್ಲಿ ಕಂಡು ಬರುವ ವರ್ಗ ಹೋರಾಟದ ಕಲ್ಪನೆಯನ್ನು ಕೋಬ್ಬನ್ ಒಪ್ಪುವುದಿಲ್ಲ. ಏಕೆಂದರೆ ಇವನ ಪ್ರಕಾರ ಫ್ರಾನ್ಸಿನ ಕ್ರಾಂತಿ ಆರಂಭವಾಗುವ ಮೊದಲೇ ಊಳಿಗಮಾನ್ಯ ಪದ್ಧತಿ ಕೊನೆಗೊಂಡಿತ್ತು. ಕ್ರಾಂತಿ ಬಂಡವಾಳಶಾಹಿ ವ್ಯವಸ್ಥೆಯ ಕೆಲಸವಲ್ಲ. ಇದು ಮಧ್ಯಮ ವರ್ಗದ ಜನರ ಕೆಲಸ. ಇಲ್ಲಿ ಕೋಬ್ಬನ್ ಬಂಡವಾಳಶಾಹಿ ಮಧ್ಯಮ ವರ್ಗ ಮತ್ತು ಮಧ್ಯಮ ವರ್ಗ ಎಂಬ ವಿಭಜನೆಯನ್ನು ಮಾಡುತ್ತಾನೆ. ಇವನು ಫ್ರಾನ್ಸಿನ ಕ್ರಾಂತಿ ಮಧ್ಯಮ ವರ್ಗದ ಕ್ರಾಂತಿ ಎಂಬುದನ್ನು ಒಪ್ಪುತ್ತಾನೆ. ಆದರೆ ಇವರು ಬಂಡವಾಳಶಾಹಿಗಳಲ್ಲ. ಕೋಬ್ಬನ್‌ನ ಪ್ರಕಾರ ಫ್ರಾನ್ಸಿನ ಕ್ರಾಂತಿ ರಾಜಕೀಯ ಕ್ರಾಂತಿಯಾಗಿ ಸಾಮಾಜಿಕ ಸುಧಾರಣೆಗಳನ್ನು ಜಾರಿಗೆ ತಂದಿತೇ ಹೊರತು ಸಾಮಾಜಿಕ ಕ್ರಾಂತಿಯಾಗಿ ರಾಜಕೀಯ ಸುಧಾರಣೆಗಳನ್ನು ಜಾರಿಗೆ ತರಲಿಲ್ಲ.

ಫ್ರಾನ್ಸಿನ ಕ್ರಾಂತಿಯನ್ನು ಮಧ್ಯಮ ವರ್ಗದ ಕ್ರಾಂತಿ ಎಂಬ ನೆಲೆಯಲ್ಲಿ ಅನೇಕ ವಿದ್ವಾಂಸರು ಚರ್ಚಿಸಿದ್ದಾರೆ. ಲೆಪಬ್ರೆವ್, ಟೋಕಿವೆಲ್ಲೆ, ಅಲ್ಬರ್ಟ್ ಸಬೂಲ್ ಮುಂತಾದ ವಿದ್ವಾಂಸರು ಮಧ್ಯಮ ವರ್ಗದ ಕ್ರಾಂತಿಯ ಸ್ವರೂಪದ ಕುರಿತು ಚರ್ಚೆ ನಡೆಸಿದ್ದಾರೆ. ಮಧ್ಯಮ ವರ್ಗವು ಫ್ರಾನ್ಸಿನ ಕ್ರಾಂತಿಯ ಸಂದರ್ಭದಲ್ಲಿ ಹುಟ್ಟಿದ ವರ್ಗವಲ್ಲ. ಅದಕ್ಕೆ ಅನೇಕ ವರ್ಷಗಳ ಇತಿಹಾಸವಿದೆ. ಆದರೆ ೧೭೮೯ರಲ್ಲಿ ನಡೆದ ರಾಜಕೀಯ ವಿದ್ಯಮಾನಗಳು ಮಧ್ಯಮ ವರ್ಗ ತನ್ನ ಹಕ್ಕನ್ನು ಪ್ರತಿಪಾದಿಸುವಂತೆ ಪ್ರಚೋದನೆ ನೀಡಿತು. ಇಲ್ಲೂ ಶ್ರೀಮಂತ ಮಧ್ಯಮ ವರ್ಗ ಮತ್ತು ಕೆಳಮಧ್ಯಮ ವರ್ಗ ಎಂದು ವಿಂಗಡನೆ ಮಾಡಬೇಕಾಗುತ್ತದೆ. ಕೆಳಮಧ್ಯಮ ವರ್ಗ ಸಾಮಾನ್ಯ ವರ್ಗದೊಡನೆ ಸೇರಿಕೊಂಡರೆ, ಶ್ರೀಮಂತ ಮಧ್ಯಮ ವರ್ಗ ನೊಬಿಲಿಟಿಯ ಸ್ಥಾನಮಾನಕ್ಕೆ ಹಾತೊರೆಯುತ್ತಿತ್ತು. ಮಧ್ಯಮ ವರ್ಗ ಸಂಪತ್ತನ್ನು ಹೊಂದಿದ್ದರೂ ಅಧಿಕಾರವನ್ನು ಹೊಂದಿರಲಿಲ್ಲ. ಶ್ರೀಮಂತ ವರ್ಗ ಅಧಿಕಾರವನ್ನು ಹೊಂದಿದ್ದು, ಸಾಕಷ್ಟು ಸಂಪತ್ತು ಇರಲಿಲ್ಲ. ಇದೇ ಫ್ರಾನ್ಸಿನಲ್ಲಿ ಅಸಮಾನತೆ ಉಂಟಾಗಲು ಪ್ರಮುಖ ಕಾರಣ. ೧೮ನೆಯ ಶತಮಾನದಲ್ಲಿ ಮಧ್ಯಮ ವರ್ಗ ಫ್ರಾನ್ಸಿನ ಹಣಕಾಸು, ವಾಣಿಜ್ಯ ಮತ್ತು ಕೈಗಾರಿಕೆಗಳ ಮೇಲೆ ಹಿಡಿತವನ್ನು ಸಾಧಿಸಿತ್ತು. ಅದು ತತ್ವಜ್ಞಾನಿಗಳ ಪ್ರಭಾವದಿಂದಾಗಿ ತಮ್ಮ ಬೇಡಿಕೆಗಳನ್ನು ಬಲವಾಗಿ ಪ್ರತಿಪಾದಿಸತೊಡಗಿತು.

೧೭೮೯ರಲ್ಲಿ ರಾಷ್ಟ್ರೀಯ ಸಭೆ ರಚನೆಗೊಂಡ

# ಸಭ್ಯ ಸುಶಿಕ್ಷಿತ ನಾಗರಿಕರು



ಹೀಗೆ, ಇಷ್ಟೆಲ್ಲ ನಡೆದ ಮೇಲೂ ಈ ನಂತರವೂ
ಮಣ್ಣು ನೆತ್ತರಲಿ ನೆಂದು ಕಮಟು ಒಕ್ಕುವಾಗಲೂ
ಪ್ರೀತಿ–ಸ್ನೇಹಗಳು ಅಪಮಾನದಲಿ ತತ್ತರಿಸುವಾಗಲೂ
ಇದ್ದೇವೆ ನಾವು ತದೇಕ ಮಗ್ನತೆಯಲಿ
ಮಾಲ್‌ಗಳ ಮುಚ್ಚಿದ ಬಾಗಿಲುಗಳ ಮಾಯಾಲೋಕದಲಿ
ಕೊಳ್ಳುತ್ತ ಕೊಳ್ಳುತ್ತ ಎಲ್ಲವನೂ ಹರಾಜಿಗಿಡುವ
ಪಿಶಾಚ ಉನ್ಮಾದದಲಿ
ನಾವು... ಸಭ್ಯ ಸುಶಿಕ್ಷಿತ ನಾಗರಿಕರು

ಅಭಿವೃದ್ಧಿಯ ಮಂತ್ರದಂಡಕೆ ಮೆದುಳ ಅಡವಿಟ್ಟವರು
ರೆಕ್ಕೆ ತೋಯಿಸಿ ಕಾಡಿನ ಬೆಂಕಿ ನಂದಿಸಿದ
ಗುಬ್ಬಿಯ ಕಥೆ ಕೇಳಿ... ನಾವೇನು ಮಾಡಬಲ್ಲೆವು ?
ಕಲಿತಿದ್ದೇವೆ ಉರು ಹೊಡೆಯಲು
ಬುದ್ಧಿಗೆ ಬಿರಡೆ ಹಾಕಿ ಗೋಣು ಅಲ್ಲಾಡಿಸಲು
ನಾವು... ಸಭ್ಯ ಸುಶಿಕ್ಷಿತ ನಾಗರಿಕರು

ನಂಬುತ್ತೇವೆ ನೋಡುತ್ತೇವೆ
ಈರ್ಷೆಯ ವ್ಯಂಗ್ಯದ ಮದದ ಉರುವಣೆಯ
ನಿತ್ಯ ನಾಟಕದ ಅಧಿಕಾರದಾಟದಲಿ
ತ್ರಿವರ್ಣ ಧ್ವಜ ಹರಿದು ಕೈವಸ್ತ್ರ ಮಾಡಿಕೊಂಡವರ
ದೇಶಭಕ್ತಿಯ ಉಬ್ಬಳಿಕೆಗಳನು
'ಹರಿ ಸರ್ವೋತ್ತಮ' ಎನ್ನದಿರೆ ಮೆಟ್ಟಿ ಸೀಳುವೆನೆಂಬ
ನಾರಸಿಂಹಾವತಾರಕೆ ಕಾಯಿ ಕರ್ಪೂರ ಹಿಡಿದು
ಮತ್ತೂ ಹುಟ್ಟಿದರೆ ಪ್ರಶ್ನೆಗಳು, ಮನಃಶಾಂತಿಗಿದೆ
ಹರಳು ವಾಸ್ತು ಜ್ಯೋತಿಷ್ಯ ಹೈಟೆಕ್ ಯೋಗ
ಮನೆ ಬಾಗಿಲಿಗೇ ಗಂಗೋದಕ ಪ್ರಸಾದ
ಎಷ್ಟೆಷ್ಟು ರೇಟೋ ಅಷ್ಟಷ್ಟು ಪುಣ್ಯ
ನಾವು... ಸಭ್ಯ ಸುಶಿಕ್ಷಿತ ನಾಗರಿಕರು

ಕಾದಿದ್ದೇವೆ ಅನ್ಯಗ್ರಹ ಜೀವಗಳಂತೆ
ನಮ್ಮ ಗುರುತಿಗೆ ನಮಗೇ ಗುರುತು ಪತ್ರ
ಗಾಂಧಿ ಸತ್ತ ನಾಡೀಗ ಗಾಂಧಿ ಚಿತ್ರದ ನೋಟಿನ
ಹಂಗು ನೂಲು ಹರಿದು... ಎಲ್ಲಕ್ಕೂ
ಅನುಮತಿಗೆ ಕಾಯುತ್ತ...
ಬೇಸರವೇ ? ನರನಾಡಿ ಹುರುಪಿಗೆ
ಸರಬರಾಜಾಗುತ್ತಿವೆ ದ್ವೇಷದ ಪ್ಯಾಕೇಜ್‌ಗಳು
ಓಹ್ ! ಅಚ್ಛೇ ದಿನ್ ಅಬ್ ಆ ಚುಕಾ ಹೈ ಹಮಾರೇ ಪಾಸ್
ಹಮ್ ಖುಷ್ ತೊ ಹೂಂ. ನಾವು... ಸಭ್ಯ ಸುಶಿಕ್ಷಿತ ನಾಗರಿಕರು

**ಡಾ॥ ವಿನಯಾ ಒಕ್ಕುಂದ, 'ನೆಮ್ಮದಿ', ನಂ. ೧೨೪, ಸಿ.ಐ.ಟಿ.ಬಿ. ಕಾಲೋನಿ, ಶ್ರೀನಗರ, ಧಾರವಾಡ – ೫೮೦ ೦೦೩**

ನಂತರ ಸಂವಿಧಾನವನ್ನು ರಚಿಸಲಾಯಿತು. ೧೭೯೧ರ ಸಂವಿಧಾನವನ್ನು ಮಧ್ಯಮ ವರ್ಗದ ಸಂವಿಧಾನ ಎಂಬ ಹೆಸರಿನಿಂದ ಕರೆಯಲಾಯಿತು. ಏಕೆಂದರೆ ಸಂವಿಧಾನವನ್ನು ತಮ್ಮ ಹಿತಾಸಕ್ತಿಗಳಿಗನುಗುಣವಾಗಿ ರಚಿಸಿಕೊಳ್ಳಲಾಯಿತು. ೧೭೯೩ ಹಾಗೂ ೧೭೯೫ರ ಸಂವಿಧಾನಗಳೂ ಇದೇ ಮಾದರಿಯದ್ದಾಗಿದ್ದವು. ಮಧ್ಯಮ ವರ್ಗದ ಜನರು ಶ್ರೀಮಂತ ವರ್ಗದಂತೆ ಅಧಿಕಾರ ಮತ್ತು ಸ್ವಾತಂತ್ರ್ಯವನ್ನು ಮಾತ್ರ ಕೇಳುತ್ತಿರಲಿಲ್ಲ. ಶ್ರೀಮಂತ ವರ್ಗದ ಅತಿಯಾದ ಸವಲತ್ತುಗಳನ್ನು ರದ್ದುಪಡಿಸುವುದು ಮತ್ತು ಸಮಾನ ಹಕ್ಕನ್ನು ಪಡೆಯುವುದು ಎರಡೂ ಇವರ ಪ್ರಣಾಳಿಕೆಯಲ್ಲಿ ಸೇರಿಕೊಂಡಿದ್ದವು. ಬಾರ್ನೆವ್ ತನ್ನ 'ಇಂಟ್ರಡಕ್ಷನ್ ಟು ದಿ ಫ್ರೆಂಚ್ ರೆವಲ್ಯೂಷನ್' ಗ್ರಂಥದಲ್ಲಿ ಮಧ್ಯಮ ವರ್ಗದ ಕ್ರಾಂತಿಯ ಕುರಿತು ಚರ್ಚಿಸುವಾಗ ಈ ವಿವರಗಳನ್ನು ಮಂಡಿಸುತ್ತಾನೆ. ಮಧ್ಯಮ ವರ್ಗಕ್ಕೆ ತನ್ನ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಇತರ ವರ್ಗಗಳೊಡನೆ ಹೊಂದಾಣಿಕೆಯನ್ನು ಏರ್ಪಡಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಅದು ಶ್ರೀಮಂತ ವರ್ಗದೊಡನೆ ಅಧಿಕಾರಕ್ಕಾಗಿ ಹೊಂದಾಣಿಕೆ ನಡೆಸಲು ಪ್ರಯತ್ನಿಸುತ್ತಿತ್ತು. ಆದರೆ ಈ ಪ್ರಯತ್ನ ಯಶಸ್ವಿಯಾಗಲಿಲ್ಲ. ಆದ್ದರಿಂದ ಸಾಮಾನ್ಯ ವರ್ಗದ ಜನರ ಬೆಂಬಲವನ್ನು ಪಡೆದುಕೊಂಡಿತು. ಆಲೆನ್ ಡಿ. ಟೋಕಿವೆಲ್ಲೆ ತನ್ನ 'ದಿ ಏನ್‌ಶ್ಯನ್ ರೆಜೀಮ್ ಆ್ಯಂಡ್ ದಿ




ರೆವಲ್ಯೂಷನ್' ಗ್ರಂಥದಲ್ಲಿ ಈ ರೀತಿಯ ಹೊಂದಾಣಿಕೆಯ ಕುರಿತು ವಿವರಿಸುತ್ತಾನೆ.

ಮಧ್ಯಮ ವರ್ಗದ ಕ್ರಾಂತಿಯ ಕುರಿತು ಚರ್ಚಿಸುವಾಗ ಫ್ರಾನ್ಸಿನ ಒಟ್ಟು ವ್ಯವಸ್ಥೆ ಊಳಿಗಮಾನ್ಯ ಪದ್ಧತಿಯಿಂದ ಬಂಡವಾಳಶಾಹಿ ವ್ಯವಸ್ಥೆಗೆ ಪರಿವರ್ತನೆ ಹೊಂದಿರುವ ಬಗೆ ಮುಖ್ಯವೆನಿಸುತ್ತದೆ. ಕಾರ್ಲ್ ಮಾರ್ಕ್ಸ್ ತನ್ನ ಕ್ಯಾಪಿಟಲ್‌ನಲ್ಲಿ ಈ ಪರಿವರ್ತನೆ ಎರಡು ರೀತಿಯಲ್ಲಿ ನಡೆಯುವ ಸಾಧ್ಯತೆಗಳಿವೆ ಎನ್ನುತ್ತಾನೆ. ಒಂದು ಕ್ರಾಂತಿಕಾರಿ ಬದಲಾವಣೆಯಾದರೆ ಇನ್ನೊಂದು ಹೊಂದಾಣಿಕೆಯ ಸ್ವರೂಪದ್ದು. ಹಳೆಯ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಸಂಪೂರ್ಣವಾಗಿ ನಾಶಪಡಿಸಿ ಪರಿವರ್ತನೆ ಹೊಂದುವುದು ಕ್ರಾಂತಿಕಾರಿ ಬದಲಾವಣೆಯಾದರೆ, ಹಳೆಯ ಉತ್ಪಾದನಾ ವ್ಯವಸ್ಥೆಯನ್ನು ಗರ್ಭೀಕರಿಸಿಕೊಂಡು ಅಸ್ತಿತ್ವಕ್ಕೆ ಬರುವ ಹೊಸ ಬಂಡವಾಳಶಾಹಿ ಸಮಾಜ ಹೊಂದಾಣಿಕೆಯ ಸ್ವರೂಪದ್ದಾಗಿರುತ್ತದೆ. ಇದರ ಕುರಿತಾಗಿ ಅನೇಕ ವಾಗ್ವಾದಗಳು ನಡೆದವು. ಆಲ್ಬರ್ಟ್ ಸಬೂಲ್‌ರವರ ಪ್ರಕಾರ "ಫ್ರಾನ್ಸಿನ ಕ್ರಾಂತಿ ಊಳಿಗಮಾನ್ಯ ವ್ಯವಸ್ಥೆಯಿಂದ ಬಂಡವಾಳಶಾಹಿ ವ್ಯವಸ್ಥೆಗೆ ಕ್ರಾಂತಿಕಾರಿ ಬದಲಾವಣೆಯನ್ನು ತಂದಿತು. ಈ ಪರಿವರ್ತನೆಗೆ ಆರ್ಥಿಕ ಕಾರಣಗಳಲ್ಲದೆ ಸಾಮಾಜಿಕ ರಚನೆ, ಸಾಂಸ್ಕೃತಿಕ ಮತ್ತು ಧಾರ್ಮಿಕ ಅಂಶಗಳೂ ಕಾರಣಗಳಾಗುತ್ತವೆ ಎನ್ನುವ ವಾಸ್ತವಾಂಶವನ್ನು ಗಮನಿಸಬೇಕಾಗುತ್ತದೆ."

ಫ್ರಾನ್ಸಿನ ಕ್ರಾಂತಿಯನ್ನು ಸಾಮಾನ್ಯ ವರ್ಗದ ಕ್ರಾಂತಿ ಎಂಬ ರೀತಿಯಲ್ಲೂ ಅಧ್ಯಯನ ನಡೆಸಲಾಗಿದೆ. ಕ್ರಾಂತಿಯ ಆರಂಭದಿಂದ ಡೈರೆಕ್ಟರಿಯ ಆಳ್ವಿಕೆಯವರೆಗೆ, ಅಂದರೆ ರಾಷ್ಟ್ರೀಯ ಸಭೆ, ಶಾಸಕಾಂಗ ಸಭೆ ಮತ್ತು ರಾಷ್ಟ್ರೀಯ ಸಮಿತಿಯ ಆಳ್ವಿಕೆಯ ಸಂದರ್ಭಗಳಲ್ಲಿ ಫ್ರಾನ್ಸಿನ ಸಾಮಾನ್ಯ ವರ್ಗ ನಿರ್ಣಾಯಕ ಪಾತ್ರವನ್ನು ವಹಿಸಿತ್ತು. ಜಾಕೋಬಿನ್ ಕ್ಲಬ್, ಕಾರ್ಡಿಲಿಯರ್ ಕ್ಲಬ್ ಮತ್ತು ಪ್ಯಾರಿಸ್ ಕಮ್ಯೂನ್ ಸಾಮಾನ್ಯ ವರ್ಗದ ಪರವಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಫ್ರಾನ್ಸಿನ ಬಡಜನರನ್ನು ಸಾನ್‌ಸ್ಕಿಲ್ಯೋಟ್ಸ್

ಎಂಬ ಹೆಸರಿನಿಂದ ಕರೆಯಲಾಗಿದೆ. ಇದು ಸಾನ್‌ಸ್ಕಿಲ್ಯೋಟಿಸಂ ಎಂಬ ಸಿದ್ಧಾಂತವಾಗಿ ರೂಪುಗೊಂಡಿತು. ಇದರಲ್ಲಿ ರೈತರು, ಕೈಗಾರಿಕಾ ಕಾರ್ಮಿಕರು, ಕುಶಲಕರ್ಮಿಗಳು, ನಗರವಾಸಿಗಳು, ಕೆಳಮಧ್ಯಮ ವರ್ಗದ ಜನರು, ಸಣ್ಣಪುಟ್ಟ ವ್ಯಾಪಾರಿ ಮಳಿಗೆಗಳನ್ನು ಹೊಂದಿದವರು ಇವರೆಲ್ಲಾ ಸೇರಿಕೊಂಡಿದ್ದರು. ಇವರೆಲ್ಲರನ್ನೂ ಒಟ್ಟಾಗಿ ಸಾನ್‌ಸ್ಕಿಲ್ಯೋಟ್ಸ್ ಎಂದು ಕರೆಯಲಾಗಿದೆ. ಜಾರ್ಜ್ ರೂದೆ ತನ್ನ 'ಕ್ರೌಡ್ ಇನ್ ದಿ ಫ್ರೆಂಚ್ ರೆವಲ್ಯೂಷನ್' ಗ್ರಂಥದಲ್ಲಿ ಸಾಮಾನ್ಯ ವರ್ಗದ ಭಾಗವಹಿಸುವಿಕೆಯ ಕುರಿತು ಕೂಲಂಕಷವಾಗಿ ವಿವರಿಸಿದ್ದಾನೆ. ರೂದೆಯ ಪ್ರಕಾರ ೧೭೮೯ರ ಕ್ರಾಂತಿ ಸಾಮಾನ್ಯ ವರ್ಗದ ಜನರ ಕ್ರಾಂತಿ. ಇವರ ಮುಖ್ಯ ಬೇಡಿಕೆಯೆಂದರೆ ನ್ಯಾಯ, ಭೂಮಿ ಹಾಗೂ ಆಹಾರ. ಮಧ್ಯಮ ವರ್ಗದ ಜನರಿಗೆ ತಮ್ಮ ಸಮಸ್ಯೆಗಳಿಗೆ ಸ್ಪಂದಿಸುವ ಮತ್ತು ಪರವಾಗಿ ಹೋರಾಡುವ ಜನವರ್ಗದ ಅಗತ್ಯವಿತ್ತು. ಇದಕ್ಕಾಗಿಯೇ ಸಾನ್‌ಸ್ಕಿಲ್ಯೋಟ್ಸ್‌ನೊಡನೆ ಹೊಂದಾಣಿಕೆ ಮಾಡಿಕೊಂಡಿತು. ಮಧ್ಯಮ ವರ್ಗ ಫ್ರಾನ್ಸ್ ಅನ್ನು ಸುಧಾರಿಸುವ ಪ್ರಯತ್ನವನ್ನು ಮಾಡತೊಡಗಿತು. ಸಾರ್ವಜನಿಕರ ಹಿತಾಸಕ್ತಿಗಳನ್ನು ಕಾಪಾಡುವ ಬ್ಯಾನರ್‌ನಡಿ ತನ್ನ ಕಾರ್ಯವನ್ನು ಆರಂಭಿಸಿತು. ಇದರಿಂದಾಗಿಯೇ ಫ್ರಾನ್ಸ್‌ನ ಸಾಮಾನ್ಯ ವರ್ಗ ಮಧ್ಯಮ ವರ್ಗದ ಕಡೆಗೆ ಹೆಚ್ಚು ಆಕರ್ಷಿತವಾಯಿತು. ಆದರೆ ನೊಬಿಲಿಟಿಯಂತೆಯೇ ಮಧ್ಯಮ ವರ್ಗವೂ ಅಧಿಕಾರದಲ್ಲಿ ಸಮಪಾಲು ಪಡೆಯುವುದಕ್ಕೋಸ್ಕರವೇ ಹೋರಾಟ ನಡೆಸುತ್ತಿದ್ದುದು ಸಾನ್‌ಸ್ಕಿಲ್ಯೋಟ್ಸ್‌ಗೆ ಆರಂಭಿಕ ಹಂತದಲ್ಲಿ ತಿಳಿಯಲಿಲ್ಲ. ತಿಳಿಯುವಷ್ಟು ಹೊತ್ತಿಗೆ ಮಧ್ಯಮ ವರ್ಗ ಹಳೆಯ ವ್ಯವಸ್ಥೆಯ ಊಳಿಗಮಾನ್ಯ ಪದ್ಧತಿಯಷ್ಟೇ ಬಲಿಷ್ಠವಾಗಿ ಸಂಘಟನೆಗೊಂಡಿತ್ತು.

ಫ್ರಾನ್ಸಿನಲ್ಲಿ ಕ್ರಾಂತಿ ಯಶಸ್ವಿಯಾಗುವುದಕ್ಕೆ ಮೂಲ ಕಾರಣ ಜನಸಾಮಾನ್ಯರ ಹೋರಾಟ. ಬ್ಯಾಸ್ಟಿಲ್ ಸೆರೆಮನೆಯ ಪತನ ಮತ್ತು ವರ್ಸೆಲ್ಸ್ ಮೇಲೆ ಮಹಿಳೆಯರ ಮುತ್ತಿಗೆ ಅಥವಾ ರೊಟ್ಟಿಯ ಹಗರಣ ಇದಕ್ಕೆ ಉತ್ತಮ ನಿದರ್ಶನಗಳು. ಇ. ಎಲ್. ಐನ್‌ಸ್ಟೈನ್‌ನ ಪ್ರಕಾರ ಫ್ರಾನ್ಸಿನ ಕ್ರಾಂತಿಯ ರೂವಾರಿಗಳು ಜನಸಾಮಾನ್ಯರು ಮತ್ತು ಈ ಕ್ರಾಂತಿಯಲ್ಲಿ ಮಧ್ಯಮ ವರ್ಗ ಪ್ರಮುಖ ಪಾತ್ರವನ್ನು ವಹಿಸಲಿಲ್ಲ. ಕಾರ್ಲ್ ಮಾರ್ಕ್ಸ್ ಈ ಕ್ರಾಂತಿಯನ್ನು ವರ್ಗ ಹೋರಾಟ ಅಥವಾ ಆಂತರಿಕ ಕಲಹವನ್ನಾಗಿ ವಿವರಿಸಿದ್ದಾನೆ. ಇಲ್ಲಿ ವರ್ಗ ಹೋರಾಟ ಸಾನ್‌ಸ್ಕಿಲ್ಯೋಟ್ಸ್ ಮತ್ತು ಬಂಡವಾಳಶಾಹಿ ಮಧ್ಯಮ ವರ್ಗದ ನಡುವೆ ನಡೆಯಿತು. ಮಾರ್ಕ್ಸ್ ತನ್ನ 'ದಿ ಸಿವಿಲ್ ವಾರ್ ಇನ್ ಫ್ರಾನ್ಸ್' ಎಂಬ ಲೇಖನದಲ್ಲಿ ಈ ಕುರಿತು ಚರ್ಚಿಸಿದ್ದಾನೆ. ಲೆನಿನ್ ಮಾರ್ಕ್ಸ್‌ನ ವಾದವನ್ನೇ ಮುಂದುವರಿಸುತ್ತಾ 'ಪ್ಯಾರಿಸ್ ಕಮ್ಯೂನ್' ಕಾರ್ಮಿಕ ಕ್ರಾಂತಿಯ ಪ್ರಯತ್ನದ ಫಲವೆನ್ನುತ್ತಾನೆ. ಇವನ ಪ್ರಕಾರ ಪ್ಯಾರಿಸ್ ಕಮ್ಯೂನ್ ಫ್ರಾನ್ಸಿನ




ಕ್ರಾಂತಿಯ ದಿಕ್ಕನ್ನೇ ಬದಲಾಯಿಸಿತು ಮತ್ತು ೧೯೧೭ರಲ್ಲಿ ರಷ್ಯಾದಲ್ಲಿ ಕಮ್ಯುನಿಸ್ಟ್ ಸರ್ಕಾರ ಅಸ್ತಿತ್ವಕ್ಕೆ ಬರುವುದಕ್ಕೆ ಫ್ರಾನ್ಸಿನ ಕ್ರಾಂತಿಕಾರಿ ಧೋರಣೆಗಳೇ ಪ್ರಮುಖ ಕಾರಣ. ಸಾನ್‌ಸ್ಕಿಲ್ಯೋಟಿಸಂನ ತತ್ವಗಳು ಮಾರತ್, ಹಿಬರ್ಟ್, ಬೇಬ್ಯುಪ್, ಬ್ಲಾಂಕಿ ಮತ್ತು ಲೆನಿನ್ ಇವರುಗಳ ಸಿದ್ಧಾಂತಗಳಲ್ಲಿ ಮುಂದುವರಿಯಿತು.

ಸಾನ್‌ಸ್ಕಿಲ್ಯೋಟ್ಸ್‌ನ ಬೆಂಬಲವನ್ನು ಪಡೆದುಕೊಂಡು ಅಧಿಕಾರ ಗಳಿಸಿಕೊಂಡ ಮಧ್ಯಮ ವರ್ಗ ನಂತರ ತನ್ನ ಹಿಂದಿನ ಧೋರಣೆಯನ್ನು ಬದಲಾಯಿಸಿಕೊಂಡಿತು. ಸಾಮಾನ್ಯವರ್ಗದ ಜನರ ಸಮಸ್ಯೆಗಳ ಕುರಿತು ಯಾವ ನಿರ್ಧಾರವನ್ನೂ ತೆಗೆದುಕೊಳ್ಳಲಿಲ್ಲ. ರೊಬಿಸ್‌ಪಿಯರ್‌ನ ಮರಣದ ನಂತರ ಸಾನ್‌ಸ್ಕಿಲ್ಯೋಟ್ಸ್ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂತು. ಇದನ್ನು ರಾಷ್ಟ್ರೀಯ ಸಮಿತಿಯ ಆಳ್ವಿಕೆಯ ಕೊನೆಯ ಅವಧಿಯಲ್ಲಿ ಗಮನಿಸಬಹುದು. ಇದನ್ನು ಥರ್ಮಿಡೋರಿಯನ್ ಪ್ರತಿಕ್ರಿಯೆ ಎಂಬುದಾಗಿ ಕರೆಯಲಾಗಿದೆ. ಜಾಕೋಬಿನ್ ಆಳ್ವಿಕೆ ಕೊನೆಯಾದ ನಂತರ ಮಧ್ಯಮ ವರ್ಗದ ಪುನರಾಗಮನ ಸಾನ್‌ಸ್ಕಿಲ್ಯೋಟ್ಸ್‌ಗೆ ಆತಂಕದ ಪರಿಸ್ಥಿತಿಯನ್ನು ಮೂಡಿಸಿತು. ಇವರ ಪ್ರತಿಕ್ರಿಯೆಯನ್ನು ಸುಲಭವಾಗಿ ಹಿಮ್ಮೆಟ್ಟಿಸಿದ ಮಧ್ಯಮ ವರ್ಗ ಮತ್ತೊಮ್ಮೆ ಫ್ರಾನ್ಸಿನಲ್ಲಿ ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲು ಆರಂಭಿಸಿತು.

ಜಾರ್ಜ್ ಲೆಪಬ್ರೆವ್ ತನ್ನ 'ಸೋಶಲಿಸ್ಟ್ ಹಿಸ್ಟರಿ ಆಫ್ ದಿ ಫ್ರೆಂಚ್ ರೆವಲ್ಯೂಷನ್' ಗ್ರಂಥದಲ್ಲಿ ಫ್ರಾನ್ಸಿನ ಕ್ರಾಂತಿಯನ್ನು ರೈತರ ಹೋರಾಟ ಎಂಬುದಾಗಿ ಕರೆಯುತ್ತಾನೆ. ಲೆಪಬ್ರೆವ್ ಮಾರ್ಕ್ಸಿಸ್ಟ್ ಅಧ್ಯಯನ ವಿಧಾನವನ್ನು ಅಳವಡಿಸಿಕೊಂಡಿದ್ದ. ಇವನ ಪ್ರಕಾರ ಫ್ರಾನ್ಸಿನ ಕ್ರಾಂತಿಗೆ ಪ್ರಮುಖ ಕಾರಣ ಆರ್ಥಿಕ ಅಂಶಗಳು. ಇವನು ಫ್ರಾನ್ಸಿನ ಕೃಷಿಕರ ಮತ್ತು ನಗರವಾಸಿಗಳ ಜೀವನಕ್ರಮದ ಕುರಿತು ಅಧ್ಯಯನ ನಡೆಸಿದ್ದಾನೆ. ೧೭೮೯ರಿಂದ ೧೭೯೨ರವರೆಗೆ ನಡೆದ ರೈತ ಚಳವಳಿಗಳು ಬಂಡವಾಳ ಕ್ರೋಢೀಕರಣದ ಉದ್ದೇಶ ಹೊಂದಿದ್ದ ಮಧ್ಯಮ ವರ್ಗಕ್ಕೆ ಸಹಕಾರಿಯಾಯಿತು ಎನ್ನುತ್ತಾನೆ. ಸಾನ್‌ಸ್ಕಿಲ್ಯೋಟ್ಸ್ ಊಳಿಗಮಾನ್ಯ ಪದ್ಧತಿಯನ್ನು ರದ್ದುಗೊಳಿಸುವುದಕ್ಕಾಗಿ ಮಧ್ಯಮ ವರ್ಗದ ಜತೆ ಸೇರಿಕೊಂಡಿತು. ಲೆಪಬ್ರೆವ್‌ನ ಪ್ರಕಾರ ಫ್ರಾನ್ಸಿನ ಕ್ರಾಂತಿಯ ಹೃದಯದಲ್ಲಿರುವುದು ರೈತರ ಕ್ರಾಂತಿ. ಊಳಿಗಮಾನ್ಯ ಪದ್ಧತಿಯನ್ನು ರದ್ದುಗೊಳಿಸಿದರೂ ರೈತರಿಗೆ ಭೂಮಿಯನ್ನು ನೀಡಲಿಲ್ಲ. ಇಲ್ಲಿ ಮುಖ್ಯವಾಗಿ ನೋರ್ಡ್ ರೈತ ಹೋರಾಟವನ್ನು ಉದಾಹರಿಸಬಹುದು. ಇದರ ಉದ್ದೇಶ ಊಳಿಗಮಾನ್ಯ ವ್ಯವಸ್ಥೆಯನ್ನು ರದ್ದುಗೊಳಿಸುವುದು ಮತ್ತು ಶ್ರೀಮಂತ ವರ್ಗದ ಜನರ ಅಧಿಕಾರವನ್ನು ಕುಂಠಿತಗೊಳಿಸುವುದು. ಆದರೆ ರೈತ ಹೋರಾಟಗಳು ಮಧ್ಯಮ ವರ್ಗದ ಇಬ್ಬಗೆಯ ನೀತಿಯಿಂದಾಗಿ ಹೆಚ್ಚಿನ ಯಶಸ್ಸನ್ನು ಪಡೆಯಲಿಲ್ಲ.

ಫ್ರಾನ್ಸಿನ ಕ್ರಾಂತಿಯ ಕುರಿತಾದ ಈ ಎಲ್ಲ ಅಧ್ಯಯನಗಳು ಕ್ರಾಂತಿಯ ಸ್ವರೂಪವನ್ನು ಅರ್ಥೈಸಿಕೊಳ್ಳುವುದಕ್ಕೆ ಹಾಗೂ ಹೊಸ ದೃಷ್ಟಿಕೋನದಿಂದ ನೋಡುವುದಕ್ಕೆ ಸಹಕಾರಿಯಾಗುತ್ತವೆ. ಫ್ರಾನ್ಸಿನ ಕ್ರಾಂತಿ ತನ್ನ ನಡೆಯಲ್ಲಿ ಪಡೆದುಕೊಂಡ ತಿರುವುಗಳು, ತಿರುವುಗಳಿಗೆ ಕಾರಣವಾದ ಸಂದರ್ಭಗಳು ಹಾಗೂ ಅದರ ಪರಿಣಾಮಗಳು ವಿವಿಧ ಸೈದ್ಧಾಂತಿಕ ಹಿನ್ನೆಲೆಗಳಿಂದ ಕೂಡಿದ ಚರಿತ್ರೆ ರಚನೆಗೆ ಕಾರಣವಾದವು. ಫ್ರಾನ್ಸಿನ ಕ್ರಾಂತಿಯನ್ನು ಯಾವುದೇ ಒಂದು ವರ್ಗಕ್ಕೆ ಸೀಮಿತಗೊಳಿಸಿ ನೋಡಲು ಸಾಧ್ಯವಾಗುವುದಿಲ್ಲ. ಶ್ರೀಮಂತ ವರ್ಗ, ಮಧ್ಯಮ ವರ್ಗ ಹಾಗೂ ಕೆಳವರ್ಗಗಳು ಪರಸ್ಪರ ಸಂಘರ್ಷ ಹಾಗೂ ಹೊಂದಾಣಿಕೆಯ ತಂತ್ರವನ್ನು ಅನುಸರಿಸುತ್ತಲೇ ಕ್ರಾಂತಿಯನ್ನು ಮುನ್ನಡೆಸಿದವು. ಆರಂಭದ ಕ್ರಾಂತಿ ಏಳು – ಬೀಳುಗಳೊಂದಿಗೆ ಮುಂದುವರಿಯುತ್ತಾ ಮತ್ತಷ್ಟು ಕ್ರಾಂತಿಗಳನ್ನು ಹುಟ್ಟುಹಾಕಿತು. ಅದಕ್ಕೆ ಉತ್ತಮ ಉದಾಹರಣೆಗಳೆಂದರೆ ೧೮೩೦ರ ಜುಲೈ ಕ್ರಾಂತಿ ಹಾಗೂ ೧೮೪೮ರ ಫೆಬ್ರವರಿ ಕ್ರಾಂತಿ. ಅದೇ ರೀತಿ ಇಟಲಿ ಹಾಗೂ ಜರ್ಮನಿ ದೇಶಗಳ ಏಕೀಕರಣಕ್ಕೂ ಫ್ರಾನ್ಸ್‌ನಲ್ಲಿ ನಡೆದ ಕ್ರಾಂತಿಗಳು ಹಾಗೂ ಅದರ ಪರಿಣಾಮಗಳು ಮೂಲ ಕಾರಣವಾದವು. ಪದೇ ಪದೇ ಮರುಹುಟ್ಟು ಪಡೆಯುತ್ತಿದ್ದ ಚಕ್ರಾಧಿಪತ್ಯ ಕೊನೆಗೊಂಡು ಗಣತಂತ್ರ ವ್ಯವಸ್ಥೆ ಅಸ್ತಿತ್ವಕ್ಕೆ ಬರುವಲ್ಲಿಯವರೆಗೂ ಕ್ರಾಂತಿ ವಿರಮಿಸಲಿಲ್ಲ. ಹೀಗಾಗಿ ಫ್ರಾನ್ಸ್ ದೇಶದಲ್ಲಿ ೧೮ ಮತ್ತು ೧೯ನೆಯ ಶತಮಾನಗಳಲ್ಲಿ ಕಾಣಿಸಿಕೊಂಡ ಕ್ರಾಂತಿಗಳು ಜಾಗತಿಕ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದಿವೆ. ಇವು ಮತ್ತೆ ಮತ್ತೆ ಮರು ಓದಿಗೆ ಒಳಗಾಗುತ್ತಾ ವರ್ತಮಾನದ ಬಂಡವಾಳಕೇಂದ್ರಿತ ಪ್ರಭುತ್ವ ರಚನೆಗಳ ನಿರಚನೆಗೆ ಬೇಕಾದ ಪರ್ಯಾಯ ಮಾದರಿಗಳನ್ನು ಕಟ್ಟಿಕೊಡುತ್ತಿವೆ.

**ಡಾ॥ ಕೆ. ಮೋಹನ್‌ಕೃಷ್ಣ ರೈ**
ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ ವಿದ್ಯಾರಣ್ಯ – ೫೮೩ ೨೭೬
ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ







**ಬಿಂಬ** (ಲೇಖನಗಳ ಸಂಗ್ರಹ)

*ಡಾ|| ಬಿ. ಎಸ್. ಪ್ರಣತಾರ್ತಿಹರನ್*

**ಪುಟ : iv + xxiv + ೩೮೦ = ೪೦೮**

**ಬೆಲೆ : ರೂ. ೨೫೦**

**ತಾರಾ ಪ್ರಿಂಟಿಂಗ್ ಪ್ರೆಸ್ ಅಂಡ್ ಪಬ್ಲಿಷಿಂಗ್ ಹೌಸ್** # ೨೮೫/ಎಫ್–೬ ೫ನೇ ವೆಸ್ಟ್ ಕ್ರಾಸ್ ಉತ್ತರಾದಿ ಮಠದ ರಸ್ತೆ, ಮೈಸೂರು–೪

*'ಬಿಂಬ' – ಡಾ|| ಪ್ರಣತಾರ್ತಿಹರನ್ ಅವರ ಲೇಖನಗಳ ಸಂಗ್ರಹಗಳುಳ್ಳ ಕೃತಿ. ಈ ಕೃತಿಯಲ್ಲಿ ಲೇಖಕರು ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ವಿಶಿಷ್ಟ ವಿಚಾರಗಳನ್ನೊಳಗೊಂಡ ಲೇಖನಗಳು, ಮುನ್ನುಡಿಗಳು ಮತ್ತು ಅವರ ಕ್ಷೇತ್ರಕಾರ್ಯದಲ್ಲಿನ ಅಪ್ರಕಟಿತವಾದ ಅನುಭವಗಳ ವಿವರಗಳು ಅಡಕವಾಗಿವೆ. ಅವುಗಳಲ್ಲಿ ಬಹುಭಾಷಿತ ದೇಶ ಭಾರತದ ಸಂಸ್ಕೃತಿ ಒಂದೇ ಎಂಬ ಹೇಳಿಕೆಗೆ ಪೂರಕವಾಗಿರುವಂತೆ ಲೇಖಕ ಎನ್. ಎಸ್. ಪ್ರಸಾದ ಅನುವಾದಿಸಿರುವ 'ಒಂದು ಮರ ನೂರು ಸ್ವರ' ಎಂಬ ಅನುವಾದಿತ ಕಥಾಸಂಕಲನದಲ್ಲಿನ ಕಥೆಗಳು, ಈ ದೇಶದ ಸಂಸ್ಕೃತಿ, ಸಂಪ್ರದಾಯ, ಆಚಾರ–ವಿಚಾರಗಳು ಮೇಲ್ನೋಟಕ್ಕೆ ಭಿನ್ನವೆನಿಸಿದರೂ ಅವುಗಳ ಆಂತರ್ಯದಲ್ಲಿ ಪ್ರಾದೇಶಿಕತೆಯ ಚೌಕಟ್ಟನ್ನು ಮೀರಿ ಗುರಿ–ಉದ್ದೇಶ ಒಂದೇ ಆಗಿದೆ – ಎಂಬ ಅರ್ಥವನ್ನು ಧ್ವನಿಸುತ್ತವೆ ಎಂಬ ನೆಲೆಯಲ್ಲಿರುವ ಲೇಖನ, ಇವುಗಳಲ್ಲದೇ ಇನ್ನೂ ಹಲವಾರು ಮಹತ್ವದ ಲೇಖನಗಳು ಈ ಕೃತಿಯಲ್ಲಿವೆ. ಓದುಗನನ್ನು ಗಾಢವಾಗಿ ಆವರಿಸಿ, ಚಿಂತನೆಗೀಡುಮಾಡುವಂಥ ಲೇಖನಗಳುಳ್ಳ ಈ ಕೃತಿಯನ್ನು ಓದಿ ಮುಗಿಸಿದಾಗ ನಮ್ಮ ಗಮನಕ್ಕೆ ಬಾರದ ಅನೇಕ ವಿಚಾರಗಳೊಂದಿಗೆ ಸ್ವಯಂ ನಾವೇ ಮುಖಾಮುಖಿಯಾದಂಥ ಅನುಭವವಾಗುತ್ತದೆ.*

– ***ಕಲ್ಲೇಶ್ ಕುಂಬಾರ್,*** *ಹಾರೂಗೇರಿ, ಬೆಳಗಾವಿ*

**ಮುಸ್ಲಿಂ ಮಹಿಳೆಯರು ಮತ್ತು ತಲಾಖ್**

*ಮೂಲ ಮರಾಠಿ : ಸಯ್ಯದ್ ಮೆಹಬೂಬ್ ಶಾ ಖಾದ್ರಿ, ಕನ್ನಡಕ್ಕೆ : ಡಾ|| ಸಾರಾ ಅಬೂಬಕ್ಕರ್*

**ಪುಟ : ೧೨೭** **ಬೆಲೆ : ರೂ. ೧೮೦**

**ಚಂದ್ರಗಿರಿ ಪ್ರಕಾಶನ,** ಮಂಗಳೂರು




*ಬಾಯಿ ಮಾತಿನ ಮೂಲಕ ತಲಾಖ್ ಹೇಳುವ ಗಂಡಸರು ಮುಸ್ಲಿಂ ಮಹಿಳೆಯರ ಮೇಲೆ ನಡೆಸುವ ದೌರ್ಜನ್ಯ. ಈ ಕೃತಿಯ ಮೂಲ ಲೇಖಕರಾದ ಸಯ್ಯದ್ ಮೆಹಬೂಬ್ ಶಾ ಖಾದ್ರಿ ಪೂನಾದ ನಿವಾಸಿ. ಇವರ ೧೯ ವರ್ಷದ ತಂಗಿ ಇಬ್ಬರು ಗಂಡು ಮಕ್ಕಳ ಸಮೇತ ತಲಾಖ್‌ನಿಂದ ವಿಚ್ಛೇದನಗೊಂಡು ತವರಿಗೆ ಹಿಂದಿರುಗಿದಾಗ ಇನ್ನಾವ ಮುಸ್ಲಿಂ ಮಹಿಳೆಗೂ ಈ ರೀತಿಯ ತೊಂದರೆಯಾಗಬಾರದೆಂದು ಕೆಲವು ಸಮಾನ ಮನಸ್ಕರು ಜೊತೆಗೂಡಿ ಪೂನಾದಲ್ಲಿ 'ಮುಸ್ಲಿಂ ಸತ್ಯಶೋಧಕ ಮಂಡಲ' ಎಂಬ ಸಂಘಟನೆಯನ್ನು ಕಟ್ಟಿಕೊಂಡು ಇಂದಿಗೂ ಹೋರಾಡುತ್ತಿದ್ದಾರೆ. ಹೀಗೆ ತಲಾಖ್ ಜೊತೆಗೆ ಮುಸ್ಲಿಂ ಮಹಿಳೆಯರು ಮುಸ್ಲಿಂ ಕಾನೂನುಗಳು ಮತ್ತು ಮುಸ್ಲಿಂ ಪುರುಷರಿಂದ ದೌರ್ಜನ್ಯ ಮತ್ತು ಶೋಷಣೆಗಳಿಗೆ ಒಳಗಾಗುವುದನ್ನು ಲೇಖಕರು ಇಲ್ಲಿ ಕಟ್ಟಿಕೊಟ್ಟಿದ್ದಾರೆ. ನನ್ನ ತಾಯಂದಿರೂ, ಸಹೋದರಿಯರೂ ಅವರ ಸಮಾನ ಹಕ್ಕುಗಳನ್ನು ಪಡೆಯಬೇಕು ಎಂಬುದಾಗಿ ಲೇಖಕರು ಇಲ್ಲಿ ಕರೆ ನೀಡುತ್ತಾರೆ. ಈ ಕೃತಿ ಮೂಲವಾಗಿ ಮರಾಠಿ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟಗೊಂಡು ಜನರ ಅಪಾರ ಗಮನವನ್ನು ಸೆಳೆದಿದ್ದು ಖ್ಯಾತ ಲೇಖಕಿ ಡಾ|| ಸಾರಾ ಅಬೂಬಕ್ಕರ್ ಅವರ ಅನುವಾದದಿಂದ ಕನ್ನಡಕ್ಕೆ ಬಂದಿದೆ.*

– ***ಡಾ|| ಎಂ. ವೆಂಕಟಸ್ವಾಮಿ,*** *ಬನ್ನೇರುಘಟ್ಟ ರಸ್ತೆ, ಬೆಂಗಳೂರು – ೬೮*




**ಸೊಲ್ಲು ಸೊಲ್ಲೆಲ್ಲ ಅಪರಂಜಿ**

*ಡಾ|| ರಂಗಾರೆಡ್ಡಿ ಕೋಡಿರಾಂಪುರ*

**ಪುಟ : x + ೧೮೨** **ಬೆಲೆ : ರೂ. ೧೫೦**

**ನಂದೀಶ, ನೆಲಮನೆ ಪಬ್ಲಿಷಿಂಗ್ ಹೌಸ್,** ನೆಲಮನೆ, ಅವ್ವೇರಹಳ್ಳಿ ಅಂಚೆ, ಕೈಲಾಂಚ ಹೋಬಳಿ, ರಾಮನಗರ ತಾಲ್ಲೂಕು ಮತ್ತು ಜಿಲ್ಲೆ – ೫೬೨೧೫೯

*'ಸೊಲ್ಲು ಸೊಲ್ಲೆಲ್ಲ ಅಪರಂಜಿ' ಎಂಬ ಜನಪದ ತ್ರಿಪದಿಯ ಸಾಲೊಂದನ್ನು ಶೀರ್ಷಿಕೆಯಾಗಿ ಪಡೆದಿರುವ ಈ ಪುಸ್ತಕ ಡಾ|| ರಂಗಾರೆಡ್ಡಿ ಕೋಡಿರಾಂಪುರ ಅವರ ಮೊದಲ ವಿಮರ್ಶಾಸಂಕಲನ. ಸಾಹಿತ್ಯಕ್ಷೇತ್ರದ ಪ್ರಗತಿಪರ ಆಶಯಗಳನ್ನು ಹೇರಿಕೆಯಾಗದಂತೆ ಸಹಜ ವಿಶ್ಲೇಷಣೆಗೆ ಒಳಪಡಿಸುವ ವಿವೇಕವನ್ನುಳ್ಳ ರಂಗಾರೆಡ್ಡಿಯವರ ಅನೇಕ ಲೇಖನಗಳು ಆಸಕ್ತಿದಾಯಕವಾಗಿವೆ. ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳನ್ನು ಪುನರಾವಲೋಕನ ಮಾಡಿರುವ ವಿಧಾನವು ವಿಮರ್ಶೆಗೆ ಹೊಸ ಹೊಳಪು ತರುವ ಪ್ರಾಮಾಣಿಕ ಪ್ರಯತ್ನವಾಗಿದೆ. ಇಂಥ ಪ್ರಯತ್ನದಿಂದ ಆಧುನಿಕ ಪೂರ್ವಸಾಹಿತ್ಯದ ಸಮಕಾಲೀನ ಪ್ರಸ್ತುತತೆಯನ್ನು ಪೂರ್ವಗ್ರಹವಿಲ್ಲದೆ ವಿಶ್ಲೇಷಿಸಿದಂತಾಗಿದೆ. ಮಧ್ಯಕಾಲೀನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮೂರು ದೀರ್ಘ ಲೇಖನಗಳಿವೆ. ಇವುಗಳಲ್ಲಿ ಮೊದಲ ಲೇಖನ ಮಧ್ಯಕಾಲೀನ ಸಾಹಿತ್ಯದಲ್ಲಿ ಯುದ್ಧ ಮತ್ತು ಶಾಂತಿಯಂತೂ ಯುದ್ಧದ ಬಗೆಗಿನ ವಿಪುಲ ಮಾಹಿತಿಯ ಜೊತೆಗೆ ಅನೇಕ ಒಳನೋಟಗಳುಳ್ಳ ಲೇಖನವಾಗಿದೆ. ಹಾಗೆಯೇ ಜಾನಪದ ಲಯ–ಆಶಯ ಮತ್ತು... ಅಸ್ಪೃಶ್ಯತೆ: ಒಂದು ಸಾಮಾಜಿಕ ಸಂವಾದ ಲೇಖನಗಳಲ್ಲಿ ಆ ಕಾಲದ ನಡುಗನ್ನಡ ಸಾಹಿತ್ಯ ಹೊಸ ಬದಲಾವಣೆಗಳಿಗೆ, ಕಾಲದ ಒತ್ತಡಕ್ಕೆ ತೆರೆದುಕೊಳ್ಳುತ್ತಿರುವುದರ ಬಗ್ಗೆ ಸಮಗ್ರ ವಿಶ್ಲೇಷಣೆಯಿದೆ. ಇನ್ನುಳಿದ ಲೇಖನಗಳಲ್ಲಿ ನವೋದಯ, ದಲಿತ–ಬಂಡಾಯ ಧೋರಣೆಯ ಹಿನ್ನೆಲೆಯಲ್ಲಿ ಸಾಹಿತ್ಯದ ಉತ್ತಮಾಂಶಗಳನ್ನು ಹೆಕ್ಕಿ ತೆಗೆಯುವ ಪ್ರಯತ್ನವಿದೆ. ಆರಂಭದ 'ಮಧ್ಯಕಾಲೀನ ಸಾಹಿತ್ಯದಲ್ಲಿ ಯುದ್ಧ...' ಲೇಖನದಿಂದ ಮೊದಲುಗೊಂಡು ಚಾರ್ಲಿ ಚಾಪ್ಲಿನ್ ಅವರ 'ದಿ ಡಿಕ್ಟೇಟರ್' ಚಿತ್ರದ ಕೊನೆಯ ಭಾಷಣ ಯುದ್ಧರಹಿತ ಸಮಾಜ ನಿರ್ಮಾಣದ ಕಡೆ ಇಲ್ಲಿನ ಲೇಖನಗಳ ವ್ಯಾಪ್ತಿಯಿದೆ. ಸಮಸಮಾಜ ನಿರ್ಮಾಣದ ಕನಸಿದೆ.*

– ***ಡಾ|| ಜಿ. ಆರ್. ತಿಪ್ಪೇಸ್ವಾಮಿ,*** ಮೈಸೂರು

**ವಿದುರ ಪರ್ವ**

*ಆಂಗ್ಲ ಮೂಲ : ಉದಯಕುಮಾರ ಹಬ್ಬು , ಕನ್ನಡಕ್ಕೆ : ವಿ. ಗಣೇಶ್*

**ಪುಟ : xxii + ೨೨೬ = ೨೪೮** **ಬೆಲೆ : ರೂ. ೧೬೦**

**ಮಂಗಳ ಪ್ರಕಾಶನ,** ನಂ. ೯೧, ಬಸಪ್ಪ ಬಡಾವಣೆ, ಪಟ್ಟಣಗೆರೆ, ರಾಜರಾಜೇಶ್ವರಿನಗರ, ಬೆಂಗಳೂರು – ೫೬೦ ೦೯೮




*ಶ್ರೀ ಉದಯಕುಮಾರ ಹಬ್ಬು ಅವರು ಆಂಗ್ಲಭಾಷೆಯಲ್ಲಿ ಬರೆದ "ಎಂಡ್ ಆಫ್ ಅನ್ ಎರ" ಎಂಬ ಕಾದಂಬರಿಯನ್ನು ಸಾಗರದ ನಿವೃತ್ತ ಪ್ರಾಂಶುಪಾಲರಾದ ಶ್ರೀ ವಿ. ಗಣೇಶ್ ಅವರು ಕನ್ನಡಕ್ಕೆ "ವಿದುರ ಪರ್ವ" ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ಈ 'ವಿದುರ ಪರ್ವ'ದಲ್ಲಿ ವಿದುರನ ಮೂಲಕ ಇಡೀ ಮಹಾಭಾರತವನ್ನು ಸಂಕ್ಷಿಪ್ತವಾಗಿ ಕಂಡರಿಸಿದ್ದಾರೆ. ರನ್ನನು ಇಡೀ ಮಹಾಭಾರತವನ್ನು "ಸಿಂಹಾವಲೋಕನ" ಕ್ರಮದಲ್ಲಿ ಕಟ್ಟಿಕೊಟ್ಟ ಹಾಗೆ ಇಲ್ಲಿ ಉದಯಕುಮಾರ ಹಬ್ಬು ಮಾಡಿದ್ದಾರೆ. ಈ ಕೃತಿಯಲ್ಲಿ ಇಡೀ ಮಹಾಭಾರತವನ್ನು ವಿದುರನ ಮೂಲಕ ಪುನರ್ ವ್ಯಾಖ್ಯಾನಿಸುವ ಪ್ರಯತ್ನವಿದೆ. ಪುನರ್ ವ್ಯಾಖ್ಯಾನವೆಂಬುದು ಕಾವ್ಯವಸ್ತುವೊಂದನ್ನು ತನ್ನ ಕಾಲಕ್ಕೆ ತಂದು ಎರಡು ಕಾಲಗಳನ್ನು ಕೂಡಿಸುವ ಕ್ರಿಯೆ. ಹಳೆಯ ಕಾಲದ ಕಾವ್ಯವಸ್ತು ಹೊಸ ಕಾಲದ ಆಶಯಗಳೊಂದಿಗೆ ಅಭಿವ್ಯಕ್ತಿ ಪಡೆದು ಸಮಕಾಲೀನವಾಗುವ ವಿನೂತನವಾಗುವ ಪ್ರಕ್ರಿಯೆ. ಇದನ್ನೆ ಪಂಪನ ಪುನರ್‌ಸೃಷ್ಟಿ , ಕುವೆಂಪು ಅವರ ಪುನರ್‌ಸೃಷ್ಟಿ ಎಂದು ಕರೆಯಬಹುದು. ಸಂಯುಕ್ತ ಎಂಬ ದಾಸಿ ನಾಯಕಿಯ ಮುಖಾಂತರ ಈ ದಾಸಿ ಜನಗಳ ಸಂಘಟನೆ, ಪ್ರಭುತ್ವದ ವಿರುದ್ಧ ಹೋರಾಟದ ಸನ್ನಿವೇಶಗಳು ಈ ಕಾದಂಬರಿಯಲ್ಲಿ ಬರುತ್ತವೆ. ಈ ಕಾದಂಬರಿಯಲ್ಲಿ ಪಾಂಡುನಂದನರ ಹುಟ್ಟಿಗೆ ಸಂಬಂಧಿಸಿದಂತೆ ಯಾವ ವರಗಳ ಪವಾಡವೂ ನಡೆಯುವುದಿಲ್ಲ. ಅದರ ಬದಲು ವಾಸ್ತವಿಕ ನೆಲೆಗಟ್ಟಿನ ಮೇಲೆ ಪಾಂಡವರ ಜನನವಾಗುತ್ತದೆ. ದ್ರೌಪದಿಯ ಮಾನಾಪಹರಣದ ಸಂದರ್ಭದಲ್ಲಿ ಆಕೆಯುಟ್ಟಿದ್ದ ಸೀರೆ ಅಕ್ಷಯವಾಗುವುದಿಲ್ಲ. ಕೃಷ್ಣನ ಭಯದಿಂದ ದುಶ್ಶಾಸನ ಸೀರೆ ಸೆಳೆಯಲು ಮುಂದಾಗುವುದಿಲ್ಲ. ಹೀಗೆ ವಾಸ್ತವಿಕ ನೆಲೆಗಟ್ಟಿನ ಮೇಲೆ ಪುನರ್‌ಸೃಷ್ಟಿಯಾಗಿರುವ ಈ ಕಾದಂಬರಿ ಚರ್ಚಾಯೋಗ್ಯವಾಗಿದೆ.*

– ***ಡಾ|| ರಂಗಾರೆಡ್ಡಿ ಕೋಡಿರಾಂಪುರ,*** *ಬೆಂಗಳೂರು – ೫೮*



# ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ


ಶಿವಮೊಗ್ಗ ಮತ್ತು ಭದ್ರಾವತಿ ತಾಲ್ಲೂಕುಗಳ ಸಂಪರ್ಕ ಕಲ್ಪಿಸಿಕೊಡಲು ಸನ್ಯಾಸಿ ಕೊಡಮಗ್ಗೆ ಮತ್ತು ಹೊಳಲೂರು ಬಳಿ ತುಂಗಭದ್ರಾ ನದಿಗೆ ಅಡ್ಡಲಾಗಿ ಸೇತುವೆ


ಜಮಖಂಡಿ - ಸಾವಳಗಿ ರಸ್ತೆಯ ಕಿ.ಮೀ.7.40 ರಲ್ಲಿ ಕೃಷ್ಣಾ ನದಿಗೆ ಅಡ್ಡಲಾಗಿ ಸೇತುವೆ


ಗಿಣಿಗೇರ - ಗಂಗಾವತಿ - ಸಿಂಧನೂರು (ರಾಹೆ-23)


ದಾವಣಗೆರೆ ಜಿಲ್ಲೆಯ ಹೊನ್ನಾಳಿ ಪಟ್ಟಣದಿಂದ ಹೊನ್ನಾಳಿ ತಾಲ್ಲೂಕು ಗಡಿ

- 'ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ' ಸಂಸ್ಥೆಯನ್ನು ರಾಜ್ಯ ಸರ್ಕಾರದ ಒಡೆತನದ ಸಾರ್ವಜನಿಕ ಕಂಪನಿಯಾಗಿ ಲೋಕೋಪಯೋಗಿ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ದಿನಾಂಕ 21-07-1999 ರಂದು ಸ್ಥಾಪಿಸಲಾಗಿ, ಕೆಳಗಿನಂತೆ ಸಾಧನೆಗಳನ್ನು ಮಾಡಿದೆ.
  1. ರಾಜ್ಯದ ವಿವಿಧ ಭಾಗಗಳಲ್ಲಿ ಒಟ್ಟು 1099 ಕಿ.ಮೀ. ಉದ್ದದ 40 ರಸ್ತೆ ಯೋಜನೆಗಳನ್ನು ರೂ. 1890 ಕೋಟಿಗಳ ಮೊತ್ತದಲ್ಲಿ ಇ.ಪಿ.ಸಿ **ಆಧಾರದಲ್ಲಿ** ಅಭಿವೃದ್ಧಿಪಡಿಸಲಾಗಿದೆ.
  2. 131 ಕಿ.ಮೀ ಉದ್ದದ ಮೂರು ರಸ್ತೆ ಅಭಿವೃದ್ಧಿ ಯೋಜನೆಗಳನ್ನು ರೂ. 1069 ಕೋಟಿಗಳ ಮೊತ್ತದಲ್ಲಿ **ಪಿ.ಪಿ.ಪಿ-ವರ್ಷಾಸನ ಆಧಾರದಲ್ಲಿ** ಪೂರ್ಣಗೊಳಿಸಲಾಗಿದೆ.
  3. 285 ಕಿ.ಮೀ ಉದ್ದದ ಮೂರು ರಸ್ತೆ ಯೋಜನೆಗಳನ್ನು ಒಟ್ಟಾರೆ ಯೋಜನಾ ಮೊತ್ತ ರೂ. 671 ಕೋಟಿಗಳಲ್ಲಿ **ಪಿ.ಪಿ.ಪಿ-ವಿ.ಜಿ.ಎಫ್(ಟೋಲ್) ಆಧಾರದಲ್ಲಿ** ಅಭಿವೃದ್ಧಿಪಡಿಸಲಾಗಿದೆ. 123.35 ಕಿ.ಮೀ ಉದ್ದದ ಎರಡು ಯೋಜನೆಗಳನ್ನು ರೂ. 528.85 ಕೋಟಿಗಳ ಮೊತ್ತದಲ್ಲಿ **ಪಿ.ಪಿ.ಪಿ-ವಿ.ಜಿ.ಎಫ್(ಟೋಲ್) ಆಧಾರದಲ್ಲಿ** ಕೈಗೊಳ್ಳಲು ಉದ್ದೇಶಿಸಿದ್ದು, ಒಂದು ಯೋಜನೆ ಪ್ರಗತಿಯಲ್ಲಿದೆ ಹಾಗೂ ಮೊತ್ತೊಂದು ಯೋಜನೆ ಸರ್ಕಾರದಿಂದ ಅನುಮೋದನೆ ನಿರೀಕ್ಷೆಯಲ್ಲಿದೆ.
  4. 2001-04 ರ ಮೊದಲನೇ ಹಂತದಲ್ಲಿ 7327 ಕಿಮೀ ಉದ್ದದ ರಾಜ್ಯ ಹೆದ್ದಾರಿ ನಿರ್ವಹಣೆಯನ್ನು ರೂ. 225 ಕೋಟಿಗಳ ಮೊತ್ತದಲ್ಲಿ ಮತ್ತು 2005-08 ರ ಎರಡನೇ ಹಂತದಲ್ಲಿ 14500 ಕಿ.ಮೀ ಉದ್ದದ ರಾಜ್ಯ ಹೆದ್ದಾರಿ ನಿರ್ವಹಣೆಯನ್ನು ರೂ. 503 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ.
  5. ಒಟ್ಟು 641 ಸೇತುವೆಗಳನ್ನು ಹಂತವಾರು ನಿರ್ಮಾಣ ಯೋಜನೆ ಅಡಿಯಲ್ಲಿ ರೂ. 670 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ. ಇದಲ್ಲದೆ, 16 ಬೃಹತ್ ಸೇತುವೆಗಳನ್ನು ರೂ. 245 ಕೋಟಿಗಳ ಮೊತ್ತದಲ್ಲಿ ಪೂರ್ಣಗೊಳಿಸಲಾಗಿದೆ.
- ಒಟ್ಟು 153 ಕಿ.ಮೀ. ಉದ್ದದ 3 ರಸ್ತೆ ಯೋಜನೆಗಳನ್ನು ರೂ. 486 ಕೋಟಿಗಳ ಮೊತ್ತದಲ್ಲಿ ಇ.ಪಿ.ಸಿ ಆಧಾರದಲ್ಲಿ ಕೈಗೊಂಡಿದ್ದು, ಪ್ರಗತಿಯಲ್ಲಿವೆ.
- ಒಟ್ಟು 16 ಬೃಹತ್ ಸೇತುವೆಗಳನ್ನು ರೂ. 397 ಕೋಟಿಗಳ ಮೊತ್ತದಲ್ಲಿ ಕೈಗೊಂಡಿದ್ದು, ವಿವಿಧ ಹಂತಗಳಲ್ಲಿ ಪ್ರಗತಿಯಲ್ಲಿವೆ.
- **ಉದ್ದೇಶಿತ ಯೋಜನೆಗಳು:**
  - 360 ಕಿ.ಮೀ ಉದ್ದದ 6 ರಸ್ತೆ ಯೋಜನೆಗಳನ್ನು ರೂ. 1069 ಕೋಟಿಗಳ ಅಂದಾಜು ಮೊತ್ತದಲ್ಲಿ ಡಿ.ಬಿ.ಎಫ್.ಓ.ಟಿ (ಆನ್ಯುಟಿ) ಮಾದರಿಯಲ್ಲಿ ವಿಶ್ವಬ್ಯಾಂಕ್ ನೆರವಿನೊಂದಿಗೆ ಕೈಗೆತ್ತಿಕೊಳ್ಳಲು ಯೋಜಿಸಿ, ಶೀಘ್ರದಲ್ಲೇ ಪ್ರಾರಂಭಿಸಲಾಗುವುದು.
  - ಒಟ್ಟು 276 ಕಿ.ಮೀ ಉದ್ದದ 4 ಯೋಜನೆಗಳನ್ನು ರೂ. 697 ಕೋಟಿಗಳ ಒಟ್ಟಾರೆ ಯೋಜನಾ ಮೊತ್ತದಲ್ಲಿ ಪಿ.ಪಿ.ಪಿ-ವಿ.ಜಿ.ಎಫ್-ಡಿ.ಬಿ.-ಎಫ್.ಓ.ಟಿ (ಟೋಲ್) ಆಧಾರದಲ್ಲಿ ಕೈಗೊಳ್ಳಲು ಯೋಜಿಸಿದ್ದು, ಯೋಜನೆಗಳು ಟೆಂಡರ್ ಹಂತದಲ್ಲಿವೆ.
  - ಕರ್ನಾಟಕ ರಾಜ್ಯಾದ್ಯಂತ ಅತ್ಯಂತ ಅವಶ್ಯವಿರುವ ಒಟ್ಟು 505 ಸೇತುವೆಗಳನ್ನು ಒಟ್ಟು ಅಂದಾಜು ಮೊತ್ತ ರೂ. 2606 ಕೋಟಿಗಳ ಮೊತ್ತದಲ್ಲಿ ನಬಾರ್ಡ್ ನೆರವಿನೊಂದಿಗೆ ಕೈಗೊಳ್ಳಲು ಯೋಜಿಸಿದೆ.

**ನಿಗಮದ ಒಟ್ಟಾರೆ ಸಾಧನೆಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಸರ್ಕಾರವು 2010 ಸಾಲಿನ ಕರ್ನಾಟಕ ರತ್ನ ಪ್ರಶಸ್ತಿ ನೀಡಿ ಗೌರವಿಸಿದೆ.**

**ಡಾ॥ ಎಚ್. ಎಸ್. ಅನುಪಮಾ**

**ಹೆ**ಣ ಕಾಯುತ್ತಿದ್ದ ಪೊಲೀಸರೂ, ಆಸ್ಪತ್ರೆಯ ಸಿಬ್ಬಂದಿಯೂ ಮೆಲುದನಿಯಲ್ಲಿ ಅವಳ ಕಡೆಯವರೊಂದಿಗೆ ಮಾತಾಡುತ್ತಿದ್ದರು. ಮಾರ್ಚುರಿಯ ಸಿಮೆಂಟು ಕಟ್ಟೆ ಮೇಲೆ ಸೂರು ದಿಟ್ಟಿಸುತ್ತ ಕೊರಡು ದೇಹ ಬಿದ್ದುಕೊಂಡಿತ್ತು. ನೀಟಾಗಿ ಮ್ಯಾನಿಕ್ಯೂರ್ ಆದ ಉಗುರುಗಳು, ಕೈಮೇಲೆ ಕೆಂಪಗೆ ಅಚ್ಚೊತ್ತಿದ ಅರಬಿ ಮೆಹಂದಿ, ಹಣೆ ಮೇಲೆ ಸುರುಳಿ ಕೂತ ತೊಪ್ಪೆ ಕೂದಲು, ನೀಟಾದ ಹುಬ್ಬು, ನೈಲಾನ್ ಹಗ್ಗಕ್ಕೆ ನೇತಾಡಿ ಕಿತ್ತುಹೋದ ಕುತ್ತಿಗೆಯ ಚರ್ಮ, ಊದಿದ ಮುಖ ಬಿಟ್ಟರೆ ಇಡಿಯ ದೇಹದಲ್ಲಿ ಖಿನ್ನತೆ ಸಾರುವ ಒಂದೂ ಲಕ್ಷಣವಿಲ್ಲ. ಸಂಭ್ರಮದ ಈ ಎಳೆಯ ದೇಹವನ್ನು ಅದ್ಯಾವ ಗಳಿಗೆಯಲ್ಲಿ ಸಾವು ಒಳಹೊಕ್ಕುಬಿಟ್ಟಿತು?

ಬಿಎಸ್ಸಿ, ಬಿಎಡ್ ಮಾಡಿದ್ದ ಪ್ರೈವೇಟ್ ಶಾಲೆ ಟೀಚರ್ ಆಕೆ. ಸರ್ಕಾರಿ ಕೆಲಸಕ್ಕೆ ಅಪ್ಲೈ ಮಾಡಿ ಮಾಡಿ ಸಿಗದೆ ಬೇಸರಗೊಂಡಿದ್ದಳಂತೆ. ಎಷ್ಟೋ ದಿನಗಳ ನಂತರ ಈಗ ಖಾಲಿ ಹುದ್ದೆಗಳಿಗೆ ನೇಮಕಾತಿ ಮಾಡುವುದಾಗಿ ಘೋಷಣೆಯಾಗಿತ್ತು. ಆದರೆ ಅಪ್ಲಿಕೇಷನ್ ಹಾಕಲು ಒಂದೇ ದಿನ ಬಾಕಿ ಇರುವಾಗ ಈಕೆಗೆ ತಿಳಿಯಿತು. ತರಾತುರಿಯಲ್ಲಿ ಅಪ್ಲಿಕೇಷನ್ ತುಂಬಿ ಕಳಿಸಹೋದರೆ ಕೊರಿಯರಿನವ ಹಬ್ಬದ ರಜೆ ಇದೆ, ತಲುಪಲು ಕನಿಷ್ಠ ಮೂರ್ನಾಲ್ಕು ದಿನ ಬೇಕಾಗುತ್ತದೆ ಎಂದ. ಅಷ್ಟೇ ಅಂತೆ. ಆರು ತಿಂಗಳ ಕೆಳಗೆ ಮದುವೆಯಾದಾಕೆ ಬೇಸರಗೊಂಡು ಜೀವ ತೆಗೆದುಕೊಂಡಳು ಎನ್ನುತ್ತಿದ್ದಾರೆ. ಅಥವಾ...?

ಓಪಿಡಿ ತುಂಬ ಬಸುರಿಯರು, ಎಳೆ ಮಕ್ಕಳು, ಅಟೆಸ್ಟೇಷನ್‌ನವರು, ಬಿದ್ದೆದ್ದು ಗುದ್ದಾಡಿ ಬಂದವರ ಗದ್ದಲದಿಂದ ತುಂಬಿಹೋಗಿತ್ತು. ಆಸ್ಪತ್ರೆಯಲ್ಲಿ ಕೈಕಾಲಿಡಲು ಜಾಗವಿಲ್ಲದಷ್ಟು ಜನ. ಅವರ ನಡುವೆ ತೂರಿಕೊಂಡು ಪೋಸ್ಟ್‌ಮಾರ್ಟಂ ರಿಕ್ವಿಸಿಷನ್ ಹಿಡಿದು ಪೊಲೀಸ್ ಒಳಬಂದ. ಅವರ ಜೊತೆಗೇ ಸತ್ತವಳ ಅಣ್ಣನಂತೆ, ಚೇಂಬರಿನೊಳಗೆ ಬಂದರು. 'ಏನು ಹೇಳುದು ಮೇಡಂ, ಹಿಂಗೇ ಅವಳು, ಮೊದಲಿಂದ ಬಾಳ ಸೂಕ್ಷ್ಮ' ಎಂದು ಹನಿಗಣ್ಣಾದರು. ತನ್ನ ಏಕಮಾತ್ರ ತಂಗಿಯ ದೇಹ ಛಿದ್ರವಾಗುವುದನ್ನು ಊಹಿಸಲಾಗುತ್ತಿಲ್ಲ, ಪೋಸ್ಟ್‌ಮಾರ್ಟಂ ಇಲ್ಲದೆ ಶವ ಬಿಟ್ಟುಕೊಡಲಾಗದೇ ಎಂದು ಕೇಳಿದರು. 'ಅವಳ ಗಂಡನ ಮೇಲೆ ನಮ್ಗೇನೂ ಅನುಮಾನ ಇಲ್ಲ ಮೇಡಂ, ಒಳ್ಳೇ ಹುಡುಗ ಅವ್ನು. ಒಳ್ಳೇ ಜನ ಅವ್ರು. ನಂ ವಸ್ತುನೇ ಸರಿ ಇಲ್ಲ. ಮೊದ್ಲೂ ಒಂದ್ಸಲ ಇಂಥದೇ ಪ್ರಕರಣ ಆಗುದ್ರಲ್ಲಿತ್ತು, ತಪ್ಪಿತ್ತು. ಮದುವೆ ಆದ್ಮೇಲಾದ್ರೂ ಹಠ ಕಮ್ಮಿ ಆಗುತ್ತೆ ಅಂದ್ಕಂಡಿದ್ವಿ' ಎಂದು ಬಿಕ್ಕಿದರು. ಆದರೆ ಮದುವೆಯಾಗಿ ಏಳು ವರ್ಷದೊಳಗೆ ಹೆಣ್ಣಿನ ಸಾವು ಹೇಗಾದರೂ ಸಂಭವಿಸಲಿ, ಕಾನೂನು ಪ್ರಕಾರ ಅದು ವರದಕ್ಷಿಣೆ ಸಾವು.




# ಡಾಕ್ಟ್ರಮ್ಮನ ಡೈರಿ : ಒಂದು ಪುಟ...

ಸಿಸ್ಟರುಗಳು ಯಾವಾಗಲೂ ತಮಾಷೆ ಮಾಡುತ್ತಾರೆ, 'ನಿಂ ಡ್ಯೂಟಿ ಅಂದ್ರೆ ಏನಾದ್ರು ಗಡ್‌ಬಡ್ ಇದ್ದೇ ಇರುತ್ತೆ ಮೇಡಂ, ಪುರ್ಸತ್ತೇ ಸಿಗುದಿಲ್ಲ' ಎಂದು. ಇವತ್ತೂ ಹಾಗೇ. ಒಂದಾದ ಮೇಲೊಂದು ಕೇಸು. ಹೊಡೆದಾಟ, ಆ್ಯಕ್ಸಿಡೆಂಟ್, ೧೦೮ರಲ್ಲಿ ಬಂದಿಳಿದ ಎಮರ್ಜೆನ್ಸಿಗಳು, ಹಾವು ಕಚ್ಚಿಸಿಕೊಂಡವರು, ಹಲ್ಲಿ ತಿಂದವರು, ಅತಿಯಾಗಿ ಕುಡಿದವರು, ಇವರಲ್ಲದೆ ನನ್ನ ಮಾಮೂಲಿ ಹೆರಿಗೆ ಪೇಶೆಂಟುಗಳು. ಓಪಿಡಿ ಮುಗಿಯುತ್ತಲೇ ಇಲ್ಲ. ಸಂಜೆ ಏಳಾಯಿತು. ತಲೆ ಧಿಮ್ಮೆನ್ನುತ್ತಿದೆ. ನಾಲ್ಕು ಹೆಜ್ಜೆ ಕಾಲಾಡಿಸಿ ಒಂದು ಲೋಟ ಕಾಫಿ ಕುಡಿಯಬೇಕು ಎನಿಸಿ ಹೊರಟೆ. ಸರ್ಕಲ್ ಸುತ್ತ, ಪೇಟೆಬೀದಿಗಳಲ್ಲಿ ಜನ ಗಿಜಿಗುಡುತ್ತಿದ್ದರು. ಚೌತಿಹಬ್ಬದ ವ್ಯಾಪಾರದ ಭರಾಟೆ, ಕಳೆದ ವರ್ಷಗಳ ಕೋಮುಗಲಭೆ ಮರುಕಳಿಸದಂತೆ ಮುನ್ನೆಚ್ಚರಿಕೆಯಾಗಿ ಬಂದ ಪೊಲೀಸರು ಜನರ ನಡುವೆ ಜಂಗುಳಿಯಲ್ಲಿ ಕಾಣಿಸಿದರು.



ಪೋಸ್ಟ್‌ಮಾರ್ಟಂ ಮಾಡದಿರಲು ಸಾಧ್ಯವೇ ಇಲ್ಲ, ಬೇಗ ಮಾಡಲೂ ಸಾಧ್ಯವಿಲ್ಲ; ಏಕೆಂದರೆ ಪೋಸ್ಟ್‌ಮಾರ್ಟಂಗೂ ಇಬ್ಬರು ಡಾಕ್ಟರು ಬೇಕು ಎಂದು ನನಗಿರುವ ಕಾನೂನು ತೊಡಕುಗಳ ಹೇಳಿಕಳಿಸಿದೆ. ಆದರೂ ನನ್ನ ಸಾಂತ್ವನದ ಮಾತುಗಳು ಎಷ್ಟು ಕೃತಕವಾಗಿವೆಯಲ್ಲ ಎಂದು ನನಗೇ ನಾಚಿಕೆಯಾಯಿತು.

ಆಸ್ಪತ್ರೆಯಲ್ಲಿ ನನ್ನ ಇಪ್ಪತ್ನಾಲ್ಕು ತಾಸಿನ ಡ್ಯೂಟಿ ಈ ಬೆಳಗ್ಗೆ ಒಂಭತ್ತಕ್ಕೆ ಶುರುವಾಗುತ್ತಿತ್ತಾದರೂ ಸವಿತಳಿಗಾಗಿ ನಿನ್ನೆ ರಾತ್ರಿಯೇ ಬಂದಿದ್ದೆ. ಮರಾಠಿ ಹಾಡಿಯ ಹದಿಹರೆಯದ ತೊಡಾಬಸುರಿ ಸವಿತ ರಾತ್ರಿಯೇ ಆಸ್ಪತ್ರೆಗೆ ಬಂದಿದ್ದಳು. ಐದಡಿ ಎತ್ತರವೂ ಇರದ ಆ ಬಸುರಿಯ ಮಗುವಿನ ಕಾಲು ಕೆಳಗಿತ್ತು. ಅವಳಿಗೆ ಮೊದಲ ಹೆರಿಗೆ ಸಹಜವಾಗಿ ಆಗುವುದು ಕಷ್ಟವಿತ್ತು. ತಾಸುಗಟ್ಟಲೆ ನೋವು ಕೊಟ್ಟು ಒದ್ದಾಡಿದರೂ ಹೆರಿಗೆಯಾಗಲಿಲ್ಲ. ಸಿಸೇರಿಯನ್ ಆಪರೇಷನ್ ಮಾಡುವುದು ಒಳ್ಳೆಯದೆಂದು ಹೇಳಿದರೆ, 'ಏನಾದ್ರೂ ನಮ್ದೆ ಜವಾಬ್ದಾರಿ. ಆಪರೇಷನ್ ಮಾತ್ರ ಬೇಡ' ಎಂದು ಅವಳ ಗಂಡನ ಮನೆಯವರು ಪಟ್ಟು ಹಿಡಿದು ಕೂತರು. 'ಆಪರೇಷನ್ ಆದ್ರೆ ಆರು ತಿಂಗ್ಳು ಆರಾಂ ಮಾಡ್ಬೇಕು. ನಂತ್ರನೂ ಆಪ್ರೇಷನ್ನೇ ಮಾಡ್ಬೇಕಾಯ್ತದೆ. ನಾನು ಒಂಭತ್ ಮಕ್ಳ ಮನೇಲೇ, ಬಾಯಮ್ಮನೂ ಇಲ್ದೆ ಹೆತ್ತಿದಿನಿ ಅಮಾ. ನೀವು ಹೆಂಗಾರು ನಾರ್ಮಲ್ ಹೆರಿಗಿನೆ ಮಾಡ್ರಿ' ಎಂದು ಅವಳತ್ತೆ ಪಟ್ಟುಹಿಡಿದಳು. ಮುಗ್ಧತೆಯೋ, ದಡ್ಡತನವೋ, ಹಠವೋ ಎಂಥದೋ ಒಂದರ ಎದುರು ಅಸಹಾಯಕಳಾಗಿ ಹ್ಞೂಂಗುಡುವ ಹೊರತು ನನಗೆ ಬೇರಾವ ದಾರಿಯೂ ಇರಲಿಲ್ಲ. ಅಂತೂ ನೋವು ತಿಂದು ತಿಂದು ಸೋತ ಸವಿತ ಬೆಳಗಿನ ಜಾವ ನಾರ್ಮಲ್ ಆಗೇ ಹೆತ್ತಳು. ಆದರೆ ಮಗುವಿನ ಉಸಿರು ಕರಗತೊಡಗಿದ ರಾತ್ರಿಯಲ್ಲಿ ಕಳೆದೇಹೋಯಿತು.

ಬೆಳಗಾದ ಮೇಲೆ ಸವಿತಳ ಅಪ್ಪ ಅಬ್ಬೆ ಒಳಬಂದರು. 'ನಿಮ್ ಪರ್ಯತ್ನ ಎಲ್ಲ ಮಾಡಿದೀರಂತೆ. ನಮದೇ ನಸೀಬ ಚಲೋ ಇಲ್ದ ಹಿಂಗಾತು, ಏನ್ಮಾಡಾಕಾತದೆ' ಎಂದು ಅವಳಪ್ಪ ಚೀಲವೊಂದನ್ನು ಟೇಬಲ್ ಮೇಲಿಟ್ಟರು. ಅದರ ತುಂಬ ಹೀರೆ, ಬೆಂಡೆ, ಮಗೆಸೌತೆ ಇತ್ಯಾದಿ ತಾಜಾ ತರಕಾರಿಗಳು, ಜೇನುತುಪ್ಪದ ಬಾಟಲಿ, ಮೇಲೆ ಅಬ್ಬಲಿಗೆ ದಂಡೆ ಕಂಡವು. ಬಾಣಂತಿಯರ ವಾರ್ಡಿನಲ್ಲಿ ಮಗುವಿರದೆ ಮಲಗಿದ ಅವರ ಮಗಳ ಕೆಂಪೇರಿದ ಕಣ್ಣು ನೆನಪಾಗಿ 'ಇದನ್ಯಾಕೆ ತಂದ್ರಿ?' ಎಂದೆ. 'ನಾಳೆ ಚೌತಿ ಹಬ್ಬಲ, ಇರ್ಲಿ, ಫಲಾವಳಿಗೆ' ಎಂದರು. ಅವಳಮ್ಮ ನಿನ್ನೆಯಾದರೂ ಇಲ್ಲಿದ್ದಿದ್ದರೆ ಸವಿತಳ ಅತ್ತೆಯ ಹತ್ತಿರ ಜಗಳವಾಡಿ ಸಿಸೇರಿಯನ್‌ಗೆ ಒಪ್ಪಿಸುತ್ತಿದ್ದಳೇನೋ ಅನಿಸಿತು.

ಏನಾದರೇನು, ಯಾರಿದ್ದರೇನು, ಬರುವ ದಾರಿಗೆ ನೂರು ಅಡೆತಡೆ; ಬಂದಮೇಲೆ ಸಾವಿರ. ಬದುಕೆಂದರೆ ಇದೇಯೇ?

ಇವತ್ತು ಕೋರ್ಟಿನ ಸಮನ್ಸ್ ಇದೆ, ಆದರೆ ಹೋಗಲು ಸಾಧ್ಯವಿಲ್ಲ. ಅದರ ಜೊತೆಗೆ ತಾಲೂಕಾ ಪಂಚಾಯ್ತಿ ಮೀಟಿಂಗ್ ಕೂಡ ಇದೆ. ತಕರಾರು ಅರ್ಜಿಗಳಿವೆ, ಬಂದ್ಬಿಡಿ ಎಂದು ಎಸಿ ಮತ್ತೆ ಮತ್ತೆ ಹೇಳಿದ್ದಾರೆ, ತಪ್ಪಿಸುವಂತಿಲ್ಲ. ಸರ್ಕಾರಿ ಆಸ್ಪತ್ರೆಗೆ ಫೋನ್ ಮಾಡಿದರೆ ಯಾರೂ ಎತ್ತುವುದಿಲ್ಲ; ಕೇಸುಗಳನ್ನೆಲ್ಲ ದೊಡ್ಡಾಸ್ಪತ್ರೆಗೆ ರೆಫರ್ ಮಾಡುತ್ತಾರೆ; ರಕ್ತದ ಬ್ಯಾಂಕ್ ಆಸ್ಪತ್ರೆಯಲ್ಲಿ ಇಟ್ಟಿಲ್ಲ, ಔಷಧಿ ಹೊರಗೆ ಬರೆದುಕೊಡ್ತಾರೆ ಇತ್ಯಾದಿ ತಕರಾರು. ಹೆರಿಗೆ, ಓಪಿಡಿ, ಓಟಿ ಎಲ್ಲ ಒಟ್ಟೊಟ್ಟಿಗೆ ಬಂದರೆ ಇರುವ ಮೂರೂ ಮತ್ತೊಂದು ಸಿಬ್ಬಂದಿ ಏನಕ್ಕೂ ಸಾಲದು. ಒಬ್ಬ ಡಾಕ್ಟರರನ್ನು ಕೊಂದ ಈ ಕೋಮು ಗಲಭೆಯ ಊರಿಗೆ ಬರುವ ಸಿಬ್ಬಂದಿ ಒಂದು ಕಾಲು ಹೊರಗಿಟ್ಟೇ ಬರುತ್ತಾರೆ. ಹೀಗಿರುತ್ತ ರಕ್ತದ ಬ್ಯಾಂಕ್ ನಿಭಾಯಿಸಲು, ಫೋನ್ ಎತ್ತಲು ಎಕ್ಸಟ್ರಾ ಸ್ಟಾಫ್ ಬೇಡವೇ ? ಇದನ್ನೆಲ್ಲ ಎಷ್ಟೋ ಸಲ ಹೇಳಿಯಾಗಿದೆ, ಆದರೂ ಹೇಳಿದ್ದೇ ಹೇಳಿಬರಬೇಕು. ಅವರೂ ಕೇಳಿದ್ದೇ ಮತ್ತೆ ಕೇಳುತ್ತಾರೆ. ಸರ್ಕಾರಿ ಕೆಲಸ ದೇವರ ಕೆಲಸ ಅಲ್ಲವೇ, ಅದಕ್ಕೇ ಹೀಗೆ.

ಎಸಿ ಆಫೀಸಿಗೆ ಹೋಗುತ್ತ ಇಷ್ಟು ರಗಳೆ ಅನಿಸುವುದಾದರೆ ಸರ್ಕಾರಿ ಕೆಲಸದ ಹಂಗಿನಲ್ಲಿ, ಅದರಲ್ಲೂ ತಾಲೂಕು ಆಸ್ಪತ್ರೆಯ ಅಡ್ಮಿನಿಸ್ಟ್ರೇಷನ್ ಎಂಬ ಜ್ವಾಲಾಮುಖಿಯ ಬಾಯೊಳಗೆ ಯಾಕಿದ್ದೇನೆ ಎಂಬ ಪ್ರಶ್ನೆ ಸುಳಿಯತೊಡಗಿತು. ಸರ್ಕಾರದ ಋಣ ತೀರಿಸಲೆಂದೇ ? ಬಡವರ ಸೇವೆ ಮಾಡುತ್ತಿರುವೆನೆಂಬ ಅಹಂ ಪೋಷಣೆಗೇ ? ಸ್ವಂತ ನರ್ಸಿಂಗ್ ಹೋಂ ಕಟ್ಟಲು ಸಾಧ್ಯವಾಗಲಿಲ್ಲವೆಂದೇ ? ಸಲಾಮು ಹೊಡೆವ ಸಿಬ್ಬಂದಿ, ರೋಗಿಗಳು, ಪೊಲೀಸರು ಹುಟ್ಟಿಸುವ ಅಧಿಕಾರದ ಭ್ರಮೆಗೇ ? ಕೋರ್ಟು, ಕಚೇರಿ




ತಿರುಗುತ್ತ ಇಲ್ಲದ ಪ್ರಾಮುಖ್ಯತೆ ಹೆಚ್ಚಿಸಿ ಕೊಳ್ಳಲೆಂದೇ ? ಗಂಟೆ ಹತ್ತಾದರೂ ಇನ್ನೂ ಆಫೀಸಿಗೆ ಎಸಿ ಬಂದಿಲ್ಲ. ಈ ಪೀಕ್ ಅವರ್‌ನಲ್ಲಿ ಇಲ್ಲಿ ಯಾಕೆ ಕೂರಬೇಕು ? ಅವರ ಸೆಕ್ರೆಟರಿಗೆ ಹೇಳಿ ಎದ್ದು ಹೊರಟೆ. ಆಸ್ಪತ್ರೆಯಲ್ಲಿ ಕೈಕಾಲಿಡಲು ಜಾಗವಿಲ್ಲದಷ್ಟು ಜನ.

ಚೇಂಬರಿನ ಒಳಬರುತ್ತಿರುವಾಗ ನನ್ನ ಯೋಚನಾ ಲಹರಿಯನ್ನು 'ನಮಸ್ಕಾರ ಮೇಡಂ' ತುಂಡರಿಸಿತು. ಅಟೆಂಡರ್ ಹನುಮಂತಯ್ಯನ ಹೆಂಡತಿ ಪಾರ್ವತಮ್ಮ. ಬೈತಲೆ ಮೇಲೆ, ಹುಬ್ಬಿನ ನಡುವೆ ಕೆಂಪು ಪುಡಿ ಕುಂಕುಮವಿಟ್ಟು, ಮೈತುಂಬ ಸೆರಗು ಹೊದ್ದ ಧಡೂತಿ ದೇಹದ ಪಾರ್ವತಮ್ಮ ಅಲ್ಲೇ ಅಷ್ಟು ದೂರ ನಿಂತಳು.

'ಏನ್ ಪಾರ್ವತಮ್ಮ, ನಾವು ಹನ್ಮಂತ ಹನ್ಮಂತ ಅಂತ ಜಪ ಮಾಡ್ತಾ ಇದ್ರೆ ಪಾರ್ವತಿ ಪ್ರತ್ಯಕ್ಷ ಆಗಿದ್ದು ಹೇಗೆ?'

'ಇನ್ನೇನಿಲ್ಲ ಮೇಡಂ, ನಂಗೊತ್ತೇ ಇರ್ಲಿಲ್ಲ. ಮನ್ನೆ ಇವ್ರು ಕುಡದು ಕೂಗಾಡದಾಗ್ಲೆ ಗೊತ್ತಾಗಿದ್ದು, ಅವರಿಲ್ಲಿ ಹೆಣ ಕೊಯ್ಯೋ ಭಂಗಿ ಕೆಲ್ಸ ಮಾಡ್ತಿದಾರೆ ಅಂತ. ನನಗವತ್ಲಿಂದ ನಿದ್ದೆ ಇಲ್ಲ ಮೇಡಂ...'

'ಅದರಲ್ಲೇನಿದೆ ಪಾರ್ವತಮ್ಮ ?'

'ಅದೆಲ್ಲ ನಿಮಗ್ಗೊತ್ತಾಗಲ್ಲ ಮೇಡಂ. ನಮ್ ಕಡೆ ಜನ ಇಲ್ಲಿ ಮುನ್ಸಿಪಾಲ್ಟೀಲಿ, ಆಫೀಸ್ನಲ್ಲಿ ಅಂತ ಎಲ್ಲ ಕಡೆ ಇದಾರೆ. ಅವ್ರಗೇನಾರ ಇವ್ರು ಹೆಣ ಕುಯ್ಯೋ ಕೆಲ್ಸ ಮಾಡ್ತಿದಾರೆ ಅಂತ ತಿಳದ್ರೆ ಮುಗೀತು, ನಮ್ಮನೆಗೆ ಯಾರೂ ಬರಲ್ಲ, ಹನಿ ನೀರೂ ಕುಡಿಯಲ್ಲ. ನಾಕು ಹೆಣ್ಮಕ್ಕಳ ಮದುವೆ ಮಾಡಬೇಕ್ ಮೇಡಂ ನಾವು.'

'ಅದಕ್ಕೂ ಇದಕ್ಕೂ ಏನ್ ಸಂಬಂಧ ಪಾರ್ವತಮ್ಮ ?'

'ಸಂಬಂಧ ಇದೆ ಮೇಡಂ. ನಂ ಜಾತಿ ಜನ ತೊಳ ಬಳಿಯೋ ಕೆಲ್ಸ ಮಾಡ್ತಾರೆ ಹೊರ್ತ ಹೆಣ ಕೊಯ್ಯೋ ಕೆಲ್ಸ ಮಾಡಲ್ಲ. ಅದ್ನ ಮಾಡೋ ಜಾತಿನೇ ಬೇರೆ. ಕುಲಕ್ಕೊಂದು ಕಸುಬು ಅಂತಿರುತ್ತಲ್ಲವ್ರ ? ನೀವು ದಯವಿಟ್ಟು ಬೇರೆ ಯೇನಾರ ಯವಸ್ಥೆ ಮಾಡ್ಕಳಿ. ಇಷ್ಟ್ ದಿನ ಯಾರು ಮಾಡ್ತಿದ್ರೋ ಅವರತ್ರನೇ ಮಾಡುಸ್ಕಳಿ.'

'ಹನುಮಂತ ಹ್ಞೂಂ ಅಂದಿದ್ದಕ್ಕೇ ಟ್ರೈನಿಂಗ್ ಕಳಸಲಿಕ್ಕೆ ರೆಡಿ ಮಾಡಿದ್ದು. ಈ ಜಾತಿಗೆ ಇದೇ ಕೆಲ್ಸ ಅಂತ ಈಗ್ಲೂ ನಂಬಕಂಡ್ರೆ ಹೆಂಗೆ ಪಾರ್ವತಮ್ಮ ?'

'ಈಗ್ಲೂ ಅದಂಗೇನೇ ಇದೆ ಮೇಡಂ. ಉತ್ತಮರ ಕೆಲ್ಸ ಮಾಡಕ್ಕೆ ಯಾರ್ಗೇನೂ ಬೇಜಾರಿಲ್ಲ, ಆದ್ರೆ ಜಾತಿ ಕಸುಬಿಗಿಂತ್ಲು ಕೀಳು ಕೆಲ್ಸಕ್ ಯಾರಾದ್ರೂ ಹೋಯ್ತಾರಾ ಮೇಡಂ ? ಡಾಕ್ಟ್ರಾಗಲಿಕ್ಕೆ ಯಾವ್ದೆ ಜಾತಿಯಾದ್ರೂ ಸೈ, ಕುಶಿನೆ. ಅದೇ ಕಕ್ಕಸ್ ತೊಳೆಯಕ್ಕೆ ? ನಿಮ್ಮಾಸ್ಪತ್ರೇಲೆ ನಮ್ಮನೆಯೋರು ಒಟಿ, ಎಲ್‌ಟಿ, ಲ್ಯಾಬು ಎಲ್ಲ ತೊಳೀತಾರೆ. ಆದ್ರೆ ಅವ್ರು ಆಯುಧಪೂಜೆ

ಮಾಡ್ತಾರಾ ? ಮುಟ್ಬೇಡ, ನೀ ದೂರವಿರು ಹನಮಂತಯ್ಯ, ಓಟೀಲಿ ಕೇಸು ಫೇಲಾಗಿ ರಕ್ತ ಹರುದ್ಬಿಟ್ರೆ ಅಂತ ಸಿಸ್ಟರೇ ಯೇಳ್ತಾರಂತೆ. ಹೊರಗಿಂದ ಭಟ್ರೇ ಬಂದು ಪೂಜೆ ಮಾಡ್ತರೆ. ನಾನಂದಿದ್ದು ತಪ್ಪಾದ್ರೆ ವಟ್ಟೆಗಾಕ್ಕಳಿ, ಆದ್ರೆ ಹಸ ಕಂಡೋರ ಕಸ್ಟನೇ ಬೇರೆ. ಅಜೀರ್ಣ ಆದೋರ ಕಸ್ಟನೇ ಬೇರೆ ಮೇಡಂ. ನಿಂ ಪಾದ ಎಲ್ಲಿದಾವೆ ತೋರ್ಸಿ, ದೈವಿಟ್ಟು ನಮ್ಮನೆಯೋರ್ಗೆ ಹೆಣ ಕುಯ್ಯೊ ಕೆಲ್ಸ ಮಾತ್ರ ವೈಸಬೇಡಿ. ಗಂಡಸರಿಗೆ ಇವೆಲ್ಲ ಅರ್ಥಾಗಲ್ಲ. ಸುಮ್ನಿದ್ದುಬಿಡ್ತಾರೆ. ಅದ್ಕೆ ನಾನೇ ಯೇಳ್ಬರ್ತಿನಿ ಅಂತ ಇವತ್ ಬಂದೆ.'

ನನ್ನ ಮುಖ ನೋಡದೇ ಮಾತನಾಡುತ್ತಿದ್ದ ಅವಳ ಕಂಠ ಹೇಳಹೇಳುತ್ತ ಗಡುಸಾಯಿತು. ನಾ ಕುಳಿತ ಕುರ್ಚಿ ಗೋಡೆಯಾಯಿತು, ನಮ್ಮಿಬ್ಬರ ನಡುವೆ ಸಾವಿರಾರು ಮೈಲಿ ದೂರ ಹುಟ್ಟಿಕೊಂಡಿತು. ಪಾರ್ವತಮ್ಮ ಮಾತ್ರವಲ್ಲ, ಯಾರನ್ನೂ ಮುಟ್ಟದಂತೆ ಸುತ್ತ ಗೋಡೆಗಳು ಬೆಳೆಯತೊಡಗಿದವು. ಈ ದೂರ ದಾಟಬಲ್ಲ, ಗೋಡೆ ಒಡೆಯಬಲ್ಲ ದೊಡ್ಡ ರೆಕ್ಕೆ, ರಟ್ಟೆ ನನಗೆ ಮೂಡುವುದು ಯಾವಾಗ ? ಹೇಗೆ ? ಸರ್ಕಾರಿ ಕೆಲಸದಲ್ಲಿರುವಷ್ಟು ದಿನ ಅದು ಸಾಧ್ಯವಾದೀತೇ ?

ಸವಿತಳ ಅಪ್ಪ ಇಟ್ಟುಹೋದ ತರಕಾರಿ ಚೀಲ ಪಾರ್ವತಮ್ಮನಿಗೆ ಕೊಡಲು ಹೋದೆ. 'ಬರ್ತಿನ್ ಮೇಡಂ, ಬಾಳಾ ಪೇಶೆಂಟ್ ಅವ್ರೆ. ನಿಮ್ಗೆ ತೊಂದ್ರೆಯಾಯ್ತೇನೋ' ಎಂದವಳೇ ಸೆರಗೆಳೆದು ಕೊಳ್ಳುತ್ತ ಚೀಲ ಮುಟ್ಟದೇ ಹೊರಟುಹೋದಳು.

✴ ✴ ✴

ಮಧ್ಯಾಹ್ನ ಎರಡು ಗಂಟೆ. ಸೂಸನ್ ಸಿಸ್ಟರ್ ತಂದುಕೊಟ್ಟ ಇಶೋಣ ಮೀನಿನ ಫ್ರೈ, ಸಾರು ಊಟ ಮಾಡುವಾಗಲೂ ಕಣ್ಣು ಮಾರ್ಚುರಿ ಕಡೆಗೇ ತಿರುಗುತ್ತಿದೆ. ಕಟ್ಟೆ ಮೇಲೆ ಮಲಗಿದ ದೇಹದಿಂದ ಚೂಪಾಗಿ ಮೇಲೆದ್ದು ಸೆಟೆದ ಮೊಲೆಗಳು ಬೆಳೆಯುತ್ತಿರುವಂತೆ ಭಾಸವಾಗುತ್ತಿದೆ. ಬೆಳಗ್ಗೆಯೇ ಅವಳ ಬಾಯಿಯ ಒಳಹೊರಗೆ ಇರುವೆ ಸುಳಿಯುತ್ತಿದ್ದವು. ಬೇಗ ಪಿಎಂ ಮುಗಿಸಬೇಕು. ಆದರೆ ಹೇಗೆ ?

ಇದುವರೆಗೆ ಪೋಸ್ಟ್‌ಮಾರ್ಟಂ ಬಂದಾಗ ನಾರಾಯಣನನ್ನು ಕರೆಸುತ್ತಿದ್ದೆವು. ಬಂದರು ಇಲಾಖೆ ಆಸ್ಪತ್ರೆಯಲ್ಲಿದ್ದು ನಿವೃತ್ತನಾದವ ಅದು ಹೇಗೋ ಪೋಸ್ಟ್‌ಮಾರ್ಟಂ ಕಲಿತಿದ್ದ. ಇಡೀ ತಾಲೂಕಿನಲ್ಲಿ ಪೋಸ್ಟ್‌ಮಾರ್ಟಂ ಮಾಡುವವ ಆತನೊಬ್ಬನೇ. ಯಾವ ಆಸ್ಪತ್ರೆಯ ಕ್ಲಾಸ್ ಫೋರ್ ಸ್ಟಾಫೂ ಹೆಣ ಕೊಯಿದು ಹೊಲೆಯಲು ಸಿದ್ಧರಿರಲಿಲ್ಲ. ಮಾಡಲೇಬೇಕೆಂದು ಯಾರನ್ನೂ ಒತ್ತಾಯಿಸುವಂತೆಯೂ ಇಲ್ಲ. ಎಂದೇ ನಮ್ಮ ಡಿಪಾರ್ಟ್‌ಮೆಂಟ್ ಸ್ಟಾಫ್ ಅಲ್ಲದ ನಾರಾಯಣನಿಗೆ ಎಲ್ಲಿಲ್ಲದ ಡಿಮ್ಯಾಂಡು ಬಂದುಬಿಟ್ಟಿತು. ಅವ ಕೇಳಿದಷ್ಟು ದುಡ್ಡು ಕೊಡಬೇಕು. ಮೊದಲೇ ಐದುನೂರು ಇಟ್ಟು ಮಾತನಾಡಬೇಕು. ಮುಗಿದ ನಂತರ ಒಂದು ಸಾವಿರ ಕೊಡಬೇಕು. ಇದು ನಮ್ಮ ಪಾವತಿ. ಅದಲ್ಲದೆ, ಶವದ ವಾರಸುದಾರರ ಕಡೆಯಿಂದ ಸಾಧ್ಯವಾದಷ್ಟು ಕಿತ್ತೆಳೆದು ಕೊನೆಯ ಹೊಲಿಗೆ ಹಾಕುತ್ತಿದ್ದ. ಅವನ ಕೈಲಿ ಏಗಿಏಗಿ ಬೇಸರ ಬಂದು ಅಂತೂ ಇಂತೂ ನಮ್ಮ ಅಟೆಂಡರ್ ಹನುಮಂತನನ್ನು ಪೋಸ್ಟ್‌ಮಾರ್ಟಂಗೆ ತಯಾರು ಮಾಡಿ ಮುಂದಿನ ತಿಂಗಳು ಟ್ರೈನಿಂಗಿಗೆ ಹಾಕಿಸಿದ್ದೆವು. ಇನ್ನು ಹನುಮಂತ ಮಾಡುವುದಿಲ್ಲ ಎಂದರೆ ಮತ್ತೆ ನಾರಾಯಣನ ಕೈಕಾಲು ಹಿಡಿದು ಮರ್ಜಿ ಕಾಯಬೇಕು.

ಯಾಕೋ ಸಂದುಮೂಲೆಗಳನ್ನೆಲ್ಲ ಬೇಸರ ಆವರಿಸಿದಂತಾಯಿತು.

'ಮೇಡಂ, ವೆಂಕಟೇಶ ಡಾಕ್ಟ್ರು ಅರ್ಧ ಗಂಟೇಲಿ ಬರ್ತಿನಂದ್ರು. ನೀವು ಶುರುಮಾಡಬೇಕಂತೆ' ಹನುಮಂತ ಚೇಂಬರ್ ಹೊರ ನಿಂತು ಹೇಳಿದ. ಅರೆ ! ಇಷ್ಟೊತ್ತು ಎಲ್ಲೋ ಕಾಣೆಯಾದವ ಈಗೆಲ್ಲಿಂದ ಬಂದ ?

'ನನಗೇನೇಳ್ಬೇಕು ತಿಳಿತಿಲ್ಲ ಮೇಡಮ್ನೋರೇ' ಎಂದು ಒಳಬಂದವ ತಲೆತಗ್ಗಿಸಿ ನಿಂತ. ಅವನ ಹೆಂಡತಿ ಎತ್ತಿದ ಪ್ರಶ್ನೆಗಳು ಕೊರೆಯುತ್ತಿರುವಾಗ ಏನು ಹೇಳುವುದೆಂದು ನನಗೂ ತಿಳಿಯುತ್ತಿಲ್ಲ. ಹೊರಗೆ ಯಾರೋ ಕರೆದಂತಾಯಿತು.

'ನಾರಾಯ್ಣ ಬಂದಿದಾನೆ ಮೇಡಂ. ಅವನಿಗೊಂದೈನೂರು...'

ಓಹ್, ಮೊದಲೇ ಎಲ್ಲ ವ್ಯವಸ್ಥೆ ಆಗಿಹೋಗಿದೆ. ಹೆಂಡತಿ ಹತ್ತಿರ ಇವನೇ ಹೇಳಿಸಿದನೆ ?

ಮಾತಾಡಿಸಲಾರದಷ್ಟು ಟೈಟ್ ಆಗಿದ್ದ ನಾರಾಯಣ ಶವವನ್ನು ಚರಚರ ಕೊಯ್ಯುತ್ತಿದ್ದ. ಸಾಯುವ ಮನಸ್ಸು ಮಾಡಿದಾಕೆ ಕೊಂಕಳು, ಕಾಲು, ಕೈಯ ರೋಮವನ್ನೆಲ್ಲ ನೈಸಾಗಿ ಶೇವ್ ಮಾಡಿಕೊಂಡಿದ್ದಳು ! ಫೋರೆನ್ಸಿಕ್ ಲ್ಯಾಬ್‌ಗೆ ಕಳಿಸಲೆಂದು ವಿಸೆರಾ ತೆಗೆದರೆ ಜಠರದಲ್ಲಿ ಮೂಸುಂಬೆ ಹಣ್ಣಿನ ತೊಳೆ, ಅನ್ನದ ಅಗುಳು ಎಲ್ಲ ಹೇಗಿತ್ತೋ ಹಾಗೇ ಇವೆ. ತೆಂಗಿನಕಾಯಷ್ಟು ದೊಡ್ಡ ಗರ್ಭಕೋಶ ನಾಲ್ಕು ತಿಂಗಳ ಎಳೆಭ್ರೂಣವನ್ನು ಹೊತ್ತು ತಣ್ಣಗೆ ಮಲಗಿತ್ತು. ಹೊಟ್ಟೆಯೊಳಗೆ ಮಗುವಿರುವಾಗ ಸಾವು ಹೇಗೆ ಇವಳ ತಲೆಯೊಳಗೆ ಹೊಕ್ಕಿತು ?

ಮಾರ್ಚುರಿಯಿಂದ ಹೊರಬಂದರೆ ತಲೆತಗ್ಗಿಸಿ ಮುಖ ಮುಚ್ಚಿ ಕುಳಿತವ ಕಂಡ. ಗಂಡನಿರಬೇಕು...

ನಡುವೆ ಅಮ್ಮನ ಫೋನ್ : 'ನಾಳೆ ಎಷ್ಟೊತ್ತಿಗೆ ಹೊರಡ್ತೀರಿ ಅರುಣ ? ಅನುಷ ಮತ್ತವಳ ಗಂಡ ಇನ್ನೂ ಜೆಟ್ ಲ್ಯಾಗಿಂದ ಹೊರಬಂದಿಲ್ಲ. ಅವ್ರಿಗಿನ್ನು ಅಮೆರಿಕದ್ದೇ ಗಡಿಯಾರ. ಬಂದಾಗಿಂದ ನಿದ್ದೆ ಹೊಡಿತಿದಾರೆ. ಮೊದಲ ಗೌರಿ ಹಬ್ಬ, ಅವಳತ್ತೆ ಮನೆಯೋರೂ ಇಲ್ಲಿಗೆ ಬರ್ತಾರಂತೆ ಕಣೆ. ಈಚೀಚೆಗೆ ತುಂಬ ಕೆಲಸ ಆದ ಕೂಡ್ಲೆ ಕೈಕಾಲೇ ಆಡದಂಗೆ ಆಗಿಬಿಡ್ತಿದೆ. ನೀನಿದ್ರೆ ಧೈರ್ಯ ನಂಗೆ. ಡ್ಯೂಟಿ ಮುಗ್ಸಿ ನಾಳೆ ಬೇಗ ಹೊರಡಿ, ಆಯ್ತಾ ?' ಅಮ್ಮನಿಗೆ ತಂಗಿಯ ಗಂಡನ ಮನೆಯವರನ್ನು ಸುಧಾರಿಸುವ ಆತಂಕ. ಅವಳ ವಯಸಿಗೆ ಕೆಲಸ ಹೇರಿಕೊಂಡು ಮಾಡುವುದು ಕಷ್ಟ ಎನಿಸಿದರೆ ಸಹಜವೇ. ನಡುವೆ ಅಣ್ಣ ಮಾತು ಸೇರಿಸಿದರು : 'ಮದುವೆ ಮಾಡ್ಕೊಟ್ಟ ಮೇಲೆ ಎಂಥ ಬೀಗರು ? ನೀನೂ ಬಾ, ಅವ್ರೂ ಬರ್ತಾರೆ ಅಷ್ಟೇ. ಬೇಗ ಅಂತ ಅವಸರದಲ್ಲಿ ಡ್ರೈವ್ ಮಾಡುವುದು ಬೇಡ. ಏನೂ ತಲೆ ಹೋಗಲ್ಲ ಅರುಣ. ನಿಧಾನ ಬನ್ನಿ.'

ಬೇಗ, ನಾಳೆ, ಹಬ್ಬ – ಇಂಥವೆಲ್ಲ ಪದ ಗಳಿಗೆ ನನ್ನ ಪದಕೋಶದಲ್ಲಿ ಏನಾದರೂ ಅರ್ಥವಿದೆಯೆ ? ಅನುಮಾನವಾಯಿತು. ಮನೆಗೆ ಫೋನ್ ಮಾಡಿದೆ. 'ಬೇಗ ಬಾ ನೀನು. ನಾಳೆ ಬೆಳಗ್ಗೆ ಬರ್ತಾ ಮೀನುಬಾಯಿ ಹತ್ರ ಬೆಕ್ಕಿನಮರಿಗೆ ಮೀನು ತರೋದು ಮರಿಬೇಡ. ನಾವು ಊರಿಗೆ ಹೋದ್ರೆ ಅದಕ್ಕೆ ಮೂರು ದಿನ ಊಟ ಇರುದಿಲ್ಲ ಗೊತ್ತಾ ?' ಕನಸುವಿಗೆ ನಾವು ಊರಿಗೆ ಹೋದಾಗ ಊಟಕ್ಕಾಗಿ ಯಾರ್ಯಾರದೋ ಮನೆ ಅಲೆಯುವ ಅವಳ ಬೆಕ್ಕಿನ ಮರಿಯ ಚಿಂತೆ. ಮುರಳಿ ಸಂಜೆಯ ತಿಂಡಿಗೆ ಫ್ರಿಜ್ಜಿನಿಂದ ಹಿಟ್ಟು ತೆಗೆದು ದೋಸೆ ಮಾಡುತ್ತಿದ್ದ. ದಿನಾ ನಲವತ್ತು ಕಿಲೋಮೀಟರ್ ಓಡಾಡುವ ಅಮ್ಮ ಕನಸುವಿಗೆ ರಾತ್ರಿ ನಕ್ಷತ್ರ. ಆದರೆ ಕೂಗಳತೆಯ ದೂರದಲ್ಲಿ ಸ್ಕ್ಯಾನಿಂಗ್ ಸೆಂಟರ್ ನಡೆಸುವ ಪಪ್ಪ ಅವಳಿಗೆ ಎಲ್ಲವೂ. ಮುರಳಿ ಅವಳ ಜೊತೆಯಿರದೇ ಇದ್ದರೆ ನನ್ನ ಕತೆ, ಸಂಸಾರದ ಕತೆ ಏನಾಗುತ್ತಿತ್ತೋ ಏನೋ ?

ರೌಂಡ್ಸ್ ಮಾಡಲು ಹೊರಟರೆ ಡ್ಯೂಟಿ ಸಿಸ್ಟರ್ ಎಲ್ಲೂ ಕಾಣುತ್ತಿಲ್ಲ. 'ಮೀರಾ ಸಿಸ್ಟರ್' ಎಂದೊಮ್ಮೆ ಹಾಕಿದ ಕೂಗಿಗೆ ಗವಿಯಿಂದೆಂಬಂತೆ ಉತ್ತರ ಬಂತು. ಬೇಡದ, ಹಾಳಾದ ಸರಂಜಾಮುಗಳ ಬಿಸಾಡುವ ಕಂಡೆಮ್ ರೂಮಿನ ದಿಕ್ಕಿನಿಂದ ಧ್ವನಿ ಬಂದ ಹಾಗಾಯಿತು.

ಹೌದು, ಅಲ್ಲೇ ಇದ್ದಾರೆ ಮೀರಾ. ಗುಜರಿ ಬಿಸಾಡುವ ರೂಮಿನಲ್ಲಿ ನಾಲ್ವರು ಪೇಶೆಂಟುಗಳಿದ್ದು

---

ಅಆಇಈಉಊಋೠಎಏಐಒಓ
ಔಕಖಗಘಙಚಛಜಝಞಟಠಡಢ
ಣತಥದಧನಪಫಬಭಮಯರಲಹ

## ಅಕ್ಷರದ ಮಹತ್ವ

ಕಲಿ, ಕಲಿಯೋ ತಮ್ಮ ಅಕ್ಷರ
ಕಲಿತರಾಗುವೆ ಸಾಕ್ಷರ
ಸಾಕ್ಷರತೆಯಿಂದ, ಬಾಳಿಗೆ ಬೆಳಕು
ಹೋಗಲಾಡಿಸು, ಸಮಾಜದ ಕೊಳಕು!

**ಲಾಲಸಾಬ. ಎಚ್.ನದಾಫ**
ಬಾಗಲಕೋಟ

ಮಕ್ಕಳಿಲ್ಲದ ಮೀರಾ ಸಿಸ್ಟರ್‌ಗೆ ಅವರೆಲ್ಲ ಮಕ್ಕಳು. ಒಬ್ಬ ಹುಡುಗನನ್ನು ಪೊಲೀಸರು ತಂದು ಮಲಗಿಸಿ ತಿಂಗಳಾಯಿತು. ಮಾತಿಲ್ಲ, ಕತೆಯಿಲ್ಲ. ಕಣ್ಣು ಪಿಳುಕಿಸುವುದು ಬಿಟ್ಟರೆ ಬೇರೆ ಚಟುವಟಿಕೆ ಇಲ್ಲ. ನಡುನಡುವೆ ಕೆಲವರ ಹೆಸರನ್ನು ಬಡಬಡಿಸುತ್ತಾನೆ. ಯಗಚಿಯೋ, ಯಗಟಿಯೋ ಎಂಥದೋ ಒಂದು ಹೆಸರನ್ನು ಪದೇಪದೇ ಹೇಳುತ್ತಿದ್ದ. ಪೊಲೀಸರು ಆ ಹೆಸರಿನ ಊರುಗಳ ಆಸುಪಾಸು ಅವನ ಪಾಲಕರನ್ನು ಹುಡುಕಿ ಸೋತು ಅವನೀಗ ಆಸ್ಪತ್ರೆಯ ಸಿಸ್ಟರುಗಳ ಮಗನಾಗಿದ್ದಾನೆ. ಹತ್ತಿರ ನಿಂತು ನೋಡಿದರೆ ಅನಂತ ಶೂನ್ಯ ದಿಟ್ಟಿಸುವ ಅವನ ಕಣ್ಣುಗಳಲ್ಲಿ ಭಾವನೆಯೇ ಇಲ್ಲ. ಮೂರು ದಿನದಿಂದ ಬಾಯಿಗೆ ಹಾಕಿದ್ದನ್ನು ನುಂಗುತ್ತಿಲ್ಲ. ಬಿಪಿ ಲೋ ಆಗಿದೆ, ಇವನ ಕತೆ ಮುಗಿಯುತ್ತ ಬಂತೇನೋ ಎನ್ನುವುದು ಮೀರಾ ಸಿಸ್ಟರ ಆತಂಕ.



ಅವನ ಜೊತೆ ಆರು ತಿಂಗಳಿಂದ ಇರುವ ಇಬ್ಬರು ಅನಾಥ ಮುದುಕರೂ ಕ್ಷೀಣದನಿಯಲ್ಲಿ 'ನಮಸ್ತೆ ಮೇಡಂ' ಎಂದರು. ಆ ರೂಮಿನ ಮೂಲೆಯಲ್ಲಿ ಮಲಗಿರುವ ಆ ಅವನು, ಕಾಲಿನ ದೊಡ್ಡ ಗಾಯದ ತುಂಬ ಹುಳಗಳಾಗಿ ಕೀವು ಸೋರಿಸುತ್ತಿರುವವನು, ಮುಖ ತೋರಲು ಇಷ್ಟವಿಲ್ಲದವನಂತೆ ಮುರುಟಿ ಮಲಗಿದ್ದ. ನಾನು ಬಂದೆನೆಂದು ತಿಳಿದು ಬೆಡ್‌ಶೀಟಿನಡಿ ಹೊರಳಿ ತನ್ನಿರವು ಸೂಚಿಸಿದ. ಯಾರಿಗೂ ಬೇಡವಾಗಿ ಈ ಕೊಂಪೆಯ ರೂಮಿನಲ್ಲಿ ಜೀವಗಳು ಬದುಕಿವೆ. ಅವರತ್ತ ಸುಳಿಯಲು ಸಾವಿಗೂ ಜಿಗುಪ್ಸೆ. ಮೀರಾ ಸಿಸ್ಟರಿಗಾದರೋ ಉಸಿರಾಡುವ ಮನುಷ್ಯನಿದ್ದಾನೆ, ಅಗತ್ಯವಾದ ಸೇವೆ ತಾನು ಮಾಡಬೇಕು, ಅಷ್ಟೆ. ಅದರಾಚೆ ಬೇರೆ ಯಾವ ತರ್ಕಗಳಿಲ್ಲ.

✴ ✴ ✴

ಸಿಸ್ಟರುಗಳು ಯಾವಾಗಲೂ ತಮಾಷೆ ಮಾಡುತ್ತಾರೆ, 'ನಿಂ ಡ್ಯೂಟಿ ಅಂದ್ರೆ ಏನಾದ್ರು ಗಡ್‌ಬಡ್ ಇದ್ದೇ ಇರುತ್ತೆ ಮೇಡಂ, ಪುರ್ಸತ್ತೇ ಸಿಗುದಿಲ್ಲ' ಎಂದು. ಇವತ್ತೂ ಹಾಗೇ. ಒಂದಾದ ಮೇಲೊಂದು ಕೇಸು. ಹೊಡೆದಾಟ, ಆ್ಯಕ್ಸಿಡೆಂಟ್, ೧೦೮ರಲ್ಲಿ ಬಂದಿಳಿದ ಎಮರ್ಜೆನ್ಸಿಗಳು, ಹಾವು ಕಚ್ಚಿಸಿಕೊಂಡವರು, ಹಲ್ಲಿ ತಿಂದವರು, ಅತಿಯಾಗಿ ಕುಡಿದವರು, ಇವರಲ್ಲದೆ ನನ್ನ ಮಾಮೂಲಿ ಹೆರಿಗೆ ಪೇಶೆಂಟುಗಳು. ಓಪಿಡಿ ಮುಗಿಯುತ್ತಲೇ ಇಲ್ಲ. ಸಂಜೆ ಏಳಾಯಿತು. ತಲೆ ಧಿಮ್ಮೆನ್ನುತ್ತಿದೆ. ನಾಲ್ಕು ಹೆಜ್ಜೆ ಕಾಲಾಡಿಸಿ ಒಂದು ಲೋಟ ಕಾಫಿ ಕುಡಿಯಬೇಕು ಎನಿಸಿ ಹೊರಟೆ. ಸರ್ಕಲ್ ಸುತ್ತ, ಪೇಟೆಬೀದಿಗಳಲ್ಲಿ ಜನ ಗಿಜಿಗುಡುತ್ತಿದ್ದರು. ಚೌತಿಹಬ್ಬದ ವ್ಯಾಪಾರದ ಭರಾಟೆ, ಕಳೆದ ವರ್ಷಗಳ ಕೋಮುಗಲಭೆ ಮರುಕಳಿಸದಂತೆ ಮುನ್ನೆಚ್ಚರಿಕೆಯಾಗಿ ಬಂದ ಪೊಲೀಸರು ಜನರ ನಡುವೆ ಜಂಗುಳಿಯಲ್ಲಿ ಕಾಣಿಸಿದರು. ನಾಗೇಶನ ಸಿತಾರಾ ಹೋಟೆಲಿನ ಒಳಹೊಕ್ಕೆ. ಅಲ್ಲೂ ಜನ. ನನ್ನ ನೋಡಿದ್ದೇ 'ಒಂದ್ ಕಾಫಿ' ಎಂದು ಕೂಗಿ, 'ಬಿಸಿಬಿಸಿ ಬನ್ ಇದೆ, ಈರುಳ್ಳಿ ಬಜ್ಜಿ ಇದೆ. ಕೊಡ್ಲ ಮೇಡಂ?' ಎಂದ. 'ಎಂತದೂ ಬೇಡ. ಬೇಗ ಒಂದ್ ಕಾಫಿ, ಹೋಗ್ಬೇಕು' ಎಂದು ಕೂತೆ.

ಕೈಲಿ ಕಣ್ಣು ಒತ್ತಿ ಕೂತೆ. ಅಂಗೈ ಬಿಸಿಗೆ ಹಾಯೆನಿಸಿತು. ಐದು ನಿಮಿಷ ಕಳೆದರೂ ಯಾಕೆ

ಕಾಫಿ ಬರುತ್ತಿಲ್ಲ ಅಂದುಕೊಳ್ಳುತ್ತಿರುವಾಗಲೇ ಇದ್ದಕ್ಕಿದ್ದಂತೆ ಹೋಟೆಲಿನ ಫೋನು ಒಂದೇ ಸಮ ಕೂಗತೊಡಗಿತು. ಸಪ್ಲೈ ಹುಡುಗರೂ ಒಳಹೊರಗೆ ತಡಬಡ ಓಡಾಡತೊಡಗಿದರು. ಏನಾಯಿತು ಎಂದರೆ, 'ಏನಿಲ್ಲ. ಚೌಡಿ ಗುಡಿ ಹತ್ರ ಇರೋ ಗಣಪತಿ ಕಟ್ಟೆ ಮೇಲೆ ಒಬ್ಬನ್ನ ಕತ್ತರ್ಸಿ ಬಿಸಾಡಿದಾರೆ ಅಂತ ಸುದ್ದಿ ಇತ್ತಪ.... ಏನೋ ಏನೋ...' ಎಂದು ಕಣ್ಣು, ಕಿವಿಯನ್ನೆಲ್ಲ ಚುರುಕಾಗಿಸಿಕೊಂಡು ಓಡಾಡಿದರು. ಆಚೀಚೆ ನೋಡುತ್ತ ರಸ್ತೆಯ ಮೇಲೆ ನಾಗೇಶ ಮಾಯವಾದ. ಕೆಲನಿಮಿಷಗಳಲ್ಲಿ



ಹುಡುಗರು ಅರ್ಧ ಷಟರ್ ಎಳೆದರು. ಎಲ್ಲರಿಗೂ ಒಳಗಿರಲು ಗಾಬರಿ, ಹೊರಹೋಗಲು ಭಯ.

ಹತ್ತೇ ನಿಮಿಷ, ಹೊರಹೋದ ನಾಗೇಶ ಧಡಧಡ ಓಡಿ ಬಂದವ ಷಟರ್ ಪೂರ್ತಿ ಕೆಳಗೆಳೆದು ಬೀಗಹಾಕಿದ. ಹೋಟೆಲಿನ ಗಿರಾಕಿಗಳೆಲ್ಲ ಕಂಗಾಲು. 'ಅದೇ ಆ ಗುಂಪು ಪೇಟೆ ಕಡೆ ಬರ್ತಿದೆ ಅಂತ ಸುದ್ದಿ. ನೀವೆಲ್ಲ ಸ್ವಲ್ಪ ಒಳಗಿರಿ, ಗಲಾಟೆ ಆಗ್ಬೋದು' ಎಂದ ಕಳವಳದಿಂದ. ಮೂರು ಬೆಟಾಲಿಯನ್ ಪ್ಯಾರಾಮಿಲಿಟರಿ ಪಡೆ ಬಂದಿದೆ. ಪೊಲೀಸರು ಒಳಹೊರಹೋಗುವ ರಸ್ತೆಯಲ್ಲಿ ಹದಿನೈದು ದಿನದಿಂದ ನಾಕಾಬಂದಿ ನಡೆಸುತ್ತಿದ್ದಾರೆ. ಜನರಿಗೆ ಗಲಾಟೆ ಗಲಭೆ ಸಾಕಾಗಿದೆ. ಏನಾಗಲಿಕ್ಕಿಲ್ಲ ಎಂಬ ಧೈರ್ಯ ನನಗೆ.

'ಹತ್ತೊರ್ಷದ ಕೆಳಗೆ ಹದಿನೆಂಟು ದಿನದ ಮಾಭಾರತ ಯುದ್ಧ, ನಾವಿದ್ನೆಲ್ಲ ನೋಡಿದಿವಿ ಮೇಡಂ. ಗಲಾಟೆ ಶುರುವಾದ್ರೆ ಯಾರು ಹೊಡೀತಾರೋ, ಯಾರು ಬೆಂಕಿ ಹಚ್ತಾರೋ ಒಂದೂ ಗೊತ್ತಾಗಲ್ಲ. ನಮ್ಮ ಅಂಗಡಿ ಪೂರ ನಾಶ ಆಗೋಯ್ತು. ನೀವೂ ನೋಡಿದೀರಲ, ಒಬ್ಬ ಡಾಕ್ಟರನ್ನೇ ಹೇಗೆ ಕೊಂದ್ರು ಅಂತ?'

'ಅವ್ರು ಕೊಲೆ ಆಗಿದ್ದು ಬೇರೆ ಕಾರಣಕ್ಕೆ ನಾಗೇಶ. ಆಮೇಲಿನ ತಿಂಗಳಾನುಗಟ್ಟಲೆ ಗಲಾಟೆಯಲ್ಲಿ ಎರಡೂ ಕಡೆಯೋರಿಗೆ ಸಿಕ್ಕಾಪಟ್ಟೆ ಲಾಸ್ ಆಗಿ ಕೋಮುಗಲಭೆ ಉಪಯೋಗವಿಲ್ಲದ ಬಾಬತ್ತು ಅಂತ ಆಗ್ಲೆ ಎಲ್ರಿಗು ಗೊತ್ತಾಗಿದೆ, ಇನ್ನು ಗಲಾಟೆಯಾಗಲ್ಲ. ಸುಮ್ನಿರಿ.'

'ಜನ ಹಂಗ್ ಬುದ್ಧಿ ಕಲಿಯಲ್ಲ ಮೇಡಂ. ಆ ಸಲ ಪೆಟ್ಟು ತಿಂದೋರು ಈಗ ಹಳಬರಾಗಿದಾರೆ. ಈಗ ರಸ್ತೇಲಿ ತಿರುಗೋ ಲೀಡರ್ಸೇ ಬೇರೆ. ಅವೆಲ್ಲ ಪಡ್ಡೆ ಹುಡುಗ್ರು. ಅವಕ್ಕೆಲ್ಲ ಒಂಥರ ಯುದ್ಧದ ಉತ್ಸಾಹ. ಅದಿರ್ಲಿ, ನಿಮ್ ಕಾರೆಲ್ಲಿ ನಿಲ್ಸಿದ್ರಿ?'

ನಾವು ಈ ಮಾತಾಡುವ ಹೊತ್ತಿಗೆ ಎದುರು ಟೇಬಲ್ಲಿನಲ್ಲಿ ಪೂರಿ ತಿನ್ನುತ್ತಿದ್ದ ಸಣ್ಣಪೋರ ಕುಂಯ್ಞ್ ಎಂದು ರಾಗ ಶುರು ಮಾಡಿದ. ಅವನ ತಾಯ್ತಂದೆಯರು ಚಡಪಡಿಸುತ್ತಿದ್ದರು. ಬೇಗಬೇಗ ಮುಗಿಸು ಅಥವಾ ತಿಂದದ್ದು ಸಾಕು ಎಂದು ಅವಸರಿಸುತ್ತಿದ್ದರು. ಅವನಿಗೆ ಅರ್ಧಕ್ಕೆ ಪೂರಿ ನಿಲ್ಲಿಸುವ ಇಷ್ಟವಿಲ್ಲ. ಆ ತಾಯಿಯ ಆತಂಕದ ನೋಟ ಬುರ್ಖಾದಿಂದಾಚೆ, ಮುಚ್ಚಿದ ಷಟರಿನಾಚೆ ಚಾಚಿಕೊಂಡಿತ್ತು. ಹೊರಗೆ ಸರಬರ ವಾಹನಗಳ ಸದ್ದು, ಬೂಟುಕಾಲಿನ ಸದ್ದು, ಅವಸರದ ನಡಿಗೆಯ ಹೆಜ್ಜೆಗಳ ಸದ್ದು, ಷಟರ್ ಎಳೆಯುವ, ಎತ್ತುವ ಸದ್ದು. ಎಲ್ಲರೂ ತಂತಮ್ಮ ಮನಸ್ಸಿನಲ್ಲಿ ಹೊರಗೇನು ನಡೆಯುತ್ತಿದೆ ಎಂದು ಊಹಿಸಿಕೊಳ್ಳುತ್ತ ಕುಳಿತಿದ್ದೆವು.

ಆಸ್ಪತ್ರೆಯಿಂದ ಫೋನು ಬರತೊಡಗಿತು. "ಒಂದು ಡೆಲಿವರಿ ಕೇಸ್ ಬಂದಿದೆ" ಎಂದರು ಮೀರಾ. ಮದುವೆಯಾಗಿ ಹತ್ತು ವರ್ಷದ ನಂತರ ಬಸುರಾಗಿ ಅವಳಿಜವಳಿ ಮಕ್ಕಳನ್ನು ಹೊಟ್ಟೆಯಲ್ಲಿಟ್ಟು ಕೊಂಡಿರುವ ಜ್ಯೋತಿ ಬಂದಿದ್ದಳು. ದಿನ ತುಂಬಲು ಇನ್ನೂ ಒಂದು ತಿಂಗಳಿರುವಾಗಲೇ ಹೆರಿಗೆ ನೋವು ಶುರುವಾಗಿತ್ತು. ನಾಗೇಶನಿಗೆ ಸ್ವಲ್ಪ ಷಟರ್ ತೆಗೀರಿ, ಹೋಗಬೇಕು ಎಂದರೆ, 'ಅಯ್ಯೋ, ನಿಮಗೇನಾಗಿದೆ ಮೇಡಂ? ಸ್ವಲ್ಪ ತಡಿರಿ. ಕಳದ ಸಲದ ಗಲಾಟೆ ಎಲ್ಲ ನೋಡಿದಿರ, ಆದ್ರೂ ಹೀಗೆ ಹೇಳ್ತೀರಲ್ಲ?' ಎನ್ನುತ್ತ ಎಲ್ಲೆಲ್ಲಿಗೋ ಫೋನ್ ಮಾಡತೊಡಗಿದ. ಅವಳಿಜವಳಿ ಕೇಸು. ಹೇಗಿದೆ ಹೊರಗಿನ ಪರಿಸ್ಥಿತಿ ಎಂದು ಸಿಪಿಐ ಕೇಳಿ ತಿಳಿದು ಹೊರಟುಬಿಡಬೇಕು ಅಂದು ಫೋನೆತ್ತಿಕೊಂಡೆ. ಮೊಬೈಲ್ ಸಿಗ್ನಲ್ ಇಲ್ಲ.

'ಲ್ಯಾಂಡ್‌ಲೈನೂ ಕಟ್ ಮೇಡಂ. ಹೋಗ್ತನೇ ಇಲ್ಲ. ಈಗ ಜಾಮರ್ ಬಂದಿದೆ, ಮುಗ್ದೇ ಹೋಯ್ತು' ಅಂದ ನಾಗೇಶ.

ಮತ್ತರ್ಧ ಘಂಟೆ ಹೀಗೇ ಕಳೆಯಿತು. ಪೊಲೀಸ್ ವಾಹನ ಕೂಗುತ್ತ ಬಂದು ಸರಿದುಹೋಯಿತು. ಒಳಗಿರಿ ಎಂದರೋ, ಹೊರಗೆ ಬನ್ನಿ ಎಂದರೋ ಒಂದೂ ತಿಳಿಯಲಿಲ್ಲ. 'ನಾನಂತೂ ಹೊರಡುತ್ತೇನೆ, ನನ್ನ ಡ್ಯೂಟಿ ಇವತ್ತು ಆಸ್ಪತ್ರೆಯಲ್ಲಿರಬೇಕು. ಹೋಟೆಲಿನಲ್ಲಿ ಅಡಗಿ ಕೂರುವುದಲ್ಲ. ನಾ ಹೊರಟೆ...' ಎಂದು ಎದ್ದುನಿಂತೆ.

ನಾಗೇಶ ಏನು ಮಾಡಿದರೂ ಬಿಡಲೊಲ್ಲ. ಅವನಿಗೆ ನನಗಿಂತ ಹೆಚ್ಚು ಭಯ. ಅಂತೂ ಅವನ ಒಪ್ಪಿಸಿ ಷಟರ್ ತೆರೆಸುವುದರಲ್ಲಿ ನನ್ನ ಅರ್ಧಬುದ್ಧಿ ಖರ್ಚಾಯಿತು. ಬಗ್ಗಿ ನಾನು ಹೊರಹೋಗುವಷ್ಟೆ ಷಟರ್ ತೆರೆದು ನೋಡಿದ. ಅವನು ಎಷ್ಟು ಭಯ ಗೊಂಡಿದ್ದನೆಂದು ನಡುಗುವ ಅವನ ಕೈಗಳು ಹೇಳುತ್ತಿದ್ದವು. ನನ್ನ ಹಿಂದೆ ಷಟರ್ ಪಟಾರನೆ ಮುಚ್ಚಿತು.

ಇಡೀ ಬೀದಿ ನಿರ್ಜನ. ಎಲ್ಲಿ ಹೋದರು ಅಷ್ಟು ಜನ? ದೂರದ ಸರ್ಕಲಿನ ಬಳಿ ನಿಂತಿದ್ದ ಪೊಲೀಸ್ ವಾಹನ ಹತ್ತಿರ ಬಂತು. ಅದರ ಹಿಂದೇ ಎರಡು ಜೀಪು.

'ನಮಸ್ತೆ ಮೇಡಂ? ಏನು ಇಲ್ಲಿದಿರ?'

'ಕಾಫಿ ಕುಡಿಯಕ್ಕೆ ಬಂದು ಇಲ್ಲೇ ಸಿಕ್ಕಾಕಳೋ ಹಾಗಾಯ್ತು. ಸುದ್ದಿ ನಿಜಾನಾ?'

'ಕೊಲೆ ಕೇಸು. ಅವರವರಲ್ಲೆ ಹೊಡದಾಡ್ಕಂಡು ಸತ್ತಿದ್ದು, ಕಮ್ಯುನಲ್ ಅಲ್ಲ. ಆದ್ರೆ ಹೊಡೆದಾಟವಾದದ್ದು ಬೇರೆಬೇರೆ ಕೋಮಿನವರ ಮಧ್ಯ ಅಂತ ಸೆನ್ಸಿಟಿವ್ ಅಷ್ಟೆ. ಹೆಂಗಾದ್ರೂ ಆಗ್ಲಿ, ಪೋಸ್ಟ್‌ಮಾರ್ಟಂ ಇಬ್ರು ಮಾಡ್ಲಿ ಅಂದ್ರು ಎಸ್.ಪಿ. ಬಾಡಿ ತರಲಿಕ್ಕೆ ಬೆಳಗಾಗಬಹುದು. ನೀವಿಲ್ಲಿದಿರ ಅಂತ ಗೊತ್ತೇ ಆಗ್ಲಿಲ್ಲ. ಬನ್ನಿ.'

ಪೊಲೀಸು ಜೀಪಿನಲ್ಲಿ ಆಸ್ಪತ್ರೆ ಮುಟ್ಟಿ ಜ್ಯೋತಿಯನ್ನು ನೋಡುವವರೆಗೂ ಸಮಾಧಾನವಿಲ್ಲ. ನಿನ್ನೆ ರಾತ್ರಿ ಜಾರಿಬಿದ್ದಳಂತೆ, ಆಗಿನಿಂದ ಹೊಟ್ಟೆ ಗಟ್ಟಿಯಾಗಿದೆಯಂತೆ. ಹೊಟ್ಟೆ ಮೇಲೆ ಸ್ಟೆಥ್ ಇಟ್ಟರೆ ಸಾವು ತಾನಿಲ್ಲೇ ಸುತ್ತಾಡುತ್ತಿದ್ದೇನೆ ಎಂದು ಮತ್ತೆ ಮುಖ ತೋರಿಸಿತು. ಎರಡರಲ್ಲಿ ಒಂದು ಮಗು ಹೊಟ್ಟೆಯಲ್ಲೇ ತೀರಿಹೋಗಿತ್ತು. ಹತ್ತು ವರ್ಷದ ನಂತರ ಗರ್ಭ ನಿಂತು ಎರಡು ಮಕ್ಕಳು ಎಂದು ಖುಷಿಯಲ್ಲಿದ್ದವರಿಗೆ ಒಂದು ತೀರಿಕೊಂಡಿದೆ ಎಂದ ಕೂಡಲೇ ಕಣ್ಣೀರಾದರು. ಅಂತೂ ಎರಡು ಕೆಜಿ ಇದ್ದ ಮತ್ತೊಂದು ಮಗು ಜ್ಯೋತಿಯ ಮಡಿಲು ತುಂಬುವಾಗ ಸಮಯ ರಾತ್ರಿ ಒಂದು.

ಡ್ಯೂಟಿರೂಮಿನ ಕುರ್ಚಿ ಮೇಲೇ ಕೂತು ಕಣ್ಮುಚ್ಚಿದೆ, ಭ್ರೂಣ ತುಂಬಿದ ಶವದ ಗರ್ಭಕೋಶ, ಸವಿತ ಹಾಗೂ ಜ್ಯೋತಿಯ ಉಸಿರಾಡದ ಹೂಮರಿಗಳು ಕಣ್ಣೆದುರು ಬಂದವು. ಅರೆನಿದ್ರೆ, ಎಚ್ಚರದಲ್ಲಿ ಮೂರನೆಯ ಹೆರಿಗೆಯಲ್ಲಿ ರಕ್ತಸ್ರಾವವಾಗಿ ಸತ್ತ ನನ್ನಿಬ್ಬರು ಅಜ್ಜಿಯಂದಿರು, ಮುಂದಿನ ತಿಂಗಳು ಡಿಎಚ್‌ಓ ಮೀಟಿಂಗ್‌ನಲ್ಲಿ ಶಿಶುಮರಣಕ್ಕೆ ಹೇಳಬೇಕಾದ ವಿವರಣೆ ಎಲ್ಲ ಸುಳಿದುಹೋದವು. ಯಾವಾಗಲೂ ಎಲ್ಲ ಸರಿಯಾದರೆ ಕ್ರೆಡಿಟ್ ತೆಗೆದುಕೊಳ್ಳಲು ದೇವರೂ ಸೇರಿದಂತೆ ಹಲವರು ಕ್ಯೂನಲ್ಲಿರುತ್ತಾರೆ. ಹೆಚ್ಚುಕಮ್ಮಿಯಾದರೆ ಅದು ವೈದ್ಯರ ನಿರ್ಲಕ್ಷ್ಯದಿಂದ ಮಾತ್ರ. ಈ ಎಂಎಲ್‌ಎ ಇರುವಷ್ಟು ದಿನ ಕೇಸು ರೆಫರ್ ಮಾಡುವಂತೆಯೂ ಇಲ್ಲ. 'ಗೈನಕಾಲಜಿಸ್ಟ್ ಆಕ್ಕಂಡು ಕೇಸ್ ಹ್ಯಾಂಡಲ್ ಮಾಡಕ್ಕಾಗಲ್ಲ ಅಂದ್ರೆ

ಹೇಗೆ ಡಾಕ್ಟ್ರೇ? ಜನರಿಗೆ ಸರ್ವಿಸ್ ಕೊಡಬೇಕು. ಅವರಿಗೆ ಸರ್ಕಾರದ ಸವಲತ್ತುಗಳ್ನ ಮುಟ್ಟಿಸ್ಬೇಕು. ಸರ್ಕಾರಿ ಆಸ್ಪತ್ರೆಗೆ ಬರೋ ಬಡವ್ರಿಗೆ ಮುಂದೆ ಹೋಗೋ ತಾಕತ್ತು ಇರೋಲ್ಲ. ಬಂದವ್ರನ್ನ ಆದಷ್ಟು ನೀವೇ ಮ್ಯಾನೇಜ್ ಮಾಡಿ. ದೊಡ್ಡಾಸ್ಪತ್ರೆಗೆ ಕಳಿಸಿಬಿಡಬೇಡಿ. ನೀವು ಉಮೇದಿಂದ ನಿಗಾವಹಿಸಿ ಹ್ಯಾಂಡಲ್ ಮಾಡ್ಬೇಕು. ಸರ್ಕಾರಿ ಕೆಲ್ಸ ಅಂದ್ರೆ ದೇವ್ರ ಕೆಲ್ಸ...' ಮೇಲಿನಿಂದ ಕೆಳಗಿನವರೆಗೂ ಕಣ್ಣು ಹಾಯಿಸುತ್ತಾ ರಾಗವೆಳೆಯುವ ಮಹಾ ಭ್ರಷ್ಟ ಎಮ್‌ಎಲ್‌ಎ ಕಡೆಯಿಂದ ಎಥಿಕ್ಸ್ ಪಾಠ ಕೇಳಬೇಕು.



ರಾತ್ರಿ ಕೋಮುಗಲಭೆಯ ಹುಸಿ ಭಯ ಸೃಷ್ಟಿಸಿದವನ ಮೃತದೇಹ ಬೆಳಗಿನ ಜಾವ ಬಂತು. ಹಿಂದೇ ಡಿಎಚ್‌ಓ ಫೋನು. 'ಕಮ್ಯುನಲ್ ಆಗೋಹಾಗಿದೆ. ಗಲಾಟೆ ಆಗ್ಬೋದು, ಇಬ್ಬರೂ ಪೋಸ್ಟ್‌ಮಾರ್ಟಂ ಮಾಡ್ಬಿಡಿ. ಇನ್ನು ಮೂರು ದಿನ ರೌಂಡ್ ದ ಕ್ಲಾಕ್ ಎಲ್ಲ ಅಲ್ಲೆ ಇರ್ಬೇಕು, ಯಾವ ಸ್ಟಾಫ್‌ಗೂ ಹಬ್ಬಗಿಬ್ಬ ಅಂತ ರಜೆ ಕೊಡ್ಬೇಡಿ. ಸ್ಯಾಂಕ್ಷನ್ ಮಾಡಿದ್ದಿದ್ರೆ ವಾಪಸ್ ಬರಕ್ಕೆ ಹೇಳ್ಬಿಡಿ. ಅಂದಹಾಗೆ ಗಲಾಟೆ ನಡೀತಿದ್ದಾಗ ನೀವು ಆಸ್ಪತ್ರೇಲಿ ಇರ್ಲಿಲ್ಲ ಅಂತ ತಿಳಿತು. ಡ್ಯೂಟಿ ಮೇಲಿರುವಾಗ ಏನಾದ್ರೂ ಆದ್ರೆ ನಮ್ದೇ ಜವಾಬ್ದಾರಿ ಡಾಕ್ಟ್ರೇ, ಅಡ್ಮಿನಿಸ್ಟ್ರೇಷನ್ ಅಂದ್ರೆ ಮಕ್ಕಳಾಟನಾ? ನೀವು ಹಾಗೆ ಗಂಟೆಗಟ್ಲೆ ಆಸ್ಪತ್ರೆ ಬಿಟ್ಬೋದ್ರೆ ಹೇಗೆ? ಪಬ್ಲಿಕ್ ಅದಕ್ಕೇ ಕಂಪ್ಲೇಂಟ್ ಮಾಡುವುದು. ಅವ್ರ ಬಾಯಿಗೆ ನಾವು ಬೀಳ್ಬಾರ್ದು.'

'ಗಂಟೆಗಟ್ಲೆ ಹೋಗಿರ್ಲಿಲ್ಲ ಸಾರ್' ಎಂಬ ಸಾಲು ಗಂಟಲಿಂದ ಉರುಳಬೇಕಾದದ್ದು ಅಲ್ಲೇ ತಡೆದು ನಿಂತಿತು. ಆ ಕಡೆಯಿಂದ ಸಂಪರ್ಕ ಕಟ್ ಆಯ್ತು. ಇವರಿಗೆ ಯಾರು ಹೇಳಿದ್ದು ನಾನಿಲ್ಲಿ ಇರಲಿಲ್ಲ ಅಂತ. ಆ ಇಂಟೆಲಿಜೆನ್ಸಿನವನೇ ಇರಬೇಕು.

ಮುಂದಿನ ಡ್ಯೂಟಿ ಡಾಕ್ಟರು ವೆಂಕಟೇಶ್ ಒಂಭತ್ತು ಗಂಟೆಗೆ ಬರಬೇಕು. ಒಂದು ಪೋಸ್ಟ್‌ಮಾರ್ಟಂ ಇದೆ, ಬೇಗ ಬನ್ನಿ ಎಂದು ಹೇಳಿಕಳಿಸಿ ಕೂತರೆ ಬೆಳಿಗ್ಗೆ ಏಳಕ್ಕೇ ಹನುಮಂತ ಹಾಜರು. ಅವನು ತಂದ ಪೇಪರಿನಲ್ಲಿ 'ಇಷ್ವರಲ್ಲೇ ತಪ್ಪಿದ ಮತ್ತೊಂದು ಕುರುಕ್ಷೇತ್ರ..' ಎಂಬ ಹೆಡ್ಡಿಂಗು ರಾರಾಜಿಸಿತು. 'ಒಂದು ಪಿಎಂ ಇದೆ, ರೆಡಿ ಮಾಡು' ಎಂದದ್ದೇ ಹನುಮಂತ ಮಾರ್ಚುರಿ ಕಡೆ ಓಡಿಹೋದ. ಐದೇ ನಿಮಿಷ, ಗಾಬರಿಯಾಗಿ ತೇಕುತ್ತಾ ಓಡಿಬಂದ.

ಸತ್ತವನು ಪೋಸ್ಟ್‌ಮಾರ್ಟಂ ಅಸಿಸ್ಟೆಂಟ್ ನಾರಾಯಣ! ನಾನು ಪೊಲೀಸ್ ರಿಕ್ವಿಸಿಷನ್‌ನಲ್ಲಿ ಹೆಸರು ನೋಡಿದ್ದರೂ ಈ ನಾರಾಯಣ ಎಂದು ತಿಳಿದಿರಲಿಲ್ಲ. ಗಾಬರಿ, ದಿಗ್ಭ್ರಮೆಯಿಂದ ಹನುಮಂತ ಚಡಪಡಿಸತೊಡಗಿದ. ನಿನ್ನೆ ಪಾರ್ವತಮ್ಮ ಹೇಳಿದ್ದು ನೆನಪಾಯಿತು.

'ಗಾಬರಿಯಾಗಬೇಡ ಹನುಮಂತಯ್ಯ, ಪ್ರತಿದಿನ ಓಟಿಯಲ್ಲಿ ಜೀವ ಇದ್ದವರ ಕೊಯ್ದು ಹೊಲಿಗೆ ಹಾಕುವ ಕೆಲಸ ಮಾಡಕ್ಕೆ ಹೆಮ್ಮೆಪಡ್ತೀವಿ, ಆದರೆ ಸತ್ತಮೇಲೆ ಕೊಯ್ದು ಹೊಲಿಯುವುದನ್ನೇಕೆ ಕೀಳು ಅಂದುಕೋಬೇಕು? ನಾರಾಯಣ ತೀರಿಕೊಂಡಿದ್ರೂ ನಿನ್ನ ಮನಸು ಒಪ್ಪದಿದ್ರೆ ನೀನು ಈ ಕೆಲಸ ಮಾಡಬೇಕಿಲ್ಲ. ಇಬ್ರು ಆಯಮ್ಮಗಳ ಹತ್ರ ಮಾತಾಡಿದಿನಿ. ಎಲ್ಲ ಡಾಕ್ಟರ ಹತ್ರನೂ ಮಾತಾಡ್ತೀನಿ, ಇನ್ಮೇಲೆ ಯಾರ್ಯಾರು ಯಾವತ್ತು ಡ್ಯೂಟಿ ಮೇಲೆ ಇರ್ತೆವೋ ಅವ್ರೇ ಹೆಣ ಕೊಯ್ದು ಹೊಲಿಯೋ ಕೆಲಸದ ಜವಾಬ್ದಾರಿ ನೋಡ್ಕೊತೀವಿ. ಈಗ ಪಿಎಂಗೆ ಬಾಕಿ ಎಲ್ಲ ರೆಡಿ ಮಾಡು, ಆಯಮ್ಮನಿಗೂ, ಶಾಂತಮ್ಮಂಗೂ ಒಂದ್ಸಲ ಇಲ್ಲಿ ಬರಕ್ಕೆ ಹೇಳು' ಎಂದು ಹೇಳಿದೆ.

ಹನುಮಂತನ ಮುಖದ ಮೇಲಿನ ಅಕ್ಷರಗಳನ್ನು ಓದಲು ಸಾಧ್ಯವಾಗಲಿಲ್ಲ.

✶ ✶ ✶

ಒಂದಾದ ಮೇಲೊಂದು ಫೋನು. ಗಲಭೆ ಕುರಿತ ಸುದ್ದಿ ತಿಳಿದುಕೊಂಡವರ ಆತಂಕದ ದನಿಗಳು. 'ನಿಂಗೆ ಎಷ್ಟು ಪ್ರಯತ್ನಪಟ್ರೂ ಫೋನೇ ಹೋಗ್ಲಿಲ್ಲ. ಕನಸುಗೆ ಜ್ವರ ಮಾರಾಯ್ತಿ, ಇಲ್ದಿದ್ರೆ ರಾತ್ರಿನೇ ಅಲ್ಗೆ ಬಂದಿರ್ತಿದ್ದೆ. ನಿನ್ನ ಉಮೇದಿಗೆ ಏನನ್ನುವುದು? ಕಣ್ಣಲ್ಲಿ ರಕ್ತ ಇಲ್ಲದವರ ಊರಲ್ಲಿ ಸರ್ಕಾರಿ ಕೆಲಸ ಮಾಡ್ತಿನಿ ಅಂತಿಯಾ. ಮಂಡೆ ಗಟ್ಟಿ ಇದೆ ಅಂತ ಬಂಡೆಗೆ ಜಪ್ಪಿಕೋಬೇಡ. ಮೊದ್ಲು ರಾಜೀನಾಮೆ ಬಿಸಾಕಿ ಬಾ, ನಿನ್ನ ಜೀವದ ಮೇಲೆ ನಿನಗೆ ಆಸೆಯಿಲ್ದೆ ಇರಬಹುದು, ನಮಗಿದೆ' ಎನ್ನುತ್ತ ಮುರಳಿ ನಿದ್ದೆಗೆಟ್ಟು ಕಳೆದ ರಾತ್ರಿಯ ಆತಂಕವನ್ನು ಹೊರಹಾಕಿದ.

'ಅಮೆರಿಕದೋರು ಮನೆಗೆ ಬಂದ್ರೂ ಇನ್ನೂರು ಕಿಲೋಮೀಟರ್ ಆಚೆ ಇರೋರು ಮನೆಗೆ ಬರೋಕೆ ಆಗಲ್ಲ. ನಿಮ್ಮಣ್ಣ ಇದಾರಲ್ಲ, ನನ್ನ ಮಗಳು ಸ್ವೇಟಿಗೇ ಇಪ್ಪತ್ತನೇ ರ‍್ಯಾಂಕ್ ಅಂತ ಕೊಚ್ಚಿಕೊಚ್ಚಿ ಮೆಡಿಕಲ್‌ಗೆ ಸೇರಿಸಿದರು. ಈಗ್ನೋಡು, ಒಂದ್ ರಜವಿಲ್ಲ, ಹಬ್ಬ ಇಲ್ಲ. ಬರೀ ಟೆನ್ಶನ್. ನೀನು ಆ ಹಾಳು ಕೆಲಸ ಬಿಡು. ಅಥವಾ ಆ ಊರು ಉದ್ಧಾರ ಮಾಡಿದ್ದು ಸಾಕು, ಟ್ರಾನ್ಸ್‌ಫರ್ ಮಾಡಿಸಿಕೋ...' ಅಮೆರಿಕದ ರಾಜಕುಮಾರಿಯನ್ನು ನೋಡಿ ಭಾರತ, ಇಲ್ಲಿಯ ನೂರೆಂಟು ಗಲಾಟೆ, ಕಾಯಿಲೆ, ಸರ್ಕಾರಿ ವ್ಯವಸ್ಥೆ ಎಲ್ಲವನ್ನೂ ಬೈಯುತ್ತಿದ್ದ ಅಮ್ಮನಿಗೆ ಸಿಟ್ಟು, ಭಯ, ಕಕ್ಕುಲಾತಿ ಎಲ್ಲವೂ ಉಕ್ಕುಕ್ಕಿ ಬರುತ್ತಿತ್ತು. 'ಹಬ್ಬದ ಕತೆ ಹಾಳಾಯ್ತು. ಹೆಚ್ಚು ರಿಸ್ಕ್ ತಗಬೇಡ, ಆ ಎಮ್ಮೆಲ್ಲೆ ಬಾಯಿಗೆ ಬೀಳಬೇಡ, ಇವತ್ ಅಲ್ಲೇ ಇರು. ಆದ್ರೆ ಹುಷಾರಾಗಿರು' ಅಂದರು ಅಣ್ಣ.

ಹಬ್ಬದ ದಿನ ನಿರ್ಜನವಾಗಿರುವ ಬೀದಿಗಳ ಈ ಊರು. ಓಪಿಡಿಯಲ್ಲಿ ಕೂತು ಕುರುಕ್ಷೇತ್ರವೆಂದರೆ ಹೇಗಿರಬಹುದೆಂದು ಊಹಿಸಿಕೊಳ್ಳತೊಡಗಿದೆ. ಇವತ್ತೂ ಇಲ್ಲೇ ಇರಬೇಕು. ಬೇಗ ನಾರಾಯಣನ ಪೋಸ್ಟ್‌ಮಾರ್ಟಂ ಮುಗಿಸಬೇಕು. ಆಯಮ್ಮ ಬಂದಿರಬಹುದು, ಶಾಂತಮ್ಮ ಬಂದಿರಬಹುದು, ಅವರನ್ನು ಇನ್ಮುಂದೆ ಅಸಿಸ್ಟ್ ಮಾಡಲು ತಯಾರು ಮಾಡಿಕೊಳ್ಳ ಬೇಕು. ಮಾರ್ಚುರಿ ಕಡೆಗೆ ಹೆಜ್ಜೆ ಹಾಕುವಾಗ ಪ್ರಪಂಚದ ಎಲ್ಲ ಭಾರವೂ ನನ್ನ ಹೆಗಲ ಮೇಲೇ ಬಿದ್ದಂತಾಗಿ, ಅದು ದೊಡ್ಡ ಬಂಡೆಯಂತೆ ಎದೆಯೊಳಗೆ ಬೆಳೆಯುತ್ತಿರುವಂತೆ ಭಾಸವಾಯಿತು. ಯಾವುದು ಕೆಲಸ? ಯಾವುದು ಸೇವೆ? ಯಾವುದು ಹೊರೆ? ಎಲ್ಲವೂ ಒಂದರೊಳಗೊಂದು ಹೆಣೆದುಕೊಂಡು ತಲೆಗೂದಲಾಗಿ ಕಾಲಿನ ತನಕ ಬೆಳೆದು ಕಾಲು ತೊಡರತೊಡಗಿತು...

ತೊಡರಿದ್ದು ನೀರಿನ ಪೈಪು. 'ಅಕ್ಕ ಅಕ್ಕ, ಸ್ವಲ್ಪ ತಡಿ. ಈ ಕಡಿಂದ ಸುರುಮಾಡು...' ಎನ್ನುತ್ತ ಎರಡೂ ಕೈಗಳಿಗೂ ಗ್ಲೋವ್ ಹಾಕಿಕೊಂಡ ಹನುಮಂತ ಪೋಸ್ಟ್‌ಮಾರ್ಟಂ ಟೇಬಲ್ಲಿನೆದುರು ನಿಂತು ಆಯಮ್ಮನಿಗೆ ನಿರ್ದೇಶನ ನೀಡುತ್ತಿದ್ದ. 'ನಮ್ಮೆಂಡ್ರು ಹೇಳಿದ್ಕೆ ಮೇಡಂ ಎಸ್ಟ್ ಬೇಜಾರಾಗಿದಾರೋ ಏನೋ, ತಲಕೆಟ್ಟ ಎಂಗಸ್ರ ಯವಾರನೇ ಹಿಂಗೆ, ಅರ್ಥ ಮಾಡ್ಕಳದು ಕಸ್ಟ, ಮಾಡ್ಸದೂ ಕಸ್ಟ. ನನ್ಹೆಂಡ್ತಿ ನೋಡಿದ್ರೆ ಹೆಣ ಕುಯ್ಬೇಡ ಅಂತವಳೆ. ಇಲ್ಲಿ ನೋಡಿದ್ರೆ ಈಯಮ್ಮಗಳು ನಾವೇ ಕುಯ್ತ ಮಾಡ್ತಿವಿ, ಅದ್ಕೇನು ಅಂತ ನೈಫು ಹಿಡ್ದು ನಿಂತವರೆ. ಹೆಣ್ಣು ಜಲ್ಮವೇ, ಮಾತಾಯೇ, ಅಡ್ಡಬಿದ್ದೆ. ಏ ಶಾಂತಕ್ಕೋ, ಸ್ವಲ್ಪ ತಡಿ, ಮೇಡಂ ಬಂದು ನೋಡಿ ಬರ್ಕಳೊ ತಂಕ ಯಾವ್ದೆ ಗಾಯನೂ ಮುಟ್ಟಬಾರದು, ತೊಳೀಬಾರ್ದು, ತಿಳ್ಕ...' ಎನ್ನುತ್ತ ಶವವನ್ನು ಮಗ್ಗುಲು ತಿರುಗಿಸತೊಡಗಿದ.

**ಡಾ॥ ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ
ಕವಲಕ್ಕಿ ಅಂಚೆ, ಹೊನ್ನಾವರ ತಾಲ್ಲೂಕು
ಉತ್ತರ ಕನ್ನಡ ಜಿಲ್ಲೆ – ೫೮೧ ೩೬೧

# ಪ್ರೂಜೆ




ಡಾ॥ ನಾ. ಡಿಸೋಜ

**ಸ**ಣ್ಣ ಮನೆ ಹಳ್ಳದಿಂದ ತುಸು ಮುಂದೆ ಹೋದರೆ ಹನುಮಂತ ನಾಯಕನ ಮನೆ. ಮನೆ ಅಂದರೇನೆ ನೆಲದವರೆಗೂ ಬಾಗಿದ ಹುಲ್ಲು ಹೊದಿಸಿದ ಗುಡಿಸಲು. ಮಣ್ಣಿನ ಗೋಡೆ. ಜಗಲಿಯ ಅಂಚಿಗೆ ಕೋಳಿ ಗೂಡು. ಬಾಗಿಲು ದಾಟಿದರೆ ಕೊಟ್ಟಿಗೆ. ನಂತರದ ಮಲಗೋ ಮನೆ, ಅಡಿಗೆ ಮನೆ, ಮತ್ತೆ ಬಾಗಿಲಿಲ್ಲ. ಹಿಂಬದಿಯ ಬಾಗಿಲು ಇಲ್ಲದಿರಲು ಕಾರಣ ಬಚ್ಚಲು, ಬಟ್ಟೆ ಒಗೆಯುವ, ಪಾತ್ರೆ ತೊಳೆಯುವ ಎಲ್ಲ ಕ್ರಿಯೆ ನಡೆಯುವುದು ಮುಂಚೆ ಬಾಗಿಲಲ್ಲಿಯೇ. ಈ ಮುಂಚೆ ಬಾಗಿಲಿಗೆ ಅಂಟಿಕೊಂಡೇ ಒಂದು ಜಗಲಿ. ಅದನ್ನ ಅವರು ಕಟ್ಟೆ ಎಂದೇ ಕರೆಯುತ್ತಿದ್ದರು. ಮನೆಯಷ್ಟೂ ಅಗಲಕ್ಕೆ ಅದು ಹರಡಿಕೊಂಡಿತ್ತು. ಆ ಮನೆಯ ಮಾತ್ರವಲ್ಲ, ಕೇರಿಯ ಎಲ್ಲ ಕೆಲಸ ಕಾರ್ಯಗಳೂ ನಡೆಯುತ್ತಿದ್ದುದೇ ಅಲ್ಲಿ. ಆಗಾಗ್ಗೆ ಬಂದು ಹೋಗುತ್ತಿದ್ದವರು ಕೂಡ್ರುವುದು, ಅಲ್ಲಿ ತಿರುಗಾಡುವವರು ಕೂಡ್ರುವುದು, ಭತ್ತದ ಚೀಲ, ನೇಗಿಲು ತಂದು ಇಡುವುದು ಇಲ್ಲಿಯೇ. ಮರಿ ಕೋಳಿ ತನ್ನ ಬಳಗವನ್ನ ಕರೆದುಕೊಂಡು ತಿರುಗಾಡುವುದು ಅಲ್ಲಿಯೇ. ಮನೆಯ ಮೊಮ್ಮಕ್ಕಳು ಅಂಬೆ ಇಡುವುದು ಇಲ್ಲಿಯೇ. ಈ ಜಗಲಿಯ ಉದ್ದಕ್ಕೆ ಮೇಲೆ ಒಂದು ಬಳ್ಳಿ ಕಟ್ಟಿ ಹೆಂಗಸರ ಸೀರೆಪಾರೆ, ಗಂಡಸರ ಪಂಚೆಗಿಂಚೆ ಒಣಗಿಸುವುದು ರೂಢಿ. ಇದೆಲ್ಲದರ ಜೊತೆಯಲ್ಲಿ ಈ ಜಗಲಿಯ ಮೇಲೆ ಸದಾ ಕುಳಿತಿರುತ್ತಿದ್ದವ ದನ ಕಾಯೋ ಬಸಣ್ಣ, ಇವನಿಗೆ ಈಗ ನಲವತ್ತು ವರ್ಷ. ಪ್ರಧಾನಿ ಲಾಲ ಬಹದ್ದೂರ ಶಾಸ್ತ್ರಿಗಳು ಜೋಗ ನೋಡಲು ಬಂದವರು ಕೊಗ್ಗಿ ಗ್ರಾಮದ ಮೂಲಕ ಕಾರಿನಲ್ಲಿ ಹಾದುಹೋಗಿದ್ದರಲ್ಲ ಆಗ ಇವನ ತಾಯಿ ಬರ್ಡ್ಲೊಳ್ಳಿ ಪಾರೋತಿ ಹೊಟ್ಟೆಯಲ್ಲಿ ಇವನಿದ್ದ. ಆಗ ಅವಳಿಗೆ ಒಂಬತ್ತು ತಿಂಗಳು. ಶಾಸ್ತ್ರಿಗಳು ಕೊಗ್ಗಿಯ ಮೂಲಕ ಹಾದುಹೋದ ನಾಲ್ಕನೇ ದಿನಕ್ಕೆ ಹುಟ್ಟಿದವ ಇವನು. ಅದೇ ಗಾಳೀಪುರದ ಸೈದೂರಕ್ಕ ಇವನ ಕಳ್ಳುಬಳ್ಳಿ ಕತ್ತರಿಸಿದ್ದು.

ಈ ಬಸಣ್ಣ ಈ ಮನೆಯ ಕಟ್ಟೆಯ ಮೇಲೆ ಸದಾ ಕುಳಿತಿರಲು ಒಂದು ಕಾರಣ ಇದೆ. ಈತ ಎಲ್ಲರಂತೆ ನಡೆಯಲಾರ. ಒಂದು ಕೋಲನ್ನ ಊರಿಕೊಂಡೇ ಇವನು ಅದರ ಮೇಲೆ ತೂಗಾಡುತ್ತ ನಡೆಯಬೇಕು. ಕಾರಣ ಇವನ ಬಲಗಾಲನ್ನ ತೊಡೆಯವರೆಗೆ ಕತ್ತರಿಸಲಾಗಿದೆ. ಈ ಕತ್ತರಿಸಿದ ಬಲಗಾಲನ್ನ ಜೋತಾಡಿಸಿಕೊಂಡೇ ಇವನು ನಡೆಯಬೇಕು. ಹೀಗೆ ನಡೆದುಕೊಂಡೇ ಇವನು ಕೆಲ ದಿನ ತಿರುಗಾಡಿದ್ದೂ ಉಂಟು. ಆದರೆ ಈಗ ಅವನ ಕೈಯಲ್ಲಿ ಆಗುವುದಿಲ್ಲ. ಹೀಗೆಂದೇ ಅವನು ಈ ಮನೆಯ ಕಟ್ಟೆಯ ಮೇಲೆ ಕುಳಿತುಬಿಟ್ಟಿದ್ದಾನೆ. ಈ ಮನೆಯನ್ನ ಬಳಸಿಕೊಂಡು ಹೋಗುವವರು, ಅಲ್ಲಿ ತಿರುಗಾಡುವವರು ಒಂದು ಕ್ಷಣ ನಿಂತು ಇವನನ್ನ ಮಾತನಾಡಿಸುತ್ತಾರೆ.

"ಅಣ್ಣಾ ಗನಗದಿಯಾ ?"

"ಅಣ್ಣಾ ಹೆಂಗ ನಡದದ ದಿನಮಾನ?"

"ಉಷಾರದಿಯ ಅಲ್ವಾ?"

"ಹುಂ" ಅನ್ನುತ್ತಾನೆ ಈತ. ಅಲ್ಲಿ ಕುಳಿತು ದೂರದ ಬಯಲು ಕಾನು ಗದ್ದೆ ನೋಡುತ್ತಾನೆ. ನಿತ್ಯ ತನ್ನ ಮನೆ ಎದುರಿನಿಂದ ಹೋಗುವ ಗೊಲ್ಲೆಯನ್ನ ನೋಡಿ ಮನಸ್ಸನ್ನ ಸಣ್ಣದು ಮಾಡಿಕೊಳ್ಳುತ್ತಾನೆ. ಕೇವಲ ಬಾಯಿಮಾತಿನ ಮೂಲಕವೇ ಈ ಗೊಲ್ಲೆಯನ್ನ ತಹಬಂದಿಗೆ ತರುತ್ತಿದ್ದ ತನ್ನ ಕೆಲಸದ ಬಗ್ಗೆ ಹೆಮ್ಮೆ ಮೂಡುತ್ತದೆ. ನಿಧಾನವಾಗಿ ಹಿಂದಿನ ಆ ದಿನಗಳ ಕುರಿತು ಚಿಂತಿಸುತ್ತಾನೆ.

ಊರಿನ ಕೆಲವರ ಪಾಲಿಗೆ ಇವನು ಈಗಲೂ ದನ ಕಾಯೋ ಹುಡುಗನೇ. ಇವನನ್ನ ಚಿಕ್ಕಂದಿನಿಂದ ಬಲ್ಲವರು ಹೀಗೆಯೇ ಕರೆಯುತ್ತಾರೆ.

ಅದೇನು ನಲವತ್ತು ವರುಷದ ಇವನನ್ನ ದನ ಕಾಯೋ ಹುಡುಗ ಎಂದು ಕರೆಯುತ್ತಾರೆ ಎಂದು ಕೇಳಬಹುದು. ಇವನ ಈ ಹೆಸರಿಗೂ ಇವನ ಕಾಲು ಹೋದುದಕ್ಕೂ ಸಂಬಂಧ ಇದೆ. ಅದನ್ನ ಹೇಳಬೇಕು ಅಂದರೆ ಮತ್ತೆ ಹಿಂದಕ್ಕೆ ಹೋಗಬೇಕು.

ಇವನು ಬಾವಿಕಟ್ಟೆ ಹನುಮನ ಎರಡನೇ ಮಗ. ಮೊದಲನೆಯವನು ಈರಣ್ಣ. ಈರಣ್ಣನಿಗೆ ಐದು ವರ್ಷ ಆಗಿದೆ ಅನ್ನುವಾಗ ಹುಟ್ಟಿದವ ಇವನು. ಇವನಿಗೆ ಸಾಗರದ ರಾಮಚಂದ್ರ ಜೋಯಿಸರು ಬಸಣ್ಣ ಎಂದು ಹೆಸರನ್ನ ಇಡಲು ಹೇಳಿದ್ದರಂತೆ. ಅವರು ಹುಟ್ಟಿದ ಸಮಯ ದಿನ ಎಲ್ಲ ನೋಡಿ ಸರಿಯಾಗಿಯೇ ಹೇಳಿದ್ದರು. ಅದೇ ಹೆಸರನ್ನ ಇವನಿಗೆ ಇಟ್ಟೂ ಆಗಿತ್ತು. ಆದರೆ ಈತನ ಅಣ್ಣ ಈರಣ್ಣ ಆಗಲೇ ಶಾಲೆಗೆ ಹೋಗ ತೊಡಗಿದ್ದರಿಂದ ಇವನನ್ನ ಶಾಲೆಗೆ ಸೇರಿಸಲು ಯಾರೂ ಮುಂದಾಗಲಿಲ್ಲ. ಇವನು ಕೊಂಚ ಬೆಳೆದಿದ್ದಾನೆ ಅನಿಸಿದಾಗ ಇವನನ್ನ ಕಳಿಸಿದ್ದು ಮನೆಯಲ್ಲಿದ್ದ ದನಗಳನ್ನ ಕಾಯಲು. ಮನೆಯಲ್ಲಿ ಒಂದು ಹಸ ಇತ್ತು. ಅದಕ್ಕೊಂದು ಕರ. ಈ ಕರ ಹಸುವನ್ನ ನೋಡಲು ಈ ಬಸಣ್ಣ ಅನ್ನುವ ಹುಡುಗ ಮೀಸಲಾಗಿ ಉಳಿದ. ಇವನೋ ಇದರಲ್ಲಿ ಪಳಗಿಬಿಟ್ಟ. ಕೊಗ್ಗಿಯ ಎಲ್ಲ ಮಕ್ಕಳು ಪಾಟೀ ಚೀಲ ಹಿಡಿದು ಶಾಲೆಗೆ ಹೊರಟರೆ ಈತ ಕಂಬಳಿ ಕೊಪ್ಪೆ ತಲೆಗೆ ಏರಿಸಿಕೊಂಡು ಕೈಯಲ್ಲಿ ಬೆತ್ತ ಹಿಡಿದು ದನ ಕಾಯಲು ಹೊರಡುತ್ತಿದ್ದ. ಇವನಿಗೆ ಅದರಲ್ಲೇ ಆಸಕ್ತಿ. ಅದೇ ಬೇಕು. ಹೀಗಾಗಿ ಇವನ ಹೆಸರೇ ಕೆಲಸಕ್ಕೆ ತಕ್ಕಂತೆ ಆಯಿತು. ಈತ ದನ ಕಾಯೋ ಶಣ್ಣ ಹುಡುಗ ಆದ. ಇವನೂ ಈ ಬಗ್ಗೆ ತಕರಾರು ತೆಗೆಯಲಿಲ್ಲ. ಬೇರೆಯವರೂ ಒಪ್ಪಿಕೊಂಡರು. ಮನೆಯಲ್ಲಿದ್ದ ಹಸ, ಕರದ ಜೊತೆ ಬೇರೆ ದನಗಳೂ ಸೇರಿಕೊಂಡವು.

ಮುಂದೆ ಇವನು ಬೆಳೆದು ಎಂಟು ಒಂಬತ್ತು ವಯಸ್ಸು ಆದಾಗ ಕಾಶೀ ಕೆರೆ ಸದಾಶಿವ ಗೌಡರು ಹನುಮಂತ ನಾಯಕನನ್ನ ಕರೆ ಕಳುಹಿಸಿದರು.

"ಒಡೆಯಾ, ಬಂದೋಗು ಅಂತ ಯೋಳಿದ್ರಂತೆ," ಎಂದಾತ ಹೆಗಡೆಯವರ ಮನೆ ಹಿಂದಿನ ನಾಯಿ ಕಟ್ಟೆ ಬಳಿ ನಿಂತು ತಲೆ ಕೆರೆದ ಎಂಜಲು ನುಂಗಿದ. ಪರಪರನೆ ತೊಡೆ ಕೆರೆದ.

"ಹೌದು ಬಾ" ಎಂದವರು ಮೊದಲು ಒಂದು ಎಲೆ, ಒಂದು ಅಡಕೆ ಕೊಟ್ಟು ಸುಣ್ಣದ ಕಾಯನ್ನ ಕಟ್ಟೆಯ ಮೇಲೆ ಇಟ್ಟರು.

"ನಿನ್ ಮಗ, ಸಣ್ಣವನು ಏನು ಮಾಡತಾನೋ ಮತ್ತೆ?"

"ದನಗಿನ ಕಾಯ್ತಾನೆ ಒಡೆಯಾ."

"ಅವನ್ನ ಶಾಲೆಗೆ ಕಳಿಸಲಿಲ್ಲ ಅನ್ನು ಹಂಗಾರೆ."

"ಇಲ್ಲ ಒಡೆಯಾ...ಇವನ ಅಣ್ಣ ಬರ ಹುಡುಗ ಆಗಾನೆ... ಮನೆಗೊಬ್ಬ ಬರ ಕಲತ್ರೆ ಸಾಕಲ್ಲವಾ..."

"ಅದೂ ಸರಿ ಅನ್ನು... ಊರೆಲ್ಲ ಕಲಿತು ಮಾಡಬೇಕಾದ್ದು ಆದರು ಏನದೆ ಅಲ್ವಾ?"

ಅವರು ಮಾತನ್ನ ಮುಂದುವರಿಸಿ ಮತ್ತೂ ಎಂದರು, "ಅದರಲ್ಲೂ ನಿಮ್ಮ ಜನ ಕಲಿತು ಏನಯ್ಯ ಮಾಡಬೇಕಾಗಿದೆ. ಎಷ್ಟೇ ಕಲತ್ರು ಗಳೇ ಹೂಡೋದು ತಪ್ಪುತ್ತ!"

ಅವರು ಹನುಮನನ್ನ ಒಂದು ಸಾರಿ ನೋಡಿದರು. ತೋಳಿಲ್ಲದ ಒಂದು ಲಂಡ ಅಂಗಿ, ಒಂದು ತುಂಡು ಪಂಚೆ ಹೆಗಲ ಮೇಲೊಂದು ಕಂಬಳಿ, ಸೊಂಟಕ್ಕೆ ಒಡ್ಯಾಣ ಕಡು ಕಪ್ಪು ದೇಹ ಸಪೂರವಾದ ಕೈ ಕಾಲುಗಳು. ಕಾಲ ಮೇಲೆ ಅಲ್ಲಲ್ಲಿ ಕಜ್ಜಿಯದೋ ಮತ್ತೇನೋ ಕಲೆಗಳು. ಬೋಳಿಸದೆ ಬೆಳೆದು ನಿಂತ ಕೂದಲುಗಳಿಂದ ತುಂಬಿದ ಕೆನ್ನೆ.

"ಹೌದಾ ಮೇಯ್ಸಾಕೆ ನಿನ್ನ ಮನೇಲಿ ಎಷ್ಟ ಗಂಟಿ ಅದಾವೆ ಮಾರಾಯ?"

"ಗಂಟಿ ಎಲ್ಲಿ ಒಡೆಯಾ? ಒಂದು ದನ ಒಂದು ಕರ... ಅದೂ ನಮ್ಮ ದೊಡ್ಡವನಿಗೆ ಅಂತ ಅವನ ಅಜ್ಜ ಕೊಟ್ಟದ್ದು. ಇಷ್ಟ ವರ್ಷಕ್ಕೆ ಅದು ಕರು ಹಾಕಿದೆ. ಜೊತೆಗೆ ಬೇರೆ ಒಂದೆರಡು ಗಂಟಿಗಳು ಅದಾವೆ."

"ನೀನೊಂದು ಕೆಲಸ ಮಾಡು" ಗೌಡರು ಮಾತನ್ನ ಬೆಣ್ಣೆಯಲ್ಲಿ ಅದ್ದುತ್ತ ಎಂದರು.

"ನಮ್ಮಲ್ಲಿ ಒಂದಿಷ್ಟು ದನ, ಎಮ್ಮೆ, ಎತ್ತು ಅಂತ ಅವೆ... ಒಂದೆರಡು ಮುದಿ ದನಗಳೂ ಅವೆ. ಇವನ್ನ ನಮ್ಮಲ್ಲಿರೋ ಆಳುಕಾಳು ನೋಡಿ ಕೊಳ್ಳೋದುಂಟು... ಆದರೆ ಇವರಿಗೆ ಇವರದ್ದೇ ಕೆಲಸ... ಹೊರಗೆ ಬಿಟ್ಟ ದನಕರ ಮನೆಗೆ ಬಂದರ ಬಂದ್ವು ಇಲ್ಲ ಅಂದ್ರೆ ಇಲ್ಲ... ನಿನ್ ಮಗ ಒಂದು ಕೆಲಸ ಮಾಡಲಿ... ದಿನಾ ಬಂದು ಇವನ್ನ

ಹೊಡಕೊಂಡು ಹೋಗಲಿ... ಗದ್ದೆ ಬಯಲಾಗೆ ಒಯ್ದು ತರುಬಿದ್ರೆ ಅವುಗಳ ಪಾಡಿಗೆ ಅವು ಮೇಯ್ತ, ಮಲಗಿ ಮೆಲಕು ಹಾಕ್ತ ಸಂಜೆತನಕ ಇರತಾವೆ... ಸಂಜೆ ಮನೆಗೆ ಹೊಡಕೊಂಡು ಬಂದ್ರ ಆಯ್ತು... ಏನಂತಿ ?"

ಹನುಮ ಏನು ಅಂದಾನು. ಮಗನ ಬಗ್ಗೆ ಅವನು ಎಂದೂ ಯೋಚನೆ ಮಾಡದವ. ಹಿರಿಯ ಮಗ ಅವರು ಇವರಿಗೆ ಬರುವ ಪತ್ರ ಲೋಟೀಸು ಓದಿ ಹೇಳುವುದೇ ಅವನ ಪಾಲಿನ ದೊಡ್ಡ ವಿಷಯವಾಗಿತ್ತು. ಇನ್ನು ಚಿಕ್ಕವನಿಗೆ ಒಂದು ಕೆಲಸ ಇತ್ತು, ಅವನು ಅದನ್ನೇ ಮಾಡಿಕೊಂಡು ಇರಲಿ ಎಂದೂ ಆತ ಯೋಚಿಸಿದ್ದ. ಈಗ ಗೌಡರು ಹೇಳಿದ ಮಾತು ಸರಿ ಅನಿಸಿ ಆತ –

"ಸರಿ ಬುಡಿ ಒಡೆಯ, ನಾಳೆಯಿಂದ ಶಣ್ಣನ್ನ ಕಳಸ್ತೀನಿ, ಅದೇನಾರ ಮಾಡಿಕೊಳ್ಳಿ" ಎಂದ.

ಹನುಮನ ಮಗ ಮಾರನೇ ದಿನ ಗೌಡರ ಮನೆ ಹಿಂದಿನ ನಾಯಿ ಕಟ್ಟೆಯ ಬಳಿ ಹಾಜರಾದ. ಮೂಗಿನಿಂದ ಇಳಿಯುತ್ತಿದ್ದ ಗೊಣ್ಣೆಯನ್ನ ಆಗಾಗ್ಗೆ ಸುರ್ ಎಂದು ಒಳಗೆ ಎಳೆದುಕೊಳ್ಳುತ್ತ ಅಲ್ಲಿ ಕಟ್ಟಿ ಹಾಕಿದ ನಾಯಿ ಡಾಬು, ಡುಮ್ಮಿ, ಟೈಗರ್‌ಗಳನ್ನ ನೋಡುತ್ತ ನಿಂತ. ಅದಾವಾಗಲೋ ಹೊರಬಂದ ಗೌಡರು ಇವನನ್ನ ಕಂಡು ಎಲ್ಲ ನೆನಪಾಗಿ ಮನೆಯ ಆಳನ್ನ ಕರೆದು – "ಚೌಡ, ಇನ್ನ ಕೊಟ್ಟಿಗೇಲಿ ಇರೋ ದನ ಕರಾನ ಈ ಹುಡುಗ ಮೇಯಿಸಿಕೊಂಡು ಬರತಾನೆ...ಕೊಟ್ಟಿಗೆ ದಣಪೆ ತೆಗೆದು ದನ ಬಿಡೋ ಕೆಲಸ ಮಾಡು, ಸಂಜೆ ದನ ಬಂದಮ್ಯಾಲೆ ಕೊಟ್ಟಿಗೆ ದಣಪೆ ಹಾಕು" ಎಂದು ಕೆಲಸ ಹೇಳಿ ಅಲ್ಲಿಂದ ಮಾಯವಾದರು.

ಚೌಡ ಒಡೆಯರ ಮಾತಿನಂತೆ ಕೊಟ್ಟಿಗೆಯ ದಣಪೆ ಸರಿಸಿದ. ದನದ ಗೊಲ್ಲೆ ಹೊರ ನುಗ್ಗಿತು. ದನಗಳ ಹಾಲು ಕರೆದು ಬಿಟ್ಟಿದ್ದರಿಂದ ಕೆಲ ದನಗಳು ಕರುಗಳನ್ನ ಕರೆದುಕೊಂಡೇ ಹೊರ ಬಂದವು. ಬಂಧನದಿಂದ ಬಿಡುಗಡೆ ಆಯಿತು ಅನ್ನುವ ಕಾರಣಕ್ಕೆ ಅವು ಕಾನಿನತ್ತ ನುಗ್ಗಿದವು. ಚೌಡ, ಹುಡುಗನಿಗೆ –

"ಬೆತ್ತದ ಹಿಂಡಲಿನಿಂದ ಒಂದು ಬೆತ್ತ ಮುರುಕೋ...ಇಲ್ಲ ಅಂದ್ರೆ ಇವು ಮಾತು ಕೇಳಲ್ಲ" ಎಂದು ತಾನೇ ಮುಂದಾಗಿ ಹಿತ್ತಲಲ್ಲಿ ಇದ್ದ ಬೆತ್ತದ ಹಿಂಡಲಿನಿಂದ ಒಂದು ಬೆತ್ತ ಕತ್ತರಿಸಿ ಕೊಟ್ಟು ಈ ಹುಡುಗನಿಗೆ ದೀಕ್ಷೆ ನೀಡಿದ ಚೌಡ. ಹುಡುಗ ದನಗಳ ಹಿಂಡಿನ ಹಿಂದೆ ಹೊರಟ. ತನಗೆ ಒಡೆಯರು ವಹಿಸಿದ ಕೆಲಸವನ್ನ ಹುಡುಗ ನಿಷ್ಠೆಯಿಂದ ಮಾಡತೊಡಗಿದ. ಹನುಮ, ಅವನ ಹೆಂಡತಿ, ಕೇರಿಯವರು, ಊರವರು, ಪಕ್ಕದ ಹಳ್ಳಿಗಳವರು, ಮುಖ್ಯವಾಗಿ ಒಡೆಯರ ಮನೆಯ ದನ, ಎತ್ತು ಎಮ್ಮೆ ಕರುಗಳು ಇವನನ್ನ ಒಪ್ಪಿಕೊಂಡವು. ಈ ಕ್ಷಣದಿಂದಲೇ ಹನುಮನ ಎರಡನೇ ಮಗ ಈರಣ್ಣ ಮನೆಯವರ, ಜನರ ಗೌಡರ ಬಾಯಲ್ಲಿ "ದನ ಕಾಯೋ ಶಣ್




ಹುಡುಗ" ಎಂದಾದ. ಈ ಹೆಸರೇ ಒಂದು ಗೌರವದ ಸಂಕೇತ ಎಂದು ತಿಳಿದ ಈ ಹುಡುಗ ತಕರಾರು ಎತ್ತಲಿಲ್ಲ. ಉಳಿದವರೂ ಒಪ್ಪಿಕೊಂಡರು. ಕೆಲವೇ ದಿನಗಳಲ್ಲಿ ಇವನ ಮೂಲ ಹೆಸರು ಮರೆತುಹೋಗಿ ಈತ "ದನ ಕಾಯೋ ಶಣ್ ಹುಡುಗ" ಎಂದೇ ಪ್ರಖ್ಯಾತನಾದ.

ತಲೆಗೊಂದು ಹಾಳೆ ಟೋಪಿ, ಮೈಮೇಲೆ ಗೌಡರ ಮಗನ ತೇಪೆ ಹಚ್ಚಿದ ಚೌಕಳೀ ಅಂಗಿ, ಕೆಳಗೆ ತೂಗಿಬಿದ್ದ ಚಡ್ಡಿ, ಕಾಲಲ್ಲಿ ಗೌಡರ ಆಳು ಚೌಡ ಕೊಟ್ಟ ಅವನ ಹಳೆಯ ಚಪ್ಪಲಿ, ಹೆಗಲ ಮೇಲೊಂದು ತುಂಡು ಕಂಬಳಿ, ಕೈಲಿ ಬೆತ್ತದ ಕೋಲು, ಇವಿಷ್ಟು ಧರಿಸಿ ಶಣ್ ಹುಡುಗ ದನ ಕರು ಹೊಡೆದುಕೊಂಡು ಹೊರಟ ಎಂದರೆ ಅದು ಊರಿಗೆಲ್ಲ ತಿಳಿಯುತ್ತದೆ. ಕೊಂಚ ದೂರ ಹಳ್ಳಿ ಮನೆಗಳ ಮುಂದಿನಿಂದ ಹೋಗಿ ನಂತರ ತುಸು ದೂರ ಹೆದ್ದಾರಿಯಲ್ಲಿ ಸಾಗಿ ನಂತರ ಗುಲಗುಂಜಿ ಕಾಡಿನತ್ತ ಹೊರಳಿದರೆ ಈ ಹುಡುಗನ ಕೆಲಸ ಅರ್ಧ ಆದ ಹಾಗೆ. ಮುಂದೆ ಮಂಕಾಳೆ ಬ್ಯಾಣ ಇದೆ, ಅಲ್ಲೊಂದು ಅರಳೀ ಮರಗಳ ಬನ ಇದೆ, ಬನದೊಳಗೆ ಕಪ್ಪು ನೆರಳಿದೆ, ತುಸು ದೂರದಲ್ಲಿ ಕಾಶೀ ಹೊಂಡದ ಒಂದು ಸೆಲೆ ಚಾಚಿಕೊಂಡಿದೆ. ಹತ್ತಿರದಲ್ಲಿ ಒಂದೆರಡು ತೋಟಗಳಿವೆ, ಈ ತೋಟಗಳ ಅಂಚಿನಲ್ಲಿ ಹಸಿರು ಬೆಳೆದಿದೆ. ದನ ಕರು ಅಲ್ಲೆಲ್ಲ ಮೇಯುತ್ತವೆ, ನೀರಿಗೆ ನಾಲಿಗೆ ಒಡ್ಡುತ್ತವೆ. ಮೇಲೆ ಹತ್ತಿ ನೆರಳಿಗೆ ಮೈ ಚಾಚುತ್ತವೆ. ಶಣ್ ಹುಡುಗನೂ ತನಗೊಂದು ಜಾಗ ಮಾಡಿಕೊಂಡಿದ್ದಾನೆ. ಅಲ್ಲಿ ಬಂದು ಅವನೂ ಕಂಬಳಿ ಹಾಸುತ್ತಾನೆ. ದೂರದ ಬರದವಳ್ಳಿ ಗುಡ್ಡದಲ್ಲಿ ರೈಲು 'ಕೂ' ಎಂದು ತನ್ನ ಮೈ ಎಳೆದುಕೊಂಡು ಹೋಗುವ ತನಕ ಇಲ್ಲಿ ದನಕರುಗೆ ಶಣ್ಣ ಹುಡುಗನಿಗೆ ವಿಶ್ರಾಂತಿ. ನಂತರ ಬಬಬ್ಬಬ್ಬಬ, ಕತ್ಲಾತು ಹೋಗಾನ, ಚೆಲುವಾ ಎತ್

ಮುಕಳಿ ಹೊಂಟೆ? ನಂದಿನಿ ನಡೀ ಮನಿಗೆ, ಯೇಯ್ ಬಸವ ಸೊಕ್ಕು ಬಿಡಲಿಲ್ಲ ನೀನು, ಅಂಬಾ ಬಾ ಬಾ, ಇತ್ಯಾದಿ ಮಾತುಗಳು ಹಳ್ಳಿ ಜನರಿಗೆ ದನಗಳ ಗೊಲ್ಲೆ ತಿರುಗಿ ಬಂತೆಂದು ತಿಳಿಸಿಕೊಡುತ್ತವೆ.

ಈಗೀಗ ಶಣ್ಣ ಹುಡುಗನಿಗೆ ಕಾವಲು ಕಾಯಲು ದನಗಳ ಸಂಖ್ಯೆ ಹೆಚ್ಚಾಗಿದೆ. ಹಳ್ಳಿಯ ಮೊರಗ್ಯೆ ಹುಚ್ಚಪ್ಪ, ಬಿಳಿ ಮಚ್ಚೆ ಸಣ್ಣಪ್ಪ, ತೊದಲ ಕನ್ನ, ಮಾಲೇರ ಬಸ್ಯ, ಗಾಡಿಗ ಗಣಪ ಮೊದಲಾದವರ ದನ, ಎಮ್ಮೆಗಳೂ ಇವನ ಗೊಲ್ಲೆಗೆ ಸೇರ್ಪಡೆ ಆಗಿವೆ. ಇವರೆಲ್ಲ ಒಂದು ಎರಡು ಗಿದ್ನ ಭತ್ತ ಕೊಟ್ಟು ದನ ಕಾಯೋ ಶಣ್ ಹುಡುಗನನ್ನ ಚೆನ್ನಾಗಿ ಇರಿಸಿಕೊಂಡಿದ್ದಾರೆ. ಇದಕ್ಕೆ ಗೌಡರ ತಕರಾರು ಕೂಡ ಇಲ್ಲ.

ಬಹಳ ಮುಖ್ಯವಾಗಿ, ಈ ಹುಡುಗ ದನ ಕರುಗಳನ್ನ ಚೆನ್ನಾಗಿ ಅಂದರೆ ಚೆನ್ನಾಗಿ ನೋಡಿಕೊಳ್ಳುತ್ತಾನೆ. ಎಲ್ಲೆಲ್ಲಿಯೋ ತಪ್ಪಿಸಿಕೊಂಡು ಹೋಗುವ ದನಗಳ ಕೊರಳಿಗೆ ಗಳಗಂಟೆ ಮಾಡಿ ಕಟ್ಟಿದ್ದಾನೆ. ಆ ದನ ಎಲ್ಲೇ ಇರಲಿ ಕುತ್ತಿಗೆಯಲ್ಲಿಯ ಗಳಗಂಟೆ ಸದ್ದು ಮಾಡುತ್ತದೆ.

ಗುಂಪಿನಲ್ಲಿ ಎಲ್ಲ ದನಗಳನ್ನ ತಿವಿದು ಕೀಟಲೆ ಮಾಡುವ ದನಗಳ ಕುತ್ತಿಗೆಗೆ ಕುಂಟೆ ಕಟ್ಟಿದ್ದಾನೆ. ಇನ್ನೂ ಮಾತು ಕೇಳದ ದನದ ಜೊತೆಗೆ ಸಾಧು ದನವೊಂದನ್ನ ಕಟ್ಟಿ ಅದರ ಸೊಕ್ಕು ಅಡಗಿಸಿದ್ದಾನೆ. ದನಗಳಿಗೆ ನಂದಿನಿ, ತುಂಗೆ, ಭದ್ರೆ, ಸುರಭಿ, ಕಾಮಧೇನು, ಸತ್ಯವತಿ ಅಂತೆಲ್ಲ ಹೆಸರು ಇರಿಸಿದ್ದಾನೆ. ಆ ಆ ದನದ ಹೆಸರನ್ನ ಹಿಡಿದು ಕೂಗಿದರೆ ಅವು ಬರುತ್ತವೆ ಕೂಡ. ಕೆಲವಕ್ಕೆ ಪ್ರೀತಿಯಿಂದ ಬುದ್ಧಿ ಕಲಿಸಿದ್ದಾನೆ. ಕೆಲವಕ್ಕೆ ಜೋರು ಮಾಡಿ ದಾರಿಗೆ ತಂದಿದ್ದಾನೆ. ಮಧ್ಯಾಹ್ನ ಕಾಶಿ ಹೊಂಡಕ್ಕೆ ಈ ದನ, ಕರು, ಎಮ್ಮೆ, ಇಳಿಸಿ ಸ್ನಾನ ಮಾಡಿಸುತ್ತಾನೆ.

ಇವನ ಗೊಲ್ಲೆಯ ಒಂದು ಮುಡದಾರ ಹಸು ಕೇಶವ ಹೆಗಡೆಯವರ ತೋಟಕ್ಕೆ ನುಗ್ಗಿತು. ವಿಷಯ ತಿಳಿದ ಹೆಗಡೆಯವರು ಇದನ್ನ ಹಿಡಿಸಿ ಎಳೆದೊಯ್ದು ಅದರ ಮುಂದೆ ಮೆಣಸಿನ ಹೊಗೆ ಹಾಕಿಸಿದರು. ದನ ದಿಮಿ ದಿಮಿ ಕುಣಿಯಿತು. ಅದರ ಕಣ್ಣಲ್ಲಿ ಧಾರೆ ಧಾರೆಯಾಗಿ ನೀರು ಸುರಿಯಿತು. ಈ ವಿಷಯ ತಿಳಿದ ಈ ಶಣ್ಣ "ಹೆಗಡೇರೆ, ನೀವು ಮನುಷ್ಯರೇನ್ರಿ" ಎಂದು ಜಗಳ ಆಡಿ ಬಂದ. ಈ ಜಗಳ ನಿಲ್ಲಿಸಲು ಸಾಕ್ಷಾತ್ ಗೌಡರೇ ಹೋಗಬೇಕಾಯಿತು.

ಹೀಗೆ ಶಣ್ಣ ತನ್ನ ಪಾಲಿನ ಕೆಲಸವನ್ನ ತೃಪ್ತಿಕರವಾಗಿ ಮಾಡಿದ. ಇವನ ಕೆಲಸ ಕಂಡು ಗೌಡರು, ಹಳ್ಳಿಯ ಸಮಸ್ತ ಜನ ಮೆಚ್ಚುಗೆ ವ್ಯಕ್ತಪಡಿಸಿದರು.

"ಹೀಗೆ ಮೂಕ ಪ್ರಾಣಿಗಳ ಸೇವೆ ಮಾಡೋರು ಸುತ್ತ ಐವತ್ತು ಮೈಲಿ ಸುತ್ತಳತೆಯಲ್ಲಿ ಇನ್ನೊಬ್ಬರು ಇಲ್ಲ ಬಿಡಿ" ಎಂದು ಎಲ್ಲರೂ ಶಹಬ್ಬಾಸ್ ಎಂದರು.

ಈ ಶಣ್ಣನ ನಿಷ್ಠೆ ಗೊತ್ತಾಗುತ್ತಿದ್ದುದು ದೀಪಾವಳಿ ಸಂದರ್ಭದ ಗೋ ಪೂಜೆ ಸಮಯದಲ್ಲಿ. ಗೌಡರ ಕೊಟ್ಟಿಗೆಯ ಮುಂಭಾಗದಲ್ಲಿ ಈತ ಗೋ ಪೂಜೆಗೆ ಸಕಲ ಸಿದ್ಧತೆ ಮಾಡುತ್ತಿದ್ದ. ಕೊಟ್ಟಿಗೆಯಲ್ಲಿ ಇರುವ ಎಲ್ಲ ಗೋವುಗಳಿಗೆ ಸ್ನಾನ. ಎಲ್ಲ ಗೋವು ಎತ್ತು ಎಮ್ಮೆಗಳಿಗೂ ಅಡಕೆ ಹಾರ, ಗೊಂಡೆ ಹೂವಿನ ಹಾರ, ಚಪ್ಪೆ ರೊಟ್ಟಿ, ಮೈಮೇಲೆ ಬಣ್ಣದ ಮುದ್ರೆ, ಕೈ ಗುರುತು, ಹಸಿರು ಬಣ್ಣ, ಗೌಡರೇ ಬಂದು ಪ್ರತಿ ಗೋವಿಗೂ ಪೂಜೆ ಮಾಡಿ ಕುಂಕುಮ ಹಚ್ಚಬೇಕು, ಕೈ ಮುಗೀಬೇಕು, ಆರತಿ ಎತ್ತಬೇಕು. ಆ ಸಮಯದಲ್ಲಿ ಮನೆ ಮಂದಿ ಅಲ್ಲಿರಬೇಕು. ಗೌಡರ ಮನೆಯ ಕಾಲು ಪೂಜೆ ಊರಿಗೆಲ್ಲ ಪ್ರಖ್ಯಾತ.

ನಂತರ ಈ ಗೊಲ್ಲೆಯನ್ನ ಊರ ಪ್ರಮುಖ ಬೀದಿಯಲ್ಲಿ ಮೆರವಣಿಗೆ ವಯ್ಯುತ್ತಿದ್ದ ಶಣ್ಣ. ಯಾರೂ ಹುಡುಗರು ಗೋವಿನ ಅಲಂಕಾರವನ್ನ ಹರಿಯ ಬಾರದು, ದನಕರುಗಳನ್ನ ಓಡಿಸಿಕೊಂಡು ಹೋಗಬಾರದು. ದೋಟಿ ಹಿಡಿದು ಹಾರ ಹರಿಯಲು ಬಂದವರನ್ನ ಓಡಿಸುತ್ತಿದ್ದ.

“ಗೋ ಪೂಜೆ ಅಂದರೆ ಅವುಗಳಿಗೆ ಹಬ್ಬ ಅಲ್ವಾ...ಅವುಗಳಿಗೆ ಕಾಟ ಕೊಡಬೇಡಿ...ಅವು ಊರಾಗೆ ಹೋಗಿಬರಲಿ ಬಿಡಿ” ಅನ್ನುತ್ತಿದ್ದ.




ಇಂತಹ ಗೋ ಪೂಜೆಯನ್ನ ಗೌಡರು, ಊರಿನ ಜನ ನಿರೀಕ್ಷಿಸುತ್ತಿದ್ದರು. ಗೋ ಪೂಜೆ ಬರಲಿ ಎಂದು ಕಾಯುತ್ತಿದ್ದರು. ಕಾದುನೋಡಿ ಸಂತಸ ಪಡುತ್ತಿದ್ದರು. ಶಣ್ಣನೊಡನೆ ಸಹಕರಿಸುತ್ತಿದ್ದರು. ಇಂತಹ ಹಲವಾರು ಗೋ ಪೂಜೆಗಳನ್ನ ಶಣ್ಣ ಊರಿನಲ್ಲಿ ಮಾಡಿದ್ದ. ಗೌಡರ ಮನೆ ಗೋ ಪೂಜೆ ಅಂದರೆ ಊರಿಗೇ ಸಂಭ್ರಮ. ಈ ನಡುವೆ ಬರದವಳ್ಳಿಯ ಬ್ಯಾಂಡ್ ಮುನಿಯನ ವಾಲಗ ಬೇರೆ ಬಂದು ಸಾಥ್ ಕೊಡುತ್ತಿತ್ತು. ಇದರ ಪೇಂ ಸದ್ದಿಗೆ ಹಳ್ಳಿ ಹಳ್ಳಿ ಜನ ಸೇರುತ್ತಿದ್ದರು. ಈಗ ಐದು ವರ್ಷಗಳ ಹಿಂದೆ ಎಂದಿನಂತೆ ಗೋ ಪೂಜೆ ಬಂದಿತ್ತು. ಕಾಲಿಗೆ ಚಕ್ರ ಕಟ್ಟಿಕೊಂಡವನಂತೆ ಶಣ್ಣ ಕೆಲಸಕ್ಕೆ ನಿಂತ. ಇಡೀ ಕೊಟ್ಟಿಗೆಯನ್ನ ಶುಚಿ ಮಾಡಿದ. ಹೊಂಡ ಬಿದ್ದೆಡೆಯಲ್ಲಿ ಗೊಚ್ಚು ಹಾಕಿ ಸರಿಪಡಿಸಿದ. ಕಾಡಿನಿಂದ ಗೆಂಜಿಗನ ಸೊಪ್ಪು, ನೆಲ್ಲಿ ಸೊಪ್ಪು, ಗೇರಕಾಯಿ, ಅಮೃತ ಬಳ್ಳಿ, ಬಗನಿ ಸೊಪ್ಪು ಇತ್ಯಾದಿ. ದನಕರುಗಳಿಗೆ ಕಾಯಿಲೆ ಬಂದಾಗ ಔಷಧಿ ಮಾಡುವ ಸೊಪ್ಪನ್ನ ತಂದು ಕಂತೆ ಕಟ್ಟಿ ಅಲ್ಲೊಂದು ಕಡೆ ಸಿಕ್ಕಿಸಿದ. ದನಕರುಗಳಿಗೆ ಕುತ್ತಿಗೆಗೆ ಕಟ್ಟಲು ಪ್ರಸಾದ ಸಿದ್ಧಪಡಿಸಿದ. ಪ್ರಸಾದಕ್ಕೆಂದು ಕಾಡಿನಿಂದ ಪಚ್ಚೆ ತೆನೆ, ಹಿಂಗಾರ, ಮಾವಿನ ಸೊಪ್ಪು, ಅಂಬೋಡೆ ಎಲೆ, ತುಳಸಿ ತೆನೆ, ಚೆಂಡು ಹೂ ಎಂದೆಲ್ಲ ಸಂಗ್ರಹಿಸಿದ. ಈ ಪ್ರಸಾದಕ್ಕೆ ಹಣ್ಣು, ಅಡಕೆ ಸೇರಿಸದಿದ್ದರೆ ಅದಕ್ಕೊಂದು ಲಕ್ಷಣ ಇರುವುದಿಲ್ಲ ಎಂದೇ ಕೇರಿಯ ಒಂದಿಬ್ಬರು ಹುಡುಗರನ್ನ ಕರೆದುಕೊಂಡು ಹೆಗಡೆಯವರ ಅಡಕೆ ತೋಟಕ್ಕೆ ಹೋದ. ಹೆಗಡೆಯವರು ಕವಳ ತಿನ್ನುತ್ತ ಚಿಟ್ಟೆಯ ಮೇಲೆ ಕುಳಿತಿದ್ದರು.

“ಏನೋ ಶಣ್ಣಿ ಬಂದೆ ?” ಎಂದು ಕೇಳಿದರು.

“ಕಾಲು ಪೂಜೆ ಅಲ್ರಾ...ಹಣ್ಣಡಕೆ ಬೇಕಿತ್ತು ಬಂದೆ.”

ಗೋ ಪೂಜೆ ಅಂದ್ರೆ ಕೊಡಲ್ಲ ಅನ್ನೂದುಂಟ...ಹುಂ.

ಎಂದರು ಅವರು. ಈತ ಸಂಕ ದಾಟಿ ಅಡಕೆ ತೋಟ ಹೊಕ್ಕ. ಒಂದೆರಡು ಮರ ನೋಡಿ ಮೂರನೆಯ ಮರಕ್ಕೆ ಹತ್ತಿದ. ಶಣ್ಣ ಅಡಕೆ ಮರ ಹತ್ತುವುದರಲ್ಲಿ ನಿಸ್ಸೀಮ. ಲೀಲಾಜಾಲವಾಗಿ ಮರ ಹತ್ತಿ ಇಳಿಯುವವ. ಈಗಲೂ ಹಾಗೆಯೇ. ಕೆಳಗೆ ನಿಂತ ಹುಡುಗರು ಗಪ್ಪಾಗಿ ನಿಂತು ನೋಡುತ್ತಿರಲು ಮರ ಹತ್ತಿದ. ಕೊನೆಯವರೆಗೂ ಹೋಗಿ ಹಣ್ಣಡಕೆ ಕಿತ್ತು ಕೆಳಗೆ ಹಾಕಿದ. ಹುಡುಗರು ಉದುರನ್ನು ಆಯುತ್ತಿರಲು ಲಟ್ ಎಂಬ ಶಬ್ದ ಕೇಳಿಸಿತು. ಹಿಂದೆಯೇ ‘ಅಯ್ಯೋ ಬಿದ್ನೋ’ ಅನ್ನುವ ಕೂಗು. ಮರ ಮುರಿದು ಶಣ್ಣ ಮೇಲಿನಿಂದ ಧರೆಗೆ ಬಿದ್ದಿದ್ದ.

ಅವನನ್ನ ಅವನ ಮನೆಗೆ ಸಾಗಿಸಿದರು. ಕಟ್ಟೆಯ ಆ ತುದಿಯಲ್ಲಿ ಚಾಪೆ ಹಾಸಿ ಮಲಗಿಸಿದರು. ಸುಳ್ಳೂರು ಮಂಜಣ್ಣ, ಬಾರೀಕೇರ ವೀರ ಹುಳಿ ಮಾವಿನ ಮರದ ಎಲೆ, ಗೋಣು ಹರಿಗೆ ಸೊಪ್ಪು ಇತ್ಯಾದಿ ಹಿಡಿದು ಬಂದರು. ಶಣ್ಣ ತೊಡೆ ಹಿಡಿದುಕೊಂಡು ಅತ್ತ, ಕಿರುಚಾಡಿದ, ತೊಡೆಯಲ್ಲಿ ಅಷ್ಟಗಲ ಕೆಂಪೇರಿ ತೊಡೆ ಬಾತುಕೊಂಡಿತು. ಇಲ್ಲಿ ಗೌಡರ ಮನೆಯಲ್ಲಿ ಗೋ ಪೂಜೆ ವೈಭವದಿಂದ ಆಯಿತು. ಬ್ಯಾಂಡ್ ಮುನಿಯನ ವಾಲಗದ ಸದ್ದು ಮಲೆನಾಡಿನ ಕಾಡಿನಲ್ಲಿ ಪ್ರತಿಧ್ವನಿಸಿತು. ಹಕ್ಕಿಗಳು ಗಾಬರಿ ಬಿದ್ದು ಹಾರಿದವು. ನಾಯಿಗಳು ಆಕಾಶದತ್ತ ಮುಖ ಮಾಡಿ ಕೂಗಿದವು. ಈ ಗಡಿಬಿಡಿಯ ನಡುವೆ ಬಿಡುವು ಮಾಡಿಕೊಂಡು ಬಂದ ಗೌಡರು ಶಣ್ಣನನ್ನ ನೋಡಿ “ಹಂ, ಮದ್ದು ಮಾಡತಿದೀರಲ್ವಾ ?” ಎಂದು ಕೇಳಿ “ಮಾಡಿ ಮಾಡಿ” ಎಂದು ಹೇಳಿಹೋದರು.

ಸುಮಾರು ಒಂದು ತಿಂಗಳು ಶಣ್ಣ ನರಳಾಡಿದ. ಕೊನೆಗೆ ಗಾಂವಟಿ ಔಷಧಿಯಿಂದ ಪ್ರಯೋಜನ ಆಗದಿರಲು ಹನುಮಂತ ಮಗನನ್ನ ಗೌಡರ ಗಾಡಿಯ ಮೇಲೆ ಹಾಕಿಕೊಂಡು ಸಾಗರದ ಸರಕಾರಿ ಆಸ್ಪತ್ರೆಗೆ ಕರೆದೊಯ್ದ. ವೈದ್ಯರು ಅದೊಂದು ರೀತಿಯಲ್ಲಿ ತಲೆ ಅಲ್ಲಾಡಿಸಲು ಹನುಮಂತ ಗೌಡರಲ್ಲಿಗೆ ಓಡಿ ಬಂದ.

“ನಾನೇ ಬಂದು ಹೇಳತೇನೆ ಬಿಡು” ಎಂದು ಗಜಾನನ ಹತ್ತಿ ಗೌಡರು ಆಸ್ಪತ್ರೆಗೆ ಬಂದರು.

“ಗೋ ಪೂಜೆ ಗಲಾಟೆನಲ್ಲಿ ಹೀಗೆ ಹೀಗೆ ಆಯ್ತು...” ಎಂದು ಗೌಡರು ಗೋಳಾಡಿಕೊಂಡರು.

“ಪೂಜೆ ಇರಲಿ ಗೌಡ್ರೆ, ಮನುಷ್ಯ ಅಲ್ವೇ ಮುಖ್ಯ...ಪೇಷಂಟ್ನ ಕೂಡಲೇ ನಮ್ಮಲ್ಲಿಗೆ ತರಬೇಕಿತ್ತು. ಈಗ ಪ್ರಾಣ ಉಳೀಬೇಕು ಅಂದರೆ ಕಾಲನ್ನ...”

ಶಣ್ಣ ಕಟ್ಟೆಯ ಅಂಚಿಗೆ ಬರುತ್ತಾನೆ. ಅಲ್ಲೇ ಇರಿಸಿರುವ ದೊಣ್ಣೆಯನ್ನ ಕೈಗೆತ್ತಿಕೊಂಡು ಅದನ್ನ ನೆಲಕ್ಕೆ ಊರಿ ಕೆಳಗೆ ಹಾರುತ್ತಾನೆ. ಕತ್ತರಿಸಿದ ಅವನ ಬಲಗಾಲು ಜೋತಾಡುವುದನ್ನ ಅಂಗಳದಲ್ಲಿ ಕುಳಿತ ಅವನ ತಾಯಿ ನೋಡಿ “ಅಯ್ಯೋ ಮಗನೆ” ಎಂದು ಕಣ್ಣೊರೆಸಿಕೊಳ್ಳುತ್ತಾಳೆ.

ಗೌಡರ ಮನೆ ಗಂಟಿಗಳನ್ನ ಯಾರೋ ಮೇಯಲು ಹೊಡೆದುಕೊಂಡು ಹೋಗುತ್ತಾರೆ. ಪ್ರತಿ ಬಾರಿ ಗೋ ಪೂಜೆ ಬಂದಾಗ ಪೂಜೆ ಸರಿಯಾಗಿ ಆಗುತ್ತಿಲ್ಲ ಎಂದು ಗೌಡರು ಕೊರಗುತ್ತಾರೆ. ಪಾಪ.

---

**ಡಾ॥ ನಾ. ಡಿಸೋಜ**
ನೆಹರು ನಗರ, ಸಾಗರ – ೫೭೭ ೪೦೧
ಶಿವಮೊಗ್ಗ ಜಿಲ್ಲೆ

ಎಚ್.ಎ.ಎಲ್.ನಲ್ಲಿ ಎಂಜಿನಿಯರ್ ಆಗಿ ಕಾರ್ಯ ನಿರ್ವಹಿಸುತ್ತಿರುವ ನೇಮಿಚಂದ್ರ ಸಾಹಿತ್ಯ, ವೈಜ್ಞಾನಿಕ ಬರಹ ಮತ್ತು ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡವರು, ಖ್ಯಾತ ಕತೆಗಾರ್ತಿಯಾಗಿ ಹೆಸರುಮಾಡಿದವರು. ಬಿಡುವಿಲ್ಲದೆ ಸದಾ ಕಾರ್ಯಪ್ರವೃತ್ತರಾಗಿರುವ ನೇಮಿಚಂದ್ರರವರನ್ನು ಅಷ್ಟೇ ಬಿಡುವಿಲ್ಲದೆ ದುಡಿಯುವ ಲೇಖಕಿ ಮತ್ತು ವೈದ್ಯೆ ಡಾ॥ ವಸುಂಧರಾ ಭೂಪತಿ ಇಲ್ಲಿ 'ಹೊಸತು'ವಿಗಾಗಿ ಸಂದರ್ಶಿಸಿದ್ದಾರೆ.

ಸಂದರ್ಶಕರು : **ಡಾ॥ ವಸುಂಧರಾ ಭೂಪತಿ**
ಚಿತ್ರಗಳು : **ಅಭಿಮನ್ಯು ಭೂಪತಿ**

# ಸಾಮಾಜಿಕ ಕಳಕಳಿಯ ಲೇಖಕಿ

**ವಿ**ಜ್ಞಾನ, ಸಾಹಿತ್ಯರಚನೆ, ಪ್ರವಾಸ, ಚಳುವಳಿಗಳಲ್ಲಿ ತಮ್ಮನ್ನು ತಾವು ಸಕ್ರಿಯವಾಗಿ ತೊಡಗಿಸಿಕೊಂಡು ಕನ್ನಡನಾಡಿನ ಸಾಹಿತಿಗಳಲ್ಲಿ ಪ್ರಮುಖರಾದ ನೇಮಿಚಂದ್ರರವರೊಂದಿಗೆ ಸಂದರ್ಶನ ನಡೆಸಬೇಕೆಂದು 'ಹೊಸತು' ಪತ್ರಿಕೆಯ ಆಹ್ವಾನ ಬಂದಾಗ ನೇಮಿಚಂದ್ರರವರನ್ನು ಸಂಚಾರಿ ದೂರವಾಣಿ ಮೂಲಕ ಸಂಪರ್ಕಿಸಿದಾಗ ಇಬ್ಬರಿಗೂ ಬಿಡುವಿನ ವೇಳೆಯದ್ದೇ ಬಹುದೊಡ್ಡ ಸಮಸ್ಯೆಯಾಯಿತು. ನನ್ನ ಬಿಡುವಿನ ವೇಳೆಯಲ್ಲಿ ಅವರು ಬ್ಯುಸಿಯಾಗಿರುತ್ತಿದ್ದರು. ಅವರು ಅಪರೂಪಕ್ಕೆ ಬಿಡುವಿದ್ದು ಕಛೇರಿಯಿಂದ ಹೊರಟು ಕರೆ ಮಾಡಿದಾಗ ನಾನು ಕಾರ್ಯಕ್ರಮದಲ್ಲಿಯೋ, ಬೆಂಗಳೂರಿನಿಂದ ಹೊರಗಡೆಯೋ ಇರುತ್ತಿದ್ದೆ. ನೇಮಿಚಂದ್ರ ಬೆಳಗ್ಗೆ ೬ ಗಂಟೆಗೆ ಮನೆ ಬಿಟ್ಟರೆ ರಾತ್ರಿ ೧೦.೩೦ಕ್ಕೆ ವಾಪಸ್ಸಾಗುತ್ತಿದ್ದರು. ಹೀಗಾದರೆ ಸಂದರ್ಶನ ಕಷ್ಟಸಾಧ್ಯವೆಂದುಕೊಂಡಾಗ ಗೆಳತಿ ಡಾ॥ ಎನ್. ಗಾಯತ್ರಿಯವರ ಸಲಹೆಯಂತೆ ನೇಮಿಚಂದ್ರರವರು ವಿಮಾನ ಕಾರ್ಖಾನೆಯಿಂದ ವಾಪಸ್ಸು ಬರುವಾಗ ಎಷ್ಟೇ ಹೊತ್ತಾಗಿರಲಿ, ನಮ್ಮ ಮನೆಯಲ್ಲೇ ಸಂದರ್ಶನ ಮಾಡುವುದೆಂದು ನಿರ್ಧರಿಸಿದೆವು. ಅದರಂತೆ ಒಂದು ರಾತ್ರಿ ೧೦.೩೦ರ ಸಮಯದಲ್ಲಿ ನಮ್ಮ ಮನೆಗೆ ನೇಮಿಚಂದ್ರ ಆಗಮಿಸಿದರು. ಅಭಿಮನ್ಯು ಕ್ಯಾಮರಾ ಸಿದ್ಧವಾಗಿಟ್ಟುಕೊಂಡಿದ್ದ. ನಾವು ಮಾತನಾಡುತ್ತಿದ್ದಂತೆ ಫೋಟೊ ಕ್ಲಿಕ್ಕಿಸಿದ. ನಮ್ಮ ಮನೆಯಲ್ಲಿನ ಪುಸ್ತಕ ರಾಶಿಯನ್ನು ಕಂಡು ನೇಮಿಚಂದ್ರ ರೋಮಾಂಚಿತರಾದ ಗಳಿಗೆಯನ್ನು ನಾನೆಂದಿಗೂ ಮರೆಯಲಾರೆ.

**ಹೊಸತು :** ಪ್ರೀತಿಯ ನಮಸ್ಕಾರ. ನೀವು ಇತ್ತೀಚೆಗಷ್ಟೇ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಮತ್ತು ದಾನ ಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿಗೆ ಭಾಜನರಾಗಿದ್ದೀರಿ. ಹೊಸತು ಪತ್ರಿಕೆ ಪರವಾಗಿ ಅಭಿನಂದನೆಗಳು.

ನಿಮ್ಮ ಸಾಹಿತ್ಯಕ ಚಟುವಟಿಕೆಗಳಿಗೆ ಪ್ರೇರಣೆ ನೀಡಿದ ಕೌಟುಂಬಿಕ ಪರಿಸರದ ವಿವರಗಳ ಬಗ್ಗೆ ತಿಳಿಸುವಿರಾ ?

**ನೇಮಿಚಂದ್ರ:** ನನ್ನ ತಂದೆ ಮತ್ತು ತಾಯಿ ರೈತ ಕುಟುಂಬದಿಂದ ಬಂದ ಶ್ರಮಜೀವಿಗಳು. ನನ್ನ ತಂದೆ ಪ್ರೊ॥ ಜಿ. ಗುಂಡಣ್ಣ ಕನ್ನಡದ ಪ್ರಾಧ್ಯಾಪಕರು ಮತ್ತು ಲೇಖಕರು. ಓದುವ ಆಸೆಯಿಂದ ಅಪ್ಪ ಹಳ್ಳಿಯಿಂದ ಓಡಿ ಬಂದು, ವಾರಾನ್ನ ಉಂಡು ಏಕಲವ್ಯ ಪ್ರಯತ್ನದಲ್ಲಿ ಎಂ.ಎ. ಮಾಡಿದ್ದರು. ಪಟ್ಟಣದ ರೀತಿರಿವಾಜುಗಳು ಅವರಿಗೆ ತಿಳಿದಿರಲಿಲ್ಲ. ನನಗೀಗಲೂ ನೆನಪಿದೆ, ಸೊಸೈಟಿಯಲ್ಲಿ ಬರುತ್ತಿದ್ದ ಕೋರಾ ಬಟ್ಟೆಯನ್ನೇ ಹರಿಸಿ ಹೊಲೆಸಿದ ಈಟುದ್ದದ ಲಂಗ, ಚೋಟುದ್ದದ ಜಂಪರ್ ಹಾಕಿಕೊಳ್ಳುತ್ತಿದ್ದೆ. ನನ್ನ ಲಂಗದ ಬಟ್ಟೆ, ನನ್ನ ಗೆಳತಿಯ ಮನೆಯ ಕಿಟಕಿ ಕರ್ಟನ್ ಎರಡೂ ಒಂದೇ ಆಗಿರುತ್ತಿತ್ತು.



ಆದರೆ ಬಟ್ಟೆಬರೆಗೆ ಹಣ ವ್ಯರ್ಥ ಎಂದು ಭಾವಿಸಿದ್ದ ಅಪ್ಪ, ಮನೆಯ ತುಂಬ ಸಾವಿರ ಸಾವಿರ ಪುಸ್ತಕಗಳನ್ನು ಕೊಂಡು ತುಂಬಿದ್ದರು. ನನ್ನನ್ನು ಲೇಖಕಿಯಾಗಿ ಬೆಳೆಸಿದ್ದು ಈ ಸಾವಿರ ಸಾವಿರ ಪುಸ್ತಕಗಳು. ಅವುಗಳಲ್ಲಿ ಅರ್ಧ ಕೂಡ ಓದಿಲ್ಲದ ನಾನೂ ಲೇಖಕಿಯಾದೆ. ಕುವೆಂಪು, ಬೇಂದ್ರೆ, ಬಿ.ಎಂ.ಶ್ರೀ. ಅವರ ಕವನಗಳನ್ನು ಕೇಳುತ್ತಾ ನಾನು ಬೆಳೆದೆ. ಶೇಕ್ಸ್‌ಪಿಯರ್, ಬರ್ನಾರ್ಡ್ ಶಾ, ಬ್ರಾಂಟೆ, ಶೆಲ್ಲಿ, ಕೀಟ್ಸ್, ವರ್ಡ್ಸ್‌ವರ್ತ್ ಎಲ್ಲರ ಪರಿಚಯ ಅಪ್ಪನ ಈ ಗ್ರಂಥಾಲಯದಲ್ಲಿ ನನಗಾಗಿತ್ತು. ಇಂತಹ ಪರಿಸರದಲ್ಲಿ ಬೆಳೆದ ನನಗೆ ಬರೆಯದಿರಲು ಸಾಧ್ಯವೇ ಇರಲಿಲ್ಲ.

ಈಗ ನನ್ನ ಮನೆಯಲ್ಲೂ ಪುಸ್ತಕಗಳ ಸಂತೆ. ಪುಸ್ತಕಗಳು ರ್‍ಯಾಕ್ ಏರಿ ತಾರಸಿ ಮುಟ್ಟಿವೆ. ಬಟ್ಟೆಗಳಿಗೆ ದುಡ್ಡು ಸುರಿಯಲು ಇಂದೂ ಮನಸ್ಸಾಗದ ನಾನು, ಸಾವಿರಗಟ್ಟಲೆ ಹಣವನ್ನು ಪುಸ್ತಕಗಳಿಗೆ, ಪ್ರವಾಸಗಳಿಗೆ ಖರ್ಚು ಮಾಡಲು ಕ್ಷಣ ಕೂಡ ಹಿಂಜರಿಯುವುದಿಲ್ಲ. ಪುಸ್ತಕ ಪ್ರೀತಿ 'ಆನುವಂಶಿಕ'ವಾಗಿ ಈಗ ನನ್ನ ಮಗಳಿಗೆ ಹರಿದಿದೆ!



**ಹೊಸತು :** ನೀವು ಕಥೆ, ಕಾದಂಬರಿ, ವೈಚಾರಿಕ, ವೈಜ್ಞಾನಿಕ ಲೇಖನಗಳು, ಪ್ರವಾಸ ಸಾಹಿತ್ಯ – ಮುಂತಾಗಿ ಹಲವು ಪ್ರಕಾರಗಳಲ್ಲಿ ಕೃಷಿ ನಡೆಸಿದ್ದೀರಿ. ಅದರಲ್ಲಿ ಯಾವುದು ನಿಮಗೆ ಪ್ರಿಯವಾದದ್ದು ?

**ನೇಮಿಚಂದ್ರ :** ಪ್ರವಾಸ ಸಾಹಿತ್ಯ ನನಗೆ ತುಂಬ ಪ್ರಿಯವಾದದ್ದು. 'ಒಂದು ಕನಸಿನ ಪಯಣ' ಮತ್ತು 'ಪೆರುವಿನ ಪವಿತ್ರ ಕಣಿವೆಯಲ್ಲಿ' ನನ್ನ ಪ್ರವಾಸ ಕಥನಗಳು. ಆದರೆ ನನ್ನ ಕಾದಂಬರಿ 'ಯಾದ್ ವಶೇಮ್' ಕೂಡ ಪಯಣದ ಮೂಲಗುಣವನ್ನು ಹೊಂದಿರುವುದರಿಂದ ಅದನ್ನು 'ಪ್ರವಾಸ ಕಾದಂಬರಿ' ಎಂದು ಕರೆದ ವಿಮರ್ಶಕರಿದ್ದಾರೆ. ಈಗ ಬರೆಯ ಹೊರಟಿರುವ ಪಂಜಾಬಿನ ಹಿನ್ನೆಲೆಯ ಕಾದಂಬರಿ 'ಕುಹಡ್ಡೆನಾಲ್' ಕೂಡ ಅಮೃತಸರದ ಜಲಿಯನ್ ವಾಲಾ ಬಾಗ್‌ನಿಂದ ಹೊರಟು ಸರಹದ್ದಿನ ಅಂಚಿನಲ್ಲಿರುವ ಭಗತ್ ಸಿಂಗ್ ಅವರ ಸಮಾಧಿಯ ತಾಣ 'ಹುಸೇನಿವಾಲ'ದವರೆಗಿನ ನನ್ನ ಪ್ರವಾಸದ ಹಿನ್ನೆಲೆಯನ್ನು ಹೊಂದಿದೆ.

ನನ್ನ ಬರಹಗಳಿಗಾಗಿ ನಾನು ಬಹಳಷ್ಟು ಅಲೆದಾಡಿದ್ದೇನೆ. ಭಾರತದ ಮಹಿಳೆಯರಿಗೆ ವೈದ್ಯರಂಗದ ಬಾಗಿಲು ತೆರೆಸಿದ ಮೇರಿ ಶರ್ಲಿಯನ್ನು ಹುಡುಕಿ ಮೂರು ಬಾರಿ ಮದ್ರಾಸಿಗೆ ಹೋಗಿದ್ದೆ. ಜಲಿಯನ್‌ವಾಲಾ ಬಾಗ್ ಹತ್ಯಾಕಾಂಡದಲ್ಲಿ ಹುತಾತ್ಮನಾದ ಪತಿಯ ಹೆಣಕ್ಕೆ ಹೆಗಲು ಕೊಟ್ಟು ಹೊತ್ತುತಂದ ಸ್ವಾಭಿಮಾನಿ ಮಹಿಳೆ ಅತ್ತರ್ ಕೌರ್ ಹುಡುಕಿ ಅಮೃತಸರ ತಲುಪಿದ್ದೆ. ಆಕೆಯ ಮಗ ಭಾರತಿ ಅವರನ್ನು ಭೇಟ್ಟಿಯಾಗಿದ್ದೆ. ಕೌಟುಂಬಿಕ ಕ್ರೌರ್ಯದಿಂದ ಜಿಗಿದು ಹೊರಬಂದು ನಲವತ್ತರ ವಯಸ್ಸಿನಲ್ಲಿ ವಿದ್ಯಾಭ್ಯಾಸ ಮಾಡಿ, ಲಾ ಓದಿ, ಸುಪ್ರಸಿದ್ಧ ನ್ಯಾಯವಾದಿಯಾದ ಫ್ಲೇವಿಯಾರ ಜೀವನ ಚರಿತ್ರೆಯನ್ನು ಪರಿಚಯಿಸಲು ಮುಂಬಯಿಗೆ ಮೂರ್ನಾಲ್ಕು ಬಾರಿ ಅಲೆದಾಡಿದೆ. ಈ ಅಲೆದಾಟಗಳೆಲ್ಲ ನನಗೆ ಬಲು ಪ್ರಿಯವಾಗಿವೆ. ಮಹಿಳಾ ವಿಜ್ಞಾನಿಗಳ, ಮಹಿಳಾ ವೈಮಾನಿಕೆಯರ ಶತಶತಮಾನಗಳ ಚರಿತ್ರೆಯನ್ನು ಸಂಗ್ರಹಿಸುವ ಬಯಕೆ ನನ್ನನ್ನು ದೇಶವಿದೇಶಗಳ ಮೂಲೆ ಮೂಲೆಗೆ ಕೊಂಡೊಯ್ಯಿತು.

ನನ್ನ ಬದುಕು ಮತ್ತು ಪಯಣ ಜೊತೆ ಜೊತೆಯಾಗಿ ಸಾಗಿದೆ. ನನ್ನ ಪ್ರವಾಸದಲ್ಲಿಯ ಜೀವನ ದರ್ಶನ ನನಗೆ ಅಮೂಲ್ಯವೆನಿಸಿದೆ. ನಾನು ಕಂಡ ಜನರನ್ನು, ಜಗತ್ತನ್ನು ಪ್ರತಿಬಿಂಬಿಸುವ ಸಣ್ಣ ಪ್ರಯತ್ನ ನನ್ನ ಬರಹದ್ದಾಗಿದೆ.

**ಹೊಸತು :** ನಿಮ್ಮ ಪ್ರವಾಸಕ್ಕೆ ನೀವು ಯಾವ ಬಗೆಯ ತಯಾರಿ ಮಾಡಿಕೊಳ್ಳುತ್ತೀರಿ ? ಇತ್ತೀಚಿನ ತಮ್ಮ ಪ್ರವಾಸ ಯಾವುದು ?

**ನೇಮಿಚಂದ್ರ :** ನನ್ನ ಪ್ರವಾಸದ ಬಗ್ಗೆ ನನಗೆ ಸ್ಪಷ್ಟ ಕಲ್ಪನೆ ಇರುತ್ತದೆ. ಅಮೆರಿಕ, ಯೂರೋಪು, ಆಸ್ಟ್ರೇಲಿಯ, ಇಸ್ರೇಲ್, ಪ್ಯಾಲೆಸ್ಟೈನ್ ಇಂತೆಲ್ಲ ದೇಶಗಳಲ್ಲಿ ರಜೆ ಕಳೆದು ಬರುವಷ್ಟು ಶ್ರೀಮಂತಿಕೆ ನನ್ನದಲ್ಲ. ನನ್ನ ಪ್ರವಾಸಕ್ಕೊಂದು ಉದ್ದೇಶವನ್ನು ನಾನೇ ಹಚ್ಚಿಕೊಂಡಿರುತ್ತೇನೆ. ನನಗೆ ಖುಷಿ ಕೊಡುವ, ನನ್ನ ಆಸಕ್ತಿಯ ಜಾಗಗಳಲ್ಲಿ ಅಲೆದು ಬರಬೇಕು. ಮನಸೋತಲ್ಲಿ ಉಳಿಯುವ, ಬೇಡವೆಂದರೆ ನಡೆದುಬಿಡುವ ಸ್ವಾತಂತ್ರ್ಯವಿರಬೇಕು. ನನ್ನ ಪಯಣದ ನೀಲಿನಕಾಶೆಯನ್ನು ಸ್ವತಃ ಸಿದ್ಧಮಾಡಿಕೊಂಡಿರುತ್ತೇನೆ.

ಆದರೆ ಈ ಪ್ರವಾಸಗಳ ಅದ್ಭುತವೆಂದರೆ ಏನನ್ನೋ ಹುಡುಕಿ ಹೊರಟಿರುವಾಗ, ಮತ್ತೇನೋ ಅದಕ್ಕಿಂತ ಅದ್ಭುತದ್ದು ನನ್ನೆದುರು ತೆರೆದುಕೊಂಡಿದೆ. ಇದೇ ವರ್ಷ ಮಗಳೊಡನೆ ಗೊಂಡ್ವಾನ ಮಳೆಕಾಡನ್ನು ಕಾಣಲು, ಮೂರು ಸಾವಿರ ವರ್ಷಗಳಷ್ಟು ಹಳೆಯದಾದ ಅಂಟಾರ್ಕ್ಟಿಕ್ ಬೀಚ್ ಮರಗಳನ್ನು ನೋಡಲು, ಬಂಜರು ನೆಲದಲ್ಲಿ ಮಳೆಕಾಡನ್ನು ಎದ್ದುನಿಲ್ಲಿಸಿದ ಜರ್ಮೇನ್ ಗ್ರೀಯರ್‌ಳ ಸಾಹಸದ ಫಲದ ದರ್ಶನಕ್ಕೆಂದು ಆಸ್ಟ್ರೇಲಿಯಾಗೆ ಹೋಗಿದ್ದೆ. ಅವೆಲ್ಲವನ್ನು ಕಂಡದ್ದು ನಿಜ, ಆದರೆ ಅದರಾಚೆಗೆ ಡಾರ್ವಿನ್‌ನಲ್ಲಿ ಅಬಾರಿಜಿನಲ್ ಜನರ ಸಾವಿರ ಸಾವಿರ ವರ್ಷಗಳ ಇತಿಹಾಸ, ಬಿಳಿಯರು ಈ ಖಂಡಕ್ಕೆ ಬಂದಿಳಿದು ಅತ್ಯಂತ ಕ್ರೌರ್ಯದಲ್ಲಿ ಅವರನ್ನು ಕೊಂದ ಕತೆ, ತಮ್ಮದೇ ನೆಲದಲ್ಲಿ ಪರಕೀಯರಾಗಿ ಅತ್ಯಂತ ಹೀನಾಯದಲ್ಲಿ ಬದುಕುತ್ತಿರುವ ಈ ನೆಲದ ಒಡೆಯರ ವ್ಯಥೆ ಅನಾಯಾಸವಾಗಿ ನನಗೆ ಎದುರಾಗಿತ್ತು. ನಾವು 'ಡಾರ್ವಿನ್'ಗೆ ಬಂದಿಳಿದದ್ದು ಆಕಸ್ಮಿಕ, ಆದರೆ ಇಲ್ಲೆಲ್ಲೋ ಇತಿಹಾಸ ಕತೆ ಹೇಳಲು ನಮಗಾಗಿ ಕಾದಿತ್ತು ಎಂಬ ಭಾವ. ಅಲೆದಲೆದು ಆಯ್ದು ತಂದ ಅನುಭವಗಳು, ಹೊತ್ತು ತಂದ ೩೦ಕ್ಕೂ ಹೆಚ್ಚು ಪುಸ್ತಕಗಳು, ಮತ್ತೊಂದು ದಶಕದ ನನ್ನ ಅಧ್ಯಯನ, ಶೋಧನೆ ಮತ್ತು ಬರಹಕ್ಕೆ ಬುನಾದಿ ಹಾಕಿವೆ.

**ಹೊಸತು :** ಕಳೆದ ಹತ್ತು ವರ್ಷಗಳಿಂದ ನೀವು ಕಥೆಯನ್ನು ಬರೆದಂತಿಲ್ಲ. ಅದಕ್ಕೆ ಏನಾದರೂ ವಿಶೇಷ ಕಾರಣಗಳಿವೆಯೇ ?

**ನೇಮಿಚಂದ್ರ :** ಎಂಟು ವರ್ಷಗಳಿಂದ ನಾನು ಕಥೆ ಬರೆದಿಲ್ಲ. ನನ್ನ ಕಡೆಯ ಕಥೆ 'ನಿನ್ನೆಗಳ ಹೊರೆ ಇಳಿಸಿ' ಬರೆದದ್ದು ೨೦೦೮ರಲ್ಲಿ. ಬೆಂಗಳೂರಿನಲ್ಲಿ ಬಾಂಬ್ ಸಿಡಿದಾಗ ಬರೆಯದೆ ಇರಲು ಸಾಧ್ಯವಾಗಲಿಲ್ಲ. ಕಾಯ್ದುಕೊಳ್ಳದ ಸಂಬಂಧಗಳ ಬಗ್ಗೆ ಬರೆದಿದ್ದೆ. ಕಾಯ್ದುಕೊಳ್ಳದ ಸಂಬಂಧಗಳು ಸದಾ ಆಸ್ಫೋಟಿಸುತ್ತವೆ.

೨೦೦೮ಕ್ಕೂ ಹಿಂದೆ ಕಥೆ ಬರೆದದ್ದು ೧೯೯೯ರಲ್ಲಿ. ಆತ್ಮೀಯ ಸ್ನೇಹಿತೆಗೆ ಅಪಘಾತವಾದ ಸಮಯದಲ್ಲಿ ಬರೆದ ಕತೆ ಅದು – 'ಮರಳಿ ಬದುಕಿಗೆ ಈ ಪಯಣ'. ಈ ಎರಡು ಕತೆಗಳನ್ನು ಬಿಟ್ಟರೆ ನಾನು ಹೆಚ್ಚು ಕಡಿಮೆ ಒಂದೂವರೆ ದಶಕ ಕತೆಗಳನ್ನು ಬರೆದೇ ಇಲ್ಲ. ಇದಕ್ಕೆ ಕಾರಣ, ನನ್ನ 'ಯಾದ್ ವಶೇಮ್' ಕಾದಂಬರಿ. ಈ ಕಾದಂಬರಿಯ ತಯಾರಿ ಮತ್ತು ಬರಹದಲ್ಲಿ ನಾನು ಮುಳುಗಿಹೋಗಿದ್ದೆ. ೧೯೯೬ರಲ್ಲಿ ಗೋರಿ ಪಾಳ್ಯದ ಅಂಚಿನಲ್ಲಿ ಯಹೂದಿ ಸ್ಮಶಾನವನ್ನು ಕಂಡಾಗ – ಅಲ್ಲಿ ಜರ್ಮನ್ ವ್ಯಕ್ತಿಯ ಸಮಾಧಿ ಕಲ್ಲು ಕೂಡ ಇದೆ – ನನ್ನೊಳಗೆ ಹುಟ್ಟಿಕೊಂಡ ಕತೆಯ ಬೆನ್ನು ಹತ್ತಿ ನಾನು ಹೊರಟಿದ್ದೆ. 'ಯಾದ್ ವಶೇಮ್' – ಹಿಟ್ಲರನ ನೆಲದಿಂದ ಗಾಂಧಿಯ ನೆಲಕ್ಕೆ ಬಂದ ಪುಟ್ಟ ಯಹೂದಿ ಬಾಲೆಯ ಕತೆಯನ್ನು ಹೇಳುತ್ತದೆ. ಈ ಕಾದಂಬರಿಗಾಗಿ ನನಗೆ ತಿಳಿದಿರದ ಚರಿತ್ರೆಯ ಬಹಳಷ್ಟು ಅಧ್ಯಯನ ಮಾಡಬೇಕಿತ್ತು. ಖಂಡ ಖಂಡಗಳನ್ನು ಅಲೆದು ವಿಷಯ ಸಂಗ್ರಹಿಸಬೇಕಿತ್ತು. ಈ ಕಾದಂಬರಿಯ ಗುಂಗಿನಲ್ಲಿ ನನ್ನ ಒಂದು ದಶಕ ಕಳೆಯಿತು. ಕಾದಂಬರಿ ಪ್ರಕಟವಾಗಿ ಬಹಳಷ್ಟು ವರ್ಷಗಳು ಆಗಿದ್ದರೂ, ಕಾದಂಬರಿ ನನ್ನೊಳಗೆ ಮುಂದುವರಿದಿದೆ.

ಈಗ ಬರೆಯುತ್ತಿರುವ 'ತುಹಡ್ಡೆನಾಲ್', ಹಿಂದೂ–ಸಿಕ್ ಗಲಭೆಯ ಕೇಂದ್ರ ವಸ್ತುವನ್ನು ಹೊಂದಿದ್ದರೂ, ಇದು ನನಗೆ 'ಯಾದ್ ವಶೇಮ್'ನ ಮೂಲ ಕಥಾ ವಸ್ತುವಿನ ಮುಂದುವರಿದ ಭಾಗ ಅನಿಸುತ್ತಿದೆ. ಮನುಷ್ಯ ಮನುಷ್ಯನ ನಡುವಿನ ಕಾಯ್ದುಕೊಳ್ಳದ ಸಂಬಂಧಗಳ ಹುಡುಕಾಟವಾಗಿದೆ. ದೇಶ ದೇಶಗಳ ನಡುವಿನ ಕಿತ್ತಾಟದ ಕತೆಯಾಗಿದೆ. ಜಾಗತೀಕರಣದ ಮಂತ್ರ ಪಠಿಸಿದ ಮುಂದುವರಿದ ದೇಶಗಳೆಲ್ಲ ತಮ್ಮ ಸರಹದ್ದುಗಳನ್ನು ಭದ್ರಪಡಿಸಿಕೊಂಡು ಕುಗ್ಗಿ ಕುಗ್ರಾಮಗಳಾಗುತ್ತಿವೆ. ಬೇಲಿಗಳನ್ನು ಎಬ್ಬಿಸಿ ಗೋಡೆಗಳನ್ನು ಕಟ್ಟುವಲ್ಲಿ ಕಾತುರವಾಗಿವೆ. ಕತೆ ೧೯೮೪ರಲ್ಲಿ ಆರಂಭವಾದರೂ, ಇಂದಿನ ಈ ಎಲ್ಲ ವಿದ್ಯಮಾನಗಳ ನಡುವೆ ಬಂದು ಕೊನೆಯಾಗಲಿದೆ.

**ಹೊಸತು :** ಸಾಹಿತ್ಯ, ನಾಟಕ ಮತ್ತು ಕಲಾ ಪ್ರಕಾರಗಳಿಗೆ ಸಂಘಟನಾತ್ಮಕ ಚೌಕಟ್ಟು ಬಿದ್ದರೆ ಅವು ತಮ್ಮ ಸೃಜನಶೀಲತೆಯನ್ನು ಕಳೆದುಕೊಳ್ಳುತ್ತವೆ ಎಂಬ ಅಭಿಪ್ರಾಯವೊಂದಿದೆ. ನೀವು ಲೇಖಕಿಯಾಗಿ, ಲೇಖಕಿಯರ ಸಂಘದ ಕಾರ್ಯದರ್ಶಿಯಾಗಿ ಈ ಅಭಿಪ್ರಾಯಕ್ಕೆ ಹೇಗೆ ಪ್ರತಿಕ್ರಿಯಿಸುತ್ತೀರಿ ?

**ನೇಮಿಚಂದ್ರ:** ನನ್ನನ್ನು ಲೇಖಕಿಯಾಗಿ ಬೆಳೆಸಿದ್ದು 'ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ'ದಿಂದ ಹೊರಬಂದ 'ಅಚಲ' ಪತ್ರಿಕೆ ಮತ್ತು 'ಕರ್ನಾಟಕ ಲೇಖಕಿಯರ ಸಂಘ'ದ ನನ್ನ ಒಡನಾಟ. ಈ ಸಂಘ ಮತ್ತು ಸಂಘಟನೆಯ ಒಡನಾಟ ನನ್ನನ್ನು ವ್ಯಕ್ತಿಯಾಗಿ ಬೆಳೆಸಿತು, ನನಗೆ ಬದುಕಿನ ಇನ್ನಿಲ್ಲದಷ್ಟು ಆಯಾಮಗಳನ್ನು ತೆರೆದು ತೋರಿಸಿತು. ಸಂಘಟನೆ ಮತ್ತು ಚಳುವಳಿಯ ಅನುಭವಗಳು ನನ್ನ ಬರಹಕ್ಕೆ 'ಕಟ್ಟು ಚೌಕಟ್ಟು'ಗಳನ್ನು ಹಾಕಿ ನಿರ್ಬಂಧಿಸಲಿಲ್ಲ. ಬದಲಿಗೆ ವೈಯಕ್ತಿಕ ನೆಲೆಯ ಪ್ರೀತಿ ಪ್ರೇಮದ ಹುಡುಕಾಟದಲ್ಲಿ ಕಟ್ಟಿಬಿದ್ದ ಕತೆಗಳು ಬಂಧಮುಕ್ತವಾಗಿ,



ಬರಹ ಮತ್ತು ಬದುಕುಗಳೆರಡರಲ್ಲೂ ಸಾಮಾಜಿಕ ಕಳಕಳಿಯನ್ನು ಉಸಿರಾಗಿಸಿಕೊಂಡಿರುವ ಲೇಖಕಿ ನೇಮಿಚಂದ್ರ ೧೯೫೯ರ ಜೂನ್ ೧೬ರಂದು ಚಿತ್ರದುರ್ಗದಲ್ಲಿ ಜನಿಸಿದರು. ಮೈಸೂರಿನಲ್ಲಿ ತಮ್ಮ ಇಂಜಿನಿಯರಿಂಗ್ ಶಿಕ್ಷಣವನ್ನು ಮುಗಿಸಿಕೊಂಡು, ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಎಂ.ಎಸ್. ಪದವಿ ಪಡೆದು ಈಗ ಎಚ್.ಎ.ಎಲ್.ನಲ್ಲಿ ಜನರಲ್ ಮ್ಯಾನೇಜರ್ ಆಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ವಿಜ್ಞಾನ , ಸಾಹಿತ್ಯ , ಕಲೆ ಮತ್ತು ಮಹಿಳಾ ಅಧ್ಯಯನ, ಇವು ಅವರ ಆಸಕ್ತಿಯ ಪ್ರಮುಖ ಕ್ಷೇತ್ರಗಳು. ಪ್ರವಾಸ ಅವರ ಮತ್ತೊಂದು ಪ್ರಮುಖ ಹವ್ಯಾಸ. ನೇಮಿಚಂದ್ರ ಅವರ ಬರಹದ ಲೋಕ ಇವೆಲ್ಲವನ್ನೂ ಒಳಗೊಂಡಿದೆ. ಮೂರು ಕಥಾ ಸಂಕಲನ, ಒಂದು ಕಾದಂಬರಿ, ಯೂರೋಪ್ ಮತ್ತು ಪೆರುವಿನ ಪ್ರವಾಸ ಸಾಹಿತ್ಯ, ಸಂಪಾದನೆ, ಚಿತ್ರಕಾರ ವ್ಯಾನ್‌ಗಾಗ್, ಮಹಿಳಾ ವಿಜ್ಞಾನಿಗಳ, ಹೋರಾಟಗಾರರ ಜೀವನ ಚರಿತ್ರೆಗಳು, ಅಂಕಣ ಬರಹ – ಹೀಗೆ ವಿಸ್ತಾರವಾದ ಬರವಣಿಗೆ ನೇಮಿಚಂದ್ರ ಅವರ ಲೇಖನಿಗೆ ದಕ್ಕಿದೆ. 'ಬದುಕು ಬದಲಿಸಬಹುದು' ಎಂಬ ದಿಟ್ಟ ನಿರ್ಧಾರದಿಂದ ಬರವಣಿಗೆಯಲ್ಲಿ ತೊಡಗಿರುವ ಈ ಲೇಖಕಿಯ ಕ್ರಿಯಾಶೀಲತೆಯ ಹಿಂದೆ ಮಹಿಳಾ ಚಳುವಳಿ ಮತ್ತು ಸಂಘಟನೆ ಬೆನ್ನೆಲುಬಾಗಿದೆ. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಮತ್ತು ಅದರ ಪ್ರಕಟಣೆಯಾಗಿದ್ದ 'ಅಚಲ' ಪತ್ರಿಕೆಯ ಆರಂಭದಿಂದ ಅದರಲ್ಲಿ ಕ್ರಿಯಾಶೀಲವಾಗಿ ತೊಡಗಿಕೊಂಡಿದ್ದ ನೇಮಿಚಂದ್ರ ಕರ್ನಾಟಕ ಲೇಖಕಿಯರ ಸಂಘದ ಕಾರ್ಯದರ್ಶಿಯಾಗಿಯೂ ಕೆಲಸ ಮಾಡಿದವರು. ಇವರ ಪ್ರತಿಭೆ ಮತ್ತು ಸಾಹಿತ್ಯ ಕೃಷಿಗೆ ಹಲವಾರು ಬಹುಮಾನ, ಸನ್ಮಾನಗಳು ಸಂದಿವೆ. ಅವರ ಪುಸ್ತಕಗಳಿಗೆ ಸಾಹಿತ್ಯ ಅಕಾಡೆಮಿಯ ಬಹುಮಾನಗಳು, ಹಾ.ಮಾ. ನಾಯಕ ಪ್ರಶಸ್ತಿ, ಶಿವರಾಮ ಕಾರಂತ ಪ್ರಶಸ್ತಿ, ಸಂದೇಶ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ಕರ್ನಾಟಕ ಸರ್ಕಾರದ ಅತ್ಯುನ್ನತ ಗೌರವವಾದ ದಾನಚಿಂತಾಮಣಿ ಅತ್ತಿಮಬ್ಬೆ ಪ್ರಶಸ್ತಿಗಳು ಲಭಿಸಿವೆ.

ಸಮಾಜಮುಖಿಯಾಗಿ ಸರಹದ್ದುಗಳನ್ನು ಅಳಿಸಿ ಮಾನವೀಯ ನೆಲೆಗಳನ್ನು ಅರಸಲು ಈ ಸಂಘಟನೆ ಮತ್ತು ಚಳುವಳಿ ಕಾರಣವಾಯಿತು. ಎಲ್ಲಿಯೋ ನಡೆಯುವ ಘಟನೆಗಳು ನಮಗೆ ಸಂಬಂಧವಿಲ್ಲ ಎಂಬ ಅಜ್ಞಾನದಲ್ಲಿ ನನ್ನಂತಹ ಎಳೆಯ ಬರಹಗಾರರು ಆತ್ಮರತಿಯಲ್ಲಿ ಸಿಕ್ಕಿಬೀಳುವ ಅಪಾಯವಿತ್ತು. ೧೯೮೫ರಲ್ಲಿ ಆರಂಭವಾದ 'ಅಚಲ'ದ ಒಡನಾಟ ನನ್ನನ್ನು ಆ ಅಪಾಯದಿಂದ ಕಾಪಾಡಿತು ಎಂಬ ನಂಬುಗೆ ನನ್ನದು. ಈ ನಿಮ್ಮ ಪ್ರಶ್ನೆ ನನಗೆ ವಿಶೇಷವಾಗಿ ಕಾಣುತ್ತದೆ. ಹಾಗೆಂದೇ ನಿಮ್ಮ ಅಭ್ಯಂತರ ಇಲ್ಲದಿದ್ದರೆ ನಾನು ಒಂದಿಷ್ಟು ಹೆಚ್ಚೇ ಇದಕ್ಕೆ ಉತ್ತರಿಸಲು ಬಯಸುತ್ತೇನೆ.

**ಹೊಸತು :** ಖಂಡಿತ, ಅಚಲ ಪತ್ರಿಕೆ ನಿಮ್ಮ ಬದುಕು ಬರಹದ ಮೇಲೆ ಬೀರಿದ ಪ್ರಭಾವದ ಬಗ್ಗೆ ನಮಗೂ ಕುತೂಹಲ, ಹೇಳಿ ?

**ನೇಮಿಚಂದ್ರ :** 'ಅಚಲ' ಪತ್ರಿಕೆಯ ಮುಖ್ಯ ಸಂಪಾದಕರಾಗಿದ್ದ ಡಾ॥ ಎನ್. ಗಾಯತ್ರಿ ಅವರ ಮಾತುಗಳಲ್ಲಿ ಹೇಳುವುದಾದರೆ 'ಭಾರತದ ಮಹಿಳಾ ಚಳುವಳಿಯ ನಿರ್ದಿಷ್ಟ ಕಾಲಘಟ್ಟದಲ್ಲಿ ಹುಟ್ಟಿದ ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ ಮತ್ತು ಅದು ಪ್ರಕಟಿಸುತ್ತಾ ಬಂದ 'ಅಚಲ' ತನ್ನ ಸಮಕಾಲೀನ ಮಹಿಳಾ ಚಳುವಳಿಯ ಸ್ವರೂಪ ಮತ್ತು ಅದರ ಹಲವಾರು ಆಯಾಮಗಳನ್ನು ಅತ್ಯಂತ ಸೂಕ್ಷ್ಮವಾಗಿ ದಾಖಲಿಸುತ್ತಾ ಬಂದಿತು.'

೧೯೮೫ ನನಗೆ ಮತ್ತೊಂದು ಕಾರಣಕ್ಕೂ ಸಂಭ್ರಮದ ವರ್ಷವಾಗಿತ್ತು. ನನ್ನ ಮೊಟ್ಟ ಮೊದಲ ಕಥಾಸಂಕಲನ 'ನಮ್ಮ ಕನಸುಗಳಲ್ಲಿ ನೀವಿದ್ದಿರಿ' ನನ್ನ 'ಅಚಲ' ಗೆಳತಿಯರೊಡನೆ ಟಾಟಾ ಇನ್‌ಸ್ಟಿಟ್ಯೂಟಿನಲ್ಲಿ ಬಿಡುಗಡೆ ಆಗಿತ್ತು.

ಈ ಸಂಕಲನದಲ್ಲಿ ಹೈಸ್ಕೂಲು ಹಂತದಲ್ಲಿ ಬರೆದ ಕತೆಗಳಿಂದ ಆರಂಭವಾಗಿ, 'ಅಚಲ' ಆರಂಭವಾಗುವ ತನಕದ ಕತೆಗಳಿವೆ. ನನ್ನ ಕತೆ ಮತ್ತು ಬರಹಗಳನ್ನು ನಾನು 'ಅಚಲ ಪೂರ್ವ', 'ಅಚಲ ನಂತರ' ಎಂದು ಬಹುಶಃ ವಿಂಗಡಿಸಬಹುದೇನೋ. ಕಾರಣ ನನ್ನೆಲ್ಲ ಬರಹದ ಮೇಲೆ 'ಅಚಲ' ತನ್ನದೇ ರೀತಿಯ ಪ್ರತ್ಯಕ್ಷ ಹಾಗೂ ಪರೋಕ್ಷವಾದ ಪ್ರಭಾವವನ್ನು ಛಾಯೆಯನ್ನು ಬೀರಿತ್ತು. ಕಾರಣ ಅಚಲ ನನಗೆ ಒಂದು ಪತ್ರಿಕೆಯಾಗಿರಲಿಲ್ಲ, ಹೋರಾಟದಲ್ಲಿ ತೊಡಗಲು, ಚಳುವಳಿಯ ಮಹತ್ವವನ್ನು ಸ್ವರೂಪವನ್ನು ಅರಿಯಲು, ಆ ಮೂಲಕ ನನ್ನನ್ನು ನಾನು ಕಂಡುಕೊಳ್ಳಲು, ವೈಯಕ್ತಿಕ ನೆಲೆಯಿಂದ ಮೇಲೆದ್ದು ಸಮುದಾಯದ ಮಹಿಳಾ ಪ್ರಶ್ನೆಯ ವಿಸ್ತಾರಕ್ಕೆ ತೆರೆದುಕೊಳ್ಳಲು ಸಹಕಾರಿಯಾಯಿತು. ಈ ಪ್ರಶ್ನೆ ಮಾನವ ಪ್ರಶ್ನೆಯಾಗಿ 'ಯಾದ್ ವಶೇಮ್'ನಲ್ಲಿ ವಿಸ್ತರಿಸಲೂ ಸಂಘಟನೆ ಮತ್ತು ಚಳುವಳಿಗಳು ಕಾರಣ.

೧೯೮೫, ಅಚಲ ಆರಂಭವಾದ ಆ ವರ್ಷ ನಾನು ಸತತ ಬರೆದಿದ್ದೆ. ನನ್ನೊಳಗೆ ತಹತಹಿಸಿದ ನೂರೊಂದು ವಿಚಾರಗಳಿಗೆ 'ಅಚಲ' ಬಾಯಿ ಕೊಟ್ಟಿತ್ತು. ಫೆಬ್ರವರಿ ೧೯೮೭ರಲ್ಲಿ 'ಮೇರಿ ಕ್ಯೂರಿ'ಯ ಬಗ್ಗೆ ಅಚಲದಲ್ಲಿ ಬರೆದೆ. 'ವಿಜ್ಞಾನ ಮತ್ತು ಮಹಿಳೆ' ಮತ್ತು 'ಮಹಿಳಾ ವಿಜ್ಞಾನಿ'ಗಳ ಬಗ್ಗೆ ಸತತ ಶೋಧದಲ್ಲಿ ತೊಡಗಲು ಅಚಲ ಪ್ರೋತ್ಸಾಹ ನೀಡಿತ್ತು. ಆಗಿನ್ನೂ ಇವೆಲ್ಲ ಜನಪ್ರಿಯ ಪತ್ರಿಕೆಗಳು ಆಸಕ್ತಿ ತೋರಿಸಿ ಪ್ರಕಟಿಸುವ ವಿಷಯಗಳಾಗಿರಲಿಲ್ಲ.

ಅಚಲ ನನ್ನನ್ನು ಇಂಜಿನಿಯರಿಂಗ್ ಕಾಲೇಜು, ಟಾಟಾ ಇನ್‌ಸ್ಟಿಟ್ಯೂಟಿನ ತಾಂತ್ರಿಕ ಪರಿಸರದಿಂದ ಆಚೆಗೆ ಕರೆತಂದು, ನನ್ನೊಳಗಿನ ಸಂಕೋಚವನ್ನು ಬಿಡಿಸಿ, ನಡುರಸ್ತೆಯಲ್ಲಿ ಶೋಷಣೆಯ ಬಗ್ಗೆ ಕೂಗಿ ಹೇಳಲು, ಅನ್ಯಾಯದ ಬಗ್ಗೆ ಪ್ರತಿಭಟಿಸಲು, ಬೀದಿ ನಾಟಕಗಳನ್ನು ಆಡಲು ಕಲಿಸಿತು.

ಇದರಾಚೆಗೆ ನನ್ನೆಲ್ಲ ಕೃತಿಗಳ ಆರಂಭದ ರೂಪವನ್ನು 'ಅಚಲ'ದಲ್ಲಿ ನಾನು ಬರೆದ ಮೂಲ ಲೇಖನಗಳಲ್ಲಿ ಕಾಣಬಹುದು. 'ಅಚಲ' ನನ್ನೊಳಗೆ ನಾನು ಇಳಿಯುವ, ಪರಿಶೋಧಿಸುವ ಅಂತರಂಗದ ಪರಿಯಾಯಿತು. ನನ್ನ ವಿಚಾರಗಳನ್ನು ಚರ್ಚಿಸಲು ಹಂಚಿಕೊಳ್ಳಲು, ವೈಯಕ್ತಿಕ ನೆಲೆಯಿಂದ ಸಾರ್ವತ್ರಿಕದೆಡೆಗೆ ಮೆಲ್ಲನೆ ಹೆಜ್ಜೆಯಿಡಲು ಸಹಾಯಕವಾಯಿತು. ಹೀಗೆಂದೇ ಸಾಹಿತ್ಯವಾಗಲಿ, ನಾಟಕವಾಗಲಿ, ಯಾವುದೇ ಕಲಾಪ್ರಕಾರವಾಗಲಿ ಅವು ಸಮಾಜಮುಖಿಯಾಗದೆ ಸೃಜನಶೀಲವಾಗಲಾರವು ಎಂದು ನನಗೆ ಅನಿಸುತ್ತದೆ. ಸಂಘಟನೆ ಮತ್ತು ಚಳುವಳಿ ನಮ್ಮೊಳಗಿನ 'ನಾನು' ಎಂಬ ಅಹಂಭಾವವನ್ನು ಅಳಿಸಿ 'ನಾವು' ಎಂಬ ಪರಮಸತ್ಯವನ್ನು ಕಲಿಸುತ್ತವೆ.

**ಹೊಸತು :** ನೀವು ಮಹಿಳಾ ಚಳುವಳಿಯಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು. ಇವತ್ತಿನ ಮಹಿಳಾ ಚಳುವಳಿಯ ಸವಾಲುಗಳು ಏನು ?

**ನೇಮಿಚಂದ್ರ :** ಅಂದು ನಮ್ಮ ಹೋರಾಟ ಮಹಿಳಾ ಹಕ್ಕುಗಳಿಗಾಗಿ ಆಗಿತ್ತು. ಅದು ದುಡಿಯುವ ಹಕ್ಕಿರಬಹುದು, ದುಡಿಯುವ ಜಾಗದಲ್ಲಿ ಮಹಿಳೆಯರಿಗೆ ಸುರಕ್ಷಿತ ಪರಿಸರದ ಹಕ್ಕಾಗಿರಬಹುದು. ಪುರುಷಪ್ರಧಾನ ಕಾನೂನುಗಳ ತಿದ್ದುಪಡಿಯಾಗಿತ್ತು. ಮಹಿಳೆಯರಿಗೆ ಮುಚ್ಚಿದ ಬಾಗಿಲುಗಳನ್ನು ತೆರೆಸುವ ಪ್ರಯತ್ನವಾಗಿತ್ತು. ಸಾಹಿತ್ಯ ರಂಗದಲ್ಲಿ 'ಹೆಂಗಸರೇನು ಬರೆಯುತ್ತಾರೆ, ಮಹಿಳಾ ಸಾಹಿತ್ಯ ಅಡುಗೆ ಮನೆಯ ಸಾಹಿತ್ಯ' ಎಂಬ ಉದಾಸೀನದ ಪರಿಸರ ಬದಲಿಸುವ ಹೋರಾಟವೂ ಸಫಲವಾಯಿತು. ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಅಧ್ಯಯನ ವಿಭಾಗಗಳು ತೆರೆದವು. ಮಹಿಳಾ ಸಾಹಿತ್ಯದ ಬಗ್ಗೆ, ಸ್ತ್ರೀವಾದದ ಬಗ್ಗೆ ಎಣಿಕೆ ಇಲ್ಲದಷ್ಟು ಮಹಾಪ್ರಬಂಧಗಳು ಹೊರಬಂದವು.

ಆದರೆ ಇಂದಿನ ಮಹಿಳಾ ಸವಾಲುಗಳು ನೇರವಿಲ್ಲ. ಬಹಳಷ್ಟು ಕ್ಲಿಷ್ಟ ಮತ್ತು ಸಂಕೀರ್ಣವಾಗಿವೆ. ಒಂದು ವರ್ಷದ ಮಗುವಿನ ಮೇಲೂ ಅತ್ಯಾಚಾರ, ತೊಂಭತ್ತು ವರ್ಷದ ವೃದ್ಧೆಯ ಮೇಲೂ ಅತ್ಯಾಚಾರ. ನಿರ್ಭಯಳಂತಹ ಭಯಂಕರ ಸಾಮೂಹಿಕ ಅತ್ಯಾಚಾರ ಮತ್ತು ಸಾವಿನ ನಂತರವೂ ನ್ಯಾಯ ದೊರೆತ ಭಾವವಿಲ್ಲ. ತನ್ನನ್ನು ನಿರಾಕರಿಸಿದಳು ಎಂಬ ಕಾರಣಕ್ಕೆ ವಿದ್ಯಾವಂತ ಹುಡುಗರು ಹಾಡುಹಗಲೇ ಹುಡುಗಿಯರ ಕೊಲೆ ಮಾಡಿದ ಪ್ರಕರಣಗಳು ಕಳೆದ ವಾರ ಎರಡು ಬಾರಿ ನಡೆದಿದೆ. ಒಬ್ಬ ಹೆಣ್ಣುಮಗಳಿಗೆ ಒಬ್ಬ ಹುಡುಗನನ್ನು 'ಬೇಡ' ಎನ್ನುವ ಹಕ್ಕೂ ಇಲ್ಲ ಎಂದರೆ, ನಮ್ಮ ಸಮಾಜ ಹುಡುಗರನ್ನು ಯಾವ ಪರಿಯಲ್ಲಿ ಬೆಳೆಸುತ್ತಿದೆ ಯೋಚಿಸಿ. ಹಿಂದಿಗಿಂತಲೂ ಹೆಚ್ಚು ಪುರುಷ ಗರ್ವದಲ್ಲಿ, ಅಹಂಕಾರದಲ್ಲಿ, ಮತ್ತಷ್ಟು ಪೂರ್ವಗ್ರಹದಲ್ಲಿ ಅವರು ಇಂದು ನಿಂತಿದ್ದಾರೆ.

ಇದು ಕೇವಲ ಯುವಕರ ಪ್ರಶ್ನೆಯಲ್ಲ. ಹಿರಿಯರು; ನಾವು ಆರಿಸಿ ಗದ್ದುಗೆಗೆ ಏರಿಸಿದ ಪ್ರಜಾ ಪ್ರತಿನಿಧಿಗಳು ವಿಧಾನಸೌಧದಲ್ಲಿ ಕುಳಿತು, ಸಾಮಾಜಿಕ ವೇದಿಕೆಯ ಮೇಲೆ ಕುಳಿತು ಪೋರ್ನೋ ನೋಡುತ್ತಾರೆ. ಅದೊಂದು ಅಪರಾಧವೇ ಅಲ್ಲ ಎಂಬಂತೆ 'ಏಕೆ ನಿಮ್ಮ ಮನೆಯಲ್ಲಿ ನೀವು ನೋಡೋಲ್ಲವೆ ?' ಎಂದು ಸವಾಲು ಹಾಕುತ್ತಾರೆ. ಪೋರ್ನೋ ನಿಷೇಧಿಸಿ ಎಂದರೆ ವೈಯಕ್ತಿಕ ಸ್ವಾತಂತ್ರ್ಯದ ಹಕ್ಕು ಎನ್ನುತ್ತಾರೆ. ಇವೆಲ್ಲವುಗಳ ನಡುವೆ ಹೆಣ್ಣುಮಕ್ಕಳಿಗೆ ನಿರ್ಭಯದಿಂದ ಬದುಕುವ ಹಕ್ಕೇ ಇಲ್ಲದಂತೆ ಮಾಡಿದ್ದಾರೆ.

ಅಸ್ವಸ್ಥ ಸಮಾಜದ ಈ ಪ್ರಶ್ನೆ ನಮ್ಮ ದೇಶಕ್ಕೆ ಮಾತ್ರ ಮೀಸಲಲ್ಲ. ಇದು ಜಾಗತಿಕ ಪ್ರಶ್ನೆಯಾಗಿದೆ. ಅಲ್ಲಿ ಆಫ್ರಿಕದ ನೈಜೀರಿಯಾದಲ್ಲಿ ಎರಡು ವರ್ಷಗಳ ಹಿಂದೆ ಬೋಕೋ ಹರಮ್ ಎತ್ತೊಯ್ದ ಶಾಲೆಯ ಎಳೆಯ ವಯಸ್ಸಿನ ಹೆಣ್ಣುಮಕ್ಕಳು, ಐ.ಎಸ್. ಎಳೆದೊಯ್ದ ಇರಾಕಿನ ಮಹಿಳೆಯರು ಲೈಂಗಿಕ ಗುಲಾಮರಾಗಿರುವ ಈ ಹೊತ್ತು, ಜಗತ್ತು ನಿಂತು ನೋಡುತ್ತಿದೆ. ಮಹಿಳೆಯರ ಬಗ್ಗೆ ಅತ್ಯಂತ ಹಗುರವಾಗಿ, ಹೀನಾಯವಾಗಿ ಮಾತನಾಡಿದ ವ್ಯಕ್ತಿಯನ್ನು ಅಮೆರಿಕ ಅಧ್ಯಕ್ಷ ಸ್ಥಾನಕ್ಕೆ ಆರಿಸುತ್ತದೆ. ಇಂದು ಇವೆಲ್ಲ ಮಹಿಳಾ ಪ್ರಶ್ನೆಯಾಗಿ ಉಳಿದಿಲ್ಲ, ಮಾನವೀಯ ಪ್ರಶ್ನೆಯಾಗಿ ಒಟ್ಟು ಸಮಾಜದ ಅಳಿವು ಉಳಿವಿನ ಪ್ರಶ್ನೆಯಾಗಿವೆ. ಜಗತ್ತು ಹರಿದು ಹಂಚಿಹೋಗುತ್ತಿರುವ ಸಮಯದಲ್ಲಿ ನಾವಿದ್ದೇವೆ. ಮತ್ತಷ್ಟು ದ್ವೇಷವನ್ನು, ಮತ್ತಷ್ಟು ಅಸಹನೆಯನ್ನು, ಮತ್ತಷ್ಟು ಗೋಡೆಗಳನ್ನು ಕಟ್ಟಲು ಕಾತುರವಾದ ವಾತಾವರಣ ವಿಶ್ವದಲ್ಲಿ ನಿರ್ಮಾಣವಾಗಿದೆ. ಇದು ನಮ್ಮೆದುರು ಇರುವ ಸವಾಲು.

**ಹೊಸತು :** ಇವತ್ತು ಸಾಹಿತ್ಯ ಉತ್ಸವಗಳು ಸರಕಾರದಿಂದ, ಪ್ರತಿಷ್ಠಿತ ವ್ಯಕ್ತಿಗಳಿಂದ ಮತ್ತು ಕಾರ್ಪೊರೇಟ್ ಸಂಸ್ಥೆಗಳಿಂದ ನಡೆಯುತ್ತಿವೆ. ಇವುಗಳಿಂದ ಸಾಹಿತ್ಯದ ಬೆಳವಣಿಗೆಗೆ ಆಗುತ್ತಿರುವ ಲಾಭವೇನು ?

**ನೇಮಿಚಂದ್ರ :** ವೈಭವದ ಉತ್ಸವಗಳಿಂದ ಸಾಹಿತ್ಯದ ಬೆಳವಣಿಗೆಗೆ ಯಾವ ಲಾಭವೂ ಇಲ್ಲ ಎಂಬುದು ನನ್ನ ಅಭಿಪ್ರಾಯ. ಇವುಗಳಿಂದ ಕೇವಲ ವ್ಯಕ್ತಿಗಳ ಅಥವಾ ರಾಜಕಾರಣಿಗಳ ಪ್ರತಿಷ್ಠೆಯಷ್ಟೇ ಮೆರೆಯುತ್ತದೆ. ಸರಳವಾದ ಅರ್ಥಪೂರ್ಣ ಕಾರ್ಯಕ್ರಮಗಳಲ್ಲಿ ಸಾಹಿತ್ಯದ ಮುನ್ನಡೆಯನ್ನು ಕಂಡುಕೊಳ್ಳುವ ಅವಕಾಶಗಳಿರುತ್ತವೆ.

**ಹೊಸತು :** ನೀವು ಇಂಜಿನಿಯರ್ ಆಗಿ ಹಲವಾರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಅನುಭವಗಳಿಗೆ ಒಡ್ಡಿಕೊಂಡಿದ್ದೀರಿ. ಈ ಹಿನ್ನೆಲೆಯಲ್ಲಿ

ವಿಜ್ಞಾನ ಕ್ಷೇತ್ರದಲ್ಲಿ ಮಹಿಳೆಯರ ಪಾತ್ರವನ್ನು ಕುರಿತಂತೆ ನಿಮ್ಮ ಅನುಭವ, ಅಭಿಪ್ರಾಯವೇನು ?

**ನೇಮಿಚಂದ್ರ:** ನಾನು ಶಾಲೆ ಓದಿದ ಕಾಲದಲ್ಲಿ ನನ್ನೆದುರು ಸ್ಫೂರ್ತಿ ನೀಡುವಂತಹ ಮಹಿಳಾ ಮಾದರಿಗಳಿರಲಿಲ್ಲ. ಶಾಲೆಯಲ್ಲಿ ನಾನು ಓದಿದ ಯಾವ ಪುಸ್ತಕದಲ್ಲೂ ಮಹಿಳಾ ವಿಜ್ಞಾನಿಯ ಉಲ್ಲೇಖವಿರಲಿಲ್ಲ. ನನ್ನ ತಂದೆಯವರ ಗ್ರಂಥಾಲಯದಲ್ಲಿ ಮೇರಿ ಕ್ಯೂರಿ ಪುಸ್ತಕ ದೊರೆತದ್ದು ನನ್ನ ಅದೃಷ್ಟ. ಮುವತ್ತು ವರ್ಷಗಳಿಗೂ ಹಿಂದೆ, ಪಿ.ಯು.ಸಿ. ಮುಗಿಸಿ ಇಂಜಿನಿಯರಿಂಗ್ ರಂಗವನ್ನು ಪ್ರವೇಶಿಸುವಾಗ ನನ್ನಲ್ಲಿ ಸಾಕಷ್ಟು ಅಳುಕು ಆತಂಕವಿತ್ತು. ನನ್ನೆದುರು ಉದಾರಣೆಗಳಿರಲಿಲ್ಲ. ‘ಇವೆಲ್ಲ ಹೆಂಗಸರ ರಂಗವಲ್ಲ. ಕಾರ್ಪೆಂಟ್ರಿ ಇರುತ್ತೆ, ಮಷೀನ್ ಶಾಪ್ ಇರುತ್ತೆ’ ಎಂದೆಲ್ಲ ಹೆದರಿಸಿದವರಿದ್ದರು. ಅಳುಕುತ್ತಾ ಒಳಹೊಕ್ಕ ನಾನು ಮತ್ತು ನನ್ನ ಗೆಳತಿ ವಿಶ್ವವಿದ್ಯಾಲಯಕ್ಕೆ ರ್‍ಯಾಂಕ್ ಪಡೆದು ಹೊರಬಂದಾಗಲೆ, ಅಲ್ಲಿ ಹೆಣ್ಣುಮಕ್ಕಳಿಗೆ ಅಸಾಧ್ಯವಾದದ್ದು ಏನೂ ಇಲ್ಲವೆಂದು ತಿಳಿದದ್ದು ! ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದ ನನ್ನ ವೃತ್ತಿ ಜೀವನದ ಅನುಭವಗಳು ಅದ್ಭುತವಾಗಿವೆ. ಮೈಸೂರಿನಲ್ಲಿ ಬಿ.ಇ. ಮುಗಿಸಿ, ಬೆಂಗಳೂರಿನ ಟಾಟಾ ಇನ್‌ಸ್ಟಿಟ್ಯೂಟ್‌ನಲ್ಲಿ ಎಂ.ಎಸ್. ಪದವಿ ಪಡೆದ ನಂತರ, ವಿಮಾನ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿದೆ. ಆಗಷ್ಟೆ ದೇಶೀಯ ವಿನ್ಯಾಸದ ಮೊಟ್ಟಮೊದಲ ಹೆಲಿಕಾಪ್ಟರ್ ‘ಅಡ್ವಾನ್ಸ್ಡ್ ಲೈಟ್ ಹೆಲಿಕ್ಯಾಪ್ಟರ್’ ಪ್ರಾಜೆಕ್ಟ್ ಆರಂಭವಾಗಿತ್ತು. ಭಾರತದ ಅತ್ಯಾಧುನಿಕ ಹಗುರ ಹೆಲಿಕ್ಯಾಪ್ಟರ್ ‘ಧ್ರುವ’, ಡ್ರಾಯಿಂಗ್ ಬೋರ್ಡಿನ ಗೀಟು ಗೆರೆಗಳಿಂದ ಮೇಲೆದ್ದು, ಮೈದುಂಬಿ ರೂಪು ತಳೆದು, ಮೆಲ್ಲನೆ ನೆಲದಿಂದ ಕೆಲವೇ ಅಡಿ ಹಾರಿದ ಮೊದಲ ಹಾರಾಟದಿಂದ ಹಿಡಿದು, ಜಗತ್ತಿನ ಅತಿ ಎತ್ತರದ ಹೆಲಿಪ್ಯಾಡ್‌ನಲ್ಲಿ ಇಳಿಯುವವರೆಗಿನ ರೋಮಾಂಚನದ ಹಾದಿಯಲ್ಲಿ ಭಾಗಿಯಾದ ಖುಷಿ ನನ್ನದು.



**ಹೊಸತು :** ವಿಜ್ಞಾನ ಕ್ಷೇತ್ರದಲ್ಲಿ ಮಹಿಳೆಯರ ಬಗೆಗಿನ ‘ಗಾಜಿನ ಚಾವಣಿ’ಯ ಅನುಭವದ ಬಗೆಗೆ ಹಂಚಿಕೊಳ್ಳುವಿರಾ ?

**ನೇಮಿಚಂದ್ರ:** ವಿಜ್ಞಾನ ರಂಗದಲ್ಲಿ ಉದ್ಯೋಗಸ್ಥ ಮಹಿಳೆಯರಿಗೆ ‘ಗಾಜಿನ ಚಾವಣಿ’ಯ ಅನುಭವ ಆಗುತ್ತಲೇ ಇರುತ್ತದೆ. ಶ್ರೀಮತಿ ಕೆ. ಎನ್. ಮಾಲತಿ ಅವರು ನಮ್ಮ ಕಾರ್ಖಾನೆಯ ಮೊಟ್ಟ ಮೊದಲ ಮಹಿಳಾ ಏರೋನಾಟಿಕಲ್ ಡಿಸೈನರ್ ಹಾಗೂ ಅವರು ಮೊಟ್ಟ ಮೊದಲ ಮಹಿಳಾ ಅಡಿಷನಲ್ ಜನರಲ್ ಮ್ಯಾನೇಜರ್. ಅವರು ಮೊಟ್ಟ ಮೊದಲ ಮಹಿಳಾ ಜನರಲ್ ಮ್ಯಾನೇಜರ್ ಕೂಡ ಆಗಬೇಕಿತ್ತು. ಆದರೆ ‘ಗಾಜಿನ ಚಾವಣಿ’ ಅಂದು ಬಲು ಗಟ್ಟಿಯಿತ್ತು. ಇಂದು ಎರಡನೇ ಪೀಳಿಗೆಯ ಮಹಿಳಾ ಇಂಜಿನಿಯರುಗಳಾದ ನಮ್ಮ ಕಾಲಕ್ಕೆ ಗಾಜಿನ ತಾರಸಿಯಲ್ಲಿ ಒಂದಿಷ್ಟು ಬಿರುಕುಗಳು ಕಾಣುತ್ತಿವೆ. ಇಂದು ನಾವು ಇಬ್ಬರು ಮಹಿಳೆಯರು ಜನರಲ್ ಮ್ಯಾನೇಜರ್ ಗ್ರೇಡಿನಲ್ಲಿದ್ದೇವೆ. ‘ಮಂಗಳಯಾನ’ದಲ್ಲಿ ಮಹಿಳಾ ವಿಜ್ಞಾನಿಗಳ ಪಾತ್ರವನ್ನು ನೀವೆಲ್ಲ ಓದಿ ಇರುವಿರಿ. ಶ್ರೀಮತಿ ಟೆಸ್ಸಿ ಥಾಮಸ್ ‘ಮಿಸೈಲ್ ವುಮನ್’ ಎಂದೇ ಪ್ರಸಿದ್ಧರಾಗಿದ್ದಾರೆ. ಶ್ರೀಮತಿ ಮಂಜುಳ ಅವರು ಕಳೆದ ವರ್ಷ ‘ಡಿಫೆನ್ಸ್ ಆರ್ ಅಂಡ್ ಡಿ ಸಂಸ್ಥೆ’ಯಲ್ಲಿ ಮೊಟ್ಟ ಮೊದಲ ಮಹಿಳಾ ಡೈರೆಕ್ಟರ್ ಜನರಲ್ ಆಗಿದ್ದಾರೆ. ಎರಡು ವರ್ಷಗಳ ಹಿಂದೆ ಒಂದು ಸಂಸ್ಥೆ ಬೆಂಗಳೂರಿನ ವೈಮಾನಿಕ ಮತ್ತು ಅಂತರಿಕ್ಷ ಕ್ಷೇತ್ರದಲ್ಲಿಯ ಹಿರಿಯ ಮಹಿಳಾ ವಿಜ್ಞಾನಿಗಳನ್ನು ಗೌರವಿಸಿತ್ತು. ಅಲ್ಲಿ ನಾವು ಎಷ್ಟು ಜನ ಇದ್ದೆವು ಗೊತ್ತೆ, ೧೭೦ ಮಂದಿ ಮಹಿಳಾ ವಿಜ್ಞಾನಿಗಳಿದ್ದೆವು !

ಒಂದು ಕ್ಷಣ ಯೋಚಿಸಿ ನೋಡಿ. ಒಂದೂವರೆ ಶತಮಾನಗಳ ಹಿಂದೆ ಮಹಿಳೆಯರಿಗೆ ವೈದ್ಯರಂಗಕ್ಕೆ ಪ್ರವೇಶವಿರಲಿಲ್ಲ. ಏಳೂವರೆ ದಶಕಗಳ ಹಿಂದೆ ಹೆಣ್ಣುಮಕ್ಕಳಿಗೆ ಇಂಜಿನಿಯರಿಂಗ್ ರಂಗಕ್ಕೆ ಪ್ರವೇಶವಿರಲಿಲ್ಲ. ೧೯೯೨ರವರೆಗೆ ಹೆಣ್ಣುಮಕ್ಕಳಿಗೆ ಸೇನೆಯ ಬಾಗಿಲು ಮುಚ್ಚಿತ್ತು. ನಿನ್ನೆ ಮೊನ್ನೆಯವರೆಗೆ ಅವರಿಗೆ ಕಾಂಬಾಟ್ ರೋಲ್‌ಗೆ ಪ್ರವೇಶ ಇರಲಿಲ್ಲ. ಆದರೆ ಇಂದು ನಮ್ಮೆದುರು ಬಹಳಷ್ಟು ಬಾಗಿಲುಗಳು ತೆರೆದಿವೆ. ಸಾಧನೆಯ ರಂಗ ಕೈಬೀಸಿ ಕರೆದಿದೆ. ಮಹಿಳಾ ಹೋರಾಟದ ಫಲವಾಗಿ ಅವರೆದುರು ಇಂದು ತೆರೆದು ನಿಂತ ನೂರೊಂದು ರಂಗಗಳಿಗೆ ಅವರು ಪ್ರವೇಶಿಸಿ ತಮ್ಮ ಸಾಮರ್ಥ್ಯವನ್ನು ತೋರಲಿ ಎಂಬ ಆಶಯ ನನ್ನದು.

**ಹೊಸತು :** ಮೂಢನಂಬಿಕೆಯ ಪ್ರಸಾರದಲ್ಲಿ ಹೆಣ್ಣುಮಕ್ಕಳ ಪಾತ್ರ ಹೆಚ್ಚು ಇದೆ ಎಂಬ ದೂರು ಇದೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು ?

**ನೇಮಿಚಂದ್ರ:** ಇದಕ್ಕಿಂತ ದೊಡ್ಡ ಮೂಢನಂಬಿಕೆ ಇನ್ನೊಂದಿಲ್ಲ. ಅವೈಜ್ಞಾನಿಕ ಮನೋಭಾವ, ಮೂಢನಂಬಿಕೆಗಳಿಗೆ ಲಿಂಗಭೇದವಿಲ್ಲ.

**ಹೊಸತು :** ನಿಮ್ಮ ಬರಹದ ಮುಖ್ಯ ಪ್ರೇರಣೆ ಏನು ?

**ನೇಮಿಚಂದ್ರ:** ಬದುಕು ಪ್ರೀತಿಯ ಕತೆಗಳು ನನ್ನ ಬರಹಕ್ಕೆ ಸ್ಫೂರ್ತಿ ನೀಡುತ್ತವೆ. ಅಗಾಧ ಅಡಚಣೆಯ ಎದುರಲ್ಲೂ ನೆಲ ಕಚ್ಚದ ಮಾನವ ಮನೋಬಲ ನನಗೆ ಪ್ರೇರಣೆ ನೀಡುತ್ತದೆ. ೨೦ ವರ್ಷಗಳ ಹಿಂದೆ, ಸ್ವತಃ ಆಶ್ರಯ ಅರಸಿ ಬಂದಿಳಿದ ಹುಡುಗಿ ಜ್ಯೋತಿ, ಇಂದು ನೂರಕ್ಕೂ ಹೆಚ್ಚು ನಿರ್ಗತಿಕ ಮಕ್ಕಳಿಗೆ ‘ತಾಯಿ ಮನೆ’ಯ ತಂಪಿನ ನೆರಳನ್ನು ಒದಗಿಸಿದ್ದಾಳೆ. ಕತ್ತಲ ಸಮಾಜಕ್ಕೆ ಹಣತೆಯ ಬೆಳಕನ್ನು ನೀಡಬಲ್ಲ ಇಂತಹ ಜ್ಯೋತಿಯರನ್ನು ತಯಾರಿಸಿದ ‘ಸುಮಂಗಲಿ ಸೇವಾಶ್ರಮ’ದ ಸುಶೀಲಮ್ಮ ಎಪ್ಪತ್ತರ ಬಳಿ ಸಾರಿದ ವಯಸ್ಸಿನಲ್ಲೂ ಬಿಡುವಿಲ್ಲದೆ ದುಡಿಯುತ್ತಾರೆ. ಸ್ವತಃ ವಿಭಿನ್ನಚೇತನರಾಗಿ ಗಾಲಿಕುರ್ಚಿಯಲ್ಲಿರುವ ಮಹೇಶ್ ಮುನಿಯಪ್ಪ ಬಡ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಹಣ ಸಂಗ್ರಹಿಸಿ ಅವರ ಭವಿಷ್ಯವನ್ನು ಭದ್ರಪಡಿಸುತ್ತಿದ್ದಾರೆ. ಹೇಳುತ್ತಾ ಹೋದರೆ ಪಟ್ಟಿ ಉದ್ದವಿದೆ. ಈ ಬೆಳಕು ನೀಡುವ ಕಾಯಕದಲ್ಲಿ ಕೈಜೋಡಿಸುವ ಬಯಕೆಯೇ ನನಗೆ ಪ್ರೇರಣೆಯಾಗುತ್ತದೆ. ಜಾತಿಯಿಲ್ಲದ, ಭೀತಿಯಿಲ್ಲದ, ಲಿಂಗತಾರತಮ್ಯವಿಲ್ಲದ ಸಮಾನತೆಯ ಬುನಾದಿಯ ಮೇಲೆ ನಿಂತ ಸಮಾಜದ ಕನಸು ಹೊತ್ತು ದುಡಿಯುವ ಜನರ ಸಾಂಗತ್ಯ ನನ್ನ ಬರಹಗಳಿಗೆ ಪ್ರೇರಣೆಯನ್ನು ಒದಗಿಸುತ್ತದೆ. ಆ ಕನಸನ್ನು ನನಸಾಗಿಸಲು ಕತ್ತಲ ಹಾದಿಯಲ್ಲಿ ದೊಂದಿ ಹಿಡಿದು ನಡೆದ ಜನರೊಡನೆ ನಾಲ್ಕು ಹೆಜ್ಜೆ ಹಾಕುವ ಹಂಬಲವೇ ನನ್ನ ಬದುಕಿಗೆ ಮತ್ತು ಬರಹಕ್ಕೆ ಮತ್ತಷ್ಟು ಉತ್ಸಾಹವನ್ನು ನೀಡುತ್ತದೆ.

**ಹೊಸತು :** ನಿಮ್ಮ ಬಿಡುವಿಲ್ಲದ ವೃತ್ತಿ, ಬರಹ, ಪ್ರವಾಸಗಳ ನಡುವೆ ‘ಹೊಸತು’ಗಾಗಿ ಈ ಮಧ್ಯರಾತ್ರಿಯ ವೇಳೆಯಲ್ಲೂ ವಿಶೇಷ ಸಂದರ್ಶನ ನೀಡಿದ್ದೀರಿ. ಅದಕ್ಕಾಗಿ ಮನಃಪೂರ್ವಕ ಧನ್ಯವಾದಗಳು.

**ಡಾ॥ ವಸುಂಧರಾ ಭೂಪತಿ**
ನಂ. ೨೨೨, ೨ನೇ ‘ಇ’ ಕ್ರಾಸ್, ೩ನೇ ಬ್ಲಾಕ್
೩ನೇ ಸ್ಟೇಜ್, ಬಸವೇಶ್ವರನಗರ
ಬೆಂಗಳೂರು – ೫೬೦ ೦೭೯

# ಕಾರ್ಮಿಕ ಕಾನೂನು ಸುಧಾರಣೆಗಳು ಯಾರ ಚರಮಗೀತೆಯಾಗಲಿದೆ?

**ನವಉದಾರೀಕರಣದ ಆರ್ಥಿಕ ನೀತಿಗಳ ರಾಜ್ಯಭಾರ**

ಅಂದಿನ ಹಣಕಾಸು ಸಚಿವರಾಗಿದ್ದ ಡಾ॥ ಮನಮೋಹನ್ ಸಿಂಗ್ ಮತ್ತು ಪ್ರಧಾನಿ ಶ್ರೀ ಪಿ. ವಿ. ನರಸಿಂಹರಾವ್ ಅವರ ಸರ್ಕಾರ ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣ ಪ್ರಕ್ರಿಯೆಗಳ ಮೂಲಕ ನವ ಉದಾರೀಕರಣದ ಆರ್ಥಿಕ ನೀತಿಗಳನ್ನು ಅಪ್ಪಿಕೊಂಡ ಸಂದರ್ಭದಿಂದಲೂ ಕಾರ್ಮಿಕ ಕಾಯಿದೆಗಳಿಗೆ ಸುಧಾರಣೆ ತರುವುದರ ಮೂಲಕ, ಬಂಡವಾಳ ಹೂಡಿಕೆ ಮತ್ತು ವ್ಯಾಪಾರ ಹವಾಮಾನವನ್ನು ಈ ಕಾನೂನುಗಳ ಹಿಡಿತದಿಂದ ಮುಕ್ತಗೊಳಿಸುವಂತೆ ಭಾರತೀಯ ಕೈಗಾರಿಕೆಗಳ ಮಹಾ ಒಕ್ಕೂಟ (ASSOCHAM–ವಾಣಿಜ್ಯ ಮಂಡಳಿಗಳ ರಾಷ್ಟ್ರಮಟ್ಟದ ಸಂಘ), ಅಖಿಲ ಭಾರತ ಮಾಲೀಕರ ಸಂಘ, ಇತ್ಯಾದಿಗಳು ನಿರಂತರವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳನ್ನು ಒತ್ತಾಯಿಸುತ್ತಲೇ ಬಂದಿವೆ. ನಿಸ್ಸಂದೇಹವಾಗಿ ಮಾಲೀಕರು ಕೇಳಿದಂತಹ "ಕಾರ್ಮಿಕ ಕಾಯಿದೆಗಳ ಸುಧಾರಣೆಗಳು" ಬಂಡವಾಳದ ಹೊರ ಹರಿವನ್ನು ಸರಳೀಕರಿಸಿ, ಉದ್ಯೋಗದ ವಿಚಾರದಲ್ಲಿ ಸ್ಥಿರವಲ್ಲದ ಧೋರಣೆ ತಳೆದಿವೆ. ಅದರ ಅರ್ಥ ನವ ಉದಾರೀಕರಣದ ಆರ್ಥಿಕ ನೀತಿಗಳನುಸಾರ ಕಾರ್ಮಿಕರನ್ನು ಕೆಲಸಕ್ಕೆ ನೇಮಿಸಿಕೊಳ್ಳುವ ಮತ್ತು ತೆಗೆದುಹಾಕುವ ಅನಿಯಂತ್ರಿತ ಹಕ್ಕು, ತಪಾಸಣಾರಹಿತ ಉದ್ಯೋಗ ಸ್ಥಳಗಳ ಸೃಷ್ಟಿ ಮತ್ತಿತರ ಬದಲಾವಣೆಗಳನ್ನು ತರುವುದೆಂಬುದು, ಭಾರತದ ಕಾರ್ಮಿಕ ಕಾನೂನುಗಳು ಬಿಗಿಯಾಗಿರುವುದೆಂಬುದು, ಇದರಿಂದಾಗಿ ಉದ್ಯೋಗದ ಬೆಳವಣಿಗೆಯ ಗತಿ ಕ್ಷೀಣಗೊಂಡಿರುವುದೆಂಬುದು ಮತ್ತು ಅನೌಪಚಾರಿಕ ಉದ್ಯೋಗಗಳು ಹೆಚ್ಚಿರುವುದೆಂಬುದು ಮಾಲೀಕರ ಅಭಿಪ್ರಾಯವಾಗಿದೆ. ರಾಜಾಸ್ತಾನದ ಮುಖ್ಯಮಂತ್ರಿ ವಸುಂಧರಾ ರಾಜೆ ಹೀಗೆ ಹೇಳಿದ್ದಾರೆ: "ಕಾರ್ಮಿಕ ಕಾಯಿದೆ ಸುಧಾರಣೆಗಳು ಉದ್ಯೋಗ ಸೃಷ್ಟಿಗೆ ಫಲವತ್ತಾದ ನೆಲೆಯನ್ನು ಒದಗಿಸುತ್ತದೆ," "ಹಾಲಿ ಇರುವ ಕಾರ್ಮಿಕ ಕಾಯಿದೆಗಳು ಶ್ರಮಿಕ ಮಾರುಕಟ್ಟೆಯನ್ನು ಬಿಗಿಗೊಳಿಸಿ, ಉದ್ಯೋಗ ಸೃಷ್ಟಿಯನ್ನು ಹಿಂದಿಕ್ಕಿ, ಭಾರತದಲ್ಲಿ ಕಾರ್ಮಿಕರ ಮೇಲೆ ಮಾಡುವ ಅಲ್ಪ ವೆಚ್ಚದಿಂದ ಪಡೆಯುವ ಲಾಭದ ನಡುವೆಯೂ ಬಂಡವಾಳ ತೀವ್ರತೆಯನ್ನು ಹೆಚ್ಚಿಸುತ್ತದೆ". ಕಾರ್ಮಿಕ ಕಾಯಿದೆ ಸುಧಾರಣೆಗಳ ಪ್ರತಿಪಾದಕರ ವಾದವೂ ಸಹ ಇದೇ ಆಗಿದೆ.

**ಕಾರ್ಮಿಕ ಕಾಯಿದೆಗಳ ತಿದ್ದುಪಡಿಗಾಗಿ ಒತ್ತಾಯ**

೨ನೇ ಕಾರ್ಮಿಕ ಆಯೋಗದ ವರದಿಯ ಪ್ರಕಾರ ಭಾರತದಲ್ಲಿ ಕೇವಲ ಶೇ. ೮ರಷ್ಟು ಶ್ರಮಶಕ್ತಿ ಮಾತ್ರ ಸಂಘಟಿತ ಅಥವಾ ಔಪಚಾರಿಕ ಕ್ಷೇತ್ರದಲ್ಲಿದ್ದರೆ ಉಳಿದೆಲ್ಲವೂ ಅಸಂಘಟಿತ ಅಥವಾ ಅನೌಪಚಾರಿಕ ವಲಯಕ್ಕೆ ಸೇರುತ್ತವೆ. ಅಲ್ಲದೆ, ಕೇಂದ್ರ ಸರ್ಕಾರದ ಕಾರ್ಮಿಕ ಸಚಿವಾಲಯದಡಿ ಕಾರ್ಯ ನಿರ್ವಹಿಸುವ ಚಂಡೀಗಢದ ಕಾರ್ಮಿಕ ಕಚೇರಿ ೨೦೦೯–೧೦ನೇ ಸಾಲಿನಲ್ಲಿ ನಡೆಸಿದ ಉದ್ಯೋಗ ಮತ್ತು ನಿರುದ್ಯೋಗ ಅಧ್ಯಯನದ ವರದಿಯ ಪ್ರಕಾರ ಪ್ರತಿ ೧೦೦೦ ಉದ್ಯೋಗಸ್ಥ ಜನರಿಗೆ ೪೮೩ ಸ್ವಯಂ ಉದ್ಯೋಗಿಗಳಿದ್ದರೆ, ಅದೇ ಭತ್ಯೆ ಅಥವಾ ಸಂಬಳ ಪಡೆಯುವ ಕಾರ್ಮಿಕರ ಸಂಖ್ಯೆ ೧೬೪ ಹಾಗೂ ಅನೌಪಚಾರಿಕ (ಕ್ಯಾಷ್ಯುಯಲ್) ಕಾರ್ಮಿಕರ ಪ್ರಮಾಣ ೩೫೩ರಷ್ಟಿದೆ ಎಂದು ತಿಳಿದುಬಂದಿದೆ. ಪಟ್ಟಣ–ಗ್ರಾಮೀಣ ಸರಾಸರಿಗಿಂತ ಗ್ರಾಮೀಣ ಪ್ರದೇಶಗಳಲ್ಲಿ ಸ್ವಯಂ ಉದ್ಯೋಗಿಗಳ

**ಮೂಲ : ಮುರಳಿಧರ ಚಿಕ್ಕಮಗಳೂರು**

**ಕನ್ನಡಕ್ಕೆ : ಎ. ಜ್ಯೋತಿ**

ಭಾರತದಲ್ಲಿ ಬದಲಾಗುತ್ತಿರುವ ಉದ್ಯೋಗದ ಸ್ವಭಾವದ ಹಿನ್ನೆಲೆಯಲ್ಲಿ ನಾವು ಕಾರ್ಮಿಕ ಕಾಯಿದೆಗಳಿಗೆ ಪ್ರಸ್ತಾಪಿತ ತಿದ್ದುಪಡಿಗಳನ್ನೂ, ಕಾರ್ಮಿಕರ ಮೇಲೆ ಅವುಗಳು ಬೀರುವ ಪ್ರಭಾವವನ್ನೂ ಆಳವಾಗಿ ಪರಿಶೀಲಿಸಬೇಕಾದ ಅಗತ್ಯವಿದೆ. ಪ್ರಚಲಿತ ೪೪ ಕಾರ್ಮಿಕ ಕಾಯಿದೆಗಳನ್ನು (೧) ಕೈಗಾರಿಕಾ ಸಂಬಂಧಗಳ ಕಾರ್ಮಿಕ ಸಂಹಿತೆ, (೨) ವೇತನ ಸಂಹಿತೆ, (೩) ಸುರಕ್ಷತಾ ಸಂಹಿತೆ, (೪) ಕಲ್ಯಾಣ ಸಂಹಿತೆ ಎಂದು ೪ ಸಂಹಿತೆಗಳನ್ನಾಗಿ ವಿಂಗಡಿಸುವ ಅಂಶವನ್ನು ಕೇಂದ್ರ ಸರ್ಕಾರ ಪ್ರಸ್ತಾಪಿಸಿದೆ. ಕೈಗಾರಿಕಾ ಸಂಬಂಧಗಳ ಸಂಹಿತೆಯು ಈ ಮೊದಲ ೧೯೨೬ರ ಕಾರ್ಮಿಕ ಸಂಘಗಳ ಕಾಯಿದೆ, ೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆ ಮತ್ತು ೧೯೪೬ರ ಕೈಗಾರಿಕಾ ಉದ್ಯೋಗ (ಸ್ಥಾಯಿ ಆದೇಶ) ಕಾಯಿದೆಗಳನ್ನು ಒಳಗೊಂಡಿದೆ. ಸಂಘಟಿತ ವಲಯದ ಕಾರ್ಮಿಕ ಸಂಘಟನೆಗಳಲ್ಲಿ ಬಾಹ್ಯ ನಾಯಕತ್ವವನ್ನು ದೂರ ಸರಿಸಿ ಅಸಂಘಟಿತ ಕ್ಷೇತ್ರದಲ್ಲಿ ಹೊರಗಿನಿಂದ ಇಬ್ಬರು ನಾಯಕರಿಗೆ ಮಾತ್ರ ಸೀಮಿತಗೊಳಿಸಿ ಸರ್ಕಾರ ಕೈಗಾರಿಕಾ ಸಂಬಂಧಗಳ ಸಂಹಿತೆಗೆ ಪ್ರಸ್ತಾವನೆ ಸಲ್ಲಿಸಿದೆ. ಈ ಪ್ರಸ್ತಾಪಿತ ತಿದ್ದುಪಡಿಯು ಕಾರ್ಮಿಕರ ಹಿತಾಸಕ್ತಿಯ ವಿರುದ್ಧವಾಗಿದ್ದು ಸಾಮೂಹಿಕ ಚೌಕಾಶಿ ಪ್ರಕ್ರಿಯೆಯಲ್ಲಿ ಸಂಘಟಿತ ಕ್ಷೇತ್ರದ ಕಾರ್ಮಿಕರ ಮೇಲೆ ಪ್ರತಿಕೂಲ ಪರಿಣಾಮ ಬೀರಲಿದೆ.



(೪೫೭/೧೦೦೦) ಮತ್ತು ಅನೌಪಚಾರಿಕ ಕಾರ್ಮಿಕರ (೪೩೫/೧೦೦೦) ಪ್ರಮಾಣ ಅತಿ ಹೆಚ್ಚಿನ ಮಟ್ಟದಲ್ಲಿದೆ. ಇದರಿಂದ ಭಾರತದ ಅರ್ಧದಷ್ಟು ಶ್ರಮಶಕ್ತಿ ಸ್ವಯಂ–ಉದ್ಯೋಗಿಗಳಾಗಿದ್ದಾರೆಂದು ಕಂಡುಬರುತ್ತದೆ. ಅವರಿಗೆ ಯಾವ ಕಾರ್ಮಿಕ ಕಾನೂನೂ ಅನ್ವಯವಾಗುವುದಿಲ್ಲ. ಅದರಂತೆಯೇ ಕೃಷಿ ಕಾರ್ಮಿಕರೂ ಸಹ ಕಾರ್ಮಿಕ ಕಾಯಿದೆಗಳಿಂದ ದೂರವೇ ಉಳಿದಿದ್ದಾರೆ. ಶೇ. ೧೪ರಷ್ಟು ಒಟ್ಟು ದೇಶೀಯ ಉತ್ಪನ್ನಕ್ಕೆ ಕೃಷಿ ಕೊಡುಗೆ ನೀಡುತ್ತದೆ. ಆದರೆ ಭಾರತದ ಶೇ. ೫೦ಕ್ಕೂ ಅಧಿಕ ಶ್ರಮಶಕ್ತಿಯನ್ನು ಅದು ಬಳಸಿಕೊಳ್ಳುತ್ತದೆ. ಆದ್ದರಿಂದ ಭಾರತದ ಅಗಾಧ ಪ್ರಮಾಣದ ಬಹುಸಂಖ್ಯೆಯ ಕಾರ್ಮಿಕರಿಗೆ ಭಾರತದ ಕಾರ್ಮಿಕ ಕಾನೂನುಗಳು ಅನ್ವಯವಾಗುವುದಿಲ್ಲ ಎಂಬ ಅಂಶವು ನಿರ್ವಿವಾದ. ವಿಶೇಷ ಆರ್ಥಿಕ ವಲಯಗಳು, ಸ್ಟಾರ್ಟ್‌ಅಪ್‌ಗಳು ಮತ್ತು ಮಾಹಿತಿ ತಂತ್ರಜ್ಞಾನ ಉದ್ಯಮಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳಲ್ಲಿ ಕಾರ್ಮಿಕ ಕಾಯಿದೆಗಳ ಅನುಷ್ಠಾನಕ್ಕೆ ವಿನಾಯಿತಿ ನೀಡಲಾಗಿರುವ ಅಂಶ ಮಹತ್ವಪೂರ್ಣವಾದುದು. ಹೀಗಿದ್ದರೂ ರಾಜ್ಯ ಮತ್ತು ಕೇಂದ್ರಗಳ ಅಸಂಖ್ಯಾತ ಕಾರ್ಮಿಕ ಕಾಯಿದೆಗಳ ವ್ಯಾಪ್ತಿಗೆ ಒಳಪಟ್ಟ ಸಂಘಟಿತ ಕಾರ್ಮಿಕರು ಉತ್ಪಾದನಾ ಮತ್ತು ಸೇವಾ ವಲಯಗಳಲ್ಲಿ ಬಹುಮುಖ್ಯ ಪಾತ್ರ ವಹಿಸುವರೆಂದು ಮಾಲೀಕರು ವಾದಿಸುತ್ತಾರೆ. ಅವರ ಪ್ರಕಾರ ಒಟ್ಟು ದೇಶೀಯ ಉತ್ಪನ್ನದ ಶೇ. ೬೦ರಷ್ಟನ್ನು ದುಡಿಯುವ ಈ ಜನವಿಭಾಗಗಳು ಕೊಡುಗೆಯಾಗಿ ನೀಡುವುದರಿಂದ ಕಾರ್ಮಿಕ ಕಾಯಿದೆಗಳ ಪ್ರತಿಗಾಮಿ ನಿಯಮಗಳಿಂದ ಮಾಲೀಕರನ್ನು ಬಿಡುಗಡೆಗೊಳಿಸಬೇಕೆಂದು ಮಾಲೀಕರು ಒತ್ತಾಯಿಸುತ್ತಾರೆ. ಭಾರತ ಸರ್ಕಾರದ ಮುಖ್ಯ ಆರ್ಥಿಕ ಸಲಹೆಗಾರರಾಗಿದ್ದ ಕಾರ್ನೆಲ್ ವಿಶ್ವವಿದ್ಯಾನಿಲಯದ ಅರ್ಥಶಾಸ್ತ್ರಜ್ಞ ಕೌಶಿಕ್ ಬಸು ಬಿಬಿಸಿಗೆ ನೀಡಿದ ಸಂದರ್ಶನದಲ್ಲಿ, "ಕಾರ್ಮಿಕ ಮಾರುಕಟ್ಟೆ ನಿಯಂತ್ರಣದಲ್ಲಿ ಉದಾರತೆ ಅನುಸರಿಸುವುದರಿಂದ ವಿದೇಶಿ ಬಂಡವಾಳವನ್ನು ಆಕರ್ಷಿಸಿ, ಉದ್ಯೋಗ ಸೃಷ್ಟಿಸಿ ಹೆಚ್ಚಿನ ಬೆಳವಣಿಗೆ ಉಂಟುಮಾಡಬಹುದು" ಎಂದು ಹೇಳಿದ್ದರು. ಅಲ್ಲದೆ, "ಈಗ ಬೇಕಿರುವುದು ಕಾರ್ಮಿಕರನ್ನು ಸಂಸ್ಥೆಗಳು ಬೇಜವಾಬ್ದಾರಿಯುತವಾಗಿ ಕಿತ್ತೆಸೆಯುವ ಸ್ವಾತಂತ್ರ್ಯವಲ್ಲ, ಆದರೆ ತಮ್ಮ ಅಗತ್ಯಕ್ಕನುಗುಣವಾಗಿ ಕಾರ್ಮಿಕರೊಂದಿಗೆ ವಿವಿಧ ರೀತಿಗಳ ಒಪ್ಪಂದಗಳನ್ನು ಮಾಡಿಕೊಳ್ಳುವಂತಹ ಕಾನೂನಾತ್ಮಕ ಆಡಳಿತ ಮಾತ್ರ" ಎಂದೂ ಅವರು ಪ್ರತಿಪಾದಿಸಿದ್ದರು. ೨೦೦೦ದ ಸಾಲಿನಲ್ಲಿ ಕೇಂದ್ರ ಸರ್ಕಾರ ೧೯೪೬ರ ಕೈಗಾರಿಕಾ ಉದ್ಯೋಗ (ಸ್ಥಾಯಿ ಆದೇಶಗಳು) ಕಾಯಿದೆಯೊಳಗೆ 'ನಿಗದಿತ ಅವಧಿ ಉದ್ಯೋಗ'ವನ್ನು ಸೇರ್ಪಡೆ ಮಾಡಿತು. ಆದ್ದರಿಂದ ಮಾಲೀಕರ ಒತ್ತಾಯ, ವಾದಗಳಿಂದ ಸರ್ಕಾರಗಳು ದೇಶದಲ್ಲಿ ಜಂಜಾಟಮುಕ್ತ ವ್ಯಾಪಾರ ಹವಾಮಾನವನ್ನು ನಿರ್ಮಿಸಿಕೊಡಲು "ಕಾರ್ಮಿಕ ಕಾಯಿದೆ ಸುಧಾರಣೆಗಳನ್ನು" ಜಾರಿಗೊಳಿಸ ಬೇಕೆಂಬ ಅಂಶ ಸ್ಪಷ್ಟವಾಗುತ್ತದೆ. ಈ ವಿಚಾರದಲ್ಲಿ ಕಾರ್ಮಿಕ ಸಂಘಗಳ ಮತ್ತು ಕಾರ್ಮಿಕರ ದೃಷ್ಟಿಕೋನದಿಂದ ನೋಡುವುದಾದರೆ "ಕಾರ್ಮಿಕ ಕಾನೂನು ಸುಧಾರಣೆಗಳು" ಎಂಬ ಪದಗುಚ್ಛವು ಅಪಪ್ರಯೋಗವಾಗುತ್ತದೆ.

**ಕಾರ್ಮಿಕರನ್ನು ಸಶಕ್ತಗೊಳಿಸಿ**

ಕಾರ್ಮಿಕ ಕಾಯಿದೆಗಳ ಹುಟ್ಟನ್ನು ಗಮನಿಸಿದರೆ, ಕೆಲವನ್ನು ವಸಾಹತುಶಾಹಿ ಗತಕಾಲದಿಂದ ಪರಂಪರಾಗತವಾಗಿ ಪಡೆದಿದ್ದೇವೆ ಮತ್ತು ಉಳಿದವು ಸ್ವಾತಂತ್ರ್ಯೋತ್ತರ ಕಾಲದಲ್ಲಿ ಶಾಸನ ರೂಪದಲ್ಲಿ ರಚಿಸಲ್ಪಟ್ಟಿವೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ರಚನೆಯಾಗಿರುವ ಕಾರ್ಮಿಕ ಕಾಯಿದೆಗಳ ಬೇರುಗಳು ರಾಜ್ಯ ನೀತಿ ನಿರ್ದೇಶಕ ತತ್ವಗಳ ೪ನೇ ಭಾಗದಲ್ಲಿ ಮತ್ತು ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ (ಐಎಲ್‌ಒ) ಒಡಂಬಡಿಕೆಗಳಲ್ಲಿ ಅಡಗಿವೆ. ಭಾರತೀಯ ಜೀವ ವಿಮಾ ನಿಗಮ V/s ಡಿ. ಜೆ. ಬಹಾದೂರ್ (೧೯೮೦, ಕಾರ್ಮಿಕರ ನ್ಯಾಯಾಲಯ ೧೨೧೮) ಪ್ರಕರಣದಲ್ಲಿ ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್ ಹೀಗೆ ಹೇಳುತ್ತಾರೆ: "೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆಯ ಗುರಿ, ಕಾರ್ಮಿಕರ ಸ್ಥಿತಿಗತಿಗಳ ಸುಧಾರಣೆಯೇ ಆಗಿದ್ದು, ಪ್ರಾಯೋಗಿಕ ಅರ್ಥದಲ್ಲಿ ಹೇಳುವುದಾದರೆ, ಶಾಂತಿಯುತ ಸಹಬಾಳ್ವೆಯನ್ನು ಹದಮಿಶ್ರಣಗೊಳಿಸಿ, ಇಬ್ಬರಿಗೂ ಪ್ರಯೋಜನವಾಗುವಂತೆ, ಆದರೆ ತಟಸ್ಥ ನಿಲುವನ್ನು ತಳೆಯದೆ, ಸ್ವಾಯತ್ತತೆ ಮತ್ತು ಹೆಚ್ಚಿನ ರಿಯಾಯಿತಿಗಳಿಗೆ ನಿಯಂತ್ರಣ ಹೇರಿ, ಬಹುಸಂಖ್ಯಾತ ದುರ್ಬಲರ ಕಲ್ಯಾಣದ ಬಗ್ಗೆ ಕಾಳಜಿ ವಹಿಸುವುದೇ ಆಗಿರುತ್ತದೆ. ಕಾರ್ಮಿಕರ ಮತ್ತು ಅವರ ಸಾಮೂಹಿಕ ಸಂಘಟನೆಯನ್ನು ಸಶಕ್ತಗೊಳಿಸುವುದು, ಬಂಡವಾಳ ಮತ್ತು ಕಾರ್ಮಿಕರ ನಡುವೆ ಸಮತೋಲನ ಏರ್ಪಡಿಸುವುದು, ವಿವೇಕಯುತವಾಗಿ ಕೈಗಾರಿಕಾ ಸಂಬಂಧಗಳನ್ನು ಉಳಿಸಿಕೊಳ್ಳುವುದು ಮತ್ತು ಕೈಗಾರಿಕಾ ಪ್ರಜಾತಂತ್ರವನ್ನು ಬೆಳೆಸುವುದು, ಇವು ಕಾರ್ಮಿಕ ಕಾಯಿದೆಗಳ ಪ್ರಮುಖ ಉದ್ದೇಶಗಳು." ಈ ಅಂಶವನ್ನು ರಾಷ್ಟ್ರೀಯ ಜವಳಿ ನಿಗಮ (ಎನ್.ಟಿ.ಸಿ.) ಕಾರ್ಮಿಕರ ಸಂಘ V/s ಪಿ. ಆರ್. ರಾಮಕೃಷ್ಣನ್ (ಎಐಆರ್ ೧೯೮೩, ಸರ್ವೋಚ್ಚ ನ್ಯಾಯಾಲಯ ಪುಟ ೭೫) ಪ್ರಕರಣದಲ್ಲಿ ಪೀಠದ ಪರವಾಗಿ ಮಾತನಾಡಿದ ನ್ಯಾಯಮೂರ್ತಿ ಒ. ಚಿನ್ನಪ್ಪ ರೆಡ್ಡಿ ಅಮೋಘವಾಗಿ ತಿಳಿಸಿಕೊಟ್ಟಿದ್ದಾರೆ: "ಒಂದು ಕಂಪನಿ ನಡೆಸುವ ಉದ್ಯಮದಲ್ಲಿ ಆಸಕ್ತರಾಗಿರುವುದು ಕೇವಲ ಬಂಡವಾಳ ಪೂರೈಸುವಂತಹ ಷೇರುದಾರರು ಮಾತ್ರವಲ್ಲ, ಶ್ರಮವನ್ನು ಒದಗಿಸಿರುವಂತಹ ಕಾರ್ಮಿಕರು ಸಹ ಹೆಚ್ಚಾಗಿ ಅಲ್ಲದಿದ್ದರೂ, ಅಷ್ಟೇ ಆಸಕ್ತರಾಗಿರುತ್ತಾರೆ. ಏಕೆಂದರೆ ಉದ್ಯಮದಿಂದ ಉತ್ಪಾದನೆಯಾಗುವ ಎಲ್ಲವೂ ಶ್ರಮ ಮತ್ತು ಬಂಡವಾಳದ ಪ್ರತಿಫಲವೇ ಆಗಿರುತ್ತದೆ. ಷೇರುದಾರರು ತಮ್ಮ ಹಣದ ಕೆಲಭಾಗವನ್ನಷ್ಟೇ ಹೂಡಿದರೆ, ಕಾರ್ಮಿಕರು ತಮ್ಮ ಬೆವರು ಮತ್ತು ಶ್ರಮಗಳನ್ನು, ಅಷ್ಟೇಕೆ ತಮ್ಮ ಜೀವವನ್ನೇ ಹೂಡಿಕೆ ಮಾಡಿರುತ್ತಾರೆ. ಆದ್ದರಿಂದ ಸಮಾಜವಾದಿ ಸಮಾಜದಲ್ಲಿ ಕಾರ್ಮಿಕರಿಗೆ ವಿಶೇಷ ಸ್ಥಾನವಿದೆ. ಅವರು ಕೇವಲ ಶ್ರಮದ ಮಾರಾಟಗಾರರಲ್ಲ, ಬಂಡವಾಳದ ಮಾಲೀಕರಿಗೆ ಬಿಕರಿಯಾಗುವ ಮಾರುಕಟ್ಟೆಯ ಸರಕಲ್ಲ, ಕಾರ್ಮಿಕರು ಸಂಪತ್ತಿನ ಹಾಗೆಯೇ ಬಂಡವಾಳದ ಉತ್ಪಾದಕರು. ಅಷ್ಟೇ ಅಲ್ಲ, ಇನ್ನೂ ಹೆಚ್ಚು."

**ಶ್ರಮಿಕರ ಪ್ರಧಾನ ಮಾನದಂಡಗಳು**

ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕಾರ್ಮಿಕ ಕಾಯಿದೆಗಳ ಚರಿತ್ರೆಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ಮಾಲೀಕರಿಂದ ಕಾರ್ಮಿಕರ ಆರ್ಥಿಕ ಶೋಷಣೆಯನ್ನು ಕಿತ್ತೊಗೆಯಲು, ಕಾರ್ಮಿಕರ ಬಲಿ ಕೊಡುವುದನ್ನು ತಡೆಯಲು ಮತ್ತು ಭಾರತದ ಶ್ರಮಶಕ್ತಿಯ ಭಾಗವಾಗಿರುವ ಮಹಿಳೆಯರು ಮತ್ತು ಪುರುಷರಿಗೆ ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನು ಒದಗಿಸಲೆಂದೇ ಅವುಗಳನ್ನು ರಚಿಸಲಾಯಿತೆಂದೆನಿಸುತ್ತದೆ. ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯು ೧೯೩೦ರಲ್ಲಿ ತನ್ನ ೨೯ನೇ ಸಮಾವೇಶದಲ್ಲಿ ಶ್ರಮಿಕರ ಪ್ರಧಾನ ಮಾನದಂಡವಾದ ಸಂಘದ ಹಕ್ಕನ್ನು ಒತ್ತಾಯಿಸಿತಲ್ಲದೆ ಸಂಘಟನಾ ಹಕ್ಕಿನ ಸಂರಕ್ಷಣೆ (೧೯೪೮ರಲ್ಲಿ ೮೭ನೇ ಒಡಂಬಡಿಕೆ), ಸಾಮೂಹಿಕ ಚೌಕಾಶಿ (೧೯೪೯ರಲ್ಲಿ ೯೮ನೇ ಒಡಂಬಡಿಕೆ), ಸಮಾನ ಮೌಲ್ಯದ ಕೆಲಸಕ್ಕೆ ಮಹಿಳೆಯರಿಗೆ ಮತ್ತು ಪುರುಷರಿಗೆ ಸಮಾನ ವೇತನ ಮತ್ತು ಅನುಕೂಲಗಳನ್ನು ಒದಗಿಸುವುದು (೧೯೫೧ರಲ್ಲಿ ೧೦೦ನೇ ಒಡಂಬಡಿಕೆ), ಜೀತಗಾರಿಕೆಯ ನಿಷೇಧ (೧೯೫೭ರಲ್ಲಿ ೧೦೫ನೇ ಒಡಂಬಡಿಕೆ), ಉದ್ಯೋಗ ಮತ್ತು ವೃತ್ತಿಯಲ್ಲಿ ತಾರತಮ್ಯ ನಿವಾರಣೆ (೧೯೫೮ರಲ್ಲಿ ೧೧೧ನೇ ಒಡಂಬಡಿಕೆ), ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆ (೧೯೯೯ರಲ್ಲಿ ೧೮೨ನೇ ಒಡಂಬಡಿಕೆ) ಇವುಗಳ ಜಾರಿಗೂ ಒತ್ತಾಯಿಸಲಾಯಿತು. ಭಾರತೀಯ ಸಂವಿಧಾನದ ೪ನೇ ಭಾಗದಲ್ಲಿ ರಾಜ್ಯ ನೀತಿ ನಿರ್ದೇಶಕ ತತ್ವಗಳು ಕಾರ್ಮಿಕರ ಹಿತಾಸಕ್ತಿ ಕಾಪಾಡುವ ಮತ್ತು

## ಅಭಿನಂದನೆ...

ಕನ್ನಡದ ಹಿರಿಯ ಸಾಹಿತಿ ಬೊಳುವಾರು ಮಹಮ್ಮದ್ ಕುಂಞಿ ಅವರಿಗೆ ೨೦೧೬ನೇ ಸಾಲಿನ 'ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ'ಯು ಅವರ 'ಸ್ವಾತಂತ್ರ್ಯದ ಓಟ' ಎಂಬ ಕಾದಂಬರಿಗೆ ಲಭಿಸಿದೆ. ಬೋಳುವಾರು ಅವರಿಗೆ 'ನವಕರ್ನಾಟಕ' ಪ್ರಕಾಶನದ ಅಭಿನಂದನೆಗಳು.

ಬೆಳೆಸುವ ಸಲುವಾಗಿ ಸಮಾಜ ಕಲ್ಯಾಣ ಕಾರ್ಯಕ್ರಮಗಳನ್ನೂ ಅಳವಡಿಸಿದೆ.

**ಆಧುನಿಕ ಕೈಗಾರಿಕೆಗಳು – ಊಳಿಗಮಾನ್ಯ ಮನಃಸ್ಥಿತಿ**

ಕಾರ್ಮಿಕರಿಗೆ ಸಂಬಂಧಿಸಿದ ಸಾಂವಿಧಾನಿಕ ನಿಬಂಧನೆಗಳಿಂದ ಹಿಡಿದು ಸರ್ವೋಚ್ಚ ನ್ಯಾಯಾಲಯ ಮತ್ತು ಉಚ್ಚ ನ್ಯಾಯಾಲಯಗಳ ನ್ಯಾಯಾಂಗ ಸೂಚನೆಗಳ ಜೊತೆಗೆ ಐಎಲ್ಓ ಸಮಾವೇಶಗಳ ಒಡಂಬಡಿಕೆಗಳನ್ನೂ ಪರಿಗಣಿಸಿದರೆ ಕಾರ್ಮಿಕರನ್ನು ಸಾಮಾಜಿಕ ಮತ್ತು ಆರ್ಥಿಕ ಶೋಷಣೆಯ ವಿರುದ್ಧ ರಕ್ಷಿಸುವುದು ಪ್ರಭುತ್ವದ ಕರ್ತವ್ಯ ಎಂಬುದು ಸ್ಪಷ್ಟವಾಗಿದೆ. ಬಹುತೇಕ ಭಾರತೀಯ ಮಾಲೀಕರು ಆಧುನಿಕ ಕೈಗಾರಿಕೆಗಳನ್ನು ಸ್ಥಾಪಿಸಿದ್ದರೂ ಕಾರ್ಮಿಕರ ವಿರುದ್ಧದ ತಮ್ಮ ಊಳಿಗಮಾನ್ಯ ಮನಃಸ್ಥಿತಿಯನ್ನು ತ್ಯಜಿಸಿಲ್ಲದಿರುವುದು ಇಂದಿನ ವಿರೋಧಾಭಾಸವಾಗಿದೆ. ಆದ್ದರಿಂದಲೇ ಅನೇಕ ವಿಷಯಗಳನ್ನಾಧರಿಸಿ ಕಾರ್ಮಿಕ ಕಾಯಿದೆಗಳನ್ನು ರಚಿಸುವುದು ಅನಿವಾರ್ಯವಾಯಿತು. ಈ ಕಾರ್ಮಿಕ ಕಾಯಿದೆಗಳ ಉದ್ದೇಶ ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡುವುದಕ್ಕಾಗಿ ಮಾತ್ರವಲ್ಲದೆ ಮಾಲೀಕರು ಅವುಗಳನ್ನು ಅನುಸರಿಸುವುದರ ಬಗ್ಗೆ ಖಾತರಿಗೊಳಿಸುವುದು ಸಹ ಆಗಿತ್ತು. ಭಾರತದಲ್ಲಿರುವ ಕಾರ್ಮಿಕ ಕಾಯಿದೆಗಳ ಅಗಾಧ ಪ್ರಮಾಣವು ಮಾಲೀಕರಲ್ಲಿದ್ದ ಏಕಪಕ್ಷೀಯ ಮತ್ತು ಸರ್ವಾಧಿಕಾರಿ ಧೋರಣೆಯ ಪ್ರತಿಬಿಂಬವಷ್ಟೆ ಎಂದು ಯಾವುದೇ ಮುಲಾಜಿಲ್ಲದೆ ಹೇಳಬಹುದು. ರಾಮೊನ್ ಮ್ಯಾಗ್ಸೆಸ್ಸೆ ಹೇಳಿರುವಂತೆ, "ಬದುಕಿನಲ್ಲಿ ಕಡಿಮೆ ಹೊಂದಿರುವವರು ಕಾನೂನಿನಲ್ಲಿ ಹೆಚ್ಚು ಪಡೆಯಬೇಕು." ಚಾರಿತ್ರಿಕವಾಗಿ ನೋಡಿದರೆ ಚಾಲ್ತಿಯಲ್ಲಿರುವ ಉದ್ಯೋಗಗಳ ಸ್ವಭಾವ, ಮಾಲೀಕರ ಮನಃಸ್ಥಿತಿ, ಸಂವಿಧಾನದ ತತ್ವ, ನ್ಯಾಯಾಲಯಗಳ ಮಧ್ಯಸ್ಥಿಕೆ, ಸರ್ಕಾರಗಳ ಒಲವು ಮತ್ತು ಕಾರ್ಮಿಕ ಸಂಘಟನೆಗಳ ಶಕ್ತಿ – ಇಂತಹ ಹಲವಾರು ಅಂಶಗಳನ್ನು ಒಟ್ಟುಗೂಡಿಸಿದ ಉತ್ಪನ್ನವೇ ಕಾರ್ಮಿಕ ಕಾಯಿದೆಗಳು.

**ತಂತ್ರಜ್ಞಾನದ ಲಾಭಗಳು**

ಈ ದೃಷ್ಟಿಕೋನವನ್ನು ಒಪ್ಪುವುದಾದರೆ, ಮಾಲೀಕರು ತಮ್ಮ ಅಗತ್ಯಗಳಿಗೆ ತಕ್ಕಂತೆ ಕಾರ್ಮಿಕ ಕಾನೂನುಗಳನ್ನು ಬದಲಿಸಲು ಬಯಸಬೇಕೆಂದಾಗ, ಮೇಲೆ ಹೇಳಿದ ಅಂಶಗಳು ಬದಲಾಗಿವೆಯೇ ಎಂಬ ಪ್ರಶ್ನೆಗಳು ಎದುರಾಗುತ್ತವೆ. ಈ ಎಲ್ಲ ವಿಷಯಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಇದಕ್ಕೆ ತದ್ವಿರುದ್ಧವಾದ ಸಂಗತಿಗಳು ಬಯಲಾಗುತ್ತವೆ. ಉದಾಹರಣೆಗೆ, ಉದ್ಯೋಗದ ಸ್ವಭಾವಕ್ಕೆ ಸಂಬಂಧಿಸಿದಂತಹ ಅಂಶವನ್ನೇ ತೆಗೆದುಕೊಳ್ಳೋಣ. ಯಾವ ಸಂಶಯವೂ ಇಲ್ಲದೆ ತಂತ್ರಜ್ಞಾನದ ಬಳಕೆಯಿಂದ ಉತ್ಪಾದಕತೆ ಅಗಾಧವಾಗಿ ಹೆಚ್ಚಿದೆ ಎಂದು ಒಪ್ಪಬಹುದು. ಆದಾಗ್ಯೂ ಅದರ ಲಾಭವನ್ನು ಮಾಲೀಕರು ಮಾತ್ರ ಪಡೆದುಕೊಂಡಿದ್ದಾರೆಯೇ ಹೊರತು ಕಡಿತಗೊಂಡ ಕೆಲಸದ ಅವಧಿ, ವೇತನದಲ್ಲಿ ಹೆಚ್ಚಳ ಮತ್ತು ಸಮಾಜ ಕಲ್ಯಾಣ ಸೌಲಭ್ಯಗಳ ರೂಪದಲ್ಲಿ ಕಾರ್ಮಿಕರಿಗೆ ಅದು ತಲುಪುವುದು ವಿರಳ. ಇನ್ನೊಂದೆಡೆ, ಬಹಳಷ್ಟು ಕೈಗಾರಿಕೆಗಳಲ್ಲಿ ಕಾಣಸಿಗುವ ಸಾಮಾನ್ಯ ದೃಶ್ಯವೆಂದರೆ ಕೆಲಸದ ಅವಧಿಯಲ್ಲಿ ಉಂಟಾಗಿರುವ ಹೆಚ್ಚಳ. ಬಹುತೇಕ ಭದ್ರತಾ ಸಿಬ್ಬಂದಿ ದಿನವೊಂದಕ್ಕೆ ಸತತವಾಗಿ ೧೨ ಗಂಟೆಗಳ ಕಾಲ ದುಡಿಯುತ್ತಾರೆ. ಈ ಪ್ರವೃತ್ತಿಗೆ ಅಸಂಖ್ಯಾತ ಉದಾಹರಣೆಗಳಿವೆ. ಕೆಲಸದ ಪರಿಸ್ಥಿತಿಯಲ್ಲಿ ಮಾತ್ರವಲ್ಲ, ಉದ್ಯೋಗದ ಮೂಲ ಸ್ವಭಾವದಲ್ಲೇ ಭಾರೀ ಬದಲಾವಣೆಯಾಗಿದೆ. ಈಗಾಗಲೇ ಶಾಶ್ವತ ಕೆಲಸಗಾರರನ್ನು ಕಡಿತಗೊಳಿಸಿ ಇಲ್ಲವೇ ನಿರ್ಮೂಲನೆ ಮಾಡಿ ಗುತ್ತಿಗೆ ಮತ್ತು ಅನೌಪಚಾರಿಕ ಕಾರ್ಮಿಕರನ್ನು ಉತ್ಪಾದನೆ ಮತ್ತಿತರ ಸಂಬಂಧಪಟ್ಟ ಕೆಲಸಗಳಿಗೆ ಮುಖ್ಯ ಶ್ರಮಶಕ್ತಿಯಾಗಿ ಬಳಸಿಕೊಳ್ಳಲಾಗುತ್ತಿದೆ.



ಹೊಸ ೫೦೦–೨೦೦೦ ರೂ. ನೋಟುಗಳು ಚಲಾವಣೆಗೆ ಬಂದು ಒಂದು ತಿಂಗಳು ಮೇಲಾದರೂ ಬ್ಯಾಂಕ್ / ಎ.ಟಿ.ಎಂ. ಮುಂದೆ ಜನರ ಕ್ಯೂ ಕಡಿಮೆ ಆಗಿಲ್ಲಾ: – ಸುದ್ದಿ

'ಕಡಿತಗೊಳಿಸುವುದರ' ಅಥವಾ 'ಗಾತ್ರ ಸರಿಗೊಳಿಸುವುದರ' ಸೋಗಿನಲ್ಲಿ ಸಾರ್ವಜನಿಕ ಮತ್ತು ಖಾಸಗಿ ಉದ್ದಿಮೆಗಳು ಲಕ್ಷಾಂತರ ಶಾಶ್ವತ ಕೆಲಸಗಾರರನ್ನು ಸೇವೆಯಿಂದ ತೆಗೆದಿವೆ; ಆದರೆ ಅವರ ಜಾಗದಲ್ಲಿ ಗುತ್ತಿಗೆ ಕಾರ್ಮಿಕರು, ಟ್ರೇನಿಗಳು, ಅಪ್ರೆಂಟೀಸ್‌ಗಳು, ನಿಗದಿತ ಅವಧಿ ಉದ್ಯೋಗಿಗಳು ಇತ್ಯಾದಿಗಳು ಕಡಿಮೆ ವೇತನದಲ್ಲಿ ಕಾರ್ಯ ನಿರ್ವಹಿಸುವ ಉದ್ದೇಶದಿಂದ ಶಾಶ್ವತ ಉದ್ಯೋಗಗಳನ್ನು ಉಳಿಸಿಕೊಳ್ಳಲಾಗಿದೆ. ೨೦೦೦ದ ಇಸವಿಯಲ್ಲಿ ಬೆಂಗಳೂರಿನ ಎಇಜಿ–ಎನ್‌ಜಿಇಎಫ್ ಕಂಪನಿಯನ್ನು ಜನರಲ್ ಎಲೆಕ್ಟ್ರಿಕ್ ಕಂಪನಿ ವಶಕ್ಕೆ ಪಡೆದಾಗ, ೬೦೦ ಮಂದಿ ಶಾಶ್ವತ ಕೆಲಸಗಾರರು ಅದರ ದಾಖಲಾತಿಯಲ್ಲಿದ್ದರು. ಸುಮಾರು ೧೮ ತಿಂಗಳುಗಳಲ್ಲಿ ಸ್ವಯಂಪ್ರೇರಿತ ಬೇರ್ಪಡಿಕೆ ಹಾದಿಯ ಮೂಲಕ ಇಡೀ ಶಾಶ್ವತ ಕಾರ್ಮಿಕ ಶಕ್ತಿಯನ್ನು ತೊಳೆದುಹಾಕಲಾಯಿತು. ಹಾಗಿದ್ದರೂ ಗುತ್ತಿಗೆ ಕಾರ್ಮಿಕರೊಂದಿಗೆ ಮತ್ತು ಹೊರಗುತ್ತಿಗೆ ವ್ಯವಸ್ಥೆಯ ಸಹಾಯದಿಂದ ಉತ್ಪಾದನೆ ಮತ್ತೆ ಗರಿಗೆದರಿತು. ಆ ಕಂಪನಿಗೆ ಕೈಗಾರಿಕಾ ವಿವಾದಗಳ ಕಾಯಿದೆಯ ಅಧ್ಯಾಯ ೫–ಬಿ ಅಡಚಣೆಯಾಗಲೇ ಇಲ್ಲ. ಬೆಂಗಳೂರಿನ ನಾಗನಾಥಪುರದ ತನ್ನ ಘಟಕದಲ್ಲಿ ಜರ್ಮನಿಯ ಬಾಷ್ ಕಂಪನಿ ಅಲ್ಲಿನ ಮಾನ್ಯತೆ ಪಡೆದ ಕಾರ್ಮಿಕ ಸಂಘಟನೆಯೊಂದಿಗೆ "ಕಾರ್ಮಿಕರ ಫ್ಲೆಕ್ಸಿಬಲ್ ಉದ್ಯೋಗ" ಎಂಬ ಒಪ್ಪಂದಕ್ಕೆ ಸಹಿ ಹಾಕಿ ಕಾರ್ಮಿಕರನ್ನು ಕೆಲಸದಿಂದ ತೆಗೆಯುವ ಅಧಿಕಾರ ಪಡೆದುಕೊಂಡಿತು. ಬೆಂಗಳೂರಿನ ಆಡುಗೋಡಿಯ ತನ್ನ ಘಟಕದಲ್ಲಿ ಬಾಷ್ ಕಂಪನಿಯು ಕಾಲ ಸರಿದಂತೆ ಕಾರ್ಮಿಕರ ಗುತ್ತಿಗೆ ಅವಧಿ ಅಂತ್ಯಗೊಂಡಿತೆಂಬ ಕಾರಣ ನೀಡಿ ೫ರಿಂದ ೬ ವರ್ಷಗಳ ಸೇವೆ ಸಲ್ಲಿಸಿರುವ ೨೭೦ ಕಾರ್ಮಿಕರನ್ನು ಕೆಲಸದಿಂದ ವಜಾಮಾಡಿತು. ಬಾಷ್ ಆಡಳಿತ ಮಂಡಳಿಯು ೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆಯ ಅಧ್ಯಾಯ ೫–ಬಿಯ ಆಶ್ರಯ ಪಡೆಯುವ ಕಾನೂನು ಬಾಧ್ಯತೆ ಇಲ್ಲವೆಂದು ವಾದಿಸುತ್ತದೆ. ಆಡಳಿತ ಮಂಡಳಿಗಳು "ಟ್ರೇನಿ", "ಅಪ್ರೆಂಟೀಸ್" ಎಂಬ ಮುಖವಾಡ ಧರಿಸಿ ಅಲ್ಪ ವೇತನ ನೀಡಿ, ಅದನ್ನು ಸ್ಟೈಪೆಂಡ್ ಎಂದು ಕರೆದು ಉತ್ಪಾದನಾ ಕೆಲಸಗಳಿಗೆ ಅವರನ್ನು ನೇರವಾಗಿ ಬಳಸಿಕೊಳ್ಳುತ್ತಿವೆ. ಇದರಿಂದಾಗಿ ಕ್ರಮೇಣ ಟ್ರೇನಿಗಳು, ಅಪ್ರೆಂಟೀಸ್‌ಗಳು, ಕ್ಯಾಷ್ಯುಯಲ್‌ಗಳು, ನಿಗದಿತ ಅವಧಿ ಉದ್ಯೋಗಿಗಳು, ಗುತ್ತಿಗೆ ಕಾರ್ಮಿಕರು ಶ್ರಮಶಕ್ತಿಯ ಬಹುಮುಖ್ಯ ಅಂಶವಾಗುತ್ತಿದ್ದಾರೆ. ೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆಯ ಅಧ್ಯಾಯ ೫–ಬಿಯ ನಿಬಂಧನೆಗಳನ್ನು ಮೀರಿಹೋಗಲು ಧನಿಕ ಕಂಪನಿಗಳು ತಮ್ಮದೇ ಆದ ಹಲವು ದಾರಿಗಳನ್ನು ಕಂಡುಕೊಂಡಿವೆ. ಹೀಗೆ ಕಾರ್ಮಿಕ ಕಾಯಿದೆಗಳ ಪರಿಧಿಯಿಂದ ಅಸಂಖ್ಯಾತ ಕೆಲಸಗಾರರನ್ನು ಹೊರಗಟ್ಟುತ್ತ ಉದ್ಯೋಗಗಳ ಸ್ವಭಾವದಲ್ಲಿ ತೀವ್ರತರ ಬದಲಾವಣೆಯಾಗಿರುವುದನ್ನು ಕಾಣಬಹುದಾಗಿದೆ.

**ಬದಲಾಗುತ್ತಿರುವ ಉದ್ಯೋಗದ ಸ್ವಭಾವ**

ಭಾರತದಲ್ಲಿ ಬದಲಾಗುತ್ತಿರುವ ಉದ್ಯೋಗದ ಸ್ವಭಾವದ ಹಿನ್ನೆಲೆಯಲ್ಲಿ ನಾವು ಕಾರ್ಮಿಕ ಕಾಯಿದೆಗಳಿಗೆ ಪ್ರಸ್ತಾಪಿತ ತಿದ್ದುಪಡಿಗಳನ್ನೂ, ಕಾರ್ಮಿಕರ ಮೇಲೆ ಅವುಗಳು ಬೀರುವ ಪ್ರಭಾವವನ್ನೂ ಆಳವಾಗಿ ಪರಿಶೀಲಿಸಬೇಕಾದ ಅಗತ್ಯವಿದೆ. ಪ್ರಚಲಿತ ೪೪ ಕಾರ್ಮಿಕ ಕಾಯಿದೆಗಳನ್ನು (೧) ಕೈಗಾರಿಕಾ ಸಂಬಂಧಗಳ ಕಾರ್ಮಿಕ ಸಂಹಿತೆ, (೨) ವೇತನ ಸಂಹಿತೆ, (೩) ಸುರಕ್ಷತಾ ಸಂಹಿತೆ, (೪) ಕಲ್ಯಾಣ ಸಂಹಿತೆ ಎಂದು ೪ ಸಂಹಿತೆಗಳನ್ನಾಗಿ ವಿಂಗಡಿಸುವ ಅಂಶವನ್ನು ಕೇಂದ್ರ ಸರ್ಕಾರ ಪ್ರಸ್ತಾಪಿಸಿದೆ. ಕೈಗಾರಿಕಾ ಸಂಬಂಧಗಳ ಸಂಹಿತೆಯು ಈ ಮೊದಲ ೧೯೨೬ರ ಕಾರ್ಮಿಕ ಸಂಘಗಳ ಕಾಯಿದೆ, ೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆ ಮತ್ತು

೧೯೪೬ರ ಕೈಗಾರಿಕಾ ಉದ್ಯೋಗ (ಸ್ಥಾಯಿ ಆದೇಶ) ಕಾಯಿದೆಗಳನ್ನು ಒಳಗೊಂಡಿದೆ. ಸಂಘಟಿತ ವಲಯದ ಕಾರ್ಮಿಕ ಸಂಘಟನೆಗಳಲ್ಲಿ ಬಾಹ್ಯ ನಾಯಕತ್ವವನ್ನು ದೂರ ಸರಿಸಿ ಅಸಂಘಟಿತ ಕ್ಷೇತ್ರದಲ್ಲಿ ಹೊರಗಿನಿಂದ ಇಬ್ಬರು ನಾಯಕರಿಗೆ ಮಾತ್ರ ಸೀಮಿತಗೊಳಿಸಿ ಸರ್ಕಾರ ಕೈಗಾರಿಕಾ ಸಂಬಂಧಗಳ ಸಂಹಿತೆಗೆ ಪ್ರಸ್ತಾವನೆ ಸಲ್ಲಿಸಿದೆ. ಈ ಪ್ರಸ್ತಾಪಿತ ತಿದ್ದುಪಡಿಯು ಕಾರ್ಮಿಕರ ಹಿತಾಸಕ್ತಿಯ ವಿರುದ್ಧವಾಗಿದ್ದು ಸಾಮೂಹಿಕ ಚೌಕಾಶಿ ಪ್ರಕ್ರಿಯೆಯಲ್ಲಿ ಸಂಘಟಿತ ಕ್ಷೇತ್ರದ ಕಾರ್ಮಿಕರ ಮೇಲೆ ಪ್ರತಿಕೂಲ ಪರಿಣಾಮ ಬೀರಲಿದೆ.

**ಅಗತ್ಯವಿದ್ದಾಗ ನೇಮಿಸಿಕೊಂಡು ಬೇಡವೆನಿಸಿದಾಗ ಕಿತ್ತೊಗೆಯುವ ಸ್ವಾತಂತ್ರ್ಯ**

ಮಾಲೀಕರ ಸಂಘಟನೆಗಳು ಅಗತ್ಯವಾಗಿ ಒತ್ತಾಯಿಸುತ್ತಿರುವ ತಿದ್ದುಪಡಿ ಎಂದರೆ ೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆಯ ಅಧ್ಯಾಯ ೫-ಬಿ ಗೆ ಸಂಬಂಧಿಸಿದ್ದು. ೩೦೦ ಅಥವಾ ಅದಕ್ಕಿಂತಲೂ ಹೆಚ್ಚು ಕೆಲಸಗಾರರಿಗೆ ಉದ್ಯೋಗ ನೀಡಿರುವ ಕೈಗಾರಿಕಾ ಉದ್ಯಮಗಳಲ್ಲಿ ಲೇ-ಆಫ್, ರಿಟ್ರೆಂಚ್‌ಮೆಂಟ್ (ಕೆಲಸದಿಂದ ವಜಾಗೊಳಿಸುವ ಕುರಿತು) ನೀತಿಗಳನ್ನು ಅನುಸರಿಸಲು ಮತ್ತು ಉದ್ಯಮಗಳನ್ನು ಮುಚ್ಚಲು ಮಾಲೀಕರ ಮೇಲೆ ಕಟ್ಟುನಿಟ್ಟಾದ ನಿರ್ಬಂಧ ಹೇರುವ ಉದ್ದೇಶದಿಂದ ೧೯೭೬ನೇ ಇಸವಿಯಲ್ಲೇ ೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆಗೆ ೫-ಬಿ ಅಧ್ಯಾಯವನ್ನು ಸೇರಿಸಲಾಯಿತು. ತದನಂತರ ಆ ತಿದ್ದುಪಡಿಯೊಂದಿಗೆ ೧೦೦ ಕೆಲಸಗಾರರಿಗೆ ಉದ್ಯೋಗ ನೀಡುವ ಕೈಗಾರಿಕೋದ್ಯಮಗಳನ್ನೂ ಈ ಕಾಯಿದೆಯ ೫-ಬಿ ಅಧ್ಯಾಯದಡಿ ತರಲಾಯಿತು. ಹಾಲಿ ಇರುವ ನಿಯಮಗಳಿಗನುಸಾರ ೧೦೦ ಮತ್ತು ಹೆಚ್ಚು ಕೆಲಸಗಾರರಿರುವ ಕೈಗಾರಿಕೋದ್ಯಮಗಳಲ್ಲಿ ಲೇ-ಆಫ್ ಮತ್ತು ರಿಟ್ರೆಂಚ್‌ಮೆಂಟ್‌ಗಳನ್ನು ಜಾರಿಗೊಳಿಸಲು ಹಾಗೂ ಉದ್ಯಮವನ್ನು ಮುಚ್ಚಲು ಆಯಾ ಸರ್ಕಾರಗಳಿಂದ ಅನುಮತಿ ಪಡೆಯಬೇಕು. ನವಉದಾರೀಕರಣ ಆರ್ಥಿಕ ನೀತಿಗಳಿಗೆ ಹೊಂದುವಂತೆ ಈ ನಿಬಂಧನೆ ಇಲ್ಲವೆಂಬುದು, ಆದ್ದರಿಂದ ಶಾಸನದಿಂದ ಅದನ್ನು ತೊಡೆದುಹಾಕಬೇಕೆಂಬುದು ಮಾಲೀಕರ ವಾದ. ೩೦೦ ಮತ್ತು ಹೆಚ್ಚಿನ ಕೆಲಸಗಾರರನ್ನು ಹೊಂದಿರುವ ಕೈಗಾರಿಕೋದ್ಯಮಗಳು ಮಾತ್ರ ಈ ಕಾಯಿದೆಯ ೫-ಬಿ ಅಧ್ಯಾಯದ ವ್ಯಾಪ್ತಿಗೆ ಬರಬೇಕೆಂದು ೨೦೦೦ದ ಇಸವಿಯಲ್ಲಿ ಎನ್‌ಡಿಎ ಸರ್ಕಾರ ರಚಿಸಿದ್ದ ಕಾರ್ಮಿಕರ ಕುರಿತ ಎರಡನೆಯ ರಾಷ್ಟ್ರೀಯ ಆಯೋಗವು ತನ್ನ ಶಿಫಾರಸ್ಸುಗಳಲ್ಲಿ ಪ್ರಸ್ತಾಪಿಸಿದೆ. ೨೯ ಅಥವಾ ಅದಕ್ಕಿಂತ ಕಡಿಮೆ ಕೆಲಸಗಾರರನ್ನು ಹೊಂದಿರುವಂತಹ ಕೈಗಾರಿಕಾ ಉದ್ಯಮಗಳಿಗೆ ಅನಿಯಂತ್ರಿತ ಸ್ವಾತಂತ್ರ್ಯವನ್ನು ನೀಡುವುದು ಈ ಕ್ರಮದ ಉದ್ದೇಶ. ಈ ಪ್ರಸ್ತಾಪಿತ ತಿದ್ದುಪಡಿಯಿಂದಾಗಿ ೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆಯ ಅಧ್ಯಾಯ ೫-ಬಿ ಅಡಿ ಕಾನೂನಾತ್ಮಕ ಬಾಧ್ಯತೆಯಿಂದ ಅನೇಕ ಕೈಗಾರಿಕೋದ್ಯಮಗಳು ಮುಕ್ತಗೊಳ್ಳುವುದರಿಂದ ಕಾರ್ಮಿಕರು ಮತ್ತು ಕಾರ್ಮಿಕ ಸಂಘಗಳು ಕಾನೂನಿನ ಒಂದು ಬಹುಮುಖ್ಯ ರಕ್ಷಣೆಯಿಂದ ಹೊರಗಿಡಲ್ಪಡುತ್ತಾರೆ. ತಾಂತ್ರಿಕ ಸಲಹೆಗಳನ್ನು ಬಯಸಿ ಕೇಂದ್ರ ಸರ್ಕಾರವು ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಗೆ ಕೈಗಾರಿಕಾ ಸಂಬಂಧಗಳ ಸಂಹಿತೆಯ ಪ್ರಸ್ತಾವನೆಯನ್ನು ಕಳುಹಿಸಿತ್ತು. ಇದಕ್ಕೆ ಉತ್ತರವಾಗಿ ಕೈಗಾರಿಕಾ ಸಂಬಂಧಗಳ ಸಂಹಿತೆಗೆ ೫೭ ಪುಟಗಳಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ ಪರಿಷ್ಕರಣೆ ಸೂಚಿಸಿದೆ. ರಾಜಕೀಯ ಸಂಬಂಧಗಳನ್ನು ಹೊರಗಿಟ್ಟು ಭಾರತದ ಕಾರ್ಮಿಕ ಸಂಘಟನೆಗಳು ಸೆಪ್ಟೆಂಬರ್ ೨, ೨೦೧೫ ಮತ್ತು ಸೆಪ್ಟೆಂಬರ್ ೨, ೨೦೧೬ರಂದು ಸಾರ್ವತ್ರಿಕ ಮುಷ್ಕರ ಹೂಡುವುದರೊಂದಿಗೆ ಸರ್ಕಾರ ಪ್ರಸ್ತಾಪಿಸಿರುವ ತಿದ್ದುಪಡಿಗಳ ವಿರುದ್ಧ ಬೃಹತ್ ಮಟ್ಟದಲ್ಲಿ ಪ್ರತಿಭಟಿಸಿವೆ. ಕಾರ್ಮಿಕರ ವಿಷಯವು ಭಾರತದ ಸಂವಿಧಾನದಲ್ಲಿ ಕನ್ಕರೆಂಟ್ ಪಟ್ಟಿಯಲ್ಲಿರುವುದರಿಂದ ಬಂಡವಾಳ ಹೂಡಿಕೆಯನ್ನು ತಮ್ಮ ರಾಜ್ಯಗಳೆಡೆಗೆ ಸೆಳೆಯುವ ಯತ್ನದಲ್ಲಿ ರಾಜಾಸ್ತಾನ, ಹರಿಯಾಣ, ಗುಜರಾತ್‌ನಂತಹ ರಾಜ್ಯಗಳು ಕಾರ್ಮಿಕ ಕಾಯಿದೆಗಳಿಗೆ ತಿದ್ದುಪಡಿ ತಂದಿವೆ. ಕಾರ್ಮಿಕರ ಹಿತಾಸಕ್ತಿಗಳನ್ನು ನಿರ್ಲಕ್ಷಿಸಲು ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ದೃಢಸಂಕಲ್ಪ ಮಾಡಿರುವಂತಿದೆ. ಇದರ ಪರಿಣಾಮ, ಹರಿಯಾಣದ ಮಾನೇಸರ್‌ನಲ್ಲಿ ಮಾರುತಿ ಸುಝುಕಿ ಘಟಕ, ರಾಜಾಸ್ತಾನದ ತಪುಕಾರದಲ್ಲಿ ಹೋಂಡಾ ಮೋಟಾರ್ ಸೈಕಲ್ ಘಟಕ ಮತ್ತಿತರ ಸ್ಥಳಗಳಲ್ಲಿ ಗಂಭೀರ ಸ್ವರೂಪದ ಕಾರ್ಮಿಕ ಸಂಘರ್ಷಗಳು ಉಂಟಾಗಿವೆ.

**ಬೆವರ ಮಳಿಗೆಗಳಾದ ಸಣ್ಣ ಕೈಗಾರಿಕೆಗಳು**

'ಸಣ್ಣ ಕಾರ್ಖಾನೆಗಳ (ಉದ್ಯೋಗ ಮತ್ತು ಸೇವಾ ಸೌಲಭ್ಯಗಳ ನಿಯಂತ್ರಣ) ಮಸೂದೆ, ೨೦೧೪' ಎಂಬ ಮಸೂದೆಯನ್ನು ಕೇಂದ್ರ ಸರ್ಕಾರವು ಮುಂದಿಟ್ಟು, ಇದರ ಮೂಲಕ ಸಣ್ಣ ಕಾರ್ಖಾನೆಗಳಲ್ಲಿ ಉದ್ಯೋಗ ಮತ್ತು ಇತರೆ ಸೇವಾ ಸೌಲಭ್ಯಗಳನ್ನು ನಿಯಂತ್ರಿಸಲು ಪ್ರಸ್ತಾಪಿಸಿದೆ. ೪೦ ಮಂದಿಗಿಂತ ಕಡಿಮೆ ಕಾರ್ಮಿಕರನ್ನು ಬಳಸಿಕೊಂಡು ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗುವ ಯಾವುದೇ ಸಂಸ್ಥೆಯೂ "ಸಣ್ಣ ಕಾರ್ಖಾನೆ" ಎಂದು ವ್ಯಾಖ್ಯಾನಿಸಲ್ಪಡುತ್ತದೆ. "ಕಾರ್ಮಿಕ" ಎಂದರೆ "ಈ ಕಾಯಿದೆ ಅನ್ವಯವಾಗುವ ಯಾವುದೇ ಸಣ್ಣ ಕಾರ್ಖಾನೆಯ ಕೆಲಸಕ್ಕೆ ಸಂಬಂಧಿಸಿದಂತೆ, ಭಾಗಶಃ ಅಥವಾ ಪೂರ್ಣವಾಗಿ, ನೇರವಾಗಿ ಇಲ್ಲವೇ ಯಾವುದೇ ಮಧ್ಯವರ್ತಿಯ ಅಥವಾ ಗುತ್ತಿಗೆದಾರನ ಮುಖಾಂತರ, ವೇತನಕ್ಕಾಗಿ ಅಥವಾ ಪುರಸ್ಕಾರಕ್ಕಾಗಿ ಉದ್ಯೋಗದಲ್ಲಿರುವ ಯಾವುದೇ ವ್ಯಕ್ತಿ" ಎಂದು ಪ್ರಸ್ತಾಪಿತ ಹೊಸ ಮಸೂದೆ ಸೂಚಿಸುತ್ತದೆ. ಗುತ್ತಿಗೆ ಕೆಲಸ (ನಿಯಂತ್ರಣ ಮತ್ತು ನಿರ್ಮೂಲನ) ಕಾಯಿದೆಯಲ್ಲಿ ಸಂಬಂಧಿತ ನಿಬಂಧನೆಗಳಿಗೆ ಪ್ರಸ್ತಾಪಿಸಿರುವ ತಿದ್ದುಪಡಿಯಲ್ಲಿ, ೪೦ ಮತ್ತು ಅದಕ್ಕಿಂತ ಹೆಚ್ಚು ಕಾರ್ಮಿಕರನ್ನು ಗುತ್ತಿಗೆದಾರ ನೇಮಿಸಿಕೊಂಡಾಗ (ಹಾಲಿ ೨೦ ಇರುತ್ತದೆ) ಮಾತ್ರ ಅವನಿಗೆ ಪರವಾನಗಿ ಅಗತ್ಯ ಎಂಬ ಸೂಚನೆ ಇರುವುದನ್ನು ಗಮನಿಸುವುದು ಸೂಕ್ತ. ಗುತ್ತಿಗೆ ಕೆಲಸ (ನಿಯಂತ್ರಣ ಮತ್ತು ನಿರ್ಮೂಲನ) ಕಾಯಿದೆಗೆ ಪ್ರಸ್ತಾಪಿತ ತಿದ್ದುಪಡಿ ಮತ್ತು ಪ್ರಸ್ತಾಪಿತ ಮಸೂದೆ, ಇವೆರಡನ್ನೂ ಒಟ್ಟಿಗೆ ಓದಿದಾಗ, ಸಣ್ಣ ಕಾರ್ಖಾನೆಗಳ

ಮಾಲೀಕರಿಗೆ ಎಲ್ಲ ಕಾರ್ಮಿಕರನ್ನೂ ಪರವಾನಗಿರಹಿತ ಕಾರ್ಮಿಕ ಗುತ್ತಿಗೆದಾರನ ಮೂಲಕ ನೇಮಕ ಮಾಡಿಕೊಳ್ಳಲು ಕಾನೂನಾತ್ಮಕ ಅಡಚಣೆ ಏನೂ ಇರುವುದಿಲ್ಲ ಎಂಬುದು ಸ್ಪಷ್ಟ. ಸಣ್ಣ ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು ಅನಿಶ್ಚಿತತೆಯಲ್ಲಿ ಬದುಕನ್ನು ಎದುರಿಸುವಂತಾಗುತ್ತದೆ. ಇದಕ್ಕಿಂತಲೂ ಹೆಚ್ಚಿನ ಪ್ರತಿಗಾಮಿ ನಡೆಯೆಂದರೆ ೧೯೪೭ರ ಕೈಗಾರಿಕಾ ವಿವಾದಗಳ ಕಾಯಿದೆ, ಕನಿಷ್ಠ ವೇತನ ಕಾಯಿದೆ, ಕಾರ್ಖಾನೆಗಳ ಕಾಯಿದೆ, ಮಾತೃತ್ವ ಸೌಲಭ್ಯಗಳ ಕಾಯಿದೆ, ಸಮಾನ ವೇತನ ಕಾಯಿದೆ, ಬೋನಸ್ ಪಾವತಿ ಕಾಯಿದೆ, ಬಾಲ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯಿದೆ, ಇತ್ಯಾದಿಗಳು ಯಾವ ಸಣ್ಣ ಕಾರ್ಖಾನೆಗೂ ಅನ್ವಯಿಸುವುದಿಲ್ಲ. ಕೈಗಾರಿಕೆಗಳ ವಾರ್ಷಿಕ ಸಮೀಕ್ಷೆಯ ಪ್ರಕಾರ ಭಾರತದಲ್ಲಿ ೩೦ ಕೆಲಸಗಾರರು ದುಡಿಯುತ್ತಿರುವ ಒಂದು ಲಕ್ಷಕ್ಕೂ ಅಧಿಕ ಕಾರ್ಖಾನೆಗಳಿವೆ. ಕಾರ್ಮಿಕ ಸಂಘವನ್ನು ಕಟ್ಟಿಕೊಂಡು ತಮ್ಮ ಉದ್ಯೋಗವನ್ನು ಉಳಿಸಿಕೊಳ್ಳಲು ಸಣ್ಣ ಕಾರ್ಖಾನೆಗಳ ಈ ಕಾರ್ಮಿಕರು ಆಶಿಸುವುದು ಕಷ್ಟಸಾಧ್ಯವಾದ ಮಾತು. ಸಣ್ಣ ಕಾರ್ಖಾನೆಗಳ ಮಸೂದೆಯು ಶಾಸನವಾದಾಗ ಬೆವರ ಮಳಿಗೆಗಳನ್ನೂ ಜೀತದಾಳುಗಳನ್ನು ಸೃಷ್ಟಿಸುವುದು ಮಾತ್ರ ಖಂಡಿತ.

**ತಪಾಸಣಾರಹಿತ ಉದ್ಯಮಗಳು**

ಕಾರ್ಖಾನೆಗಳ ಕಾಯಿದೆ ಮತ್ತು ಕಾರ್ಮಿಕ ಕಾಯಿದೆಗಳಡಿ ವಿವಿಧ ರೀತಿಯ ಆದಾಯ ಪತ್ರ ಸಲ್ಲಿಕೆಗೆ ಸಂಬಂಧಿಸಿದಂತೆ ಮಾಲೀಕರ ಇನ್ನೊಂದು ಬೇಡಿಕೆ ಇದೆ. ಆದಾಯ ಸಲ್ಲಿಕೆ ಮತ್ತು ಕಾರ್ಖಾನೆಗಳ ತಪಾಸಣೆಯನ್ನು ದೌರ್ಜನ್ಯವೆಂದು ಪರಿಗಣಿಸಿ, "ತಪಾಸಣಾ ರಾಜ್ಯ" ಎಂದು ಬಣ್ಣಿಸಲಾಯಿತು. ಕೇಂದ್ರದಲ್ಲಿ ಎನ್‌ಡಿಎ ಸರ್ಕಾರ ಅಧಿಕಾರ ವಹಿಸಿಕೊಂಡ ತಕ್ಷಣವೇ ಸಂಸತ್ತಿನಲ್ಲಿ ಎರಡು ತಿದ್ದುಪಡಿ ಮಸೂದೆಗಳನ್ನು ಅಂಗೀಕರಿಸಲಾಯಿತು, ೨೦೧೪ರ ಕಾರ್ಮಿಕ ಕಾನೂನುಗಳು (ಕೆಲವು ಉದ್ಯಮಗಳಿಗೆ ಆದಾಯ ಪತ್ರ ಮತ್ತು ದಾಖಲಾತಿಗಳ ನಿರ್ವಹಣೆಯಿಂದ ವಿನಾಯಿತಿ ನೀಡುವ) ತಿದ್ದುಪಡಿ ಕಾಯಿದೆ ಮತ್ತು ೨೦೧೪ರ ಅಪ್ರೆಂಟೀಸ್ (ತಿದ್ದುಪಡಿ) ಕಾಯಿದೆ. ಇವೆರಡೂ ತಿದ್ದುಪಡಿಗಳನ್ನು ಅಧಿಕೃತ ಗೆಜೆಟ್‌ನಲ್ಲಿ ಡಿಸೆಂಬರ್ ೨೦೧೪ರಲ್ಲಿ ಪ್ರಕಟಗೊಳಿಸಲಾಗಿದ್ದು, ಅವುಗಳನ್ನು ಜಾರಿಯಲ್ಲೂ ತರಲಾಗಿದೆ. ಆದಾಯ ಪತ್ರಗಳನ್ನು ಸಲ್ಲಿಸಿ ನಿರ್ವಹಿಸುವುದಕ್ಕೆ ಸಂಬಂಧಿಸಿದ ತಿದ್ದುಪಡಿಯು ವಾಸ್ತವದಲ್ಲಿ ಸಣ್ಣ ಉದ್ಯಮಗಳಿಗೆ ಆದಾಯಪತ್ರ ಸಲ್ಲಿಕೆಯಿಂದ ವಿನಾಯಿತಿ ನೀಡಿ ಇನ್ನಿತರ ಉದ್ದಿಮೆಗಳಿಗೆ ಪ್ರಕ್ರಿಯೆಯನ್ನು "ಸರಳೀಕರಿಸಲಾಗಿದೆ". ಸಣ್ಣ ಉದ್ಯಮಗಳ ವ್ಯಾಖ್ಯಾನವನ್ನು ಈಗ ತಿದ್ದುಪಡಿ ಮಾಡಿ ಮೊದಲಿದ್ದ ೧೯ ಕಾರ್ಮಿಕರ ಮಿತಿಯನ್ನು ೧೦ರಿಂದ ೪೦ ಕೆಲಸಗಾರರು ದುಡಿಯುವ ಘಟಕಗಳಿಗೆ ವಿಸ್ತರಿಸಲಾಗಿದೆ. ೨೦೦೯ರಲ್ಲಿ ೧,೪೩,೩೮೪ ಕಾರ್ಖಾನೆಗಳಿದ್ದರೆ ಅವುಗಳಲ್ಲಿ ಕೇವಲ ೩೩,೪೯೦ ಕಾರ್ಖಾನೆಗಳು ನಿಗದಿತ ಅಧಿಕಾರಿಗಳಿಗೆ ಆದಾಯಪತ್ರ ಗಳನ್ನು ಸಲ್ಲಿಸುತ್ತಿದ್ದವೆಂಬ ಮಹತ್ವದ ಅಂಶವನ್ನು ವರದಿ ಮಾಡಿರುವ ಕೈಗಾರಿಕೆಗಳ ವಾರ್ಷಿಕ ಸಮೀಕ್ಷೆಯಲ್ಲಿ ಗಮನಿಸಬೇಕು. ಆ ಸಂದರ್ಭದಲ್ಲೇ ಅನೇಕ ಕಾರ್ಖಾನೆಗಳು ಆದಾಯಪತ್ರ ಸಲ್ಲಿಕೆಯ ಕಾನೂನಾತ್ಮಕ ಬಾಧ್ಯತೆಗೆ ಬದ್ಧರಾಗಿರಲಿಲ್ಲ. ಯಾವುದೇ ತಿದ್ದುಪಡಿ ಇಲ್ಲದೆಯೇ ಈ ಕಾರ್ಖಾನೆಗಳು ಆದಾಯ ಪತ್ರ ಸಲ್ಲಿಕೆಗೆ ತಮಗೆ ತಾವೇ ವಿನಾಯಿತಿ ನೀಡಿಕೊಂಡಿದ್ದವು.

**ಟೊಳ್ಳು ಕೂಗು**

ಕಾರ್ಖಾನೆಗಳ ಕಾಯಿದೆಯಡಿ ಕಾರ್ಮಿಕ ಅಧಿಕಾರಿಗಳು ನಡೆಸಿರುವ ಉದ್ಯಮ ತಪಾಸಣೆಗೆ ಸಂಬಂಧಪಟ್ಟಂತೆ ವರದಿಯಾಗಿರುವ ಅಂಕಿಅಂಶಗಳು ಗಮನಾರ್ಹ. ೨೦೦೯ರಲ್ಲಿ ಒಮ್ಮೆ ತಪಾಸಣೆ ನಡೆಸಿರುವ ಕಾರ್ಖಾನೆಗಳ ಸಂಖ್ಯೆ ೧೭,೪೨೭, ಅದೇ ವರ್ಷದಲ್ಲಿ ಎರಡು ಬಾರಿ ತಪಾಸಣೆ ನಡೆಸಿದ ಕಾರ್ಖಾನೆಗಳು ೨೦೦೯, ಮೂರು ಬಾರಿ ನಡೆಸಿದ್ದು, ೨೧೬ ಮತ್ತು ಆ ಸಾಲಿನಲ್ಲೇ ಮೂರಕ್ಕಿಂತ ಹೆಚ್ಚು ಬಾರಿ ತಪಾಸಣೆ ನಡೆಸಿರುವ ಕಾರ್ಖಾನೆಗಳು ಕೇವಲ ೩೧. ಕಾರ್ಖಾನೆಗಳ ತಪಾಸಣಾಧಿಕಾರಿಗಳು ನಡೆಸಿದ ತಪಾಸಣೆಗಳು ಅತ್ಯಲ್ಪವಾಗಿದ್ದು, ಶಾಸನಗಳಲ್ಲಿರುವ ನಿಯಮಗಳ ಉಲ್ಲಂಘನೆಗಾಗಿ ನ್ಯಾಯಾಲಯಗಳಿಂದ ನೀಡಲಾದ ಶಿಕ್ಷೆಯ ಪ್ರಮಾಣ ತೀರಾ ಕಡಿಮೆ ಎಂಬುದನ್ನು ಈ ಸತ್ಯಾಂಶಗಳು ದೃಢಪಡಿಸುತ್ತವೆ. ಆದ್ದರಿಂದ ಮಾಲೀಕರ "ತಪಾಸಣಾ ರಾಜ್ಯ"ದ ಕೂಗು ಅತಿ ಟೊಳ್ಳು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಕೈಗಾರಿಕಾ ಕೆಲಸದ ಸ್ಥಳಗಳಲ್ಲಿ ಕಾರ್ಮಿಕರ ತಪಾಸಣಾ ವ್ಯವಸ್ಥೆಯ ನಿರ್ವಹಣೆಯನ್ನು ಖಾತರಿಗೊಳಿಸಲು, ಕಾರ್ಯನಿರತರಾಗಿರುವ ಕೆಲಸಗಾರರ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ಕಾನೂನಾತ್ಮಕ ನಿಬಂಧನೆಗಳ ಜಾರಿಗೊಳಿಸುವುದನ್ನು ಖಾತರಿಪಡಿಸಲು ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ ಕಾರ್ಮಿಕ ತಪಾಸಣಾ ಒಡಂಬಡಿಕೆ ಸಂಖ್ಯೆ ೮೧ಅನ್ನು ಅಂಗೀಕರಿಸಿತು. ೨೦೦೮ರ ಜೂನ್ ೧೦ರಂದು ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆ "ಸಾಮಾಜಿಕ ನ್ಯಾಯ ಘೋಷಣೆ"ಯನ್ನು ಅಂಗೀಕರಿಸಿತು.



**ಅಪ್ರೆಂಟೀಸ್‌ಗಳು – ನವ ಶ್ರಮಶಕ್ತಿ ?**

ಅಪ್ರೆಂಟೀಸ್ ಕಾಯಿದೆಯ ತಿದ್ದುಪಡಿಗಳನ್ನು ಯುವಜನತೆಗೆ ಹೊಸ ಅವಕಾಶಗಳನ್ನು ವಿಸ್ತರಿಸುವ ಉದ್ದೇಶದಿಂದ ಮಾಡಲಾಗಿದೆ. ಈಗ ಮಾಲೀಕರು ಅಪ್ರೆಂಟೀಸ್‌ಶಿಪ್ ಕರಾರು ಪತ್ರವನ್ನು "ನಿಗದಿಗೊಳಿಸಬಹುದಾದ" ಕಾಲಾವಧಿಗೆಂದು ಬರೆದುಕೊಡಬಹುದು. ಅಪ್ರೆಂಟೀಸ್‌ಶಿಪ್‌ಗೆ ಉದ್ಯೋಗಗಳನ್ನು ಗೊತ್ತುಪಡಿಸುವ ಅಧಿಕಾರವನ್ನು ಕೇಂದ್ರ ಸರ್ಕಾರ ಹೊಂದಿರುತ್ತದೆ. ಇವು ಮತ್ತಿತರ ತಿದ್ದುಪಡಿಗಳಿಂದಾಗಿ "ಅಪ್ರೆಂಟೀಸ್"ಗಳ ಸೋಗಿನಲ್ಲಿ ಈಗಾಗಲೇ ಬಳಕೆಯಾಗುತ್ತಿರುವ ಕಾರ್ಮಿಕರ ಸಂಖ್ಯೆಯಲ್ಲಿ ಏರಿಕೆ ಕಂಡುಬರಲಿದೆ. ಇವರು ಅಲ್ಪ ಪ್ರಮಾಣದ ತರಬೇತಿ ಪಡೆದು ಅಥವಾ ಯಾವ ತರಬೇತಿಯೂ ಇಲ್ಲದೆ ಯಂತ್ರಗಳ ಜೊತೆ ಕೆಲಸ ಮಾಡಿ ಉತ್ಪಾದನೆಗೆ ಕೊಡುಗೆ ನೀಡುತ್ತಾರೆ. ಆದ್ದರಿಂದ "ಅಪ್ರೆಂಟೀಸ್‌ಗಳು" ಕಡಿಮೆ ವೇತನಕ್ಕೆ, ಅನಿಶ್ಚಿತ ಅವಧಿಗೆ, ಉದ್ಯೋಗ ಅಭದ್ರತೆಯಲ್ಲಿ ಮತ್ತು ಕಳಪೆ ಸೇವಾ ಸೌಲಭ್ಯಗಳೊಂದಿಗೆ ದುಡಿಯುವ ದೊಡ್ಡ ಪ್ರಮಾಣದ ಶ್ರಮಶಕ್ತಿಯಾಗಲಿದ್ದಾರೆ.

**ಯಜಮಾನರ ಸೇವೆಯಲ್ಲಿ**

ಕಾರ್ಮಿಕ ಕಾಯಿದೆಗಳಿಗೆ ಸಂಬಂಧಿಸಿದಂತೆ ಸರ್ಕಾರವು ಭಾಗ – ೩ (ಮೂಲಭೂತ ಹಕ್ಕುಗಳು) ಮತ್ತು ಭಾಗ – ೪ (ರಾಜ್ಯ ನೀತಿ ನಿರ್ದೇಶಕ ತತ್ವಗಳು)ರ ಅಡಿ ಸಾಂವಿಧಾನಿಕ ಬಾಧ್ಯತೆಗೆ ಒಳಪಟ್ಟಿದೆ. ಅಲ್ಲದೆ, ಕಾರ್ಮಿಕರ ಹಿತಾಸಕ್ತಿಗಳನ್ನು ಕಾಪಾಡಿ ಬೆಳೆಸಲು ಭಾರತ ಸರ್ಕಾರ ಅನುಮೋದಿಸಿರು ವಂತಹ ಹಲವು ಐಎಲ್‌ಒ ಒಡಂಬಡಿಕೆಗಳಿಗೂ ಬದ್ಧವಾಗಿವೆ. ಈ ಹಿನ್ನೆಲೆಯಲ್ಲಿ ಗಮನಿಸಿದರೆ ಕೇಂದ್ರ ಮತ್ತು ಕೆಲವು ರಾಜ್ಯ ಸರ್ಕಾರಗಳು ಅತ್ಯಂತ ನಿಷ್ಠೆಯಿಂದ ಕೈಗೊಂಡ "ಕಾರ್ಮಿಕ ಕಾಯಿದೆ ಸುಧಾರಣೆಗಳು" ಮಾಲೀಕರ ಹಿತವನ್ನು ಅತ್ಯುತ್ತಮ ರೀತಿಯಲ್ಲಿ ಕಾಪಾಡುತ್ತ ಕಾರ್ಮಿಕರ ಮತ್ತವರ ಸಾಮೂಹಿಕ ಸಂಘಟನೆಗಳ ಹಿತಕ್ಕೆ ಮಾರಕವಾಗುತ್ತಿವೆ.

---


ಮೂಲ : **ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ಎರಡನೇ ಮಹಡಿ, ವಿ. ವಿ. ಪುರಂ
ಬೆಂಗಳೂರು – ೫೬೦ ೦೦೪

ಕನ್ನಡಕ್ಕೆ : **ಎ. ಜ್ಯೋತಿ**
ಎಸ್–೩, ನಂ. ೩೭, ೧೬ನೇ ಮುಖ್ಯರಸ್ತೆ
ಎಂ. ಸಿ. ಬಡಾವಣೆ, ವಿಜಯನಗರ, ಬೆಂಗಳೂರು – ೫೬೦ ೦೪೦



**ಸಾ**ಮಾನ್ಯವಾಗಿ ಕನ್ನಡ ವಿಜ್ಞಾನ ಲೇಖಕರು ಯಾವುದಾದರೂ ಸಭೆ, ಸಮಾರಂಭಗಳಲ್ಲಿ ಸೇರಿದಾಗ ಮೂವರು ಹಿರಿಯ ವಿಜ್ಞಾನ ಲೇಖಕರ ಪ್ರಸ್ತಾಪ ಮಾತುಕತೆಯಲ್ಲಿ ಬರುತ್ತಿತ್ತು. ಜೆ. ಆರ್. ಲಕ್ಷ್ಮಣರಾವ್, ಜಿ. ಟಿ. ನಾರಾಯಣರಾವ್, ಅಡ್ಯನಡ್ಕ ಕೃಷ್ಣಭಟ್. ನಮ್ಮ ತಲೆಮಾರಿನ ಅನೇಕ ಲೇಖಕರು ಈ ಮೂವರೊಂದಿಗೂ ಒಂದಲ್ಲ ಒಂದು ಸಂದರ್ಭದಲ್ಲಿ ಮಾತನಾಡಿದ್ದಾರೆ, ಪ್ರಭಾವಿತರಾಗಿದ್ದಾರೆ. ಅವರು ಬರೆದ ಸಂದರ್ಭವೇ ಬೇರೆ. ಮಾಹಿತಿಗಾಗಿ ಪುಸ್ತಕ ಭಂಡಾರಕ್ಕೆ ಹೋಗುವ ಸ್ಥಿತಿ ಅದು. ನಮಗಿರುವಂತೆ ಅಂತರಜಾಲದ ಅನುಕೂಲವಿರಲಿಲ್ಲ, ಚಿಟಿಕೆ ಹೊಡೆದರೆ ಮಾಹಿತಿ ಸಿಗುತ್ತಿರಲಿಲ್ಲ. ಒಂದು ವಿಶೇಷವೆಂದರೆ ಈ ಮೂರೂ ಮಂದಿ ಸಮಾನಧರ್ಮಿಗಳು. ವಿಜ್ಞಾನ ಬರವಣಿಗೆಯಲ್ಲಿ ಗಟ್ಟಿಯಾಗಿ ನಿಂತವರು. ಅತ್ಯುತ್ತಮ ಬೋಧಕರು ಹಾಗೆಯೇ ವಿಜ್ಞಾನ ಕೃತಿಗಳ ಜವಾಬ್ದಾರಿ ಸಂಪಾದಕರು. ಸದ್ಯ ಜಿ.ಟಿ.ಎನ್. ನಮ್ಮೊಂದಿಗಿಲ್ಲ. ಲಕ್ಷ್ಮಣರಾಯರಿಗೆ ವಯೋಸಹಜವಾದ ದೈಹಿಕ ನಿತ್ರಾಣವಿದೆ. ಅಡ್ಯನಡ್ಕರಿಗೆ ಕಾಯಿಲೆ ಬಾಧಿಸದಿದ್ದರೆ ಇನ್ನಷ್ಟು ವಿಜ್ಞಾನ ಸಾಹಿತ್ಯಕೃಷಿಯನ್ನು ಅವರೇ ಮಾಡುತ್ತಿದ್ದರು, ಜೊತೆಗೆ ಕಿರಿಯರಿಂದ ಮಾಡಿಸುತ್ತಿದ್ದರು.

ನಾನು ಅಡ್ಯನಡ್ಕ ಅವರ ಹೆಸರನ್ನು ಕೇಳಿದ್ದು ೭೦ರ ದಶಕದಲ್ಲಿ. ದಕ್ಷಿಣ ಕನ್ನಡ ಜಿಲ್ಲೆಯ ಸೂರತ್ಕಲ್ಲಿನ ಶ್ರೀನಿವಾಸನಗರದಿಂದ 'ವಿಜ್ಞಾನ ಪ್ರತಿಷ್ಠಾನ' ಎಂಬ ಸಂಸ್ಥೆ 'ವಿಜ್ಞಾನ ಲೋಕ' ಎಂಬ ಸಣ್ಣ ಮಾಸಿಕ ಪತ್ರಿಕೆಯನ್ನು ಪ್ರಕಟಿಸುತ್ತಿತ್ತು. ಆಗ ನಾನು ಸೂರತ್ಕಲ್‌ನ

# ವಿಜ್ಞಾನದ ಹೊಳೆಯಲ್ಲಿ ಮಿಂದೆದ್ದ ಪ್ರೊ॥ ಅಡ್ಯನಡ್ಕ ಕೃಷ್ಣಭಟ್

ಇಂಜಿನಿಯರಿಂಗ್ ಕಾಲೇಜಿನ, ಸಿವಿಲ್ ಇಂಜಿನಿಯರಿಂಗ್ ವಿಭಾಗದಲ್ಲಿ ಅಧ್ಯಾಪಕನಾಗಿದ್ದೆ; ಆ ಪತ್ರಿಕೆ ಓದುತ್ತಿದ್ದೆ. ಪ್ರಕಾಶಕ ದೇವರಾವ್ ಎಂಬುವರ ಪರಿಚಯವಾಗಿತ್ತು. ಶಿವರಾಮ ಕಾರಂತರೂ ಇಂಥ ಪತ್ರಿಕೆ ಬರಬೇಕೆಂದು ಆಶಿಸಿದ್ದರು. ಇದರ ಸಂಪಾದಕರು ಅಡ್ಯನಡ್ಕ ಕೃಷ್ಣಭಟ್ ಅವರು. ವಿಷಯಗಳ ಆಯ್ಕೆಯಿಂದ ತೊಡಗಿ ಅದನ್ನು ತಿದ್ದುವ ಸಮುಚಿತ ಚಿತ್ರಗಳನ್ನು ಬಳಸುವ ಜೊತೆಗೆ ಪುಟ್ಟ ಸಂಪಾದಕೀಯ ಬರೆಯುವ ಜವಾಬ್ದಾರಿ ಅವರದ್ದು. ಅದನ್ನು ಅವರು ಮುಲ್ಕಿಯ ವಿಜಯ ಕಾಲೇಜಿನಿಂದಲೇ ನಿರ್ವಹಿಸುತ್ತಿದ್ದರು. ಹದಿನೇಳು ವರ್ಷಗಳ ಕಾಲ ಪ್ರಕಟವಾಗಿ ಅದು ನಿಂತುಹೋಯಿತೆಂದು ಒಮ್ಮೆ ಅವರು ಹೇಳಿದ್ದರು. ಆದರೆ ನಿಜವಾಗಿಯೂ ಎದ್ದುನಿಂತದ್ದು ಕೃಷ್ಣಭಟ್ ಅವರ ಹೆಸರು. ಇದಕ್ಕೂ ಮೊದಲು ೧೯೭೦–೭೪ರ ನಡುವೆ ನಿರಂಜನರ ಸಂಪಾದಕತ್ವದಲ್ಲಿ ಹೊರಬಂದ 'ಜ್ಞಾನಗಂಗೋತ್ರಿ' ಕಿರಿಯರ ವಿಶ್ವಕೋಶದ ಏಳು ಸಂಪುಟಗಳಲ್ಲಿ ಮೂರು ಸಂಪುಟಗಳು–ಭೌತಜಗತ್ತು, ಜೀವಜಗತ್ತು ಮತ್ತು ಯಂತ್ರಜಗತ್ತು – ಸಂಪುಟಗಳ ಸಂಪಾದಕರಾಗಿ ಅಪಾರ ಅನುಭವ ಗಳಿಸಿದ್ದರು. ಸಮಕಾಲೀನ ವಿಜ್ಞಾನ ತಂತ್ರಜ್ಞಾನಗಳ ಬೆಳವಣಿಗೆ ಕುರಿತು ಆಹ್ವಾನಿಸಿದ ಲೇಖನಗಳನ್ನು ತಿದ್ದುವ, ಪುನರ್‌ರಚಿಸುವ ಹೊಣೆಯನ್ನು ಖುಷಿಯಾಗಿಯೇ ಮಾಡಿದ್ದರು. ಈ ಒಂದೊಂದೂ ಸಂಪುಟಕ್ಕೂ ಅವರು ಬರೆದಿರುವ ಸಮೀಕ್ಷಾ ಲೇಖನಗಳು ವಿಜ್ಞಾನದ ಇತಿಹಾಸದ ಬೆಳಕಿಂಡಿ ಎನ್ನಬಹುದು. ಭಟ್ ಅವರನ್ನು 'ಜ್ಞಾನಗಂಗೋತ್ರಿ' ಟೀಂಗೆ ತರಲು ಕಾರ್ಯನಿರ್ವಾಹಕ ಮಂಡಲಿ ಕಾಲೇಜು ಶಿಕ್ಷಣ ನಿರ್ದೇಶನಾಲಯಕ್ಕೆ ದುಂಬಾಲು ಬಿದ್ದಿತ್ತಂತೆ. ಕೊನೆಗೂ ಎರವಲು ಸೇವೆ ದಕ್ಕಿತು.

ನವಕರ್ನಾಟಕದ ಹಿರಿಯ ಸಂಪಾದಕರೂ, ಪತ್ರಕರ್ತರೂ ಆದ ಸಿ. ಆರ್. ಕೃಷ್ಣರಾವ್ ಎಷ್ಟೋ ಬಾರಿ ಹೇಳಿದ್ದಿದೆ. ಇಡೀ ಈ ಏಳು ಸಂಪುಟಗಳನ್ನು ಪುನರ್ಮುದ್ರಿಸಿದರೆ ಹೇಗೆ ?

**ಟಿ. ಆರ್. ಅನಂತರಾಮು**

'ಗಗನಯಾನ'ದೊಂದಿಗೆ ಪ್ರಾರಂಭವಾದ ವಿಜ್ಞಾನಯಾನದಲ್ಲಿ ತೊಡಗಿದ ಭಟ್ ಅವರು ಕನ್ನಡ–ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಕೃತಿ ರಚಿಸಿದರಾದರೂ ಅವರ ಆದ್ಯತೆ ಕನ್ನಡ ವಿಜ್ಞಾನ ಕೃತಿಗಳಿಗೆ. ೧೯೭೭ರಲ್ಲಿ 'ಸ್ಟೋರಿ ಆಫ್ ಮ್ಯಾನ್' ಎಂಬ ಪುಸ್ತಕವನ್ನು ಎರಡೂ ಭಾಷೆಗಳಲ್ಲಿ ಬರೆದರು. ಇದನ್ನು ಓದಿದವರಿಗೆ ಭಟ್ ಒಬ್ಬ ಜೀವವಿಜ್ಞಾನಿಯಾಗಿ, ಆಂಥ್ರೋಪಾಲಜಿ ಅಧ್ಯಯನ ಮಾಡಿದ್ದಾರೆಂಬ ಭಾವನೆ ಸಹಜವಾಗಿ ಮೂಡುತ್ತದೆ. ಸಮರ್ಥ ವಿಜ್ಞಾನ ಸಂವಹನಕಾರ, ವಿಜ್ಞಾನದ ಅನೇಕ ಶಿಸ್ತುಗಳನ್ನು ಹಿಡಿದಿಡುವ ತಾಕತ್ತು ಗಳಿಸಬೇಕು. ಇದು ಭಟ್ ಅವರ ರೀತಿ.

ಎಂದು. ಅದೇ ಪ್ಯಾಟ್ರನ್ ಉಳಿಸಿಕೊಂಡು ಹೊಸ ಮಾಹಿತಿ ಸೇರಿಸಿದರೆ ಈಗಲೂ ಅದು ಜನಪ್ರಿಯವಾಗುತ್ತದೆ ಎಂದು ಹೇಳಿದ್ದಿದೆ. ಆದರೆ ಇಂಥ ಜವಾಬ್ದಾರಿಯನ್ನು ಹೊರುವ ತರುಣ ಪೀಳಿಗೆ ಎಲ್ಲಿದೆ ಎಂಬುದಕ್ಕೆ ಈಗಲೂ ಉತ್ತರವಿಲ್ಲ.

ಅಡ್ಯನಡ್ಕ ಅವರ ಹುಟ್ಟೂರು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲ್ಲೂಕಿನ ಅಡ್ಯನಡ್ಕ, ಒಂದು ಸಾಧಾರಣ ಗ್ರಾಮ. ಈಗ ಅಲ್ಲಿ ಪಿ.ಯು. ಕಾಲೇಜಿದೆ, ಆಗ ಹೈಸ್ಕೂಲ್ ಕೂಡ ಇರಲಿಲ್ಲ. ತಿಮ್ಮಣ್ಣ ಭಟ್ ಮತ್ತು ಲಕ್ಷ್ಮೀ ಇವರ ತಂದೆ, ತಾಯಿ. ಭಟ್ ಅವರು ಹುಟ್ಟಿದ್ದು ೧೯೩೮ರ ಮಾರ್ಚ್ ೧೫ರಂದು. ಆರಂಭದಲ್ಲಿ ಅದೇ ಊರಿನಲ್ಲಿ ಶಿಕ್ಷಣ ಪಡೆದು ಮುಂದೆ ಪುತ್ತೂರು ಉಡುಪಿಯಲ್ಲಿ ವ್ಯಾಸಂಗ ಮಾಡಿದರು. ಆಗ ವಿಜ್ಞಾನ ಸಾಹಿತ್ಯ ಅಭಿರುಚಿ ಅವರಿಗೆ ಹುಟ್ಟಿಸಿದ್ದು ಎಂ.ಜಿ.ಎಂ. ಕಾಲೇಜಿಗೆ ಆಹ್ವಾನಿತರಾಗಿ ಬರುತ್ತಿದ್ದ ಅಡಿಗರು, ಕುವೆಂಪು, ಬೇಂದ್ರೆ, ರಾಜರತ್ನಂ ಮುಂತಾದ ಹಿರಿಯ ಸಾಹಿತಿಗಳು. ದಕ್ಷಿಣ ಕನ್ನಡ ಜಿಲ್ಲೆ ಆಗ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿತ್ತು. ಬಿ.ಎಸ್ಸಿ. ಆನರ್ಸ್ ಮತ್ತು ಫಿಸಿಕ್ಸ್ ಎಂ.ಎ. ಮಾಡಿದ್ದು ಮದ್ರಾಸ್ ವಿಶ್ವವಿದ್ಯಾಲಯದಲ್ಲೇ. ಆಗ ಸರ್. ಸಿ. ವಿ. ರಾಮನ್ ಅವರ, ನೊಬೆಲ್ ಪ್ರಶಸ್ತಿ ಪಡೆದಿದ್ದ ನೀಲ್ಸ್ ಬೋರ್ ಅವರ ಉಪನ್ಯಾಸಗಳನ್ನು ಕೇಳುವ ಅವಕಾಶ ಅವರಿಗೆ. ಅವರ ಸರಳ ಉಪನ್ಯಾಸಗಳು ಇವರ ಮೇಲೆ ಎಷ್ಟು ಪ್ರಭಾವ ಬೀರಿತ್ತೆಂದರೆ ಕನ್ನಡದಲ್ಲಿ ವಿಜ್ಞಾನವನ್ನು ಬರೆದು ಏಕೆ ಜನಪ್ರಿಯ ಮಾಡಬಾರದು ಎಂಬ ಆಸೆಯನ್ನು ಹುಟ್ಟಿಸಿತಂತೆ. ಮುಂದೆ ೧೯೫೯ರಲ್ಲಿ ತಾವು ಓದಿದ್ದ ಅದೇ ಎಂ.ಜಿ.ಎಂ. ಕಾಲೇಜಿಗೆ ಭೌತವಿಜ್ಞಾನದಲ್ಲಿ ಡೆಮಾನ್‌ಸ್ಟ್ರೇಟರ್ ಆಗಿ ಬೋಧಕ ವೃತ್ತಿಯನ್ನು ಪ್ರಾರಂಭಿಸಿದರು. ಆದರೆ ಅವರ ನಿಜವಾದ ಕರ್ಮಭೂಮಿಯಾಗಿ ಒದಗಿಬಂದದ್ದು ಮುಲ್ಕಿಯ ವಿಜಯ ಕಾಲೇಜು. ಅಲ್ಲಿ ೧೯೬೩ರಿಂದ ೯೬ರವರೆಗೆ ದೀರ್ಘ ಸೇವೆ ಅವರದು. ೧೯೫೭ರಲ್ಲಿ ಯೂರಿ ಗಗಾರಿನ್ ಮೊದಲ ಗಗನಯಾನಿಯಾಗಿ ಭೂಮಿಯನ್ನು ಸುತ್ತಿಬಂದದ್ದು ಭಟ್ ಅವರಿಗೆ ವಿಶೇಷ ಸಂಚಲನ ಉಂಟುಮಾಡಿತ್ತು. 'ಗಗನಯುಗ' ಎಂಬ ಕೃತಿ ರಚಿಸಲು ಅದೇ ಪ್ರೇರಣೆ. ಅವರ ತಲೆಮಾರಿನ ಲೇಖಕರಾದ ಜಿ.ಟಿ.ಎನ್. ಮತ್ತು ಜೆ.ಆರ್.ಎಲ್. ಕೂಡ ಜನಸಾಮಾನ್ಯರ ಬಳಿಗೆ ವಿಜ್ಞಾನವನ್ನು ಒಯ್ಯಲು ವಿಶೇಷ ಪ್ರಯತ್ನ ಮಾಡಿದವರು. ಈ ಮೂವರಲ್ಲೂ ವಿಚಾರ ವಿನಿಮಯವಾಗುತ್ತಿತ್ತು.

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಅಸ್ತಿತ್ವಕ್ಕೆ ಬಂದಮೇಲೆ ಅದರ ಮುಖಪತ್ರಿಕೆ 'ಬಾಲವಿಜ್ಞಾನ'ಕ್ಕೆ ಒಂಬತ್ತು ವರ್ಷಗಳ ಕಾಲ ಕೃಷ್ಣಭಟ್ ಸಂಪಾದಕರಾಗಿ ಪತ್ರಿಕೆಯ ಮೌಲ್ಯವನ್ನು ಎತ್ತರಕ್ಕೆ ಒಯ್ದರು. ಅವರು ಕ.ರಾ.ವಿ.ಪ.ದ ಸಂಸ್ಥಾಪಕ ಸದಸ್ಯರಲ್ಲೊಬ್ಬರು. ಅವರ ಸಂಪಾದಕೀಯ ಲೇಖನಗಳೇ ಒಂದು ದೊಡ್ಡ ಕೃತಿಯಾಗುವಷ್ಟು ಪ್ರಮಾಣದಲ್ಲಿದೆ. ಗುಣಾತ್ಮಕವಾಗಿಯೂ ಜೆ. ಆರ್. ಲಕ್ಷ್ಮಣರಾಯರ ಜೊತೆಗೂಡಿ ಅವರು ಅದೇ ಸಂಸ್ಥೆಯಿಂದ ಪ್ರಕಟಿಸಿದ 'ಇಂಗ್ಲಿಷ್–ಕನ್ನಡ ವಿಜ್ಞಾನ ಶಬ್ದಕೋಶ' ಕನ್ನಡದಲ್ಲಿ ವಿಜ್ಞಾನ ಬರೆಯುವವರಿಗೆ ಮಾರ್ಗದರ್ಶಿಯಾಯಿತು. ಶಬ್ದಗಳ ಸಮಾನಾರ್ಥ ಪದಗಳಿಗೆ ಲೇಖಕರು ತಿಣುಕುವ ಪರಿಸ್ಥಿತಿ ಹಿಂದಕ್ಕೆ ಸರಿಯಿತು. ಇದರಲ್ಲಿ ವಿಜ್ಞಾನ ಪಾರಿಭಾಷಿಕ ಪದಗಳಿಗೆ ಸಂವಾದಿ ಪದಗಳನ್ನು ಟಂಕಿಸುವಾಗ ಯಾವ ಸೂತ್ರವನ್ನು ಅನುಸರಿಸಬೇಕೆಂಬ ಸೂಚನೆಗಳೂ ಇವೆ.

ಕೃಷ್ಣಭಟ್ ಅವರು ಪ್ರಯೋಗಶೀಲರು. ಮುಲ್ಕಿಯ ವಿಜಯ ಕಾಲೇಜಿನಲ್ಲಿದ್ದಾಗಲೇ ವಿಜ್ಞಾನಕ್ಕೆ ಸಂಬಂಧಿಸಿದ ಅನೇಕ ಕಾರ್ಯಕ್ರಮಗಳನ್ನು ರೂಪಿಸಿದರು. ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗ ಹಿಂದೆಯೇ ರೂಪಿಸಿದ್ದ ಗ್ರಾಮಗಳಿಗೆ ಹೋಗಿ ವಿಜ್ಞಾನ ಕುರಿತು ಉಪನ್ಯಾಸ ನೀಡುವ ಯೋಜನೆ ಇವರಿಗೆ ಇನ್ನಷ್ಟು ಪ್ರೇರಣೆ ನೀಡಿತು. ರಾಜ್ಯದ ಅನೇಕ ಭಾಗಗಳಿಗೆ ಹೋಗಿ ಆಗ ಬಳಕೆಯಲ್ಲಿದ್ದ ಸ್ಲೈಡ್ ಪ್ರೊಜೆಕ್ಟರ್ ಬಳಸಿ ವಿಜ್ಞಾನವನ್ನು ಜನಪ್ರಿಯ ಮಾಡಲು ಶ್ರಮಿಸಿದರು. ಅವರಿಗೆ ಆಕಾಶವೀಕ್ಷಣೆ ಬರಿ ಹವ್ಯಾಸವಾಗಿರಲಿಲ್ಲ. ಈ ಸಂಕೀರ್ಣ ವಿಶ್ವವನ್ನು ತಿಳಿಯಲು ಮನುಷ್ಯನಿಗೆ

ಇತ್ತ ಅವಕಾಶ ಎನ್ನುತ್ತಿದ್ದರು. ಹ್ಯಾಲಿ ಕಾಮೆಟ್ ಕಾಣಿಸಿಕೊಂಡಾಗ ಪ್ರತಿಫಲನ ದೂರದರ್ಶಕ ಹೊತ್ತು ಧೂಮಕೇತುವಿನ ದರ್ಶನವನ್ನು ವಿದ್ಯಾರ್ಥಿಗಳಿಗೆ ಮಾಡಿಸುತ್ತಿದ್ದರು. ಅನೇಕ ಶಾಲೆಗಳಿಗೆ ಹೋಗಿ ಸ್ಲೈಡುಗಳನ್ನು ಪ್ರದರ್ಶಿಸುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನಸಾಮಾನ್ಯರಿಗೆ ವಿಜ್ಞಾನದ ಪ್ರಾಮುಖ್ಯ ತಿಳಿಸಲು ಜನವಿಜ್ಞಾನ ಜಾಥಾವನ್ನು ಏರ್ಪಡಿಸಿದರು. ವಿಜಯ ಕಾಲೇಜು, ಜಗತ್ತಿನ ವಿಜ್ಞಾನದ ಪ್ರಗತಿಯನ್ನು ತಿಳಿಸುವ ಕೇಂದ್ರವಾಗಬೇಕೆಂದು ಸತತವಾಗಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತ, ಮೂವತ್ತು ವರ್ಷಗಳ ಕಾಲ ಪ್ರತಿವರ್ಷವೂ ವಿಜ್ಞಾನ ಪ್ರದರ್ಶನ ಏರ್ಪಡಿಸುತ್ತಿದ್ದರು. ಇದರಲ್ಲಿ ವಿದ್ಯಾರ್ಥಿಗಳಷ್ಟೇ ಅಲ್ಲ, ಸಾರ್ವಜನಿಕರೂ ಭಾಗಿಗಳಾಗಿ ಪುಲಕಗೊಳ್ಳುತ್ತಿದ್ದರು. 'ಭಾರತ ಜನವಿಜ್ಞಾನ ಸಮಿತಿ'ಯ ಮೂಲಕ 'ಖಗೋಲ ಯಾನ' ಕಾರ್ಯಕ್ರಮ ರೂಪಿಸಿ ಸಂಪೂರ್ಣ ಸೂರ್ಯಗ್ರಹಣವನ್ನು ನೇರವಾಗಿ ವೀಕ್ಷಿಸಲು ರಾಜಸ್ತಾನದ ಆಲ್ವಾರ್ ಜಿಲ್ಲೆಗೂ, ಗುಜರಾತಿನ ಭುಜ್‌ಗೂ ವಿದ್ಯಾರ್ಥಿಗಳನ್ನು ಕರೆದೊಯ್ದಿದ್ದರು.



'ಆಧುನಿಕ ವಿಜ್ಞಾನದ ಉದಯ' ಕುರಿತು ಕಾರ್ಯಾಗಾರ ಮಾಡಬೇಕೆಂದು ಎನ್.ಸಿ.ಎಸ್.ಟಿ.ಸಿ. ಯೋಜಿಸಿದಾಗ, ಮೊದಲ ಹೆಸರು ಬಂದದ್ದೇ ಕೃಷ್ಣಭಟ್ ಅವರದ್ದು. ಅವರ ಕಾಲನಿಯಮ, ಬದ್ಧತೆ, ಮಾಡುವ ಕೆಲಸದಲ್ಲಿ ಶ್ರದ್ಧೆ–ಇವು ಆಗ ಅವರ ಸಂಪರ್ಕಕ್ಕೆ ಬಂದ ಎಲ್ಲರಿಗೂ ಪರಿಚಯವಾಗುತ್ತಿತ್ತು. 'ವಿಜ್ಞಾನವನ್ನು ವಿಜ್ಞಾನದ ಚೌಕಟ್ಟಿನಲ್ಲೇ ನೋಡಿ, ಜನಭಾಷೆಯನ್ನು ಬಳಕೆಗೆ ತನ್ನಿ, ಆಗಷ್ಟೇ ನಿಜವಾದ ವಿಜ್ಞಾನ ಪ್ರಿಯರ ಮನಸ್ಸನ್ನು ಪ್ರವೇಶಿಸಲು ಸಾಧ್ಯ' ಎಂಬ ಎಚ್ಚರಿಕೆಯನ್ನು ಮೃದುಮಾತುಗಳಲ್ಲಿ ಹೇಳುತ್ತಿದ್ದರು. ಅವರ ಸುಮಾರು ಇಪ್ಪತ್ತು ಕೃತಿಗಳಲ್ಲಿ ಯಾವುದನ್ನು ಓದಿದರೂ ಅದನ್ನು ಕಾರ್ಯರೂಪಕ್ಕೆ ತಂದ ವಿಚಾರ ನಿಚ್ಚಳವಾಗಿ ಕಾಣುತ್ತದೆ. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಗ್ರಹಣ ಕುರಿತು ಅವರಿಂದ ಪುಸ್ತಕ ಬರೆಸಿತು. ಸಾವಿರಾರು ಪ್ರತಿಗಳು ಬಹುಬೇಗ ಓದುಗರ ಕೈಸೇರಿದವು. ಕಾಗಕ್ಕ–ಗುಬ್ಬಕ್ಕನ ಕಥೆಯಿಂದ ವಿಜ್ಞಾನ ಲೇಖನಗಳನ್ನು ಪ್ರಾರಂಭಿಸುವುದು ಅವರಿಗೆ ಸುತರಾಂ ಇಷ್ಟವಿರಲಿಲ್ಲ. 'ಗ್ರಹಣ' ಕೃತಿಯ ಆರಂಭಿಕ ಮಾತುಗಳನ್ನು ನೋಡಬಹುದು : 'ಗ್ರಹಣ ಎಂದರೇನು ? ಒಂದು ಆಕಾಶಕಾಯದಿಂದ ಮತ್ತೊಂದು ಆಕಾಶಕಾಯ ಮರೆಯಾಗುವುದು ಅಥವಾ ಮಸುಕಾಗುವುದೇ ಗ್ರಹಣ'. ವಿಷಯದ ನೇರ ಪ್ರವೇಶಕ್ಕೆ ಇದೊಂದೇ ಸಾಲು ಸಾಕು ಸಾಕ್ಷಿಯಾಗಲು.

ವಿಜ್ಞಾನ ಚಿಂತನೆಗಳ ದುರುಪಯೋಗ ಹೇಗಾಗುತ್ತದೆ ಎಂಬುದನ್ನು 'ಹೊಸತು' ಮಾಸಪತ್ರಿಕೆಗೆ (ಜನವರಿ, ೨೦೦೨) ಅವರು ಬರೆದ 'ವಿಜ್ಞಾನದ ಪ್ರಕ್ರಿಯೆ : ಕೆಲವು ಹೊಳಹುಗಳು' ಎಂಬುದರಲ್ಲಿ ಸ್ಪಷ್ಟವಾಗಿ ದಾಖಲಿಸಿದ್ದಾರೆ.

'ಕೇವಲ ವೈಯಕ್ತಿಕ ನೆಲೆಯಲ್ಲಿ ಖಾಸಗಿಯಾಗಿ ಸರಿ ಎನ್ನಿಸುವ ವಾದವನ್ನೋ, ತೀರ್ಮಾನವನ್ನೋ, ಅಗ್ಗಳಿಕೆಯಿಂದ ಸಾರಲು 'ವೈಜ್ಞಾನಿಕ' ಎಂಬ ವಿಶೇಷಣವನ್ನು ಬಳಸುವುದು ಸಾಮಾನ್ಯವಾಗಿದೆ. ಯಾವುದೇ ರಾಜಕೀಯ ಅಥವಾ ಧಾರ್ಮಿಕ ಭಾಷಣಗಳಲ್ಲೇ ಆಗಲಿ 'ವೈಜ್ಞಾನಿಕ'ವನ್ನು ಉಚ್ಚರಿಸದಿದ್ದರೆ ಭೂಷಣ ಎನ್ನಿಸುವುದಿಲ್ಲ! ಭೌತಿಕವಾಗಿ ವಿಕಿರಣ ಪದಾರ್ಥಗಳಲ್ಲಿ ಸೂಕ್ಷ್ಮಮಟ್ಟದಲ್ಲಿ ಕಂಡುಬರುವ ಕಣ–ತರಂಗಗಳ ದ್ವೈತವನ್ನು ತತ್ತ್ವಜ್ಞಾನ–ಅಧ್ಯಾತ್ಮಕ್ಕೆ ಸಂಬಂಧಿಸುವುದು, ಐಸನ್‌ಬರ್ಗ್ ಅನಿಶ್ಚಿತತಾ ತತ್ತ್ವವನ್ನು ನಿತ್ಯಜೀವನದ ಅನಿಶ್ಚಿತತೆಗೆ ಹೋಲಿಸುವುದು, 'ಕೇಯಾಸ್' ವಿದ್ಯಮಾನವನ್ನು ಪ್ರಾರ್ಥನೆಯಿಂದ ಉಂಟಾಗಬಹುದಾದ ಪರಿಣಾಮಗಳನ್ನು ಬಳಸಲು ಉಪಯೋಗಿಸುವುದು – ಇವೆಲ್ಲ ವಸ್ತುನಿಷ್ಠವಾದ ರುಜುವಾತುಗಳಿಲ್ಲದಾಗ ವಿಜ್ಞಾನದ ಮಿತಿಗಳನ್ನು ಲಂಬಿಸಿ ಮನಸ್ಸಿನ ಸಮಾಧಾನಕ್ಕಾಗಿ ಮಾಡುವ ಪ್ರಯತ್ನಗಳಾಗುತ್ತವೆ. ವಿಜ್ಞಾನದ ಪ್ರಕ್ರಿಯೆಗೆ ಸಹಾಯಕವಾಗುವುದರ ಬದಲು ಇವು ಗೊಂದಲವನ್ನೇ ನಿರ್ಮಿಸಬಹುದು.'

'ಗಗನಯಾನ'ದೊಂದಿಗೆ ಪ್ರಾರಂಭವಾದ ವಿಜ್ಞಾನಯಾನದಲ್ಲಿ ತೊಡಗಿದ ಭಟ್ ಅವರು ಕನ್ನಡ–ಇಂಗ್ಲಿಷ್ ಎರಡೂ ಭಾಷೆಗಳಲ್ಲಿ ಕೃತಿ ರಚಿಸಿದರಾದರೂ ಅವರ ಆದ್ಯತೆ ಕನ್ನಡ ವಿಜ್ಞಾನ ಕೃತಿಗಳಿಗೆ. ೧೯೭೭ರಲ್ಲಿ 'ಸ್ಟೋರಿ ಆಫ್ ಮ್ಯಾನ್' ಎಂಬ ಪುಸ್ತಕವನ್ನು ಎರಡೂ ಭಾಷೆಗಳಲ್ಲಿ ಬರೆದರು. ಇದನ್ನು ಓದಿದವರಿಗೆ ಭಟ್ ಒಬ್ಬ ಜೀವವಿಜ್ಞಾನಿಯಾಗಿ, ಆಂಥ್ರೋಪಾಲಜಿ ಅಧ್ಯಯನ ಮಾಡಿದ್ದಾರೆಂಬ ಭಾವನೆ ಸಹಜವಾಗಿ ಮೂಡುತ್ತದೆ. ಸಮರ್ಥ ವಿಜ್ಞಾನ ಸಂವಹನಕಾರ, ವಿಜ್ಞಾನದ ಅನೇಕ ಶಿಸ್ತುಗಳನ್ನು ಹಿಡಿದಿಡುವ ತಾಕತ್ತು ಗಳಿಸಬೇಕು. ಇದು ಭಟ್ ಅವರ ರೀತಿ. ಅವರು ೨೦೦೫ರಲ್ಲಿ, 'ಅಂತರರಾಷ್ಟ್ರೀಯ ಫಿಸಿಕ್ಸ್ ವರ್ಷ'ವೆಂದು ಆಚರಿಸುವ ಸಂದರ್ಭದಲ್ಲಿ ನವಕರ್ನಾಟಕ ಪ್ರಕಾಶನ ಸಂಸ್ಥೆ, ಭಟ್ ಅವರ 'ಫಿಸಿಕ್ಸ್ ಮತ್ತು ಐನ್‌ಸ್ಟೈನ್' ಕೃತಿಯನ್ನು ಪ್ರಕಟಿಸಿತು. ಐನ್‌ಸ್ಟೈನ್ ಅವರ ವಿಚಾರಗಳನ್ನು ಯಾವ ಯಾವ ಕೋನದಿಂದ ನೋಡಬಹುದು ಎಂಬುದರ ಸಮಗ್ರ ಚಿಂತನೆಗಳನ್ನು ವಿಜ್ಞಾನೇತರರೂ ಖುಷಿಯಾಗಿ ಓದಬಹುದಾದ ಕೃತಿ ಇದು. ಬೆಳಕಿನ ಬಗ್ಗೆ ಹಲವು ಮಾಹಿತಿಗಳನ್ನು ಕೊಡುವಾಗ 'ಬೆಳಕಿನ ದುರಂತ' ಎಂಬ ಅತ್ಯಾಕರ್ಷಕ ಶೀರ್ಷಿಕೆಯಲ್ಲಿ ಹಲವು ಹೊಸ ವಿಚಾರಗಳನ್ನು ತಂದಿದ್ದಾರೆ. ಅದರ ನಿರೂಪಣೆಯ ವಿಧಾನವೇ ಬೇರೆ.

ಅವರ ಅನುವಾದ ಕುರಿತು ಗಮನಿಸಬೇಕಾದ ಒಂದು ವಿಚಾರವಿದೆ. ಅನುವಾದಕ ಮೂಲ ಪಠ್ಯಕ್ಕೆ ನಿಷ್ಠನಾಗಿಯೂ, ಎಲ್ಲಿ ಸ್ವಾತಂತ್ರ್ಯ ವಹಿಸಬಹುದು ಎಂಬುದಕ್ಕೆ ಅವರು ಅನುವಾದಿಸಿರುವ 'ರಾಮನ್ ಅಂಡ್ ಹಿಸ್ ವರ್ಕ್' ಕೃತಿಯೇ ಸಾಕ್ಷಿ. ಸಾಮಾನ್ಯವಾಗಿ ಇಂಥ ಸಂದರ್ಭಗಳಲ್ಲಿ 'ರಾಮನ್ ಮತ್ತು ಅವರ ಸಂಶೋಧನೆ' ಎನ್ನಬಹುದಾಗಿತ್ತು. ಇಲ್ಲಿಯ ರಾಮನ್ ಪರಿಣಾಮ ಎಂದರೆ ಭಾರತೀಯ ಸಂದರ್ಭದಲ್ಲಿ ಬೇರೆ ವಿಜ್ಞಾನ ಬೆಳವಣಿಗೆಯ ಮೇಲೆ ಇದು ಬೀರಿದ ಪ್ರಭಾವಕ್ಕೆ ಒತ್ತುಬೀಳುತ್ತದೆ. ಹೀಗಾಗಿ ಶೀರ್ಷಿಕೆಯೇ 'ರಾಮನ್ ಮತ್ತು ಅವರ ಪರಿಣಾಮ' ಎಂದು ಬದಲಾಯಿತು. ಹೀಗೆ ಮಾಡಲು ಧೈರ್ಯಬೇಕು. ರಾಮನ್ ಅವರ ಮೂಲ ಆಶಯವನ್ನು ಅರ್ಥಮಾಡಿಕೊಂಡಿರಬೇಕು. ನ್ಯಾಷನಲ್ ಬುಕ್ ಟ್ರಸ್ಟ್ ಇದನ್ನು ಪ್ರಕಟಿಸಿದೆ.

ನವಕರ್ನಾಟಕ ಪ್ರಕಾಶನ ಸಂಸ್ಥೆಯೊಂದಿಗೆ ಅವರ ನಂಟು ಎಂದೂ ಆತ್ಮೀಯವಾಗಿತ್ತು. ಎಂ. ಎ. ಸೇತುರಾವ್ ಮತ್ತು ಕೆ. ಎಲ್. ಗೋಪಾಲಕೃಷ್ಣ ರಾವ್ ಅವರ ಸಂಪಾದಕತ್ವದಲ್ಲಿ ನವಕರ್ನಾಟಕ ಸಂಸ್ಥೆ ಹೊರತಂದ 'ಜ್ಞಾನ–ವಿಜ್ಞಾನ ಕೋಶ'ದ ನಾಲ್ಕು ಸಂಪುಟಗಳ (೧೯೯೮) ಸಲಹಾ ಮಂಡಲಿಯಲ್ಲಿ ಕೃಷ್ಣಭಟ್ ಅವರು ಇದ್ದರು. ಇದು ಬರಿ ಮೇಲುಸ್ತರದ ಸಲಹೆಯಲ್ಲ. ಸಂಪೂರ್ಣ ಓದು ಅವರದ್ದಾಗಿತ್ತು. ಈ ಪ್ರಕಟಣೆಗೆ ಈಗಲೂ ಬೇಡಿಕೆ ಇದೆ. ಮುಂದೆ ಜಿ. ಟಿ. ನಾರಾಯಣರಾವ್ ಅವರ ಸಂಪಾದಕತ್ವದಲ್ಲಿ 'ವಿಜ್ಞಾನ ಪದವಿವರಣ ಕೋಶ' ಹೊರತರುವಾಗ ಕೊನೆಯ ಹಂತದಲ್ಲಿ ಮೈಸೂರಿನಿಂದ ಇಲ್ಲಿಗೆ ಬಂದು ಸತತವಾಗಿ ಒಂದು ವಾರ ಬೈಠಕ್‌ನಲ್ಲಿದ್ದರು. ಅನೇಕ ವಾದ–ವಿವಾದಗಳು ಹುಟ್ಟುತ್ತಿದ್ದುದು ತಾಂತ್ರಿಕ ಶಬ್ದಗಳ ಬಳಕೆಯ ಸಂದರ್ಭದಲ್ಲಿ. ಸಂಪಾದಕ ಮಂಡಲಿಯಲ್ಲಿದ್ದ ನಮಗೆಲ್ಲ ಅದೊಂದು ವಿಶಿಷ್ಟ ಅನುಭವ. 'ಥರ್ಮೋಡೈನಮಿಕ್ಸ್' ಪದದಲ್ಲಿ 'ಥರ್ಮೋ' ಎಂಬುದಕ್ಕೆ 'ಔಷ್ಣೀಯ' ಎಂಬ ಮಣಭಾರದ ಪದ ಏಕೆ? ಸರಳವಾಗಿ 'ಉಷ್ಣ' ಎನ್ನಬಾರದೆ ? ಮೆಷಿನ್, ಯಂತ್ರ ಎನ್ನಬಹುದಾದರೆ, ಮೆಕಾನಿಕ್ಸ್‌ಗೆ 'ಯಾಂತ್ರ' ಎಂದರೆ ಏಕೆ ಅರ್ಥವಾಗುವುದಿಲ್ಲ. ಈ ಬಗೆಯ ಸಲಹೆ ಅವರದ್ದು. ನವಕರ್ನಾಟಕದ ಚಿನ್ನದ ಹಬ್ಬದ ಸಂಭ್ರಮದಲ್ಲಿ 'ಜ್ಞಾನ–ವಿಜ್ಞಾನ ಮಾಲೆ' ಎಂಬ ಹೊಸ ಮಾಲೆಯನ್ನು ಪ್ರಾರಂಭಿಸುವ ಯೋಜನೆಯೊಂದನ್ನು ಸಂಸ್ಥೆ ಹಾಕಿಕೊಂಡಾಗ, ಅದರ ಜವಾಬ್ದಾರಿ ಕೃಷ್ಣಭಟ್ ಅವರದ್ದು. ಅವರೇ 'ಕಾಮನಬಿಲ್ಲು' ಎಂಬ ಕೃತಿ ರಚಿಸಿದರು. ಈ ಮಾಲೆಯ ಉದ್ದೇಶವನ್ನು

ಅವರು ಸ್ಪಷ್ಟವಾಗಿ ಮುಂದಿಟ್ಟಿದ್ದರು – ಶೈಲಿ, ಪದಬಳಕೆ, ಅನುಭವಕ್ಕೆ ಸಿಗುವ ದೃಷ್ಟಾಂತ, ಘಟನೆ, ವೀಕ್ಷಣೆ, ಓದುಗರ ಮನಸ್ಸಿನಲ್ಲಿ ಹುಟ್ಟಬಹುದಾದ ಪ್ರಶ್ನೆ ಮತ್ತು ಸಂಶಯಗಳ ಪೂರ್ವ ನಿರೀಕ್ಷಣೆ, ಪೂರಕ ಚಿತ್ರಗಳು, ಶಾಲಾ ಮಕ್ಕಳಿಗೂ, ಅಧ್ಯಾಪಕರಿಗೂ ಅನುಕೂಲವಾಗುವಂತೆ ಈ ಮಾಲೆಯ ಕೃತಿಗಳು ಸಿದ್ಧವಾಗಬೇಕು ಎಂದಿದ್ದರು. ಈ ಮಾಲೆಯಡಿ ಅವರ ಸಂಪಾದಕತ್ವದಲ್ಲಿ ಏಳು ಕೃತಿಗಳು ಬಂದವು. ಭಟ್ ಅವರ ನಿರೀಕ್ಷೆಗೆ ಒಗ್ಗದ ಅನೇಕ ಹಸ್ತಪ್ರತಿಗಳನ್ನು ಕೈಬಿಡಬೇಕಾಯಿತು. ಇದು ಮುಂದುವರಿದಿದ್ದರೆ ಕನ್ನಡದ ವಿಜ್ಞಾನ ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ ದೊಡ್ಡ ಲಾಭವಾಗುತ್ತಿತ್ತು.

ನವಕರ್ನಾಟಕದ ಮತ್ತೊಂದು ಪ್ರಮುಖ ಪ್ರಕಟಣೆ 'ವಿಜ್ಞಾನ–ತಂತ್ರಜ್ಞಾನ ಪದಸಂಪದ'. ಇದಕ್ಕೂ ಕೃಷ್ಣಭಟ್ ಅವರ ಸಲಹೆ ಸಿಕ್ಕಿದೆ. ಅವರ ಸೂಚನೆಯ ಮೇರೆಗೆ ಅನೇಕ ಹೊಸ ನಮೂದುಗಳು ಸೇರಿವೆ. ಇದರಂತೆಯೇ ನವಕರ್ನಾಟಕ 'ವಿಜ್ಞಾನ–ತಂತ್ರಜ್ಞಾನ ನಿಘಂಟು' ರಚಿಸುವಾಗಲೂ ಅನೇಕ ಶಬ್ದಗಳ ಬಗ್ಗೆ ಅವರೊಂದಿಗೆ ಸಂಪಾದಕ ಮಂಡಲಿ ಚರ್ಚಿಸಿದೆ. ವಿಚಾರ ವಿನಿಮಯ ಮಾಡಿಕೊಂಡಿದೆ. ಈ ನಿಘಂಟಿಗೆ ಅತ್ಯುತ್ತಮ ಮುನ್ನುಡಿಯನ್ನು ಕೃಷ್ಣಭಟ್ ಬರೆದಿದ್ದಾರೆ.

ಕೃಷ್ಣಭಟ್ ಅವರ ಐದು ದಶಕಗಳ ಸಾಹಿತ್ಯ ಕೃಷಿಗೆ ತಕ್ಕ ಪುರಸ್ಕಾರವೂ ಸಂದಿದೆ. ಅವರ 'ಮನುಷ್ಯನ ಕಥೆ' ಕೃತಿಗೆ ಕರ್ನಾಟಕ ಸಾಹಿತ್ಯ ಪುಸ್ತಕ ಬಹುಮಾನ (೧೯೭೭) ಬಂದಿದೆ, ಕೇಂದ್ರ ಸರ್ಕಾರದ ರಾಷ್ಟ್ರೀಯ ವಿಜ್ಞಾನ ಸಂವಹನ ಮಂಡಲಿ, ೧೯೯೬ರಲ್ಲಿ ಇವರಿಗೆ ರಾಷ್ಟ್ರ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

ವೈಯಕ್ತಿಕವಾಗಿಯೂ ಕೃಷ್ಣಭಟ್ ಅವರೊಂದಿಗೆ ಮೂವತ್ತು ವರ್ಷಗಳ ಒಡನಾಟ ನನಗೆ ಸಿಕ್ಕಿತ್ತು. ಕನ್ನಡ ಸಾಹಿತ್ಯ ಪರಿಷತ್ತು ತನ್ನ ಶತಮಾನೋತ್ಸವದ ಅಂಗವಾಗಿ ಹೊರತಂದ 'ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ' ಸಂಪುಟಗಳಲ್ಲಿ 'ವಿಜ್ಞಾನ ತಂತ್ರಜ್ಞಾನ' ಸಂಪುಟವನ್ನು ಸಂಪಾದಿಸಿಕೊಡುವ ಜವಾಬ್ದಾರಿ ನನ್ನದಾಗಿತ್ತು. ಇದನ್ನು ರೂಪಿಸುವಾಗ ಅನೇಕ ಹಂತಗಳಲ್ಲಿ ಅವರ ಸಲಹೆ ನನಗೆ ಸಿಕ್ಕಿದೆ. ಈ ಕೃತಿಯ ಮೊದಲ ಲೇಖನ 'ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ಆರಂಭದ ಹೆಜ್ಜೆಗಳು'. ಇದನ್ನು ಅವರ ಅನಾರೋಗ್ಯದ ನಡುವೆಯೂ ಈ ಸಂಪುಟಕ್ಕಾಗಿ ಬರೆದು ಕೊಟ್ಟರು. ಗೋಕಾಕ್‌ನಿಂದ ಮಧ್ಯೆ ಮಧ್ಯೆ ಫೋನ್ ಮಾಡಿ ಪ್ರಗತಿಯನ್ನು ವಿಚಾರಿಸುತ್ತಿದ್ದರು.

ಮುಲ್ಕಿಯ ವಿಜಯ ಕಾಲೇಜಿನಿಂದ ನಿವೃತ್ತರಾದ ಮೇಲೆ ಮೈಸೂರಿನಲ್ಲಿ ಅವರು ನೆಲೆನಿಂತರು. ಅನಾರೋಗ್ಯ ಬಾಧಿಸುತ್ತಿತ್ತು. ಪ್ಲೇಟ್‌ಲೆಟ್ಸ್ ಕಡಿಮೆಯಾಗಿ ತೊಂದರೆಗೊಳಗಾದರು. ಬಿಕ್ಕಳಿಕೆ ಅವರನ್ನು ಎಡಬಿಡದೆ ಸತಾಯಿಸಿತು. ಪತ್ನಿ ಸರಸ್ವತೀ ಭಟ್ ಅವರೊಂದಿಗೆ ಕೃಷ್ಣಭಟ್ ಅವರು ಗೋಕಾಕ್‌ನಲ್ಲಿದ್ದ ಮಗಳು ದೀಪ್ತಿ ಅವರ ಮನೆಗೆ ವರ್ಗಾಯಿಸಿದರು. ಆಕೆ ನೇತ್ರ ವೈದ್ಯೆ. ಮಗ ತಿರುಮಲೇಶ್ ಅಮೆರಿಕದ ಸಿಯಾಟ್ಲ್‌ನಲ್ಲಿ ಸಾಫ್ಟ್‌ವೇರ್ ಇಂಜಿನಿಯರಾಗಿ ಕೆಲಸ ಮಾಡುತ್ತಿದ್ದಾರೆ. ತಮ್ಮ ಆರೋಗ್ಯ ಸುಧಾರಿಸಿತೆಂದು ಅವರು ಮತ್ತೆ ಬರಹದಲ್ಲಿ ತೊಡಗಿಕೊಂಡರು. ನವಕರ್ನಾಟಕದ 'ಹೊಸತು' ಪತ್ರಿಕೆಯ ಡಿಸೆಂಬರ್ ೨೦೧೬ರ ಸಂಚಿಕೆಗಾಗಿ 'ನೊಬೆಲ್ ಪ್ರಶಸ್ತಿಯ ವಿಜ್ಞಾನ ತಾಣಗಳು (೨೦೧೬)' ಎಂಬ ಸೂಕ್ಷ್ಮ ಒಳನೋಟ ಬೀರುವ ಲೇಖನ ಬರೆದರು. 'ಈ ಲೇಖನದಲ್ಲಿ ಹೊಸ ಪದಗಳನ್ನು ಬಳಸಿದ್ದೇನೆ, ಗಮನಿಸಿದ್ದೀರಾ ?' ಎಂದು ಗೋಕಾಕ್‌ನಿಂದ ಫೋನ್ ಮಾಡಿದ್ದರು. ನಾನಾಗಲೇ ಅದನ್ನು ಓದಿದ್ದೇನೆ ಎಂದಾಗ, ಅವರ ಸಂತೋಷಕ್ಕೆ ಬಿಕ್ಕಳಿಕೆ ಅಡ್ಡಬರುತ್ತಿತ್ತು. ಮುಂದಿನ ಸಂಪರ್ಕ ಕಡಿದು ಹೋಗಿತ್ತು. ಇದೇ ಅವರ ಕೊನೆಯ ಲೇಖನ.

ಅವರು ಭೂಮಿಗೂ ವಿದಾಯ ಹೇಳಿ ಡಿಸೆಂಬರ್ ೧೮ರ ಭಾನುವಾರ ರಾತ್ರಿ ಹೊರಟೇ ಬಿಟ್ಟರು. ಆತ್ಮಕಥೆ ಬರೆಯಿರಿ ಎಂದು ಗೋಗರೆದಿದ್ದೆ. ಅವರು ನಕ್ಕಿದ್ದರು. ಅದಕ್ಕೆ ಏನರ್ಥವಿತ್ತೋ ಈಗ ತಿಳಿಯದು. ಈಗ ಅವರದು ಶಾಶ್ವತ ಮೌನ. ಅವರು ಮಿತ್ರರಿಗೆ, ಹಿರಿಯರಿಗೆ, ಕಿರಿಯರಿಗೆ ಮತ್ತು ಸಮಕಾಲೀನರಿಗೆ ಬರೆದ ಪತ್ರಗಳಲ್ಲಿ ಮಾತ್ರ ಸದ್ಯ ಅವರು ಮಾತನಾಡುತ್ತಿದ್ದಾರೆ.

*(ಚಿತ್ರಕೃಪೆ : ಕೆ. ಪಿ. ಸ್ವಾಮಿ)*

**ಟಿ. ಆರ್. ಅನಂತರಾಮು**
ನಂ. ೫೩೪, ೭೦ನೇ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ, ಕುಮಾರಸ್ವಾಮಿ ಬಡಾವಣೆ
೧ನೇ ಹಂತ, ಬೆಂಗಳೂರು – ೫೬೦ ೧೧೧

# ಸೋತ ಸಮರ

**ಸ್ವೆಟ್ಲಾನಾ ಅಲೆಕ್ಸಿಯೇವಿಚ್**

ಕನ್ನಡಕ್ಕೆ
**ಕೆ. ರಘುನಾಥ್**

**ಈ** ವೇದಿಕೆಯ ಮೇಲೆ ನಾನು ಏಕಾಕಿಯಲ್ಲ. ನನ್ನ ಸುತ್ತ ನೂರಾರು ದನಿಗಳಿವೆ. ಅವು ನನ್ನ ಬಾಲ್ಯದಿಂದಲೇ ನನ್ನ ಜೊತೆಗಿವೆ. ನಾನೊಂದು ಹಳ್ಳಿಯಲ್ಲಿ ಬೆಳೆದೆ. ಮಕ್ಕಳಾದ ನಾವು ಹೊರಗೆ ಆಟವಾಡುತ್ತಿದ್ದೆವು. ಸಂಜೆಯಾಗುತ್ತಿದ್ದಂತೆ ಬಳಲಿದ ಹಳ್ಳಿ ಹೆಣ್ಣುಗಳು ತಮ್ಮ ಮನೆಗಳ ಮುಂದಿನ ಬೆಂಚಿನ ಮೇಲೆ ಕುಳಿತು ಮಾತನಾಡುತ್ತಿದ್ದ ದನಿಗಳು ನಮ್ಮನ್ನು ಅಯಸ್ಕಾಂತದಂತೆ ಸೆಳೆಯುತ್ತಿದ್ದವು. ಅವರಲ್ಲಿ ಯಾರಿಗೂ ಗಂಡಂದಿರಾಗಲೀ, ತಂದೆಯರಾಗಲೀ, ಅಣ್ಣ–ತಮ್ಮಂದಿರಾಗಲೀ ಇರಲಿಲ್ಲ. ಎರಡನೇ ಮಹಾಯುದ್ಧದ ನಂತರ ನಮ್ಮ ಹಳ್ಳಿಯಲ್ಲಿ ಗಂಡಸರನ್ನು ನೋಡಿದ ನೆನಪೇ ಇಲ್ಲ. ನಮ್ಮ ಹಳ್ಳಿಯಲ್ಲಿ ನಲವತ್ತರ ಸಮರದಲ್ಲಿ ಎಲ್ಲರೂ ಹತರಾಗಿದ್ದರು. ರಣಾಂಗಣದ ಮುಂಚೂಣಿಯಲ್ಲಿ ಹೋರಾಡುತ್ತಲೋ ಅಥವಾ ಒಂದು ಪಕ್ಷದ ಪರವಾಗಿ ಹೋರಾಡುತ್ತಲೋ ಮಡಿದವರು ಅವರು. ಹತರಾದ ನಾಲ್ವರಲ್ಲಿ ಒಬ್ಬರು ಬೆಲರೂಸ್ಯನ್ ಆಗಿದ್ದರು. ಸಮರಾನಂತರ ಮನೆಯ ಹೆಂಗಸರ ಪ್ರಪಂಚದಲ್ಲಿ ನಾವು ಬದುಕಿದ್ದೆವು. ನನಗೆ ಬಹುತೇಕ ನೆನಪಿರುವುದೆಂದರೆ ಆ ಹೆಂಗಸರು ಸಾವಿನ ಬಗ್ಗೆ ಅಲ್ಲ, ಪ್ರೇಮದ ಬಗ್ಗೆ ಮಾತನಾಡುತ್ತಿದ್ದುದು. ತಮ್ಮ ಗಂಡಸರು ಯುದ್ಧಕ್ಕೆ ಹೊರಡುವ ಮುಂಚಿನ ದಿನ ಅವರಿಗೆ ವಿದಾಯ ಹೇಳಿದ್ದನ್ನು ಮತ್ತು ಅವರಿಗಾಗಿ ಕಾಯುತ್ತಿದ್ದ ಬಗೆಯನ್ನು, ಈಗಲೂ ಅವರಿಗಾಗಿ ಕಾಯುತ್ತಲೇ ಇರುವ ಕತೆಗಳನ್ನು ಅವರು ಹೇಳುತ್ತಿದ್ದರು. ವರ್ಷಗಳೇ ಕಳೆದುಹೋಗಿವೆಯಾದರೂ ಅವರು ಈಗಲೂ ಕಾಯುತ್ತಲೇ ಇದ್ದಾರೆ. "ಅವನು ಕೈಕಾಲು ಕಳೆದುಕೊಂಡಿದ್ದರೂ ಪರವಾಗಿಲ್ಲ ಅವನನ್ನು ನಾನು ಎತ್ತಿಕೊಂಡು ಒಯ್ಯುತ್ತೇನೆ" ಕೈಗಳಿಲ್ಲ... ಕಾಲುಗಳಿಲ್ಲ... ನಾನು ಬಾಲ್ಯದಿಂದಲೇ ಬಹುಶಃ ಪ್ರೇಮವೆಂದರೇನೆಂದು ಬಲ್ಲೆ ಎಂದು ನನಗನ್ನಿಸುತ್ತದೆ.

ನಾನು ಕೇಳಿದ ಅಂತಹ ಕೆಲವು ಕಟು ಮಧುರ ರಾಗಗಳು ಇಂತಿವೆ :

**ಮೊದಲ ಧ್ವನಿ**

"ನಿನಗೆ ಯಾಕೆ ತಿಳಿಯಬೇಕು ಇವೆಲ್ಲಾ? ನಾನು ನನ್ನ ಗಂಡನನ್ನು ಸಮರದ ನಡುವೆ ಭೆಟ್ಟಿಯಾದೆ. ಬರ್ಲಿನ್‌ಗೆ ಹೋಗುವ ಟ್ಯಾಂಕಿನಲ್ಲಿ ನಾನಿದ್ದೆ. ನಾವು ರೈಕ್‌ಸ್ಟ್ಯಾಗ್ ಬಳಿ ನಿಂತಿದ್ದೆವು. ಅವನು ಇನ್ನೂ ನನ್ನ ಗಂಡನಾಗಿರಲಿಲ್ಲ. ಅವನು ಹೇಳಿದ, 'ನಾವು ಮದುವೆಯಾಗೋಣ. ನಾನು ನಿನ್ನ ಪ್ರೀತಿಸುತ್ತೇನೆ.' ಅದನ್ನು ಕೇಳಿ ನನಗೆ ಕೋಪ ಉಕ್ಕಿತು. ಕೊಳೆ, ಕೊಚ್ಚೆ ಮತ್ತು ರಕ್ತದ ಹೊಳೆಯ ನಡುವೆ ನಾವು ಬದುಕುತ್ತಿದ್ದೆವು. ಇಡೀ ಯುದ್ಧದ ನಡುವೆ ಅಶ್ಲೀಲ ಮಾತುಗಳನ್ನು ಬಿಟ್ಟರೆ ಬೇರೇನೂ ಕೇಳುತ್ತಿರಲಿಲ್ಲ. ನಾನು ಹೇಳಿದೆ, "ಮೊದಲು ನನ್ನನ್ನು ಒಬ್ಬ ಹೆಂಗಸನ್ನಾಗಿ ಮಾಡು. ನನಗೆ ಹೂಗಳನ್ನು ಕೊಡು. ಸವಿಯಾದ ಮಾತುಗಳನ್ನು ಆಡು. ನನ್ನ ಓಡಾಟವೆಲ್ಲಾ ನಿಂತಾಗ ನನಗಾಗಿ ಒಂದು (ಮದುವೆಯ) ಉಡುಪನ್ನು ನಾನೇ ಹೊಲೆದುಕೊಳ್ಳುವೆ." ನನಗೆಷ್ಟು ಕೋಪಬಂದಿತ್ತೆಂದರೆ ಅವನನ್ನು ಹೊಡೆಯಬೇಕೆನಿಸಿತು. ಅದರ ಅರಿವಾಯಿತು ಅವನಿಗೆ. ಅವನ ಒಂದು ಕೆನ್ನೆ ಸುಟ್ಟುಹೋಗಿತ್ತು. ಅದು ಇಡೀ ಗಲ್ಲವನ್ನು ವ್ಯಾಪಿಸಿತ್ತು. ಆ ಗಾಯಗಳ ಮೇಲೆ ಕಣ್ಣೀರು ಹರಿಯುತ್ತಿತ್ತು. 'ಆಗಲಿ, ನಾನು ನಿನ್ನನ್ನು ಮದುವೆಯಾಗುತ್ತೇನೆ' ಎಂದು ಹೇಳಿದೆ. ನಾನು ಹಾಗೆ ಹೇಳಿದೆನೆಂದು ನನಗೇ ನನ್ನ ಬಗ್ಗೆ ನಂಬಿಕೆಯಾಗಲಿಲ್ಲ. ನಮ್ಮ ಸುತ್ತ ಬೂದಿ ಮತ್ತು ಪುಡಿ ಪುಡಿಯಾದ ಇಟ್ಟಿಗೆಗಳಲ್ಲದೆ ಬೇರೇನೂ ಇರಲಿಲ್ಲ. ಕೆಲವೇ ಶಬ್ದಗಳಲ್ಲಿ ಹೇಳಬೇಕೆಂದರೆ–ಸಮರ.

**ಎರಡನೆಯ ಧ್ವನಿ**

"ಆಗ ನಾವು ಚೆರ್ನೋಬಿಲ್ ನ್ಯೂಕ್ಲಿಯರ್ ಸ್ಥಾವರದ ಬಳಿ ಇದ್ದೆವು. ನಾನು ಬೇಕರಿಯೊಂದರಲ್ಲಿ ಪೇಸ್ಟ್ರಿಗಳನ್ನು ಮಾಡುತ್ತಿದ್ದೆ. ನನ್ನ ಗಂಡ ಫೈರ್‌ಮನ್ ಆಗಿದ್ದ. ಆಗ ತಾನೇ ನಮ್ಮ ಮದುವೆಯಾಗಿತ್ತು. ನಾವು ಅಂಗಡಿಗೆ ಹೋಗುವಾಗಲೂ ಕೈಕೈ ಹಿಡಿದು ಓಡಾಡುತ್ತಿದ್ದೆವು. ರಿಆ್ಯಕ್ಟರ್ ಸ್ಫೋಟಗೊಂಡಾಗ ನನ್ನ ಗಂಡ ಅಗ್ನಿಶಾಮಕ ಸ್ಟೇಷನ್ನಿನಲ್ಲಿದ್ದ. ಅವರು ಉಟ್ಟ ಬಟ್ಟೆಯಲ್ಲೇ ಕಾರ್ಯೋನ್ಮುಖರಾಗಬೇಕಾಯಿತು. ನ್ಯೂಕ್ಲಿಯರ್ ಶಕ್ತಿ ಕೇಂದ್ರ ಸ್ಫೋಟಗೊಂಡಿತ್ತು. ಅವರಿಗೆ ಯಾವುದೇ ವಿಶೇಷ ಉಡುಗೆಯನ್ನು ಕೊಡಲಿಲ್ಲ. ನಾವು ಬದುಕಿದ್ದೇ ಹಾಗೆ. ...ನಿಮಗೆ ಗೊತ್ತೇ, ಬೆಂಕಿಯನ್ನು ನಂದಿಸಲು ಅವರು ಇಡೀ ರಾತ್ರಿ ಕೆಲಸ ಮಾಡಬೇಕಾಯಿತು. ಇಡೀ ರಾತ್ರಿ ಹೋರಾಡುವುದರಲ್ಲಿ ಅವರು ದುಸ್ತರವಾದ ವಿಕಿರಣಕ್ಕೆ ಒಳಗಾಗಿದ್ದರು. ಮರುದಿನ ಅವರನ್ನು ಮಾಸ್ಕೋಗೆ ನೇರವಾಗಿ ವಿಮಾನದಲ್ಲಿ ಕೊಂಡೊಯ್ಯಲಾಯಿತು. ತೀವ್ರವಾದ ವಿಕಿರಣ ಕಾಯಿಲೆಗೆ ಒಳಗಾದವರು ಕೆಲವು ವಾರಗಳಿಗಿಂತ ಹೆಚ್ಚು ಬದುಕಲು ಸಾಧ್ಯವಿಲ್ಲ. ನನ್ನ ಗಂಡ ಬಲಶಾಲಿ ಆಟಗಾರ. ಅವನು ಎಲ್ಲರಿಗಿಂತ ಕೊನೆಗೆ ಕೊನೆಯುಸಿರೆಳೆದ.



ನಮ್ಮ ಬದುಕು ಪ್ರಕ್ಷುಬ್ಧತೆ ಮತ್ತು ಅಟ್ಟಹಾಸಗಳ ನಡುವೆ ಓಲಾಡುತ್ತಿದೆ... ಕಮ್ಯುನಿಸಂ ಸಾಯಲಿಲ್ಲ. ಶವ ಇನ್ನೂ ಜೀವಂತವಾಗಿದೆ.

ನಾನು ಮಾಸ್ಕೋಗೆ ಹೋದಾಗ ಅವನು ವಿಶೇಷವಾದ ಕೋಣೆಯಲ್ಲಿದ್ದ. ಅಲ್ಲಿಗೆ ಯಾರನ್ನೂ ಬಿಡುವುದಿಲ್ಲ ಎಂದರು. 'ಆದರೆ ನಾನು ಅವನನ್ನು ಪ್ರೀತಿಸುತ್ತೇನೆ' ಎಂದು ಬೇಡಿಕೊಂಡೆ. ಸೈನಿಕರು ಅವನನ್ನು ಉಪಚರಿಸುತ್ತಿದ್ದಾರೆ ಎಲ್ಲಿಗೆ ಹೋಗುತ್ತಿದ್ದೇನೆ ಎಂದುಕೊಂಡಿರುವೆ ನೀನು ?"

'ನಾನು ಅವನನ್ನು ಪ್ರೀತಿಸುತ್ತೇನೆ.'

ಅವರು ನನ್ನೊಂದಿಗೆ ವಾದಕ್ಕೆ ಇಳಿದರು.

'ನೀನು ಪ್ರೀತಿಸಿದ ವ್ಯಕ್ತಿಯಲ್ಲ ಅವನು. ಅವನು ನಿರ್ಮಲೀಕರಣಕ್ಕೆ ಒಳಗಾಗಬೇಕಾದ ಒಂದು ವಸ್ತು, ತಿಳಿಯಿತೇ ?'

'ನಾನು ಪ್ರೀತಿಸುವೆ... ನಾನು ಪ್ರೀತಿಸುವೆ.' ಮತ್ತೆ ಮತ್ತೆ ಅದನ್ನೇ ಹೇಳುತ್ತಾ ಹೋದೆ. ರಾತ್ರಿಯಲ್ಲಿ ನಾನು ಮೇಲ್ಛಾವಣಿ ಹಾರಿ ನೋಡಲು ಪ್ರಯತ್ನಿಸಿದೆ. ಕಾವಲುಗಾರರಿಗೆ ನೋಡಲು ಅವಕಾಶ ಕೊಡಬೇಕೆಂದು ಹಣ ಕೊಟ್ಟೆ... ಅವನನ್ನು ನಾನು ಬಿಡಲಿಲ್ಲ. ...ಕೊನೆಯ ಕ್ಷಣದವರೆಗೆ ನಾನು ಅವನೊಂದಿಗೇ ಇದ್ದೆ. ಅವನ ಮರಣದ ಕೆಲವು ತಿಂಗಳನಂತರ ಹೆಣ್ಣುಮಗುವೊಂದಕ್ಕೆ ಜನ್ಮವಿತ್ತೆ. ಅವಳು ಕೆಲವು ದಿನಗಳು ಮಾತ್ರ ಬದುಕಿದಳು. ಅವಳ ಬರವಿನ ಬಗ್ಗೆ ಎಷ್ಟು ರೋಮಾಂಚಿತ ರಾಗಿದ್ದೆವು ನಾವು ? ಆದರೆ ಅವಳನ್ನು ನಾನು ಕೊಂದೆ. ಅವಳು ನನ್ನನ್ನು ಉಳಿಸಿದಳು. ವಿಕಿರಣಗಳೆಲ್ಲವನ್ನೂ ಹೀರಿಕೊಂಡಿದ್ದಳು. ಅವಳು ಎಷ್ಟು ಪುಟಾಣಿ ಯಾಗಿದ್ದಳು ! ಪುಟ್ಟ ಪುಟ್ಟ ಪುಟ್ಟಿ... ಅವರಿಬ್ಬರನ್ನೂ ನಾನು ಪ್ರೀತಿಸಿದ್ದೆ. ಪ್ರೀತಿಯನ್ನು ಹೇಗೆ ತಾನೇ ಕೊಲ್ಲಲು ಸಾಧ್ಯ ? ಯಾಕೆ ಪ್ರೀತಿ ಮತ್ತು ಸಾವು ಅಷ್ಟು ಹತ್ತಿರ ? ಅವು ಯಾವಾಗಲೂ ಜೊತೆಯಾಗಿಯೇ ಬರುತ್ತವೆ ? ಯಾರು ತಾನೇ ಅದನ್ನು ವಿವರಿಸಬಲ್ಲರು ? ಸಮಾಧಿಯ ಬಳಿ ನಾನು ಮೊಣಕಾಲೂರಿ ಕುಸಿದಿದ್ದೇನೆ.

**ಮೂರನೆಯ ಧ್ವನಿ**

"ಮೊದಲ ಸಲ ನಾನೊಬ್ಬ ಜರ್ಮನಿಯವನನ್ನು ಕೊಂದೆ. ನನಗಾಗ ಹತ್ತು ವರ್ಷ. ಒಂದು ಪಕ್ಷದವರು ಆಗಲೇ ನನ್ನನ್ನು ತಮ್ಮ ಕಾರ್ಯ ಯೋಜನೆಯೊಳಗೆ ಸೇರಿಸಿಕೊಂಡಿದ್ದರು. ಆ ಜರ್ಮನ್ ನೆಲದ ಮೇಲೆ ಒರಗಿದ್ದ. ಗಾಯಗೊಂಡಿದ್ದ.



ನನಗೆ ಅವನ ಕೈಯಲ್ಲಿದ್ದ ಪಿಸ್ತೂಲನ್ನು ತೆಗೆದುಕೊಳ್ಳುವಂತೆ ಹೇಳಿದರು. ನಾನು ಅದನ್ನು ತೆಗೆದುಕೊಳ್ಳಲು ಧಾವಿಸಿದೆ. ಆದರೆ ಅವನು ಎರಡೂ ಕೈಗಳಿಂದ ಪಿಸ್ತೂಲನ್ನು ಹಿಡಿದುಕೊಂಡು ನನ್ನೆದೆಗೆ ಗುರಿಮಾಡಿದ. ಆದರೆ ಅವನಿಗೆ ಅದರಿಂದ ಹೊಡೆಯಲು ಸಾಧ್ಯವಾಗಲಿಲ್ಲ. ನಾನು ಹೊಡೆದೆ.

"ಯಾರನ್ನಾದರೂ ಕೊಲ್ಲಲು ನನಗೆ ಭಯವಾಗುತ್ತಿರಲಿಲ್ಲ. ಯುದ್ಧದ ವೇಳೆ ನಾನು ಅವನನ್ನು ನೆನಪಿಸಿಕೊಳ್ಳಲಿಲ್ಲ. ಲೆಕ್ಕವಿಲ್ಲದಷ್ಟು ಜನರನ್ನು ಕೊಲ್ಲಲಾಯಿತು. ಸತ್ತವರ ನಡುವೆ ನಾವು ಬದುಕಿದ್ದೆವು. ಹಲವು ವರ್ಷಗಳ ನಂತರ ಇದ್ದಕ್ಕಿದ್ದಂತೆ ಒಂದು ದಿನ ಆ ಜರ್ಮನ್ ನನ್ನ ಕನಸಿನಲ್ಲಿ ಎದುರಾದ. ನನಗೆ ಆಶ್ಚರ್ಯವಾಯಿತು. ಧುತ್ತೆಂದು ಅದು ಎದುರಾಗಿತ್ತು. ಮತ್ತೆ ಮತ್ತೆ ಅದೇ ಕನಸು ! ನಾನು ಮೇಲೆ ಹಾರುತ್ತಿದ್ದೆ. ಆದರೆ ಅವನು ನನ್ನನ್ನು ಹಾರಲು ಬಿಡುತ್ತಿರಲಿಲ್ಲ. ಮೇಲೇರುತ್ತಿದ್ದಂತೆ ನನ್ನನ್ನು ಎಳೆಯುತ್ತಿದ್ದ ನಾನು ಅವನೊಂದಿಗೆ ಕೆಳಗೆ ಬೀಳುತ್ತಿದ್ದೆ. ನಾನು ಯಾವುದೋ ಒಂದು ರೀತಿಯ ಹಳ್ಳದಲ್ಲಿ ಬಿದ್ದಿರುತ್ತಿದ್ದೆ ಇಲ್ಲವೇ ಮೇಲೇಳಲು, ನಿಂತುಕೊಳ್ಳಲು ಪ್ರಯತ್ನಿಸುತ್ತಿದ್ದೆ. ಆದರೆ ಅವನು ನನ್ನನ್ನು ಬಿಡುತ್ತಿರಲಿಲ್ಲ. ಅವನಿಂದಾಗಿ ನಾನು ಹಾರಿ ಹೋಗಲು ಆಗಲಿಲ್ಲ...

ಅದೇ ಕನಸು ಮತ್ತೆ ಮತ್ತೆ ದಶಕಗಳ ಕಾಲ ನನ್ನನ್ನು ಕಾಡುತ್ತಿತ್ತು...

ನನ್ನ ಮಗನಿಗೆ ಆ ಕನಸನ್ನು ಹೇಳಲಾಗಲಿಲ್ಲ. ಅವನು ಚಿಕ್ಕವನಾಗಿದ್ದ. ಅವನಿಗೆ ನಾನು ಹೇಳಲಿಲ್ಲ. ಅವನಿಗೆ ಕಿನ್ನರ ಲೋಕದ ಕತೆಗಳನ್ನು ಓದಿ ಹೇಳುತ್ತಿದ್ದೆ. ನನ್ನ ಮಗ ಈಗ ಬೆಳೆದು ದೊಡ್ಡವನಾಗಿದ್ದಾನೆ. ಆದರೂ ನನಗೆ ಈಗಲೂ ಹೇಳಲಾಗುತ್ತಿಲ್ಲ..."

ಫ್ಲಾಬರ್ಟ್ ತನ್ನನ್ನು ತಾನು ಮಾನವ ಲೇಖನಿ ಎಂದು ಕರೆದುಕೊಂಡಿದ್ದಾನೆ. ನಾನು ಮಾನವ ಕಿವಿ ಎಂದು ಹೇಳಿಕೊಳ್ಳಲೇ ? ನಾನು ರಸ್ತೆಗಳಲ್ಲಿ ನಡೆಯುವಾಗೆಲ್ಲಾ ಶಬ್ದಗಳು, ನುಡಿಗಟ್ಟುಗಳು, ಆಶ್ಚರ್ಯಸೂಚಕಗಳು. ನಾನು ಯಾವಾಗಲೂ ಯೋಚಿಸುವೆ ಎಷ್ಟೆಲ್ಲಾ ಕಾದಂಬರಿಗಳು ಪತ್ತೆಯಾಗದೆ ಮಾಯವಾಗಿವೆ ! ಕತ್ತಲೆಯಲ್ಲಿ ಕರಗಿಹೋಗಿವೆ ? ಮನುಷ್ಯ ಸಂವಾದದ ಮುಖವನ್ನು ನಮ್ಮಿಂದ ಸಾಹಿತ್ಯದಲ್ಲಿ ಸೆರೆಹಿಡಿಯುವುದು ಸಾಧ್ಯವಾಗಿಲ್ಲ. ನಾವು ಅದನ್ನು ಮೆಚ್ಚುವುದಿಲ್ಲ. ನಮಗೆ ಅದರಿಂದ ಆಶ್ಚರ್ಯವಾಗುವುದಿಲ್ಲ. ಸಂತೋಷವೂ ಆಗುವುದಿಲ್ಲ. ಆದರೆ ಅವು ನನ್ನನ್ನು ಮರುಳುಗೊಳಿಸಿವೆ ಮತ್ತು ಸೆರೆಹಿಡಿದಿವೆ. ನನಗೆ ಜನರು ಮಾತನಾಡುವ ರೀತಿ ಖುಷಿಕೊಡುತ್ತದೆ. ಮನುಷ್ಯನ ಒಂಟಿ ದನಿಯನ್ನು ನಾನು ಪ್ರೀತಿಸುವೆ. ಅದು ನನಗೆ ಪ್ರೀತಿಯ ಪರಮಾವಧಿ. ಅದೇ ನನ್ನ ಅನುರಾಗ ಈ ವೇದಿಕೆಯ ದಾರಿ ಬಹಳ ದೂರ. ನಾನು ಹೆಚ್ಚುಕಡಿಮೆ ನಲವತ್ತು ವರುಷಗಳಿಂದ ವ್ಯಕ್ತಿಯಿಂದ ವ್ಯಕ್ತಿಗೆ, ದನಿಯಿಂದ ದನಿಗೆ ಚಲಿಸುತ್ತಾ ಈ ವೇದಿಕೆಗೆ ಬಂದಿದ್ದೇನೆ. ಆದರೆ ನಾನು ಯಾವಾಗಲೂ ಈ ದಾರಿಯನ್ನೇ ಅರಸಿ ಬಂದಿದ್ದೇನೆಂದು ಹೇಳಲಾರೆ. ಅನೇಕ ಸಲ ನಾನು ಮನುಷ್ಯರಿಂದ ಆಘಾತಗೊಂಡಿದ್ದೇನೆ, ಭೀತಳಾಗಿದ್ದೇನೆ. ನಾನು ಆನಂದ ಮತ್ತು ಜಿಗುಪ್ಸೆಯನ್ನೂ ಅನುಭವಿಸಿದ್ದೇನೆ. ಕೆಲವು ಸಲ ನಾನು ಕೇಳಿದ್ದನ್ನು ಮರೆತು, ಮುಗ್ಧವಾಗಿ ಬದುಕಿದ ನನ್ನ ದಿನಗಳಿಗೆ ಮರಳಲು ಪ್ರಯತ್ನಿಸಿದ್ದೇನೆ. ಆದರೂ ಮತ್ತೆ ಮತ್ತೆ ನನಗೆ ಜನರಲ್ಲಿನ ಭವ್ಯತೆಯ ಅರಿವಾಗಿದೆ. ಆಗೆಲ್ಲಾ ನನಗೆ ಅಳಬೇಕೆನಿಸಿದೆ.

ನಾನು ಐದು ಪುಸ್ತಕಗಳನ್ನು ಬರೆದಿದ್ದೇನೆ. ಆದರೆ ಅವುಗಳನ್ನೆಲ್ಲಾ ಒಂದೇ ಪುಸ್ತಕವೆಂದು ಭಾವಿಸುವೆ – ಕಾಲ್ಪನಿಕ ಆದರ್ಶ ರಾಜ್ಯದ (ಯುಟೋಪಿಯಾದ) ಇತಿಹಾಸ ಕುರಿತ ಪುಸ್ತಕ...

ವರ್ಲಾಂ ಶಲಾಮಾವ್ ಒಮ್ಮೆ, "ನಾನು ಒಂದು ಮಹಾಯುದ್ಧದಲ್ಲಿ ಪಾಲ್ಗೊಂಡಿದ್ದೆ. ಮಾನವತೆಯ ಪ್ರಾಮಾಣಿಕ ಪುನಶ್ಚೇತನಕ್ಕಾಗಿ ಆ ಯುದ್ಧ ಸೋಲನ್ನು ಒಪ್ಪಿಕೊಳ್ಳಬೇಕಾಯಿತು" ಎಂದು ಬರೆದ. ನಾನು ಆ ಯುದ್ಧದ ಇತಿಹಾಸವನ್ನು ಮರು ನಿರ್ಮಾಣ ಮಾಡಬೇಕು. ಅದರ ಸೋಲುಗೆಲುವುಗಳನ್ನು. ಜನತೆ ಹೇಗೆ ಭೂಮಿಯ ಮೇಲೆ ಸ್ವರ್ಗವನ್ನು ನಿರ್ಮಿಸಲು ಬಯಸಿತ್ತು ಎಂಬುದರ ಇತಿಹಾಸವನ್ನು. ಸ್ವರ್ಗ ! ಸೂರ್ಯನ ನಗರ ! ಆದರೆ ಕೊನೆಗೆ ಉಳಿದಿದ್ದೆಂದರೆ ಕೇವಲ ರಕ್ತದ ಸಾಗರ, ಕೋಟ್ಯಂತರ ಮನುಷ್ಯ ಜೀವಿಗಳ ನಾಶ. ಅದೊಂದು ಕಾಲವಿತ್ತು ಇಪ್ಪತ್ತನೆಯ ಶತಮಾನದಲ್ಲಿ ಕಮ್ಯುನಿಸಂನೊಂದಿಗೆ ಹೋಲಿಸ ಬಹುದಾದ ಇನ್ನೊಂದು ರಾಜಕೀಯ ಸಿದ್ಧಾಂತವಿರಲಿಲ್ಲ (ಅದೇ ಅಕ್ಟೋಬರ್ ಕ್ರಾಂತಿಯ ಸಂಕೇತ). ಅದನ್ನು ಬಿಟ್ಟರೆ ಬೇರೆ ಯಾವುದೂ ಇಲ್ಲವೇ ಇಲ್ಲ ಎಂದು

ಭಾವಿಸಿದ ಪಾಶ್ಚಾತ್ಯ ಬುದ್ಧಿಜೀವಿಗಳನ್ನು ಆಕರ್ಷಿಸಿದ ಕಾಲ. ಪ್ರಪಂಚದ ಜನರೆಲ್ಲಾ ಅದಕ್ಕೆ ಭಾವನಾತ್ಮಕವಾಗಿ, ದೃಢವಾಗಿ ಒಡ್ಡಿಕೊಂಡ ಕಾಲ. ರೇಮಂಡ್ ಆ್ಯರಾನ್ ರಷ್ಯನ್ ಕ್ರಾಂತಿಯನ್ನು 'ಬುದ್ಧಿಜೀವಿಗಳ ಅಫೀಮು' ಎಂದು ಕರೆದಿದ್ದಾನೆ. ಆದರೆ ಕಮ್ಯುನಿಸಂಗೆ ಎರಡು ಸಾವಿರ ವರ್ಷಗಳ ಇತಿಹಾಸವಿದೆ. ಅದನ್ನು ನಾವು ಪ್ಲೇಟೋನ ಬೋಧನೆಗಳಲ್ಲೇ ಗುರುತಿಸಬಹುದು. ಆದರ್ಶ ರಾಜ್ಯದ ಪರಿಕಲ್ಪನೆಯಲ್ಲಿ; ಅರಿಸ್ಟೋಫನೀಸ್‌ನ 'ಎಲ್ಲವೂ ಎಲ್ಲರಿಗಾಗಿ' ಎನ್ನುವ ಕನಸುಗಳಲ್ಲಿ... ಥಾಮಸ್ ಮೋರ್ ಮತ್ತು ಟೊಮ್ಯಾಸೊ ಕ್ಯಾಂವನೆಲ್ಲಾ... ನಂತರ ಸೇಂಟ್-ಸೈಮನ್, ಚಾರ್ಲ್ಸ್, ಫೂರಿಯೆರ್ ಮತ್ತು ರಾಬರ್ಟ್ ಓವನ್ ಮುಂತಾದವರಲ್ಲಿ ಇದನ್ನು ಕಾಣಬಹುದು. ರಷ್ಯಾದ ಚೈತನ್ಯದಲ್ಲಿಯೇ ಈ ಕನಸುಗಳನ್ನು ನನಸು ಮಾಡಬಲ್ಲ ಯಾವುದೋ ಶಕ್ತಿ ಇದೆ.

'ಕೆಂಪು ಸಾಮ್ರಾಜ್ಯ' ಹೋಯಿತು ಆದರೆ 'ಕೆಂಪು' ಮನುಷ್ಯ ಇನ್ನೂ ಉಳಿದಿದ್ದಾನೆ ಮತ್ತು ಉಳಿಯುತ್ತಾನೆ. ನನ್ನ ತಂದೆ ಈಚೆಗೆ ತೀರಿಕೊಂಡರು. ಕೊನೆಯವರೆಗೆ ಅವರಿಗೆ ಕಮ್ಯುನಿಸಂನಲ್ಲಿ ವಿಶ್ವಾಸವಿತ್ತು. ಅದರ ಸದಸ್ಯತ್ವದ ಕಾರ್ಡನ್ನೂ ಉಳಿಸಿಕೊಂಡಿದ್ದರು. ನಾನೇನೋ ನನ್ನನ್ನು ಸೊವೊಕ್ ಎಂದು ಕರೆದುಕೊಳ್ಳಲಾರೆ. ನಾನು ಸೋವಿಯೆತ್ ರಷ್ಯಾವನ್ನು ಇಡಿಯಾಗಿ ಸುತ್ತಾಡಿದೆ. ಸಾವಿರಾರು ಧ್ವನಿಮುದ್ರಿಕೆಗಳನ್ನು ಮಾಡಿದೆ. ಅದು ಸಮಾಜವಾದವಾಗಿತ್ತು. ಅದೇ ನಮ್ಮ ಸರಳ ಬದುಕಾಗಿತ್ತು. ನಾನು ಆಂತರಿಕ ಸಮಾಜವಾದದ ಇತಿಹಾಸದ ಪ್ರತಿಯೊಂದು ತುಣುಕುಗಳನ್ನೂ ಸಂಗ್ರಹಿಸಿದೆ ಅದು ಹೇಗೆ ಮನುಷ್ಯರ ಪ್ರಾಣದೊಡನೆ ಚೆಲ್ಲಾಟವಾಡಿತು ಎಂಬ ಇತಿಹಾಸವನ್ನು. ಅದು ನನ್ನನ್ನು ಮನುಷ್ಯ ಜೀವಿಯೆಂಬ ಒಂದು ಸಣ್ಣ ಅವಕಾಶದತ್ತ ಸೆಳೆದೊಯ್ಯಿತು... ಏಕಾಂಗಿ ಮನುಷ್ಯನ ಕಡೆಗೆ... ವಾಸ್ತವವಾಗಿ ಎಲ್ಲವೂ ಸಂಭವಿಸುವುದು ಅಲ್ಲಿಯೇ.

ಯುದ್ಧಾನಂತರ ಥಿಯೋಡರ್ ಅಡೋರ್ನೊ ಆಘಾತಗೊಂಡು "ಔಶ್‌ವಿಟ್ಸ್ ನಂತರ ಕಾವ್ಯ ಬರೆಯುವುದೆಂದರೇನೆ ಬರ್ಬರತೆ" ಎಂದು ಬರೆದ. ನನ್ನ ಗುರು ಏಲ್ಸ್ ಅಡಾಮೊವಿಚ್ ಅವರನ್ನು ನಾನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಇವರ ಪ್ರಕಾರ ಇಪ್ಪತ್ತನೆಯ ಶತಮಾನದ ದುಃಸ್ವಪ್ನಗಳನ್ನು ಕುರಿತು ಬರೆಯುವುದೆಂದರೇನೆ ಅಪಚಾರಗೊಳಿಸಿದಂತೆ. ಯಾವುದನ್ನೂ ಕಲ್ಪಿಸದೆ ಸತ್ಯವನ್ನು ಅದು ಇದ್ದಂತೆ ಪ್ರಕಟಿಸಬೇಕು. ಅಂತಹ 'ಶ್ರೇಷ್ಠ ಸಾಹಿತ್ಯ'ದ ಅಗತ್ಯವಿದೆ. ಸಾಕ್ಷಿಗಳು ಮಾತನಾಡಬೇಕು. ನೀಶೆಯ ಮಾತುಗಳು ನೆನಪಿಗೆ ಬರುತ್ತವೆ. ಯಾವ ಕಲಾವಿದನೂ ವಾಸ್ತವಕ್ಕೆ ತಕ್ಕಂತೆ ಬದುಕಲಾರ. ಅದನ್ನು ಅವನು ಮೇಲೆತ್ತಲಾರ.

ನನಗೆ ಯಾವಾಗಲೂ ಕಾಡುವ ಸಂಗತಿಯೆಂದರೆ, ಸತ್ಯ ಯಾವಾಗಲೂ ಒಂದು ಹೃದಯಕ್ಕೆ, ಒಂದು ಮನಸ್ಸಿಗೆ ಒಗ್ಗುವಂತಹುದಲ್ಲ. ಅದು ಯಾವಾಗಲೂ ಛಿದ್ರಗೊಂಡಿರುತ್ತದೆ, ವ್ಯಾಪಕವಾಗಿರುತ್ತದೆ ಮತ್ತು ವೈವಿಧ್ಯಮಯವಾಗಿದೆ. ಅದು ಇಡೀ ಪ್ರಪಂಚದಲ್ಲಿ ಹರಡಿಕೊಂಡಿದೆ. ದಾಸ್ತಯೆವ್‌ಸ್ಕಿಯ ಪ್ರಕಾರ, ಸಾಹಿತ್ಯದಲ್ಲಿ ದಾಖಲೆಗೊಂಡಿದ್ದಕ್ಕಿಂತ ಹೆಚ್ಚು ಮಾನವಕುಲಕ್ಕೆ ಅದು ಗೊತ್ತಿದೆ. ಹಾಗಾದರೆ ನಾನು ಮಾಡುವುದಾದರೂ ಏನು? ನಾನು ದೈನಿಕ ಬದುಕಿನ ಭಾವನೆಗಳನ್ನು, ಆಲೋಚನೆಗಳನ್ನು, ಶಬ್ದಗಳನ್ನು ಸಂಗ್ರಹಿಸುತ್ತೇನೆ. ನಾನು ನನ್ನ ಕಾಲದ ಬದುಕನ್ನು ಸಂಗ್ರಹಿಸುತ್ತೇನೆ. ನನಗೆ ಜೀವದ / ಆತ್ಮದ ಇತಿಹಾಸದಲ್ಲಿ ಅದರ ಪ್ರತಿದಿನದ ದೈನಿಕ ಬದುಕಿನಲ್ಲಿ ಆಸ್ಥೆ ಇದೆ. ಬದುಕಿನ ಇಂತಹ ದೊಡ್ಡ ಚಿತ್ರವನ್ನು ಸಾಮಾನ್ಯವಾಗಿ ಇತಿಹಾಸ ನಿರಾಕರಿಸಿಬಿಡುತ್ತದೆ. ಕಳೆದುಕೊಂಡ ಇತಿಹಾಸದ ಜೊತೆ ನಾನು ಕೆಲಸ ಮಾಡುತ್ತೇನೆ. 'ನೀನು ಬರೆಯುತ್ತಿರುವುದು ಸಾಹಿತ್ಯವಲ್ಲ ದಾಖಲೆಪತ್ರ ಮಾತ್ರ' ಎಂದು ನನಗೆ ಸಾಮಾನ್ಯವಾಗಿ ಹೇಳುತ್ತಾರೆ. ಇಂದು, ಸಾಹಿತ್ಯವೆಂದರೇನು ? ಯಾರು ಅದಕ್ಕೆ ಉತ್ತರ ಕೊಡಬಲ್ಲರು ? ಎಂದಿಗಿಂತ ವೇಗವಾಗಿ ನಾವು ಬದುಕುತ್ತಿದ್ದೇವೆ. ಆಶಯವು ಆಕೃತಿಯನ್ನು ಛಿದ್ರಗೊಳಿಸುತ್ತದೆ. ಅದನ್ನು ಒಡೆದು ಬದಲಾಯಿಸುತ್ತದೆ. ಎಲ್ಲವೂ ಕಟ್ಟೆಯೊಡೆದು ಹರಿಯುತ್ತಿದೆ. ಸಂಗೀತ, ಚಿತ್ರಕಲೆ-ದಾಖಲೆಪತ್ರದ ಶಬ್ದಗಳು ಕೂಡ ಅವುಗಳ ಮೇರೆಗಳನ್ನು ಉಲ್ಲಂಘಿಸುತ್ತವೆ. ವಾಸ್ತವ ಮತ್ತು ಕಟ್ಟುಕತೆಗಳ ನಡುವೆ ಯಾವುದೇ ಎಲ್ಲೆಯಿಲ್ಲವಾಗಿದೆ. ಒಂದು ಇನ್ನೊಂದರೊಳಗೆ ಹರಿಯುತ್ತದೆ. ಸಾಕ್ಷಿಗಳು ನಿಷ್ಪಕ್ಷಪಾತಿಗಳಾಗಿಲ್ಲ. ಕತೆಯನ್ನು ಹೇಳುವಾಗ ಮನುಷ್ಯರು ಸೃಷ್ಟಿಸುತ್ತಾರೆ. ಶಿಲ್ಪಿ ಶಿಲೆಯೊಂದಿಗೆ ಸೆಣೆಸುವಂತೆ ಅವರು ಕಾಲದೊಂದಿಗೆ ಹೋರಾಡುತ್ತಾರೆ. ಅವರು ನಟರು ಮತ್ತು ಸೃಷ್ಟಿಕರ್ತರು.

ನನಗೆ ಹುಲುಮಾನವರ ಬಗ್ಗೆ ಆಸ್ಥೆ. ಅವರನ್ನು ನಾನು ಸಣ್ಣ, ದೊಡ್ಡ ಜನರೆಂದು




ಅಹಹಹಾ ದೇವಾ ಅಹಹಹಾ ದೇವೀ...
ಎತ್ತಣವಾಯಿತು ನಿಮ್ಮ ಸವಾರಿ ಇತ್ತಣ ದಿನಗಳಲಿ

ಕಾಡಿನ ದಾರೀಲಿ ಹೋಗ್ವಾಗ ಬರ್‍ವಾಗ
ನಮ್ದೂ ನಿಮ್ದೂ ಕುಶಲೋಪರಿ
ಹಂಗೇ ಒಂದ್ ಹೂವು ಸಿಂಗಾರಕ್ಕೆ
ಹಿಂಗೇ ಒಂದೂಟ ಬಂಗಾರಕ್ಕೆ
ಬಾಳಾ ಹಳೇ ನೆಂಟರಲ್ವೆ ನಾವೂ ನೀವೂ
ವರುಷ ವರುಷದ ಬಾಡೂಟಕ್ಕೇ
ನಮ್ಗೂನು ಮಹಲಿಲ್ಲ ನಿಮ್ಗೂನು ಸೂರಿಲ್ಲ
ಮೈಯೊಡ್ಡಿ ನಗುತಿದ್ವಿ ಬಿಸ್ಲು ಮಳೆ ಚಳಿಗಳಿಗೆ

ಹಿಂಗಿದ್ದೋರು ನೀವು ಹಂಗ್ಯಾಕೆ ಆದೀರಿ ?
ಅಹಹಹಾ ದೇವಾ ಅಹಹಹಾ ದೇವೀ...
ಎತ್ತಣವಾಯಿತು ನಿಮ್ಮ ಸವಾರಿ ಇತ್ತಣ ದಿನಗಳಲಿ

ಬಂದರು ಅವರ್‍ಯಾರೋ ಉಳುವ ನೆಲವನೆಲ್ಲ
ಬರಿಸೂರೆ ಮಾಡಿದರು ಬಡವರ ಹೊಟ್ಟೆಗೆ
ತಣ್ಣಟ್ಟೆ ಉಡಿಸಿದರು ಎಲ್ಲಿಂದ ಬಂದರೋ
ಎತ್ತಿಂದ ಬಂದರೋ ಮಾಯಗಾರರು ಅವರು
ಕಟ್ಟಿದ ಆಲಯ ಮುಗಿಲುದ್ದ ಏರ್‍ಯಾವು
ಎಲ್ಲಾ ಕಾಲಕು ಅಲ್ಲಿ ತಂಪು ತಪ್ಪಿಸಲಿಲ್ಲ
ತಂಪೀನ ಕೂಳೂ ಇಂಪೀನ ಹಾಡೂ ಗಂಧ
ತೇಯುವ ತಂತ್ರ ಹೊಗಳಿಕೆಯ ಮಂತ್ರ ಗಣ
ಗಣ ಗಂಟೆಯಾ ಬಾರಿಸೀ, ಓಹೋ ಮರುಳಾದ್ರಿ
ನೀವು ಮಂಜಾದ್ರಿ ನೀವು ಮಲಗೇ ಬಿಟ್ಟೀರಲ್ಲಾ ನೀವು

ಹಂಗಿದ್ದ ನೀವು ಹಿಂಗ್ಯಾಕೆ ಆದೀರೀ

ಅಹಹಹಾ ದೇವಾ ಅಹಹಹಾ ದೇವೀ...
ಎತ್ತಣವಾಯಿತು ನಿಮ್ಮ ಸವಾರಿ ಇತ್ತಣ ದಿನಗಳಲಿ

**ಡಾ॥ ಸವಿತಾ ಬನ್ನಾಡಿ**
ಸಹ ಪ್ರಾಧ್ಯಾಪಕರು, ಸರ್. ಎಂ. ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ
ಕಾಲೇಜು, ನ್ಯೂ ಟೌನ್, ಭದ್ರಾವತಿ - ೫೭೭ ೩೦೧, ಶಿವಮೊಗ್ಗ ಜಿಲ್ಲೆ

ಕರೆಯುತ್ತೇನೆ. ಏಕೆಂದರೆ ವೇದನೆ ಎನ್ನುವುದು ಮನುಷ್ಯರನ್ನು ವಿಕಾಸಗೊಳಿಸುತ್ತದೆ. ನನ್ನ ಪುಸ್ತಕಗಳಲ್ಲಿ ಈ ಜನ ತಮ್ಮ ಚಿಕ್ಕ ಪುಟ್ಟ ಇತಿಹಾಸವನ್ನು ಹೇಳುತ್ತಾರೆ. ಅದರೊಂದಿಗೆ ದೊಡ್ಡ ಇತಿಹಾಸವೂ ರಚನೆಯಾಗುತ್ತದೆ. ನಮಗೆ ಇಲ್ಲಿಯವರೆಗೆ ಆಗಿದ್ದನ್ನು ಗ್ರಹಿಸಲು, ಆಗುತ್ತಿರುವುದನ್ನು ಗ್ರಹಿಸಲು ಪುರುಸೊತ್ತು ಇಲ್ಲವಾಗಿದೆ. ನಾವು ಅದನ್ನು ಹೇಳುವುದರ ಅಗತ್ಯ ಇದೆ. ಆದದ್ದನ್ನು ಕಡೆಯಪಕ್ಷ ಪರಿಣಾಮಕಾರಿಯಾಗಿ ಹೇಳಿಕೊಳ್ಳುವುದರಿಂದಲಾದರೂ ಪ್ರಾರಂಭಿಸಬೇಕು. ನಮಗೆ ಅದನ್ನು ಮಾಡಲು ಭಯ. ನಾವು ನಮ್ಮ ಭೂತದೊಂದಿಗೆ ಅನುಸಂಧಾನ ಮಾಡಲು ಸಿದ್ಧರಿಲ್ಲ. ದಾಸ್ತಯೆವ್‌ಸ್ಕಿ "ಡೀಮನ್ಸ್" (ಪಿಶಾಚಿಗಳು) ಪುಸ್ತಕದಲ್ಲಿ ಶಟೋವ್ ಎಂಬುವನು ಸ್ಟಾವ್ರೋಜಿನ್‌ಗೆ ಸಂಭಾಷಣೆಯ ಶುರುವಿನಲ್ಲೇ ಹೇಳುತ್ತದೆ: "ನಾವಿಬ್ಬರೂ ಈ ಅನಂತ ಅವಕಾಶದಲ್ಲಿ ಕೊನೆಯ ಬಾರಿಗೆ ಭೇಟಿಯಾಗುತ್ತಿದ್ದೇವೆ, ಕಾಕು ಬಿಟ್ಟು ಮನುಷ್ಯರಂತೆ ಮಾತನಾಡು. ಒಂದೇ ಒಂದು ಸಲವಾದರೂ ಮನುಷ್ಯರ ಧ್ವನಿಯಲ್ಲಿ ಮಾತನಾಡು."

ನನ್ನ ಸಂಭಾಷಣೆಗಳೂ ಹೆಚ್ಚುಕಡಿಮೆ ಹೀಗೆಯೇ, ನನ್ನ ಪ್ರಮುಖ ಪಾತ್ರಗಳ ಜೊತೆ ಪ್ರಾರಂಭವಾಗುತ್ತವೆ. ಜನರು ತಮ್ಮ ಕಾಲದ ನೆಲೆಯಿಂದಲೇ ಮಾತನಾಡುತ್ತಾರೆ. ಹೌದು, ಶೂನ್ಯದಲ್ಲಿ ಮಾತನಾಡುವುದು ಸಾಧ್ಯವಿಲ್ಲ ಎನ್ನಿ. ಆದರೂ ಮನುಷ್ಯರ ಆತ್ಮವನ್ನು ಮುಟ್ಟುವುದು ಅಷ್ಟು ಸರಳವಲ್ಲ. ಏಕೆಂದರೆ ಈ ದಾರಿಯು ದೂರದರ್ಶನ, ವರ್ತಮಾನ ಪತ್ರಿಕೆ, ಶತಮಾನದ ಮೂಢನಂಬಿಕೆಗಳು, ಪೂರ್ವಗ್ರಹಗಳು, ವಂಚನೆಗಳಿಂದ ಮಲಿನವಾಗಿಹೋಗಿವೆ.

ಕಾಲ ಹೇಗೆ ಸರಿದುಹೋಗಿದೆ – ವೈಚಾರಿಕತೆ ಎಂಬುದು ಹೇಗೆ ಸತ್ತು ಹೋಯಿತು – ಎಂಬುದನ್ನು, ನಾನು ಆ ದಾರಿಯನ್ನು ಹೇಗೆ ತುಳಿದೆ ಎಂಬುದನ್ನು ತೋರಿಸಲು ನಾನು ನನ್ನ ದಿನಚರಿಯಿಂದ ಕೆಲವು ಪುಟಗಳನ್ನು ಓದುತ್ತೇನೆ...

**೧೯೮೦ರಿಂದ ೮೫**

ನಾನು ಈ ಪುಸ್ತಕವನ್ನು ಯುದ್ಧದ ಬಗ್ಗೆ ಬರೆಯುತ್ತಿದ್ದೇನೆ. ಯಾಕೆ ಯುದ್ಧದ ಬಗ್ಗೆ? ಯಾಕೆಂದರೆ ನಾವು ಯುದ್ಧದ ಜನ – ನಾವು ಯಾವಾಗಲೂ ಯುದ್ಧ ಮಾಡುತ್ತಲೇ ಬಂದವರು, ಅಥವಾ ಯುದ್ಧಕ್ಕೆ ಸಿದ್ಧರಾಗುತ್ತಾ ಇರುವವರು. ಸೂಕ್ಷ್ಮವಾಗಿ ನೋಡಿದರೆ ನಾವು ಮನೆಗಳಲ್ಲಿ, ಬೀದಿಗಳಲ್ಲಿ ಯುದ್ಧದ ಪರಿಭಾಷೆಯಲ್ಲಿಯೇ ಯೋಚಿಸುತ್ತಿರುತ್ತೇವೆ. ಆದ್ದರಿಂದಲೇ ಈ ದೇಶದಲ್ಲಿ ಜೀವ ಅಗ್ಗವಾಗಿದೆ. ಎಲ್ಲವೂ ಯುದ್ಧ ಸಮಯವೇ.

ನಾನು ಅನುಮಾನಗಳಿಂದಲೇ ಪ್ರಾರಂಭಿಸಿದೆ. ಪ್ರಪಂಚದ ಎರಡನೆಯ ಮಹಾಯುದ್ಧದ ಬಗ್ಗೆ ಇನ್ನೊಂದು ಪುಸ್ತಕ... ಯಾತಕ್ಕಾಗಿ?

ಒಂದು ಪ್ರಯಾಣದಲ್ಲಿ, ಯುದ್ಧದಲ್ಲಿ ವೈದ್ಯಳಾಗಿದ್ದವಳನ್ನು ಭೆಟ್ಟಿಯಾದೆ. ಅವಳು ಒಂದು ಕತೆಯನ್ನು ಹೇಳಿದಳು. ಅವರು ಚಳಿಗಾಲದಲ್ಲಿ ಲಾಡೊಗ ಹಳ್ಳವನ್ನು ದಾಟುವಾಗ ಅವರ ಚಲನವಲನವನ್ನು ಗಮನಿಸಿದ ಒಬ್ಬ ಶತ್ರು ಅವರೆಡೆಗೆ ಗುಂಡು ಹಾರಿಸಲು ಪ್ರಾರಂಭಿಸಿದ. ಕುದುರೆಗಳು ಮತ್ತು ಜನ ಹಿಮದ ಕೆಳಗೆ ಬಿದ್ದರು. ಅದೆಲ್ಲಾ ನಡೆದದ್ದು ರಾತ್ರಿಯಲ್ಲಿ. ಅದರಲ್ಲಿ ಯಾರೋ ಗಾಯಗೊಂಡಿರಬೇಕೆಂದು ಒಬ್ಬನನ್ನು ಹಿಡಿದು ತೀರದೆಡೆಗೆ ಅವಳು ಎಳೆಯಲಾರಂಭಿಸಿದಳು. "ಅವನನ್ನು ಎಳೆದೆ. ಅವನು ಒದ್ದೆಯಾಗಿದ್ದ, ಬತ್ತಲಾಗಿದ್ದ. ಅವನ ಬಟ್ಟೆಗಳು ಹರಿದುಹೋಗಿರಬೇಕೆಂದು ತಿಳಿದೆ" ಎಂದು ಹೇಳಿದಳು. ತೀರಕ್ಕೆ ಬಂದಮೇಲೆ ಅವಳು ಎಳೆಯುತ್ತಿದ್ದದು ಗಾಯಗೊಂಡ ಒಂದು ಬೃಹದಾಕಾರವಾದ ಮೀನನ್ನು ಎಂದು ತಿಳಿಯಿತು. ಭಯಂಕರವಾದ ಜಿಗುಪ್ಸೆಯಿಂದ, ಜನರೇನೋ ದುಃಖಿಸುತ್ತಿದ್ದಾರೆ, ನಿಜ. ಆದರೆ ಪ್ರಾಣಿಗಳು, ಪಕ್ಷಿಗಳು, ಮೀನುಗಳು – ಅವು ಏನು ಮಾಡಿವೆ? ಎಂದು ಬೈಯತೊಡಗಿದಳು. ಇನ್ನೊಂದು ಪ್ರಯಾಣದಲ್ಲಿ ಪದಾತಿ ದಳದ ವೈದ್ಯಳೊಬ್ಬಳ ಕತೆಯನ್ನು ಕೇಳಿದೆ. – ಯುದ್ಧವಾಗುತ್ತಿರುವಾಗ ಒಬ್ಬ ಗಾಯಗೊಂಡ ಯೋಧನನ್ನು ಒಂದು ಸುರಕ್ಷಿತ ಜಾಗಕ್ಕೆ ಎಳೆದುಹಾಕಿದಳು. ಆಮೇಲೆ ಅವನು ಜರ್ಮನ್ ಎಂಬುದು ಅವಳ ಗಮನಕ್ಕೆ ಬಂದಿತು. ಅವನ ಕಾಲು ಬಾತುಕೊಂಡಿತ್ತು. ರಕ್ತ ಸೋರುತ್ತಿತ್ತು. ಅವನು ಶತ್ರು! ಏನು ಮಾಡುವುದು ಒಬ್ಬ? ಅವಳ ಯೋಧರೇ ಮೇಲೆ ಸಾಯುತ್ತಿದ್ದಾರೆ. ಆದರೆ ಅವಳು ಜರ್ಮನ್ ಯೋಧನಿಗೆ ಗಾಯಪಟ್ಟಿ

ಕಟ್ಟಿ ಮತ್ತೆ ಎಳೆದುಕೊಂಡು ಹೋದಳು. ಆಮೇಲೆ ಅವಳು ಒಬ್ಬ ಪ್ರಜ್ಞೆ ತಪ್ಪಿದ ರಷ್ಯನ್ ಯೋಧನನ್ನು ಎಳೆದಳು. ಅವನಿಗೆ ಪ್ರಜ್ಞೆ ಮರಳಿದಾಗ ಅವನು ಜರ್ಮನ್‌ನನ್ನು ಕೊಲ್ಲಬೇಕೆಂದು ಬಯಸಿದುದು ಜರ್ಮನ್ ಗಾಯಾಳುವಿಗೆ ಗೊತ್ತಾದಾಗ ಅವನು ತನ್ನ ಮಶಿನ್ ಗನ್ ತೆಗೆದುಕೊಂಡು ರಷ್ಯನ್ ಗಾಯಾಳುವನ್ನು ಕೊಲ್ಲಲು ಅನುವಾದ. "ನಾನು ಅವರಿಬ್ಬರ ಕೆನ್ನೆಗೂ ಬಾರಿಸಬೇಕೆಂದಿದ್ದೆ. ನಾವು ರಕ್ತದ ಮಡುವಿನಲ್ಲಿ ನಿಂತಿದ್ದೆವು." ಮತ್ತೆ ನೆನಪಿಸಿಕೊಂಡು ಹೇಳಿದಳು, "ಎಲ್ಲ ಕಡೆ ರಕ್ತಗಳು ಬೆರೆತುಹೋಗಿದ್ದವು."

ಇಂತಹ ಯುದ್ಧದ ಬಗ್ಗೆ ನಾನೆಂದೂ ಕೇಳಿರಲಿಲ್ಲ. ಹೆಣ್ಣೊಬ್ಬಳ ಯುದ್ಧ ಅದು. ಅದು ನಾಯಕರ ಕುರಿತಾಗಿರಲಿಲ್ಲ. ಒಂದು ಗುಂಪು ಇನ್ನೊಂದು ಗುಂಪಿನ ಜನರನ್ನು ವೀರಾವೇಶದಿಂದ ಕೊಲ್ಲುವಂತಹ ಯುದ್ಧವಾಗಿರಲಿಲ್ಲ. ಹೆಣ್ಣೊಬ್ಬಳು ಮತ್ತೆ ಮತ್ತೆ ರೋಧಿಸುತ್ತಾ ಹೇಳಿದ ಮಾತುಗಳು ನೆನಪಾಗುತ್ತವೆ : "ಯುದ್ಧಾನಂತರ ರಣರಂಗವನ್ನು ಹಾಯುತ್ತಾ ಹೋದೆ. ಎಲ್ಲಾ ಅಂಗಾತ ಬಿದ್ದುಕೊಂಡಿದ್ದರು. ...ಎಲ್ಲಾ ಸುಂದರ ತರುಣರು, ಆಕಾಶದೆಡೆಗೆ ದಿಟ್ಟಿಸುತ್ತಾ ಬಿದ್ದಿದ್ದರು. ಎರಡೂ ಕಡೆಯವರನ್ನು ನೋಡಿ ದುಃಖ ಉಮ್ಮಳಿಸಿ ಬಂತು." "ಈ ಎರಡೂ ಕಡೆಯವರ" ಬಗ್ಗೆ ಇದ್ದ ಅವಳ ಧೋರಣೆಯೇ ನನ್ನ ಪುಸ್ತಕಕ್ಕೆ ಬೇಕಾದ ಹೊಳಹನ್ನು ಕೊಟ್ಟಿತು. ಯುದ್ಧವೆಂದರೆ ಕೊಲ್ಲುವುದಲ್ಲದೆ ಬೇರೇನೂ ಅಲ್ಲ ಎನ್ನುವುದೇ ಆ ಹೆಣ್ಣುಗಳ ಸ್ಮೃತಿಯೊಳಗೆ ದಾಖಲುಗೊಂಡಿರುವ ನೆನಪುಗಳು. 'ಇವನು ಈಗತಾನೇ ಮುಗುಳ್ನಗುತ್ತಿದ್ದ, ಸಿಗರೇಟು ಸೇದುತ್ತಿದ್ದ – ಈಗ ಅವನಿಲ್ಲ' ಹೀಗೆ ಅಚಾನಕ್ಕಾಗಿ ಅವರು ಇನ್ನಿಲ್ಲವಾಗುವುದರ ಕುರಿತೇ ಹೆಣ್ಣುಗಳು ಮಾತನಾಡುತ್ತಿದ್ದುದು. ಯುದ್ಧಕಾಲದಲ್ಲಿ ಅದು ಹೇಗೆ ಕ್ಷಣಮಾತ್ರದಲ್ಲಿ ಎಲ್ಲವೂ ಇಲ್ಲವಾಗಿ ಬಿಡುತ್ತದೆ – ಮನುಷ್ಯನ ಜೀವ, ಮನುಷ್ಯನ ಕಾಲ ! ಹೌದು, ಅವರು ತಾವಾಗಿಯೇ ತಮ್ಮ ೧೭ ಅಥವಾ ೧೮ನೇ ವಯಸ್ಸಿನಲ್ಲಿ ಯುದ್ಧಭೂಮಿಯಲ್ಲಿ ಹೋರಾಡಲು ಮುಂದೆ ಬಂದವರು. ಆದರೆ ಅವರಿಗೆ ಯಾರನ್ನೂ ಕೊಲ್ಲುವ ಉದ್ದೇಶವಿರಲಿಲ್ಲ. ಆದರೂ ಅವರು ಸಾಯಲು ಸಿದ್ಧರಿದ್ದರು. ಮಾತೃಭೂಮಿಗಾಗಿ ಸಾಯಲು ಸಿದ್ಧರಿದ್ದರು. ಈ ಮಾತುಗಳನ್ನು ನೀವು ಇತಿಹಾಸದಿಂದ ಅಳಿಸಿಹಾಕಲು ಸಾಧ್ಯವಿಲ್ಲ.

ಆ ಪುಸ್ತಕ ಎರಡು ವರುಷಗಳವರೆಗೆ ಪ್ರಕಟವಾಗಲಿಲ್ಲ. "ನಿನ್ನ ಪುಸ್ತಕವನ್ನು ಓದಿದ ನಂತರ ಯಾರೂ ಯುದ್ಧ ಮಾಡುವುದಿಲ್ಲ" ಸೆನ್ಸಾರ್ ನನಗೆ ಉಪದೇಶ ಮಾಡಿತು. "ನಿನ್ನ ಯುದ್ಧ ಭಯಾನಕ ! ಇಲ್ಲಿ ಯಾಕೆ ಯಾರೂ ನಾಯಕರಿಲ್ಲ ?" ನಾನು ಯಾವ ನಾಯಕರಿಗಾಗಿಯೂ ಹುಡುಕಾಡಲಿಲ್ಲ. ನಾನು ಇಲ್ಲಿಯವರೆಗೆ ಗಮನಕ್ಕೆ ಬಾರದೇ ಹೋದ ಸಾಕ್ಷಿಗಳ ಮೂಲಕ, ಅದರಲ್ಲಿ ಭಾಗವಹಿಸಿದವರ ಕತೆಗಳ ಮೂಲಕ ಇತಿಹಾಸವನ್ನು ಬರೆಯುತ್ತಿದ್ದೆ. ಅವರನ್ನು ಎಂದೂ ಯಾರೂ ಏನನ್ನೂ ಕೇಳಿರಲಿಲ್ಲ. ಜನರು ಏನೆಂದು ಯೋಚಿಸುತ್ತಾರೆ ? ದೊಡ್ಡ ವಿಚಾರಗಳನ್ನು ಕುರಿತು ಜನ ಏನೆಂದು ಭಾವಿಸುತ್ತಾರೆಂದು ನಮಗೆ ಗೊತ್ತಿಲ್ಲ. ಯುದ್ಧ ಮುಗಿದ ಕೂಡಲೇ ಒಬ್ಬ ಒಂದು ಯುದ್ಧವನ್ನು ಕುರಿತು ಹೇಳುತ್ತಾನೆ. ಕೆಲ ದಶಕಗಳ ನಂತರ ಅದು ಬೇರೆ ಯುದ್ಧ. ಹೌದು, ಅವನಲ್ಲಿ ಯಾವುದೋ ಬದಲಾವಣೆಯಾಗುತ್ತದೆ. ಏಕೆಂದರೆ ಅವನು ಇಡೀ ಜೀವನವನ್ನು ನೆನಪುಗಳ ಪದರಗಳಲ್ಲಿ ಬಚ್ಚಿಟ್ಟುಕೊಂಡಿರುತ್ತಾನೆ. ಅವನ ಇಡೀ ವ್ಯಕ್ತಿತ್ವವನ್ನೇ. ಅವನು ಹೇಗೆ ಆಗ ಬದುಕಿದ ? ಅಷ್ಟೂ ವರುಷಗಳು ಏನು ಓದಿದ ? ನೋಡಿದ ? ಯಾರನ್ನು ಭೇಟಿಯಾದ ? ಯಾವುದನ್ನು ಅವನು ನಂಬುತ್ತಾನೆ ? ಕೊನೆಗೆ ಅವನು ಸುಖಿಯಾಗಿದ್ದಾನೋ ಇಲ್ಲವೋ ? ದಾಖಲೆಗಳೆಂದರೆ ಜೀವಂತ ಸೃಷ್ಟಿಗಳು. ಅವು ನಾವು ಬದಲಾದಂತೆ ಬದಲಾಗುತ್ತವೆ.

ನನಗೆ ಸಂಪೂರ್ಣವಾಗಿ ನಂಬಿಕೆಯಿರುವ ವಿಷಯವೆಂದರೆ, ೧೯೪೧ರ ಯುದ್ಧಕಾಲದ ಹುಡುಗಿಯರ ಪರಿಸ್ಥಿತಿ ನಮ್ಮ ಯುವತಿಯರಿಗೆ ಮತ್ತೆಂದೂ ಬಾರದು. ಇದೇ 'ಕೆಂಪು' ಆದರ್ಶದ ಗರಿಷ್ಠ ಆಶಯ. ಅದು ಲೆನಿನ್ ಕ್ರಾಂತಿಗಿಂತಲೂ ಉನ್ನತವಾದುದು. "ನಾವು ಮುಕ್ತವಾಗಿದ್ದ ಕಾಲವೆಂದರೆ ಅದು ಯುದ್ಧದ ಮುಂಚೂಣಿಯಲ್ಲಿದ್ದಾಗ ಮಾತ್ರ" ಎಂಬ ಮಾತುಗಳು ಒಮ್ಮೆ ನನ್ನ ಕಿವಿಗೆ ಬಿದ್ದವು. ಅಲ್ಲಿ ವೇದನೆಯೇ ನಮ್ಮ ಬಂಡವಾಳ. ಅದೇ ನಮ್ಮ ನೈಸರ್ಗಿಕ ಸಂಪನ್ಮೂಲ. ಎಣ್ಣೆಯಾಗಲೀ, ಅನಿಲವಾಗಲೀ ಅಲ್ಲ – ಆದರೆ ವೇದನೆ ಮಾತ್ರ. ಅದೊಂದನ್ನು ಮಾತ್ರ ನಾವು ನಿರಂತರವಾಗಿ ಉತ್ಪಾದಿಸುತ್ತಿದ್ದೆವು. "ನಾನು ಯಾವಾಗಲೂ ಉತ್ತರಕ್ಕಾಗಿ ಹುಡುಕಾಡುತ್ತೇನೆ. ಯಾಕೆ ನಮ್ಮ ಈ ವೇದನೆ ಬಿಡುಗಡೆಯಾಗಿ ಮಾರ್ಪಾಡು ಹೊಂದಬಾರದು ? ಎಲ್ಲ ಬರಿ ವ್ಯರ್ಥ. ಛಾಡಾಯೇವ್ ಸರಿಯಾಗಿಯೇ ಹೇಳಿರುವಂತೆ ರಷ್ಯಾ ನೆನಪುಗಳೇ ಇಲ್ಲದ ಒಂದು ದೇಶ. ಸಂಪೂರ್ಣವಾಗಿ ವಿಸ್ಮೃತಿ ಹೊಂದಿದ ಪ್ರದೇಶ. ವಿಮರ್ಶೆ ಮತ್ತು ಚಿಂತನೆಗಳ ಮಟ್ಟಿಗೆ ಮುಗ್ಧಪ್ರಜ್ಞೆಯ ಪ್ರದೇಶ.

## ೧೯೯೦–೯೭

ರಷ್ಯಾದ ಸಾಹಿತ್ಯ ಮಾತ್ರ ತುಂಬ ಆಸಕ್ತಿದಾಯಕ. ಇಂತಹ ದೊಡ್ಡ ದೇಶವೊಂದರ ಮೇಲೆ ನಡೆದ ಪ್ರಯೋಗದ ಕತೆಯನ್ನು ಅದು ಮಾತ್ರ ಸೆರೆಹಿಡಿಯುತ್ತದೆ. ನನ್ನನ್ನು ಮತ್ತೆ ಮತ್ತೆ ಕೇಳಲಾಗುತ್ತದೆ. "ಯಾಕೆ ನೀನು ದುರಂತದ ಬಗ್ಗೆ ಮಾತ್ರ ಬರೆಯುತ್ತೀ ?" ಯಾಕೆಂದರೆ ಹಾಗೆ ತಾನೇ ನಾವು ಬದುಕುತ್ತಿದ್ದೇವೆ. ನಾವೀಗ ಬೇರೆ ಬೇರೆ ದೇಶಗಳಲ್ಲಿ ವಾಸಿಸುತ್ತೇವೆ. ಆದರೆ 'ಕೆಂಪು' ಜನ ಎಲ್ಲ ಕಡೆ ಇದ್ದಾರೆ. ಅವರು ಅದೇ ಬದುಕಿನಿಂದ ಹೊರಬಂದಿದ್ದಾರೆ. ಅದೇ ನೆನಪುಗಳನ್ನು ಹೊಂದಿದ್ದಾರೆ.

ಚೆರ್ನೋಬಿಲ್ ಕುರಿತು ಬರೆಯಲು ನಾನು ಬಹಳ ಕಾಲ ಹಿಂಜರಿದೆ. ಅದನ್ನು ಹೇಗೆ ಬರೆಯುವುದೆಂದು ಗೊತ್ತಿಲ್ಲ. ಯಾವ ಉಪಕರಣವನ್ನು ಬಳಸಬೇಕು ? ಹೇಗೆ ಪ್ರವೇಶ ಮಾಡಬೇಕು ? ನನ್ನ ಈ ಚಿಕ್ಕ ದೇಶದ ಬಗ್ಗೆ ಪ್ರಪಂಚಕ್ಕೆ ಏನೊಂದೂ ತಿಳಿದಿರಲಿಲ್ಲ. ಯೂರೋಪಿನ ಮೂಲೆಯಲ್ಲಿ ಅದು ಅಜ್ಞಾತವಾಗಿತ್ತು. ಆದರೆ ಈಗ ಎಲ್ಲರ ನಾಲಗೆಯ ಮೇಲೆ ನಾವು ಚೆರ್ನೋಬಿಲ್‌ನವರೆಂದು ಬೇರೂರಿದ್ದೇವೆ. ನಾವು ಬೆಲರೂಸ್ಯನ್‌ರು ಈಗ ಚೆರ್ನೋಬಿಲ್‌ನ ಜನರಾಗಿಬಿಟ್ಟಿದ್ದೇವೆ. ಅಜ್ಞಾತವೊಂದರ ಜೊತೆ ಮೊದಲ ಮುಖಾಮುಖಿ. ಈಗ ಅದು ಸ್ಪಷ್ಟವಾಯಿತು. ಕಮ್ಯುನಿಸ್ಟ್ ಆಗಿಯೂ ಜನಾಂಗೀಯ, ಧಾರ್ಮಿಕ, ಜಾಗತಿಕ, ಅನಾಗರಿಕ ಸವಾಲುಗಳು ನಮಗೆ ಎದುರಾದವು. ನಮಗೆ ಇನ್ನೂ ಹೆಚ್ಚಿನ ಜಾಗತಿಕ, ಕ್ರೂರ ಸವಾಲುಗಳು ಮುಂದೆ ಕಾದಿವೆ. ಈ ಕ್ಷಣಕ್ಕೆ ಅವು ಸ್ಪಷ್ಟವಾಗದಿದ್ದರೂ ಚೆರ್ನೋಬಿಲ್ ಪ್ರಕರಣದ ನಂತರ ಅವುಗಳ ಸುಳುಹುಗಳು ಕಂಡುಬರುತ್ತಿವೆ.

ಒಮ್ಮೆ ಟ್ಯಾಕ್ಸಿ ಡ್ರೈವರ್ ಒಬ್ಬ ತನ್ನ ಗಾಡಿಯ ಗಾಜಿನ ಮೇಲೆ ಪಾರಿವಾಳವೊಂದು ಬಂದು ಡಿಕ್ಕಿ ಹೊಡೆದಾಗ ಶಾಪ ಹಾಕುತ್ತಿದ್ದುದು ನೆನಪಾಯಿತು. "ಪ್ರತಿದಿನ ಎರಡು ಮೂರು ಹಕ್ಕಿಗಳು ಗಾಜಿನ ಮೇಲೆ ಬಂದೆರಗುತ್ತವೆ. ಆದರೆ ವರ್ತಮಾನ ಪತ್ರಿಕೆಗಳು ಮಾತ್ರ ಪರಿಸ್ಥಿತಿ ಈಗ ನಿಯಂತ್ರಣದಲ್ಲಿದೆ ಎಂದು ಹುಸಿ ವರದಿ ಮಾಡುತ್ತವೆ."

ನಗರದಲ್ಲಿನ ಉದ್ಯಾನವನದ ಕುಂಟೆ ಹೊಡೆದು ಎಲೆಗಳನ್ನೆಲ್ಲ ಊರಾಚೆಯ ನೆಲದೊಳಗೆ ಹೂತರು. ಕಲುಷಿತಗೊಂಡ ಪ್ರದೇಶದ ಮಣ್ಣನ್ನು ಅಗೆದು ಬೇರೆ ನೆಲದೊಳಗೆ ಹೂತರು – ನೆಲದೊಳಗೆ ನೆಲವನ್ನು ಹೂಳಲಾಯಿತು. ಉರುವಲುಗಳನ್ನೂ, ಹುಲ್ಲನ್ನೂ ಅದೇ ರೀತಿ ಹೂಳಲಾಯಿತು. ಎಲ್ಲರೂ ಹುಚ್ಚರಂತೆ ಕಾಣಿಸುತ್ತಿದ್ದರು. ಒಬ್ಬ ಜೇನು ಸಾಕುವ ವೃದ್ಧ ಹೇಳಿದ : "ನಾನು ಬೆಳಿಗ್ಗೆ ಉದ್ಯಾನವನಕ್ಕೆ ಹೋಗಿದ್ದೆ. ಏನೋ ಪರಿಚಿತವಾದ ಸದ್ದು ಕಳೆದುಹೋಗಿತ್ತು. ಅಲ್ಲಿ ಜೇನುಹುಳುಗಳಿರಲಿಲ್ಲ. ಒಂದು ! ಒಂದೇ ಒಂದು ಜೇನುಹುಳುವಿನ ಗುಂಯ್ ಗಾನವಾಗಲೀ ಕೇಳಲಿಲ್ಲ. ಏನು ? ಏನಾಗುತ್ತಿದೆ ? ಎರಡನೆಯ ದಿನವೂ ಅವು ಹಾರಾಡಲಿಲ್ಲ – ಮೂರನೆಯ ದಿನವೂ. ನಂತರ ನಮಗೆ ನ್ಯೂಕ್ಲಿಯರ್ ಸ್ಥಾವರದೊಳಗೆ ಅಪಘಾತವಾಗಿದೆ ಎಂದು ತಿಳಿಸಲಾಯಿತು. ಅಲ್ಲದೆ, ಅದು ನಮಗೆ ದೂರವೂ ಅಲ್ಲ. ಆದರೂ ಬಹಳ ಕಾಲ ನಮಗೆ ಅದರ ಬಗ್ಗೆ ಏನೊಂದೂ ತಿಳಿಯಲಿಲ್ಲ. ಜೇನುಹುಳುಗಳಿಗೆ ಗೊತ್ತಿತ್ತು ಆದರೆ ನಮಗೆ ಗೊತ್ತಾಗಲಿಲ್ಲ." ಚೆರ್ನೋಬಿಲ್ ಕುರಿತು ಎಲ್ಲ ಪತ್ರಿಕೆಗಳ ವರದಿಗಳೂ ಮಿಲಿಟರಿ ಪರಿಭಾಷೆಯಲ್ಲಿದ್ದವು. ಸ್ಫೋಟ, ನಾಯಕರು, ಸೈನಿಕರು, ತೆರವುಗೊಳಿಸು. ಅಲ್ಲಿ ಯಾರಾದರೂ ವಿದ್ರೋಹಿಗಳು, ಗೂಢಚಾರರು ಸಿಗುತ್ತಾರೆಯೆ ಎಂದು ಪತ್ತೆಮಾಡಲು, ಕೆ.ಜಿ.ಬಿ. ಅವರು ಸ್ಟೇಷನ್ ಬಳಿಯೇ ಕೆಲಸ ಮಾಡಿದರು. ನಮ್ಮ ಸಮಾಜವಾದಿ ವ್ಯವಸ್ಥೆಯನ್ನು ಕುಸಿಯುವಂತೆ ಮಾಡಲು ಪಾಶ್ಚಾತ್ಯ ಇಂಟೆಲಿಜೆನ್ಸ್ ಹೂಡಿದ ಆಟ ಎಂಬ ಊಹೆಗಳನ್ನು ಹರಿಬಿಡಲಾಯಿತು. ಸೈನಿಕ ಸಾಮಗ್ರಿಗಳನ್ನು ಅಲ್ಲಿಗೆ ರವಾನಿಸಲಾಯಿತು. ಸೈನಿಕರು ಬಂದರು. ಎಂದಿನಂತೆ ವ್ಯವಸ್ಥೆ ಯುದ್ಧ ಕಾಲದಲ್ಲಿ ಹೋರಾಡುವಂತೆ ಹೋರಾಡಿತು. ಆದರೆ ಈ ಹೊಸ ಪ್ರಪಂಚದಲ್ಲಿ, ಹೊಳೆಯುವ ಹೊಸ ಮಶಿನ್ ಗನ್ ಹೊತ್ತ ಸೈನಿಕನ ಸ್ಥಿತಿಯೊಂದು ದುರಂತ. ಅವನಿಗೆ ಸಾಧ್ಯವಾಗುವುದೆಂದರೆ ಹೆಚ್ಚಿನ ಮಟ್ಟದ ವಿಕಿರಣಗಳ ಸೋಂಕಿಗೆ ಒಳಗಾಗಿ ಮನೆಗೆ ಮರಳಿದಾಗ ಸಾವು ಕಾದಿರುತ್ತದೆ.

ನನ್ನ ಕಣ್ಣ ಮುಂದೆಯೇ ಚೆರ್ನೋಬಿಲ್ ಪೂರ್ವದ ಜನರು ಚೆರ್ನೋಬಿಲ್‌ನ ನಂತರದ ಜನವಾಗಿ ಪರಿವರ್ತನೆಗೊಂಡುಬಿಟ್ಟರು.

ನೀವು ವಿಕಿರಣಗಳನ್ನು ನೋಡುವುದಾಗಲೀ, ಮುಟ್ಟುವುದಾಗಲೀ, ಮೂಸುವುದಾಗಲೀ ಸಾಧ್ಯವಿಲ್ಲ... ಸುತ್ತಲಿನ ಪ್ರಪಂಚ ಏಕಕಾಲಕ್ಕೆ ಪರಿಚಿತವೂ, ಅಪರಿಚಿತವೂ ಆಗಿಹೋಯಿತು. ನಾನು ಅಲ್ಲಿಗೆ ಹೋದ ಕೂಡಲೇ, ನನಗೆ ಹೇಳಿದ್ದೆಂದರೆ : "ಹೂಗಳನ್ನು ಎತ್ತಿಕೊಳ್ಳಬೇಡ, ಹುಲ್ಲಿನ ಮೇಲೆ ಕುಳಿತುಕೊಳ್ಳಬೇಡ, ಬಾವಿಯ ನೀರು ಕೂಡ ಕುಡಿಯಬೇಡ." ಸಾವು ಎಲ್ಲೆಡೆಯೂ ಬಚ್ಚಿಟ್ಟುಕೊಂಡಿತ್ತು. ಆದರೆ ಇದು ಹೊಸಬಗೆಯ ಸಾವು, ಹೊಸ ಮುಖವಾಡವನ್ನು ಧರಿಸಿತ್ತು. ಅದು ಮಾರುವೇಷದಲ್ಲಿತ್ತು. ಯುದ್ಧದಲ್ಲಿ ಉಳಿದ ಹಿರಿಯರನ್ನು ಮತ್ತೆ ಸ್ಥಳಾಂತರಗೊಳಿಸಲಾಗಿತ್ತು. ಅವರು ಆಕಾಶದೆಡೆಗೆ ನೋಡಿದರು. "ಸೂರ್ಯ ಮೇಲೆ ಹೊಳೆಯುತ್ತಿದ್ದ... ಹೊಗೆಯಿಲ್ಲ. ಅನಿಲವಿಲ್ಲ. ಯಾರೂ ಶೂಟ್ ಮಾಡುತ್ತಿಲ್ಲ. ಇದು ಹೇಗೆ ತಾನೇ ಯುದ್ಧವಾದೀತು ? ಆದರೂ ಇಲ್ಲಿ ನಾವು ನಿರಾಶ್ರಿತರಾಗಿದ್ದೇವೆ."

ಸುದ್ದಿಗಳಿಗೆ ಹಸಿದವರಂತೆ ಪ್ರತಿಯೊಬ್ಬರೂ, ಮುಂಜಾನೆ ವರ್ತಮಾನ ಪತ್ರಿಕೆಗಳನ್ನು ಆತುರದಿಂದ ಕಸಿದುಕೊಂಡು ನೋಡುತ್ತಾರೆ. ನಿರಾಸೆಯಿಂದ ಮುಖ ತಗ್ಗಿಸುತ್ತಾರೆ. ಯಾವ ಗೂಢಚಾರರೂ ಪತ್ತೆಯಾಗಿಲ್ಲ. ಜನತೆಯ ಶತ್ರುಗಳನ್ನು ಕುರಿತ ವರದಿಯಿಲ್ಲ. ಗೂಢಚಾರರಿಲ್ಲದ, ಶತ್ರುಗಳಿಲ್ಲದ ಜಗತ್ತು ಅಷ್ಟೊಂದು ಅಪರಿಚಿತ. ಹೊಸದೊಂದು ಹುಟ್ಟುವುದರ ಆರಂಭವಿದು. ಆಫ್ಘಾನಿಸ್ತಾನದ (ಪ್ರಕರಣದ) ಬೆನ್ನಿಗೇ ಚೆರ್ನೋಬಿಲ್ ನಮ್ಮನ್ನು ಮುಕ್ತರನ್ನಾಗಿಸಿತು.

ನನ್ನ ಜಗತ್ತು ಇಬ್ಭಾಗವಾಗಿಹೋಗಿತ್ತು. ಒಂದು, ನನ್ನ ಅಂತರಂಗದೊಳಗೆ ನಾನು ಬೆಲರೂಸ್ಯನ್, ರಷ್ಯಾ, ಉಕ್ರೇನ್‌ಗೆ ಸೇರಿದವಳೆಂಬ ಭಾವನೆ ಉಂಟಾಗಲಿಲ್ಲ. ಬದಲಾಗಿ, ಜೀವಿಗಳನ್ನು ನಾಶಮಾಡಬಹುದಾದವರ ಪ್ರತಿನಿಧಿಗಳ ಗುಂಪಿಗೆ ಸೇರಿದವಳು ಎಂದು ಅನ್ನಿಸಿತ್ತು. ಎರಡು, ಮಹಾ ವಿಪತ್ತುಗಳು ಆಕಸ್ಮಿಕವಾಗಿ/ ಕಾಕತಾಳೀಯವಾಗಿ ಒಂದುಗೂಡಿದ್ದವು; ಸಾಮಾಜಿಕ ವಲಯದಲ್ಲಿ ಸಮಾಜವಾದಿ 'ಅಟ್ಲಾಂಟಿಸ್' ಕುಸಿಯುತ್ತಿತ್ತು, ಮತ್ತು ವಿಶ್ವದ ನೆಲೆಯಲ್ಲಿ ಚೆರ್ನೋಬಿಲ್ ಇತ್ತು. ಸಾಮ್ರಾಜ್ಯದ ಕುಸಿತ ಎಲ್ಲರನ್ನೂ ತ್ರಸ್ತಗೊಳಿಸಿತ್ತು. ಜನರು ದೈನಿಕದ ಬಗ್ಗೆ ಚಿಂತಿತರಾಗಿದ್ದರು. ಹೇಗೆ ಮತ್ತು ಯಾವುದನ್ನು ಕೊಳ್ಳುವುದು ? ಹೇಗೆ ಬದುಕುಳಿಯುವುದು? ಯಾವುದನ್ನು ನಂಬುವುದು ? ಈ ಸಲ ಯಾವ ಲಾಂಛನವನ್ನು ಅನುಸರಿಸುವುದು ? ಅಥವಾ ಯಾವುದೇ ಬಗೆಯ ಆದರ್ಶಗಳಿಲ್ಲದೇ ನಾವು ಬದುಕುವುದನ್ನು ಕಲಿಯಬೇಕಾದ ಅಗತ್ಯವಿದೆಯೇ ? ಕೊನೆಯದು (ಆದರ್ಶಗಳಿಲ್ಲದೆ ಬದುಕುವುದು) ಅಪರಿಚಿತವಾಗಿತ್ತು. ಏಕೆಂದರೆ ಯಾರಿಗೂ ಹಾಗೆ ಬದುಕಿಯೇ ಗೊತ್ತಿಲ್ಲ. ನೂರಾರು ಪ್ರಶ್ನೆಗಳು 'ಕೆಂಪು' ಮನುಷ್ಯನ ಎದುರು. ಆದರೆ ಅವನ ಪಾಡೇ ಅವನಿಗಿತ್ತು. ಸ್ವಾತಂತ್ರ್ಯದ ಮೊದಲ ದಿನಗಳಿಂದಲೂ ಅವನೆಂದೂ ಇಷ್ಟು ಒಂಟಿಯಾಗಿರಲಿಲ್ಲ. ಆಘಾತಗೊಂಡ ಜನರು ನನ್ನನ್ನು ಸುತ್ತುವರಿದಿದ್ದರು. ಅವರು ಹೇಳಿದ್ದನ್ನು ಕೇಳುತ್ತಾ ಹೋದೆ ನಾನು.

ನಾನು ನನ್ನ ದಿನಚರಿಯನ್ನು ಮುಚ್ಚುವೆ...

ನಾನು ರಷ್ಯಾದಲ್ಲಿ ಪ್ರಯಾಣ ಮಾಡುವಾಗ ನಾನು ಕೇಳಿದ ಕೆಲವು ಟೀಕೆಗಳು ಇಲ್ಲಿವೆ...

"ರಷ್ಯನ್ನರಿಗೆ ನಿಜವಾಗಿ ಶ್ರೀಮಂತರಾಗುವುದು ಬೇಕಿಲ್ಲ. ಅವರಿಗೆ ಅದರ ಬಗ್ಗೆ ಹೆದರಿಕೆಯೇ. ರಷ್ಯನ್‌ನಿಗೆ ಬೇಕಾಗಿರುವುದಾದರೂ ಏನು ? ಅದೆಂದರೆ ಒಂದೇ, ಯಾರೂ ತನಗಿಂತ ಶ್ರೀಮಂತರಾಗಬಾರದು."

"ಇಲ್ಲಿ ಯಾರೂ ಪ್ರಾಮಾಣಿಕರಿಲ್ಲ. ಆದರೆ ಬರೀ ಸಂತರು ಮಾತ್ರ."

"ರಷ್ಯಾದ ಬದುಕು ಪಾಪಗಳ ಉತ್ತಮಣಾವಸ್ಥೆಗೆ ತಲುಪಬೇಕಾಗಿದೆ. ಆಗ ಮಾತ್ರ ಆತ್ಮೋದ್ಧಾರ ಸಾಧ್ಯವಿದೆ. ಆಗ ಮಾತ್ರ ಆತ್ಮಕ್ಕೆ ತಾನು ಈ ಜಗತ್ತಿಗೆ ಸಂಬಂಧಪಟ್ಟಿಲ್ಲ ಎನ್ನುವುದು ಅರಿವಿಗೆ ಬರುತ್ತದೆ... ಹೊಲಸು ರಕ್ತಪಾತ ಹೆಚ್ಚಿದ ಕಡೆಯೆಲ್ಲಾ ಆತ್ಮ ಬಂದು ನೆಲೆಯೂರುವ ಸಾಧ್ಯತೆಯೂ ಹೆಚ್ಚಿರುತ್ತದೆ..."

"ಹೊಸ ಕ್ರಾಂತಿ ಮಾಡಲು ಈಗ ಯಾರಿಗೂ ಚೈತನ್ಯವಾಗಲೀ, ತೆವಲಾಗಲೀ ಇಲ್ಲ. ರಷ್ಯಾದವರಿಗೆ ತಮ್ಮನ್ನು ಉದ್ರೇಕಿಸುವಂತಹ / ಕೆರಳಿಸುವಂತಹ ಒಂದು ತತ್ವ ಬೇಕಾಗಿದೆ..."

"ನಮ್ಮ ಬದುಕು ಪ್ರಕ್ಷುಬ್ಧತೆ ಮತ್ತು ಅಟ್ಟಹಾಸಗಳ ನಡುವೆ ಓಲಾಡುತ್ತಿದೆ... ಕಮ್ಯುನಿಸಂ ಸಾಯಲಿಲ್ಲ. ಶವ ಇನ್ನೂ ಜೀವಂತವಾಗಿದೆ."

೧೯೯೦ರಲ್ಲಿ ನಮಗೆ ಬಂದಿದ್ದ ಅವಕಾಶವನ್ನು ನಾವು ಕಳೆದುಕೊಂಡೆವು ಎಂದು ಹೇಳುವ ಸ್ವಾತಂತ್ರ್ಯವನ್ನು ನಾನು ತೆಗೆದುಕೊಳ್ಳುತ್ತೇನೆ. ಪ್ರಶ್ನೆಯೊಂದು ಎದುರಾಯಿತು. ನಮಗೆ ಬೇಕಾಗಿರುವುದು ಯಾವ ಬಗೆಯ ದೇಶ ? ಬಲಿಷ್ಠ ರಾಷ್ಟ್ರ ಬೇಕೆ ಅಥವಾ ಜನ ಸಂತೋಷದಿಂದ ಬಾಳಿ ಬದುಕುವ ದೇಶವೇ ? ನಾವು ಮೊದಲಿನದನ್ನೇ ಆರಿಸಿಕೊಂಡೆವು – ಒಂದು ಬಲಿಷ್ಠ ರಾಷ್ಟ್ರವನ್ನು ! ನಾವು ಮತ್ತೆ ಅಧಿಕಾರದ ಯುಗದಲ್ಲಿ ಬದುಕುತ್ತಿದ್ದೇವೆ. ರಷ್ಯನ್ನರು ಉಕ್ರೇನಿನವರೊಂದಿಗೆ ಹೋರಾಡುತ್ತಿದ್ದಾರೆ. ಅವರ ಸೋದರರೊಂದಿಗೆ. ನನ್ನ ತಂದೆ ಬೆಲರೂಸಿಯನ್, ತಾಯಿ ಉಕ್ರೇನಿಯನ್. ಇಲ್ಲಿ ಹೆಚ್ಚಿನ ಎಲ್ಲರ ವಿಷಯವೂ ಹೀಗೆಯೇ. ರಷ್ಯಾದ ವಿಮಾನಗಳು ಸಿರಿಯಾದ ಮೇಲೆ ಬಾಂಬ್ ಹಾಕುತ್ತಿವೆ...

ಅತ್ಯಂತ ಭರವಸೆಯ ಕಾಲ ಭೀತಿಯ ಕಾಲವಾಗಿ ಪರಿಣಮಿಸಿದೆ. ಈ ಯುಗ ಮತ್ತೆ ಭೂತಕಾಲಕ್ಕೆ ಸರಿಯುತ್ತಿದೆ. ಮರಳುತ್ತಿದೆ. ನಾವು ಈಗ ಬದುಕುತ್ತಿರುವ ಈ ಕಾಲ ಎರಡನೆಯ ದರ್ಜೆಯದ್ದು...

ನಾನು ಇನ್ನೂ 'ಕೆಂಪು' ಮನುಷ್ಯನ ಇತಿಹಾಸವನ್ನು ಬರೆದು ಮುಗಿಸಿಲ್ಲವೆಂದು ಕೆಲವು ಸಲ ಅನ್ನಿಸುತ್ತದೆ...

ನನಗೆ ಮೂರು ಮನೆಗಳಿವೆ. ಬೆಲರೂಸಿಯನ್‌ನ ನನ್ನ ತಂದೆಯ ಮನೆ. ನನ್ನ ಇಡೀ ಜೀವನ ಅಲ್ಲಿಯೇ ಕಳೆಯಿತು. ಉಕ್ರೇನ್ ನನ್ನ ತಾಯಿಯ ತವರು ಮನೆ, ನಾನು ಹುಟ್ಟಿದ ಮನೆ, ಮತ್ತು ಯಾವುದನ್ನು ಬಿಟ್ಟು ನನ್ನನ್ನು ನಾನು ಕಲ್ಪಿಸಿಕೊಳ್ಳಲು ಸಾಧ್ಯವೇ ಇಲ್ಲವೋ ಅಂತಹ ರಷ್ಯಾದ ಶ್ರೇಷ್ಠ ಸಂಸ್ಕೃತಿ. ಈ ಎಲ್ಲವೂ ನನಗೆ ಅತ್ಯಂತ ಪ್ರಿಯ. ಆದರೆ ಈ ದುರ್ಬರ ಕಾಲದಲ್ಲಿ ಪ್ರೇಮವನ್ನು ಕುರಿತು ಮಾತನಾಡುವುದು ತುಂಬ ಕಷ್ಟ.

*(ಸ್ವೆಟ್ಲಾನಾ ಅಲೆಕ್ಸಿಯೇವಿಚ್ ತನ್ನ ನೊಬೆಲ್ ಪ್ರಶಸ್ತಿಯನ್ನು ಸ್ವೀಕರಿಸಿದ ಸಂದರ್ಭದಲ್ಲಿ ಮಾಡಿದ ಭಾಷಣದ ಸಂಗ್ರಹ.*

*ಸ್ವೆಟ್ಲಾನಾ ಒಬ್ಬ ಬೆಲರೂಸ್ಯನ್ ತನಿಖಾ ಪತ್ರಕರ್ತೆ ಹಾಗೂ ರಷ್ಯನ್ ಭಾಷೆಯ ಲೇಖಕಿ. ೨೦೧೫ರಲ್ಲಿ ಸಾಹಿತ್ಯ ಕ್ಷೇತ್ರಕ್ಕೆ ಕೊಡುವ ನೊಬೆಲ್ ಪ್ರಶಸ್ತಿಗೆ ಪಾತ್ರರಾದವರು.)*

ಕನ್ನಡಕ್ಕೆ : **ಕೆ. ರಘುನಾಥ್**
೧೬೦೮, ಇ-೩, ಲೋಕ್‌ಧರ, ಫೇಸ್ ೩, ಕಲ್ಯಾಣ್ ಪೂರ್ವ, ಥಾಣೆ–೪೨೧೩೦೬, ಮಹಾರಾಷ್ಟ್ರ

Founder : Sri K. Ramaratnam



*With Best Compliments*

For Your requirements of Solar PV Module Materials
Like Silicon Solar Cells, ARC Coated Glass,
Aluminium Frames for Modules & Junction Box,
Eva Sheet, Back Sheet,
Interconnect Ribbons & Bus Bar

# M/S. AMS INC.

No. 83, 2nd Main, 5th Cross, MSR Nagar
Bangalore - 560 054. Tel No. : +91 - 080- 23605452 / 23604345
Cell No. : 098450 26703 / 98451 26703 / 9740805782
Email : info@amsinc.in



ತೀಸ್ತಾ ಸೆಟಲ್‌ವಾಡ್

ರಾಣಾ ಅಯೂಬ್ ತನ್ನ ಪತ್ರಕರ್ತೆಯ ಅಸಲಿ ವ್ಯಕ್ತಿತ್ವವನ್ನು ತ್ಯಜಿಸಿ, ಗುಜರಾತ್‌ನ ಅಭಿವೃದ್ಧಿ ಮಾದರಿ ಕುರಿತ ಡಾಕ್ಯುಮೆಂಟರಿ ನಿರ್ಮಿಸುವ ನಿರ್ದೇಶಕಿಯ ಹೊಸ ಪಾತ್ರವನ್ನು ನಟಿಸಬೇಕಾಯಿತು, ತನ್ನ ಮುಸ್ಲಿಮ್ ಹೆಸರನ್ನು ಮುಚ್ಚಿಟ್ಟು 'ಮೈಥಿಲಿ ತ್ಯಾಗಿ' ಎಂಬ ಅಪ್ಪಟ ಹಿಂದು ಹೆಸರಿನಲ್ಲಿ ಸಂಭಾಷಣೆ ಒಪ್ಪಿಸಬೇಕಾಯಿತು. 'ಗುಜರಾತ್ ಫೈಲ್ಸ್ ' ಗುಜರಾತ್‌ನ ಹಿರಿಯ ಅಧಿಕಾರಿಗಳು ಮತ್ತು ರಾಜಕಾರಣಿಗಳ ಜೊತೆ ಮೈಥಿಲಿ ತ್ಯಾಗಿ ಎಂಬ ಪಾತ್ರದಲ್ಲಿ ರಾಣಾ ನಡೆಸಿದ ಸಂದರ್ಶನಗಳ ಒಂದು ದಾಖಲೆ.

**ಜಿ. ರಾಜಶೇಖರ**

**ಚ**ರಿತ್ರೆಯಲ್ಲಿ ಆಗಿಹೋದ ಮಹಾನುಭಾವರಿಗೆ ಸ್ಮಾರಕಗಳನ್ನು ಕಟ್ಟುವುದು ಹಿಂದಿನಿಂದಲೂ ರೂಢಿಯಲ್ಲಿದೆ. ಕಾಲಗತಿಗೆ ಮಹತ್ವದ ತಿರುವು ಕೊಟ್ಟ ಚಳುವಳಿ, ಘಟನೆ ಮತ್ತು ಸಂಶೋಧನೆಗಳಿಗೂ ಸ್ಮಾರಕಗಳಿವೆ. ಸ್ಮಾರಕಗಳು ಇರುವುದು ನೆನಪು ಮಾಡಿಕೊಳ್ಳುವುದಕ್ಕೆ. ಹಾಗಾಗಿ ಮನುಷ್ಯನ ಮಹತ್ಸಾಧನೆಗಳ ಜೊತೆ, ಬಲಾಢ್ಯರು ಅಸಹಾಯಕರ ಮೇಲೆ ನಡೆಸುವ ಹಿಂಸೆ, ಸುಲಿಗೆ ಶೋಷಣೆಗಳಿಗೂ ಸ್ಮಾರಕಗಳು ಅತ್ಯವಶ್ಯ. ಗತಕಾಲದ ಹಿಂಸೆ, ನೋವುಗಳು ಭವಿಷ್ಯದಲ್ಲಿ ಮರುಕಳಿಸದಂತೆ ಎಚ್ಚರ ವಹಿಸಲು ಇಂತಹ ಸ್ಮಾರಕಗಳು ನೆರವಾಗುತ್ತವೆ. ಮುಂದಿನ ಪೀಳಿಗೆಯವರು ತಮ್ಮ ಪಿತೃ ಪಿತಾಮಹರನ್ನು ಅವರ ಸಾಧನೆಗಳ ಜೊತೆಗೆ ಅವರು ಅನುಭವಿಸಿದ ನೋವು, ದಾಸ್ಯ, ಅವಮಾನಗಳನ್ನು ಸಹ ನೆನಪಿಸಿಕೊಳ್ಳಬೇಕು. ನೆನಪು, ಬಲಾಢ್ಯರ ಅಧಿಕಾರ ಮತ್ತು ಯಜಮಾನಿಕೆಯ ವಿರುದ್ಧ ದುರ್ಬಲರ ಪ್ರತಿಭಟನೆಯೂ ಹೌದು. ಖ್ಯಾತ ಲೇಖಕ ಮಿಲನ್ ಕುಂದೇರಾ ಹೇಳುವ ಹಾಗೆ, "ಅಧಿಕಾರದ ವಿರುದ್ಧ ವ್ಯಕ್ತಿಯೊಬ್ಬನ ಹೋರಾಟವೆಂದರೆ ಮರೆವಿನ ವಿರುದ್ಧ ನೆನಪಿನ ಹೋರಾಟ." ಅಧಿಕಾರ, ತನ್ನ ಅಕೃತ್ಯಗಳನ್ನು ಪ್ರಜೆ ಮರೆತುಬಿಡಬೇಕು ಎಂದು ಸದಾ ಬಯಸುವುದರಿಂದ ದಮನದ ನೆನಪು ಅಳಿಯದಂತೆ ಕಾಪಾಡಿಕೊಳ್ಳುವುದು ಕೂಡ ಅಧಿಕಾರದ ವಿರುದ್ಧ ಹೋರಾಟವೇ ಆಗುತ್ತದೆ. ಕಳೆದ ಶತಮಾನದ ದ್ವಿತೀಯ ಮಹಾಯುದ್ಧದ ದಿನಗಳಲ್ಲಿ ಜರ್ಮನಿಯ ನಾಝಿಗಳು ನಡೆಸಿದ ಯಹೂದಿಗಳ ನರಮೇಧಕ್ಕೆ ಯಹೂದಿ ರಾಷ್ಟ್ರ ಇಸ್ರೇಲ್ ಮಾತ್ರವಲ್ಲ, ಜರ್ಮನಿಯಲ್ಲಿ ಕೂಡ ಸ್ಮಾರಕಗಳನ್ನು ನಿರ್ಮಿಸಲಾಗಿದೆ. ಜಪಾನ್‌ನ ಹಿರೋಶಿಮಾ, ನಾಗಸಾಕಿಗಳ ಮೇಲೆ ನಡೆಸಿದ ಅಣುಬಾಂಬ್ ಸ್ಫೋಟದ ನೆನಪನ್ನು ಸ್ಮಾರಕಗಳ ಮೂಲಕ ಶಾಶ್ವತಗೊಳಿಸಲಾಗಿದೆ. ಸಾಮೂಹಿಕ ಹಿಂಸೆ ಮತ್ತು ದಮನಕ್ಕೆ ಈ ಬಗೆಯ ಸ್ಮಾರಕಗಳನ್ನು ಜಗತ್ತಿನ ಹಲವೆಡೆ ಕಟ್ಟಲಾಗಿದೆ. ಆದರೆ ಭಾರತದಲ್ಲಿ, ಸ್ವಾತಂತ್ರ್ಯಾನಂತರ ನಡೆದ ಹಿಂಸೆ ಬಿಡಿ, ಸ್ವಾತಂತ್ರ್ಯದ ಸಂದರ್ಭದಲ್ಲೇ ಸಂಭವಿಸಿದ ದೇಶವಿಭಜನೆಯ ಅಗಾಧ ಹಿಂಸೆ, ಲೂಟಿ ಮತ್ತು ಒತ್ತಾಯದ ಸ್ಥಳಾಂತರಗಳಿಗೂ ಸಹ ಒಂದೇ ಒಂದು ಸ್ಮಾರಕವಿಲ್ಲ! ಖ್ಯಾತ ಮಾನವ ಹಕ್ಕು ಹೋರಾಟಗಾರ್ತಿ ತೀಸ್ತಾ ಸೆಟಲ್‌ವಾಡ್ ಗುಜರಾತ್ ೨೦೦೨ರ ಹಿಂಸಾಕಾಂಡಕ್ಕೆ ಒಂದು ಸ್ಮಾರಕ ನಿರ್ಮಿಸಲು ಯೋಚಿಸಿದ್ದರು. ಪೋಲೆಂಡ್‌ನ ಆಷ್‌ವಿಟ್ಜ್ ಮತ್ತು ಯುರೋಪಿನ ಹಲವು ದೇಶಗಳಲ್ಲಿ, ನಾಝಿಗಳು ಯಹೂದಿಗಳನ್ನು ಸಾಮೂಹಿಕವಾಗಿ ಬಂಧನದಲ್ಲಿಡುತ್ತಿದ್ದ ಕೂಡುದೊಡ್ಡಿಗಳನ್ನೇ 'ನರಮೇಧದ ಸ್ಮಾರಕ'ಗಳನ್ನಾಗಿ ಪರಿವರ್ತಿಸಲಾಗಿದೆ. ಅದೇ ಮಾದರಿಯಲ್ಲಿ 'ಗುಜರಾತ್ – ೨೦೦೨'ರ ಹಿಂಸಾಚಾರದಲ್ಲಿ ರಾಜ್ಯದ ರಾಜಧಾನಿ ಅಹ್ಮದಾಬಾದ್‌ನಲ್ಲಿ

# ಗುಜರಾತ್ ೨೦೦೨ರ ನರಹತ್ಯೆಗೊಂದು ಸ್ಮಾರಕ



೨೦೦೨ರಲ್ಲಿ ನಡೆದ ಗುಜರಾತಿನ ಹಿಂಸಾಕಾಂಡ



*ಜಪಾನ್‌ನ ಹಿರೋಶಿಮಾ, ನಾಗಸಾಕಿಗಳ ಮೇಲೆ ನಡೆಸಿದ ಅಣುಬಾಂಬ್ ಸ್ಫೋಟ*



*ನಾಝಿಗಳು ಯಹೂದಿಗಳನ್ನು ಸಾಮೂಹಿಕವಾಗಿ ಬಂಧನದಲ್ಲಿಡುತ್ತಿದ್ದ ಕೂಡುದೊಡ್ಡಿಗಳು*

ಮಾಜಿ ಲೋಕಸಭಾ ಸದಸ್ಯ ಎಹ್ಸಾನ್ ಜಾಫ್ರಿ ಸೇರಿದಂತೆ ೭೦ಕ್ಕೂ ಹೆಚ್ಚು ಮುಸ್ಲಿಮರು ಹತ್ಯೆಯಾದ ಗುಲ್ಬರ್ಗ್ ಸೊಸೈಟಿ ಬಹು ಅಂತಸ್ತು ಕಟ್ಟಡವನ್ನು ಒಂದು ಸ್ಮಾರಕವಾಗಿಸಲು ತೀಸ್ತಾ ಉದ್ದೇಶಿಸಿದ್ದರು. ಆದರೆ ಅದಕ್ಕೆ ಅವಶ್ಯವಾದ ಹಣ ಸಂಗ್ರಹವಾಗದಿದ್ದುದು ಹಾಗೂ ಗುಜರಾತ್ ಬಿ.ಜೆ.ಪಿ. ಸರಕಾರ ತೀಸ್ತಾರ ವಿರುದ್ಧ ನಿರಂತರವಾಗಿ ನಡೆಸಿದ ಕುತಂತ್ರ ಮತ್ತು ಕಿರುಕುಳಗಳಿಂದಾಗಿ ಈ ಯೋಜನೆ ಕೈಗೂಡಲಿಲ್ಲ. ಆದರೆ ಗುಜರಾತ್ ೨೦೦೨ರ ಹಿಂಸೆಗೆ ಶಿಲ್ಪ ಅಥವಾ ವಾಸ್ತು ರೂಪದ ಸ್ಮಾರಕ ನಿರ್ಮಿಸಲಾಗದಿದ್ದರೂ ಆ ಹಿಂಸೆ ಕುರಿತು ಸಾಕ್ಷ್ಯಾಧಾರ ಸಮೇತ ಹಲವು ವರದಿ, ನಿರೂಪಣೆ, ಕಥನ ಹಾಗೂ ಸಾಕ್ಷ್ಯಚಿತ್ರ, ಕಥಾಚಿತ್ರಗಳು ಹೊರಬಂದಿದ್ದು, ಅವನ್ನು ನಾವು ದಾಖಲೆ ಮತ್ತು ಸ್ಮಾರಕಗಳೆಂದೇ ಪರಿಗಣಿಸಬಹುದಾಗಿದೆ. ಉದಾಹರಣೆಗೆ, ತೀಸ್ತಾ ಸೆಟಲ್‌ವಾಡ್ ಸಿದ್ಧಪಡಿಸಿರುವ ಸಚಿತ್ರ ವರದಿ, Genocide - Gujarat 2002, Communalism Combat. No. ೭೭–೭೮ ಸಿದ್ಧಾರ್ಥ ವರದರಾಜನ್ ಸಂಪಾದಿಸಿದ Gujarat The making of a tragedy. (Penguin Pub. New Delhi– ೨೦೦೨), ತೆಹೆಲ್ಕಾ ಪತ್ರಕರ್ತ ಅಶೀಶ್ ಖೇತಾನ್ ಅವರ ಕುಟುಕು ಕಾರ್ಯಾಚರಣೆಯ ಸುದೀರ್ಘ ಪತ್ರಿಕಾ ವರದಿ – Gujarat. The truth in the words of men who did it (ತೆಹೆಲ್ಕಾ ವಿಶೇಷ ಸಂಚಿಕೆ ೩, ನವೆಂಬರ್ ೨೦೦೭), ಚಲನಚಿತ್ರ ನಿರ್ದೇಶಕ ರಾಹುಲ್ ಶರ್ಮ ಅವರ ಸಾಕ್ಷ್ಯಚಿತ್ರ The Final solution, ರಾಹುಲ್ ದೊಲಾಕಿಯಾ ಅವರ ಚಲನಚಿತ್ರ 'ಪರ್ಜಾನಿಯಾ', ಟೈಮ್ಸ್ ಆಫ್ ಇಂಡಿಯಾದ ವಿಶೇಷ ಬಾತ್ಮೀದಾರರೊಬ್ಬರ The Fiction of Fact finding, ಇತ್ಯಾದಿ. ಈ ಸಾಲಿಗೆ ಇತ್ತೀಚೆಗೆ ಸೇರ್ಪಡೆಯಾದ ಇನ್ನೊಂದು ಮಹತ್ವದ ಶಬ್ದರೂಪದ ದಾಖಲೆ ಎಂದರೆ ಪತ್ರಕರ್ತೆ ರಾಣಾ ಅಯೂಬ್ ಅವರ ಪುಸ್ತಕ Gujarat Files - The Anatomy of a cover up – ೨೦೧೬. ಗುಜರಾತ್ ಹಿಂಸಾಕಾಂಡದಲ್ಲಿ ಖುದ್ದಾಗಿ ಪಾಲುಗೊಂಡ ಸಂಘಪರಿವಾರದ ಕಾಲಾಳುಗಳ 'ಸಾಹಸ ಕೃತ್ಯಗಳ' ನಿರೂಪಣೆಯನ್ನು ಅವರ ಬಾಯಿಂದಲೇ ಹೊರಡಿಸಿ ಅದನ್ನು ದೃಶ್ಯ, ಶ್ರಾವ್ಯ ರೂಪದಲ್ಲಿ ದಾಖಲಿಸಿಕೊಂಡ ಪತ್ರಕರ್ತ ಅಶೀಶ್ ಖೇತಾನ್‌ರಂತೆ ರಾಣಾ ಅಯೂಬ್ ಸಹ ತೆಹೆಲ್ಕಾ ಪತ್ರಿಕೆಯಲ್ಲಿ ಪತ್ರಕರ್ತರಾಗಿದ್ದರು. ಅಶೀಶ್ ಖೇತಾನ್ ಅವರ ವರದಿ ಹಿಂಸಾಕೃತ್ಯಗಳನ್ನು ನಡೆಸಿದವರೇ ತಮ್ಮ ಬಗ್ಗೆ ಹೇಳಿಕೊಂಡ ಕಥನವಾದರೆ, ರಾಣಾ ಅಯೂಬ್ ಅವರ ಗುಜರಾತ್ ಫೈಲ್ಸ್ ೨೦೦೨ರ ದಿನಗಳಲ್ಲಿ, ಗುಜರಾತ್‌ನ ಆಡಳಿತ ಮತ್ತು ಪೊಲೀಸು ಇಲಾಖೆಗಳಲ್ಲಿ ಹಿರಿಯ ಹುದ್ದೆಗಳಲ್ಲಿದ್ದು ರಾಜ್ಯದ ಹಿಂಸಾಕಾಂಡಕ್ಕೆ ಉತ್ತರದಾಯಿಗಳಾದ ಹಿರಿಯ ಅಧಿಕಾರಿಗಳು ತಮ್ಮ ಅಧಿಕಾರ ನಿರ್ವಹಣೆಯ ಕುರಿತು ಹೇಳಿಕೊಂಡದ್ದರ ದಾಖಲೆಯಾಗಿದೆ. ರಾಣಾ ಅಯೂಬ್ ಈ ವರದಿಯನ್ನು ತೆಹೆಲ್ಕಾ ಪತ್ರಿಕೆಗಾಗಿ ಸಿದ್ಧಪಡಿಸಿ ಅದನ್ನು ದೃಶ್ಯ ಹಾಗೂ ಶ್ರಾವ್ಯ ಎರಡು ಬಗೆಗಳಲ್ಲೂ ಗುಪ್ತವಾಗಿ ದಾಖಲಿಸಿಕೊಂಡಿದ್ದರು. ಅದಕ್ಕಾಗಿ ರಾಣಾ ತನ್ನ ಉಡುಪಿನಲ್ಲಿ ಗುಪ್ತ ಕ್ಯಾಮೆರಾ, ಗುಪ್ತ ರೆಕಾರ್ಡರ್ ಮತ್ತು ಚಾರ್ಜರ್‌ಗಳನ್ನು ಅಳವಡಿಸಿಕೊಳ್ಳುವುದರ ಜೊತೆಗೆ ತನ್ನ ಮುಸ್ಲಿಮ್ ಹೆಸರನ್ನೂ ಬದಲಾಯಿಸಿಕೊಳ್ಳಬೇಕಾಯಿತು. ಹೆಚ್ಚಿನ ರಾಜಕಾರಣಿಗಳಿಗೆ, ರಾಣಾ ಅಯೂಬ್ ಅವರ ಮುಖ ಪರಿಚಿತವಾಗಿದ್ದುದರಿಂದ, ಆಕೆ ಹೊಸ ಪಾತ್ರವನ್ನೇ ನಟಿಸುವುದು ಅನಿವಾರ್ಯವಾಯಿತು.

ರಾಣಾ ಅಯೂಬ್ ಅವರ ಈ ರೂಪಾಂತರಕ್ಕೆ ಒಂದು ಹಿನ್ನೆಲೆ ಇದೆ. ೨೦೦೭ರಲ್ಲಿ ಸ್ವಲ್ಪ ಸಮಯ ರಾಣಾ, ಒಂದು ಟೆಲಿವಿಷನ್ ಚಾನೆಲ್‌ನಲ್ಲಿ ವರದಿಗಾರ್ತಿಯಾಗಿದ್ದರು. ೨೦೦೭ರ ಗುಜರಾತ್ ವಿಧಾನ ಸಭಾ ಚುನಾವಣೆಯನ್ನು ವರದಿ ಮಾಡುವುದು ಅವರ ಕೆಲಸದ ಭಾಗವಾಗಿತ್ತು. ಈ ಚುನಾವಣೆಯಲ್ಲಿ ಒಬ್ಬ ಸ್ಟಾರ್ ಅಭ್ಯರ್ಥಿಯೂ ರಾಜ್ಯದ ಮುಖ್ಯಮಂತ್ರಿಯೂ ಆಗಿದ್ದ ನರೇಂದ್ರ ಮೋದಿ, ತನ್ನ ಒಂದು ಪ್ರಚಾರ ಭಾಷಣದಲ್ಲಿ ಸಭಿಕರನ್ನು ಉದ್ದೇಶಿಸಿ, "ಸೊಹ್ರಾಬುದ್ದೀನ್ ಅಂತಹವರನ್ನು (ಶಂಕಿತ ಲಷ್ಕರ್ – ಇ – ತೈಬಾ ಉಗ್ರಗಾಮಿ) ನಾನು ಏನು ಮಾಡಬೇಕು?" ಎಂದು ಸವಾಲು ಹಾಕಿದರು. ಮತದಾರರು ಒಕ್ಕೊರಲಲ್ಲಿ "ಅವನನ್ನು ಕೊಲ್ಲಿ, ಅವನನ್ನು ಕೊಲ್ಲಿ" ಎಂದು ಕಿರುಚಿಕೊಂಡರು. ಭಾಷಣ ಮುಗಿಸಿ ಮುಖ್ಯಮಂತ್ರಿ ವೇದಿಕೆಯಿಂದ ಕೆಳಗೆ ಇಳಿಯುತ್ತಿದ್ದಂತೆ ರಾಣಾ ಮುಂದೆ ನುಗ್ಗಿ ಅವರ ಮುಖಕ್ಕೆ ಮೈಕ್ ಹಿಡಿದು, "ಮೋದೀಜಿ, ಸೊಹ್ರಾಬುದ್ದೀನ್‌ನನ್ನು ಎನ್‌ಕೌಂಟರ್ ಕೊಲೆ ಮಾಡಿದ್ದಕ್ಕೆ ಮೂವರು ಹಿರಿಯ ಪೊಲೀಸು ಅಧಿಕಾರಿಗಳನ್ನು ಬಂಧಿಸಲಾಗಿದೆ. ಈಗಲೂ ಸೊಹ್ರಾಬುದ್ದೀನ್ ಬಗ್ಗೆ ನೀವು ಆಡಿದ ಮಾತನ್ನು ಸಮರ್ಥಿಸಿಕೊಳ್ಳುತ್ತೀರಾ?" ಎಂದು ಕೇಳಿದರು. ರಾಣಾ ಅವರ ಪ್ರಶ್ನೆಗೆ ಸ್ತಂಭೀಭೂತರಾದ ಮುಖ್ಯಮಂತ್ರಿ, ಕೆಲಕ್ಷಣ ಆಕೆಯನ್ನೇ ದುರುಗುಟ್ಟಿ ನೋಡಿ ಮರುಮಾತಿಲ್ಲದೆ ಮುಂದೆ ನಡೆದರು. ಕೊಲೆಯಂತಹ ಕ್ರಿಮಿನಲ್ ಅಪರಾಧದ ನ್ಯಾಯ ತೀರ್ಮಾನ ಮಾಡುವುದು ನಾಗರಿಕ ದೇಶಗಳಲ್ಲಿ ನ್ಯಾಯಾಲಯವೇ ಹೊರತು, ಚುನಾವಣೆಗಳಲ್ಲ. ನರೇಂದ್ರ ಮೋದಿ ತನ್ನ ಸರಕಾರದ ಅಕೃತ್ಯಗಳಿಗೆ ಮತದಾರರ ಒಪ್ಪಿಗೆ ಪಡೆಯುವ ಜನಮರುಳು ಮಾತುಗಾರಿಕೆಯ ಮೂಲಕ ದೇಶದ ಸಂವಿಧಾನ ಹಾಗೂ ಕಾನೂನಿನ ಆಳ್ವಿಕೆಯಲ್ಲಿ ತನಗೆ ನಂಬಿಕೆ ಇಲ್ಲ ಎಂಬುದನ್ನು ಸಾರಿ ಹೇಳಿದ್ದರು. ಜೊತೆಗೆ ಗುಜರಾತ್ ೨೦೦೨ – ಒಮ್ಮೆ ಮಾತ್ರ ಅಚಾನಕ್ ಆಗಿ ನಡೆದ ದುರ್ಘಟನೆ ಅಲ್ಲ. ಅದು ಸರಕಾರದ ಧೋರಣೆಯ ಭಾಗವಾಗಿಯೇ ನಡೆದಿದೆ ಮತ್ತು ಅದಕ್ಕೆ ಜನಬೆಂಬಲವೂ ಇದೆ ಎಂಬುದನ್ನೂ ಮೋದಿ,

ಅಂದು ಸಾಬೀತುಪಡಿಸಿದ್ದರು. ಪ್ರಜೆಗಳ ಜೀವ, ಆಸ್ತಿ ಮತ್ತು ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಕಾಪಾಡುವ ಸಂವಿಧಾನಾತ್ಮಕ ಹೊಣೆಗಾರಿಕೆಯಿಂದ ಪ್ರಭುತ್ವ ಕಳಚಿಕೊಂಡಿತ್ತು, ಸಾವಿರಾರು ಅಮಾಯಕ ಪ್ರಜೆಗಳ ಸಾಮೂಹಿಕ ಹತ್ಯಾಕಾಂಡದಲ್ಲಿ ಯಾರೂ ಹೊಣೆಗಾರರಲ್ಲದ ದುರ್ಭರ ಸನ್ನಿವೇಶವೊಂದು ಗುಜರಾತ್‌ನಲ್ಲಿ ನಿರ್ಮಾಣವಾಯಿತು. ರಾಣಾ ಅಯೂಬ್ ಅವರ ಪುಸ್ತಕ ಈ ವಿದ್ಯಮಾನದ ಒಂದು ದಾಖಲೆ ಹಾಗೂ ಸ್ಮಾರಕ. ಮುಂಬಯಿಯ ತರುಣಿ ಇಶ್ರತ್ ಜಹಾನ್, ಸೊಹ್ರಾಬುದ್ದೀನ್ ಮತ್ತು ಆತನ ಪತ್ನಿ ಕೌಸರ್ ಬೀ ಕೊಲೆಗೆ ಸಂಬಂಧಿಸಿ ಸಿ.ಬಿ.ಐ. ಪೊಲೀಸರು ಗುಜರಾತ್ ಹಿರಿಯ ಪೊಲೀಸು ಅಧಿಕಾರಿಗಳನ್ನು ಮಾತ್ರವಲ್ಲ, ಆಗ ಗುಜರಾತ್‌ನ ಓರ್ವ ಪ್ರಭಾವಿ ಮಂತ್ರಿ ಹಾಗೂ ಬಿ.ಜೆ.ಪಿ. ಮುಖಂಡರಾಗಿದ್ದ ಅಮಿತ್ ಶಾ ಅವರನ್ನು ಸಹ ದಸ್ತಗಿರಿ ಮಾಡಿದ್ದರು. ಗುಜರಾತ್‌ನಲ್ಲಿ ಕಾನೂನು ವ್ಯವಸ್ಥೆಯನ್ನೇ ಬುಡಮೇಲು ಮಾಡಲಾಗಿದ್ದರಿಂದ ಕೋಮು, ಹಿಂಸೆ, ಎನ್‌ಕೌಂಟರ್ ಹತ್ಯೆ, ರಾಜಕೀಯ ಕೊಲೆಗಳಂತಹ ಕ್ರಿಮಿನಲ್ ಕೃತ್ಯಗಳ ಸತ್ಯ ಹೊರಬರಬೇಕಾಗಿತ್ತು. ಪತ್ರಕರ್ತೆಯಾಗಿ ರಾಣಾ ಅಯೂಬ್ ಈ ಬಗ್ಗೆ ಸಾಕಷ್ಟು ಮಾಹಿತಿ ಸಂಗ್ರಹಿಸಿದ್ದರು. ಆದರೆ ನಡೆದ ಸಂಗತಿಗಳ ಬಗ್ಗೆ ಅವರಿಗೆ ಬಾಯ್ದೆರೆಯಾಗಿ ಹೇಳಿದವರೆಲ್ಲ, ತಮ್ಮ ಮಾತಿಗೆ ಮೊದಲೇ 'ಆಫ್ ದಿ ರೆಕಾರ್ಡ್' ಎಂದು ಷರಾ ಹಾಕಿದ್ದರು. ಆ ನಿರೂಪಣೆಗಳನ್ನು ಹಾಗೆ ಹಾಗೆಯೇ ಪ್ರಕಟಿಸುವಂತಿರಲಿಲ್ಲ. ಅವು ವಿಶ್ವಾಸಾರ್ಹವಾಗಲು, ಅವನ್ನು ಯಥಾವತ್ತಾಗಿ ದಾಖಲಿಸಿಕೊಳ್ಳುವುದು ಅತ್ಯಗತ್ಯವಾಗಿತ್ತು. ಅದಕ್ಕಾಗಿ ರಾಣಾ ಅಯೂಬ್ ತನ್ನ ಪತ್ರಕರ್ತೆಯ ಅಸಲಿ ವ್ಯಕ್ತಿತ್ವವನ್ನು ತ್ಯಜಿಸಿ, ಗುಜರಾತ್‌ನ ಅಭಿವೃದ್ಧಿ ಮಾದರಿ ಕುರಿತ ಡಾಕ್ಯುಮೆಂಟರಿ ನಿರ್ಮಿಸುವ ನಿರ್ದೇಶಕಿಯ ಹೊಸ ಪಾತ್ರವನ್ನು ನಟಿಸಬೇಕಾಯಿತು, ತನ್ನ ಮುಸ್ಲಿಮ್ ಹೆಸರನ್ನು ಮುಚ್ಚಿಟ್ಟು 'ಮೈಥಿಲಿ ತ್ಯಾಗಿ' ಎಂಬ ಅಪ್ಪಟ ಹಿಂದು ಹೆಸರಿನಲ್ಲಿ ಸಂಭಾಷಣೆ ಒಪ್ಪಿಸಬೇಕಾಯಿತು. 'ಗುಜರಾತ್ ಫೈಲ್ಸ್' ಗುಜರಾತ್‌ನ ಹಿರಿಯ ಅಧಿಕಾರಿಗಳು ಮತ್ತು ರಾಜಕಾರಣಿಗಳ ಜೊತೆ ಮೈಥಿಲಿ ತ್ಯಾಗಿ ಎಂಬ ಪಾತ್ರದಲ್ಲಿ ರಾಣಾ ನಡೆಸಿದ ಸಂದರ್ಶನಗಳ ಒಂದು ದಾಖಲೆ. ಗುಜರಾತ್ ೨೦೦೨ರ ಪ್ರಮುಖ ಭಾಗೀದಾರರ ಜೊತೆ ರಾಣಾ ನಡೆಸಿದ ಸಂದರ್ಶನಗಳನ್ನು ಆಧರಿಸಿದ ಈ ಕೃತಿಗೆ ನ್ಯಾಯಮೂರ್ತಿ ಬಿ. ಎನ್. ಶ್ರೀಕೃಷ್ಣ ಮುನ್ನುಡಿ ಬರೆದಿರುವುದು ಈ ಪುಸ್ತಕದ ಮೌಲಿಕತೆಗೆ ಒಂದು ನಿದರ್ಶನವಾಗಿದೆ. ಸುಮಾರು ಒಂದು ಸಾವಿರ ಪ್ರಜೆಗಳು (ಅವರಲ್ಲಿ ಹೆಚ್ಚಿನವರು ಮುಸ್ಲಿಮರು) ಪ್ರಾಣ ಕಳೆದುಕೊಂಡ ೧೯೯೨–೯೩ರ ಮುಂಬಯಿಯ ಹಿಂಸಾಕಾಂಡ ಕುರಿತು ಸುದೀರ್ಘ ನ್ಯಾಯಾಂಗ ವಿಚಾರಣೆ ನಡೆಸಿ, ಬಿ.ಜೆ.ಪಿ., ಶಿವಸೇನೆ ಮತ್ತು ಕೆಲವೆಡೆ ಕಾಂಗ್ರೆಸ್ ಪಕ್ಷದ ಪುಢಾರಿಗಳು ಸಹ ಕೋಮುದ್ವೇಷದ ಈ ಹಿಂಸಾಕಾಂಡದಲ್ಲಿ ಭಾಗವಹಿಸಿದ್ದನ್ನು ಸಾಕ್ಷ್ಯಾಧಾರ ಸಮೇತ ಸಾಬೀತುಪಡಿಸುವ ಸಮಗ್ರ ವರದಿಯೊಂದನ್ನು ಬಿ. ಎನ್. ಶ್ರೀಕೃಷ್ಣ ಕೇಂದ್ರ ಸರಕಾರಕ್ಕೆ ಸಲ್ಲಿಸಿದ್ದರು. ಆ ವರದಿ ಪುಸ್ತಕ ರೂಪದಲ್ಲಿಯೂ ಪ್ರಕಟವಾಗಿದ್ದು ಸ್ವತಂತ್ರ ಭಾರತದ ಕೋಮುಹಿಂಸೆಯ ಅತ್ಯಂತ ಭೀಕರ ಪ್ರಕರಣವೊಂದರ ತಲಸ್ಪರ್ಶಿಯಾದ ದಾಖಲೆಯಾಗಿದೆ; ಅದು ಮುಂಬೈ ೧೯೯೨–೯೩ರ ಕೋಮುಹಿಂಸೆಗೆ ಶಬ್ದಗಳಲ್ಲಿ ಕಟ್ಟಿದ ಒಂದು ಸ್ಮಾರಕವೂ ಹೌದು (Damning Verdict - Sri Krishna Commission Report - Mumbai Riots 1992-93 - Sabrang, Mumbai).

ಮೈಥಿಲಿ ತ್ಯಾಗಿ ಎಂಬ ಡಾಕ್ಯುಮೆಂಟರಿ ನಿರ್ಮಾಪಕಿಯ ಪಾತ್ರದಲ್ಲಿ ರಾಣಾ ಮೊತ್ತ ಮೊದಲು ಭೇಟಿಯಾದದ್ದು ಗುಜರಾತ್‌ನ ಬಿ.ಜೆ.ಪಿ.ಯ ಓರ್ವ ಪ್ರಭಾವಶಾಲೀ ನಾಯಕಿ ಶ್ರೀಮತಿ ಮಾಯಾ ಕೊಡ್ನಾನಿ ಅವರನ್ನು. ಮಾಯಾ ಕೊಡ್ನಾನಿ ಅಹ್ಮದಾಬಾದ್‌ನ ಓರ್ವ ಪ್ರಸಿದ್ಧ ಪ್ರಸೂತಿ ಶಾಸ್ತ್ರಜ್ಞೆ. ಜನಪ್ರಿಯ ಕ್ಲಿನಿಕ್ ಒಂದನ್ನು ನಡೆಸಿಕೊಂಡು ಹೋಗುವುದರ ಜೊತೆಗೆ ಅವರು ಗುಜರಾತ್ ವಿಧಾನಸಭೆಯಲ್ಲಿ ಬಿ.ಜೆ.ಪಿ. ಶಾಸಕಿ ಹಾಗೂ ರಾಜ್ಯದ ಶಿಶು ಕಲ್ಯಾಣ ಮತ್ತು ಆರೋಗ್ಯ ಮಂತ್ರಿಯೂ ಆಗಿದ್ದರು. ಗುಜರಾತ್ ೨೦೦೨ರ ಹತ್ಯಾಕಾಂಡದಲ್ಲಿ ನೂರಕ್ಕೂ ಹೆಚ್ಚು ಜನ ಸಾವಿಗೀಡಾದ ನರೋದಾ ಪಾಟಿಯಾ, ಮಾಯಾ ಕೊಡ್ನಾನಿ ಅವರ ಕ್ಲಿನಿಕ್‌ನಿಂದ ಕೇವಲ ಕಲ್ಲೆಸೆತದ ದೂರದಲ್ಲಿದೆ. ಅಲ್ಲಿ ಮುಸ್ಲಿಮರ ವಿರುದ್ಧ ಘೋಷಣೆ ಕೂಗುತ್ತ ದಾಳಿ ನಡೆಸಿದ ಕೊಲೆಗಡುಕರ ಗುಂಪಿಗೆ ಮಾಯಾ ಕೊಡ್ನಾನಿ ನಾಯಕಿಯಾಗಿದ್ದರು. ೨೦೦೨ರಲ್ಲಿ ರಾಜ್ಯದ ಪೊಲೀಸು ಇಲಾಖೆಯ ಡೈರೆಕ್ಟರ್ ಜನರಲ್ ಆಗಿದ್ದ ಚಕ್ರವರ್ತಿ, ರಾಣಾ ಜೊತೆ ಮಾತಾಡುತ್ತ ಆರ್.ಎಸ್.ಎಸ್. ಮತ್ತು ಮಾಯಾ ಕೊಡ್ನಾನಿ ಹಿಂಸಾಚಾರದಲ್ಲಿ ಭಾಗಿಯಾಗಿದ್ದರ ಬಗ್ಗೆ ಹೇಳಿದ್ದರು. ನರೋದಾ ಪಾಟಿಯಾ ಪ್ರಕರಣ ಸುಪ್ರೀಮ್ ಕೋರ್ಟ್‌ವರೆಗೆ ಹೋಗಿ, ಮಾಯಾ ಕೊಡ್ನಾನಿ ಜೈಲು ಸೇರಿದ್ದರು. ಜೈಲಿನಲ್ಲಿ ಅವರನ್ನು ಭೇಟಿ ಮಾಡಿದ್ದ ಒಬ್ಬ ಪೊಲೀಸು ಅಧಿಕಾರಿ, ನಂತರ ರಾಣಾಗೆ ತಿಳಿಸಿದ ಪ್ರಕಾರ ಜೈಲಿನಲ್ಲಿ ಮಾಯಾ ಚಿತ್ತಭ್ರಮಣೆ ಆದವರಂತೆ ವರ್ತಿಸುತ್ತಿದ್ದರು; ಯಾವಾಗಲೂ ಅಳುತ್ತಿದ್ದರು (ಪುಟ ೧೬೭). ಮುಸ್ಲಿಮ್ ಸಮುದಾಯವನ್ನು ಮಾಯಾ ಸಾರಾಸಗಟಾಗಿ ದ್ವೇಷಿಸುತ್ತಿದ್ದರು. ಆದರೆ ಮುಖ್ಯಮಂತ್ರಿ ನರೇಂದ್ರ ಮೋದಿ ಬಗ್ಗೆ ಅವರಿಗೆ ಅಸಮಾಧಾನವಿತ್ತು. ಅವರು ತನ್ನನ್ನು ಬಳಸಿಕೊಂಡು, ತನ್ನ ವೈರಿಗಳನ್ನು ನಿರ್ಮೂಲ ಮಾಡಿದರು ಎಂದು ರಾಣಾ ಬಳಿ ಮಾಯಾ ದೂರಿದರು (ಪುಟ ೧೬೮).

ಮಾಯಾ ಕೊಡ್ನಾನಿಯ ಜೊತೆ ಮೊದಲ ಭೇಟಿಯ ನಂತರ, ರಾಣಾ, ಗುಜರಾತ್‌ನ ಉನ್ನತ ಶ್ರೇಣಿಯ ಪೊಲೀಸು ಅಧಿಕಾರಿ ಗಿರೀಶ್ ಸಿಂಘಾಲ್ ಅವರನ್ನು ಭೇಟಿ ಮಾಡಿದರು. ಆ ವೇಳೆಗೆ ಸ್ವತಃ ಸಿಂಘಾಲ್ ಆರೋಪಿ ಸ್ಥಾನದಲ್ಲಿದ್ದರು. ೨೦೦೪ರಲ್ಲಿ ಅಹ್ಮದಾಬಾದ್ ಸಮೀಪ ಮುಂಬೈ ತರುಣಿ ಇಶ್ರತ್ ಜಹಾನ್‌ಳನ್ನು ಹತ್ಯೆ ಮಾಡಲಾಗಿತ್ತು. ಇದು ಗುಜರಾತ್ ಪೊಲೀಸರು ನಡೆಸಿದ ಎನ್‌ಕೌಂಟರ್ ಹತ್ಯೆಯಾಗಿದ್ದು, ಅದರ ನೇತೃತ್ವ ವಹಿಸಿದವರು ಸಿಂಘಾಲ್ ಎಂದು ಅವರ ಮೇಲೆ ಆರೋಪ ಹೊರಿಸಲಾಗಿತ್ತು. ರಾಣಾ ಸಿಂಘಾಲ್‌ರನ್ನು ಭೇಟಿಯಾದಾಗ, ಅವರು ಗುಜರಾತ್ ಪೊಲೀಸು ಇಲಾಖೆಯ ಭಯೋತ್ಪಾದನೆ ನಿಗ್ರಹದಳದ ಮುಖ್ಯಸ್ಥರಾಗಿದ್ದರು; ಆದರೆ ಇಶ್ರತ್ ಜಹಾನ್ ಹತ್ಯೆ ಪ್ರಕರಣದಲ್ಲಿ ಅವರ ಪಾತ್ರ ಕುರಿತು ವಿಶೇಷ ತನಿಖಾದಳ (ಎಸ್.ಐ.ಟಿ.) ಪರಿಶೀಲನೆ ನಡೆಸಿತ್ತು. ಸಿಂಘಾಲ್ ಕುರಿತು ಮಾಧ್ಯಮಗಳಲ್ಲಿ ಅವಹೇಳನಕಾರಿ ವರದಿಗಳು ಪ್ರಕಟವಾಗಿದ್ದವು. ಅದರಿಂದ ನೊಂದ ಅವರ ಹಿರಿಮಗ ಹಾರ್ದಿಕ್ ಆತ್ಮಹತ್ಯೆ ಮಾಡಿಕೊಂಡಿದ್ದ. ತನ್ನ ಮಗನ ಅಗಲಿಕೆಯಂತೂ ಸಿಂಘಾಲ್‌ರನ್ನು ಪೂರ್ತಿ ಧೃತಿಗೆಡಿಸಿತ್ತು. ಸಿಂಘಾಲ್ ಕೆಳಜಾತಿಯಿಂದ ಬಂದವರು. ಅದರಿಂದ ಸಹಜವಾಗಿ ಬರುವ ಕೀಳರಿಮೆಯ ಜೊತೆಗೆ ಎನ್‌ಕೌಂಟರ್ ಪ್ರಕರಣಗಳಲ್ಲಿ ತಮಗಾದ ತೇಜೋವಧೆಯಿಂದ ಅವರು ಖಿನ್ನರಾಗಿದ್ದರು. "ಈ ಪ್ರಕರಣಗಳಲ್ಲಿ ಸಿಕ್ಕಿಬಿದ್ದವರೆಲ್ಲ ಕೆಳಜಾತಿಯವರು. ವ್ಯವಸ್ಥೆ ಅವರನ್ನು ಬಳಸಿ ಬಿಸಾಕುತ್ತದೆ" ಎಂದು ಸಿಂಘಾಲ್ ರಾಣಾ ಜೊತೆಗೆ ಅಲವತ್ತುಕೊಂಡರು (ಪುಟ ೪೨). ಇದು ಗುಜರಾತ್ ರಾಜ್ಯದ ಪೊಲೀಸು ಇಲಾಖೆಯ ಅತ್ಯುನ್ನತ ಹುದ್ದೆಯೊಂದರ ಅಧಿಕಾರಿಯ ಕೊರಗು ಮಾತ್ರವಲ್ಲ, ೨೦೦೨ರ ಹಿಂಸಾಕಾಂಡದ ಉಸ್ತುವಾರಿ ನಡೆಸಿ, ಅದರ ರಾಜಕೀಯ ಫಸಲು ತೆಗೆದುಕೊಂಡವರು ಗುಜರಾತ್‌ನ ಸಂಘಪರಿವಾರದ ಮೇಲುಜಾತಿಗಳ ನಾಯಕರು; ಕೊಲೆ, ಲೂಟಿ, ಮುಂತಾದವನ್ನು

**ENGLISH ಗೊಂದಲ**

ಸದಾ ಕಿರಿಕಿರಿ
ಸ್ಪೆಲ್ಲಿಂಗ್‌ನಲ್ಲೂ
ರಗಳೆ ಇದೆ ನೋಡಿ

"Q" ಒಂದಕ್ಷರ ಸಾಕಿತ್ತು
QUEUE ಐದಕ್ಷರ
ಯಾಕೆ ಬೇಕಿತ್ತು?

**ಶ್ರೀನಿವಾಸ ಕುಂಡಂತಾಯ**
ಸಂಜಯನಗರ, ಬೆಂಗಳೂರು – ೯೪

ನಡೆಸಿ ಪೊಲೀಸು ಕೇಸುಗಳಲ್ಲಿ ಸಿಲುಕಿಕೊಂಡವರೆಲ್ಲ ಆದಿವಾಸಿಗಳು, ದಲಿತರು ಹಾಗೂ ಕೆಳಜಾತಿಗಳವರು. ಉದಾಹರಣೆಗೆ, ೨೦೦೨ರಲ್ಲಿ ಇಂತಹ ಕ್ರಿಮಿನಲ್ ಪ್ರಕರಣಗಳಲ್ಲಿ ಬಂಧಿತರಾಗಿ ಅಹ್ಮದಾಬಾದ್‌ನ ಸಬರ್ಮತಿ ಜೈಲು ಸೇರಿದ ಆರೋಪಿಗಳ ಜಾತಿವಾರು ಸಂಖ್ಯೆ ಹೀಗಿದೆ :

ಬ್ರಾಹ್ಮಣರು – ೨, ಬನಿಯಾಗಳು – ೪, ಪಟೇಲರು – ೧೭, ಇತರ ಮೇಲುಜಾತಿಗಳು –೩೭, ಇತರ ಕೆಳಜಾತಿಗಳು (ಒ.ಬಿ.ಸಿ.) – ೭೪೬, ದಲಿತರು – ೭೯೭.

ಹಿಂದುಗಳೆಲ್ಲ ಒಂದು ಎಂದು ಪ್ರತಿಪಾದಿಸುವ ಸಂಘಪರಿವಾರದ ಜಾತಿ ಆಧಾರಿತ ಶ್ರಮ ವಿಭಜನೆಯ ವೈಖರಿ ಇದು. ಸಿಂಘಾಲ್ ಅವರ ಅಂದಾಜಿನ ಪ್ರಕಾರ, ಅವರು ಏನಿಲ್ಲವೆಂದರೂ ೧೦ ಎನ್‌ಕೌಂಟರ್‌ಗಳನ್ನು ನಡೆಸಿರಬಹುದು (ಪುಟ ೪೯). ಅವರಿಗೆ ಆ ಬಗ್ಗೆ ಪಶ್ಚಾತ್ತಾಪವೂ ಇತ್ತು. ಕಾನೂನು ಮತ್ತು ನೈತಿಕತೆ ಎರಡಕ್ಕೂ ವಿರುದ್ಧವಾಗಿ ತಾವು ಮುಸ್ಲಿಮರನ್ನು ಕೊಂದ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುವ ಹಿಂದೂ ವೀರರಿಗೆ ಹೋಲಿಸಿದರೆ ಸಿಂಘಾಲ್‌ರಂತಹವರು ಸಜ್ಜನರ ಹಾಗೆ ಕಾಣುತ್ತಾರೆ. ಆದರೂ ತಮ್ಮ ಅಧಿಕಾರ ನಿರ್ವಹಣೆಯಲ್ಲಿ ಮಾತ್ರ ಅವರು ಮೇಲಿನವರ ಬಾಯ್ದೆರೆ ಆಜ್ಞೆಗಳನ್ನು ಮರುಮಾತಿಲ್ಲದೆ ಜಾರಿಗೊಳಿಸಿದರು! ರಾಣಾ ಹೇಳುವಂತೆ ಸಿಂಘಾಲ್‌ರಂತಹ ಅಧಿಕಾರಿಗಳು "ಗುಜರಾತ್‌ನಲ್ಲಿ ಅಪವಾದವಲ್ಲ. ಅವರು ರಾಜ್ಯದ ಎಲ್ಲಾ ಅಧಿಕಾರಿಗಳ ಸರಾಸರಿ."

ತನ್ನ ಈ ಕುಟುಕು ಕಾರ್ಯಾಚರಣೆಯಲ್ಲಿ ರಾಣಾ ಸಂದರ್ಶಿಸಿದ ಗುಜರಾತ್‌ನ ಮತ್ತೋರ್ವ ಹಿರಿಯ ಪೊಲೀಸ್ ಅಧಿಕಾರಿ ರಾಜನ್ ಪ್ರಿಯದರ್ಶಿ ಓರ್ವ ಮಾಮೂಲು ಅಧಿಕಾರಿ ಅಲ್ಲ. ತನ್ನ ಮಿತಿಯೊಳಗೆ ಕಾನೂನನ್ನು ಪಾಲಿಸಿ ತನ್ನ ಆತ್ಮಸಾಕ್ಷಿಗೆ ಅನುಗುಣವಾಗಿಯೂ ನಡೆದುಕೊಂಡ ಅಪರೂಪದ ಪೊಲೀಸ್ ಅಧಿಕಾರಿ ಅವರು. ರಾಜನ್ ದಲಿತ ಸಮುದಾಯದಿಂದ ಬಂದವರು. ೧೯೮೦ರ ಐ.ಪಿ.ಎಸ್. ಬ್ಯಾಚ್‌ನ ಅಧಿಕಾರಿಯಾಗಿದ್ದು ರಾಜನ್ ತನ್ನ ಹಳ್ಳಿಯಲ್ಲಿ ಎಲ್ಲರಿಂದ ನಮಸ್ಕಾರ ಪಡೆಯುತ್ತಿದ್ದರು; ಹಲವರು ಅವರ ಬಳಿ ತಮ್ಮ ಕಷ್ಟಗಳನ್ನು ಹೇಳಿಕೊಂಡು ಪರಿಹಾರ ಪಡೆಯುತ್ತಿದ್ದರು. ಆದರೆ ಅವರ ಹಳ್ಳಿಯಲ್ಲಿ ಮೇಲುಜಾತಿಯವರ ಕೇರಿಗಳಲ್ಲಿ ಯಾರೂ ರಾಜನ್‌ಗೆ ಮನೆ ಕೊಡುತ್ತಿರಲಿಲ್ಲ. ಅಷ್ಟೇ ಯಾಕೆ? ಆ ಹಳ್ಳಿಯ ಕ್ಷೌರಿಕ, ಅವರ ಕ್ಷೌರ ಮಾಡುತ್ತಿರಲಿಲ್ಲ! (ಪುಟ ೫೩). ಸಿಂಘಾಲ್‌ರ ಹಾಗೆ ರಾಜನ್‌ಗೆ ಸಹ, ತಾನು ದಲಿತನಾದ್ದರಿಂದ ಎಲ್ಲರೂ ತನ್ನನ್ನು ಬೇಕಾದ ಹಾಗೆ ಬಳಸಿ ಎಸೆಯುತ್ತಾರೆ ಎಂಬ ಸಿಟ್ಟಿತ್ತು (ಪುಟ ೫೬). ರಾಜ್ಯದ ಮುಖ್ಯಮಂತ್ರಿ ನರೇಂದ್ರ ಮೋದಿ ಬಗ್ಗೆ ಅವರಿಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ಮುಖ್ಯಮಂತ್ರಿಯ ಜನಪ್ರಿಯತೆಯ ಬಗ್ಗೆ ರಾಣಾ ಕೇಳಿದ ಪ್ರಶ್ನೆಗೆ, "ಜನರಿಗೆ ಅವರು ಟೋಪಿ ಹಾಕುತ್ತಾರೆ; ಜನ ಇಷ್ಟಪಟ್ಟು ಟೋಪಿ ಹಾಕಿಸಿಕೊಳ್ಳುತ್ತಾರೆ" ಎಂದು ಉತ್ತರಿಸಿದ್ದರು. (ಪುಟ ೩೭). ಗುಜರಾತ್ ೨೦೦೨ರ ದಿನಗಳಲ್ಲಿ ಅವರ ಮೇಲಧಿಕಾರಿಗಳು ಕಾನೂನಿಗೆ ವಿರುದ್ಧವಾಗಿ ವರ್ತಿಸಲು ಹೇಳಿದಾಗಲೂ ರಾಜನ್ ಆ ಬಾಯ್ದೆರೆ ಆದೇಶಗಳನ್ನು ಪಾಲಿಸಲು ನಿರಾಕರಿಸಿದ್ದರು. ಅವರು ೨೦೦೨ರ ಅವಧಿಯಲ್ಲಿ ರಾಜ್ಯದ ರಾಜ್‌ಕೋಟ್ ಜಿಲ್ಲೆಯ ವರಿಷ್ಠ ಪೊಲೀಸು ಅಧಿಕಾರಿಯಾಗಿದ್ದರು. ರಾಜ್ಯ ಗೃಹಮಂತ್ರಿ ಅವರಿಗೆ ಆ ನಗರದ ಮೂರು ಮುಸ್ಲಿಮ್ ಮುಖಂಡರನ್ನು ಬಂಧಿಸಲು ಆದೇಶವಿತ್ತರು. ಅದಕ್ಕೆ ಉತ್ತರವಾಗಿ, "ಆ ಮೂವರಿಂದಾಗಿ ರಾಜ್‌ಕೋಟ್‌ನಲ್ಲಿ ಕೋಮು ಶಾಂತಿ ನೆಲೆಸಿದೆ; ಅವರನ್ನು ದಸ್ತಗಿರಿ ಮಾಡಲು ಕಾರಣವೇ ಇಲ್ಲ" ಎಂದು ರಾಜನ್ ಸ್ಪಷ್ಟವಾಗಿ ಹೇಳಿದರು. ಗೃಹಮಂತ್ರಿ, ಮುಖ್ಯಮಂತ್ರಿಯ ಹೆಸರು ಹೇಳಿದರೂ ಪ್ರಯೋಜನವಾಗಲಿಲ್ಲ. ರಾಜನ್, ಇನ್ನೊಂದು ಸಂದರ್ಭದಲ್ಲಿ ಅಮಿತ್ ಶಾ ರಾಜ್ಯ ಗೃಹಮಂತ್ರಿಯಾಗಿದ್ದಾಗ, ಕಸ್ಟಡಿಯಲ್ಲಿ ಇದ್ದವನೊಬ್ಬನನ್ನು ಕೊಲ್ಲಲು ಹೇಳಿದ್ದರು ಎಂಬುದನ್ನು ರಾಣಾ ಬಳಿ ಬಹಿರಂಗಪಡಿಸಿದ್ದರು. ಬಂಧನದಲ್ಲಿದ್ದ ಇಶ್ರತ್ ಜಹಾನ್ ಮತ್ತು

ಇತರರನ್ನು ತಾನೇ ಕೊಲ್ಲಿಸಿದ್ದು ಎಂದು ಸಹ ಅಮಿತ್ ಶಾ, ರಾಜನ್‌ಗೆ ತಿಳಿಸಿದ್ದರಂತೆ (ಪುಟ ೬೩).

ರಾಣಾ ಅವರ ಈ ಪತ್ರಿಕಾ ಬೇಹುಗಾರಿಕೆಯ ನಡುವೆ ಸಂಭವಿಸಿದ ಒಂದು ವಿಲಕ್ಷಣ ಪ್ರಸಂಗ, ಅವರು ಗುಜರಾತ್‌ನಲ್ಲಿ ವರದಿಗಾರ್ತಿಯಾಗಿದ್ದಷ್ಟು ದಿನ, ಎಂತಹ ಅಪಾಯವನ್ನು ಮೈಮೇಲೆ ಎಳೆದುಕೊಂಡು ತನ್ನ ದುಸ್ಸಾಹಸಕ್ಕೆ ಮುಂದಾದರು ಎಂಬುದನ್ನು ಸೂಚಿಸುತ್ತದೆ. ಅಹ್ಮದಾಬಾದ್‌ನಲ್ಲಿ ರಾಣಾ ಪರಿಚಯ ಮಾಡಿಕೊಂಡ ಹಿರಿಯ ಪೊಲೀಸು ಅಧಿಕಾರಿಗಳಲ್ಲಿ ಉಷಾ ರಾಡಾ ಕೂಡ ಒಬ್ಬರು. ಉಷಾ ರಾಡಾ, ಸೊಹ್ರಾಬುದ್ದೀನ್ ಎನ್‌ಕೌಂಟರ್ ಪ್ರಕರಣದಲ್ಲಿ ಸಿ.ಬಿ.ಐ. ಬಂಧಿಸಿದ್ದ ಪೊಲೀಸು ಅಧಿಕಾರಿ ಅಭಯ ಚುಡಾಸಮ ಅವರ ಜೂನಿಯರ್ ಹಾಗೂ ನಿಕಟವರ್ತಿಯಾಗಿದ್ದರು. ಒಮ್ಮೆ ರಾಣಾ, ಉಷಾ ರಾಡಾ ಅವರ ಒತ್ತಾಯಪೂರ್ವಕ ಆಹ್ವಾನದ ಮೇರೆಗೆ ಒಂದು ಸಿನಿಮಾ ಶೋಗೆ ಹೋಗಲೇಬೇಕಾಯಿತು. ಆ ಸಿನಿಮಾ ಥೇಟರ್‌ನ ಬಾಗಿಲಿಗೆ ಲೋಹ ಶೋಧಕ ಉಪಕರಣ ಅಳವಡಿಸಲಾಗಿತ್ತು. ರಾಣಾ ತಾನು ಧರಿಸಿದ್ದ ಕುರ್ತಾದಲ್ಲಿ ಕ್ಯಾಮೆರಾ, ಅಡಗಿಸಿಕೊಂಡಿದ್ದರು! ಥೇಟರ್ ಬಾಗಿಲಿನಲ್ಲಿ ರಾಣಾ ಮಾಲು ಸಮೇತ ಪತ್ತೆಯಾಗುವುದು ಖಾತ್ರಿಯಾಗಿತ್ತು. 'ನನ್ನ ಕತೆ ಮುಗಿಯಿತು' ಎಂದು ರಾಣಾ ಭಾವಿಸಿ ಅಹ್ಮದಾಬಾದ್‌ನ ಡಿಸೆಂಬರ್ ಚಳಿಯಲ್ಲೂ ಬೆವರಿದರು. ಆದರೆ ಥೇಟರು ಬಾಗಿಲಿನಲ್ಲಿದ್ದ ಕಾವಲುಗಾರ ಉಷಾ ರಾಡಾರನ್ನು ನೋಡಿ, ಯಾವುದೇ ತಪಾಸಣೆ ಇಲ್ಲದೆ, ಇನ್ನೊಂದು ಬಾಗಿಲಿನಲ್ಲಿ ಅವರನ್ನೂ ರಾಣಾ ಅವರನ್ನೂ ಒಳಹೋಗಲು ಬಿಟ್ಟ! ಒಂದು ಕ್ಷಣ ಆಚೆ ಈಚೆ ಆಗಿದ್ದರೆ ರಾಣಾ ಅವರ ಕತ್ತಿಗೇ ಬರಬಹುದಾಗಿದ್ದ ಈ ಮಾರಣಾಂತಿಕ ಪ್ರಹಸನ ಅಲ್ಲಿಗೇ ಮುಗಿಯಲಿಲ್ಲ. ಆವತ್ತು ರಾಣಾ, ಉಷಾ ರಾಡಾ ಜೊತೆ ನೋಡಿದ ಸಿನಿಮಾ 'No one killed Jessica'. ರಾಣಾ ವರದಿಗಾರ್ತಿಯಾಗಿದ್ದ ತೆಹೆಲ್ಕಾ ಪತ್ರಿಕೆ ಮೊದಲ ಬಾರಿಗೆ ಜೆಸಿಕಾ ಲಾಲ್ ಕೊಲೆ ಪ್ರಕರಣದ ಸತ್ಯ ಸಂಗತಿಗಳನ್ನು ಬಯಲುಮಾಡಿತ್ತು! ಸಿನಿಮಾದ ವಸ್ತು ಕೂಡ ಅದೇ ಆಗಿತ್ತು. ಸಿನಿಮಾಕ್ಕೆ ಮೊದಲು, ತೆಹೆಲ್ಕಾ ಪತ್ರಿಕೆಗೆ ಕೃತಜ್ಞತೆಯ ಸಾಲು ಪರದೆಯ ಮೇಲೆ ಮೂಡುತ್ತಿದ್ದಂತೆ ಉಷಾ ರಾಡಾ, ರಾಣಾ ಅಯೂಬ್ ಉರ್ಫ್ ಮೈಥಿಲಿ ತ್ಯಾಗಿ ಕಿವಿಯಲ್ಲಿ ಉಸುರಿದರು, 'ತೆಹೆಲ್ಕಾ ಬಗ್ಗೆ ಕೇಳಿದೀಯಾ? ತಮ್ಮ ಫೋನ್‌ನಲ್ಲಿ ಕ್ಯಾಮೆರಾ ಇಟ್ಟು ಪತ್ತೇದಾರಿ ನಡೆಸಿ ವರದಿ ಮಾಡುವ ರ್‍ಯಾಸ್ಕಲ್‌ಗಳು ಅವರು! ಗುಜರಾತ್ ಬಗ್ಗೆಯೂ ಅವರು ಹಾಗೆ ಮಾಡಿದ್ದಾರೆ.' ರಾಣಾ ಹುಸಿ ಮುಗ್ಧತೆಯಲ್ಲಿ "ಹೌದಾ? ತೆಹೆಲ್ಕಾ ಒಂದು ಪತ್ರಿಕೆಯಾ? ಅದು ಒಂದು ಟಿ.ವಿ. ಚಾನೆಲ್ ಎಂದು ನಾನು ಭಾವಿಸಿದ್ದೆ" ಎಂದು ಪ್ರತಿಕ್ರಿಯಿಸಿದರು.

ಮೈಥಿಲಿ ತ್ಯಾಗಿಯ ಪಾತ್ರ ಧರಿಸಿ ರಾಣಾ ಅಯೂಬ್ ೨೦೦೨ರಲ್ಲಿ ಗುಜರಾತ್ ಸರಕಾರದ ಗೃಹಕಾರ್ಯದರ್ಶಿಯಾಗಿದ್ದ ಅಶೋಕ್ ನಾರಾಯಣ್ ಅವರ ಸಂದರ್ಶನ ನಡೆಸಿದ್ದರು. ರಾಣಾ ಅವರ ಭೇಟಿ ಮಾಡಿದಾಗ, ಅಶೋಕ್ ನಾರಾಯಣ್ ನಿವೃತ್ತರಾಗಿದ್ದರು; ವಯೋವೃದ್ಧ ರಂತೆಯೂ ಕಾಣುತ್ತಿದ್ದರು. ಅವರಿಗೆ ಸಾಹಿತ್ಯ ಮತ್ತು ಪುರಾಣಗಳಲ್ಲಿ ಆಸಕ್ತಿ ಇತ್ತು. ಸ್ವತಃ ಉರ್ದು ಕವಿಯಾಗಿದ್ದ ಅವರು ೨ ಪುಸ್ತಕಗಳನ್ನು ಪ್ರಕಟಿಸಿದ್ದರು. ಅಶೋಕ್ ನಾರಾಯಣ್ ಗುಜರಾತ್ ಸರಕಾರದ ಅತ್ಯುನ್ನತ ಶ್ರೇಣಿಯ ಹುದ್ದೆಯೊಂದರಲ್ಲಿದ್ದಾಗಲೇ ಆ ರಾಜ್ಯದಲ್ಲಿ ಮುಸ್ಲಿಮರ ನರಮೇಧ ನಡೆದಿತ್ತು. ಆದರೆ ಅವರಿಗೆ ಮುಸ್ಲಿಮರ ಬಗ್ಗೆ ಯಾವ ಪೂರ್ವಗ್ರಹವೂ ಇರಲಿಲ್ಲ; ಕಿಂಚಿತ್ತೂ ದ್ವೇಷವಿರಲಿಲ್ಲ. ಗೃಹ ಕಾರ್ಯದರ್ಶಿಯಾಗಿ ಅವರು ಪ್ರವೀಣ್ ತೊಗಾಡಿಯಾಗೆ, ಗಲಭೆಯ ದಿನಗಳಲ್ಲಿ ಸಭೆ ನಡೆಸಲು ಅನುಮತಿ ನೀಡಿರಲಿಲ್ಲ. ಗುಜರಾತ್ ಸರಕಾರ, ರಾಜ್ಯದ ಅತ್ಯಂತ ದಕ್ಷ, ಪ್ರಾಮಾಣಿಕ ಪೊಲೀಸು ಅಧಿಕಾರಿಗಳಲ್ಲಿ ಒಬ್ಬರಾಗಿದ್ದ ರಾಹುಲ್ ಶರ್ಮ ಅವರನ್ನು ಆ ಕಾರಣಕ್ಕೇನೆ ಸಸ್ಪೆಂಡ್ ಮಾಡಿದಾಗ ಅಶೋಕ್ ನಾರಾಯಣ್ ಅದನ್ನು ವಿರೋಧಿಸಿದ್ದರು (ಪುಟ ೮೪). ತನ್ನ ಮಾತುಗಳ ನಡುವೆ ಅಶೋಕ್ ನಾರಾಯಣ್ ಮುಖ್ಯಮಂತ್ರಿ ನರೇಂದ್ರ ಮೋದಿಯ ಕಾರ್ಯ ವಿಧಾನದ ಬಗ್ಗೆ ಒಂದು ಮಹತ್ವದ ಸಂಗತಿಯನ್ನು ರಾಣಾಗೆ ತಿಳಿಸಿದ್ದರು. "ಮೋದಿ ತಮ್ಮ ಇಂಗಿತವನ್ನು ಯಾವತ್ತೂ ಬರಹದ ಮೂಲಕ ತಿಳಿಸುತ್ತಿರಲಿಲ್ಲ. ಅವರು ಸ್ವತಃ ಬಾಯ್ದೆರೆಯಾಗಿ ಸಹ ಏನನ್ನೂ ಹೇಳುತ್ತಿರಲಿಲ್ಲ. ಮುಖ್ಯಮಂತ್ರಿಯವರಿಗೆ ಅವರದ್ದೇ ಆದ ಜನಗಳಿದ್ದರು. ಅವರ ಮೂಲಕ, ಒಮ್ಮೊಮ್ಮೆ ವಿಹಿಂಪದಂತಹ ಸಂಘಟನೆಗಳವರ ಮೂಲಕ, ಮುಖ್ಯಮಂತ್ರಿ ತಮ್ಮ ಕೆಲಸ ಮಾಡಿಸಿ ಕೊಳ್ಳುತ್ತಿದ್ದರು. ಹಾಗಾಗಿ ನಾವು ಅಸಹಾಯಕರಾಗಿದ್ದೆವು. ಮಂತ್ರಿಗಳೇ ರಸ್ತೆಗಳಲ್ಲಿ ನಿಂತು ಜನರನ್ನು ಪ್ರಚೋದಿಸಿದ ಅನೇಕ ಪ್ರಕರಣಗಳಿವೆ. ಆದರೆ ಯಾವುದಕ್ಕೂ ದಾಖಲೆಗಳಿಲ್ಲ... ವಿಚಾರಣಾ ಆಯೋಗಗಳ ಎದುರು ಜನ ಭ್ರಷ್ಟಾಚಾರದ ಕುರಿತು ಸಾಕ್ಷಿ ಹೇಳಲು ಸಹ ಹಿಂದೆ ಮುಂದೆ ನೋಡುತ್ತಾರೆ; ಇನ್ನು ಗಲಭೆ, ಹಿಂಸೆಗಳ ಕುರಿತು ಸಾಕ್ಷಿ ಹೇಳುತ್ತಾರಾ?" (ಪುಟ ೮೬, ೮೭, ೮೮) ಎಂದು ಮುಂತಾಗಿ ಅಶೋಕ್ ನಾರಾಯಣ್ ತಮ್ಮ ಹತಾಶೆಯನ್ನು ರಾಣಾ ಬಳಿ ತೋಡಿಕೊಂಡರು. ಆದರೆ ಗುಜರಾತ್‌ನಲ್ಲಿ ಆಳುವ ಪಕ್ಷ ೨೦೦೨ರ ಹಿಂಸಾಕಾಂಡದಲ್ಲಿ ಶಾಮೀಲಾಗಿದ್ದುದರ ಬಗ್ಗೆ ಅವರಿಗೆ ಯಾವ ಸಂದೇಹವೂ ಇರಲಿಲ್ಲ. ರಾಣಾ ಅವರ ಪ್ರಸ್ತುತ ವರದಿ, ಆ ಕಾರಣಕ್ಕೇನೆ, ಯಾವುದೇ ನ್ಯಾಯಾಲಯದ ಎದುರು ಒಂದು ಅಮೂಲ್ಯವಾದ ಸಾಕ್ಷ್ಯಾಧಾರವಾಗಬಹುದು! ಗುಜರಾತ್ ೨೦೦೨ರ ಕಾಲಾಳುಗಳು ಮತ್ತು ಅವರ ಪುಂಡ ನಾಯಕರನ್ನು ಮಾತಾಡಿಸಿ, ಅವರ ಬಾಯಿಂದಲೇ ಸತ್ಯ ಹೊರಡಿಸಿದ ತೆಹೆಲ್ಕಾದ ಮಾಜಿ ಪತ್ರಕರ್ತ ಅಶೀಶ್ ಖೇತಾನ್, ಅವರು ಮಾಡಿದ ಕೆಲಸವನ್ನು ಈಗ ಅದೇ ಪತ್ರಿಕೆಯ ಇನ್ನೋರ್ವ ಮಾಜಿ ಪತ್ರಕರ್ತೆ ರಾಣಾ ಅಯೂಬ್ ಮುಂದುವರಿಸಿದ್ದಾರೆ.

ರಾಣಾ ಸಂದರ್ಶನ ನಡೆಸಿದ ಗುಜರಾತ್‌ನ ಹೆಚ್ಚಿನ ಅಧಿಕಾರಿಗಳಿಗೆ ೨೦೦೨ ಮತ್ತು ನಂತರ 'ತಾವು ಕ್ರಿಮಿನಲ್ ಕೃತ್ಯಗಳಲ್ಲಿ ಸ್ವತಃ ಭಾಗವಹಿಸದೆ ಇದ್ದರೂ, ಆ ಬಗ್ಗೆ ಮೌನವಾಗಿದ್ದೆವು; ಆ ಕೃತ್ಯಗಳಿಗೆ ಶಾಮೀಲಾಗಿದ್ದೆವು' ಎಂಬ ವ್ಯಥೆ ಇತ್ತು. ತಾವು ಸಂವಿಧಾನ ಮತ್ತು ಕಾನೂನಿಗೆ ವಿರುದ್ಧವಾಗಿ ನಡೆದುಕೊಂಡಿದ್ದೇವೆ ಎಂದು ಸಹ ಗೊತ್ತಿತ್ತು. ಅಶೋಕ್ ನಾರಾಯಣ್, ರಾಣಾ ಬಳಿ ಖಾಸಗಿಯಾಗಿ ಮಾತಾಡುತ್ತ, "ಗುಜರಾತ್‌ನಲ್ಲಿ ಹಿಂದುಗಳ ವರ್ತನೆಯಿಂದ ನನಗೆ ಶಾಕ್ ಆಯಿತು. ಅವರು ಕಾರುಗಳಲ್ಲಿ ಬಂದು ಮುಸ್ಲಿಮರ ಮನೆಗಳನ್ನು ಲೂಟಿ ಮಾಡಿದರು" ಎಂದು ಹೇಳಿದ್ದರು (ಪುಟ ೯೮). ಆದರೆ ಸರಕಾರಿ ಸೇವೆಯಲ್ಲಿದ್ದುದರಿಂದ ತಮ್ಮ ಕರ್ತವ್ಯ ನಿರ್ವಹಣೆಗೆ ಕೆಲವು ಕಟ್ಟುಪಾಡುಗಳು ಇರುತ್ತವೆ. ಮೇಲಿನವರ ಆಜ್ಞೆ ತಾವು ಪಾಲಿಸಲೇಬೇಕಾಗುತ್ತದೆ ಎಂಬುದು ಗುಜರಾತ್ ಹಿಂಸಾಕಾಂಡದಲ್ಲಿ ತಮ್ಮ ಪಾತ್ರದ ಬಗ್ಗೆ ಅವರ ವಿವರಣೆಯಾಗಿತ್ತು. ಗುಜರಾತ್ ೨೦೦೨ರ ಸಂದರ್ಭದಲ್ಲಿ ಆ ರಾಜ್ಯದ ಪೊಲೀಸು ಪಡೆಯ ಡೈರೆಕ್ಟರ್ ಜನರಲ್ ಆಗಿದ್ದ ಹಿರಿಯ ಅಧಿಕಾರಿ ಚಕ್ರವರ್ತಿಯೂ ಕೂಡ ರಾಣಾ ಬಳಿ ಹೆಚ್ಚು ಕಡಿಮೆ ಅದೇ ಮಾತುಗಳಲ್ಲಿ ತನ್ನ ಅಸಹಾಯಕತೆಯನ್ನು ಹೇಳಿಕೊಳ್ಳುತ್ತಾರೆ. ಸರಕಾರಿ ಸೇವೆಯಿಂದ ನಿವೃತ್ತರಾದ ನಂತರ ಮುಂಬಯಿಯಲ್ಲಿ ನೆಲೆಸಿದ್ದ ಚಕ್ರವರ್ತಿ, "ಗುಜರಾತ್ ೨೦೦೨ರ ಹಿಂಸೆಗೆ ಕಾರಣವೂ ಇಲ್ಲ; ಸಮರ್ಥನೆಯೂ ಇಲ್ಲ" ಎಂದು ದೃಢವಾಗಿ ನಂಬಿದ್ದರು (ಪುಟ ೧೫೩). ತನ್ನ ಮಾತು ಮುಂದುವರಿಸುತ್ತ, "ಸಾಮಾನ್ಯವಾಗಿ ಹಿಂಸೆಗೆ ಸ್ಥಳೀಯ ಕಾರಣಗಳಿರುತ್ತವೆ. ಆದರೆ ಗುಜರಾತ್ ೨೦೦೨ರ ಹಿಂಸೆಗೆ ಕಾರಣ ಮತ್ತು ಹಿನ್ನೆಲೆ ಇಡೀ ಹಿಂದೂ ಸಮಾಜ ಎದುರಿಸುತ್ತಿರುವ ಅಪಾಯ ಎಂದು ಹೇಳಲಾಯಿತು. ಹೆಚ್ಚಿನ ಹಿಂಸಾಕೃತ್ಯಗಳಲ್ಲಿ ನೇರವಾಗಿ ಪಾಲುಗೊಳ್ಳುವವರು ಬಡವರು; ಆದರೆ ಗುಜರಾತ್ ೨೦೦೨ ಹಿಂಸಾಕಾಂಡದಲ್ಲಿ ಶ್ರೀಮಂತರೂ ಭಾಗವಹಿಸಿದರು. ನನಗೆ ಫೋನ್ ಕಾಲ್ ಬರುತ್ತಿತ್ತು – "ಸರ್, ಮರ್ಸಿಡಿಸ್ ಕಾರಿನಲ್ಲಿ ಜನ ಬಂದು 'ಶಾಪರ್ ಸ್ಟಾಪ್' (ಅಹ್ಮದಾಬಾದ್‌ನ ಸುಪ್ರಸಿದ್ಧ ಮಳಿಗೆ) ಲೂಟಿ ಮಾಡುತ್ತಿದ್ದಾರೆ" (ಪುಟ ೧೫೩) ಎಂದು ಚಕ್ರವರ್ತಿ ೨೦೦೨ರಲ್ಲಿ ಗುಜರಾತ್‌ನಲ್ಲಿ ಸಂಭವಿಸಿದ್ದನ್ನು ತಾವು ಕಂಡಂತೆ ಕೇಳಿದಂತೆ ರಾಣಾಗೆ ನಿರೂಪಿಸುತ್ತಾರೆ. ತನ್ನ ಮಾತಿನ ನಡುವೆ ಚಕ್ರವರ್ತಿ ಹತಾಶೆಯಲ್ಲಿ ಹೇಳುತ್ತಾರೆ: "ಗಲಭೆಯ ದಿನಗಳಲ್ಲಿ ನನ್ನಿಂದ ಸಾಧ್ಯವಾದಷ್ಟು ಮುಸ್ಲಿಮರನ್ನು ರಕ್ಷಿಸಿದೆ. ಆದರೆ ಎಹ್ಸಾನ್ ಜಾಫ್ರಿ ಒಬ್ಬರನ್ನು ರಕ್ಷಿಸುವುದು ನನ್ನಿಂದ ಆಗಲಿಲ್ಲ... ನನ್ನದೇ ಆದ ರೀತಿಯಲ್ಲಿ ನಾನು ನ್ಯಾಯಕ್ಕಾಗಿ ಹೋರಾಡಿದ್ದೇನೆ. ಆದರೆ ಸರಕಾರಕ್ಕೆ ತನ್ನದೇ ಆದ ಕ್ರಮವಿದೆ... ನೀವು ಸರಕಾರಕ್ಕೆ ಆಜ್ಞೆ ಮಾಡುವ

ಹಾಗಿಲ್ಲ” (ಪುಟ ೧೫೬). ಚಕ್ರವರ್ತಿಯವರ ಅಸಹಾಯಕತೆ, ಒಂದು ವಿಷಮ ಕಾಲಘಟ್ಟದಲ್ಲಿ ಅವರಂತಹ ಸಜ್ಜನರ ಸಜ್ಜನಿಕೆಯ ಮಿತಿಗಳನ್ನು ಸೂಚಿಸುತ್ತದೆ. ಹರ್ಷ ಮಾಂದರ್‌ರಂತಹ ಐ.ಎ.ಎಸ್. ಅಧಿಕಾರಿ, ೨೦೦೨ರಲ್ಲಿ ಗುಜರಾತ್‌ನಲ್ಲಿ ತನ್ನ ಸುತ್ತ ನಡೆಯುತ್ತಿರುವುದನ್ನು ಕಂಡು ರೋಸಿಹೋಗಿ, ತನ್ನ ಹುದ್ದೆಗೆ ರಾಜೀನಾಮೆ ಸಲ್ಲಿಸಿದರು. ರಾಹುಲ್ ಶರ್ಮ, ಶ್ರೀ ಕುಮಾರ್, ಸಂಜೀವ ಭಟ್‌ರಂತಹ ಪೊಲೀಸು ಅಧಿಕಾರಿಗಳು, ತಮ್ಮ ಹುದ್ದೆಯಲ್ಲಿ ಇದ್ದುಕೊಂಡೇ ಸಂವಿಧಾನ ಮತ್ತು ಕಾನೂನಿಗೆ ವಿರುದ್ಧವಾಗಿ ರಾಜಕಾರಣಿಗಳು ಹೇಳಿದಂತೆ ವರ್ತಿಸಲು ನಿರಾಕರಿಸಿದರು; ಅದಕ್ಕಾಗಿ ದೊಡ್ಡ ಬೆಲೆಯನ್ನೂ ತೆತ್ತರು. ಈ ಹಿನ್ನೆಲೆಯಲ್ಲಿ ಸಿಂಘಾಲ್, ರಾಜನ್ ಪ್ರಿಯದರ್ಶಿ, ಅಶೋಕ್ ನಾರಾಯಣ್ ಮತ್ತು ಚಕ್ರವರ್ತಿ ಮುಂತಾದ ಸಜ್ಜನರಾದ ಅಧಿಕಾರಿಗಳು ೨೦೦೨ರಲ್ಲಿ ತುಸು ಹೆಚ್ಚು ಆತ್ಮವಿಶ್ವಾಸ ಮತ್ತು ಧೈರ್ಯ ತೋರಿಸಿ, ತಮ್ಮ ಮೇಲಿನವರ ಬಾಯಿಮಾತಿನ ಆದೇಶಗಳನ್ನು ಧಿಕ್ಕರಿಸಿದ್ದರೆ ಗುಜರಾತ್ ೨೦೦೨ರ ಹಿಂಸೆ ಅಷ್ಟು ಭೀಕರವಾಗಿರುತ್ತಿರಲಿಲ್ಲ. ಹಾಗೆಯೇ ೨೦೦೨ರ ಹಿಂಸೆ ಮಾತ್ರವಲ್ಲ, ಆ ನಂತರ ಮುಸ್ಲಿಂ ಸಂತ್ರಸ್ತರು, ಗಾಯಾಳುಗಳು ಮತ್ತು ನಿರಾಶ್ರಿತರನ್ನು ಸರಕಾರ ಹೀನಾಯವಾಗಿ ನಡೆಸಿಕೊಂಡ ರೀತಿ, ಕಾನೂನು ವ್ಯವಸ್ಥೆ ಆ ಹಿಂಸಾಕಾಂಡದ ಪ್ರಕರಣಗಳನ್ನು ದಾಖಲಿಸಿಕೊಂಡ ವೈಖರಿ, ನ್ಯಾಯ ತೀರ್ಮಾನದ ವಿಧಾನ, ಎಲ್ಲವೂ ಗುಜರಾತ್‌ನಲ್ಲಿ ರಾಜನೈತಿಕ ಚೌಕಟ್ಟು ಬುಡಮೇಲಾಗಿ ಬೋರಲು ಬಿದ್ದಿರುವುದಕ್ಕೆ ನಿದರ್ಶನಗಳಾಗಿವೆ. ಚಕ್ರವರ್ತಿ, ಅಶೋಕ್ ನಾರಾಯಣ್, ರಾಜನ್ ಪ್ರಿಯದರ್ಶಿ ಮತ್ತು ಸಿಂಘಾಲ್‌ರಂತಹ ಗುಜರಾತ್‌ನ ಹಿರಿಯ ಸರಕಾರೀ ಅಧಿಕಾರಿಗಳು ರಾಜ್ಯದ ಈ ನೈತಿಕ ಪತನಕ್ಕೂ ಉತ್ತರದಾಯಿಗಳಾಗಿದ್ದಾರೆ.

ರಾಣಾ ಅಯೂಬ್ ಅವರ Gujarat files ನ ಕೊನೆಯ ಪುಟಗಳಲ್ಲಿ ಗುಜರಾತ್‌ನ ಓರ್ವ ಹಿರಿಯ ಬಿ.ಜೆ.ಪಿ. ಮುಖಂಡ ಹರೇನ್ ಪಾಂಡ್ಯ, ಅವರ ಕೊಲೆಯ ಬಗ್ಗೆ ಕೆಲವು ಮಹತ್ವದ ಮಾಹಿತಿಗಳು ದೊರೆಯುತ್ತವೆ. ಹರೇನ್ ಪಾಂಡ್ಯ, ಮೋದಿಯವರಿಗಿಂತ ಮೊದಲು ಕೇಶುಬಾಯ್ ಪಟೇಲ್ ಗುಜರಾತ್‌ನ ಮುಖ್ಯಮಂತ್ರಿಯಾಗಿದ್ದಾಗ ಅವರ ಮಂತ್ರಿಮಂಡಲದಲ್ಲಿ ಗೃಹಸಚಿವರಾಗಿದ್ದರು. ಪಾಂಡ್ಯರನ್ನು ಬೆಳೆಯಲು ಬಿಟ್ಟರೆ, ಅವರು ತನಗೆ ರಾಜ್ಯದಲ್ಲಿ ಪ್ರತಿಸ್ಪರ್ಧಿಯಾಗಬಹುದು ಎಂಬ ಆತಂಕ ನರೇಂದ್ರ ಮೋದಿ ಅವರನ್ನು ಕಾಡುತ್ತಿತ್ತು. ಹಾಗಾಗಿ ಮೋದಿ ರಾಜ್ಯದ ಮುಖ್ಯಮಂತ್ರಿಯಾಗಿ ಆಯ್ಕೆಯಾದಾಗ ಪಾಂಡ್ಯ ಅವರಿಗೆ ತನ್ನ ಮಂತ್ರಿಮಂಡಲದಲ್ಲಿ ಅಷ್ಟೇನೂ ಸ್ಥಾನಮಾನವಿಲ್ಲದ ಒಂದು ರಾಜ್ಯ ಸಚಿವ ಪದವಿ ನೀಡಿದರು. ೨೦೦೨ರ ವಿಧಾನಸಭಾ ಚುನಾವಣೆಯಲ್ಲಿ ಪಾಂಡ್ಯರಿಗೆ ಅವರ ಎಂದಿನ ಎಲ್ಲಿಸ್ ಬ್ರಿಜ್ ವಿಧಾನಸಭಾ ಕ್ಷೇತ್ರದ ಟಿಕೆಟನ್ನು ನಿರಾಕರಿಸಲಾಗಿತ್ತು. ನರೇಂದ್ರ ಮೋದಿಯವರಿಗೆ ಪಾಂಡ್ಯ ಅವರ ಬಗ್ಗೆ ಸಿಟ್ಟಿಗೆ ಇನ್ನೊಂದು ಕಾರಣವೂ ಇತ್ತು. ಗುಜರಾತ್ ೨೦೦೨ರ ಕುರಿತು ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್ ಅವರ ನೇತೃತ್ವದ ನಾಗರಿಕರ ವಿಚಾರಣಾ ಆಯೋಗದ ಎದುರು ಪಾಂಡ್ಯ ಸಾಕ್ಷಿ ಹೇಳಿದ್ದರು. ರಾಜ್ಯದ ಹಿಂಸಾಕಾಂಡದಲ್ಲಿ ಸರಕಾರ ಶಾಮೀಲಾಗಿದ್ದುದರ ಬಗ್ಗೆ ಪಾಂಡ್ಯ, ಸಮಿತಿಗೆ ಸ್ಫೋಟಕ ಮಾಹಿತಿ ಹಾಗೂ ಸಾಕ್ಷ್ಯಾಧಾರಗಳನ್ನು ಒದಗಿಸಿದ್ದಾರೆ ಎಂಬ ವದಂತಿಗಳಿದ್ದವು. ಪಾಂಡ್ಯ ಅವರ ಕೊಲೆ ಮುಸ್ಲಿಂ ಭಯೋತ್ಪಾದಕರ ಕೃತ್ಯ ಎಂದು ಅಧಿಕೃತವಾಗಿ ರಾಜ್ಯ ಸರಕಾರ ಪ್ರಚಾರ ಮಾಡಿದರೂ ಅದೊಂದು ಪೂರ್ವನಿಯೋಜಿತ ರಾಜಕೀಯ ಕೊಲೆ ಎಂದು ಭಾವಿಸಲು ಬಲವಾದ ಕಾರಣಗಳಿದ್ದವು. ಪಾಂಡ್ಯ ಅವರ ಕೊಲೆಯಲ್ಲಿ ಯಥಾಪ್ರಕಾರ ಕೆಲವು ಅಮಾಯಕ ಮುಸ್ಲಿಮರನ್ನು ಆರೋಪಿಗಳನ್ನಾಗಿ ಮಾಡಿ ಕಸ್ಟಡಿಗೆ ತೆಗೆದುಕೊಳ್ಳಲಾಯಿತು. ಆದರೆ ಹರೇನ್ ಪಾಂಡ್ಯ ಅವರ ತಂದೆ ವಿಠಲ್ ಪಾಂಡ್ಯ ಇತ್ತೀಚೆಗೆ ನಿಧನರಾಗುವವರೆಗೂ ತನ್ನ ಮಗನನ್ನು ಬಿ.ಜೆ.ಪಿ. ಪಕ್ಷದಲ್ಲಿಯೇ ಆತನ ಎದುರಾಳಿಗಳು ಕೊಲೆ ಮಾಡಿಸಿದ್ದಾರೆ ಎಂದು ನಂಬಿದ್ದರು. ಹರೇನ್ ಪಾಂಡ್ಯರ ಪತ್ನಿ ಜಾಗೃತಿ ಪಾಂಡ್ಯ ಅವರಂತೂ ತನ್ನ ಗಂಡನನ್ನು ನರೇಂದ್ರ ಮೋದಿ ಮತ್ತು ಅಮಿತ್ ಶಾ ಜೊತೆಗೂಡಿ ಕೊಲೆ ಮಾಡಿಸಿದ್ದಾರೆ ಎಂದು ಈಗಲೂ ಭಾವಿಸಿದ್ದಾರೆ ಮತ್ತು ತನ್ನ ಗಂಡನ ಹತ್ಯೆ ಕುರಿತು ಸತ್ಯ ಹೊರತರಲು ಈಗಲೂ ಹಠ ಹಿಡಿದು ತನ್ನ ಪ್ರಯತ್ನ ಮುಂದುವರಿಸಿದ್ದಾರೆ.




ಪ್ರಸ್ತುತ ಕೃತಿಯ ಕೊನೆಯ ಅಧ್ಯಾಯದಲ್ಲಿ ಲೇಖಕಿ ಗುಜರಾತ್‌ನಲ್ಲಿ ತನ್ನ ಕುಟುಕು ಕಾರ್ಯಾಚರಣೆಯ ಕೊನೆಯ ಹಂತದಲ್ಲಿ ರಾಜ್ಯದ ಮುಖ್ಯಮಂತ್ರಿ ನರೇಂದ್ರ ಮೋದಿ ಯವರನ್ನು ಭೇಟಿ ಮಾಡಿದ್ದನ್ನು ನಿರೂಪಿಸುತ್ತಾರೆ. ರಾಣಾ ಮತ್ತೊಮ್ಮೆ ಮೋದಿಯವರನ್ನು ತನ್ನ ಛದ್ಮವೇಷದಲ್ಲಿ ಭೇಟಿಯಾಗಿ ಅವರ ಬಾಯಿಯಿಂದಲೇ ಗುಜರಾತ್ ೨೦೦೨ರ ಬಗ್ಗೆ ಸತ್ಯ ಹೊರಡಿಸಲು ಉದ್ದೇಶಿಸಿದರು. ಆದರೆ ತನ್ನ ಈ ಕಾರ್ಯಾಚರಣೆಯಲ್ಲಿ ಮುಂದುವರಿಯಲು ಅವರಿಗೆ ತೆಹೆಲ್ಕಾ ಸಂಪಾದಕ ತರುಣ್ ತೇಜ್‌ಪಾಲ್ ಅನುಮತಿಕೊಡಲಿಲ್ಲ. ‘ಮೋದಿ ಹಿಂದೆಂದಿಗಿಂತಲೂ ಈಗ ಬಲಿಷ್ಠರಾಗಿ ಬೆಳೆದಿದ್ದಾರೆ. ನಾವು ಹಿಂದೆ ಬಿ.ಜೆ.ಪಿ. ಅಧ್ಯಕ್ಷ ಬಂಗಾರು ಲಕ್ಷ್ಮಣ್ ಅವರ ಬಗ್ಗೆ ಕುಟುಕು ಕಾರ್ಯಾಚರಣೆ ನಡೆಸಿದಾಗ ಅವರು ನಮ್ಮ ಕಚೇರಿ ಬಂದ್ ಮಾಡಿಸಿದ್ದರು. ಈಗ ನಾವು ಅವರ ತಂಟೆಗೆ ಹೋದರೆ ಅವರು ನಮ್ಮನ್ನು ಮುಗಿಸಿಬಿಡುತ್ತಾರೆ’ ಎಂಬುದು ಸಂಪಾದಕರು ತಮ್ಮ ಅನುಮತಿ ನಿರಾಕರಣೆಗೆ ಕೊಟ್ಟ ವಿವರಣೆಯಾಗಿತ್ತು. ಅಂತೂ ರಾಣಾ ಅವರ ಗುಜರಾತ್ ೨೦೦೨ರ ಕುರಿತ ಬೇಹುಗಾರಿಕಾ ವರದಿ ತೆಹೆಲ್ಕಾದಲ್ಲಿ ಪ್ರಕಟವಾಗಲಿಲ್ಲ. ಈಗ ಕುಟುಕು ಕಾರ್ಯಾಚರಣೆಯ ೬ ವರ್ಷಗಳ ನಂತರ ಅದು ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಈ ಪ್ರಕಟಣೆಯೂ ಒಂದು ಕತೆ ಮತ್ತು ರೂಪಕ. ರಾಣಾ ಅವರ ಪುಸ್ತಕ ಅಮೇಜ಼ಾನ್ ಅಂತರ್ಜಾಲ ಪುಸ್ತಕ ಮಳಿಗೆಯ ಒಂದು ಬೆಸ್ಟ್ ಸೆಲ್ಲರ್; ಸ್ವತಃ ರಾಣಾ ಹೆಸರು ಮಾಡಿದ ಓರ್ವ ಪತ್ರಕರ್ತೆ. ಆದಾಗ್ಯೂ ಅವರ ಪುಸ್ತಕವನ್ನು ಪ್ರಕಟಿಸಲು ಭಾರತದ ಯಾವ ಪ್ರಕಾಶನ ಸಂಸ್ಥೆಯೂ ಮುಂದಾಗಲಿಲ್ಲ. ಕಾರಣವನ್ನು ಯಾರಾದರೂ ಊಹಿಸಬಹುದು. ಗುಜರಾತ್‌ನ ಮಾಜಿ ಮುಖ್ಯಮಂತ್ರಿ ದೇಶದ ಹಾಲಿ ಪ್ರಧಾನಮಂತ್ರಿ ಯಾಗಿದ್ದರು. ಅದರ ಪರಿಣಾಮವಾಗಿ ದೇಶದಲ್ಲಿ ಹಬ್ಬಿದ್ದ ಭಯ ಪ್ರಕಾಶಕರನ್ನು ಕಾಡಿತ್ತು. ಆದರೆ ರಾಣಾ ಪತ್ರಕರ್ತೆಯಾಗಿ ಎಂದೂ ಭಯಪಟ್ಟು ಹಿಮ್ಮೆಟ್ಟಿದವರಲ್ಲ. ಗುಜರಾತ್ ೨೦೦೨ರ ಕುರಿತು ತನ್ನ ಕುಟುಕು ಕಾರ್ಯಾಚರಣೆಯಲ್ಲಿ ಪ್ರತಿಕ್ಷಣವೂ ರಾಣಾ, ತನ್ನ ಜೀವವನ್ನು ಪಣಕ್ಕೆ ಇಟ್ಟಿದ್ದರು. ಈಗ ೬ ವರ್ಷಗಳ ನಂತರ ರಾಣಾ ಗುಜರಾತ್ ೨೦೦೨ರ ಕುರಿತ ತನ್ನ ಕುಟುಕು ಕಾರ್ಯಾಚರಣೆಯ ಸಂಪೂರ್ಣ ವರದಿಯನ್ನು ತಾವೇ ಪ್ರಕಟಿಸಿದ್ದಾರೆ. ಯಾರ ರಹಸ್ಯಗಳನ್ನು ತನ್ನ ವರದಿಗಳಿಂದ ರಾಣಾ ಬಯಲುಮಾಡಿದರೋ ಆ ಮಹಾನುಭಾವರು ಈಗ ದೆಹಲಿಯಲ್ಲಿ ಅಧಿಕಾರ ಹಿಡಿದಿದ್ದಾರೆ. ಅಧಿಕಾರದಲ್ಲಿ ಇರಲಿ, ಇಲ್ಲದಿರಲಿ, ಅವರು ದೇಶದಲ್ಲಿ ಮುಂದೆ ಬಹುಕಾಲ ಪ್ರಭಾವಶಾಲಿಗಳಾಗಿರುತ್ತಾರೆ. ತನ್ನ ಜೀವನದ ಜೊತೆ ರಾಣಾ ಅಯೂಬ್ ಅವರ ಜೂಜಾಟವೂ ಮುಂದುವರಿಯುತ್ತದೆ. ಅಪಾರವಾದ ಛಲ, ಧೈರ್ಯ, ವೃತ್ತಿಪರತೆ ಹಾಗೂ ಬದ್ಧತೆಯೊಂದಿಗೆ ರಾಣಾ ತಮ್ಮ ಕೃತಿಯನ್ನು ಸಿದ್ಧಪಡಿಸಿದ್ದು, ಈಗ ತಾವೇ ಅದನ್ನು ಪ್ರಕಟಿಸಿದ್ದಾರೆ. ಅವರ ಈ ಧೀರೋದಾತ್ತ ಸಾಹಸದಲ್ಲಿ ನಾವು ಅವರ ಬೆಂಬಲಕ್ಕೆ ನಿಲ್ಲಬೇಕು.

**ಜಿ. ರಾಜಶೇಖರ**
‘ವಿಷ್ಣುನಂದನ’, ಚಾಕಲೇಟ್ ಫ್ಯಾಕ್ಟರಿ ಹತ್ತಿರ, ಕೊಲಂಬೆ, ಉಡುಪಿ – ೫೭೬ ೧೦೧

ಡಾ॥ ಎಂ. ಚಂದ್ರ ಪೂಜಾರಿ

# ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ

**ತೊ**ಂಬತ್ತರ ನಂತರ ನಮ್ಮಲ್ಲಿ ಅಧಿಕೃತವಾಗಿ ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿ ಜಾರಿಯಲ್ಲಿದೆ. ಇದು ನಿಯೋ ಲಿಬರಲ್ ಅಥವಾ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ನೀತಿಗಳೆಂದು ಪ್ರಚಾರ ಪಡೆದಿದೆ. ಸಮಷ್ಟಿಯ ಸಂಪನ್ಮೂಲಗಳನ್ನು ಖಾಸಗಿ ಬಂಡವಳಿಗರಿಗೆ ನೀಡುವ ಖಾಸಗೀಕರಣ ನೀತಿಗಳು, ಖಾಸಗಿ ಬಂಡವಳಿಗರ ವ್ಯವಹಾರಗಳನ್ನು ನಿಯಂತ್ರಿಸುವ ಕಾನೂನು ಕಟ್ಟಳೆಗಳನ್ನು ಸಡಿಲಗೊಳಿಸುವ ಉದಾರೀಕರಣ ನೀತಿಗಳು ಮತ್ತು ಬಂಡವಾಳದ ಜಾಗತಿಕ ಚಲನೆಗಿರುವ ಅಡ್ಡಿ–ಆತಂಕಗಳನ್ನು ದೂರ ಮಾಡುವ ಜಾಗತೀಕರಣ ನೀತಿಗಳನ್ನು ಚುನಾಯಿತ ಸರಕಾರಗಳು ಜಾರಿಗೆ ತರುವುದನ್ನು ಸ್ಥೂಲವಾಗಿ ಮಾರುಕಟ್ಟೆಪರ ಅಥವಾ ನಿಯೋ ಲಿಬರಲ್ ಅಭಿವೃದ್ಧಿ ನೀತಿಗಳೆನ್ನಬಹುದು. ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿ ಜಾರಿಗೆ ಬಂದ ನಂತರ ಉತ್ಪಾದನಾ ಪರಿಕರಗಳ ಮತ್ತು ಸರಕುಸೇವೆಗಳ ವಿತರಣೆ ಮಾರುಕಟ್ಟೆ ನಿಯಮಕ್ಕೆ ಒಳಗಾಗಿದೆ ಎನ್ನುವ ಚಿತ್ರಣ ಇದೆ. ಜನರ ಖರೀದಿಸುವ ಶಕ್ತಿ ಮತ್ತು ಅವರು ಅನುಭವಿಸುವ ಸರಕುಸೇವೆ ಅಥವಾ ಉತ್ಪಾದನಾ ಪರಿಕರಗಳ ನಡುವೆ ನೇರ ಸಂಬಂಧ ಕಲ್ಪಿಸಲಾಗಿದೆ. ಅಂದರೆ ಅನುಕೂಲಸ್ಥರು ಮಾರುಕಟ್ಟೆ ದರದಲ್ಲಿ ಖರೀದಿಸಿ ಅನುಭವಿಸಿದರೆ ಅನಾನುಕೂಲಸ್ಥರು ಸರಕಾರದ ಕೃಪೆಯಲ್ಲಿ ಬದುಕುತ್ತಿದ್ದಾರೆ ಎನ್ನುವ ಚಿತ್ರಣ ಇದೆ. ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿ ಕಟ್ಟಿಕೊಡುವ ಈ ಬಗೆಯ ಚಿತ್ರಣವನ್ನು ವಿಶ್ಲೇಷಿಸುವ ಪ್ರಯತ್ನ ಈ ಲೇಖನದ್ದು.

**ಪ್ರೋತ್ಸಾಹಗಳು**

ಖಾಸಗೀಕರಣ ನೀತಿಗಳು ಜಾರಿಗೆ ಬಂದ ನಂತರ ಅರವತ್ತು ಎಪ್ಪತ್ತರ ದಶಕಗಳಲ್ಲಿ ಸಾರ್ವಜನಿಕ ಸಂಪನ್ಮೂಲದ ವಿನಿಯೋಜನೆಯಿಂದ ಆರಂಭಿಸಿದ ಹಲವು ಪಬ್ಲಿಕ್ ಸೆಕ್ಟರ್ ಉದ್ದಿಮೆಗಳನ್ನು ಅತ್ಯಂತ ಕಡಿಮೆ ಬೆಲೆಗೆ ಖಾಸಗಿಯವರಿಗೆ ಮಾರಲಾಯಿತು. ಇದನ್ನೇ ಇನ್ನೊಂದು ವಿಧದಲ್ಲಿ ಹೇಳುವುದಾದರೆ ನಮ್ಮೆಲ್ಲರ ಬೆವರಿನ (ತೆರಿಗೆ) ಹಣದಿಂದ ಸೃಷ್ಟಿಸಿದ ಸಂಪನ್ಮೂಲಗಳನ್ನು ಕೆಲವೇ ಕೆಲವು ವ್ಯಕ್ತಿಗಳ ಸ್ವಾಧೀನಕ್ಕೆ ನೀಡಲಾಯಿತು. ಖಾಸಗಿ ಬಂಡವಳಿಗರನ್ನು ಪ್ರೋತ್ಸಾಹಿಸಲು ತೆರಿಗೆ ದರವನ್ನು ಕಡಿತಗೊಳಿಸಲಾಗಿದೆ. ತೊಂಬತ್ತರ ಹಿಂದೆ ನೇರ ತೆರಿಗೆ ದರ ಶೇ. ೫೦ಕ್ಕಿಂತಲೂ ಹೆಚ್ಚಿತ್ತು. ಇಂದು ಅದನ್ನು ಶೇ. ೩೦ಕ್ಕೆ ಇಳಿಸಲಾಗಿದೆ. ಅಷ್ಟು ಮಾತ್ರವಲ್ಲ, ಈ ಶೇ. ೩೦ ಕೂಡ ಹೆಚ್ಚು ಎನ್ನುವ ಉದ್ದಿಮೆಗಳ ಕೂಗಿಗೆ ಬೆಲೆ ಕೊಟ್ಟು ಅವುಗಳ ಆದಾಯದ ಮೇಲಿನ ತೆರಿಗೆಯನ್ನು ಶೇ. ೨೫ಕ್ಕೆ ಇಳಿಸಲು ಸರಕಾರ ನಿರ್ಧರಿಸಿದೆ. ಬಿಗಿ ಕಾರ್ಮಿಕ ಕಾಯಿದೆಗಳು ಮತ್ತು ಸಂಘಟಿತ ಕಾರ್ಮಿಕರು ಆರ್ಥಿಕ ಪ್ರಗತಿಗೆ ಮಾರಕ ಎನ್ನುವ ವಾದವನ್ನು ಮುಂದಿಟ್ಟು ಖಾಸಗೀಕರಣ ಪ್ರಕ್ರಿಯೆ ಆರಂಭವಾದ ನಂತರ ಕಾರ್ಮಿಕ ಕಾಯಿದೆಗಳಿಗೆ ತಿದ್ದುಪಡಿ ತರುವ ಪ್ರಕ್ರಿಯೆ ಆರಂಭವಾಗಿದೆ. ಈ ತಿದ್ದುಪಡಿಗಳ ಮೂಲಕ ಗುತ್ತಿಗೆ, ಹೊರಗುತ್ತಿಗೆ, ತಾತ್ಕಾಲಿಕ, ಅರೆಕಾಲಿಕ ಕಾರ್ಮಿಕ ಪದ್ಧತಿಗಳು ಜಾರಿಗೆ ಬಂದಿವೆ. ಉದ್ದಿಮೆಗಳಿಗೆ ಕಡಿಮೆ ಬೆಲೆಗೆ ಭೂಮಿ ಪೂರೈಕೆ ಮಾಡಲು ಸರಕಾರ ೨೦೧೩ರ ಭೂಸ್ವಾಧೀನ ಮಸೂದೆ ತಿದ್ದುಪಡಿ ಮಾಡಲು ಹೊರಟಿತ್ತು. ಕೃಷಿಕರ ಪ್ರತಿಭಟನೆಯಿಂದ ಭೂಸ್ವಾಧೀನ ಮಸೂದೆಯ ತಿದ್ದುಪಡಿ ಸದ್ಯಕ್ಕೆ ನಿಂತಿದೆ. ಆದರೆ ಮುಂದಿನ ದಿನಗಳಲ್ಲಿ ಇದು ತಿದ್ದುಪಡಿಯಾಗುವುದಿಲ್ಲವೆಂದು ಹೇಳಲಾಗುವುದಿಲ್ಲ.

ಉದ್ದಿಮೆಗಳಿಗೆ ಹಣಕಾಸು ಪೂರೈಸಲು ಸರಕಾರ ಸಾಲ ನೀಡುವ ನೀತಿಯನ್ನು ಬದಲಾಯಿಸಿಕೊಂಡಿದೆ. ಬ್ಯಾಂಕು, ಸೊಸೈಟಿ, ಹಣಕಾಸು ಸಂಸ್ಥೆ ಮುಂತಾದವುಗಳು ನೀಡುವ ಸಂಘಟಿತ ಸಾಲದ ಬಹುಭಾಗ ಉದ್ದಿಮೆಗಳಿಗೆ ಹೋಗುವ ಸಾಲ ನೀತಿಯನ್ನು ರೂಪಿಸಲಾಗಿದೆ. ಈ ಬಗೆಯ ಉದ್ದಿಮೆಪರ ಧೋರಣೆಗಳು ಸುಲಭದಲ್ಲಿ ಅರ್ಥವಾಗಬಹುದು. ಆದರೆ ಇನ್ನು ಕೆಲವು ಆರ್ಥಿಕ, ಸಾಮಾಜಿಕ ನೀತಿಗಳಲ್ಲಿ ಅಡಕವಾಗಿರುವ ಬಂಡವಾಳಪರ ಧೋರಣೆಗಳು ಸುಲಭದಲ್ಲಿ ಅರ್ಥವಾಗುವುದಿಲ್ಲ. ಎಲ್ಲ ಕ್ಷೇತ್ರಗಳಲ್ಲಿ ದುಡಿಯುವ ಕೆಲಸಗಾರರ ಕನಿಷ್ಠ ವೇತನ ಮತ್ತು ಆಹಾರ ಪದಾರ್ಥಗಳ ಬೆಲೆಗಳ ನಡುವೆ ನೇರ ಸಂಬಂಧ ಇದೆ. ಆಹಾರ ಪದಾರ್ಥಗಳ ಬೆಲೆ ಏರಿದಂತೆ ಕನಿಷ್ಠ ವೇತನ ಏರಿಸುವ ಅನಿವಾರ್ಯತೆಯೂ ಇದೆ. ಆಹಾರ ಬೆಳೆಗಳ ಬೆಲೆಯನ್ನು ಕನಿಷ್ಠ ಪ್ರಮಾಣದಲ್ಲಿರಿಸಲು ಸರಕಾರ ಕೃಷಿ ಅಭಿವೃದ್ಧಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ, ತೆರಿಗೆ ವಿನಾಯಿತಿ, ಭೂಸುಧಾರಣೆ ಕಾಯಿದೆಗಳನ್ನು

---

**ನಮ್ಮ ಸಮಾಜವನ್ನೊಂದು ಪಿರಮಿಡ್ ಆಕೃತಿಯಲ್ಲಿ ರೂಪಿಸುವಲ್ಲಿ ನಿಯೋ ಲಿಬರಲ್ ಆರ್ಥಿಕ ನೀತಿಗಳು ಯಶಸ್ವಿಯಾಗಿವೆ. ಪಿರಮಿಡ್ ತುದಿಯಲ್ಲಿ ಶೇ. ೫ರಷ್ಟು ಜನರಿದ್ದಾರೆ. ಇವರಲ್ಲಿ ಅಧಿಕಾರ, ಆದಾಯ ಹಾಗೂ ಸ್ಥಾನಮಾನಗಳು ಹೆಚ್ಚಿನ ಪ್ರಮಾಣದಲ್ಲಿ ಕ್ರೋಢೀಕರಣಗೊಂಡಿವೆ. ಪಿರಮಿಡ್ ಮಧ್ಯಭಾಗದಲ್ಲಿ ಶೇ. ೨೦–೨೫ರಷ್ಟು ಜನರಿದ್ದಾರೆ. ಇವರಲ್ಲಿ ಮೇಲಿನವರಿಗಿಂತ ಕಡಿಮೆ ಆದಾಯ, ಅಧಿಕಾರ, ಸ್ಥಾನಮಾನಗಳಿವೆ. ನಮ್ಮ ಸಮಾಜದ ಬಹುತೇಕರು (ಶೇ. ೭೦ರಷ್ಟು) ಪಿರಮಿಡ್ ಬುಡದಲ್ಲಿದ್ದಾರೆ. ಇವರಲ್ಲಿ ಏನೇನೂ ಆದಾಯ, ಅಧಿಕಾರ, ಸ್ಥಾನಮಾನಗಳಿಲ್ಲ. ಎಲ್ಲ ಸಮುದಾಯಗಳಿಂದಲೂ ಪಿರಮಿಡ್ ಬುಡದಲ್ಲಿರುವವರಿದ್ದಾರೆ. ಆದರೆ ದಲಿತ, ಬುಡಕಟ್ಟುಗಳ ಹೆಚ್ಚಿನ ಜನರು ಪಿರಮಿಡ್‌ನ ಬುಡದಲ್ಲಿದ್ದಾರೆ. ದಲಿತ ಮತ್ತು ಬುಡಕಟ್ಟುಗಳ ನಂತರ ಹಿಂದುಳಿದ ಜಾತಿ ಮತ್ತು ಅಲ್ಪಸಂಖ್ಯಾತರು ಕೂಡ ಪಿರಮಿಡ್ ಬುಡದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.**

ರೂಪಿಸದಿರುವುದು, ಬೆಂಬಲ ಬೆಲೆ ನೀಡುವುದು, ಸಹಾಯಧನ ನೀಡುವುದು ಇತ್ಯಾದಿ ಸವಲತ್ತುಗಳನ್ನು ನೀಡುತ್ತಿದೆ. ಕೃಷಿಯ ಅಭಿವೃದ್ಧಿಗೆ ನೀಡುವ ಸವಲತ್ತುಗಳು ಕೃಷಿ ಉತ್ಪನ್ನಗಳನ್ನು ಕಡಿಮೆ ಬೆಲೆಗೆ ಮಾರುವಂತೆ ಭೂಮಾಲೀಕರನ್ನು ಪ್ರೇರೇಪಿಸುತ್ತಿವೆ. ಹೀಗೆ ಕೃಷಿ ಅಭಿವೃದ್ಧಿಗೆ ಬಳಸುವ ತೆರಿಗೆ ಹಣ ಉದ್ದಿಮೆಗಳ ಅಭಿವೃದ್ಧಿಗೆ ಬಳಸುವ ಸಹಾಯಧನವಾಗಿ ಪರಿವರ್ತನೆಗೊಂಡಿದೆ.

ಇದೇ ರೀತಿಯಲ್ಲಿ ಲಿಂಗ ತಾರತಮ್ಯ ಕೂಡ ಬಲಾಢ್ಯಪರ ಧೋರಣೆಯನ್ನು ಮುಂದುವರಿಸಲು ಸಹಕರಿಸುತ್ತಿದೆ. ಮಹಿಳೆ ಮನೆಯಲ್ಲಿ ಮಕ್ಕಳನ್ನು ಹೆತ್ತು ಹೊತ್ತು ಸಾಕುವುದು, ಅಡುಗೆ ಮಾಡಿ ಬಡಿಸುವುದು, ಬಟ್ಟೆ ಒಗೆಯುವುದು, ಪಾತ್ರೆ ತೊಳೆಯುವುದು ಇವೆಲ್ಲವನ್ನು ಕುಟುಂಬದ ಜವಾಬ್ದಾರಿಯೆಂದು ನಿಭಾಯಿಸುತ್ತಾಳೆ. ಇವೆಲ್ಲ ಕೆಲಸಗಳಿಗೆ ಅವಳಿಗೆ ಸಂಬಳ ಇಲ್ಲ ಮತ್ತು ಈ ಕೆಲಸಗಳನ್ನು ಆರ್ಥಿಕ ಚಟುವಟಿಕೆಗಳೆಂದು ಅಭಿವೃದ್ಧಿ ಪರಿಗಣಿಸುವುದಿಲ್ಲ. ಒಂದು ವೇಳೆ ಇವೇ ಕೆಲಸವನ್ನು ಹೆಂಡತಿಯ ಬದಲು ಸಂಬಳ ಕೊಟ್ಟು ಮಾಡಿಸುವುದಾದರೆ ಹಲವು ಸಾವಿರ ರೂಪಾಯಿ ಸಂಬಳ ಕೊಡಬೇಕಾಗುತ್ತದೆ. ಈ ಸಂಬಳವನ್ನು ಗಂಡ ಕೊಡಬೇಕೆಂದಾದರೆ ಪರೋಕ್ಷವಾಗಿ ಆತ ಫ್ಯಾಕ್ಟರಿ ಮಾಲೀಕನ ಸ್ಥಾನದಲ್ಲಿ ನಿಲ್ಲುತ್ತಾನೆ ಎಂದರ್ಥ.

ಇವೆಲ್ಲವನ್ನು ಹೆಂಡತಿ ಸಂಬಳವಿಲ್ಲದೆ ಮಾಡಲೇಬೇಕಾದ ಕರ್ತವ್ಯಗಳೆನ್ನುವ ಪುರುಷ ಪ್ರಧಾನ ವ್ಯವಸ್ಥೆಯಿಂದ ಬಂಡವಳಿಗರು ಕೊಡಬೇಕಾದ ಸಂಬಳದ ಮೊತ್ತ ಮತ್ತು ಉತ್ಪಾದನೆಯ ವೆಚ್ಚ ಕಡಿಮೆಯಾಗುತ್ತದೆ. ಇಂತಹ ಬಂಡವಾಳಪರ ಅಭಿವೃದ್ಧಿ ನೀತಿಗಳಿಂದ ಬಡತನ, ನಿರುದ್ಯೋಗ ನಿವಾರಣೆಯಾಗುತ್ತವೆ. ಸರಕು ಸೇವೆಗಳ ಉತ್ಪಾದನೆ ಹೆಚ್ಚುವುದರಿಂದ ತೆರಿಗೆ ಸಂಗ್ರಹ ಹೆಚ್ಚುತ್ತದೆ ಮತ್ತು ಇದೇ ಹೆಚ್ಚಾದ ತೆರಿಗೆ ಸಂಗ್ರಹವನ್ನು ಬಡಜನರಿಗಾಗಿ ಶಿಕ್ಷಣ, ಆರೋಗ್ಯನೀತಿಗಳನ್ನು ರೂಪಿಸಲು ಖರ್ಚು ಮಾಡಲಾಗುವುದು ಎನ್ನುವ ಗ್ರಹಿಕೆಗಳೂ ಇವೆ. ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿಯ ಈ ಸಾಮಾನ್ಯ ಗ್ರಹಿಕೆಗಳನ್ನು, ಅಂದರೆ ಈ ನೀತಿಗಳಿಂದ ನಿಜವಾಗಿಯೂ ಬಡತನ ನಿವಾರಣೆಯಾಗಿದೆಯೇ, ಉದ್ಯೋಗಗಳು ಸೃಷ್ಟಿಯಾಗಿವೆಯೇ, ತೆರಿಗೆ ಸಂಗ್ರಹ ಹೆಚ್ಚಾಗಿ ಅದನ್ನು ಶಿಕ್ಷಣ, ಆರೋಗ್ಯ ಮುಂತಾದ ಕ್ಷೇತ್ರಗಳಿಗೆ ಖರ್ಚುಮಾಡಲಾಗಿದೆಯೇ, ಒಂದು ವೇಳೆ ಈ ಎಲ್ಲ ಉದ್ದೇಶಗಳು ಸಾಧನೆಯಾಗದಿದ್ದರೆ ಏಕೆ ಸಾಧನೆಯಾಗಿಲ್ಲ, ಎನ್ನುವ ಪ್ರಶ್ನೆಗಳಿಗೆ ಉತ್ತರಿಸಲು ಈ ಲೇಖನದಲ್ಲಿ ವಿಮರ್ಶಿಸಿದ್ದೇನೆ.

**ಪರಿಣಾಮಗಳು**

ಸರಕಾರಿ ಲೆಕ್ಕಾಚಾರದ ಪ್ರಕಾರ ತೊಂಬತ್ತರ ನಂತರ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಸಂಖ್ಯೆ ಕಡಿಮೆಯಾಗಿದೆ. ಆದರೆ ಇದು ಬಡವರ ಆದಾಯ ಹೆಚ್ಚಾಗಿರುವುದರಿಂದ ಕಡಿಮೆಯಾಗಿರುವುದಲ್ಲ. ಬದಲು, ಬಡತನವನ್ನು ಮಾಪನ ಮಾಡುವ ಆದಾಯವನ್ನು ಅತ್ಯಂತ ಕನಿಷ್ಠ ಪ್ರಮಾಣದಲ್ಲಿ ನಿಗದಿಪಡಿಸಿರುವುದರಿಂದ ಬಡವರ ಸಂಖ್ಯೆ ಕಡಿಮೆಯಾಗಿದೆ, ಅಷ್ಟೆ. ಸರಕಾರದ ಬಡತನ ರೇಖೆಯನ್ನು ಬದಿಗಿಟ್ಟು ಅಂತರರಾಷ್ಟ್ರೀಯ ಬಡತನ ರೇಖೆಯಿಂದ (೧.೨೫ ಡಾಲರ್) ಮಾಪನ ಮಾಡಿದರೆ ಶೇ. ೪೦ರಷ್ಟು ಜನ ಬಡತನ ರೇಖೆಗಿನ ಆದಾಯ ಹೊಂದಿದ್ದಾರೆ. ಇದೇ ಮಾನದಂಡವನ್ನು ಎರಡು ಡಾಲರ್‌ಗೆ ಏರಿಸಿದರೆ ಶೇ. ೭೭ರಷ್ಟು ಜನ ಬಡತನ ರೇಖೆಗಿಂತ ಕಡಿಮೆ ಆದಾಯ ಹೊಂದಿದ್ದಾರೆ. ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿ ನೀತಿಗಳಿಂದ ಉದ್ಯೋಗಗಳು ಹೆಚ್ಚಾಗಿವೆ. ಆದರೆ ಇವು ಎಂತಹ ಉದ್ಯೋಗಗಳು ? ಇವೆಲ್ಲವೂ ಸಂಬಳ, ಉದ್ಯೋಗ ಹಾಗೂ ಸಾಮಾಜಿಕ ಭದ್ರತೆಗಳಿಲ್ಲದ ಉದ್ಯೋಗಗಳು. ಅಂದರೆ ಮಾಲೀಕರು ಖುಷಿ ಬಂದಾಗ ನೇಮಕ ಮಾಡಿ, ತಮಗೆ ಖುಷಿ ಬಂದಷ್ಟು ಸಂಬಳ ನೀಡಿ, ಖುಷಿ ಬಂದಹಾಗೆ ದುಡಿಸಿಕೊಂಡು ಖುಷಿ ಬಂದಾಗ ಮನೆಗೆ ಕಳುಹಿಸುವ ಉದ್ಯೋಗಗಳು ಇವು. ಅಸಂಘಟಿತ ಉದ್ಯೋಗಗಳು ಕೇವಲ ಖಾಸಗಿ ವಲಯಕ್ಕೆ



*ನಿಯೋ ಲಿಬರಲ್ ಪಿರಮಿಡ್*

ಸೀಮಿತವಾದ ಬೆಳವಣಿಗೆಯಲ್ಲ; ಸರಕಾರಿ ವಲಯಗಳಲ್ಲೂ ಹೆಚ್ಚುಕಡಿಮೆ ಇದೇ ಪರಿಸ್ಥಿತಿ ಇದೆ. ಕಾರ್ಮಿಕ ಸುಧಾರಣೆಗಳಿಂದ ವಿವಿಧ ಕ್ಷೇತ್ರಗಳಲ್ಲಿ ದುಡಿಯುವ ಕೆಲಸಗಾರರಲ್ಲಿ ಶೇ. ೯೩ರಷ್ಟು ಅಸಂಘಟಿತ ಕಾರ್ಮಿಕರಿದ್ದಾರೆ. ಕೃಷಿ ಕ್ಷೇತ್ರದಲ್ಲಿ ಶೇ. ೯೯, ಕೈಗಾರಿಕಾ ವಲಯದಲ್ಲಿ ಶೇ. ೮೫, ಕಟ್ಟಡ ಕೆಲಸಗಾರರಲ್ಲಿ ಶೇ. ೯೩, ವ್ಯಾಪಾರ, ಹೋಟೆಲ್, ರೆಸ್ಟೋರೆಂಟ್‌ಗಳಲ್ಲಿ ಶೇ. ೯೯ರಷ್ಟು ಅಸಂಘಟಿತ ಕಾರ್ಮಿಕರಿದ್ದಾರೆ.

ಇದೇ ರೀತಿಯಲ್ಲಿ ತೆರಿಗೆ ಸಂಗ್ರಹ ಕೂಡ ಹೆಚ್ಚಾಗಿದೆ. ಆದರೆ ಇದು ಅನುಕೂಲಸ್ಥರು ಕಟ್ಟುವ ನೇರ ತೆರಿಗೆಯಿಂದಾದ ಹೆಚ್ಚಳವಲ್ಲ. ಅದರ ಬದಲು ಅನಾನುಕೂಲಸ್ಥರು ಕಟ್ಟುವ ಪರೋಕ್ಷ ತೆರಿಗೆಯಿಂದ ತೆರಿಗೆ ಸಂಗ್ರಹ ಹೆಚ್ಚಳವಾಗಿದೆ. ಬಹುತೇಕ ಶ್ರೀಮಂತ ದೇಶಗಳಲ್ಲಿ ಪರೋಕ್ಷ ತೆರಿಗೆ ಸಂಗ್ರಹ ಅವುಗಳ ಒಟ್ಟು ತೆರಿಗೆ ಸಂಗ್ರಹದ ಅರ್ಧಕ್ಕಿಂತಲೂ ಕಡಿಮೆ ಇದ್ದರೆ, ನಮ್ಮಲ್ಲಿ ಪರೋಕ್ಷ ತೆರಿಗೆ ಸಂಗ್ರಹ ನಮ್ಮ ಒಟ್ಟು ತೆರಿಗೆ ಸಂಗ್ರಹದ ಮೂರನೇ ಎರಡರಷ್ಟಿದೆ. ಅನಾನುಕೂಲಸ್ಥರಿಗೆ ಸಂಗ್ರಹಿಸಿದ ತೆರಿಗೆಯನ್ನು ಕೃಷಿ, ಉದ್ದಿಮೆ, ಮೂಲ ಸೌಕರ್ಯಗಳ ಅಭಿವೃದ್ಧಿಗೆ ವಿನಿಯೋಗಿಸಿದಷ್ಟು ಶಿಕ್ಷಣ, ಆರೋಗ್ಯ ಕ್ಷೇತ್ರಗಳ ಅಭಿವೃದ್ಧಿಗೆ ವಿನಿಯೋಗಿಸಿಲ್ಲ. ಶಿಕ್ಷಣ, ಆರೋಗ್ಯ ಕ್ಷೇತ್ರಗಳಲ್ಲಿ ಖಾಸಗಿಯವರದ್ದೇ ಕಾರುಬಾರು. ಖಾಸಗಿ ಶಿಕ್ಷಣ ಸಂಸ್ಥೆಗಳ ಸಂಖ್ಯೆ ಗಣನೀಯವಾಗಿ ವೃದ್ಧಿಯಾಗಿದೆ. ಇದರಿಂದ ಸಮಾಜದ ತಳಸ್ತರದ ಜನರಿಗೆ ಗುಣಮಟ್ಟದ ಶಿಕ್ಷಣ ಗಗನಕುಸುಮವಾಗಿದೆ. ೨೦೧೪ರ ವೇಳೆಗೆ ಉನ್ನತ ಶಿಕ್ಷಣಯೋಗ್ಯ ವಯಸ್ಸಿನ (೧೮–೨೩ ವಯಸ್ಸಿನ) ಪ್ರತಿ ನೂರು ವಿದ್ಯಾರ್ಥಿಗಳಲ್ಲಿ ಕೇವಲ ೨೦ ವಿದ್ಯಾರ್ಥಿಗಳು ಮಾತ್ರ ಪ್ರವೇಶ ಪಡೆದಿದ್ದಾರೆ. ಎಲ್ಲ ಸಮುದಾಯಗಳಿಂದ ಇದೇ ಪ್ರಮಾಣದಲ್ಲಿ ಪ್ರವೇಶ ಪಡೆದಿಲ್ಲ. ದಲಿತರ ಶೇ. ೧೨, ಬುಡಕಟ್ಟುಗಳ ಶೇ. ೫, ಮುಸ್ಲಿಮರ ಶೇ. ೭, ಮುಸ್ಲಿಮೇತರ ಅಲ್ಪಸಂಖ್ಯಾತರ ಶೇ. ೩, ಹಿಂದುಳಿದ ಜಾತಿಗಳ ಶೇ. ೩೦ ಮತ್ತು ಮೇಲ್ಜಾತಿಗಳ ಶೇ. ೪೩ ವಿದ್ಯಾರ್ಥಿಗಳು ಉನ್ನತ ಶಿಕ್ಷಣಕ್ಕೆ ಪ್ರವೇಶ ಪಡೆದಿದ್ದಾರೆ. ಸರಕಾರಿ ಶಿಕ್ಷಣ ಸಂಸ್ಥೆಗಳು ಒಂದೆರಡು ಸಾವಿರ ಫೀಸು ಚಾರ್ಜ್ ಮಾಡುವ ಕೋರ್ಸ್‌ಗಳಿಗೆ ಖಾಸಗಿ ಸಂಸ್ಥೆಗಳು ಒಂದೆರಡು ಲಕ್ಷ ರೂ.ಗಳ ಫೀಸ್ ಚಾರ್ಜ್ ಮಾಡುತ್ತಿವೆ. ಇದರಿಂದ ಖಾಸಗಿ ಉನ್ನತ ಶಿಕ್ಷಣ ಸಂಸ್ಥೆಗಳ ಅರ್ಧಕ್ಕಿಂತಲೂ ಹೆಚ್ಚಿನ ಸೀಟುಗಳು ಶೇಕಡ ಹತ್ತರಿಂದ ಇಪ್ಪತ್ತರಷ್ಟಿರುವ ಶ್ರೀಮಂತ ಮತ್ತು ಮೇಲ್‌ಮಧ್ಯಮ ವರ್ಗದ ವಿದ್ಯಾರ್ಥಿಗಳ ಪಾಲಾದರೆ, ಅತ್ಯಲ್ಪ ಪ್ರಮಾಣದ (ಶೇ. ೪ರಷ್ಟು) ಸೀಟುಗಳು ಬಡ ವಿದ್ಯಾರ್ಥಿಗಳ ಪಾಲಾಗಿದೆ.

ಪಾರ್ಲಿಮೆಂಟರಿ ಸಮಿತಿ ನೀಡಿರುವ ವರದಿಯ ಪ್ರಕಾರ ವೈದ್ಯಕೀಯ ನೆರವಿಲ್ಲದ ಕಾರಣ ಪ್ರತಿ ವರ್ಷ ಭಾರತದಲ್ಲಿ ಕನಿಷ್ಠ ಒಂದು ಮಿಲಿಯ ಜನರು ಸಾಯುತ್ತಿದ್ದಾರೆ. ಅರ್ಧಕ್ಕಿಂತಲೂ ಹೆಚ್ಚಿನ (೭೦೦ ಮಿಲಿಯ) ಜನರಿಗೆ ತಜ್ಞ ವೈದ್ಯರ ಸೇವೆ ಲಭ್ಯವಿಲ್ಲ. ಅಲ್ಪಸಂಖ್ಯೆಯಲ್ಲಿರುವ (ಶೇ. ೮೦ರಷ್ಟು) ಸ್ಪೆಷಲಿಸ್ಟ್‌ಗಳು ನಗರ ಪ್ರದೇಶದ ಅನುಕೂಲಸ್ಥರ ಸೇವೆಗೆ ಟೊಂಕ ಕಟ್ಟಿ ನಿಂತಿದ್ದಾರೆ. ನಮ್ಮ ನೆರೆಹೊರೆಯ ಸಣ್ಣಪುಟ್ಟ ದೇಶಗಳಿಗೆ ಹೋಲಿಸಿದರೆ ನಮ್ಮ ಆರೋಗ್ಯ ಕ್ಷೇತ್ರದ ಸ್ಥಿತಿ ತುಂಬ ಕಳಪೆ ಮಟ್ಟದಲ್ಲಿದೆ. ಹುಟ್ಟುವ ಪ್ರತಿ ಸಾವಿರ ಮಕ್ಕಳಲ್ಲಿ ಐದು ವರ್ಷದೊಳಗೆ ಸಾಯುವ ಮಕ್ಕಳ ಪ್ರಮಾಣ ನೇಪಾಳದಲ್ಲಿ ಶೇ. ೫೦, ಭೂತಾನ್‌ನಲ್ಲಿ ಶೇ. ೫೪, ಬಾಂಗ್ಲಾದೇಶದಲ್ಲಿ ಶೇ. ೪೬, ಚೈನಾದಲ್ಲಿ ಶೇ. ೧೫, ಶ್ರೀಲಂಕಾದಲ್ಲಿ ಶೇ. ೧೨ ಇದ್ದರೆ ನಮ್ಮಲ್ಲಿ ಶೇ. ೬೧ ಇದೆ. ಬಹುತೇಕ ಮಕ್ಕಳು ಡೈಯೇರಿಯಾ, ನ್ಯೂಮೋನಿಯಾ ಇತ್ಯಾದಿ ಸಣ್ಣಪುಟ್ಟ ರೋಗಗಳಿಂದ ಸಾಯುತ್ತವೆ. ಇದೇ ರೀತಿಯಲ್ಲಿ ಹೆರಿಗೆ ಸಂದರ್ಭದಲ್ಲಿ ಸಾಯುವ ತಾಯಂದಿರ ಪ್ರಮಾಣ ಕೂಡ ಭಾರತದಲ್ಲಿ ಹೆಚ್ಚಿದೆ. ಆರೋಗ್ಯ ಕ್ಷೇತ್ರದ ಮೇಲೆ ಸರಕಾರ ಅತ್ಯಲ್ಪ ಮೊತ್ತ ವಿನಿಯೋಗಿಸುವುದರಿಂದ ಎರಡು ಹೊತ್ತಿನ ಊಟಕ್ಕೆ ಪರದಾಡುವವರು ಕೂಡ ತಮ್ಮ ಆದಾಯದ ಅರ್ಧಕ್ಕಿಂತಲೂ ಹೆಚ್ಚಿನ ಮೊತ್ತವನ್ನು ಆರೋಗ್ಯಕ್ಕಾಗಿ ಖರ್ಚು ಮಾಡಬೇಕಾಗಿದೆ. ಅನಾರೋಗ್ಯ ಹಾಗೂ ಅದಕ್ಕೆ ಮಾಡುವ ದುಬಾರಿ ಆಸ್ಪತ್ರೆ ವೆಚ್ಚದಿಂದ ಪ್ರತಿ ವರ್ಷ ೬೩ ಮಿಲಿಯ ಜನರು ಬಡವರಾಗುತ್ತಿದ್ದಾರೆ (ಭಾರತ ಸರಕಾರ, ೨೦೧೬).

ಒಟ್ಟಾರೆಯಾಗಿ, ನಮ್ಮ ಸಮಾಜವನ್ನು ಒಂದು ಪಿರಮಿಡ್ ಆಕೃತಿಯಲ್ಲಿ ರೂಪಿಸುವಲ್ಲಿ ನಿಯೋ ಲಿಬರಲ್ ಆರ್ಥಿಕ ನೀತಿಗಳು ಯಶಸ್ವಿಯಾಗಿವೆ. ಪಿರಮಿಡ್ ತುದಿಯಲ್ಲಿ ಶೇ. ೫ರಷ್ಟು ಜನರಿದ್ದಾರೆ. ಇವರಲ್ಲಿ ಅಧಿಕಾರ, ಆದಾಯ ಹಾಗೂ ಸ್ಥಾನಮಾನಗಳು ಹೆಚ್ಚಿನ ಪ್ರಮಾಣದಲ್ಲಿ ಕ್ರೋಢೀಕರಣಗೊಂಡಿವೆ. ಪಿರಮಿಡ್ ಮಧ್ಯಭಾಗದಲ್ಲಿ ಶೇ. ೨೦–೨೫ರಷ್ಟು ಜನರಿದ್ದಾರೆ. ಇವರಲ್ಲಿ ಮೇಲಿನವರಿಗಿಂತ ಕಡಿಮೆ ಆದಾಯ, ಅಧಿಕಾರ, ಸ್ಥಾನಮಾನಗಳಿವೆ. ನಮ್ಮ ಸಮಾಜದ ಬಹುತೇಕರು (ಶೇ. ೭೦ರಷ್ಟು) ಪಿರಮಿಡ್ ಬುಡದಲ್ಲಿದ್ದಾರೆ. ಇವರಲ್ಲಿ ಏನೇನೂ ಆದಾಯ, ಅಧಿಕಾರ, ಸ್ಥಾನಮಾನಗಳಿಲ್ಲ. ಎಲ್ಲ ಸಮುದಾಯಗಳಿಂದಲೂ ಪಿರಮಿಡ್ ಬುಡದಲ್ಲಿರುವವರಿದ್ದಾರೆ. ಆದರೆ ದಲಿತ, ಬುಡಕಟ್ಟುಗಳ ಹೆಚ್ಚಿನ ಜನರು ಪಿರಮಿಡ್‌ನ ಬುಡದಲ್ಲಿದ್ದಾರೆ. ದಲಿತ ಮತ್ತು ಬುಡಕಟ್ಟುಗಳ ನಂತರ ಹಿಂದುಳಿದ ಜಾತಿ ಮತ್ತು ಅಲ್ಪಸಂಖ್ಯಾತರು ಕೂಡ ಪಿರಮಿಡ್ ಬುಡದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಮಾರುಕಟ್ಟೆ ಅಭಿವೃದ್ಧಿಯಿಂದ ಜನಸಾಮಾನ್ಯರಿಗೆ ಅನುಕೂಲಗಳಾಗುವ ಬದಲು ಅನಾನುಕೂಲಗಳೇ ಹೆಚ್ಚಾಗಿರುವುದನ್ನು ನೋಡಿ ಇದು ಮಾರುಕಟ್ಟೆಯದ್ದೇ ಅಥವಾ ನಿಯೋ ಲಿಬರಲ್ ಅಭಿವೃದ್ಧಿ ನೀತಿಗಳ ಸಮಸ್ಯೆಯೇ ಇರಬೇಕೆಂದು ಗ್ರಹಿಸುವ ಸಾಧ್ಯತೆಗಳಿವೆ. ಖಂಡಿತವಾಗಿಯೂ ಈ ನೀತಿಗಳ ಗರ್ಭದಲ್ಲೇ ಅಸಮಾನತೆಯನ್ನು ಸೃಷ್ಟಿಸುವ ಅಂಶಗಳಿವೆ. ಭೂಮಿ, ಹಣಕಾಸು, ಪ್ರಾಕೃತಿಕ ಸಂಪನ್ಮೂಲ, ಶಿಕ್ಷಣ, ಆರೋಗ್ಯ ಇವನ್ನು ಕೆಲವರಲ್ಲೇ ಕ್ರೋಢೀಕರಣಗೊಳಿಸುವ ನಿಯೋ ಲಿಬರಲ್ ನೀತಿಗಳ ಪ್ರಭಾವವನ್ನು ಈಗಾಗಲೇ ನೋಡಿದ್ದೇವೆ. ಇವುಗಳೊಂದಿಗೆ ಈ ನೀತಿಗಳು ರೂಪಿಸುವ ರಾಜಕೀಯ ಪರಿಸರದ ಪಾತ್ರವೂ ಇದೆ.

**ಪ್ರಜಾಪ್ರಭುತ್ವ**

ಮಾನವ ಬದುಕಿ ಉಳಿಯಬೇಕಾದರೆ ಸರಕುಸೇವೆಗಳು ಬೇಕು. ಈ ಸರಕುಸೇವೆಗಳನ್ನು ಹೇಗೆ ಉತ್ಪಾದಿಸುವುದು ಮತ್ತು ಉತ್ಪಾದಿಸಿದ ಸರಕುಸೇವೆಗಳನ್ನು ಸಮಾಜದ ವಿವಿಧ ಗುಂಪುಗಳ ನಡುವೆ ಹೇಗೆ ಹಂಚುವುದು ಇತ್ಯಾದಿ ಪ್ರಶ್ನೆಗಳು ರಾಜಕೀಯದೊಂದಿಗೆ ನೇರಸಂಬಂಧ

ಹೊಂದಿದೆ. ಇಂತಹ ರಾಜಕೀಯವನ್ನು ಕಟ್ಟಿಕೊಳ್ಳುವ ಬಗೆ ಉತ್ಪಾದಿತ ಸಂಪತ್ತಿನಲ್ಲಿ ವಿವಿಧ ಗುಂಪುಗಳ (ಭೂಮಾಲೀಕರು, ಶ್ರೀಮಂತರು, ಪ್ರಾಕೃತಿಕ ಸಂಪನ್ಮೂಲಗಳ ಒಡೆಯರು, ಕಾರ್ಮಿಕರು) ಹಕ್ಕುಗಳ ಮೇಲೆ ಪ್ರಭಾವಬೀರುತ್ತದೆ. ಇದನ್ನೇ ಇನ್ನೊಂದು ವಿಧದಲ್ಲಿ ಹೇಳುವುದಾದರೆ ನಿಯೋ ಲಿಬರಲ್ ಅಭಿವೃದ್ಧಿ ಗುಣಮಟ್ಟಗಳ ಮತ್ತು ಪ್ರಜಾಪ್ರಭುತ್ವದ ಗುಣಮಟ್ಟ ನಡುವೆ ನೇರ ಸಂಬಂಧ ಇದೆ. ಪ್ರಜಾಪ್ರಭುತ್ವದ ಗುಣಮಟ್ಟ ಉತ್ತಮಗೊಂಡಂತೆ ಮಾರುಕಟ್ಟೆಯ ಗುಣಮಟ್ಟವೂ ಉತ್ತಮಗೊಳ್ಳುತ್ತದೆ ಮತ್ತು ಪ್ರಜಾಪ್ರಭುತ್ವದ ಗುಣಮಟ್ಟ ಕೆಟ್ಟಂತೆ ಮಾರುಕಟ್ಟೆ ಗುಣಮಟ್ಟವೂ ಕೆಡುತ್ತದೆ. ಮುಕ್ತ ಮಾರುಕಟ್ಟೆ ನಿಜವಾದ ಅರ್ಥದಲ್ಲಿ ಆಚರಣೆಗೆ ಬರಬೇಕಾದರೆ ಮುಕ್ತ ಪ್ರಜಾಪ್ರಭುತ್ವ ಆಚರಣೆಯಲ್ಲಿರಬೇಕಾಗುತ್ತದೆ. ಪ್ರಜಾಪ್ರಭುತ್ವ ಸಂಕುಚಿತಗೊಂಡಂತೆ ಮಾರುಕಟ್ಟೆ ಕೂಡ ಸಂಕುಚಿತಗೊಳ್ಳುತ್ತದೆ. ಗುಣಮಟ್ಟದ ಪ್ರಜಾಪ್ರಭುತ್ವ ಆಚರಣೆಯಲ್ಲಿ ಇರಬೇಕಾದರೆ ಸಮಾಜದ ಎಲ್ಲರೂ ಪ್ರಜಾಪ್ರಭುತ್ವದಲ್ಲಿ ಮುಕ್ತವಾಗಿ ಪಾಲುಗೊಳ್ಳುವ ಅವಕಾಶ ಇರಬೇಕು. ತಾತ್ವಿಕವಾಗಿ ಈ ಅವಕಾಶ ನಮ್ಮಲ್ಲಿದೆ. ಅಂದರೆ ಚುನಾವಣೆಯಲ್ಲಿ ಭಾಗವಹಿಸಲು ವ್ಯಕ್ತಿಯ ಜಾತಿ, ಧರ್ಮ, ಲಿಂಗ, ವರ್ಗಗಳು ಅಡ್ಡಿಯಾಗಬಾರದು. ಆದರೆ ವಾಸ್ತವದಲ್ಲಿ ಆ ರೀತಿ ನಡೆಯುತ್ತಿಲ್ಲ.

ಮಹಿಳೆಯರು ನಮ್ಮ ಜನಸಂಖ್ಯೆಯ ಅರ್ಧದಷ್ಟಿದ್ದಾರೆ. ಆದರೆ ಲೋಕಸಭೆಯ ಪ್ರತಿನಿಧಿಗಳ ಹತ್ತನೇ ಒಂದರಷ್ಟು ಮತ್ತು ವಿಧಾನಸಭೆಯ ಪ್ರತಿನಿಧಿಗಳ ಹತ್ತನೇ ಒಂದಕ್ಕಿಂತಲೂ ಕಡಿಮೆ ಮಹಿಳಾ ಪ್ರತಿನಿಧಿಗಳಿದ್ದಾರೆ. ಇದೇ ರೀತಿಯಲ್ಲಿ ನಮ್ಮ ಜನಸಂಖ್ಯೆಯ ಐದನೇ ಒಂದರಷ್ಟು ಮಂದಿ ಅಲ್ಪಸಂಖ್ಯಾತರಿದ್ದಾರೆ. ಆದರೆ ಅಲ್ಪಸಂಖ್ಯಾತರ ಜನಪ್ರತಿನಿಧಿಗಳ ಸಂಖ್ಯೆ ಶೇ. ೧೦ ದಾಟುವುದಿಲ್ಲ. ನಮ್ಮ ಜನಸಂಖ್ಯೆಯ ಕಾಲುಭಾಗದಷ್ಟು ದಲಿತ ಮತ್ತು ಬುಡಕಟ್ಟು ಜನಸಂಖ್ಯೆ ಇದೆ. ಹೆಚ್ಚುಕಡಿಮೆ ಅಷ್ಟೇ ಪ್ರಮಾಣದ ಜನಪ್ರತಿನಿಧಿಗಳು ದಲಿತ ಮತ್ತು ಬುಡಕಟ್ಟು ಹಿನ್ನೆಲೆಯಿಂದ ಬರುತ್ತಾರೆ. ಇದಕ್ಕೆ ಬಹುಮುಖ್ಯ ಕಾರಣ ಮೀಸಲಾತಿ ಕ್ಷೇತ್ರಗಳು. ಮೀಸಲಾತಿ ಕ್ಷೇತ್ರಗಳು ಇಲ್ಲದಿದ್ದರೆ ಅವರ ಸ್ಥಿತಿ ಮಹಿಳೆ ಮತ್ತು ಅಲ್ಪಸಂಖ್ಯಾತರಿಗಿಂತಲೂ

# ದುರ್ಮುಖದ ಪರೀಕ್ಷೆ






ಶಾಂತಿ ಪ್ರಿಯರೆ, ಸಂಭಾವಿತರೆ, ಸಹಿಷ್ಣುತಾ –
ವಾದಿಗಳೆ, ಹಾದಿ ಬೀದಿಗಳೆ ಹೇಳುತ್ತಿವೆ :
ಒಡೆದ ದೀಪಗಳ, ಮೈಸುಟ್ಟ ವಾಹನಗಳ, ಆಸ್ಪತ್ರೆಗೆ
ದಾಖಲಾದ ಮುಗ್ಧರ, ವಿದಗ್ಧರ ವ್ಯಥೆಯ.

ಭುಗಿಲೆದ್ದ ಜ್ವಾಲೆ : ಹಿಂದೆ ಕರಾಳ ನೆರಳು, ಕಪ್ಪು
ಕೈಬೆರಳು ಜಾತಿ–ಮತ ಕೋಟೆ ಕಂದಕಗಳು –
ಮೆಟ್ಟಿ ದಾಟದೆ ಜಾರುದಂಡೆಯಲಿ ಜೋಲಿ ಹೊಡೆ –
ಯುತ್ತ ಪ್ರಜಾ–ಸತ್ತೆ, ಇತ್ತ ಹೊರಳು.

ಸಾಧು ಸಂತರು, ಮಾನವ ಮಹಂತರು ಅರಳಿ ಮಗ –
ಮಗಿಸಿದ್ದು ಈ ಮಣ್ಣೆ? ಹಸಿದವರಿಗುಣಿಸಿ
ತಣಿಸಿದ್ದು ಈ ಮರದ ಹಣ್ಣೆ? ಜೀವದಲಿ ದೈವತ್ವ
ಕಂಡುದು ಬೇರೊಂದು ಕಣ್ಣೆ? ಯಾವ ಕಾಲದ ಸುದ್ದಿ?

ಉಪದೇಶಗಳ ಅಣೆಕಟ್ಟುಗಳಿಂದ ಸಿಕ್ಕಾಬಟ್ಟೆ ನೀರು ಹರಿ –
ಬಿಟ್ಟು, ಬೆಳೆವ ಭೂಮಿಗೆ ಸವುಳು ಹಿಡಿಸಿದೆವೆ?

ರೋಗವಿಲ್ಲದಿರೆ ಏಕಿಷ್ಟು ವೈದ್ಯತಜ್ಞರ ತಂಡ?
ಶಾಂತಿ ಸಂಪನ್ನತೆಯ ಖುದ್ದು ಮುಖವಾಡವೆ?

ಸಹಿಸಲಾಗದ್ದನ್ನು ಸಹಿಸಬಲ್ಲೆವು : ಕೊಳಚೆ–ಕೊಂಪೆಗಳ
ಭ್ರಷ್ಟತೆಯ ದುರ್ನಾತ, ಮಾನನಷ್ಟತೆಯ, ಸಂತುಷ್ಟ–
ರಬ್ಬರವ, ಜಿಡ್ಡುಗಟ್ಟಿದ ಕಚೇರಿ ಕುರ್ಚಿಗಳ, ನಗರ ಸಭೆ
ಗಟಾರಗಳ, ವಿಧಾನ ಸಭೆ ಜಂಗೀ ಕುಸ್ತಿ–ಮಸ್ತಿಗಳ.

ಸುತರಾಂ ಸಹಿಸುವುದಿಲ್ಲ : ಅನ್ಯರ ಭಿನ್ನಾಭಿಪ್ರಾಯಗಳ,
ಅಧಿಕಾರ ಪ್ರಶ್ನಿಸಿ, ಪ್ರತಿಷ್ಠೆಗೆ ಧಕ್ಕೆ ತರುವವರ,
ನೆರೆ ಹೊರೆಯವರ, ಅಷ್ಟೇಕೆ ಸ್ವಂತ ಮಕ್ಕಳ, ಬಂಧು
ಬಳಗವ, ನಮ್ಮ ಮಾತಿಗೆ ಸುಮ್ಮನೊಪ್ಪದವರ.

ತೆರೆದ ಮನ ಕೆರಳದು, ಹೊರಳದು ವಿರೋಧಕ್ಕೆ, ಘರ್ಷಣೆಯ
ದೃಷ್ಟಿಕೋನ–ಕೋಣಗಳೊ? ನಮಗಿರುವ ಸ್ವಾತಂತ್ರ್ಯ
ಉಳಿದವರಿಗಿದ್ದರೆ ಕಷ್ಟ. ಮತದ ಬೆಲೆ ಗೊತ್ತು : ಮತಗಟ್ಟೆಗಳ
ಹಿಡಿದು ಕುಳಿತರೆ ಸಾಕು – ಎಲ್ಲರಿಗೂ ಲಕ್ಷಗೊಟ್ಟು.

ನಮ್ಮ ಹೃದಯವೂ ಸದಾ ಎಚ್ಚರವಿರುವ ಭರವಸೆಯುಂಟೆ?
ಹಿಂಸೆ–ಕ್ರೌರ್ಯದ ಬೇರಿನಲ್ಲಿ ನೀರಿನ ಝರಿ;
ಬಗೆಬಗೆಯ ಪ್ರಾಣಿಗಳಲ್ಲಿ ನೂರೆಂಟು ಗವಿ, ಬೀದಿಯಲಿ
ಹುಲಿಯ ಕಂಡರೆ ಆಗ ಆಘಾತ ನಮಗೆ.

ಕುರುಡರಾನೆಯ ಕಂಡ ಕಥೆಯಲ್ಲ; ಪುಣ್ಯ ಕೋಟಿಯ ಕಂಡ
ನಾವೇನು ಪರಿಶುದ್ಧರಲ್ಲ : ಎಂಥದೊ ಮಿಶ್ರಣ, ಕಲಬೆರಕೆ –
ಸಳಮಳ ಕುದಿಸಿ, ಕೆಳಗಿಳಿಸಿ ಕಾದರೆ ತಿಳಿಯು ದೊರಕೀತು –
'ದುರ್ಮುಖ'ದ ಹೆಜ್ಜೆ ಹೆಜ್ಜೆಗೆ ಪರ್ವಕಾಲದ ಪರೀಕ್ಷೆ.

**ಚೆನ್ನವೀರ ಕಣವಿ**
'ಚಂಬೆಳಕು', ಕಲ್ಯಾಣನಗರ, ಧಾರವಾಡ – ೫೮೦ ೦೦೭

ಕಟ್ಟದಿರುತ್ತಿತ್ತು. ಇದೇ ಸಂದರ್ಭದಲ್ಲಿ ಮೀಸಲಾತಿ ಕ್ಷೇತ್ರ ನೀಡಿದ ಕೂಡಲೇ ದಲಿತ ಮತ್ತು ಬುಡಕಟ್ಟು ಜನರ ಆದ್ಯತೆಗಳನ್ನು ಪ್ರತಿನಿಧಿಸುವ ಪ್ರತಿನಿಧಿಗಳು ಆಯ್ಕೆಯಾಗುತ್ತಾರೆನ್ನಲು ಸಾಧ್ಯವಿಲ್ಲ. ಏಕೆಂದರೆ, ದಲಿತ ಮತ್ತು ಬುಡಕಟ್ಟುಗಳ ಪ್ರತಿನಿಧಿಗಳ ಆಯ್ಕೆಯಲ್ಲಿ ದಲಿತ ಮತ್ತು ಬುಡಕಟ್ಟೇತರ ಅಥವಾ ಸಾಮಾನ್ಯ ಮತದಾರರು ನಿರ್ಣಾಯಕ ಪಾತ್ರ ವಹಿಸುತ್ತಿದ್ದಾರೆ. ಇದರಿಂದಾಗಿ ದಲಿತ ಮತ್ತು ಬುಡಕಟ್ಟು ಜನರ ಪ್ರತಿನಿಧಿಗಳು ತಮ್ಮ ಜನರ ಹಿತಾಸಕ್ತಿಗಳನ್ನು ಪ್ರತಿನಿಧಿಸುವುದಕ್ಕಿಂತ ಹೆಚ್ಚು ಸಾಮಾನ್ಯ ಮತದಾರರ ಆದ್ಯತೆಗಳನ್ನು ಪ್ರತಿನಿಧಿಸುವ ಅನಿವಾರ್ಯತೆ ಇದೆ. ಇನ್ನು, ಪ್ರಾತಿನಿಧಿತ್ವವನ್ನು ವರ್ಗದ ದೃಷ್ಟಿಯಿಂದ ನೋಡಿದರೆ ನಮ್ಮ ಸಮಾಜದ ಶೇ. ೯೦ಕ್ಕಿಂತಲೂ ಹೆಚ್ಚಿನ ಜನರು ಅತ್ಯಂತ ಕಡಿಮೆ ಆದಾಯವುಳ್ಳವರು. ಆದರೆ ಈ ವರ್ಗದಿಂದ ಒಂದೆರಡು ಜನಪ್ರತಿನಿಧಿಗಳು ಕೂಡ ಚುನಾಯಿತರಾಗುತ್ತಿಲ್ಲ.

ಈ ಎಲ್ಲದರ ಹಿನ್ನೆಲೆಯಲ್ಲಿ ನಮ್ಮ ಪ್ರಜಾಪ್ರಭುತ್ವದ ಗುಣಮಟ್ಟದ ಕುರಿತು ಈ ತೀರ್ಮಾನಕ್ಕೆ ಬರಬಹುದು : ಒಂದು, ನಮ್ಮ ಸಮಾಜದ ಶೇ. ೭೦ರಷ್ಟು ಜನರು ತಮ್ಮ ಜನಸಂಖ್ಯೆಗೆ ಸಮನಾದ ಪ್ರತಿನಿಧಿತ್ವವನ್ನು ಹೊಂದಿಲ್ಲ. ಎರಡು, ದಲಿತ ಬುಡಕಟ್ಟುಗಳು ಅವರ ಜನಸಂಖ್ಯೆಗೆ ಸಮವಾದ ಪ್ರತಿನಿಧಿತ್ವ ಹೊಂದಿದ್ದರೂ ಅವರು ದಲಿತ ಮತ್ತು ಬುಡಕಟ್ಟುಗಳಿಗಿಂತ ಹೆಚ್ಚು ದಲಿತ ಮತ್ತು ಬುಡಕಟ್ಟೇತರ ಜನರ ಆದ್ಯತೆಗಳನ್ನು ಪ್ರತಿನಿಧಿಸುವ ಅನಿವಾರ್ಯತೆ ಇದೆ. ಮೂರು, ಜಾತಿ-ಧರ್ಮ ಮತ್ತು ಹಣಬಲ ಜನಪ್ರತಿನಿಧಿಗಳ ಆಯ್ಕೆಯಲ್ಲಿ ನಿರ್ಣಾಯಕ ಪಾತ್ರ ವಹಿಸುತ್ತಿವೆ. ಇದರಿಂದಾಗಿ ಪ್ರತಿನಿಧಿಗಳುಳ್ಳ ಸಮುದಾಯಗಳ ತಳಸ್ತರದ ಜನರ ಆದ್ಯತೆಗಳು ಪ್ರತಿನಿಧಿಸಲ್ಪಡುತ್ತಿಲ್ಲ. ಇವೆಲ್ಲವೂ ಸಂಕುಚಿತ ಪ್ರಜಾಪ್ರಭುತ್ವದ ಗುಣಲಕ್ಷಣಗಳು. ಸಂಕುಚಿತ ಪ್ರಜಾಪ್ರಭುತ್ವ ಸಂಕುಚಿತ ಮಾರುಕಟ್ಟೆಯನ್ನು ಸೃಷ್ಟಿಸುತ್ತದೆ ಎನ್ನುವುದು ಮತ್ತೊಂದು ಗ್ರಹಿಕೆ. ಈ ಗ್ರಹಿಕೆ ಎಷ್ಟರಮಟ್ಟಿಗೆ ಸರಿಯೆಂದು ಪರೀಕ್ಷಿಸುವ.

**ಅಭಿವೃದ್ಧಿ**

ಭೂಮಿ, ಹಣಕಾಸು, ಪ್ರಾಕೃತಿಕ ಸಂಪನ್ಮೂಲ, ಶ್ರಮ ಇವೆಲ್ಲ ಉತ್ಪಾದನಾ ಪರಿಕರಗಳು. ಅಂದರೆ ಇವುಗಳನ್ನು ಬಳಸಿಕೊಂಡು ಸರಕುಸೇವೆಗಳ ಉತ್ಪಾದನೆ ನಡೆಯುತ್ತದೆ. ಭೂಮಿ, ಹಣಕಾಸು ಇಲ್ಲದವರಿಗೆ ತಮ್ಮ ಶ್ರಮ ಮಾರಿ ಬದುಕುವುದು ಬಿಟ್ಟರೆ ಬೇರೆ ದಾರಿ ಇಲ್ಲ. ತೊಂಬತ್ತರ ನಂತರ ಅಥವಾ ಮಾರುಕಟ್ಟೆ ನಿರ್ದೇಶಿತ ಅಭಿವೃದ್ಧಿ ಜಾರಿಗೆ ಬಂದ ನಂತರ ಉತ್ಪಾದನಾ ಪರಿಕರ ಮತ್ತು ಸರಕುಸೇವೆಗಳ ವಿತರಣೆ ಮಾರುಕಟ್ಟೆ ನಿಯಮಕ್ಕೆ ಒಳಗಾಗಿದೆ ಎನ್ನುವ ಚಿತ್ರಣ ಇದೆ. ಜನರ ಖರೀದಿಸುವ ಶಕ್ತಿ ಮತ್ತು ಅವರು ಅನುಭವಿಸುವ ಸರಕುಸೇವೆ ಅಥವಾ ಉತ್ಪಾದನಾ ಪರಿಕರಗಳ ನಡುವೆ ನೇರ ಸಂಬಂಧ ಕಲ್ಪಿಸಲಾಗಿದೆ. ಅಂದರೆ ಅನುಕೂಲಸ್ಥರು ಮಾರುಕಟ್ಟೆ ದರದಲ್ಲಿ ಖರೀದಿಸಿ ಅನುಭವಿಸುತ್ತಿದ್ದಾರೆ ಮತ್ತು ಪ್ರಜಾಪ್ರಭುತ್ವದಲ್ಲಿ ಸರಿಯಾದ ಪ್ರಾತಿನಿಧ್ಯ ಇಲ್ಲದ ಅನಾನುಕೂಲಸ್ಥರು ಸರಕಾರದ ಕೃಪೆಯಲ್ಲಿ ಬದುಕುತ್ತಿದ್ದಾರೆ ಎನ್ನುವ ಚಿತ್ರಣ ಇದೆ. ಆದರೆ ವಾಸ್ತವದಲ್ಲಿ ಕಾರ್ಯರೂಪದಲ್ಲಿರುವ ಮಾರುಕಟ್ಟೆ ಚಿತ್ರಣವೇ ಬೇರೆ. ಸಂಕುಚಿತ ಪ್ರಜಾಪ್ರಭುತ್ವದ ಮೇಲೆ ಹಿಡಿತ ಹೊಂದಿರುವ ಮೇಲ್ವರ್ಗ ಮಾರುಕಟ್ಟೆಯನ್ನು ತನ್ನ ಆಸಕ್ತಿಗೆ ಪೂರಕವಾಗಿ ಕಟ್ಟಿಕೊಂಡಿದೆ.

ಇವರು ಕಟ್ಟಿಕೊಂಡ ಮಾರುಕಟ್ಟೆಯಲ್ಲಿ ಬೇಡಿಕೆಗಿಂತ ಕಡಿಮೆ ಪೂರೈಕೆ ಇರುವ ಭೂಮಿ, ಹಣಕಾಸು, ಪ್ರಾಕೃತಿಕ ಸಂಪನ್ಮೂಲಗಳ ವ್ಯವಹಾರ ಮಾರುಕಟ್ಟೆ ನಿಯಮದಿಂದ ಹೊರಗಿದ್ದರೆ ಬೇಡಿಕೆಗಿಂತ ಹೆಚ್ಚು ಪೂರೈಕೆ ಇರುವ ಶ್ರಮ ವ್ಯವಹಾರ ಮಾರುಕಟ್ಟೆ ನಿಯಮದೊಳಗಿದೆ. ಕೆಲವೊಂದು ಉದಾಹರಣೆಗಳನ್ನು ನೋಡಿದರೆ ಮೇಲಿನ ಅಂಶ ಹೆಚ್ಚು ಸ್ಪಷ್ಟವಾಗಬಹುದು. ಮೊದಲಿಗೆ, ಹಣಕಾಸು ಮಾರುಕಟ್ಟೆಯನ್ನು ಪರಿಶೀಲಿಸುವ. ಸಾಲದ ಬೇಡಿಕೆ ಪೂರೈಕೆಗಳು ಬಡ್ಡಿದರವನ್ನು ತೀರ್ಮಾನಿಸಬೇಕು. ಸಾಲದ ಬೇಡಿಕೆ ಹೆಚ್ಚಾದಾಗ ಬಡ್ಡಿದರ ಹೆಚ್ಚಾಗಬೇಕು ಮತ್ತು ಕಡಿಮೆಯಾದಾಗ ಕಡಿಮೆಯಾಗಬೇಕು. ಆದರೆ ನಮ್ಮಲ್ಲಿ ಆ ರೀತಿ ಆಗುತ್ತಿಲ್ಲ. ಸಾಲದ ಮಾರುಕಟ್ಟೆಯಲ್ಲಿ ಸರಕಾರ ಮಧ್ಯಪ್ರವೇಶಿಸಿ ಸಾಲದ ಎರಡು ಮಾರುಕಟ್ಟೆಗಳನ್ನು ಸೃಷ್ಟಿಸಿದೆ. ಒಂದು, ಸಾಲದ ಮಾರುಕಟ್ಟೆಯಲ್ಲಿ ಸರಕಾರ ಮಧ್ಯಪ್ರವೇಶ ಮಾಡಿ ಬಡ್ಡಿದರವನ್ನು ಹಿಡಿತದಲ್ಲಿಟ್ಟುಕೊಂಡರೆ, ಮತ್ತೊಂದು ಸಾಲದ ಮಾರುಕಟ್ಟೆ ಮಾರುಕಟ್ಟೆ ನಿಯಮಾನುಸಾರ ನಡೆಯುತ್ತಿದೆ. ವಿಚಿತ್ರವೆಂದರೆ ಸರಕಾರದ ಹಿಡಿತದಲ್ಲಿರುವ ಸಾಲದ ಮಾರುಕಟ್ಟೆಯ ಹೆಚ್ಚಿನ ಭಾಗ ದೊಡ್ಡ ಉದ್ದಿಮೆ ಹಾಗೂ ದೊಡ್ಡ ಕೃಷಿಕರಿಗೆ ಹೋದರೆ ಸಣ್ಣ ಭಾಗ ಪ್ರಜಾಪ್ರಭುತ್ವದಲ್ಲಿ ಕಡಿಮೆ ಪ್ರತಿನಿಧಿತ್ವವುಳ್ಳವರಿಗೆ ಲಭ್ಯವಾಗುತ್ತಿದೆ.

ಪ್ರಜಾಪ್ರಭುತ್ವದಲ್ಲಿ ಪ್ರಾತಿನಿಧ್ಯ ಇಲ್ಲದ ತಳಸ್ತರದ ಜನರನ್ನು ಮಾರುಕಟ್ಟೆ ನಿಯಮಾನುಸಾರ ವ್ಯವಹರಿಸಲು ಒತ್ತಾಯಿಸಲಾಗುತ್ತಿದೆ. ಇವರ ಸಾಲದ ಬೇಡಿಕೆ ಹೆಚ್ಚಿರುವುದರಿಂದ ಸರಕಾರೇತರ ಮೂಲಗಳ ಸಾಲದ ಬಡ್ಡಿದರಗಳು ಕೂಡ ಹೆಚ್ಚಾಗಿವೆ (ಭಾರತ ಸರಕಾರ, ೨೦೦೭). ಪ್ರಜಾಪ್ರಭುತ್ವದ ಮೇಲೆ ಹಿಡಿತ ಹೊಂದಿರುವ ಮೇಲ್ವರ್ಗ ಹೆಚ್ಚು ಸರಕಾರಿ ಸಾಲ ಪಡೆಯುವುದು ಮಾತ್ರವಲ್ಲ, ಪಡೆದ ಸಾಲವನ್ನು ಸಂದಾಯ ಮಾಡುವುದರಲ್ಲೂ ಹಿಂದಿದೆ. ಹಾಗೆಂದು ಕಠಿಣ ಕಾನೂನು ಕ್ರಮ ಕೈಗೊಂಡು ಸಾಲ ವಸೂಲಿ ಮಾಡುವ ಬದಲು ಕೋಟಿಗಟ್ಟಲೆ ರೂ.ಗಳ ಸಾಲವನ್ನು ಮನ್ನಾ ಮಾಡಲಾಗುತ್ತಿದೆ. ಕೃಷಿಕರ ಸಣ್ಣಪುಟ್ಟ ಸಾಲವನ್ನು ಸರಕಾರ ಮನ್ನಾ ಮಾಡುವಾಗ ನಮ್ಮ ಬ್ಯಾಂಕಿಂಗ್ ವ್ಯವಸ್ಥೆ ಕೆಡುತ್ತಿದೆಯೆಂದು ಕಿರುಚಾಡುವ ಮಾಧ್ಯಮಗಳು ಉದ್ದಿಮೆಗಳು ಮಾಡಿರುವ ಲಕ್ಷ ಕೋಟಿಗಿಂತಲೂ ಹೆಚ್ಚಿನ ಸಾಲವನ್ನು ಮನ್ನಾ ಮಾಡುವಾಗ ಮಾತೇ ಆಡುವುದಿಲ್ಲ.

ಎರಡು ವಿಧದ ಸಾಲದ ಮಾರುಕಟ್ಟೆ ಇದ್ದಂತೆ ಎರಡು ವಿಧದ ಭೂ ಮಾರುಕಟ್ಟೆಗಳಿವೆ. ಬಡವರು ಮತ್ತು ತಳಮಧ್ಯಮ ವರ್ಗದವರು ಮನೆ ಕಟ್ಟಿಸಲು ಒಂದು ಸಣ್ಣ ತುಂಡು ಜಾಗ ಖರೀದಿಸುವಾಗ ಮಾರುಕಟ್ಟೆ ದರ ನೀಡಬೇಕು. ವರ್ಷದಿಂದ ವರ್ಷ ವಸತಿ ಬೇಡಿಕೆ ಹೆಚ್ಚಾದಂತೆ ಭೂಮಿ ಬೆಲೆ ಕೂಡ ಏರುತ್ತಿದೆ. ಆದರೆ ಇದೇ ಸಂದರ್ಭದಲ್ಲಿ ಉದ್ದಿಮೆಗಳಿಗೆ ಅತ್ಯಂತ ಅಗ್ಗದ ಬೆಲೆಯಲ್ಲಿ ಭೂಮಿ ಲಭ್ಯವಾಗುತ್ತಿದೆ. ಉದ್ದಿಮೆಗಳಿಗೆ ಭೂಮಿ ನೀಡಲು ಸರಕಾರವೇ ಭೂ ಬ್ಯಾಂಕ್ ಸ್ಥಾಪಿಸುತ್ತಿದೆ. ಉದ್ದಿಮೆಗಳಿಗೆ ಕಡಿಮೆ ಬೆಲೆಯಲ್ಲಿ ಭೂಮಿ ಒದಗಿಸುವ ಉದ್ದೇಶದಿಂದ ಭೂಸ್ವಾಧೀನ ಮಸೂದೆಯನ್ನು ತಿದ್ದುಪಡಿ ಮಾಡಲು ಸರಕಾರ ಹಿಂದೇಟು ಹಾಕುವುದಿಲ್ಲ. ಇಷ್ಟವಿದ್ದರೆ ಮಾರುವ, ಇಲ್ಲವಾದರೆ ದೂರ ನಿಲ್ಲುವ ಭೂಮಾಲೀಕರ ಮಾರುಕಟ್ಟೆ ಸ್ವಾತಂತ್ರ್ಯ ಉದ್ದಿಮೆಗಳಿಗೆ ಭೂಮಿ ನೀಡುವ ಸಂದರ್ಭದಲ್ಲಿ ಅನ್ವಯವಾಗುವುದಿಲ್ಲ. ಹೆಚ್ಚೂಕಡಿಮೆ ಇದೇ ನೀತಿ ಕಲ್ಲಿದ್ದಲು, ತೈಲ, ಕಬ್ಬಿಣ ಅದಿರು ಇತ್ಯಾದಿ ಪ್ರಾಕೃತಿಕ ಸಂಪನ್ಮೂಲಗಳ ಮಾರುಕಟ್ಟೆಯಲ್ಲೂ ಕೆಲಸ ಮಾಡುತ್ತಿದೆ.

ಅತ್ಯಂತ ಕಡಿಮೆ ಬೆಲೆಗೆ ಭೂಮಿ, ಹಣಕಾಸುಗಳು ಮೇಲ್ವರ್ಗಕ್ಕೆ ಪೂರೈಕೆಯಾಗುವಂತೆ ಇವುಗಳ ಮಾರುಕಟ್ಟೆಯನ್ನು ಕಟ್ಟಿಕೊಳ್ಳಲಾಗಿದೆ. ಆದರೆ ಶ್ರಮ ಮಾರುಕಟ್ಟೆಯಲ್ಲಿ ದುಡಿಯುವ ವರ್ಗದ ಸಂಬಳ ಸಂಪೂರ್ಣವಾಗಿ ಬೇಡಿಕೆ ಪೂರೈಕೆಗಳ ಮೇಲೆ ನಿಂತಿದೆ. ನಮ್ಮಲ್ಲಿ ಭೂಮಿ, ಹಣಕಾಸು ಇಲ್ಲದ ಜನರ ಸಂಖ್ಯೆ ಹೆಚ್ಚಿರುವುದರಿಂದ ದುಡಿಯುವ ಜನರ ಪೂರೈಕೆ ಕೂಡ ಹೆಚ್ಚಿದೆ. ಪೂರೈಕೆ ಹೆಚ್ಚಿರುವುದರಿಂದ ಅತ್ಯಂತ ಕಡಿಮೆ ಸಂಬಳಕ್ಕೆ ದುಡಿಯುವವರನ್ನು ಪಡೆಯಲು ಅನುಕೂಲವಾಗುವ ರೀತಿಯಲ್ಲಿ (ಒಪ್ಪಂದ, ಹೊರಗುತ್ತಿಗೆ, ತಾತ್ಕಾಲಿಕ ನೇಮಕಾತಿ ಇತ್ಯಾದಿ ಕ್ರಮಗಳ ಮೂಲಕ) ಶ್ರಮ ಮಾರುಕಟ್ಟೆಯನ್ನು ರೂಪಿಸಲಾಗಿದೆ. ಹೀಗೆ ಸಂಕುಚಿತ ಪ್ರಜಾಪ್ರಭುತ್ವ ಸಂಕುಚಿತ ಮಾರುಕಟ್ಟೆಯನ್ನು ಸೃಷ್ಟಿಸಿದೆ. ಸಂಕುಚಿತ ಪ್ರಜಾಪ್ರಭುತ್ವ ನಮ್ಮ ಸಮಾಜದ ಬಹುತೇಕ ಜನರ ಹಿತಾಸಕ್ತಿಗಳನ್ನು ಪ್ರತಿನಿಧಿಸುತ್ತಿಲ್ಲ. ಅಲ್ಪಸಂಖ್ಯೆಯಲ್ಲಿರುವ ಮೇಲ್ವರ್ಗದ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ಪ್ರಜಾಪ್ರಭುತ್ವ ತನ್ನ ಆಸಕ್ತಿಯನ್ನು ಪ್ರತಿನಿಧಿಸುವ ಮಾರುಕಟ್ಟೆಯನ್ನು ಕಟ್ಟಿಕೊಂಡಿದೆ. ಈ ವ್ಯವಸ್ಥೆಯಲ್ಲಿ ಅನಾನುಕೂಲಸ್ಥರು ಮಾರುಕಟ್ಟೆ ದರದಲ್ಲಿ ಖರೀದಿಸಿ ಅನುಭವಿಸಿದರೆ ಅನುಕೂಲಸ್ಥರು ಸರಕಾರದ ಕೃಪೆಯಲ್ಲಿ ಬದುಕುತ್ತಿದ್ದಾರೆ.

**ಡಾ॥ ಎಂ. ಚಂದ್ರ ಪೂಜಾರಿ**
ಪ್ರಾಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿ.ವಿ. ವಿದ್ಯಾರಣ್ಯ
ಬಳ್ಳಾರಿ - ೫೮೩ ೨೭೬

# ಲಿಂಗ ಸಮಾನತೆಯ ಪ್ರಶ್ನೆ ಮತ್ತು ವೈಯಕ್ತಿಕ ಕಾನೂನು

ಏಕರೂಪ ನಾಗರಿಕ ಸಂಹಿತೆಯ ಅನ್ವಯ ವೈಯಕ್ತಿಕ ಕಾನೂನುಗಳನ್ನು ತಿದ್ದುಪಡಿಗೊಳಿಸಬೇಕೆ ಎಂಬುದು ಇತ್ತೀಚೆಗೆ ಚಲಾವಣೆಯಲ್ಲಿರುವ ಹೊಸ ವಿವಾದ. ಏಕರೂಪ ನಾಗರಿಕ ಸಂಹಿತೆಯನ್ನು ರಾಜ್ಯ ನಿರ್ದೇಶಕ ತತ್ವಗಳಲ್ಲಿ ಸೇರಿಸಿದ ಸಂದರ್ಭದಿಂದಲೂ ಆಗಾಗ್ಗೆ ಇದು ಚರ್ಚೆಗೆ ಬರುತ್ತಲೇ ಇದೆ. ಇದರ ಮೂಲ ಉದ್ದೇಶ ರಾಷ್ಟ್ರೀಯ ಏಕತೆ ಮತ್ತು ಸಮಗ್ರತೆಯನ್ನು ಒತ್ತಿ ಹೇಳುವುದರ ಜೊತೆಜೊತೆಗೇ ವಿವಿಧ ಸಮುದಾಯಗಳ ಮಹಿಳೆಯರಿಗೆ ಲಿಂಗ ಸಮಾನತೆಯನ್ನು ಖಾತರಿಪಡಿಸುವುದಾಗಿದ್ದರೂ ಸಹ ಅನೇಕ ಬಾರಿ ಇದು ಬಹುಧರ್ಮೀಯರ ಆಚರಣೆಗಳನ್ನು ಹೇರುವ ಸಾಧನವಾಗಿದೆ ಎಂದು ವಿಮರ್ಶಿಸಲಾಗುತ್ತದೆ. ಸಂವಿಧಾನದ ಆಶಯಗಳಿಗೆ ವಿರೋಧಾಭಾಸವಿಲ್ಲದಂತೆ ಧಾರ್ಮಿಕ ವೈಯಕ್ತಿಕ ಕಾನೂನಿನ ವ್ಯಾಪ್ತಿಯೊಳಗೆ ಬದಲಾವಣೆಗಳನ್ನು ತರುವ ಅಧಿಕಾರ ಭಾರತದ ಸಂಸತ್ತಿಗಿದೆ. ಏಕರೂಪ ನಾಗರಿಕ ಸಂಹಿತೆಯ ಪರ ಮಾತನಾಡುತ್ತಿರುವವರು ವೈಯಕ್ತಿಕ ಕಾನೂನುಗಳನ್ನು ಆಮೂಲಾಗ್ರವಾಗಿ ಬದಲಿಸಬೇಕೆಂದು ಒತ್ತಾಯಿಸುತ್ತಿದ್ದಾರೆ.

ವಿವಾಹ, ವಿಚ್ಛೇದನ, ಉತ್ತರಾಧಿಕಾರ ಇತ್ಯಾದಿ ಕೆಲವೇ ಕೌಟುಂಬಿಕ ವಿಷಯಗಳನ್ನು ವೈಯಕ್ತಿಕ ಕಾನೂನಿನ ಪರಿಧಿಯೊಳಗೆ ತಂದು ಅದರ ವ್ಯಾಪ್ತಿಯನ್ನು ಮಿತಿಗೊಳಿಸಲಾಗಿದೆ. ಆದಾಗ್ಯೂ ಯಾವುದೇ ಸಮುದಾಯದಲ್ಲಿನ ವಂಚಿತ ಜನರು ಎದುರಿಸುವ ಎಲ್ಲಾ ಸಮಸ್ಯೆಗಳಿಗೆ 'ಹಿಮ್ಮುಖ' ವೈಯಕ್ತಿಕ ಕಾನೂನುಗಳನ್ನು ಹೊಣೆಮಾಡುವುದು ಸಾಮಾನ್ಯ ಪ್ರವೃತ್ತಿಯಾಗಿದೆ. ಆಚರಣೆಗಳಲ್ಲಿ ವ್ಯತ್ಯಾಸಗಳಿರುವುದು ಮಾತ್ರವಲ್ಲ, ಅವು ವೈರುಧ್ಯದಿಂದಲೂ ಕೂಡಿರುವ ಭಾರತದಂತಹ ವೈವಿಧ್ಯಮಯ ದೇಶ ಕಾನೂನಾತ್ಮಕ ಬಹುತ್ವದ ಆಶ್ರಯ ಪಡೆಯಬೇಕು. ಮಾನವ ಹಕ್ಕುಗಳ ಅಡಿಗಲ್ಲಾಗಿರುವ ಸಾಂಸ್ಕೃತಿಕ ಸಾಪೇಕ್ಷತೆಯನ್ನು ಅದು ಒಳಗೊಳ್ಳುವುದರಿಂದ ಕಾನೂನಿನ ವಿವಿಧ ಮೂಲಗಳ ಚಿಂತನೆಯನ್ನು ಈ ಬಹುತ್ವ ಉತ್ತೇಜಿಸುತ್ತದೆ. ಶೋಚನೀಯ ಸಂಗತಿಯೆಂದರೆ ಪದೇಪದೇ ಈ ಸಾಂಸ್ಕೃತಿಕ ಹಕ್ಕುಗಳನ್ನು ಬಲಿ ತೆಗೆದುಕೊಂಡು ಏಕರೂಪ ಕಾನೂನಿನ ಪರಿಕಲ್ಪನೆಯ ಕೂಗನ್ನು ಎತ್ತಲಾಗುತ್ತಿದೆ.

ಸಂವಿಧಾನ ರಚನಾ ಸಭೆಯಲ್ಲೂ ಒಡಕುಂಟುಮಾಡಿದ್ದ ದಶಕಗಳ ಈ ಚರ್ಚೆಯನ್ನು ಇತ್ತೀಚೆಗೆ ಘಟಿಸಿದ ಎರಡು ವಿವಾದಾತ್ಮಕ ವಿಚಾರಗಳು ಪುನಃ ಮುನ್ನೆಲೆಗೆ ತಂದಿವೆ. ಒಂದು, ಶಾಯಿರಾ ಬಾನುಳ ವಿಚ್ಛೇದನ ಪ್ರಕರಣ. ಎರಡನೆಯದು, ಒಂದೇ ಬಾರಿಗೆ ಪತಿ ತನ್ನ ಪತ್ನಿಗೆ ವಿಚ್ಛೇದನ ನೀಡಲು ಅನುಮತಿಸುವ ತ್ರಿವಳಿ ತಲಾಖ್ ಎಂಬ ಹಿಮ್ಮುಖಿ ಪದ್ಧತಿಯ ನಿರ್ಮೂಲನೆಯನ್ನು ಬೆಂಬಲಿಸಿ ಹೂಡಲಾಗಿರುವ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ. ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಕರಣ ಇನ್ನೂ ಚಾಲ್ತಿಯಲ್ಲಿರುವಾಗಲೇ ಕಾನೂನು ಸಚಿವಾಲಯವು ಏಕರೂಪ ನಾಗರಿಕ ಸಂಹಿತೆಯ ಕಾರ್ಯಸಾಧ್ಯತೆಯ ಕುರಿತು ಅಧ್ಯಯನ ನಡೆಸುವಂತೆ ಕಾನೂನು ಆಯೋಗಕ್ಕೆ ಸೂಚಿಸಿತು. ಲಿಂಗಾಧಾರಿತ ನ್ಯಾಯವನ್ನು ಖಾತರಿಗೊಳಿಸುವ ಪ್ರಮುಖ ಉದ್ದೇಶವನ್ನು ಪೂರೈಸುವಂತಹ ಕಾರ್ಯಸಾಧು ಪರಿಹಾರಕ್ಕಾಗಿ ಈ ಚರ್ಚೆಯ ಸೂಕ್ಷ್ಮತೆಯನ್ನು ಅರ್ಥೈಸಿಕೊಳ್ಳುವ ಅಗತ್ಯವಿದೆ.

ವೈಯಕ್ತಿಕ ಕಾನೂನುಗಳು ಪರಿಪೂರ್ಣವೂ ಅಲ್ಲ, ಧರ್ಮಾಡಂಭರದಿಂದ ಕೂಡಿದವೂ ಅಲ್ಲ. ಆಗ್ಗಿಂದಾಗ್ಗೆ ಅವುಗಳು ಸುಧಾರಣೆಗಳಿಗೆ ಒಳಪಟ್ಟಿವೆ. ಮುಸ್ಲಿಮ್

ಮೂಲ : **ಪರ್ವೀನ್ ಸುಲ್ತಾನಾ**
ಕನ್ನಡಕ್ಕೆ : **ಜ್ಯೋತಿ ಎ.**



೨೦೦೨ರ ಶಮೀಮ್ ಆರಾ ಪ್ರಕರಣದಲ್ಲಿ ಪತಿಯು ಏಕಪಕ್ಷೀಯವಾಗಿ ತಲಾಖ್ ಹೇಳುವ ಹಕ್ಕು ಪಡೆದಿಲ್ಲವೆಂದು ನ್ಯಾಯಾಲಯ ಉಚ್ಚರಿಸಿದೆ. ವಿವಾಹವು ಇಬ್ಬರು ವ್ಯಕ್ತಿಗಳ ನಡುವಿನ ಒಪ್ಪಂದವಾದರೆ ಆ ಇಬ್ಬರಿಗೂ ಒಪ್ಪಂದವನ್ನು ಕೊನೆಗೊಳಿಸುವ ಸಮಾನ ಹಕ್ಕಿರಬೇಕು. ವಿವಿಧ ಧರ್ಮಗಳ ವೈಯಕ್ತಿಕ ಕಾನೂನುಗಳಿಗೆ ತರಲಾಗಿರುವ ಹೊಸ ತಿದ್ದುಪಡಿಗಳು ಮಹಿಳೆಯರ ಸ್ಥಿತಿಗತಿಯನ್ನು ಉತ್ತಮಪಡಿಸಲು ಪ್ರಯತ್ನಿಸಿವೆ. ಉದಾಹರಣೆಗೆ, ಮಹಿಳೆಯರನ್ನು ಕೌಟುಂಬಿಕ ದೌರ್ಜನ್ಯದಿಂದ ರಕ್ಷಿಸುವ ೨೦೦೫ರ ಕಾಯಿದೆಯು ಯಾವುದೇ ಧರ್ಮವನ್ನು ಅನುಸರಿಸುವ ಮಹಿಳೆಗೂ ತನ್ನ ಕುಟುಂಬದೊಳಗಿನ ಕಿರುಕುಳದಿಂದ ರಕ್ಷಣೆ ನೀಡಲು ಯತ್ನಿಸುತ್ತದೆ. ವಿಶೇಷ ವಿವಾಹ ಕಾಯಿದೆಯಡಿ ಮದುವೆಯಾಗುವುದು ಹಲವರ ಆಯ್ಕೆಯಾಗುತ್ತಿದೆ. ಬಹುಪತ್ನಿತ್ವವನ್ನು ಎದುರಿಸಲು ೧೯೮೬ರ ಮುಸ್ಲಿಮ್ ಮಹಿಳೆಯರ (ವಿಚ್ಛೇದನ ಹಕ್ಕುಗಳ ಸಂರಕ್ಷಣೆ) ಕಾಯಿದೆಯನ್ನು ಬಳಸಿಕೊಳ್ಳಲಾಗುತ್ತಿದೆ.

ವೈಯಕ್ತಿಕ ಕಾನೂನಿನ ಮೂಲ ಮುಸ್ಲಿಮ್ ವೈಯಕ್ತಿಕ ಕಾನೂನು (ಷರಿಯಾ) ಅನ್ವಯ ಕಾಯಿದೆ, ೧೯೩೭. ಬದಲಾಗುತ್ತಿರುವ ಕಾಲಕ್ಕೆ ಸ್ಪಂದಿಸಲು ಸುಧಾರಣೆಗಳಿಗಾಗಿ ಹಾತೊರೆಯುತ್ತಿದ್ದ ವಸಾಹತುಶಾಹಿಯ ತಪ್ಪೊಣಿಕೆಯ ಪರಿಣಾಮವೇ ಈ ಕಾಯಿದೆ. ಆದಾಗ್ಯೂ ಷರಿಯಾ ಕಾನೂನುಗಳ ಹೆಸರಿನಲ್ಲಿ ತ್ರಿವಳಿ ತಲಾಖ್, ಹಲಾಲಾ ಮತ್ತು ಬಹುಪತ್ನಿತ್ವದಂತಹ ಪ್ರಾಚೀನ ಪದ್ಧತಿಗಳು ಇಂದಿಗೂ ಕೂಡ ನ್ಯಾಯಯುತವೆಂದು ಪರಿಗಣಿಸಲ್ಪಟ್ಟಿವೆ. ಒಂದೇ ಬಾರಿಗೆ ತ್ರಿವಳಿ ತಲಾಖ್ ನೀಡಲು ಸಾಧ್ಯವಿಲ್ಲವೆಂದು ಮತ್ತು ಸಂಧಾನ ಹಾಗೂ ರಾಜಿಗಳಂತಹ ಕ್ರಮಗಳನ್ನು ಕೈಗೊಂಡ ನಂತರವಷ್ಟೇ ವಿವಾಹವನ್ನು ಅಂತಿಮವಾಗಿ ಕೊನೆಗೊಳಿಸಬಹುದೆಂದು ಕುರಾನ್ ಸ್ಪಷ್ಟವಾಗಿ ಹೇಳುತ್ತದೆ. ಬಹುತೇಕ ಇಸ್ಲಾಮಿಕ್ ದೇಶಗಳಲ್ಲಿ ತ್ರಿವಳಿ ತಲಾಖ್‌ನ ನಿಯಮಗಳನ್ನು ನಿಯಂತ್ರಿಸಲಾಗಿದೆ. ಆದರೆ ಅತಿ ಹೆಚ್ಚು ಮುಸ್ಲಿಮ್ ಜನಸಂಖ್ಯೆ ಹೊಂದಿರುವ ರಾಷ್ಟ್ರಗಳಲ್ಲಿ ಮೂರನೇ ಸ್ಥಾನ ಪಡೆದಿರುವ ಭಾರತ ಇನ್ನೂ ಇದರ ಆಚರಣೆಗೆ ಅನುಮತಿ ಮುಂದುವರಿಸಿದೆ. ಯಾವ ಮಟ್ಟಕ್ಕೆಂದರೆ ಪುರುಷರು ತಲಾಖ್ ಎಂದು ಮೂರು ಬಾರಿ ಉಚ್ಚರಿಸುತ್ತ ಮೊಬೈಲ್ ಅಥವಾ ಇ-ಮೇಲ್ ಸಂದೇಶ ಕಳುಹಿಸಿ ಏಕಪಕ್ಷೀಯವಾಗಿ ವಿವಾಹಗಳನ್ನು ಅಂತ್ಯಗೊಳಿಸುತ್ತಿದ್ದಾರೆ. ಭಾರತೀಯ ಮುಸ್ಲಿಮ್ ಮಹಿಳಾ ಆಂದೋಲನ (ಬಿಎಂಎಂಎ) ನಡೆಸಿರುವ ರಾಷ್ಟ್ರಮಟ್ಟದ ಅಧ್ಯಯನದ ಪ್ರಕಾರ ಸುಮಾರು ೧೧ ಮಂದಿ ಭಾರತೀಯ ಮುಸ್ಲಿಮ್ ಮಹಿಳೆಯರಲ್ಲಿ ಒಬ್ಬಳು ತ್ರಿವಳಿ ತಲಾಖ್‌ನ ಸಂತ್ರಸ್ತೆಯಾಗಿದ್ದಾಳೆ.

ಬಹುತೇಕ ವೈಯಕ್ತಿಕ ಕಾನೂನುಗಳು ಪುರುಷಪ್ರಧಾನ ವ್ಯವಸ್ಥೆಯ ಉತ್ಪನ್ನಗಳಾಗಿರುವುದರಿಂದ ಸಹಜವಾಗಿಯೇ ಮಹಿಳೆಯರ ವಿರುದ್ಧ ಪಕ್ಷಪಾತಿಯಾಗಿರುತ್ತವೆ. ಆಸ್ತಿಯನ್ನು ವಂಶಪಾರಂಪರ್ಯವಾಗಿ ಪಡೆಯುವ ವೈಯಕ್ತಿಕ ಹಕ್ಕನ್ನು, ಮಹಿಳೆಯರನ್ನೂ ಒಳಗೊಂಡಂತೆ, ಎಲ್ಲಾ ಮುಸ್ಲಿಮರಿಗೂ ೧೯೩೦ರ ದಶಕದಲ್ಲೇ ಮುಸ್ಲಿಮ್ ವೈಯಕ್ತಿಕ ಕಾನೂನುಗಳು ನೀಡಿದ್ದವು. ಆದರೂ ಹಲಾಲಾ ಮತ್ತು ತ್ರಿವಳಿ ತಲಾಖ್‌ನಂತಹ ಆಚರಣೆಗಳು ಮುಂದುವರಿಯಲು ಅವು ಅನುಮತಿ ನೀಡಿದವು. ೧೯೫೫–೧೯೫೬ರ ಹಿಂದೂ ಸಂಹಿತೆ ಹಿಂದೂ ಮಹಿಳೆಯರನ್ನು ಹಿಂದೂ ಪುರುಷರ ಜೊತೆ ನಿಲ್ಲಿಸಲಿಲ್ಲ. ಕೃಷಿಭೂಮಿಯೂ ಸೇರಿದಂತೆ ಹಿಂದೂ ಅವಿಭಕ್ತ ಕುಟುಂಬದ ಸಮಸ್ತ ಆಸ್ತಿಯಲ್ಲಿ ಹೆಣ್ಣುಮಕ್ಕಳು ಪಾಲು ಕೇಳಲು ಸಾಧ್ಯವಾದದ್ದು ಹಿಂದೂ ಉತ್ತರಾಧಿಕಾರ ಕಾಯಿದೆಯ, ೨೦೦೫ರ ತಿದ್ದುಪಡಿಯ ನಂತರವೇ. ಆದರೆ ನ್ಯಾಯಸಮ್ಮತವಲ್ಲದ ವೈಯಕ್ತಿಕ ಅಥವಾ ಸಾಂಪ್ರದಾಯಿಕ ಶಾಸನಗಳ ವಿರುದ್ಧ ಹೆಚ್ಚು ಹೆಚ್ಚು ಮಹಿಳೆಯರು ನ್ಯಾಯಾಲಯಗಳ ಮೊರೆ ಹೋಗುತ್ತಿದ್ದು, ನ್ಯಾಯಾಲಯಗಳೂ ಸಹ ಬಹಳಷ್ಟು ಪ್ರಕರಣಗಳಲ್ಲಿ ಸಕಾರಾತ್ಮಕವಾಗಿ ಮಧ್ಯ ಪ್ರವೇಶಿಸಿವೆ.

೨೦೦೨ರ ಶಮೀಮ್ ಆರಾ ಪ್ರಕರಣದಲ್ಲಿ ಪತಿಯು ಏಕಪಕ್ಷೀಯವಾಗಿ ತಲಾಖ್ ಹೇಳುವ ಹಕ್ಕು ಪಡೆದಿಲ್ಲವೆಂದು ನ್ಯಾಯಾಲಯ ಉಚ್ಚರಿಸಿದೆ. ವಿವಾಹವು ಇಬ್ಬರು ವ್ಯಕ್ತಿಗಳ ನಡುವಿನ ಒಪ್ಪಂದವಾದರೆ ಆ ಇಬ್ಬರಿಗೂ ಒಪ್ಪಂದವನ್ನು ಕೊನೆಗೊಳಿಸುವ ಸಮಾನ ಹಕ್ಕಿರಬೇಕು. ವಿವಿಧ ಧರ್ಮಗಳ ವೈಯಕ್ತಿಕ ಕಾನೂನುಗಳಿಗೆ ತರಲಾಗಿರುವ ಹೊಸ ತಿದ್ದುಪಡಿಗಳು ಮಹಿಳೆಯರ ಸ್ಥಿತಿಗತಿಯನ್ನು ಉತ್ತಮಪಡಿಸಲು ಪ್ರಯತ್ನಿಸಿವೆ. ಉದಾಹರಣೆಗೆ, ಮಹಿಳೆಯರನ್ನು ಕೌಟುಂಬಿಕ

## ವಾಸ್ತವ

ಹಸಿದ ಮುಗ್ಧ ಮಗುವಿಗೆ
ಬೇಡುವಾಗ ಸಿಗದು ಒಂದು ರೊಟ್ಟಿ
ಆ ಭಾವ ಸೆರೆ ಹಿಡಿದವನಿಗೆ
ಮೊದಲ ಬಹುಮಾನ ಒಂದು ಕೋಟಿ

**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೯೪

ದೌರ್ಜನ್ಯದಿಂದ ರಕ್ಷಿಸುವ ೨೦೦೫ರ ಕಾಯಿದೆಯು ಯಾವುದೇ ಧರ್ಮವನ್ನು ಅನುಸರಿಸುವ ಮಹಿಳೆಗೂ ತನ್ನ ಕುಟುಂಬದೊಳಗಿನ ಕಿರುಕುಳದಿಂದ ರಕ್ಷಣೆ ನೀಡಲು ಯತ್ನಿಸುತ್ತದೆ. ವಿಶೇಷ ವಿವಾಹ ಕಾಯಿದೆಯಡಿ ಮದುವೆಯಾಗುವುದು ಹಲವರ ಆಯ್ಕೆಯಾಗುತ್ತಿದೆ. ಬಹುಪತ್ನಿತ್ವವನ್ನು ಎದುರಿಸಲು ೧೯೩೯ರ ಮುಸ್ಲಿಮ್ ಮಹಿಳೆಯರ (ವಿಚ್ಛೇದನ ಹಕ್ಕುಗಳ ಸಂರಕ್ಷಣೆ) ಕಾಯಿದೆಯನ್ನು ಬಳಸಿಕೊಳ್ಳಲಾಗುತ್ತಿದೆ.

ನ್ಯಾಯಸಮ್ಮತವಲ್ಲದ ವೈಯಕ್ತಿಕ ಕಾನೂನುಗಳ ವಿರುದ್ಧ ವಿವಿಧ ಸಮುದಾಯಗಳಿಗೆ ಸೇರಿದ ಮಹಿಳೆಯರು ಕ್ರಮೇಣವಾಗಿ ಹೆಚ್ಚೆಚ್ಚು ಧ್ವನಿ ಯೆತ್ತುತ್ತಿದ್ದಾರೆ. ಅನ್ಯಧರ್ಮೀಯರನ್ನು ವಿವಾಹವಾದ ಪಾರ್ಸಿ ಮಹಿಳೆಯರಿಗೆ ತಮ್ಮ ದೇವಾಲಯ ದೊಳಗೆ ಪ್ರವೇಶ ನಿರಾಕರಿಸುವ ಕಾನೂನನ್ನು ಅವರು ಪ್ರಶ್ನಿಸಿದ್ದಾರೆ. ಕ್ರೈಸ್ತರಲ್ಲಿ ವಿಚ್ಛೇದನ ಪಡೆಯಲು ಮಹಿಳೆಯರಿಗೆ ಮತ್ತು ಪುರುಷರಿಗೆ ಪ್ರತ್ಯೇಕ ನಿಯಮಗಳಿವೆ. ಅರಣ್ಯ ಭೂಮಿಯನ್ನು ಸಾಗುವಳಿ ಮಾಡುವ ಮತ್ತು ಪರಂಪರಾಗತ ಆಸ್ತಿಯ ಉತ್ತರಾಧಿಕಾರವನ್ನು ಪಡೆಯುವ ಹಕ್ಕುಗಳನ್ನು ಮಹಿಳೆಯರಿಗೆ ನಿರಾಕರಿಸುವ ಸಾಂಪ್ರದಾಯಿಕ ಕಾನೂನುಗಳನ್ನು ಬುಡಕಟ್ಟು ಮಹಿಳೆಯರು ಪ್ರಶ್ನಿಸಿದ್ದಾರೆ. ಮಹಿಳೆಯರು ತಮ್ಮ ಹಕ್ಕುಗಳನ್ನು ಪ್ರತಿಪಾದಿಸುತ್ತಿರುವ ಈ ಸಂದರ್ಭದಲ್ಲಿ ವೈಯಕ್ತಿಕ ಕಾನೂನುಗಳ ವಿಷಯದಲ್ಲಿ ಖಂಡಿತವಾಗಿಯೂ ಬದಲಾವಣೆಯ ಬಿರುಗಾಳಿ ಬೀಸಿದೆ. ಮುಟ್ಟಿನ ವಿಚಾರದಲ್ಲಿರುವ ನಿಷೇಧಾತ್ಮಕ ಮನೋಭಾವ ಅಥವಾ ವಿವಿಧ ದೇವಾಲಯ ಗಳಿಗೆ ಮಹಿಳೆಯರ ಪ್ರವೇಶದ ಹಕ್ಕನ್ನು ನಿರಾಕರಿಸಿರುವುದರ ವಿರುದ್ಧ ನಡೆದ ಚಳವಳಿಗಳಲ್ಲಿ ಈ ಬದಲಾವಣೆ ಪ್ರತಿಬಿಂಬಿತವಾಗಿದೆ.

ಸುಧಾರಣೆಗಳಿಗಾಗಿ ಸಮುದಾಯ ಗಳೊಳಗಿನಿಂದ ಒತ್ತಾಯ ಆರಂಭಿಸುವ ಇಂತಹ ಸಕಾರಾತ್ಮಕ ಬೆಳವಣಿಗೆಯನ್ನು ಗೌರವಿಸುವುದು ಮತ್ತು ಈ ಧ್ವನಿಗಳಿಗೆ ಶಕ್ತಿ ತುಂಬುವುದರ ಬದಲಿಗೆ ವೈಯಕ್ತಿಕ ಕಾನೂನುಗಳ ಜಾಗವನ್ನು ಇನ್ನೂ ಕರಡು ಪ್ರತಿಯೇ ಅಸ್ತಿತ್ವದಲ್ಲಿರದ ಏಕರೂಪ ಕಾನೂನು ಆಕ್ರಮಿಸಿಕೊಳ್ಳಲಿದೆ ಎಂಬ ಮಾತುಗಳು ಈ ಚರ್ಚೆಗೆ ಬೇರೆಯದೇ ಆದ ಬಣ್ಣ ನೀಡುತ್ತವೆ. ಅಂತಿಮವಾಗಿ ಏಕರೂಪ ನಾಗರಿಕ ಸಂಹಿತೆಯನ್ನು ಅಪೇಕ್ಷಣೀಯವಾಗಿಸಿ, ಇದನ್ನು ಧಾರ್ಮಿಕ ಅಲ್ಪಸಂಖ್ಯಾತರ ಮೇಲೆ ನ್ಯಾಯಸಮ್ಮತವಲ್ಲದ ಕಾನೂನುಗಳ ಹೇರಿಕೆಗಾಗಿ ಬಹುಸಂಖ್ಯಾತರು ಹೂಡಿರುವ ಸಂಚೆಂದು ಬಿಂಬಿಸಲಾಗುತ್ತದೆ. ಮುಸ್ಲಿಮರ ಸ್ವಯಂ-ಘೋಷಿತ ಪ್ರತಿನಿಧಿ ಎನಿಸಿಕೊಂಡಿರುವ ಅಖಿಲ ಭಾರತ ಮುಸ್ಲಿಮ್ ವೈಯಕ್ತಿಕ ಕಾನೂನು ಮಂಡಳಿಯು ಏಕರೂಪ ನಾಗರಿಕ ಸಂಹಿತೆಯನ್ನು ಸುಲಭವಾಗಿ ಬಳಸಿಕೊಂಡು ಜನರನ್ನು ಪ್ರಚೋದಿಸುತ್ತದೆ. ಅಲ್ಲದೆ, ಇಸ್ಲಾಮ್ ಧರ್ಮಕ್ಕೆ ಕಲ್ಪಿತ ಆಪತ್ತನ್ನು ತೋರಿಸುತ್ತಲೇ ಏಕರೂಪ ನಾಗರಿಕ ಸಂಹಿತೆಯ ಕುರಿತ ಯಾವುದೇ ತೀರ್ಮಾನವನ್ನೂ ಬಹಿಷ್ಕರಿಸಲು ಕರೆ ನೀಡುತ್ತದೆ. ಇದರಿಂದಾಗಿ ಅಖಿಲ ಭಾರತ ಮುಸ್ಲಿಮ್ ವೈಯಕ್ತಿಕ ಕಾನೂನು ಮಂಡಳಿ ಯಂತಹ ಸಂಸ್ಥೆಗಳ ಕೈಗಳಿಂದ ಅಧಿಕಾರ ಕಸಿದುಕೊಳ್ಳುವ ವೈಯಕ್ತಿಕ ಕಾನೂನುಗಳಲ್ಲಿನ ಸುಧಾರಣೆಗಳ ಬಗ್ಗೆ ಯಾವುದೇ ಚರ್ಚೆ ನಡೆಯದಂತೆ ನಿರ್ಬಂಧವಾಗುತ್ತದೆ. ನಿಜ ಹೇಳಬೇಕೆಂದರೆ ಏಕರೂಪ ನಾಗರಿಕ ಸಂಹಿತೆಯ ಕಾರ್ಯಸಾಧ್ಯತೆಯ ಬಗ್ಗೆ ಕಾನೂನು ಆಯೋಗ ಮುಂದಿಟ್ಟಿರುವ ಪ್ರಶ್ನಾವಳಿಗೆ ಸೂಫಿ ಮುಸ್ಲಿಮರ ಸರ್ವೋನ್ನತ ಸಂಸ್ಥೆಯಾದ ಆಲ್ ಇಂಡಿಯಾ ಉಲಾಮಾ ಮತ್ತು ಮಷಾಯಿಕ್ ಮಂಡಳಿ ಮಾತ್ರವೇ ಸಕಾರಾತ್ಮಕವಾಗಿ ಸ್ಪಂದಿಸಿರುವುದು.

ಅಖಿಲ ಭಾರತ ಮುಸ್ಲಿಮ್ ವೈಯಕ್ತಿಕ ಕಾನೂನು ಮಂಡಳಿಯ ನಡೆಯು ತನ್ನ ಚಕ್ರಾಧಿಪತ್ಯವನ್ನು ಉಳಿಸಿಕೊಳ್ಳಲು ಹೂಡಿರುವ ಸಂಚೆಂಬಂತೆ ಕಾಣುತ್ತದೆ. ಪುರುಷಪ್ರಧಾನ ವ್ಯವಸ್ಥೆಯಲ್ಲಿ ಅಂತರ್ಗತವಾಗಿರುವ ತ್ರಿವಳಿ ತಲಾಖ್, ಹಲಾಲಾ ಮತ್ತು ಬಹುಪತ್ನಿತ್ವ ಪದ್ಧತಿಗಳನ್ನು ನಿರ್ಮೂಲನೆಗೊಳಿಸಬೇಕೆಂಬ ಆಶಯಗಳನ್ನು ಗೌರವಿಸುವುದರ ಬದಲು ಅವನ್ನು ವೈಯಕ್ತಿಕ ಕಾನೂನುಗಳಲ್ಲಿ ಯಾರೂ ಹಸ್ತಕ್ಷೇಪ ಮಾಡಲಾರದ ಪವಿತ್ರ ಹಸುವನ್ನಾಗಿ ಮಾಡಲಾಗುತ್ತಿದೆ. ಏಕರೂಪ ನಾಗರಿಕ ಸಂಹಿತೆಯ ಕುರಿತ ಯಾವುದೇ ಚರ್ಚೆಯೂ ಮಹಿಳೆಯರ ವಿರುದ್ಧ ತಾರತಮ್ಯ ಎಸಗುವಂತಹ ವೈಯಕ್ತಿಕ ಕಾನೂನುಗಳ ಬಗ್ಗೆ ಕೇಂದ್ರೀಕರಿಸಬೇಕೆಂದು ಹಾಗೂ ಅಖಿಲ ಭಾರತ ಮುಸ್ಲಿಮ್ ವೈಯಕ್ತಿಕ ಕಾನೂನು ಮಂಡಳಿ ಮತ್ತು ಸರ್ಕಾರ ತಳೆದಿರುವ ತೀವ್ರವಾದಿ ನಿಲುವುಗಳಿಂದ ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು ಸಾಧ್ಯವಾಗದೆಂದು ನ್ಯಾಯವಾದಿ ಫ್ಲೇವಿಯ ಏಗ್ನೆಸ್ ಫರ್ಸ್ಟ್ ಪೋಸ್ಟ್ ಸುದ್ದಿಸಂಸ್ಥೆಗೆ ನೀಡಿರುವ ಸಂದರ್ಶನದಲ್ಲಿ ತಿಳಿಸಿದ್ದಾರೆ. ಲಿಂಗಾಧಾರಿತ ಅನ್ಯಾಯವನ್ನು ಕೊನೆಗಾಣಿಸುವ ನಿಟ್ಟಿನಲ್ಲಿ ಮೊದಲ ಹೆಜ್ಜೆಯಾಗಿ ವೈಯಕ್ತಿಕ ಕಾನೂನುಗಳೊಳಗೆ ಸುಧಾರಣೆ ಗಳಿಗಾಗಿ ಆಗ್ರಹಿಸುತ್ತಿರುವ ಮಧ್ಯಮ ಧ್ವನಿಗಳಿಗೆ ಅವಕಾಶ ಮಾಡಿಕೊಡುವ ಅಗತ್ಯವಿದೆ.

ಏಕರೂಪತೆ ಎಂದರೆ ಸಮಾನತೆ ಎಂದರ್ಥ ವೇನಲ್ಲ ಮತ್ತು ಕಾನೂನಿನ ಸಾರ್ವತ್ರಿಕತೆಯೇ ಅಂತಿಮವೂ ಅಲ್ಲ. ಸಾಂಸ್ಕೃತಿಕ ವೈವಿಧ್ಯತೆಯನ್ನು ಬದಿಗೊತ್ತಲು ಯತ್ನಿಸಿ ಅನಗತ್ಯ ಹೇರಿಕೆಯಾಗಿ ಪರಿಣಮಿಸುವ ಏಕರೂಪ ಸಂಹಿತೆಗಿಂತ ನ್ಯಾಯಯುತ ಸಂಹಿತೆ ಇಂದಿನ ಜರೂರಿಯಾಗಿದೆ. ಅಲ್ಪಸಂಖ್ಯಾತ ಸಮುದಾಯಗಳ ಮಹಿಳೆಯರಿಗೆ ಸಮಾನ ಹಕ್ಕುಗಳು ಬೇಕಿಲ್ಲವೆಂದಲ್ಲ, ಆದರೆ ಅವರು ಇನ್ನೂ ಸರಿಸಮಾನವಾಗಿ ನಿಂತಿಲ್ಲದೆ ಅಭದ್ರತೆಯಿಂದ ನರಳುತ್ತಿರುವ ಕಾರಣ ಏಕರೂಪ ನಾಗರಿಕ ಸಂಹಿತೆ ಎಲ್ಲರ ಹೆಗ್ಗಳಿಕೆಗೂ ಪಾತ್ರವಾಗಿಲ್ಲ. ಏಕರೂಪ ಸಂಹಿತೆಯ ಅನುಪಸ್ಥಿತಿಯಲ್ಲಿ ಸಮಾನ ನ್ಯಾಯಯುತ ಕಾನೂನು ರಚನೆಯಾಗಬೇಕಿದೆ. ಈ ಹಾದಿಯಲ್ಲಿ ಮುನ್ನಡೆಯಲು ಅತ್ಯಗತ್ಯವಾದ ಸ್ಪಷ್ಟತೆ ಮತ್ತು ಸ್ಥಿರತೆ ಒದಗಿಸುವ ವೈಯಕ್ತಿಕ ಕಾನೂನುಗಳ ಸಂಹಿತೆ ರಚನೆಯಾಗಬೇಕೇ ಹೊರತು ವಿಲಕ್ಷಣ ವ್ಯಾಖ್ಯಾನಗಳಿಗೆ ಅವಕಾಶ ನೀಡುವುದಲ್ಲ. ಭಾರತೀಯ ಮುಸ್ಲಿಮ್ ಮಹಿಳಾ ಆಂದೋಲನವು ಮುಸ್ಲಿಮ್ ವೈಯಕ್ತಿಕ ಕಾನೂನಿನ ಕರಡು ಸಂಹಿತೆಯನ್ನು ರಚಿಸಿದೆ. ಅಲ್ಪಸಂಖ್ಯಾತರ ಹಕ್ಕುಗಳನ್ನು ಮಹಿಳಾ ಹಕ್ಕುಗಳ ವಿರುದ್ಧ ಎತ್ತಿಕಟ್ಟುತ್ತ ಏಕರೂಪ ನಾಗರಿಕ ಸಂಹಿತೆಯ ಚರ್ಚೆಯನ್ನು ನಡೆಸಬಾರದು. ಅರ್ಥಗರ್ಭಿತವಾಗಿ ಕಾನೂನಾತ್ಮಕ ಮಧ್ಯಪ್ರವೇಶ ಮಾಡುವುದರಿಂದ ಮತ್ತು ವೈಯಕ್ತಿಕ ಕಾನೂನುಗಳಲ್ಲಿ ಸುಧಾರಣೆ ತರುವುದರಿಂದ ಸಮಂಜಸವಾದ ಸಮಾನ ಹಕ್ಕುಗಳನ್ನು ಖಾತರಿ ಗೊಳಿಸಬಹುದು. ಈ ದೇಶದ ಹಿರಿಮೆಯನ್ನು ವ್ಯಾಖ್ಯಾನಿಸುವ ಧರ್ಮನಿರಪೇಕ್ಷ ಮೌಲ್ಯಗಳು, ಧಾರ್ಮಿಕ ಬಹುಸಂಸ್ಕೃತಿ ಮತ್ತು ಸಾಂಸ್ಕೃತಿಕ ವೈವಿಧ್ಯತೆ ರಾಜಿಯಾಗದಂತೆ ಖಚಿತಪಡಿಸಿ ಕೊಳ್ಳಲು ಇದು ಅತ್ಯವಶ್ಯ.

*(ಲೇಖಕಿಯು ಅಸ್ಸಾಮ್‌ನ ಪ್ರಮತೇಶ್ ಬರುವಾ ಕಾಲೇಜಿನಲ್ಲಿ ಸಹ-ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.)*

---


ಮೂಲ : **ಪರ್ವೀನ್ ಸುಲ್ತಾನಾ**

ಸಹ-ಪ್ರಾಧ್ಯಾಪಕಿ, ಪ್ರಮತೇಶ್ ಬರುವಾ ಕಾಲೇಜು

ಅಸ್ಸಾಮ್

ಕನ್ನಡಕ್ಕೆ : **ಜ್ಯೋತಿ ಎ.**

ಎಸ್-೩, ನಂ.೩೭, ೧೬ನೇ ಮುಖ್ಯರಸ್ತೆ

ಎಂ.ಸಿ. ಬಡಾವಣೆ, ವಿಜಯನಗರ

ಬೆಂಗಳೂರು – ೫೬೦ ೦೪೦


---

# ಸುಗ್ಗಿ

ನಿನ್ನೆದೆಯ ಸಂತಾಪದ ಕಳೆ
ಪರಿಶ್ರಮದ ಕಳೆದು
ಕೊಳೆಯ
ಹೊಚ್ಚ ಹೊಸ ಫಸಲು
ಬೆಳೆದು ಕೋ
ಮನದೊಲದಿ
ಒಲವಲಿ
ಸುಗ್ಗಿ

**ಶಿವಪ್ರಸಾದ್**
ಮಲ್ಲರಬಾಣವಾಡಿ

# ಆಸರೆ




'ಎಂಥದೇ ಅಪಮಾನವಾದರೂ ಸಹಿಸಿಕೊಳ್ಳಬೇಕು. ಇದು ಹಸಿವಿನ ಪ್ರಶ್ನೆ. ಮಹಾರಾಜ ತೀರ ಒಂದು ಊಟಕ್ಕೆ ಎರಡು ಮಾತನಾಡಲಿಕ್ಕಿಲ್ಲ. ಯಾಕೆಂದರೆ ನಾನು ಥೇಟ್ ಅವರ ಹಾಗೇ ಕಾಣುತ್ತೇನೆ. ಹಾಗಂತ ಜನ ಮಾತನಾಡಿಕೊಳ್ಳುತ್ತಾರೆ. ನಾನಂತೂ ಮಹಾರಾಜರನ್ನು ನೋಡಿಲ್ಲ. ಇವತ್ತು ನೋಡಬೇಕು. ನನಗೆ ಒಂದು ಕೆಲಸ ಕೊಡದಿದ್ದರೂ ಸರಿ, ಈ ಒಂದು ಹೊತ್ತಿನ ಊಟವನ್ನಾದರೂ ಕೊಡಬಹುದು. ಇಷ್ಟಕ್ಕೂ ಮಹಾರಾಜರು ಕರುಣಾಮಯಿ ಎಂದು ಕೇಳಿದ್ದೇನೆ.'

ಹಸಿದ ಹೊಟ್ಟೆ, ಸುತ್ತುವ ತಲೆ, ಎಳೆವ ಕಾಲು, ಹೊತ್ತು ಚಲಿಸುತ್ತಿದ್ದ ಅವನ ಮನಸ್ಸು ಗೊಂದಲದ ಗೂಡಾಗಿತ್ತು. ತೀರ ತನ್ನ ಬದುಕು ಇಷ್ಟು ಬರ್ಬರವಾಗಬಾರದಿತ್ತು ಎಂಬ ಚಿಂತೆ ಆವರಿಸಿತ್ತು. ಇವತ್ತಂತೂ ಅವನು ನಡುಗಿಹೋಗಿದ್ದ. ತೀರ ಒಂದು ಹೊತ್ತಿನ ಊಟವೂ ಸಿಗದೆ ತಾನೆಲ್ಲಿ ಸತ್ತೇಹೋಗುವೆನೋ ಎಂದು ಭಯಪಟ್ಟಿದ್ದ. ದೇವಸ್ಥಾನ, ಊರ ಮನೆ, ಧರ್ಮಛತ್ರ ಎಲ್ಲ ಕಡೆಗಳಲ್ಲೂ ನಿರಾಕರಿಸಿಕೊಂಡಾಗಿತ್ತು.

ಅವನು ದುಡಿಯಲು ಸಿದ್ಧನಿದ್ದ. ಆದರೆ ದುಡಿಯಲು ಇಟ್ಟುಕೊಳ್ಳುವರು ಬೇಕಲ್ಲ. ಅವನ ಎತ್ತರದ ಭಯಾನಕ ಮೈಕಟ್ಟು, ಅಷ್ಟೇ ಗಂಭೀರ ಮುಖ ದಿಟ್ಟಿಸಿ ನೋಡುವ ಗಂಡಸರಿಗೆ ಇವನ ಬಗ್ಗೆ ದ್ವೇಷ ಮೂಡುತ್ತಿತ್ತು. ಕ್ಷಣದಲ್ಲೇ ಓಡಿಸಿಬಿಡುತ್ತಿದ್ದರು.

ಬದುಕುವ ಕೊನೆಯ ಅಸ್ತ್ರವಾಗಿ ಅವನು ಈ ದಾರಿಗೆ ಬಂದಿದ್ದ. ತೀರ ಈ ಭೂಮಿಯ ಮೇಲೆ ತನಗೆ ಬದುಕುವ ಹಕ್ಕೂ ಇಲ್ಲವೇ ? ಹೀಗೆ ಚಿಂತಾಕ್ರಾಂತನಾದಾಗ ಯಾರೋ ಹೇಳಿದ ನೆನಪು. ತನ್ನದು ಥೇಟ್ ಮಹಾರಾಜರ ರೂಪವಂತೆ. ಅರಮನೆ ಸಮೀಪಿಸುತ್ತಿದ್ದಂತೆ ಅವನ ಎದೆ ಹೊಡೆದುಕೊಳ್ಳತೊಡಗಿತ್ತು. "ಮಹಾರಾಜರು ತನ್ನದೇ ರೂಪವನ್ನು ನನ್ನಲ್ಲಿ ನೋಡಿ, ನೀನು ನನ್ನ ತಂದೆಯ ಸೂಳೆಯ ಮಗನಿರಬೇಕು" ಎಂದರೆ ? ಅವನ ಎದೆಯ ಯಾವುದೋ ಭಾಗ ಚುಳ್ ಎಂದಂತಾಯಿತು. ಮತ್ತೆ ತೀರ್ಮಾನ ಮಾಡಿದ. ಎಂಥದೇ ಅವಮಾನವಾದರೂ ಸಹಿಸಿಕೊಳ್ಳಬೇಕು. ಯಾಕೆಂದರೆ ಊಟ ಮಾಡಿದ ದಿನವೇ ನೆನಪಾಗುತ್ತಿಲ್ಲ. ಮಹಾರಾಜರು ತೀರ ನನ್ನ ಹಾಗೇ ಇರಲಿಕ್ಕಿಲ್ಲ. ಕೆಲ ಹೋಲಿಕೆಗಳಿರಬೇಕಷ್ಟೆ. ಇಷ್ಟಕ್ಕೂ ಮಹಾರಾಜರಿಗೆ ನಾನು ಕೇಳುತ್ತಿರುವುದೇನು. ಒಂದು ತುತ್ತು ಅನ್ನ, ಕರುಣೆ ಬಂದರೆ ಆಸರೆ.

ಅರಮನೆ ಹತ್ತಿರವಾದಂತೆ ಅವನ ಎದೆ ಢವಗುಡತೊಡಗಿತು. ದ್ವಾರಪಾಲಕನ ಕೈಯ ಕತ್ತಿ ಹೆದರಿಕೆ ತಂದಿತು. ಇಷ್ಟಕ್ಕೂ ಏನಾಗಬಹುದು. ಅರಮನೆ ನುಗ್ಗಿದರೆ ಸಾವಿನ ಶಿಕ್ಷೆ. ಈಗ ತಾನು ಶಿಕ್ಷೆ ಇಲ್ಲದೆಯೂ ಹಸಿವಿನಿಂದ ಸಾಯುತ್ತಿದ್ದೇನೆ. ದೃಢವಾಯಿತು ಮನಸ್ಸು. ನಿಧಾನಕ್ಕೆ ಅರಮನೆಯ ಬಾಗಿಲ ಬಳಿ ಹೆಜ್ಜೆ ಇಟ್ಟ. ದ್ವಾರಪಾಲಕ ಹಿಂದೆ ಸರಿದ. ಇವನು ಒಳಗೆ ನಡೆದ. ದ್ವಾರಪಾಲಕ ಹಿಂದಿಂದೆ ಬರುತ್ತಿದ್ದಾನೆ. ಆಶ್ಚರ್ಯ, ಅರಮನೆಯ ತುಂಬ ಜನ. ಚಿಂತಾಕ್ರಾಂತರಾಗಿ ನಿಂತಿದ್ದಾರೆ. ಅವರ ಮುಖ ನೋಡಿದರೆ ಭಯಂಕರವಾದದ್ದೇನೋ ಘಟಿಸಿದೆ. ಅವನ ಮನಸ್ಸಿನ ಆಜ್ಞೆಯನ್ನೂ ಮೀರಿ ಅವನ ಕಾಲುಗಳು ಒಳ ನುಗ್ಗುತ್ತಿದ್ದವು. ಇವನ ಪ್ರವೇಶ ಅಲ್ಲಿ ತೀವ್ರವಾದ ಸಂಚಲನ ಮೂಡಿಸಿತು. ಮತ್ತೆ ಸೈನಿಕರು ಸುತ್ತುವರಿದರು.

ಇವನು ನುಗ್ಗುತ್ತಲೇ ಇದ್ದ. ನುಗ್ಗುವುದಾದರೂ ಎಲ್ಲಿಗೆ ? ತೀರ ಮಹಾರಾಜರ ಸಿಂಹಾಸನದೆಡೆಗೆ ! ಜನರ ಗುಜುಗುಜು. ಇವನನ್ನು ಯಾರೂ ತಡೆಯುತ್ತಿಲ್ಲ. ಯಾರೋ ಕೂಗಿದರು. ಹತ್ತು ದಿನದಿಂದ ಕಾಣೆಯಾಗಿದ್ದ ಮಹಾರಾಜರು ಮತ್ತೆ ಬಂದರು. ಇಡೀ ಅರಮನೆ ಧ್ವನಿಸತೊಡಗಿತು. ಜೈಕಾರ. ಅವನು ಮಾತ್ರ ನುಗ್ಗುತ್ತಿದ್ದ. ಇನ್ನೇನು ಸಿಂಹಾಸನ ನಾಲ್ಕು ಮಾರು. ಯಾರೋ ತಂದು ರಾಜನ ಗೌನು ಹಾಕಿದರು. ಇನ್ಯಾರೋ ಕಿರೀಟ ಹಾಕಿದರು. ಇನ್ನೇನು ಮೆಟ್ಟಿಲೇರಬೇಕು. ಮೊದಲ ಮೆಟ್ಟಿಲ ಮೇಲೆಯೇ ರತ್ನಖಚಿತ ಪಾದರಕ್ಷೆ. ನಿಧಾನವಾಗಿ ಕಾಲು ಸೇರಿಸಿದ. ಒಂದೊಂದೇ ಮೆಟ್ಟಿಲೇರಿದ. ಕೊನೆಯ ಮೆಟ್ಟಿಲೇರುವಾಗ ಕೈಲಿ ಖಡ್ಗ ಕೊಟ್ಟರು. ಇವನ ಹಸಿವು ಮರೆತೇಹೋಯಿತು. ಖಡ್ಗ ಕೈಗೆ ಬಂದದ್ದೇ ತಡ ನಿಸ್ತೇಜವಾಗಿದ್ದ ಕೈಕಾಲುಗಳಲ್ಲಿ ನೂರಾನೆ ಬಲ. ಎಡಕ್ಕೆ ತಿರುಗಿದ. ಮಹಾರಾಜನ ದೊಡ್ಡ ಚಿತ್ರಪಟ ಗೋಡೆಯ ಮೇಲೆ. ಒಂದು ಕ್ಷಣ ನಿಂತು ಅದನ್ನು ನೋಡಿದ. ಥೇಟ್ ತನ್ನ ಹಾಗೇ ಇದೆ. ಯಾರೋ ಹೇಳಿದ್ದು ನೂರಕ್ಕೆ ನೂರು ಸತ್ಯ. ತಾನು ಕನ್ನಡಿ ಮುಂದೆ ನಿಂತಿಲ್ಲವೆಂದು ಖಚಿತಪಡಿಸಿಕೊಂಡ. ತಕ್ಷಣ ಬಲಕ್ಕೆ ಸಿಂಹಾಸನದತ್ತ ಧಾವಿಸಿ ಖಡ್ಗ ಮೇಲೆತ್ತಿ ಆಜ್ಞೆ ಹೊರಡಿಸಿದ: 'ದಶ ದಿಕ್ಕುಗಳಲ್ಲಿ ನನ್ನಂಥ ರೂಪ ಹೋಲುವವನು ಯಾರೇ ಇರಲಿ. ಅವನ ಶಿರಚ್ಛೇದ ಮಾಡಿ. ಹ್ಞಾಂ ಆ ರುಂಡವನ್ನು ನಾನು ನೋಡಬೇಕು.' ಕ್ಷಣಾರ್ಧದಲ್ಲಿ ಕುದುರೆಗಳು ಓಡಿದ ಸದ್ದು.

**ಶ್ರೀಸುಮಿತ್ರಾಸುತ ಅಗಸಬಾಳ**
ಘಾಟೆಭವನ, ವಯ್ಯಾಲಿಕಾವಲ್, ಮಲ್ಲೇಶ್ವರಂ
ಬೆಂಗಳೂರು – ೩

ನೆಮ್ಮದಿಯ ನಾಳೆ ನಮ್ಮದು

# ಹೊಸತು

## ಹೊಸ ವರ್ಷದ ಹಾರ್ದಿಕ ಶುಭಾಶಯಗಳು

## ೨೦೧೭

### ಜನವರಿ

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | ೩೧ |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

### ಫೆಬ್ರವರಿ

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | |
| ಗುರುವಾರ | ೨ | ೯ | ೧೬ | ೨೩ | |
| ಶುಕ್ರವಾರ | ೩ | ೧೦ | ೧೭ | ೨೪ | |
| ಶನಿವಾರ | ೪ | ೧೧ | ೧೮ | ೨೫ | |

### ಮಾರ್ಚ್

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | ೨೯ |
| ಗುರುವಾರ | ೨ | ೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | ೩೧ |
| ಶನಿವಾರ | ೪ | ೧೧ | ೧೮ | ೨೫ | |

### ಏಪ್ರಿಲ್

| | | | | | |
|---|---|---|---|---|---|
| ಭಾನುವಾರ | ೩೦ | ೨ | ೯ | ೧೬ | ೨೩ |
| ಸೋಮವಾರ | | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

### ಮೇ

| | | | | | |
|---|---|---|---|---|---|
| ಭಾನುವಾರ | | ೭ | ೧೪ | ೨೧ | ೨೮ |
| ಸೋಮವಾರ | ೧ | ೮ | ೧೫ | ೨೨ | ೨೯ |
| ಮಂಗಳವಾರ | ೨ | ೯ | ೧೬ | ೨೩ | ೩೦ |
| ಬುಧವಾರ | ೩ | ೧೦ | ೧೭ | ೨೪ | ೩೧ |
| ಗುರುವಾರ | ೪ | ೧೧ | ೧೮ | ೨೫ | |
| ಶುಕ್ರವಾರ | ೫ | ೧೨ | ೧೯ | ೨೬ | |
| ಶನಿವಾರ | ೬ | ೧೩ | ೨೦ | ೨೭ | |

### ಜೂನ್

| | | | | | |
|---|---|---|---|---|---|
| ಭಾನುವಾರ | | ೪ | ೧೧ | ೧೮ | ೨೫ |
| ಸೋಮವಾರ | | ೫ | ೧೨ | ೧೯ | ೨೬ |
| ಮಂಗಳವಾರ | | ೬ | ೧೩ | ೨೦ | ೨೭ |
| ಬುಧವಾರ | | ೭ | ೧೪ | ೨೧ | ೨೮ |
| ಗುರುವಾರ | ೧ | ೮ | ೧೫ | ೨೨ | ೨೯ |
| ಶುಕ್ರವಾರ | ೨ | ೯ | ೧೬ | ೨೩ | ೩೦ |
| ಶನಿವಾರ | ೩ | ೧೦ | ೧೭ | ೨೪ | |

### ಜುಲೈ

| | | | | | |
|---|---|---|---|---|---|
| ಭಾನುವಾರ | ೩೦ | ೨ | ೯ | ೧೬ | ೨೩ |
| ಸೋಮವಾರ | ೩೧ | ೩ | ೧೦ | ೧೭ | ೨೪ |
| ಮಂಗಳವಾರ | | ೪ | ೧೧ | ೧೮ | ೨೫ |
| ಬುಧವಾರ | | ೫ | ೧೨ | ೧೯ | ೨೬ |
| ಗುರುವಾರ | | ೬ | ೧೩ | ೨೦ | ೨೭ |
| ಶುಕ್ರವಾರ | | ೭ | ೧೪ | ೨೧ | ೨೮ |
| ಶನಿವಾರ | ೧ | ೮ | ೧೫ | ೨೨ | ೨೯ |

### ಆಗಸ್ಟ್

| | | | | | |
|---|---|---|---|---|---|
| ಭಾನುವಾರ | | ೬ | ೧೩ | ೨೦ | ೨೭ |
| ಸೋಮವಾರ | | ೭ | ೧೪ | ೨೧ | ೨೮ |
| ಮಂಗಳವಾರ | ೧ | ೮ | ೧೫ | ೨೨ | ೨೯ |
| ಬುಧವಾರ | ೨ | ೯ | ೧೬ | ೨೩ | ೩೦ |
| ಗುರುವಾರ | ೩ | ೧೦ | ೧೭ | ೨೪ | ೩೧ |
| ಶುಕ್ರವಾರ | ೪ | ೧೧ | ೧೮ | ೨೫ | |
| ಶನಿವಾರ | ೫ | ೧೨ | ೧೯ | ೨೬ | |

### ಸೆಪ್ಟೆಂಬರ್

| | | | | | |
|---|---|---|---|---|---|
| ಭಾನುವಾರ | | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

### ಅಕ್ಟೋಬರ್

| | | | | | |
|---|---|---|---|---|---|
| ಭಾನುವಾರ | ೧ | ೮ | ೧೫ | ೨೨ | ೨೯ |
| ಸೋಮವಾರ | ೨ | ೯ | ೧೬ | ೨೩ | ೩೦ |
| ಮಂಗಳವಾರ | ೩ | ೧೦ | ೧೭ | ೨೪ | ೩೧ |
| ಬುಧವಾರ | ೪ | ೧೧ | ೧೮ | ೨೫ | |
| ಗುರುವಾರ | ೫ | ೧೨ | ೧೯ | ೨೬ | |
| ಶುಕ್ರವಾರ | ೬ | ೧೩ | ೨೦ | ೨೭ | |
| ಶನಿವಾರ | ೭ | ೧೪ | ೨೧ | ೨೮ | |

### ನವೆಂಬರ್

| | | | | | |
|---|---|---|---|---|---|
| ಭಾನುವಾರ | | ೫ | ೧೨ | ೧೯ | ೨೬ |
| ಸೋಮವಾರ | | ೬ | ೧೩ | ೨೦ | ೨೭ |
| ಮಂಗಳವಾರ | | ೭ | ೧೪ | ೨೧ | ೨೮ |
| ಬುಧವಾರ | ೧ | ೮ | ೧೫ | ೨೨ | ೨೯ |
| ಗುರುವಾರ | ೨ | ೯ | ೧೬ | ೨೩ | ೩೦ |
| ಶುಕ್ರವಾರ | ೩ | ೧೦ | ೧೭ | ೨೪ | |
| ಶನಿವಾರ | ೪ | ೧೧ | ೧೮ | ೨೫ | |

### ಡಿಸೆಂಬರ್

| | | | | | |
|---|---|---|---|---|---|
| ಭಾನುವಾರ | ೩೧ | ೩ | ೧೦ | ೧೭ | ೨೪ |
| ಸೋಮವಾರ | | ೪ | ೧೧ | ೧೮ | ೨೫ |
| ಮಂಗಳವಾರ | | ೫ | ೧೨ | ೧೯ | ೨೬ |
| ಬುಧವಾರ | | ೬ | ೧೩ | ೨೦ | ೨೭ |
| ಗುರುವಾರ | | ೭ | ೧೪ | ೨೧ | ೨೮ |
| ಶುಕ್ರವಾರ | ೧ | ೮ | ೧೫ | ೨೨ | ೨೯ |
| ಶನಿವಾರ | ೨ | ೯ | ೧೬ | ೨೩ | ೩೦ |

# ಒಟ್ಟುಗಳೋ ಎಡವಟ್ಟುಗಳೋ!

ಈರಪ್ಪ ಎಂ. ಕಂಬಳಿ

‘ಸಾಹಿತ್ಯ ಮತ್ತು ಸಂಗೀತ ಎಲ್ಲ ಕಾಲಕ್ಕೂ ಸಲ್ಲುವ ಬಾಬತ್ತುಗಳೇ ಸೈ’ ಅಂಬೋ ಮಾತನ್ನು ಬಹುಶಃ ಯಾವ ನಾಗರಿಕ ಪ್ರಾಣಿಯೂ ಅಲ್ಲಗಳೆಯಲಾರದು. ಯಾಕೆಂದರೆ, ಅವೇನಿದ್ದರೂ ಮನುಷ್ಯರನ್ನು ಸಂಸ್ಕಾರವಂತರನ್ನಾಗಿ ರೂಪಿಸುವಲ್ಲಿ ಬಹುಮುಖ್ಯ ಪಾತ್ರ ವಹಿಸುವ ಬುದ್ಧಿ–ಭಾವುಕ ಸರಕುಗಳು ಎಂಬೋ ಕಾರಣಕ್ಕೆ. ಅದೇ ರೀತಿ, ಸಾಹಿತ್ಯ ಮತ್ತು ಸಂಗೀತಗಳ ಸಾಹಚರ್ಯ ಕೂಡ ಪರಸ್ಪರ ಅಷ್ಟೇ ಆಪ್ತವೂ ಅರ್ಥಪೂರ್ಣವೂ ಆದುದಾಗಿದೆ. ಯಾಕೆಂದರೆ, ಅವೇನಿದ್ದರೂ ಒಂದನ್ನೊಂದು ಕೈ ಕೈ ಹಿಡಿದುಕೊಂಡು ಒಟ್ಟಿಗೇ ನಡೆದುಕೊಂಡು ಬರುವಂಥವು ಎನ್ನುವ ಕಾರಣಕ್ಕೆ, ಇರಲಿ, ನನ್ನ ಮಾಮೂಲೀ ವರಸೆಯಂತೆ, ಸುತ್ತೂ ಬಳಸೀ ‘ಒಂದನ್ನಾಡ ಹೋಗಿ ಒಂಭತ್ತನ್ನಾಡುವ ಅಣ್ಣಗಳ ತರಹವೇ’ ವಿಷಯಾಂತರಕ್ಕೆಳೆಸಲಾರೆ ಮತ್ತೇ, ಈಗ ಸೀದಾ ವಿಷಯಕ್ಕೆ ಬರುತ್ತೇನೆ ಬನ್ನಿರಿ. ‘ಗೊತ್ತೈತಿಲ್ಲ, ನಮ್ಮ ಕನ್ನಡಾ ಅಂಬೂದು ಎಂಥಾ ರಿಚ್ ಭಾಷೆ ಅದಾ, ಏನ್ ಕತಿ ಅವನೌನು!’ ನಾನು ಧಾರವಾಡಿಯಾಗಿ ಅತ್ಯಂತ ಹೆಮ್ಮೆಯಿಂದ ಅದೇ ಶೈಲಿಯಲ್ಲಿ ಈ ಮಾತು ಹೇಳುತ್ತಿದ್ದೇನೆ, ಅನ್ಯಥಾ ಭಾವಿಸಬಾರದು. ‘ಭಾಷೆ ಅನ್ನುವುದು’ ಮನುಷ್ಯರ ನಡುವೆ ಪರಸ್ಪರ ಹೃದಯ ಸಂವಾದ ಏರ್ಪಡಿಸುವ ‘ವಾಹಕ’ ಎನ್ನುವ ಹಿನ್ನೆಲೆಯಲ್ಲಿ ಇಷ್ಟೆಲ್ಲ ಹೇಳಬೇಕಾಯಿತು.

ಸಾವಿರದೊಂಭೈನೂರಾ ಎಂಭತ್ತ ಮೂರರ ಆಜುಬಾಜಿನಲ್ಲಿ, ನಾನು ಅದೇ ಆಗ ಈ ಬೆಂಗಳೂರೆಂಬೋ ಬೆಂಗಳೂರು ಮಹಾನಗರಿಯ ತೆಕ್ಕೆಗೆ ಬಂದು ಬಿದ್ದ ಹೊಸತು. ಬೆಳಗಿನ ಹೊತ್ತು ಬಾನುಲಿಯಲ್ಲಿ ಶಾಂತಾ ಜಯತೀರ್ಥ ಅವರ ಕಂಠದಲ್ಲಿ ತೇಲಿ ಬರುತ್ತಿದ್ದ ಪುರಂದರ ದಾಸರ ಕೀರ್ತನೆ – “ಊಟಕ್ಕೆ ಬಂದೇವು ನಾವು, ನಿಮ್ಮ ಆಟಪಾಟವ ಬಿಟ್ಟು ಅಡುಗೆ ಮಾಡಮ್ಮ...” ಎಂದು ದಾಸರ ಕೀರ್ತನೆಯನ್ನು ಮಕ್ಕಳ ಸಂಗೀತ ಪಾಠವಾಗಿ ಅಳವಡಿಸಿದಾಗಿನ ಪ್ರಸಂಗ. ಇದೇನಿದು? ಅನ್ನದಿರಿ. ಮಕ್ಕಳು ಆಟಪಾಠ ಬಿಟ್ಟು ಊಟಕ್ಕೆ ಬರುತ್ತವೆ, ಅಮ್ಮ ಆಗ ಅಡುಗೆ ಮಾಡಿ ಬಡಿಸಬೇಕು, ನಿಜ. ಆದರೆ ಅದೇ ‘ನಿಮ್ಮ ಆಟಪಾಟವ ಬಿಟ್ಟು ಅಡುಗೆ ಮಾಡಮ್ಮ’ ಅಂದರೆ ಹೇಗೆ? ಸಾಹಿತ್ಯಕ್ಕೆ ಒಪ್ಪುವಂಥ ಸಂಗೀತದ ಉಡುಪು ಸಿದ್ಧಪಡಿಸಿ ಅದನ್ನು ತೊಡಿಸುವಾಗ ಅದು ‘ಊಟಕ್ಕೆ ಬಂದೇವು ನಾವು’ ಅನ್ನುವಲ್ಲಿಯೇ ಮುರಿದು ಹಾಕಿದರೆ ಅಲ್ಲಿ ಒಂದಿಷ್ಟು ಸಣ್ಣ ಎಡವಟ್ಟು, ಕೇಳುಗರಿಗೆ ಕನ್‌ಫ್ಯೂಜ್ ಅಷ್ಟೆ. ಅದೇನೋ ಸಂಗೀತಗಾರರಿಗೆ ರಾಗ ಸಂಯೋಜನೆ ಮಾಡುವಾಗ ಹಾಕುವ ಮಟ್ಟು(ಧಾಟಿ)ಗನು ಗುಣವಾಗಿ ಲಯದ ನಡಿಗೆಗೆ ಅನಿವಾರ್ಯವೋ ಅನುಕೂಲವೋ ಆದೀತೆಂದು ಹಾಗೆ ಅಲ್ಲಲ್ಲಿ ತುಂಡು ಹಾಕಬಹುದು. ಆದರೆ ಅದರಿಂದ ಅರ್ಥಕ್ಕೆ ಅನರ್ಥ ಒದಗಿದರೆ ಗತಿಯೇನು? ವಾಸ್ತವವಾಗಿ, ಅದು ‘ಊಟಕ್ಕೆ ಬಂದೇವು ನಾವು ನಮ್ಮ ಆಟಪಾಠವ ಬಿಟ್ಟು, ಅಡುಗೆ ಮಾಡಮ್ಮ’ ಎಂದಿರಬೇಕಾದದ್ದು, ‘ನಿಮ್ಮ ಆಟಪಾಠವ ಬಿಟ್ಟು ಅಡುಗೆ ಮಾಡಮ್ಮ’ ಎಂದರೆ ಹೇಗೆ? ಮುಂದೆ ಸರಸ್ವತಿ ಬುದ್ಯ ಅವರೂ ಆದ ತಪ್ಪನ್ನೇ ಮುಂದುವರಿಸುತ್ತಾರೆ. ದಾಸರ ಮನದ ಇಂಗಿತವನ್ನು ನಾವು ಕೇಳುಗರೇ ಸುಧಾರಿಸಿಕೊಂಡು ಇಂಥ ಕಡೆ ಸರಿಯಾದ ರೂಪ ವನ್ನು ಗ್ರಹಿಸಿಕೊಳ್ಳಬೇಕಷ್ಟೆ! ಅದು ಬೇರೆ ಮಾತು.



ಹಾಗೆಯೇ ಬಾಲ್ಯದಂಗಳಕ್ಕೆ ಹಿಂಜಿಗಿಯುತ್ತದೆ ನನ್ನ ಮನಸ್ಸು. ‘ಎದೆ ಸೀಳಿದರೆ ಅಲ್ಲಿ ಎರಡಕ್ಷರ ಇರಬೇಕು’ ಅನ್ನುವದು ಆ ಕಾಲದ ನುಡಿಗಟ್ಟು. ಆ ಎರಡಕ್ಷರ ವೆಂದರೇನೇ ‘ವಿದ್ಯೆ’. ಅಂದ ಮೇಲೆ, ಅಕ್ಷರಾಭ್ಯಾಸಕ್ಕಾಗಿ ಅದೇ ಆಗ ನನ್ನನ್ನು ಸ್ಥಳೀಯ ‘ಪಾಚ್ಛಾಸಾಬರ’ (‘ಬಾದಶಾ ಸಾಬರ’ ತದ್ಭವ ರೂಪವಂತೆ ಇದು!) ಆ ಖಾಸಗೀ ಶಾಲೆಗೆ ಹಾಕಲಾಗಿತ್ತು. ಆ ದಿನಗಳಲ್ಲಿ ಅದು ಒಂದು ರೀತಿಯಲ್ಲಿ ನಮ್ಮೂರಿನ ಏಕಮೇವ ಗುರು ಮಠ ವಿದ್ದಂತೆ, ನಮ್ಮೂರಲ್ಲಿ. ‘ಛಡಿ ಛಂ ಛಂ – ವಿದ್ಯಾ ಘಂ ಘಂ’; ‘ಗುರುವಿನ ಗುಲಾಮ ನಾಗುವ ತನಕ ಒಲಿಯದಣ್ಣ ವಿದ್ಯೆ’ ಇಂಥಾ ಆಡುಮಾತುಗಳಿಗೆ ಹೇಳಿ ಮಾಡಿಸಿದಂಥ ನಮ್ಮ ನಡವಳಿಕೆ ಇರಬೇಕಾಗಿತ್ತು ಆಗ! ‘ಇವತ್ತು

ಮಾಸ್ತರರಿಂದ ಏಟು ತಿಂದೆ’ ಎಂದು ಮನೆಯಲ್ಲಿ ಹೇಳಿಕೊಂಡರೆ, ಅದಕ್ಕೆ ಸಂತೋಷಪಡುವ ತಂದೆತಾಯಿಗಳಿದ್ದರು ನಮಗೆ, ಆಕ್ಷೇಪಿಸುವ ಮಾತೇ ಇಲ್ಲ, ತಮ್ಮ ಹುಡುಗ ಮಾಸ್ತರರಿಗೆ ಹತ್ತಿರವಾಗುತ್ತಿದ್ದಾನೆಂದೇ ಭಾವಿಸುತ್ತಿದ್ದರವರು ಅಂದಿನ ದಿನಗಳಲ್ಲಿ. ಈಗ ಮಾಸ್ತರರ ಕೊರಳ ಪಟ್ಟಿ ಹಿಡಿದು ಕೇಳುವವರಿದ್ದಾರೆ, ತಮ್ಮ ಮಕ್ಕಳನ್ನು ಹೊಡೆದಿದ್ದ್ಯಾಕೆ ಎಂದು.

ಅದೇ ಆಗ ಹಲಗೆ–ಬಳಪವ (ಪಾಟಿ–ಪೇಣೆ) ಹಿಡಿದ ಹೆಗ್ಗಳಿಕೆ ನನ್ನದು. ಹೀಗಾಗಿ ಗುರುಸೇವೆ ಮಾಡುವ ಮೂಲಕ ಅವರನ್ನು ಒಲಿಸಿಕೊಳ್ಳಬೇಕಾಗಿತ್ತು, ಅವರ ಕಾಲು ಒತ್ತುವ, ಬೆನ್ನು ಕೆರೆಯುವ, ಕಾಲಿನ ಆಣಿ ಸುಡುವ ಇಂಥವೇ ಕೆಲಸಕ್ಕೆ ಅವರು ಹೇಳುವ ಮೊದಲೇ ನಾ ಮುಂದು ತಾ ಮುಂದು ಎಂದು ನುಗ್ಗುತ್ತಲೇ ನಾವೆಲ್ಲ ಅವರ ಪ್ರೀತಿಪಾತ್ರರಾಗಲು ಏನೆಲ್ಲ ಕಸರತ್ತು ಮಾಡಬೇಕಿತ್ತು. ನಮ್ಮ ದೇಶದಲ್ಲಿ ಮುಸ್ಲಿಮರನ್ನು ಅನುಮಾನ / ಅಪನಂಬಿಕೆಯಿಂದ ನೋಡುವ ಈ ದಿನಮಾನದಲ್ಲಿ ಅದನ್ನು ನೆನೆಸಿಕೊಂಡರೆ, ನಮಗೆ ಆ ನಮ್ಮ ಮಾಸ್ತರನು ಅನ್ಯಧರ್ಮೀಯನೆನ್ನಿಸುತ್ತಲೇ ಇರಲಿಲ್ಲ. ನಮಗೆ ಅಕ್ಷರಾಭ್ಯಾಸ ಮಾಡಿಸುವಲ್ಲಿ ಅವರು ವಹಿಸುತ್ತಿದ್ದ ನಿಗಾಹ್ – ಅದಕ್ಕೆ ಬೆಲೆ ಕಟ್ಟಲು ಸಾಧ್ಯವೇ ಇಲ್ಲ. ನಾವೆಲ್ಲ ನಮ್ಮನಮ್ಮ ಜಾತಿ–ಮತ–ಧರ್ಮಗಳ ಚೌಕಟ್ಟುಗಳಿಂದ ಹೊರಬಂದು ಸಹಜ ಗುಣ–ಸ್ವಭಾವದಲ್ಲಿ ನಡೆದುಕೊಳ್ಳುವಲ್ಲಿಯೇ ನಾವು ಅಪ್ಪಟ ಮನುಷ್ಯರಾಗುವುದು ಎಂಬ ಸರಳ ಸತ್ಯವನ್ನು ಪ್ರಪಂಚಕ್ಕೆ ಮನವರಿಕೆ ಮಾಡಿಕೊಡಬೇಕಾಗಿದೆ, ಈಗ !

ಸರಿ, ದಸರಾ ಹಬ್ಬದ ದಿನಗಳಲ್ಲಿ, ನಮ್ಮ ಮಾಸ್ತರರು ನಿತ್ಯ ತಮ್ಮ ಶಿಷ್ಯೋತ್ತಮರ ಮನೆಗಳಿಗೆ ತೆರಳಿ ಬೆಳಗು–ಬೈಗು ಹೊತ್ತಿನಲ್ಲಿ, ನಮ್ಮಿಂದ ಭಜನೆ ಮಾಡಿಸುತ್ತಿದ್ದರು. ಅವರು ಹಾರ್ಮೋನಿಯಂ ನುಡಿಸುತ್ತಿದ್ದರೆ, ನಾವು ಸುತ್ತ ಕೂತು ಅವರೇ ಕಲಿಸಿದ್ದ ಹಾಡುಗಳನ್ನು ತಾರಕ ಸ್ವರದಲ್ಲಿ ಅರಚುತ್ತಿದ್ದೆವು. ‘ಶರಣು ಶರಣು ವಿನಾಯಕ, ಶರಣು ವಿದ್ಯಾ ಪ್ರದಾಯಕ...’ ಎಂಬ ದಾಸರ ಪದವನ್ನು ಹಾಡುವಾಗ, ವಿದ್ಯಾ ಅಧಿದೇವತೆ ಗಣಪತಿಯ ಇನ್ನೊಂದು ಹೆಸರಾದ ‘ಪಾರ್ವತೀತನಯ’ ಅನ್ನುವಲ್ಲಿ ಪಾರ್ವತಿಯನ್ನು ಆಕೆಯ ತನಯನನ್ನು ಬೇರೆ ಬೇರೆ ಮಾಡಿ ಹಾಡುತ್ತಿದ್ದೆವು. ಆ ಸಣ್ಣ ವಯಸ್ಸಿನಲ್ಲಿ ವ್ಯತ್ಯಾಸವೇ ಗೊತ್ತಾಗುತ್ತಿರಲಿಲ್ಲ ನಮಗೆ. ಹುಟ್ಟಿನಿಂದ ಮುಸ್ಲಿಮರಾಗಿದ್ದ ನಮ್ಮ ಮಾಸ್ತರರೂ ನಕ್ಕು ಕ್ಷಮಿಸಿಬಿಡುತ್ತಿದ್ದುದೇ ಹೆಚ್ಚು. ಕೊನೆಯಲ್ಲಿ ಒಂದು ಕವ್ವಾಲಿಯಿರುತ್ತಿತ್ತು. ‘ಯಲಬುರಗಿ ಶಾಲೆಯ ಬಾಲರು ನಾವು, ಕವ್ವಾಲಿ ಹಾಡಲು ಬಂದೇವೋ...’! ಅಮಾವಾಸ್ಯೆಗೊ ಹುಣ್ಣಿಮೆಗೋ ಒಮ್ಮೊಮ್ಮೆ ಸಾಲಿಗೆ ಬರುತ್ತಿದ್ದ ಕೆಲವು ಹುಡುಗರು ‘ಕವ್ವಾಲಿ ಹಾಡಲು’ ಅನ್ನುವ ಬದಲು ‘ಕಬ್ಬಾಡಿ ಆಡಲು ಬಂದೇವೋ...’ ಅಂದುಬಿಡುತ್ತಿದ್ದರು, ಸಮೂಹ ಗಾನದಲ್ಲಿ ಅರಚುವಾಗ. ಅದಕ್ಕೆ ಮಾಸ್ತರರು, ತಲೆಗೊಂದು ಮೊಟಕಿ ‘ದಿನಾ ಬಯಲಾಗ ಕಬಡ್ಡಿ ಆಡಾಂವಾ, ಕವ್ವಾಲಿ ಹಾಡಾಕ ಇವತ್ತ ಬಂದಾನ ಮಂಗ್ಯಾ...’! ಅನ್ನುತ್ತಿದ್ದರು.

ಬಾಲ್ಯದಂಗಳದಲ್ಲಿ ಹಾಗೆ, ಮನೆಯ ಮಾಳಿಗೆಯ ಮೇಲೆ ಈಚಲ ಚಾಪೆಯ ಮೇಲೆ ಕವುದೀ ಕವುಚಿ ಮಲಗಿದ್ದಾಗ ಮೈಗೆ ಎಳೆ ಬಿಸಿಲೂ ತಂಗಾಳಿಯೂ ಒಟ್ಟಿಗೇ ತೀಡುತ್ತಲಿರುವಾಗ, ಥೇಟು ಬಿಸಿ ಜಾಮೂನು – ಐಸ್‌ಕ್ರೀಮು ಹದವಾಗಿ ಮಿದ್ದಿದಂತೆ, ಬೆಳಗಿನ ಸವಿನಿದ್ರೆಯಲ್ಲಿರುವಾಗಲೇ, ಪಂಚಾಯಿತಿ ಕಚೇರಿಯ ರೇಡಿಯೋ ‘ಬೆಳ್ಳನ ಬೆಳಗಾಯಿತು...!’ ಉಲಿಯುತ್ತಲಿರುವಾಗ ಮತ್ತಷ್ಟು ಭಾವಪರವಶತೆಗೆ ದೂಡುತ್ತಿತ್ತು, ಮನಸ್ಸನ್ನು. ನಮ್ಮ ಪಾಲಿನ ಸುಪ್ರಭಾತ ಎಂದರೆ ಅದೇ ಮೈ–ಮನಸ್ಸು ಪುಳಕಗೊಳ್ಳುವ ಸನ್ನಿವೇಶ. ಹಿಂದಿ ಸಿನಿಮಾಗಳಿಗೆ ಹಾಡುವ ಲತಾ ಮಂಗೇಶ್ಕರ್ ಅದನ್ನು ಹಾಡಿದ್ದಾರೆಂದರೆ ಇನ್ನೂ ವಿಸ್ಮಯದ ಸಂಗತಿ ನಮಗೆ. ಆ ಎಳೆ ವಯಸ್ಸಿನಲ್ಲಿ ಸುಮಧುರ ಸಂಗೀತವೊಂದೇ ನಮ್ಮ ತಲೆ ಸವರುತ್ತಿತ್ತು. ಅಲ್ಲಿನ ಪದಗಳು ಧ್ವನಿಸುವ ಅರ್ಥದ ಕಡೆಗೆ ಗಮನ ಕೊಡೊವಷ್ಟು ಪ್ರಬುದ್ಧರಾಗಿರಲಿಲ್ಲ ನಾವು, ಆಗಿನ್ನು. ಆದರೂ ಪುಸ್ತಕ ಪ್ರೀತಿಯಿಂದಾಗಿ, ಆ ಹಾಡು ಬರೆದವರು ಪ್ರೊ॥ ಭುಜೇಂದ್ರ ಮಹಿಷವಾಡಿ ಎಂದೂ ಅದು ‘ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ’ ಸಿನಿಮಾದಲ್ಲಿ ಬರುತ್ತದೆಂದೂ ತಿಳಿದುಕೊಂಡಿದ್ದೆವಷ್ಟೆ.

ಮತ್ತೆ ಹತ್ತಾರು ವರ್ಷ ಉರುಳಿ, ಬಾಲ್ಯ ಕಳೆದು, ‘ಭೂಮಿ ದುಂಡಗಿದೆ’ ಅನ್ನುವಂತೆ, ಧಾರವಾಡದ ಕನ್ನಡ ಅಧ್ಯಯನ ಪೀಠಕ್ಕೆ ಪ್ರವೇಶ ಪಡೆದ

ಹೊಸದರಲ್ಲಿ, ಅಲ್ಲಿದ್ದ ಪ್ರೊ॥ ಮಹಿಷವಾಡಿ ಹೆಸರಿನ ಬೋರ್ಡು ಕಣ್ಣು ಕುಕ್ಕಿತ್ತು. ಆ ಸುಂದರ-ಸುಮಧುರ ಗೀತೆಯನ್ನು ಬರೆದ ಕವಿ ಸಿಕ್ಕಿಬಿಟ್ಟರಲ್ಲ ಎಂದು, ಏನಾದರಾಗಲಿ ಕವಿಯನ್ನು ಒಮ್ಮೆ ನೋಡಲೇಬೇಕಲ್ಲ ಎನ್ನುವ ತವಕ ಮನದಲ್ಲಿ ಆಗಾಗ ಗುದ್ದಿಕೊಂಡು ಬರುತ್ತಿತ್ತು. ನಮಗಾಗ ನೇರವಾಗಿ ಪಾಠವನ್ನು ಮಾಡುತ್ತಿರಲಿಲ್ಲ, ಅವರು. ಪರಿಚಯವಿದ್ದ ಅಂತಿಮ ವರ್ಷದ ವಿದ್ಯಾರ್ಥಿ ಹೊಸಪೇಟೆಯ ಬಾಲರಾಜುವಿನ ಮುಂದೆ ನನ್ನ ಆಸೆ ತೋಡಿ ಕೊಂಡಿದ್ದೆ, ಅವರ ಜತೆ ಆಪ್ತವಾಗಿದ್ದ ಕಾರಣಕ್ಕೆ. ಪ್ರೊಫೆಸರು ಕೋಣೆಯಲ್ಲಿ ಕೂತಿದ್ದ ಸಮಯ ನೋಡಿ ಕರೆದೊಯ್ದರು, ಒಂದು ದಿನ. ನೋಡುತ್ತೇನೆ, ಇವರೇನಾ ಅಂದುಕೊಂಡೆ. ಕಪ್ಪಗಿನ ಮುಖ, ಹದ್ದಿನ ಕಣ್ಣುಗಳು, ಕಿವಿಯಲ್ಲೊಂದು ಮಸೀನು ಆ ತನಕ ನನ್ನ ಮನಸ್ಸಿನಲ್ಲಿ ಅಚ್ಚೊತ್ತಿದ್ದ ಅವರ ರೂಪವೇ ಕಲಕಿಹೋಗಿತ್ತು. ಕನ್ನಡ ವಿಭಾಗಕ್ಕೆ ಹೊಸ ವಿದ್ಯಾರ್ಥಿಯಾಗಿ ಸೇರಿದ್ದ ನನ್ನನ್ನು ಬಾಲರಾಜು ಪರಿಚಯಿಸುತ್ತ, ಅವರ ಕಿವಿಯ ಹತ್ತಿರ ಹೋಗಿ, "ಇವರೂ ಚಲೋ ಕವನಾ ಬರೀತಾರ್ರೀ...!" ಅಂದದ್ದಕ್ಕೆ, ತಲೆದೂಗುತ್ತಲೆ "ಬರೀಬೇಕ್ರೆಪಾ ಬರಿಬೇಕೂ, ನೀವು ಚಲೋತ್ನಾಗ ಬರೀಬೇಕು" ಎಂದಷ್ಟೇ ಹಾರೈಸಿದ್ದರು, ಅವೊತ್ತು. ಎಂಥಾ ಮಾತು! ಅದಾಗಿ ಕೆಲವೇ ತಿಂಗಳಲ್ಲಿ, ಕವಿ ಭುಜೇಂದ್ರ ಮಹಿಷವಾಡಿಯವರು ಇಹಲೋಕ ತ್ಯಜಿಸಿದ್ದರು.

ಗಾಳಿ ಬಿಟ್ಟ ಹಾಗೆ ಪಟ ಹಾರಿಸಿಕೊಂಡು ಬಂದ ನಾನು ಅಚಾನಕ್ಕಾಗಿ ಈ ಬೆಂಗಳೂರೆಂಬೋ ಮಹಾನಗರಿಯ ತೆಕ್ಕೆಗೆ ಅನಾಮತ್ತಾಗಿಯೇ ಬಂದು ಬಿದ್ದವನಾಗಿ, ಆಡಾಡುತ್ತಲೇ ಆಯಸ್ಸೂ ಕಳೆದುಹೋಗಿ, ಮೂವತ್ತಮೂರು ವರ್ಷಗಳೇ ಗತಿಸಿಹೋಗಿದ್ದವು, ಆಗಲೇ. ಬಾಲ್ಯದಲ್ಲಿ ತಂಗಾಳಿಯಂತೆ ತೀಡುತ್ತಿದ್ದ 'ಬೆಳ್ಳನ ಬೆಳಗಾಯಿತು' ಮತ್ತೇ ಧುತ್ತೆಂದು ನೆನಪಾಗಬೇಕೇ ? ಈಗ ನನ್ನ ಮುಂದೆ ಟೇಬಲ್ ಮೇಲೆಯೇ ದಿವಿನಾದ ಕಂಪ್ಯೂಟರ್ ಕೂತಿದೆ, ಬೇಕಾದ್ದು ಬೇಡವಾದದ್ದನ್ನೆಲ್ಲ ಸಲೀಸಾಗಿ ಡೌನ್‌ಲೋಡ್ ಮಾಡಿಕೊಳ್ಳಲು ಅನುವಾಗುವಂತೆ ಅದಕ್ಕೆ ಲಗತ್ತಾಗಿರುವ ಇಂಟರ್‌ನೆಟ್ಟೂ ಇದೆ. ಲೀಲಾಜಾಲ ವಾಗಿ ಜಾಲಾಡಿ ಹುಡುಕಿ ಸದರೀ ಹಾಡನ್ನು ಇಳಿಸಿಕೊಂಡೆ, ಉಳಿಸಿಕೊಂಡೆ. ಲತಾ ಮಂಗೇಶ್ಕರ್ ಕಂಠದಲ್ಲಿ ಸರಾಗವಾಗಿ-ಸುಶ್ರಾವ್ಯವಾಗಿ ಹರಿದುಬರುವ ಅದು ಎಂಥಾ ಅರಸಿಕರನ್ನೂ ಮೋಡಿ ಮಾಡುವಂತಿತ್ತು. ಅದೆಷ್ಟು ಬಾರಿ ಕೇಳಿದರೂ ಬೇಸರವೇ ಬಾರದು. ಅದೇ ಹಾಡಿನ ಚುಂಗು – ಧಾಟೀ ಹಿಡಿದು ಹುಡುಕಿಕೊಂಡು ಹೋದರೆ, ಹಳೆ ಹಿಂದಿ ಸಿನಿಮಾ 'ಭಾಬೀ ಕಿ ಛುಡಿಯಾ' (೧೯೬೧)ದಲ್ಲಿ ಬರುವ 'ಜ್ಯೋತಿ ಕಲಶ ಛಲ್ಕೇ...'! ನೆನಪಾಗುತ್ತಿದೆ. ಹಿಂದುಸ್ತಾನಿ ಶಾಸ್ತ್ರೀಯ ಸಂಗೀತದಲ್ಲಿ ಭೂಪ, ಭೂಪಾಲಿ ಎಂದು ಕರೆಯಲ್ಪಡುವ ಅದೇ ಮೂಲ ಸ್ವರಗಳ – ಥಾಟ್‌ನಲ್ಲಿ ಕರ್ನಾಟಕ ಸಂಗೀತದಲ್ಲಿ ಅದನ್ನು ಮೋಹನರಾಗವೆಂದು ಕರೆಯುತ್ತಾರಂತೆ. ಇತ್ತೀಚೆಗೆ 'ರುಡಾಲಿ' ಸಿನಿಮಾಕ್ಕೆಂದು ಭೂಪೇನ್ ಹಜಾರಿಕಾ ಸಂಗೀತ ಸಂಯೋಜನೆ ಮಾಡಿದ್ದ 'ದಿಲ್ ಹೂಂ ಹೂಂ ಕರೆ...' ಹಾಡು ಕೂಡ ಮನಸ್ಸಿನೊಳಗೆ ಗುದ್ದಿಕೊಂಡು ಬಂತು; ಈ ಪ್ರಪಂಚಕ್ಕೆ ಕಣ್ಣುಬಿಡುವ ಹೊತ್ತಿಗೆ ನಮ್ಮಪ್ಪನ 'ಹಾರ್ಮೋನಿಯಂ ಸೂರ್' ಕಿವಿ ತುಂಬಿಕೊಳ್ಳುತ್ತಲೇ ಸದರೀ ಭೂಪ-ರಾಗ, ಕೇರವಾ-ತಾಲ ಆ ಸಾಥ್, ಅದೇ ಜೋಗುಳದಲ್ಲಿ ಬೆಳೆದವನೆಂಬ ಕಾರಣಕ್ಕಿರಬೇಕು. ಅದು ಅಷ್ಟೊಂದು ಮೋಡಿ ಮಾಡಿದೆ, ನನಗೆ. 'ಭೂಪ-ಕೇರವಾ' ಭಕ್ತಿ ಸಂಗೀತಕ್ಕೆ ಹೇಳಿ ಮಾಡಿಸಿದ ಸಂಯೋಜನೆಯೆಂದು ಬಲ್ಲವರು ಹೇಳುವದುಂಟು. ವಿಷಯಕ್ಕೆ ಬರುತ್ತೇನೆ.

'ಬೆಳ್ಳನ ಬೆಳಗಾಯಿತು' ಆ ಹಾಡಿನಲ್ಲಿ ಬರುವ ಬೆಳಗಾವಿಯ ಗ್ರಾಮಾಂತರ ಭಾಷೆಯ ಕೆಲವು ಪದಗಳು ಮಾತ್ರ ಬುದ್ಧಿಗೆ ನಿಲುಕದೇ ಜಾರಿಕೊಳ್ಳುತ್ತಿವೆ, ಮುಂದೆ ಬಂದ ಗಾಯಕಿ ಛಾಯಾ ಅವರಿಗೂ. ಅಂಥ ಗಹನವಾದ ಪದಗಳೂ ಅಲ್ಲ ಅವು. ನನಗೆ ಪರಿಚಯವಿಲ್ಲದ ಕಾರಣಕ್ಕೆ ಅಷ್ಟೆ. ಪ್ರತೀ ನೂರು ಕಿಲೋಮೀಟರು ದೂರದಲ್ಲಿ ಭಾಷೆ ತನ್ನ ಬಣ್ಣ ಬದಲಾಯಿಸುತ್ತದೆಯೇನೊ, ಅದು ಪ್ರಾದೇಶಿಕ ಭಿನ್ನತೆ. ಸದರಿ ಹಾಡನ್ನು ಹಠಕ್ಕೆ ಬಿದ್ದವನಂತೆ, ಹತ್ತಾರು ಬಾರಿ ಕೇಳಿ ಕೇಳಿ ಸೋತು, ಕಡೆಗೆ ಬೆಳಗಾವಿ ಮೂಲದ ಗೆಳೆಯ ಪಾರ್ಶ್ವನಾಥ ಕೆಂಪಣ್ಣನವರನ್ನು ಮೊರೆಹೋಗಬೇಕಾಯಿತು, ಸದರಿ ಹಾಡಿನ ಮೂಲ ಸಾಹಿತ್ಯಕ್ಕೆ. ಮುಂದಿನ ತಲೆಮಾರಿನವರಿಗೆ ಅದು ಮೂಲ ಸ್ವರೂಪದಲ್ಲಿ ದಕ್ಕಲಿ ಎಂಬ ಕಾರಣಕ್ಕೆ –

*ಬೆಳ್ಳನ್ನ ಬೆಳಗಾಯ್ತು ಬೆಳ್ಳನ್ನ ಬೆಳಗಾಯ್ತು*
*ಏಳೆನ್ನ ಚೇತನ ಚೆಲುವ ಏಳೆನ್ನ ಚೇತನ ಚೆಲುವ*

*ಆಕಳಿಸುವದುಂಟೆ ಆಕಳಕರು ಬಿಟ್ಟೆ!*
*ಓ ಕಳೆ ಕಂಡೆವಾ ಆ ಕಳೆ ಹಿಂಡುವಾ!*

*ಎದ್ದಾವ ಎಳೆದುಂಬ ಸೀಮುದ್ದೆ ತಾತುಂಬ*
*ಗೆಲವಿನ ಗೆಜ್ಜೆಲಂಬ ತುತ್ತುರ್ಸಿ ಹಿಡಿಕೊಂಬ!*

*ಕಿತ್ತೂರ ಹೊಸಬಾಳೆ ಸಕ್ಕರೆ ರಸಬಾಳೆ!*
*ಹಿಂಡಿದ ನೊರೆಹಾಲು ದಂಡೀನ ದೊರೆ ಪಾಲು!*

*ಏಳೆನ್ನ ಚೇತನ ಚೆಲುವ ಏಳೆನ್ನ ಚೇತನ ಚೆಲುವ*
*ಬೆಳ್ಳನ್ನ ಬೆಳಗಾಯ್ತು ಬೆಳ್ಳನ್ನ ಬೆಳಗಾಯ್ತು*

ಆಗಲೇ ಪ್ರಸ್ತಾಪಿಸಿದಂತೆ, ದೊಡ್ಡಾಟದ ಕಲಾವಿದರ ಮನೆತನದಲ್ಲಿ ಹುಟ್ಟಿ ಬೆಳೆದ ಪ್ರಯುಕ್ತವೇನೊ, ನನ್ನ ಕಾಕಾ ಪ್ರತಿ ಬಯಲಾಟದ ಆರಂಭದಲ್ಲಿ ಹಾಗೆ ಪ್ರಾರ್ಥನಾ ರೂಪದ ಕಂದಪದ್ಯವೊಂದನ್ನು ಏರುಸ್ವರದಲ್ಲಿ ಕೋಚು ಹಾಕಿ ಹಾಡುತ್ತಿದ್ದ ಗೀತೆ ಸದಾ ಗುದ್ದಿಕೊಂಡು ಬರುತ್ತಿತ್ತು, ನನ್ನ ಮನಸ್ಸಿನೊಳಗೆ. ಅದು –

*ಪೊಡವಿಯೊಳ್ಕೊಡು ತನಯಾ,*
*ಒಡೆಯ ಭೀಮೇಶನ್ನಾ!*
*ಬಿಡದೇ ಭಜಿಪೆವು ನಾವ್,*
*ಕೊಡುಯೆಮಗೆ ವರವಾ॥*

ಆ... ಆ... ಎಂದು ಇಷ್ಟಗಲ ಬಾಯಿ ಬಿಟ್ಟುಕೊಂಡು, ಕೈಯಲ್ಲಿ ಕಡುಬಿನ ಗಾತ್ರದ ಕಂಚಿನ ತಾಳ ಕಟಕಟದು ಬಯಲಾಟದ ಅಟ್ಟದ ಮೇಲೆ ಕುಣಿದಾಡಿಕೊಂಡು ಹಾಡುತ್ತಿರಬೇಕಾದರೆ, ನಾವುಗಳು ಕೇವಲ ಕಿವಿ-ಬಾಯಿ ಗಳಷ್ಟೇ ಅಲ್ಲ, ನಮ್ಮ ಸಕಲ ಇಂದ್ರಿಯಗಳನ್ನು ಏಕು ಮಾಡಿ ತೆರೆದಿಟ್ಟುಕೊಂಡು ಅವರತ್ತ ಗಮನ ಹರಿಸುತ್ತಿದ್ದೆವೆನ್ನಿರಿ. ಅದೆಲ್ಲ ಸರಿ, ಈ 'ಕೊಡುತನಯಾ' ಅಂದರೆ ಯಾರಿವನು ಎನ್ನುವದು ಒಂದೇ ಸಮ ತಲೆ ತಿನ್ನುತ್ತಿತ್ತು.

ನಾನು ಮುಂದೊಂದು ದಿನ, ಸಾಹಿತ್ಯ ವಿದ್ಯಾರ್ಥಿಯಾಗಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಎಂ.ಎ. ಮಾಡಲು ಸೇರಿದಾಗಲೇ ಗೊತ್ತಾಗಿದ್ದು, ಅದು 'ಕೊಡುತನಯಾ' ಆಗಿರದೇ 'ಕುಡಿತಿನಿಯ' ಎಂದು. ಕುಡುತಿನಿಯ ಭೀಮೇಶ ಅನ್ನುವವನು ಬಯಲಾಟದ ಸದರೀ ಭೀಮಕವಿ ಬಳ್ಳಾರಿ ಜಿಲ್ಲೆಯಲ್ಲಿ ಬರುವ ಕುಡಿತಿನಿ ಎಂಬೋ ಊರಿನವನು ಎಂದು ಅಷ್ಟೊತ್ತಿಗಾಗಲೇ ಸಂಶೋಧಕ-ವಿದ್ವಾಂಸರು ತಿದ್ದಿ ತೀಡಿ ದಾಖಲಿಸಿದ್ದರು. ಅದು ಬೇರೆ ಮಾತು. ಹಳ್ಳಿಯ ಅನ್‌ಪಢ್ ಜನಗಳ ಬಾಯಲ್ಲಿ ಅದು 'ಕೊಡು ತನಯ' ಆಗಿತ್ತು. ಇರಲಿ, ಸಂಶೋಧಕರಿಗೆ ಇನ್ನೇನು ಕೆಲಸ ? ಇದು ಕೂಡ ಅವರದೇ ಬಾಬತ್ತು! ಊರಿಗೆ ಹೋದಾಗ ಬಯಲಾಟದ ನನ್ನ ಕಾಕಾ-ಚಿಕ್ಕಪ್ಪಗಳಿಗೆ ಇಂಗಿಂಗೆ ಎಂದು ಅದನ್ನು ವಿವರಿಸಿ ಹೇಳಿ ತಿದ್ದಿಕೊಳ್ಳಲು ತಿಳಿಸಿದ್ದೆ. ನಮ್ಮ ಬಾಲ್ಯ ಕಾಲ ವೆಂದರೆ ಕರತಲ ರಂಗಭೂಮಿಯಾಗಿದ್ದ ಪುಸ್ತಕಗಳೇ ನಮ್ಮ ಒಡನಾಡಿಗಳಾಗಿದ್ದ ಕಾಲ, ಅದು. ಈಗಿನ ಕಾಲದ ಯುವಜನಾಂಗದ ಕೈಯಲ್ಲಿ ತರಾವರೀ ಮೊಬೈಲುಗಳಿದ್ದಂತೆ ನಾವು ದಪ್ಪ ದಪ್ಪ ಪುಸ್ತಕ ಹಿಡಿದು ಓಡಾಡುವುದರಲ್ಲಿಯೇ 'ಸಮಾನರಾರಿಹರು, ಎಮ್ಮ ಸಮಾನರಾರಿಹರು...' ? ಎಂದು ಬೀಗುತ್ತಿದ್ದೆವು!

ಅಂದ ಹಾಗೆ, ಈ 'ಕುಡಿತಿನಿ' ಎಂಬೋ ಊರಿನ ಬಗ್ಗೆ ಪ್ರಸಂಗವೊಂದು ನೆನಪಾಗುತ್ತದೆ. ಬೆಂಗಳೂರಿನಲ್ಲೇ ಬೇರು ಬಿಟ್ಟಿದ್ದ ಉದ್ಯೋಗ ವಿನಿಮಯ ಅಧಿಕಾರಿಯೊಬ್ಬ ಸೇವಾವಧಿಯ ಕೊನೆಯ ದಿನಗಳಲ್ಲಿ ಬೆಂಗಳೂರಿನಿಂದ ವರ್ಗವಾಗಿ ಬಳ್ಳಾರಿಯ ಜಿಲ್ಲಾ ಉದ್ಯೋಗ ವಿನಿಮಯ ಕಛೇರಿಗೆ ಬಂದು ಬಿದ್ದ ಹೊಸತು. ಒಂದು ದಿನ ಬೆಳಿಗ್ಗೆ ತನ್ನ ಛೇಂಬರಿಗೆ ನುಗ್ಗಿದ್ದ ಇಬ್ಬರು ಹುಡುಗರತ್ತ 'ಎಲ್ಲಿಂದ ಬಂದಿರಿ, ಯಾಕಾಗಿ ಬಂದಿರಿ'? ಎನ್ನುವಂತೆ ಅವರತ್ತ ತಲೆ ಎತ್ತುತ್ತಿದ್ದಂತೆಯೇ ಅವರಲ್ಲೊಬ್ಬ ಒಂದೇ ಉಸಿರಿಗೆ 'ಕುಡಿತಿನ್ರಿ ಸರ್ರಾ' ಅಂದ.

ನೀನು ಅನ್ನುವಂತೆ, ಪಕ್ಕದಲ್ಲಿದ್ದವನತ್ತ ತಿರುಗಿದರೆ ಅವ 'ನಾನೂ ಕುಡಿತಿನ್ರಿ ಸಾರು' ಅನ್ನ ಬೇಕೆ! "ಎಲಾ ಇವರಾ, ಬೆಳಿಗ್ಗೇನೆ ನನ್ನೆದುರು ಬಂದು ನಿಂತು ಕುಡಿತೀವಿ ಕುಡಿತೀವಿ ಅಂತಾರಲ್ಲೋ ಈ ನನ ಮಕ್ಕಳು" ಎಂದು ಅರಚಿ, ಬೆಲ್ಲು ಒತ್ತಿ ಅವರನ್ನು ಒಳಗೆ ಬಿಟ್ಟ ದಲಾಯತನನ್ನು ಕೂಗಿ ಕರೆದಿದ್ದರು, ಆ ಅಮಾಯಕ ಹುಡುಗರನ್ನು ಹೊರಗೆ ದಬ್ಬುವದಕ್ಕೆ. ಸಾಹೇಬರು ಅಕಾರಣವಾಗಿ ಹೀಂಗ್ಯಾಕೆ ನಿಗರ್ಯಾಡುತ್ತಾರೆಂದು ಆ ಹುಡುಗರೋ ಕಕ್ಕಾವಿಕ್ಕಿ!

ಮತ್ತೇ ಸಂಗೀತ ಪ್ರಪಂಚದತ್ತ ಬರುತ್ತೇನೆ, ಬನ್ನಿರಿ. ಸಂಗೀತ ವಿದುಷಿ ಗಂಗೂಬಾಯಿ ಹಾನಗಲ್ಲು ಮತ್ತು ಪಂ. ಭೀಮಸೇನ ಜೋಶಿ ಹಿಂದೂಸ್ತಾನಿ ಗಾಯನದಲ್ಲಿ ಭಾಳಾ ದೊಡ್ಡ ಹೆಸರು ಮಾಡಿದವರು. ಬಾಯಿಯೋರು ಶುದ್ಧ ಕಿರಾಣಾ ಘರಾನಾದಲ್ಲಿ ಸಿದ್ಧಹಸ್ತರಾದರೆ, ಜೋಶಿ ಹಿಂದೂಸ್ತಾನಿ ಗಾಯನದ ಜತೆಗೇ ದಾಸರ ಕೀರ್ತನೆಗಳನ್ನೂ ಮರಾಠಿ ಅಭಂಗಗಳನ್ನೂ ಹಾಡುವ ಮೂಲಕ ಜನಪ್ರಿಯತೆ ಗಳಿಸಿದ್ದವರು. ಅದನ್ನು ಸ್ವತಃ ಜೋಶಿಯವರೇ ಒಪ್ಪಿಕೊಂಡಂತೆ, "ಅಕ್ಕಾವರೆ ನಿಮ್ಮದು ಶುದ್ಧ ಕಿರಾಣಾ ಘರಾನಾ ಅದ. ಆದರೆ ನಂದು ಏನಿದ್ರೂ ಕಿರಾಣಿ ಅಂಗಡಿ ನೋಡ್ರೀ..." ಎಂದು ನಗಾಡಿ ಸ್ವಯಂ ವಿಮರ್ಶೆಗೆ ಒಡ್ಡಿಕೊಳ್ಳುತ್ತಿದ್ದರಂತೆ. ಆದರೆ ಯಾಕೋ ಏನೋ ಜೋಶಿ ಕನ್ನಡದ ಕೀರ್ತನೆಗಳನ್ನು ಹಾಡುವಲ್ಲಿ ತೋರಿದ ಉಮೇದನ್ನು ವಚನಗಳನ್ನು ಹಾಡುವಲ್ಲಿ ತೋರಲಿಲ್ಲ. ಅದ್ಯಾರೋ ಬಾಯಿಬಿಟ್ಟು ಕೇಳಿದರೂ, "ವಚನಗಳು ಓದುವದಕ್ಕೆ ಇರುವದು. ಹಾಡುವದಕ್ಕೆ ಅಲ್ಲ" ಎಂದು ಬಾಯಿ ಬಡಿಯುತ್ತಿದ್ದರೆಂದು ಅವರ ಸಮಕಾಲೀನರ ಅಂಬೋಣ. ಇರಲಿ, ಅದನ್ನು ಪಕ್ಕಕ್ಕೆ ಇಟ್ಟು ನೋಡೋಣ. ಸರಿಸುಮಾರು ಅದಕ್ಕೂ ಹಿಂದೆಯೇ, ಒಮ್ಮೆ ಅ. ನ. ಕೃಷ್ಣರಾಯರು ಧಾರವಾಡಕ್ಕೆ ಹೋದಾಗ, ಹಿಂದೂಸ್ತಾನಿ ಗಾಯನದಲ್ಲಿ ದೊಡ್ಡ ಹೆಸರು ಮಾಡಿದ್ದ ಪಂ. ಮಲ್ಲಿಕಾರ್ಜುನ ಮನಸೂರರೊಂದಿಗೆ ವಾಯುವಿಹಾರಕ್ಕೆ ಹೋಗಿದ್ದ ಹೊತ್ತಿನಲ್ಲಿ, "ಅಮೂಲ್ಯವಾದ ವಚನಗಳನ್ನೇಕೆ ಸಂಗೀತಕ್ಕೆ ಅಳವಡಿಸಬಾರದು" ಎಂದು ಸ್ವತಃ ಒಂದು ಮಟ್ಟಿನಲ್ಲಿ ಹಾಡಿ ತೋರಿಸಿ ಪುಸಲಾಯಿಸಿದಾಗ ಮನಸೂರರು ಅದಕ್ಕೆ ಮನಸಾರೆ ಒಪ್ಪಿ ಕನ್ನಡಿಗರ ಮನಸೂರೆಗೊಳ್ಳುವಂತೆ ಹಾಡುವಲ್ಲಿ ಒಲಿದದ್ದು, ಅದರ ಫಲವಾಗಿ ಅಪರೂಪದ ಕೆಲವು ವಚನಗಳನ್ನು ಅವರ ಕಂಠಮಾಧುರ್ಯದಲ್ಲಿ ನಾವು ಕೇಳುವಂತಾದದ್ದು ಇವತ್ತು ಇತಿಹಾಸ.

ಆರಂಭದ ಪ್ಯಾರಾದಲ್ಲಿ ನಾನು ಹೇಳಿದ್ದಂತೆ, ಈ ಸಂಗೀತ–ಸಾಹಿತ್ಯಗಳ ಸಾಹಚರ್ಯವೇ ಅತ್ಯದ್ಭುತವಾದದ್ದು. ಅಪರೂಪದ ಪ್ರಸಂಗವೊಂದು ನೆನಪಾಗುತ್ತದೆ. ಒಮ್ಮೆ ಕವಿ 'ಅಂಬಿಕಾತನಯದತ್ತ' ಅಂತಂತಂದ್ರ ನಮ್ಮ ಈ ದ. ರಾ. ಬೇಂದ್ರೆ ಅಂಬೋ ಕವಿ ರಸಿಕನನ್ನು ಕರೆತಂದು, ಭೀಮಸೇನ ಜೋಶಿ ಅವರ ಗಾಯನ ಕಾರ್ಯಕ್ರಮವೊಂದರಲ್ಲಿ ಮುಂದಿನ ಸಾಲಲ್ಲೇ ಕೂರಿಸಿದ್ದರು. ಕವಿ ತಲ್ಲೀನನಾಗಿ ಕೇಳುತ್ತ ಕೇಳುತ್ತಲೇ ಮೈಮರೆತು ತಲೆದೂಗುತ್ತಿತ್ತಂತೆ. ಕೊನೆಗೆ ಜೋಶಿ ಹಾಡುವದನ್ನು ಮುಗಿಸಿ, ವೇದಿಕೆಯಿಂದ ಇಳಿದು ಬಂದು ಕವಿಗೆ ಕೈಮುಗಿದು "ಹ್ಯಾಗಿತ್ತು ನಾ ಇವತ್ತು ಹಾಡಿದ್ದು...?" ಅಂದದ್ದಕ್ಕೆ, ಕವಿ ಭಾವಪರವಶನಾಗಿ, "ಅದೇನು ಕೇಳ್ತೀ? ರಾಗಗಳ ಜೋಡೀ ಕುಸ್ತಿ ಬಿದ್ದಿದ್ದಿ ಏನಪಾ. ಕಣದಾಗ ಕೆಲವೊಮ್ಮೆ ರಾಗ ಮ್ಯಾಲೆ ಆಗತಿದ್ರ ಮತ್ತೊಮ್ಮೆ ಭೀಮಸೇನ ಅವನ್ನು ಕೆಳಗ ಹಾಕಿ ಮ್ಯಾಲೆ ಬರತಿದ್ದ. ...ನೋಡತಾನ ಇದ್ನಿ. ಕಡೀಕ, ಹಾಂಗ ತೆಕ್ಕಿಮುಕ್ಕಿ ಬಿದ್ದ ಅವು, ಭೀಮಸೇನನ ಜೋಡೀ ನನ್ನ ಕಾಲ ಮುಂದ ಬಂದು ದೊಪ್ಪಂತ ಬಿದ್ದಬಿಡಬೇಕೇನ!?" ಅಂದಾಗ, ಸುತ್ತ ನಿಂತು ಕೇಳಿಸಿಕೊಂಡವರೆಲ್ಲರಿಗೂ ಥ್ರಿಲ್ಲೋ ಥ್ರಿಲ್ಲು!

ನನ್ನದೇನಿದ್ದರೂ ಧಾರವಾಡ–ಬೆಂಗಳೂರು ನಡುವೆ ಸಂಚರಿಸುವ ಜನಶತಾಬ್ದೀ ಎಕ್ಸ್‌ಪ್ರೆಸ್ ಇದ್ದ ಹಾಗೆ. ಲಾಳೀ ಹೊಡೆದಂತೆ ಇಲ್ಲೇ ಗಿರಕೀ ಹೊಡೆಯುವದು ನನ್ನ ಚಾಳಿ. ಈಗ ಮತ್ತೆ ಬೆಂಗಳೂರಿಗೆ ಬಂದೆ, ಬನ್ನಿರಿ. ನಮ್ಮ ಸಂಗೀತಗಾರರು 'ದಕ್ಷಿಣಾದಿ' ಎಂದು ಕರೆಯುವ ಈ ಕರ್ನಾಟಕ ಶೈಲಿಯ ಸಂಗೀತ ಪ್ರಕಾರಕ್ಕೆ ದಕ್ಷಿಣ ಭಾಗದಲ್ಲಿ ವಿಪುಲ ರಾಜಾಶ್ರಯ ಸಿಕ್ಕಿದ್ದಕ್ಕೇನೋ ವಿಶೇಷವಾಗಿ ಹಳೆ ಮೈಸೂರು ಮತ್ತು ತಮಿಳುನಾಡು, ಕೇರಳಗಳಂಥ ದಕ್ಷಿಣ ಭಾರತದಲ್ಲಿಯೇ ಹೆಚ್ಚು ಚಾಲ್ತಿಯಲ್ಲಿರುವದು ಕೇವಲ ಕಾಕತಾಳೀಯವಾಗಿರಲಿಕ್ಕಿಲ್ಲ. ತಮಿಳು ಬಾಂಧವರ ಬಾಯಲ್ಲಿ ಅಪರೂಪವೆಂಬಂತೆ 'ಅಡಿಸಿದಳೇ ಸೋದಾ ಸೋದಾ। ಜಗದೋ ದಾರನ...॥' ಏನಾಶ್ಚರ್ಯ, ಆರಂಭದಲ್ಲಿ ನನಗೆ ಏನಿದು ಸೋದಾ ಸೋದಾ ಎಂದು ಅರ್ಥವೇ ಆಗುತ್ತಿರಲಿಲ್ಲ. ನನ್ನ ಟ್ಯೂಬ್ ಲೈಟು ತಲೆಗೆ ನಿಧಾನವಾಗಿ ಹೊಳದಿತ್ತು. ಅದು ಯಶೋದೆ ಎಂದೂ, ನಮ್ಮ ಪುರಂದರ ದಾಸರ ಜನಪ್ರಿಯ ಹಾಡೆಂದೂ!

ಪ್ರತೀ ವರ್ಷ ಬೆಂಗಳೂರಿನ ಕೋಟೆ ಮೈದಾನಿನಲ್ಲಿ ಶ್ರೀರಾಮ ಸೇವಾ ಮಂಡಳಿಯಿಂದ ಬೃಹತ್ ಸಂಗೀತ ಸಮ್ಮೇಳನದ ಏರ್ಪಾಟು. ಅದಕ್ಕೆ ಬಹು ದೊಡ್ಡ ಇತಿಹಾಸವೂ ಇದೆ. ಹೊರ ರಾಜ್ಯಗಳಿಂದಲೇ ಅಧಿಕ ಪ್ರಮಾಣದಲ್ಲಿ ಪ್ರಸಿದ್ಧ ಸಂಗೀತಗಾರರೂ ವಿಶೇಷ ಆಸಕ್ತರೂ ಬಂದು ಭಾಗವಹಿಸುವದುಂಟು. ಆ ಕಾರ್ಯಕ್ರಮದಲ್ಲಿ ಹೆಸರಿಗೆ ಕರ್ನಾಟಕ ಶೈಲಿಯ ಸಂಗೀತ. ಹಾಡುವದೆಲ್ಲ ಅನ್ಯಭಾಷೆಯ ಕೀರ್ತನೆಗಳನ್ನು. ಅದಕ್ಕೆ ರೋಸಿಹೋದ ಅ. ನ. ಕೃಷ್ಣರಾಯರು ಮತ್ತು ಮ. ರಾಮಮೂರ್ತಿ ಅಂಥವರೆಲ್ಲ ಒಂದಾಗಿ ಇವರಿಗೆ ಪಾಠ ಕಲಿಸಲು ಪಣ ತೊಟ್ಟರು. ಕನ್ನಡಿಗರ ಯುವಪಡೆ ಕಟ್ಟಿಕೊಂಡು ಸಮ್ಮೇಳನ ನಡೆಯುತ್ತಿದ್ದ ಮೈದಾನಕ್ಕೆ ಲಗ್ಗೆ ಹಾಕಿದ ಪರಿಣಾಮವಾಗಿ, ಸಂಗೀತ ವಿದುಷಿ ಸುಬ್ಬುಲಕ್ಷ್ಮಿ ಅಂಥವರಿಂದಲೂ ನಂತರದ ವರ್ಷ ಬರುವಾಗ ಕನ್ನಡ ಕೀರ್ತನೆಗಳನ್ನು ತಪ್ಪದೇ ಹಾಡುವದಾಗಿ ಭಾಷೆ ತೆಗೆದುಕೊಳ್ಳಲಾಯಿತು.

ಅಂದ ಹಾಗೆ ಈ ತಮಿಳು ಸೋದರರ ಬಾಯಲ್ಲಿ ಕನ್ನಡ ಕೀರ್ತನೆ ಯಾವ ರೀತಿಯಲ್ಲಿ ಹರಿಹಾಯುತ್ತದೆ ಎನ್ನುವದಕ್ಕೆ ಒಂದು ಸುಂದರ ನಿದರ್ಶನವಿದೆ, ಬಲ್ಲಿರಾ? 'ಚಿಂತಿ ಯಾತಕೋ, ಬಯಲ ಭ್ರಾಂತಿ ಯಾತಕೋ ಮನುಜ' – ಇದು ಪುರಂದರ ದಾಸರ ಜನಪ್ರಿಯ ಕೀರ್ತನೆ. ತಮಿಳರ ಬಾಯಲ್ಲಿ 'ಚ'ಕಾರವು 'ಸ'ಕಾರವಾಗಿಯೂ 'ತ'ಕಾರವು 'ದ'ಕಾರವಾಗಿಯೂ ಉಗ್ಗಡಿಸಲ್ಪಡುತ್ತದೆ, ಗೊತ್ತಲ್ಲ. ಅದರ ಪರಿಣಾಮವಾಗಿ, ಕರ್ನಾಟಕ ಶೈಲಿಯ ಸಂಗೀತ ಪ್ರೇಮಿಗಳೆಲ್ಲ ಆಸ್ವಾದಿಸಲು ಕಾತರರಾಗಿ ಕೂತಿರುವಾಗ, 'ಸಿಂದಿಯಾ ದಗೋ, ಮನುಸ

ಬ್ರಾಂದಿಯ ದಗೋ...' ಎಂದು ಗಾನ ಸುಧೆ ಹರಿಯುತ್ತಿದ್ದರೆ ಹೇಗಿರುತ್ತದೆ! ಮುಂದೆ ಕೂತ ಮಡಿವಂತ ಮನಸ್ಸಿನ ಕೇಳುಗರಿಗೆ 'ಸಿಂದಿಯ ತಗೋ, ಬ್ರಾಂದಿಯ ತಗೋ ಮನುಸ' ಎಂದಂತೆ ಕೇಳಿಸಿ, ಸನಾತನಿಗಳೆಲ್ಲ ಅಮೇಧ್ಯ ಮೆಟ್ಟಿದವರಂತೆ ಅವರೆಲ್ಲ ಪರಸ್ಪರ ಮುಖ ಮುಖ ನೋಡಿಕೊಳ್ಳು ತ್ತಿದ್ದರು! ವೇದಿಕೆಯ ಮೇಲಿನ ಗಾಯಕರಿಗೆ ಸಾಥ್ ಕೊಡುವ ಪಿಟೀಲು ವಾದಕ ಬೇರೆ ಅದನ್ನೇ ಅನುಸರಿಸುವಂತೆ 'ಕುಂಯ್ಯೋ ಕುಂಯ್ಯೋ' ಎಂದು ಪರೋಕ್ಷವಾಗಿ 'ತಗೋ ತಗೋ' ಅನ್ನುವಂತೆಯೂ; ಪಕ್ಕ ವಾದ್ಯದ ಘಟವಾದಕನೂ ತನ್ನ ಶಿಖೆಯನ್ನು ಹಾರಾಡಿಸುತ್ತ 'ತರಿಕಿಟ ತಿಟಕಿಟ, ತರಿಕಿಟ ತಿಟಕಿಟ' ಎಂದು ಅದನ್ನು ಉತ್ತೇಜಿಸುತ್ತಿದ್ದ ರೀತಿ ಇನ್ನೂ ಮೋಜಿನದಾಗಿತ್ತು!

ದಕ್ಷಿಣಾದಿ ಸಂಗೀತದಲ್ಲಿ ಎಂ. ಎಸ್. ಸುಬ್ಬುಲಕ್ಷ್ಮಿ ಅವರಂತೆಯೇ ಆ ಸಂಗೀತ ಪರಂಪರೆಯಲ್ಲಿ ಎಂ. ಎಲ್. ವಸಂತಕುಮಾರಿ ಅವರದೂ ಅದೇ ಮುಂದುವರಿದ ಛಾಪು. ವಸಂತಕುಮಾರಿ ಅವರ ಕಂಠಮಾಧುರ್ಯದಲ್ಲಿ 'ಶ್ರೀಕಾಂತ ಎನಗಿಷ್ಟು ದಯಮಾಡೋ ತಂದೇ। ಏಕಾಂತದಲ್ಲಿ ನಿನ್ನ ಭಜಿಸುವ ಸೌಭಾಗ್ಯ।' – ಇದು ಮತ್ತೆ ಮತ್ತೆ ಕೇಳಬೇಕೆನ್ನುವ ಸುಮಧುರ ಕೀರ್ತನೆಯದು. ಅದರ ಮುಂದುವರಿದ ಸಾಲುಗಳಲ್ಲಿ 'ಧನದಾಸೆ ಕಾಗಿನ ಧನಿಕರ ಮನೆಗಳ, ಕೊನೆ ಬಾಗಿಲಲ್ಲೀ ನಿಂತು ತೋಳಲೀ ಬಳಲೀದೆನು' ಅನ್ನುತ್ತಾರೆ. ಇದೇನಿದು ಅನರ್ಥ? 'ತೋಳಲಿ ಬಳಲಿದೆನು' ಅಂದರೆ ಹೇಗೆ ಅನ್ನದಿರಿ. ಸಾಹಿತ್ಯಿಕ ಪದಗಳನ್ನು ಸಂಗೀತದ ಮಟ್ಟುಗಳಿಗೆ ಹಾಗೆ ಎರಕ ಹೊಯ್ಯುವಾಗ ಅಂಥ ಸಣ್ಣಪುಟ್ಟ ಎಡವಟ್ಟುಗಳೂ ಸರ್ವೇಸಾಮಾನ್ಯ...!

ಅದೇ ರೀತಿ ಇನ್ನೊಂದು ಕಡೆ, ಕೆ. ಜೆ. ಜೇಸುದಾಸರ ಬಾಯಲ್ಲಿ 'ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಕೇಳಿರಿ. 'ದೊರೆಯದಣ್ಣ' ಅನ್ನುವದನ್ನು ಅವರು ಬಾರಿ ಬಾರಿಗೆ 'ದೊರೆಯ ದಂಡ' ಅನ್ನುತ್ತಲೇ ಹೋಗುತ್ತಾರೆ, ಪಾಪ! ಅದನ್ನು ಕೇಳಿಸಿಕೊಂಡ ಬಲ್ಲ ಕನ್ನಡಿಗರಾದರೂ ಸ್ಟುಡಿಯೋದಲ್ಲಿ ರಿಕಾರ್ಡಿಂಗ್ ಆಗುವಾಗಲಾದರೂ ಅವರಿಗೆ ತಿಳಿಸಿ ಹೇಳಿ ತಿದ್ದಬಹುದಾಗಿತ್ತು. ಏನೇ ಆಗಲಿ, ಅದರಲ್ಲೂ ಗಾಯಕರು ಅನ್ಯಭಾಷಿಗರಾದರೆ ಅವರಿಗೆ ಒಂದಿಷ್ಟು ವಿನಾಯಿತಿ ನೀಡಬೇಕಾಗುತ್ತದೆ. ಸಂಗೀತಕ್ಕೆ ಭಾಷೆಯ ಹಂಗಿಲ್ಲವಲ್ಲ ಅಂಬೋ ಮಾತೂ ಸರ್ವಸಮ್ಮತವೇ. 'ಬಸವನೆಂದರೆ ಪಾಪ ದೆಸೆಗೆಟ್ಟು ಓಡುವದು...' ಎಂಬ ಸಾಲನ್ನು ಹಾಡುವವರು 'ಬಸವನೆಂದರೆ ಪಾಪ' ಎಂಬಲ್ಲಿಗೆ ನಿಲ್ಲಿಸಿ, 'ದೆಸೆಗೆಟ್ಟು ಓಡುವದು' ಎಂದರೆ ಹೇಗೆ? ಅರಿತೋ ಅರಿಯದೆಯೋ ಆಗುವ ಪ್ರಮಾದಗಳು ಅಂಬೋಣ. ತಮ್ಮ ಗಮನಕ್ಕೆ ಬಂದಾಗ ಪ್ರಾಜ್ಞರು 'ಹಾಗಲ್ಲ ಹೀಗೆ' ಎಂದು ಬಿಡಿಸಿ ಹೇಳಬೇಕಾದುದೂ ಅವರ ಕರ್ತವ್ಯವಲ್ಲವೆ?

ಅಂಥ ಎಡವಟ್ಟುಗಳನ್ನು ಎಸಗುವಲ್ಲಿ ಕನ್ನಡಿಗರೇನು ಹಿಂದೆ ಬಿದ್ದಿಲ್ಲ. ಪಂ. ಭೀಮಸೇನ ಜೋಶಿ ಅವರ ಮಾಸ್ಟರ್ ಪೀಸ್ ಅನ್ನಬಹುದಾದ 'ಯಾದವ ನೀ ಬಾ ಯದುಕುಲ ನಂದನ, ಮಾಧವ ಮಧುಸೂದನ ಬಾರೊ' ಎಂಬ ಪುರಂದರ ದಾಸರ ಕೀರ್ತನೆಯನ್ನು ಕೇಳದವರೇ ಇಲ್ಲವೇನೊ. ಮಧುಸೂದನನನ್ನು ಅವರು 'ಮದಸೂದನ' ಅಂದೇ ಹಾಡಿಕೊಂಡು ಹೋಗುತ್ತಾರೆ. ಕರ್ಣಮಾಧುರ್ಯದಲ್ಲಿ ತಲ್ಲೀನರಾದ ಯಾರಿಗೂ ಆ ಮದಸೂದನನ ಕಡೆಗೆ ಗಮನವೇ ಹರಿಯುವದಿಲ್ಲ. ಹಾಡುಗಾರರ ತಪಸ್ಸು ಏನಿದ್ದರೂ ಶ್ರುತಿಬದ್ಧ ಗಾಯನ, ಅಳವಡಿಸಿದ ರಾಗಗಳ ಲಯ(ನಡಿಗೆ)ದತ್ತ ಗಮನವಿರುತ್ತದೆಯೆ ಹೊರತು, ಸಾಹಿತ್ಯ, ಅದು ಧ್ವನಿಸುವ ಅರ್ಥದ ಕಡೆಗೆ ಅಷ್ಟಾಗಿ ಎಚ್ಚರ ಇರಲಾರದು.

ಪಂ. ಸಿದ್ಧರಾಮ ಜಂಬಲದಿನ್ನಿ ಅವರು ಸಿದ್ಧರಾಮೇಶನ ಕುರಿತ ಸ್ತೋತ್ರ ಗೀತೆ ಶರಣು ಶರಣಾರ್ಥಿ ಹಾಡುವಾಗ 'ಸಿದ್ಧರಾಮೇ ಶನಿಗೆ' ಅನ್ನುತ್ತಿದ್ದರು.

## ಗಲ್ಲು

ಗಲ್ಲಿಗೇರಿಸಿದರು
ಸೆರೆಮನೆಯಲ್ಲಿ
ಇಪ್ಪತ್ತೈದು ವರ್ಷಗಳ
ಶಿಕ್ಷೆ ಅನುಭವಿಸಿದ
ಖೈದಿಯ
ಆತ್ಮವಿಶ್ವಾಸವನ್ನು

**ಡಾ॥ ವಿ. ಪುಗಳೇಂದಿ**
'ವಿವೇಕ್ ಮ್ಯಾನ್ಷನ್', ಸಂಖ್ಯೆ ೪೬೭
ನಾಗಭೂಷಣ ಲೇಔಟ್, ವಿಜಯವಿಠಲನಗರ
ಸಿರಗುಪ್ಪ – ೫೮೩ ೧೨೧ ಬಳ್ಳಾರಿ ಜಿಲ್ಲೆ

'ಸಿದ್ಧರಾಮ' ಒಂದು ಕಡೆಗೆ, 'ಶನಿ' ಒಂದು ಕಡೆಗೆ. ತಿಳಿಸಿ ಹೇಳಿದಾಗ ತಮ್ಮ ತಪ್ಪಿನ ಅರಿವಾಗಿ, "ಹೀಂಗೇನು? ಹಂಗಾರ ಇನ್ನ ಮುಂದ 'ಶನಿ' ಬದಲು 'ಅಯ್ಯ ಅಯ್ಯ' ಅಂದ್ರಾಯ್ತು, ಸಿದ್ಧರಾಮೇಶಯ್ಯನಿಗೆ" ಎಂದು ತಿದ್ದಿಕೊಂಡರು. ಬೇಂದ್ರೆ ಅವರ ಧಾರವಾಡ ಕನ್ನಡದ ಸರಿಯಾದ ಪರಿಚಯವಿಲ್ಲದವರು ಅವರ 'ತುಂಬಿ ಬಂದಿತ್ತ' ಹಾಡನ್ನು ಕೆಲವರು 'ತುಮ್ ತುಮ್ ತುಮ್ ತುಮ್' ಎಂದರೆ, ಮತ್ತೆ ಕೆಲವರು 'ತುಮ ತುಮ ತುಮ ತುಮ' ಅನ್ನುತ್ತಾರೆ. ಅವರವರ ಭಾವಕ್ಕೆ, ಅವರವರ ಬಾಯಿಗೆ ಬಂದಂತೆ, ಭೇಷ್!

ಜಾನ್ ಹೆನ್ರಿ ನ್ಯೂಮ್ಯಾನ್ ಬರೆದ ಜಗತ್ಪ್ರಸಿದ್ಧ 'ಲೀಡ್ ಕೈಂಡ್ಲೀ ಲೈಟ್' ಕ್ಲಾಸಿಕ್ ಕವಿತೆಯ ಸೊಗಸಾದ ಭಾವಾನುವಾದ, ಬಿ.ಎಂ.ಶ್ರೀ. ಅವರ 'ಕರುಣಾಳು ಬಾ ಬೆಳಕೆ...' ಯಾರಿಗೆ ಗೊತ್ತಿಲ್ಲ!

ಹೇಳಿ ನನ್ನಡಿಯಿಡಿಸು ಬಲು ದೂರ ನೋಟವನು,
ಕೇಳೆನೊಡೆಯನೆ ಸಾಕು ನನಗೊಂದು ಹೆಜ್ಜೆ
ಮುನ್ನ ಇಂತಿರದಾದೆ ನಿನ್ನ ಬೇಡದೆ ಹೋದೆ, ಕೈ ಹಿಡಿದು ನಡೆಸೆನ್ನನು...!

ಕೆಲವು ಹಾಡುಗಾರರ ಬಾಯಲ್ಲಿ 'ಕೇಳೆನೊಡೆಯನೆ' ಹೋಗಿ 'ಕೇಳಿ ದೊಡನೆಯೆ' ಆಯ್ತು; ಮತ್ಯಾರದೊ ಬಾಯಲ್ಲಿ 'ಕೇಳನೊಡನೆಯೆ' ಆಯ್ತು; 'ಮುನ್ನ ಇಂತಿರದಾದೆ' ಬದಲಿಗೆ 'ಮೊನ್ನೆ ಇಂತಿರದಾದೆ', ಮತ್ತ್ಯಾರದೊ ಬಾಯಲ್ಲಿ 'ಮುಂದೆ ಇಂತಿರದಾದೆ' ಆಯ್ತು. ಬಾಯಿಗೆ ಸಿಕ್ಕಂತೆ ಬಾಯ್ದಂಬುಲ. ಕಾಪೀ ಮಾಡಿಕೊಳ್ಳುವವರ ಅಜಾಗರೂಕತೆಯಿಂದಾಗಿ ಆದ ಅವಾಂತರಗಳವು ಅನ್ನಬಹುದೇನೊ. ಇವು ಕೆಲವು ಸ್ಯಾಂಪಲ್ಲುಗಳಷ್ಟೆ!

ಬಾಲ್ಯದಲ್ಲಿ ನಮ್ಮ ಊರಿನ ಸರಕಾರೀ ಶಾಲೆಯನ್ನು 'ಸಾಲೀಗುಡಿ' ಎಂದೇ ಕರೆಯುತ್ತಿದ್ದುದು ವಾಡಿಕೆ. ಆ ಕಾಲದಲ್ಲಿ ಬರೀ ಮಣ್ಣಿನ ಮನೆಗಳೇ ಇರುತ್ತಿದ್ದ ಕಡೆ, ಪ್ರಶಸ್ತವಾದ ಬಯಲಲ್ಲಿ ಕಾಂಕ್ರೀಟು ಹಾಕಿ, ಕಲ್ಲಿಂದ ಕಟ್ಟಿ – ಗಿಲೀಟು ಮಾಡಿದ್ದ ಹೊಸ ಕಟ್ಟಡ ಸಹಜವಾಗೇ ಊರವರ ಕಣ್ಣು ಕುಕ್ಕುತ್ತಿತ್ತು. ಬೇಸಿಗೆಯ ರಜಾದಿನಗಳಂದು, ತಿಂಗಳಾನುಗಟ್ಟಲೆ ಮುಚ್ಚಿದಾಗ, ಸದರಿ ಶಾಲೆಯ ಅಂಗಳ–ಬಯಲು ಸ್ಥಳೀಯರಿಗೆ ರಾಶಿ ಮಾಡುವ ಕಣದಂತೆಯೋ; ಊರಿಗೆ ಬರುವ ಬೀಗರಿಗೆ ಇಳಿದುಕೊಳ್ಳಲು ಛತ್ರದಂತೆಯೋ ಶಾಲಾಕಟ್ಟಡದ ಸದ್ಬಳಕೆಯಾಗುತ್ತಿದ್ದುದುಂಟು. ಇಷ್ಟೇ ಆಗಿದ್ದಿದ್ದರೆ ಅದಕ್ಕೆ ಯಾರದೇನೂ ತಕರಾರು ಇರಲಿಲ್ಲ. ಕಾಲಕ್ರಮೇಣ ಊರಿನ ಕೆಲಸವಿಲ್ಲದ 'ರಿಕಾಮೀ ಅಧಿಕಾರಿಗಳು' ಹೆಡ್‌ಮಾಸ್ತರರ ಸ್ನೇಹ ಗಳಿಸಿ, ಪೂಸಿ ಮಾಡಿ ಕೀ ಪಡೆದು, ಶಾಲಾ ಕಟ್ಟಡದೊಳಗೆ ಹಾಡುಹಗಲೇ 'ಭಜನಾ ಮಂಡಳಿ' ಆರಂಭಿಸಿ ಬಿಟ್ಟಿದ್ದರು. ಹೊರ ಊರಿಂದ ಯಾರಾದರು ಹುಡುಕಿಕೊಂಡು ಬಂದರಾದರೆ, ಮನೆಯ ಹೆಂಗಸರು "ಹೋಗ ಲೋ, ಅಲ್ಲಿ ನಿಮ್ಮ ಮಾಮಾ ಸಾಲೀಗುಡ್ಯಾಗ ದುಂಡಗ ಕುಂತಾವರ ನಡುವ ಇರತಾನು, "ಯಾರೊ ಬಂದಾರ ನಿನ್ನ ಕೇಳಿಕಂಡು' ಅಂತಾ ಹೇಳಿ ಕರಕೊಂಡು ಬಾ", ಎಂದು ಹೇಳಿ ಮನೆಯ ಹುಡುಗರನ್ನು ಓಡಿಸುತ್ತಿದ್ದರು. ತುಸು ಬುದ್ಧಿವಂತ ಓದುಗರಾದರೆ ನಿಮಗೀಗಾಲೇ ವಸ್ತುಸ್ಥಿತಿ ಅರ್ಥವಾಗಿರಬೇಕು.

'ಕಲೆ ಎಲ್ಲರನ್ನೂ ಕೈಬೀಸಿ ಕರೆಯುತ್ತದೆ, ಆದರೆ ಕೆಲವರನ್ನೇ ಆರಿಸಿ ಕೊಳ್ಳುತ್ತದೆ' – ಇದು ಅ. ನ. ಕೃಷ್ಣರಾಯರ ಜನಪ್ರಿಯ ಉಕ್ತಿ. ಈ ಮಾತು ರಂಗಭೂಮಿಗೆ ಸರಿಯಾಗಿ ಅನ್ವಯವಾಗುವಂಥದ್ದು. ಪುಸ್ತಕವನ್ನು ಕರತಲ ರಂಗಭೂಮಿ ಎಂದೇನೋ ಕರೆಯುತ್ತಾರೆ. ವಿದ್ಯೆಯ ಗಂಧಗಾಳಿ ಇಲ್ಲದ ಕಾಲದಲ್ಲಿ ಜನರ ಮನೋಭೂಮಿಕೆಯನ್ನು ಆಳುತ್ತಿದ್ದುದೇ ರಂಗಭೂಮಿ. ನಮ್ಮಮ್ಮ ಚಡ್ಡಿ ನಮಗೇ ಹಾಕಿಕೊಳ್ಳಲು ಬಾರದ ದಿನಗಳಲ್ಲಿ, ಹಳ್ಳಿಯ ಬಾಳಲ್ಲಿ ಮನರಂಜನೆಯ ಮೂಲಕ ಇರುವ ಕಲಿಕಾ ತಾಣಗಳೆಂದರೇನೇ ನಾಟಕಗಳು. ಆ ಕಾಲದಲ್ಲಿ ಊರಿನ ಹುಡುಗರು ಒಂದು ನಾಟಕ ಹಚ್ಚಿದರೆಂದರೆ – ಪಾತ್ರಧಾರಿಗಳು ನಿಜ ಜೀವನದಲ್ಲೂ ನಾಯಕ–ನಾಯಕಿಯರಂತೆ ಭ್ರಮಿಸುತ್ತ 'ಎಮ್ಮ ಸಮನರಾರಿಹರು' ಎಂಬಂತೆ ಬೆಳಗಾಗುವುದರೊಳಗಾಗಿ

ಊರಿನ ಮಹಾನ್ ಕಲಾವಿದರಾಗಿ ರೂಪುಗೊಂಡವರಂತೆ, ಅದೇ ಗುಂಗಿನಲ್ಲಿ ತಿರುಗಾಡುತ್ತ ಸೆಲೆಬ್ರಿಟಿಗಳಾಗಿ ಬೀಗುತ್ತಿದ್ದರೆ, ಇನ್ನು ನಾಟಕ ನೋಡಿದವರೂ ಅಷ್ಟೇ. ನಾಟಕದ ದೃಶ್ಯಾವಳಿ, ಹಾಡು-ಡೈಲಾಗುಗಳನ್ನು ಧ್ಯಾನಿಸುತ್ತ ವರ್ಷವಿಡೀ ಬಾಯಿ ಚಪ್ಪರಿಸುತ್ತಿದ್ದರು ಹಳ್ಳಿಯ ಕಲಾರಸಿಕರು !

ಆ ಕಾಲದಲ್ಲಿ ಅಕ್ಷರವಂತನಲ್ಲದಿದ್ದರೂ ನನ್ನ ಅಪ್ಪ, ಸ್ವಯಂರೂಪಿತ, ಜರ್ಬಾಗಿ ಬೆಳೆದ ಕಲಾವಿದನಾಗಿದ್ದ. ಆತನ ದ್ರೌಪದಿಯ ಪಾತ್ರ ನೋಡಿದವರು ಥೇಟು ನನ್ನ ಸೋದರತ್ತೆ ಹನುಮಮ್ಮನ ತಂಗಿಯನ್ನೇ ವೇದಿಕೆಯ ಮೇಲೆ ನೋಡಿದ ಹಾಗಾಯಿತೆಂದು ಹಣ್ಣಾದ ತಲೆಗಳು ಮೆಲುಕು ಹಾಕುತ್ತಿದ್ದವು. ಅಂಥಾ ಚೆಲುವಿಕೆಯ ಹೋಲಿಕೆ! ಅದಷ್ಟೇ ಅಲ್ಲ, ಊರವರು 'ಪೇಟೀ ಮಾಸ್ತರ' ಎಂದೇ ನನ್ನ ಅಪ್ಪನನ್ನು ಅನುಗಾಲ ಗುರುತಿಸುತ್ತಿದ್ದರು. ಬೆಂಗಳೂರಿಗೆ ಬಂದ ಆರಂಭದ ದಿನಗಳಲ್ಲಿ, ಊರಿಗೆ ಹೋದಾಗಲೆಲ್ಲ ಮ್ಯಾಗಳ ಕೇರಿಯ, ಈಗ ಮುದುಕರಾಗಿ ಕೂತಿದ್ದ ಸದರಿ ಮರಿಯಪ್ಪ, ದುರುಗಪ್ಪ ಅವರವಿತ್ತೀಚಿನವರೆಗೂ ನನ್ನ ಗುರ್ತು-ಖೂನ ಹಿಡಿದು 'ನಮ್ಮ ಮಾಸ್ತರ ಮಕ್ಕಳು ಅಲ್ರೆಪ್ಪಾ, ಯಾವಾಗ ಬಂತು ಬೆಂಗಳೂರು ?' ಎಂದು ಅದೇ ಕಕ್ಕುಲಾತಿ ಬೆರೆಸಿ ಮಾತನಾಡಿಸುತ್ತಿದ್ದರು. ಈಗ ಅವರೂ ಇಲ್ಲ, ನನ್ನ ಅಪ್ಪನೂ ಇಲ್ಲ. ಕಳೆದುಕೊಂಡಾಗಲೇ ಅದರ ಬೆಲೆ ಗೊತ್ತಾಗುವುದು !

ಸರಿ. ಅದೇ ಆಗ, ನಾನಿನ್ನೂ ಅ ಆ ಇ ಈ ತೀಡುತ್ತಿದ್ದ ದಿನಗಳಲ್ಲಿ, ಸದರಿ ಮ್ಯಾಗಳ ಕೇರಿಯಲ್ಲಿದ್ದ ಮರಿಯಮ್ಮನ ಗುಡಿಯಲ್ಲಿ ಪೌರಾಣಿಕ ನಾಟಕವನ್ನು ಕಲಿಸಲು ಸಂಜೆ ಅಪ್ಪನ ನಿತ್ಯ ಸವಾರಿ ಹೊರಡುತ್ತಿತ್ತು. ಅಪರೂಪಕ್ಕೆ ನನ್ನನ್ನೂ ಒಮ್ಮೊಮ್ಮೆ ಕರೆದೊಯ್ಯುತ್ತಿದ್ದ. ಮೊದಲೇ ಊರ ಹೊರಗಿನ ಕೇರಿಯ ಕಲಾವಿದ ರವರು. ಯಾರೂ ಸಾಲೀಗುಡಿ ಕಲ್ಲನ್ನು ಮುಟ್ಟಿದವರಲ್ಲ. ಅಕ್ಷರವಂತರಲ್ಲಿ ಕಾಡಿ ಬೇಡಿ ಡೈಲಾಗುಗಳನ್ನು ಓದಿಸಿಕೊಂಡು ಬಾಯಿಪಾಠ ಮಾಡಿಕೊಂಡವರು. ಅಪ್ಪ ಲೆಗ್ ಹಾರ್ಮೋನಿಯಂ ತುಳಿಯುತ್ತ, ಎರಡೂ ಕೈಯಲ್ಲಿ ನುಡಿಸುತ್ತ, ಕೆಲವೊಮ್ಮೆ ಸ್ವತಃ ತಾನೂ ಹಾಡುತ್ತ ನಾಟಕ ಕಲಿಸುವ ಪರಿ ನನಗೆ ಕುತೂಹಲಕಾರಿಯೂ ಮೋಜಿನದೂ ಆಗಿರುತ್ತಿತ್ತು. ಡೈಲಾಗು ತಪ್ಪು ಹೇಳಿದಾಗ ಬಡಿಯಲು ಪಕ್ಕದಲ್ಲಿಯೇ ಕಂಬದ ಬಳಿ ಬಿದಿರಿನ ಕೋಲೊಂದು ಇರುತ್ತಿತ್ತು. ಬಡಿದು ಬಡಿದು ಅದಾಗಲೇ ಸುಮಾರು ಸಿಬುರು ಕಿತ್ತಿತ್ತು, ಇರಲಿ.

ಹೇಳೀ ಕೇಳಿ ಪೌರಾಣಿಕ ನಾಟಕವೆಂದು ಆಗಲೇ ಹೇಳಿದೆ. 'ರುಸಿಮುನಿ' ಪಾತ್ರಧಾರಿಗೆ ಅದೆಷ್ಟು ಬಾರಿ ಕಲಿಸಿದರೂ ನಾಲಿಗೆ ಹೊರಳುತ್ತಿದ್ದಿಲ್ಲ, ಬಡಪಾಯಿಗೆ. ಆತನ ಬಾಯಲ್ಲಿ ಯಾವಾಗಲೂ ಎರಡು ಪದಗಳು ಏಕಾಏಕಿ ಕೈಕೊಡುತ್ತಿದ್ದವು. ಒಂದು 'ಓಂ ತತ್‌ಸತ್' ಆದರೆ, ಮತ್ತೊಂದು 'ತೊಲಗಿಲ್ಲಿಂದ'. ಆತನ ಪ್ರವೇಶವಾದೊಡನೆ ಇಲ್ಲಾ ಪರದೆ ಸರಿದ ಒಡನೆ, ಪದ್ಮಾಸನದಲ್ಲಿ ಕೂತು ಕಣ್ಮುಚ್ಚಿ ಶಾಂತ ಮುಖಮುದ್ರೆಯಲ್ಲಿ ನಿಧಾನವಾಗಿ ಬಾಯಿ ತೆರೆದು 'ಓಂ ತತ್ಸತ್' ಎಂದು ಉಚ್ಚರಿಸಬೇಕಿತ್ತು. ಎಲ್ಲವನ್ನೂ ಸರಿಯಾಗಿ ಮಾಡುತ್ತಿದ್ದ. ಡೈಲಾಗು ಹೇಳುವಾಗ ಮಾತ್ರ ಕೊನೆಯಲ್ಲಿ ಮೈಮರೆತು, 'ಓಂ ಸತ್‌ಸತ್' ಎಂದುಬಿಡುತ್ತಿದ್ದ. 'ತತ್ ಸತ್, ತತ್ ಸತ್' ಎಂದು ಹತ್ತಾರು ಬಾರಿ ಬಾಯಿಪಾಠ ಮಾಡಿಸಿದ್ದರೂ, ಅದೇನು ಮಾಯವೋ 'ಸ'ಕಾರವೇ ಮೊದಲು ಆತನ ಬಾಯಿಗೆ ಬಂದುಬಿಡುತ್ತಿತ್ತು. ಅದೇ ರೀತಿ, 'ತೊಲಗಿಲ್ಲಿಂದ' ಪದವೂ ಬಾರಿ ಬಾರಿಗೆ ಕೈಕೊಡುತ್ತಿತ್ತು. ಆತ ಪ್ರತಿ ಬಾರಿಯೂ ನಿರ್ದಾಕ್ಷಿಣ್ಯವಾಗಿ 'ತೊಗಲಿಲ್ಲಿಂಗ' ಅಂದು ಬಿಡುತ್ತಿದ್ದ. ಅವರು ಊರವರ ಸತ್ತ ದನಗಳ ಹೊತ್ತೊಯ್ದು ತೊಗಲು ಸುಲಿಯುತ್ತಿದ್ದರಿಂದಾಗಿ ಮೊದಲು ತೊಗಲೇ ಬಾಯಿಗೆ ಬಂದುಬಿಡುತ್ತಿತ್ತೇನೋ, ಆ ಅಮಾಯಕನಿಗೆ! ಆತನ ನಾಲಿಗೆಯನ್ನು ರಿಪೇರಿ ಮಾಡಲು ಅಪ್ಪನೂ ಸಾಕಷ್ಟು ತಲೆ ಒಡೆದುಕೊಂಡ. ಕಡೆಗೆ ಉಪಾಯ ವೊಂದನ್ನು ಕಂಡುಕೊಂಡ. ಆ ಪದಕ್ಕೆ ತುಂಡು ಹಾಕಿ 'ತೊಲಗು ಇಲ್ಲಿಂದ' ಅಂದಾಗ ಎಲ್ಲವೂ ಸರಿಹೋಯಿತು. ನಾಟಕದ ದಿನ ಬಂತು. ಕೇರಿಗಷ್ಟೇ ಅಲ್ಲ, ಸವರ್ಣೀಯ ಊರ ಮಂದಿಗೆಲ್ಲರಿಗೂ ಹಬ್ಬವೇ ಹಬ್ಬ-ನಾಟಕ ವಾಡುತ್ತಾರೆಂದರೆ, ನಮ್ಮ ಕಡೆಗೆ !

ಶುಂಠಿ-ಬೆಲ್ಲ ಜಜ್ಜಿ ಮಾಡಿದ್ದ ಹೂರಣವ ತುಂಬಿ, ಹಬೆಯಲ್ಲಿ ಹದವಾಗಿ ಬೇಯಿಸಿದ್ದ ಕಾರಗಡುಬಿನ ನೈವೇದ್ಯದಲ್ಲಿ ಅಪ್ಪನ ಜತೆಗೆ ನನಗೂ ಪಾಲು ದಕ್ಕಿತು. ನಿರ್ದೇಶಕ /ಹಾರ್ಮೋನಿಯಂ ಮಾಸ್ತರರ ಮಗನೆಂದ ಮೇಲೆ




ರಂಗದ ಒಳಹೊರಗೆ ನನಗೂ ಪುಕ್ಕಟೆ ಮರ್ಯಾದೆ ಅಲ್ಲಿ ಸಿಗುತ್ತಿತ್ತು. ಎರಡನೇ ದೃಶ್ಯದಲ್ಲಿಯೇ ನಮ್ಮ ಆ ರುಸಿಮುನಿ–'ದೇವರ್ಸಿ'ಯ ಆಶ್ರಮ ದೃಶ್ಯ. ಟರ್ಕಿ ಟವಲಿನಂತೆ ಸುತ್ತಿದ್ದ ಹುಲಿ ಚರ್ಮ, ಬರಿ ಮೈ, ತಲೆಯ ಮೇಲೆ ಕೂದಲ ಸಿಂಬಿ, ಕಂಕುಳಲ್ಲಿ ಸುತ್ತಿ ಸಿಕ್ಕಿಸಿದ್ದ ಕೃಷ್ಣಾಜಿನ, ಒಂದು ಕೈಯಲ್ಲಿ ಜಪಮಣಿ, ಮತ್ತೊಂದು ಕೈಯಲ್ಲಿ ರೈಲು ಚೊಂಬು. ರಾಜಮನೆತನದವರು ದೇವರ್ಸಿಯ ಮಾರ್ಗದರ್ಶನ ಕೇಳಲು ಬಂದಿರುತ್ತಾರೆ. ಮಾತುಕತೆಗಳು ಸಾಂಗೋಪಾಂಗವಾಗಿ ನಡೆದು, ದೃಶ್ಯದ ಕೊನೆಯಲ್ಲಿ 'ತಥಾಸ್ತು' ಹೇಳಿಯಾದ ಮೇಲೆ, ಒಡ್ಡೋಲಗದ ಜನ ಎಲ್ಲ ಚದುರಿದ ಮೇಲೆ, ಕಣ್ಮುಚ್ಚಿ 'ಓಂ...' ಹೇಳಿ ತಪಸ್ಸಿಗೆ ಜಾರುವ ಮುನ್ನ ಕಡೆಗೂ ಬಂದೇಬಿಟ್ಟಿತು ಬಾಯಿಗೆ, "ಓಂ ಸತ್ ಸತ್"! ಮುಂದೆಯೇ ಹಾರ್ಮೋನಿಯಂ ಪೆಟ್ಟಿಗೆಯ ಮುಂದೆ ಕೂತಿದ್ದ ಅಪ್ಪ ಕಟಕಟನೇ ಹಲ್ಲು ಕಡಿದ. ಕೈಗೆ ಸಿಕ್ಕ ಏನನ್ನಾದರು ಎತ್ತಿ ಎಸೆಯಬೇಕೆಂದು ಸುತ್ತ ತಡಕಾಡಿದ. ಸದ್ಯ ಏನೂ ಕೈಗೆ ಸಿಕ್ಕಲಿಲ್ಲವಾದ್ದರಿಂದ ಬಚಾವು. ಅಪ್ಪನ ಹಲ್ಲು ಕಡಿದ ಆ ಶಬ್ದ ನಮ್ಮ ರುಸಿಮುನಿ 'ಬೇವಾರ್ಸಿ'ಯ ಗಮನಕ್ಕೂ ಬಂತೆಂದು ಕಾಣುತ್ತದೆ. ತಕ್ಷಣ ತನ್ನ ತಪ್ಪಿನ ಅರಿವಾಗಿ ಅವಸರದಲ್ಲಿ ಎದ್ದು ನಿಂತು, ಅನತಿ ದೂರದಲ್ಲಿ – ತಗ್ಗಿನಲ್ಲಿ ತನ್ನ ಮುಂದೆಯೇ ಹಾರ್ಮೋನಿಯಂ ಮುಂದೆ ಮಂಡಿಸಿದ್ದ ನನ್ನ ಅಪ್ಪನ ಕಡೆಗೊಂದು ಕಡೆಗಣ್ಣ ನೋಟ ಬೀರಿ, ನಾಲಿಗೆ ಕಚ್ಚಿಕೊಂಡು ಗಲಿಬಿಲಿಗೊಂಡವನಾಗಿ ಪರದೆ ಬೀಳುವ ಮುನ್ನವೇ ಎದ್ದು ಒಳಗೋಡಿದ್ದ ಪರಿ ತಮಾಷೆಯಾಗಿತ್ತು!

ಆ ಪರಂಪರೆ ಮುಂದುವರಿಯುವುದು ಬೇಡವೇ? ನಾವೆಲ್ಲ ಯಾರ ಮಕ್ಕಳು ಎಂದರೆ ಮೂಲಭೂತವಾಗಿ ರಂಗಭೂಮಿಯ ಮಕ್ಕಳೆ ಎಂದು ಹೇಳಬೇಕು. ಅದೇ ನಮ್ಮ ಬಾಲ್ಯ ಕಾಲದ ಆಡುಂಬೊಲ. ಕಾಲೇಜಿನ ಬೇಸಿಗೆ ರಜೆಯಲ್ಲಿ ಒಮ್ಮೆ ಸಂತೆಯಲ್ಲಿ ಅಚಾನಕ್ ಸಿಕ್ಕ ತಾಂಡಾದ ಲಂಬಾಣಿ ಗೆಳೆಯ ತಾನೇ ಬರೆದು ನಿರ್ದೇಶಿಸಿ ನಟಿಸಿದ್ದ ನಾಟಕ ನೋಡಲು ಇಂಥ ದಿನ ಬಂದೇ ಬರಬೇಕೆಂದು ವರಾತ ಹಚ್ಚಿದ್ದ. 'ಯಾಕಾಗಲೊಲ್ಲದು' ಎಂದು ಭರವಸೆ ನೀಡಿದ್ದೆ, ಅದು ಅವನ ಹಕ್ಕೊತ್ತಾಯವೇ. ಆ ದಿನವೂ ಬಂದೇ ಬಿಟ್ಟಿತು. ಛೋಟೆ ಮೀಯಾನ ಸೈಕಲ್ ಅಂಗಡಿಯ ಬಾಡಿಗೆ ಸೈಕಲ್ ಏರಿ ಅವನ ತಾಂಡಾಕ್ಕೆ ಸವಾರಿ ಹೋಗಿದ್ದೆ. ನಾಟಕದ ವಸ್ತು ಮತ್ತದೇ ಜಾನಪದ–ಪೌರಾಣಿಕ ಕತೆ. ನಡುನಡುವೆ ಹಳ್ಳಿಯ ಕಲಾರಸಿಕರನ್ನು ರಂಜಿಸಲು ಡ್ಯಾನ್ಸು ಬೇರೆ ಅಳವಡಿಸಲಾಗಿತ್ತು. ರಾಜಾಸ್ಥಾನ ಅಂದಮೇಲೆ, ಬಾರಿಬಾರಿಗೆ ಮಂತ್ರಿಯು ಚಪ್ಪಾಳೆ ತಟ್ಟಿ, "ಅದೋ ಯಾರಲ್ಲಿ? ನರ್ತಕಿಯನ್ನು ಬರಮಾಡು!" ಎಂದು ರಾಜನ ಪರವಾಗಿ ಅಪ್ಪಣೆಸಬೇಕಾಗುತ್ತಿತ್ತು. ಈಟಿಯನ್ನು ಹಿಡಿದು ಅಷ್ಟು ದೂರದಲ್ಲಿ ನಿಂತಿರುತ್ತಿದ್ದ ರಾಜಭಟನು ತಲೆಬಾಗಿ 'ಅಪ್ಪಣೆ' ಎಂದು ಹೇಳಿ, ರಿವರ್ಸ್ ಆಗೇ ನಡೆದು ನಿರ್ಗಮಿಸಬೇಕು. ಪ್ರತಿಯಾಗಿ ಅದೇ ದಿಕ್ಕಿನಿಂದ ನೇಪಥ್ಯದಿಂದ ನರ್ತಕಿ ಒಬ್ಬಾಕೆ ರಾಜಾಸ್ಥಾನಕ್ಕೆ ನುಗ್ಗಿ, ಜಿಂಕೆಯಂತೆ ಜಿಗಿದುಕೊಂಡು ನೆಗೆದುಕೊಂಡು ಪ್ರವೇಶ ಮಾಡಬೇಕು.

ಎಲ್ಲವೂ ಸರಿ. ಆದರೆ ಆತ ಬಾರಿ ಬಾರಿಗೂ ನರ್ತಕಿಯನ್ನು 'ನೆರ್ತಾಕಿಯನ್ನು ಬರಮಾಡು' ಅನ್ನುತ್ತಿದ್ದಾನಲ್ಲ! ಅದು ಪಾಯಿಂಟು. ಊರ ಜನಕ್ಕೆ ಆ ಪದವೋ ಕಿರಿಕಿರಿ–ಮುಜುಗರ ಉಂಟುಮಾಡುವಂಥದ್ದು ಬೇರೆ. ಆದರೆ ಅವನೇನು ಮಾಡಬೇಕು ಪಾಪ! ಕಲಾವಿದರೆಲ್ಲರೂ ಸ್ಥಳೀಯ ತಾಂಡಾ ನಿವಾಸಿಗಳೇ ಆಗಿದ್ದರಿಂದ 'ನರ್ತಕಿ' ಪದ ಅವನ ಬಾಯಲ್ಲಿ 'ನೆರ್ತಾಕಿ' ಎಂದೇ ಆಗುತ್ತಿತ್ತು. ಅದು ಅವನ ತಪ್ಪಲ್ಲ. ಮಹಮದೀಯರು ಭಾಗ್ಯಲಕ್ಷ್ಮಿಯನ್ನು 'ಬಾಗೆಂದುಲಕ್ಷ್ಮಿ' ಅಂದ ಹಾಗೆ. ಆದರೆ ಉತ್ತರ ಕರ್ನಾಟಕದಲ್ಲಿ ಮೊದಲ ಬಾರಿಗೆ ಹೊರಗೆ ಕೂತ ಹುಡುಗಿಯನ್ನು 'ನೆರ್ತಾಕಿ' (ಮೈನೆರೆದ ಹುಡುಗಿ) ಎಂದೂ ಕರೆಯುವುದುಂಟು! ಇಷ್ಟೆಲ್ಲಾ (ಅಧಿಕ) ಪ್ರಸಂಗಗಳನ್ನು ಹೇಳಿದ ತಾತ್ಪರ್ಯವಿಷ್ಟೇ, ಸಾಹಿತ್ಯಕ್ಕೆ ಅಪಚಾರವಾಗಬಾರದೆಂಬ ಕಾರಣಕ್ಕೆ. ಎಷ್ಟೇ ಆದರೂ ಸಾಹಿತ್ಯ–ಸಂಗೀತ–ನಾಟಕಗಳ ಸಾಹಚರ್ಯ ಅತ್ಯಂತ ಆಪ್ತವಾದುದಲ್ಲವೇ! ಸಂಗೀತಕ್ಕೂ ಸಾಹಿತ್ಯಕ್ಕೂ ಅವಿನಾಭಾವ ಸಂಬಂಧವಿದೆಯೆಂದು ಮೊದಲೇ ಹೇಳಿದ್ದೇನೆ. ರಂಗಸಂಗೀತಕ್ಕೇ ವಿಶೇಷ ಪರಂಪರೆಯಿದೆ ಬಲ್ಲಿರಾ? ವಾಚಕರು ಕ್ಷಮಿಸಬೇಕು, ತುಸು ವಿಷಯಾಂತರ ಎಸಗಿದೆನೇನೋ! ಮತ್ತೆ ದಾರಿಗೆ ಹತ್ತುತ್ತೇನೆ ಬನ್ನಿರಿ.

'ವರ್ಣ' ಎಂಬೊ ಒಂದೇ ಒಂದು ಪದ ಜನಾಂಗ, ಭಾಷೆ, ಸಾಹಿತ್ಯ, ಸಂಗೀತ, ಚಿತ್ರಕಲೆ ಐದೂ ಕ್ಷೇತ್ರಗಳಲ್ಲಿ ಮೆರೆಯುವ 'ಅದ್ಭುತ ಪದಾರ್ಥ' ಆಗಿದೆ, ಬಲ್ಲಿರಾ! ಆ ಕಾರಣಕ್ಕಾಗಿಯೇ ಜೀವಂತ ಭಾಷೆಯನ್ನು ಹರಿಯುವ ನದಿಗೆ ಹೋಲಿಸುವುದು ಸೂಕ್ತವೆಂದು ಕಾಣುತ್ತದೆ. ಅದು ಉದ್ದಕ್ಕೂ ಹರಿದುಬರುವಾಗ ತನಗೆ ದಕ್ಕಿದ ಮಣ್ಣಿನ ರುಚಿ–ಬಣ್ಣ–ವಾಸನೆಗಳನ್ನು ಪಡೆದುಕೊಂಡು 'ನಾ ನಿಲ್ಲವಳಲ್ಲ' ಎಂದು ಹರಿದುಕೊಂಡು ಹೋಗುವುದು ಅದರ ಮೂಲ ಗುಣಸ್ವಭಾವ ಅಂದಮೇಲೆ ಕೇಳಬೇಕೆ? ಭಾಷೆಯೂ ಅಷ್ಟೆ. ಪ್ರತೀ ನೂರು ಕಿಲೋಮೀಟರಿಗೆ ಕನ್ನಡದ ಆಡುನುಡಿಯಲ್ಲಿ ಒಂದಿಷ್ಟಾದರು ವ್ಯತ್ಯಾಸ ಕಾಣದೇ ಇರದು ಎಂಬ ಮಾತಿಗೆ ಈಗ ಪುರಾವೆ ಸಿಕ್ಕಿರಬೇಕಲ್ಲ! ಕೋಲಾರದ 'ಅಂತರಗಂಗೆ'ಯನ್ನು ತಲಪರಿಗೆ ಅಂದಾಗ ನನಗೆ ಅಚ್ಚರಿಯಾಗಿತ್ತು. ಗುಪ್ತಗಾಮಿನಿಯಾಗಿ ನೆಲದಾಳದಿಂದ ಹರಿದು ಜಿನುಗಿ, ಒಸರುವ ನೀರಿಗೆ ಉತ್ತರ ಕರ್ನಾಟಕದ ಕಡೆಗೆ 'ಒರತೆ' ಎಂದೂ, ಭೂಗರ್ಭದಿಂದ ಉಕ್ಕುವ ನೀರಿಗೆ 'ಚಿಲುಮೆ' ಎಂದೂ ಬಾಯ್ತುಂಬ ಕರೆಯುವದುಂಟು. ಆದರೆ ಈ 'ತಲಪರಿಗೆ' ನನ್ನ ಪಾಲಿಗೆ ಹೊಸ ಪದವಾಗಿ ಕಾಡಿತ್ತು.

ಹರದಾರಿ ದೂರದವರೆಗೂ ಕಡುವಾಸನೆ ಬೀರುವ ಕೇದಿಗೆ ಯಾರಿಗೆ ಗೊತ್ತಿಲ್ಲ? ಗ್ರಾಮಾಂತರ ಪ್ರದೇಶಗಳಲ್ಲಿ ಹುಟ್ಟಿ ಬೆಳೆದಿರುವವರಿಗೆ ಅದರ ಮಜಕೂರು ಗೊತ್ತಿರುತ್ತದೆ. 'ಕೇತಕಿಯ ಬನಗಳಲಿ ಸಂಚರಿಸದಿರು ಚೆಲುವೆ, ಸರ್ಪ ಮಂದಿರವಂತೆ ಕಂಪಿನೊಡಲು' – ಇದು ಕೆ. ಎಸ್. ನರಸಿಂಹಸ್ವಾಮಿ ಅವರ ಸುಂದರವಾದ ಕವಿತೆಯ ಸಾಲು. ಅದು ಸರಿ, ಕೇದಿಗೆಯನ್ನು ಹಳೆ ಮೈಸೂರು ಕಡೆ 'ತಾಳೆ ಹೂ' ಎಂತಲೂ ಕರೆಯುತ್ತಾರಂತೆ, ಇದೇನ್ಮಹಾ! 'ತಾಳೆ ಹುವ್ವ ಗರಿಯಿಂದ ಜಾರಿ ಜಾರಿ ಹೊರಬಂದ ನಾಗಿಣಿ ನಾನಾದಾಗ, ಮುದ್ದಾಡುವಿಯೊ ಇಲ್ಲಾ ಕದ್ದೋಡುವಿಯೋ...' ಎಂಬ ಸಿನಿಮಾ ಹಾಡೂ ಒಂದಿದೆ. ವಾಸ್ತವವಾಗಿ ತಾಳೆಮರ ಉದ್ದಕ್ಕೆ ಅಡಿಕೆ–ತೆಂಗಿನ ಮರದಂತೆ ಎತ್ತರಕ್ಕೆ ಬೆಳೆದು ನಿಲ್ಲುವಂಥದ್ದು. ಕೇದಗೆಯಾದರೊ ಮುಳ್ಳು ಗರಿಗಳನ್ನು ಹೊಂದಿರುವ ದಟ್ಟ ಪೊದೆಯಾಗಿರುತ್ತದೆ. ಒಂದಕ್ಕೊಂದು ಹೋಲಿಕೆಯೇ ಇಲ್ಲ. ಕೇದಗೆಯ ದಟ್ಟ ಪೊದೆ ಹಾವುಗಳ ವಾಸಕ್ಕೆ ಹೇಳಿ ಮಾಡಿಸಿದಂಥ ಜಾಗ. ವಸ್ತುಸ್ಥಿತಿ ಹೀಗಿದ್ದಾಗ ತಾಳೆ ಹುವ್ವಿಗೂ ಕೇದಗೆ ಹೂವಿಗೂ ಎತ್ತಣಿಂದೆತ್ತ ಹೋಲಿಕೆಯಯ್ಯಾ! ಅದಕ್ಕೆಂದೇ ನಾನು ಪದೇ ಪದೇ ಹೇಳುವದು, ನಮ್ಮ ಕನ್ನಡ ಎಂಥ ರಿಚ್ ಭಾಷೆ ಮಾರಾಯ್ರೆ!!

**ಈರಪ್ಪ ಎಂ. ಕಂಬಳಿ**
ನಿರ್ದೇಶಕರು, ಭಾಷಾಂತರ ನಿರ್ದೇಶನಾಲಯ
ವಿಶ್ವೇಶ್ವರಯ್ಯ ಕೇಂದ್ರ, ಪೋಡಿಯಂ ಬ್ಲಾಕ್
ಡಾ॥ ಬಿ. ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು – ೫೬೦ ೦೦೧

ಚಿತ್ರಲೇಖನ : **ಪರಂಜ್ಯೋತಿ**



# ಜಾನ್ ಸಲ್ಲಿವನ್ ಮತ್ತು ಗಜನಿಂಬೆ ಉಪ್ಪಿನಕಾಯಿ!

**ಮೇ**ಲಿನ ಶೀರ್ಷಿಕೆ ನೋಡಿದ ಕೂಡಲೇ ನಿಮ್ಮ ಮನಸ್ಸಿನಲ್ಲಿ 'ಇಮಾಂ ಸಾಬರಿಗೂ ಗೋಕುಲಾಷ್ಟಮಿಗೂ ಎಲ್ಲಿಯ ಸಂಬಂಧ ?' ಎಂಬ ಪ್ರತಿಕ್ರಿಯೆ ಥಟ್ಟನೆ ಮೂಡಬಹುದು. ನೀವು ಕಾವ್ಯಲೋಕದಲ್ಲಿ ಸ್ವಲ್ಪ ದೂರ ವಿಹರಿಸಿ ಬಂದವರಾಗಿದ್ದರೆ 'ಎತ್ತಣ ಮಾಮರ ಎತ್ತಣ ಕೋಗಿಲೆ !' – ಎಂಬ ಮಾತು ನೆನಪಿಗೆ ಬರಬಹುದು. ಇದೇನೂ ಅಂಥ ದೊಡ್ಡ ವಿಷಯವಲ್ಲ. ಯಾವ ಮಾತಿಗೆ ಯಾವ ಪ್ರತಿಕ್ರಿಯೆ ಎಂಬುದೆಲ್ಲ ನಮ್ಮ ಮಿದುಳಿನಲ್ಲಿ ಪ್ರೋಗ್ರಾಂಗೊಂಡಿರುತ್ತದೆ !

ಕೆಲವೊಮ್ಮೆ ನಾವು ಮಾಡಹೊರಟ ಕೆಲಸದ ಮಧ್ಯೆ, ನಾವು ಉದ್ದೇಶಿಸದೇ ಇದ್ದ ಅಡ್ಡ ಪರಿಣಾಮ ಉಂಟಾಗಬಹುದು. ಆ ಪರಿಣಾಮದಿಂದ ಒಳ್ಳೆಯದಾದರೆ ಸಂತೋಷವಾಗುತ್ತದೆಯಲ್ಲವೆ ? ನಾನಿಲ್ಲಿ ಹೇಳ ಹೊರಟಿರುವುದು ಅಂಥ ಒಂದು ಪರಿಣಾಮದ ಬಗ್ಗೆ. ನಿಮ್ಮ ಪ್ರೋಗ್ರಾಮ್ಡ್ ಮೆದುಳಿನಲ್ಲಿ ದೊಡ್ಡ ಕತೆಗೊಂದು ಅಡ್ಡಕತೆ ಅಥವಾ ಅಡ್ಡಕತೆಗೊಂದು ಗೊಡ್ಡುಕತೆ ಮತ್ತು ಹರಿಕತೆಯೊಳಗೊಂದು ಮರಿಕತೆ ಎಂಬುದೆಲ್ಲ ಅಡಕವಾಗಿರುತ್ತದೆ ಎಂಬುದನ್ನೆಲ್ಲ ಮರೆಯಬೇಡಿ.

ನಾನು ನೀಲಗಿರಿಯ ಬಗ್ಗೆ ಪುಸ್ತಕ ಬರೆಯುತ್ತಿದ್ದಾಗ, ಅಲ್ಲಿನ ಬೆಟ್ಟಗುಡ್ಡಗಳ ಮೇಲೆ, ಕಾಡಿನಂಚಿನಲ್ಲಿ ಮತ್ತು ಇಳಿಜಾರು ಪ್ರದೇಶಗಳಲ್ಲಿ ವಾಸವಾಗಿರುವ ಆದಿವಾಸಿಗಳ ನೆಲೆಗಳಿಗೆ ಏಳೆಂಟು ಬಾರಿ ಹೋಗಿ ಬರಬೇಕಾಯಿತು. ಆಗ ಜೊತೆಯಲ್ಲಿ ನನ್ನ ಪತ್ನಿ ಶಾಂತಾಳನ್ನು ಕರೆದೊಯ್ಯುವುದು ಅನಿವಾರ್ಯವಾಗಿತ್ತು. ಕಾರಣ, ನನ್ನ ಆರೋಗ್ಯ ಆಕೆಯ ಕೈಯಲ್ಲಿಟ್ಟಿದ್ದೆ. ನಾನು ಇಂಥ ಸಾಹಸಕ್ಕೆ ಕೈಹಾಕಿದ್ದು ಎಪ್ಪತ್ತೈದು ದಾಟಿದ ನಂತರ. ನನ್ನ ಪತ್ನಿಯೂ ಅರವತ್ತೈದು ದಾಟಿದವಳು. ನಾನು ಹಿಂದೊಮ್ಮೆ ತಮಾಷೆಗೆ ಹೇಳಿಕೊಂಡಂತೆ ನಮ್ಮ ಪ್ರವಾಸವನ್ನು 'ಪ್ರಾಯ ಸಂದವರ ಹನಿಮೂನ್ !' – ಎಂದೂ ಭಾವಿಸಬಹುದು.

ನಮ್ಮ ಮಾರ್ಗದಲ್ಲಿ ಒಂದು ಸಣ್ಣ ತೊಡಕು ಎದುರಾಗಿತ್ತು. ಒಮ್ಮೆ ಬಸ್ಸಿಗೆಂದು ಬಿರುಸಾಗಿ ನಡೆಯುತ್ತಿದ್ದಾಗ ಮುಗ್ಗರಿಸಿ ಬಿದ್ದು ಆಕೆ ಮಂಡಿನೋವು ಮಾಡಿಕೊಂಡಿದ್ದಳು. ನೋವು ಸಂಪೂರ್ಣ ಗುಣವಾಗಿರಲಿಲ್ಲ. 'ನೀ ಕ್ಯಾಪ್' ಬಳಸುವಂತೆ ಡಾಕ್ಟರು ಸಲಹೆ ಮಾಡಿದ್ದರು. ಹೀಗೆಂದು, ಆಗಾಗ ಎಲ್ಲರೊಂದಿಗೆ ಈ ವಿಷಯ ಹೇಳುತ್ತ ಆಕೆಯ ಮಂಡಿನೋವಿನ ಬಗ್ಗೆ ಪುಕ್ಕಟೆ ಪ್ರಚಾರ ಮಾಡಿದರೆ ಆಕೆ ನನ್ನ ಮೇಲೆ ಗರಂ ಆಗುವುದರಲ್ಲಿ ಸಂಶಯವಿಲ್ಲ ! ಆಕೆ ನನ್ನ ಜೊತೆಗಿರುತ್ತಿದ್ದರೂ ಬೆಟ್ಟ ಹತ್ತುವ ಅಥವಾ ಇಳಿಯುವ ಸಂದರ್ಭಗಳಲ್ಲಿ ತುಂಬ ನೋವು ಅನುಭವಿಸುತ್ತಿದ್ದಳು. ಗುಡ್ಡ ಹತ್ತಿ ಇಳಿಯಬೇಕಾದ ಸಂದರ್ಭಗಳಲ್ಲಿ ದಾರಿಯಲ್ಲೇ ನಿಂತು ಅಸಹಕಾರ ಚಳುವಳಿ ಪ್ರಾರಂಭಿಸುತ್ತಿದ್ದಳು.

ಅಂಥ ಒಂದು ಸಂದರ್ಭದಲ್ಲಿ, ಆಕೆಯನ್ನು ದಾರಿಯಲ್ಲಿ ನಿಲ್ಲಿಸಿ ನಾನು ತೊದವರ ದೇವಾಲಯದ ಫೋಟೋ ತೆಗೆಯಲು ಹೋದಾಗ ಆ ಅನಿರೀಕ್ಷಿತ ಘಟನೆ ನಡೆಯಿತು. ನಾನು ಸ್ವಲ್ಪ ದೂರ ನಡೆದು ಹೋಗ ಬೇಕಾಗಿತ್ತು. ಸ್ವಲ್ಪ ಹೊತ್ತು ಕಳೆದ ನಂತರ, ದಾರಿಯಲ್ಲಿ ಒಂಟಿಯಾಗಿ ನಿಂತಿರಲು ಬೇಸರವಾಗಿ, ನಾನು ನಡೆದ ಏರುದಾರಿಯಲ್ಲಿ ನಡೆಯುತ್ತ ಬಂದಿದ್ದಳು. ತೊದವರ ಮಂದೆಯ ಸಮೀಪದಲ್ಲಿ ಈ ಹೊಸ ಮುಖವನ್ನು ಕಂಡ ನಾಯಿಗಳು ಆಕೆಯನ್ನು ಅಡ್ಡಬಳಸಿ, ಬೊಗಳು ಅಸ್ತ್ರ ಬೀರತೊಡಗಿದ್ದವು. ಆಕೆ ಭಯದಿಂದ ಚೀರಾಡಿದ್ದು, ಗುಡಿಯ ಮುಂದೆ ಫೋಟೋ ತೆಗೆಯುವುದರಲ್ಲಿ ಮಗ್ನನಾಗಿದ್ದ ನನ್ನ ಕಿವಿಗೂ ಬಿದ್ದಿತು. ನಾನು ಗಾಬರಿಯಿಂದ ಬಂದದಾರಿಯಲ್ಲಿ ವೇಗವಾಗಿ ನಡೆದು ಬರುವಷ್ಟರಲ್ಲಿ, ನಾಯಿಗಳು ಯುದ್ಧ ವಿರಾಮ ಘೋಷಿಸಿ ಹಿಂದೆ

ಆದಿವಾಸಿಗಳಂದ ಹಿಡಿದು ಆಧುನಿಕ ಮನುಷ್ಯರವರೆಗೆ ಉಪ್ಪಿನಕಾಯಿ ಎಲ್ಲರ ಮನಸ್ಸುಗಳನ್ನು ಸೂರೆಗೊಂಡಿದೆ. ಉಪ್ಪಿನಕಾಯಿ ದೆಸೆಯಿಂದ ಒಂದೊಂದು ಸೀಮೆಗೂ ಖ್ಯಾತಿ ಬಂದಿದೆ. ಕರಾವಳಿಯ ಮಾವಿನಮಿಡಿ ಅಥವಾ ಆಂಧ್ರದ ಆವಕಾಯ ಇತ್ಯಾದಿ. ಉಪ್ಪಿನಕಾಯಿ ರುಚಿಯಿಂದ ಹೊರತಾದ ಯಾವ ದೇಶವೂ ಪ್ರಪಂಚದ ಭೂಪಟದಲ್ಲಿಲ್ಲ. ಬಗೆಬಗೆಯ ತರಕಾರಿಗಳು, ಹಣ್ಣುಗಳು, ಮಾಂಸ, ಮೀನು, ಸೀಗಡಿ – ಹೀಗೆ. ಕಪ್ಪೆ ಕಾಲಿನ ಉಪ್ಪಿನಕಾಯಿ ಬಳಕೆಯಲ್ಲಿದೆಯೆಂದು ಕೇಳಿದ್ದೇನೆ. ಅವರವರ ಅಭಿರುಚಿಗೆ ತಕ್ಕಂತೆ ಉಪ್ಪಿನಕಾಯಿ !

ಸರಿದಿದ್ದವು! ಆಕೆ ಭಯದಿಂದ ಕಂಪಿಸುತ್ತಿದ್ದಳು. ನನ್ನ ಮುಖ ನೋಡಿದ ನಂತರ ಆಕೆಗೆ ಸ್ವಲ್ಪ ಸಮಾಧಾನವಾಯಿತು. ಛೇ, ಆಕೆಯೊಬ್ಬಳನ್ನೇ ಬಿಟ್ಟು ಹೋಗಬಾರದಿತ್ತು ಎಂದುಕೊಂಡೆ.

ಹೀಗೆ ಅಲೆದಾಟದ ಸಂದರ್ಭದಲ್ಲಿ ಆಕೆ ಕಿರಿಕಿರಿ ಅನುಭವಿಸಿದರೂ, ನನ್ನ ಕೆಲಸ ಸಲೀಸಾಗುತ್ತಿತ್ತು ಎಂಬುದು ನನ್ನ ಅನುಭವ. ಒಂದು ಆದಿವಾಸಿ ನೆಲೆಗೆ ತಲುಪಿದಾಗ ಆಕೆ ಅಲ್ಲಿನ ಹೆಂಗಸರು ಮಕ್ಕಳೊಂದಿಗೆ ಮಾತುಕತೆಗೆ ತೊಡಗಿ ಅವರ ಸ್ನೇಹ ಗಳಿಸುತ್ತಿದ್ದಳು. ಆಕೆಗೂ ತಮಿಳು ಬರುತ್ತಿತ್ತು. ಅವರೊಂದಿಗೆ ವ್ಯವಹಾರ ತಮಿಳಿನಲ್ಲಿ. ಅವರು ಸಂಕೋಚವಿಲ್ಲದೆ ಉತ್ತರಿಸುತ್ತಿದ್ದುದರಿಂದ ನನ್ನ ವ್ಯವಹಾರ ಸುಲಭವಾಗುತ್ತಿತ್ತು. ಅವರೊಂದಿಗೆ ಸಂವಹನ ಸರಳ ವಾಗುತ್ತಿತ್ತು. ಫೋಟೋ ತೆಗೆದುಕೊಳ್ಳಲು ಸಹಕರಿಸುತ್ತಿದ್ದರು. ನಾನೊಬ್ಬನೇ ಆಗಿದ್ದಿದ್ದರೆ ಅದು ಸಲೀಸಾಗುತ್ತಿರಲಿಲ್ಲ.

ಒಮ್ಮೆ ಕೋತರ ಊರಿನಲ್ಲಿ, ಕೋತ ಯುವತಿಯೊಬ್ಬಳು ನಮಗೆ ಮಡಕೆ ಮಾಡುವುದನ್ನು ತೋರಿಸಿಕೊಡುತ್ತಿದ್ದಾಗ, ಅಳುತ್ತಿದ್ದ ಆಕೆಯ ಮಗುವನ್ನು ಶಾಂತಾ ಎತ್ತಿಕೊಂಡು ರಮಿಸಿ, ಅದನ್ನು ಹೆಗಲಿಗೆ ಹಾಕಿ ತಟ್ಟಿ ಮಲಗಿಸಿದ್ದಳು. ಯುವತಿಯ ನಾಲ್ಕು ವರ್ಷದ ಬಾಲಕನೊಂದಿಗೆ ಮಾತಾಡುತ್ತ ಸ್ನೇಹ ಬೆಳೆಸಿದ್ದಳು. 'ನಮ್ಮ ಜೊತೆಗೆ ಬಾ' ಎಂದಾಗ, ಬರುತ್ತೇನೆ ಎನ್ನುವಂತೆ ತಲೆ ಯಾಡಿಸಿದ್ದ. ನಾವು ಬಸ್ಸಿಗೆ ಹೊರಟುನಿಂತಾಗ ಆ ಮಹರಾಯ ನಮ್ಮೊಂದಿಗೇ ಹೊರಟು ನಿಂತ. ಕೊನೆಗೆ ಆತನ ಕಣ್ಣು ತಪ್ಪಿಸಿ ಬಸ್ಸಿಗೆ ಹತ್ತಬೇಕಾಯಿತು!

* * *

ಮಾಹಿತಿ ಸಂಗ್ರಹಿಸುತ್ತಿದ್ದ ಸಂದರ್ಭದಲ್ಲಿ ನಮಗೆ ಹಲವು ಜನರ ಪರಿಚಯ ವಾಗಿತ್ತು. ಕಣ್ಣೇರಿಮುಕ್ಕು ಗ್ರಾಮದಲ್ಲಿರುವ ಜಾನ್ ಸಲ್ಲಿವನ್ ಮೆಮೋರಿಯಲ್‌ನ ಸಹಾಯಕಿಯಾಗಿ ಕೆಲಸ ಮಾಡುತ್ತಿರುವ ಗಾಯತ್ರಿ ಸಹ ಆ ಪೈಕಿ ಒಬ್ಬಾಕೆ.

ಕೋತಗಿರಿಗೆ ನಾಲ್ಕು ಕಿ.ಮೀ. ದೂರದಲ್ಲಿದೆ ಕಣ್ಣೇರಿಮುಕ್ಕು ಎಂಬ ಬಡಗರ ಗ್ರಾಮ. ಅಲ್ಲಿ ಸಲ್ಲಿವನ್ ಸ್ಮಾರಕ ಕೇಂದ್ರವಿದೆ. ಆತ ನೀಲಗಿರಿ ಜಿಲ್ಲೆಯ ಪ್ರಥಮ ಕಲೆಕ್ಟರ್‌ನಾಗಿದ್ದ ಬ್ರಿಟಿಷ್ ಅಧಿಕಾರಿ. ಆಗ ರಸ್ತೆಗಳಿಲ್ಲದಿದ್ದ ನೀಲಗಿರಿಗೆ ಆತ ಕೆಲವು ಸಿಬ್ಬಂದಿಗಳೊಂದಿಗೆ ಬೆಟ್ಟದ ದಾರಿಯಲ್ಲಿ ನಡೆದುಬಂದು ಈಗ ಸ್ಮಾರಕ ಕೇಂದ್ರವಿರುವ ಕಡೆ ಶಿಬಿರ ಹೂಡಿದ್ದನಂತೆ. ನೀಲಗಿರಿಯ ಅಭಿವೃದ್ಧಿಗಾಗಿ ಹಲವು ಯೋಜನೆಗಳನ್ನು ರೂಪಿಸಿ ಕಾರ್ಯರೂಪಕ್ಕೆ ತಂದವನೆಂದು, ಹಾಗೆಯೇ ಆತ ಬಡಗ ಜನಾಂಗದವರ ಮಿತ್ರನಾಗಿದ್ದನೆಂದು ಆತನನ್ನು ಗೌರವದಿಂದ ಸ್ಮರಿಸುತ್ತಾರೆ. ಆ ಕೇಂದ್ರದ ರೂವಾರಿ ಸಹ ಡಿ. ವೇಣುಗೋಪಾಲ್ ಎಂಬ ಬಡಗ ವ್ಯಕ್ತಿ.

ಅಲ್ಲಿನ ಲೈಬ್ರರಿಯಲ್ಲಿ, ನೀಲಗಿರಿಗೆ ಸಂಬಂಧಿಸಿದಂತೆ ಯೂರೋಪಿಯನ್ ಲೇಖಕರು ಬರೆದಿರುವ ಹಲವು ಅಪೂರ್ವ ಗ್ರಂಥಗಳಿವೆ. ಹಳೆಯ ಗೆಜೆಟಿಯರುಗಳಿವೆ. ಬೇಕಾದ ಪುಸ್ತಕಗಳನ್ನು ನಾವೇ ತೆಗೆದುಕೊಂಡು ಓದಿ ಟಿಪ್ಪಣಿ ಮಾಡಿಕೊಳ್ಳಬಹುದು. ಹಿಂದಿನ ಕಾಲದ ಛಾಯಾಚಿತ್ರಗಳಿವೆ. ಸ್ವತಃ ಸಲ್ಲಿವನ್ ಬಳಸಿದ ಕೆಲವು ವಸ್ತುಗಳಿವೆ.

ಗಾಯತ್ರಿ ಏಳೆಂಟು ವಯಸ್ಸಿನ ಮಗಳ ತಾಯಿ, ಎರಡು ಮೂರು ಬಾರಿ ನಾವಲ್ಲಿಗೆ ಹೋಗಿದ್ದೆವು. ಆಕೆ ಸದಾ ಉಲ್ಲನ್ ಹೆಣಿಗೆ ಅಥವಾ ಕಸೂತಿ ಹಾಕುವುದರಲ್ಲಿ ತೊಡಗಿಕೊಂಡಿರುತ್ತಿದ್ದರು. ಶಾಂತಾಳಿಗೂ ಕಸೂತಿಯಲ್ಲಿ ಆಸಕ್ತಿ ಇದ್ದುದರಿಂದ, ಅವರು ಆ ಕುರಿತು ವಿಚಾರ ವಿನಿಮಯ ಮಾಡಿಕೊಳ್ಳು ತ್ತಿದ್ದರು. ನಾನು ನನ್ನಷ್ಟಕ್ಕೆ ಪುಸ್ತಕಗಳ ಪುಟಗಳ ಮಧ್ಯೆ ಮುಳುಗಿರುತ್ತಿದ್ದೆ.

ನನ್ನ ಪುಸ್ತಕದ ಕೆಲವು ಪುಟಗಳ ಕರಡನ್ನು ಗಮನಿಸಿದ್ದ ಗಾಯತ್ರಿ ಸ್ವಲ್ಪ ಸಂಕೋಚದಿಂದ, "ಇಲ್ಲಿ ಎಂಬತ್ತು ದಾಟಿದ ಹೆತ್ತೆ (ಅಜ್ಜಿ) ಇದ್ದಾರೆ. ನೂರು ತುಂಬಿರುವ ಅಯ್ಯ (ಅಜ್ಜ) ಇದ್ದಾರೆ. ನಿಮ್ಮ ಪುಸ್ತಕದಲ್ಲಿ ಅವರನ್ನೂ ಸೇರಿಸಿ ಕೊಳ್ಳಬಹುದಲ್ಲ..." ಎಂದು ಸಲಹೆ ಮಾಡಿದಾಗ, 'ಯಾಕಾಗಬಾರದು!' – ಎಂದು ನಾನೂ ಒಪ್ಪಿಕೊಂಡೆ.

ಹೆತ್ತೆಯ ಮನೆ ಸಲ್ಲಿವನ್ ಕೇಂದ್ರದ ಸಮೀಪದಲ್ಲಿತ್ತು. ಅಯ್ಯನ ಮನೆ ಊರಿನೊಳಗೆ. ಮನೆಗಳ ಮಧ್ಯೆ ಕಿರುದಾರಿಯಲ್ಲಿ ಸಾಗಬೇಕು. ಅಲ್ಲಲ್ಲಿ ಮೆಟ್ಟಿಲು ಹತ್ತಿ ಇಳಿಯಬೇಕು. ಶಾಂತಾ ನಮ್ಮೊಂದಿಗೆ ಬರಲು ನಿರಾಕರಿಸಿದಳು. ಕೇಂದ್ರದ ಹೊರಗೆ ಹರಡಿದ್ದ ಬಿಸಿಲಿನ ಸುಖ ಅನುಭವಿಸುತ್ತ ಅಲ್ಲಿಯೇ ಉಳಿದಳು.

ಅಯ್ಯನ ಫೋಟೋ ತೆಗೆದುಕೊಂಡು ಹಿಂದಿರುಗಿದಾಗ, ಒಂದು ಮನೆಯ

ಎದುರಿನ ಖಾಲಿ ಸ್ಥಳದಲ್ಲಿ ಇಪ್ಪತ್ತು ಮೂವತ್ತು ಅಡಿಗಳಷ್ಟು ಎತ್ತರಕ್ಕೆ ಬೆಳೆದು, ಹಣ್ಣುಗಳ ಭಾರದಿಂದ ಬೀಗುತ್ತಿದ್ದ ಗಜನಿಂಬೆಯ ಮರ ನನ್ನ ಕಣ್ಣಿಗೆ ಬಿದ್ದಿತು. ಹಳದಿ–ಕೆಂಪು ಮಿಶ್ರಿತ ಬಣ್ಣ. ಒಂದೊಂದೂ ಒಂದು ಬೊಗಸೆ ತುಂಬಿಸುವಷ್ಟು ದಪ್ಪವಾಗಿದ್ದವು. ಮರದ ಕೆಳಗಡೆ ಐದಾರು ಕಳಿತ ಹಣ್ಣುಗಳು ಉದುರಿದ್ದವು. ಇಲ್ಲಿ ಆ ಹಣ್ಣುಗಳನ್ನು ಯಾರೂ ತಿನ್ನುವುದಿಲ್ಲವೆಂದೂ, ಅಲ್ಲಿ ಬಿದ್ದಿರುವ ಹಣ್ಣುಗಳು ದನಗಳಿಗಾಗಿ ಕಾಯುತ್ತವೆ ಎಂದೂ ಗಾಯತ್ರಿ ಹೇಳಿದರು. ಅವುಗಳಿಂದ ಉಪ್ಪಿನಕಾಯಿ ತಯಾರಿಸುವ ವಿಧಾನ ತಮಗೆ ತಿಳಿಯದೆಂದೂ ಹೇಳಿದಾಗ ನನಗೆ ಆಶ್ಚರ್ಯವಾಯಿತು.

ಎಸ್ಟೇಟುಗಳಲ್ಲಿ ಟೀ ಗಿಡಗಳ ಮಧ್ಯೆ ಗಜನಿಂಬೆ (ಕೆಲವು ಕಡೆ ಕಿರಳಿ ಮತ್ತು ಹೇರಳೆ ಎಂದೂ ಪರಿಚಯವಾಗಿದೆ), ನಿಂಬೆ, ಕಿತ್ತಳೆ, ದಾಳಿಂಬೆ, ಪಿಯರ್ ಮುಂತಾದ ಹಣ್ಣಿನ ಗಿಡಗಳನ್ನು ಬೆಳೆಸುವುದನ್ನು ನಾನು ನೋಡಿದ್ದೆ. ಅಲ್ಲದೆ, ಗಜನಿಂಬೆ ಉಪ್ಪಿನಕಾಯಿಯ ವಿಶೇಷವೂ ನನಗೆ ತಿಳಿದಿತ್ತು.

ಒಂದೆರಡು ಹಣ್ಣುಗಳನ್ನು ಕಿತ್ತುಕೊಳ್ಳಬಹುದೇ ಎಂದಾಗ, ಗಾಯತ್ರಿ ಸಂತೋಷದಿಂದ ಹಣ್ಣು ಕೀಳಲು ಸಹಕರಿಸಿದರು. ಕೈಗೆಟುಕಿಸುವಂತಿದ್ದ ರೆಂಬೆಗಳನ್ನು ಬಗ್ಗಿಸಿ ಒಂದಿಷ್ಟು ಹಣ್ಣುಗಳನ್ನು ಉದುರಿಸಿದೆವು. ಅವನ್ನು ಒಯ್ಯಲು ಪಕ್ಕದ ಮನೆಯ ಬಡಗ ಗೃಹಿಣಿ ಒಂದು ಪ್ಲಾಸ್ಟಿಕ್ ಕೈ ಚೀಲ ನೀಡಿದರು. ಅಲ್ಲಿಂದ ಹಣ್ಣಿನ ಗಂಟನ್ನು ತರಲು ಗಾಯತ್ರಿಯೇ ಸಹಕರಿಸಿದರು.

ನಿಂಬೆ ಅಥವಾ ಕಿತ್ತಳೆಯಂತೆ ನುಣುಪು ಮೈಯಲ್ಲದ, ದಪ್ಪ ಸಿಪ್ಪೆಯನ್ನು ಹೊಂದಿರುವ ಗಜನಿಂಬೆ ಮತ್ತು ಅದರಿಂದ ತಯಾರಿಸುವ ಉಪ್ಪಿನಕಾಯಿಯ ರುಚಿಯ ಬಗ್ಗೆ ಮತ್ತು ಅದರ ಪಿತ್ತಾಹಾರಿ ಗುಣದ ಬಗ್ಗೆ ದಾರಿಯಲ್ಲಿ ನಾನು ಹೇಳಿದ್ದು ಗಾಯತ್ರಿಯವರ ಮನಸ್ಸಿಗೆ ನಾಟಿತೆಂದು ಕಾಣಿಸುತ್ತದೆ. ನಿಮಗೆ ಹೆಚ್ಚು ತಿಳಿದುಕೊಳ್ಳುವ ಆಸಕ್ತಿಯಿದ್ದರೆ ಶಾಂತಾಳನ್ನು ಕೇಳಿ ಎಂದೂ ಸೇರಿಸಿದೆ.

ಚೀಲದಲ್ಲಿದ್ದ ಗಜನಿಂಬೆ ನೋಡಿದ ಶಾಂತಾ ಆಶ್ಚರ್ಯದಿಂದ, ಸಂಭ್ರಮದಿಂದ ಚೀಲವನ್ನೊಮ್ಮೆ, ನಮ್ಮ ಮುಖಗಳತ್ತ ಒಮ್ಮೆ ನೋಡಿದಳು. ಅದರಿಂದ ಆಕೆಗೆ ಸಂತೋಷವಾಗಿತ್ತು ಎಂದು ಬೇರೆ ಹೇಳಬೇಕಾಗಿರಲಿಲ್ಲ. ಆ ಕ್ಷಣದಿಂದ ಆಕೆಯ ಮಂಡಿನೋವು ಮಾಯವಾದಂತೆ ಚೀಲ ಒಯ್ಯಲು ತಯಾರಾದಳು ಅಥವಾ ನೋವನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳಲಿಲ್ಲ! ನನಗೆ ಆಶ್ಚರ್ಯವಾಗದಿರುತ್ತದೆಯೇ ?

ಗಾಯತ್ರಿ ಒಂದು ಹಾಳೆ ತೆಗೆದುಕೊಂಡು ಉಪ್ಪಿನಕಾಯಿ ಹಾಕುವ ವಿಧಾನವನ್ನು ಕೇಳಿ ಬರೆದುಕೊಂಡಳು. ಅದರಿಂದ ತಯಾರಿಸಬಹುದಾದ ರುಚಿಕರ ಗೊಜ್ಜಿನ ಕುರಿತೂ ಹೇಳಿದಳು.

ಅಂಗಳದಲ್ಲಿದ್ದ ಕೆಲವು ಅಲಂಕಾರದ ಗಿಡಗಳನ್ನು ಕಿತ್ತು ಒಯ್ಯುವು ದೆಂದಾಯಿತು. ನಿಮ್ಮ ಮನೆಯಂಗಳದಿಂದ ಹೂವಿನ ಗಿಡವ ತಂದು ನಮ್ಮ ಮನೆಯಂಗಳದಲಿ ಬೆಳೆಸುವ ಹೊಸ ಸಂಬಂಧಕ್ಕೆ ನಾಂದಿಯಾಯಿತು! ಇದು ಹೋದ ಕಡೆಗಳಲ್ಲೆಲ್ಲ ಬೆಳೆಯುವ ಸಂಬಂಧ!

ಬೆಂಗಳೂರಿಗೆ ಹಿಂದಿರುಗಿದ ನಂತರ ಶಾಂತಾ ಗಜನಿಂಬೆ ಉಪ್ಪಿನಕಾಯಿ ತಯಾರಿಸುವ ಕೆಲಸದಲ್ಲಿ ತೊಡಗಿಸಿಕೊಂಡಳು.

ಅಡ್ಡಕತೆಗೊಂದು ಗೊಡ್ಡುಕತೆ ಇಲ್ಲಿಂದ ಪ್ರಾರಂಭಿಸಬಹುದು.

ಶಾಂತಾ ತಯಾರಿಸುವ ಟೊಮ್ಯಾಟೋ ಉಪ್ಪಿನಕಾಯಿ ನಮ್ಮ ಪರಿಚಿತರ ಮಧ್ಯೆ ಪ್ರಖ್ಯಾತವಾಗಿದೆ. ಈ ವಿಷಯದಲ್ಲಿ ಲೈಕ್‌ಗಳ ಸಂಖ್ಯೆ ಹೆಚ್ಚು!

ಆಕೆ ಟೊಮ್ಯಾಟೋ ಉಪ್ಪಿನಕಾಯಿ ಮಾಡುವ ವಿಧಾನವನ್ನು ನಾನು ಸಮೀಪದಿಂದ ಗಮನಿಸಿದ್ದೇನೆ. ಆಕೆ ಅದನ್ನೊಂದು ವ್ರತದಂತೆ ಬಹಳ ನಿಷ್ಠೆಯಿಂದ ತಯಾರಿಕೆಯಲ್ಲಿ ತೊಡಗಿಕೊಳ್ಳುತ್ತಾಳೆ. ಉಪ್ಪಿನಕಾಯಿಗಾಗಿ ಟೊಮ್ಯಾಟೋ ಕೊಂಡುತರುವುದು ನನ್ನ ಪಾಲಿಗೆ ಸದಾ ಒಂದು ಪರೀಕ್ಷೆ ಎದುರಿಸಿದಂತೆ. ಪ್ರತಿಯೊಂದು ಹಣ್ಣನ್ನೂ ಆಕೆ ಕ್ವಾಲಿಟಿ ಕಂಟ್ರೋಲಿಗೆ ಒಳಪಡಿಸುತ್ತಾಳೆ. ಒಂದಿಷ್ಟು ಹಣ್ಣಾಗದಿದ್ದರೆ ಅದನ್ನು ತಿರುಗಿಸಿ ನೋಡಿ ಪಕ್ಕಕ್ಕಿಡುತ್ತಾಳೆ. ಕೆಲವೊಮ್ಮೆ ಮುಖ ಕಿವಿಚಿದ್ದನ್ನು ಕಾಣಬಹುದು! ಮತ್ತೆ ಎರಡು ಮೂರು ದಿನ ಅವನ್ನು ಹಾಗೆಯೇ ಬಿಡುತ್ತಾಳೆ. ಅವನ್ನು ಕತ್ತರಿಸಿ ಹೋಳುಮಾಡುವಾಗಲಂತೂ ಮತ್ತಷ್ಟು ಜಾಗ್ರತೆ ವಹಿಸುತ್ತಾಳೆ. ಮೊದಲು ಹಣ್ಣುಗಳನ್ನು ತೊಳೆದು, ಪ್ರತಿಯೊಂದು ಹಣ್ಣನ್ನೂ ಬಟ್ಟೆಯಿಂದ ಒರೆಸಿಡುತ್ತಾಳೆ.



*ಗಾಯತ್ರಿ ಮತ್ತು ಶಾಂತಾ*

ಹೋಳುಗಳನ್ನಿಡುವ ಪಾತ್ರೆಯಲ್ಲಾಗಲಿ, ಚಾಕುವಿನಲ್ಲಾಗಲಿ ಒಂದು ಅರ್ಧ ಹನಿ ನೀರೂ ಇರಬಾರದು. ಅರ್ಧ ಹನಿ ನೀರಿದ್ದರೂ ಉಪ್ಪಿನಕಾಯಿ ಹಾಳಾಗುತ್ತದೆ ಎಂದು ನಂಬುತ್ತಾಳೆ. ಒಂದೆರಡು ಹಣ್ಣು ಹೋಳು ಮಾಡಿದ ನಂತರ ಅದನ್ನು ಪಾತ್ರೆಗೆ ಹಾಕಿ, ಅದರ ಮೇಲೆ ಒಂದಿಷ್ಟು ಕಲ್ಲುಪ್ಪು ಹರಡುತ್ತಾಳೆ. ಈ ಕ್ರಿಯೆ ಕೊನೆಯವರೆಗೂ ಮುಂದುವರಿಯುತ್ತದೆ. ಅಂಥ ಸಂದರ್ಭದಲ್ಲಿ ಯಾವ ಸೀರಿಯಸ್ ಸೀರಿಯಲ್ ಪ್ರಸಾರವಾಗುತ್ತಿದ್ದರೂ, ಉಪ್ಪಿನಕಾಯಿ ಬಗೆಗಿನ ಅವಳ ಏಕಾಗ್ರತೆಗೆ ಭಂಗ ಉಂಟಾಗುವುದಿಲ್ಲ! ಮುಂದೆ ಎರಡು ದಿನ ಉಪ್ಪಿನ ಸ್ನಾನದ ನಂತರ ಹೋಳುಗಳನ್ನು ತೆಗೆದು ಕೈಯಿಂದ ಹಿಂಡಿ, ಅಗಲವಾದ ತಟ್ಟೆಯಲ್ಲಿ ಹರಡಿ ಬಿಸಿಲಿನಲ್ಲಿಟ್ಟು ಸೂರ್ಯಸಂಸ್ಕಾರ ಮಾಡುತ್ತಾಳೆ. ಮುಂದೆ ಹುಣಿಸೆಹಣ್ಣನ್ನು ಪ್ರಮಾಣಕ್ಕನು ಗುಣವಾಗಿ ತೆಗೆದುಕೊಂಡು, ಬೀಜ ನಾರುಗಳನ್ನು ಬೇರ್ಪಡಿಸಿ ಉಪ್ಪು ನೀರಿನಲ್ಲಿ ಮುಳುಗಿಸುತ್ತಾಳೆ. ಎರಡು ದಿನ ಸೂರ್ಯಸಂಸ್ಕಾರದ ನಂತರ ಒಣಗಿದ ಹೋಳುಗಳನ್ನು ಮಿಕ್ಸಿಯಲ್ಲಿ ಅರೆದು ಅದಕ್ಕೆ ಮೆಣಸಿನ ಪುಡಿ ಸೇರಿಸುತ್ತಾಳೆ. ಅದನ್ನು ಮತ್ತೆ ಉಪ್ಪುನೀರಿನಲ್ಲಿ ಬೆರೆಸುತ್ತಾಳೆ. ಅನಂತರ ವಗ್ಗರಣೆ ಎಂಬ ಅಂತಿಮ ಘಟ್ಟ. ಮನೆಯ ತುಂಬ ಉಪ್ಪಿನಕಾಯಿಯ ಘಮಘಮ ಹರಿದಾಡುತ್ತದೆ.

ಶಾಂತಾಳ ಕೈಗುಣದಿಂದಾಗಿ ಆಕೆ ತಯಾರಿಸಿದ ಉಪ್ಪಿನಕಾಯಿನ ರಸಿಕರ ಸಂಖ್ಯೆ ಹೆಚ್ಚಿತು. ಪರಿಚಿತರು ಭೇಟಿ ಮಾಡಿದಾಗ, ಅಥವಾ ದೂರವಾಣಿ ಮೂಲಕ ಸಂಪರ್ಕಿಸಿದಾಗ, ಉಪ್ಪಿನಕಾಯಿಯ ವಿಚಾರ ತಪ್ಪದೇ ಪ್ರಸ್ತಾಪ ವಾಗತೊಡಗಿತು. ಕೆಲವು ಪರಿಚಿತ ಗೃಹಿಣಿಯರು ದೂರವಾಣಿ ಮೂಲಕ ತಯಾರಿಕೆಯ ವಿಧಾನವನ್ನು ಕೇಳಿ ತಿಳಿದುಕೊಂಡು ತಾವೂ ಪ್ರಯತ್ನಿಸಿದ್ದಾರೆ. ಮದುವೆ ಮಾಡಿಕೊಂಡು ಈಗ ಅಮೆರಿಕದಲ್ಲಿ ನೆಲೆಸಿರುವ ನಮ್ಮ ಪರಿಚಿತ ಯುವತಿ, ಆಂಟಿಯಿಂದ ತಯಾರಿಕೆಯ ವಿಧಾನ ತಿಳಿದುಕೊಂಡು, ಟೊಮ್ಯಾಟೋ ಬೆಲೆ ಕೆ.ಜಿ.ಗೆ ಮೂರು ರೂಪಾಯಿ ಇದ್ದಾಗ, ಹತ್ತು ಕೆ.ಜಿ. ಟೊಮ್ಯಾಟೋ ಉಪ್ಪಿನಕಾಯಿ ತಯಾರಿಸಲು ಪ್ರಯತ್ನಿಸಿ, ಏನೋ ಯಡವಟ್ಟಾಗಿ ಅದಷ್ಟೂ ಬೂಷ್ಟು ಹಿಡಿದು ಹಾಳಾದದ್ದುಂಟು! ಮತ್ತೊಬ್ಬ ಗೃಹಿಣಿ ದೂರವಾಣಿಯಲ್ಲಿ ತಯಾರಿಕಾ ವಿಧಾನ ಕೇಳಿ ತಿಳಿದುಕೊಳ್ಳುತ್ತಿದ್ದ ಸಂದರ್ಭದಲ್ಲಿ, ಉಪ್ಪಿನಕಾಯಿಗೆ ಬೆಳ್ಳುಳ್ಳಿ ಸೇರಿಸುವ ವಿಷಯ ತಿಳಿದು 'ಅಯ್ಯೋ' ಎಂದು ಮೂಗುಮುಚ್ಚಿಕೊಂಡರೂ, ಬೆಳ್ಳುಳ್ಳಿ ಉಪಯೋಗಿಸದೆ ಉಪ್ಪಿನಕಾಯಿ ತಯಾರಿಸುವ ಪ್ರಯೋಗದಲ್ಲಿ ಯಶಸ್ವಿಯಾದರು!

ಒಮ್ಮೆ, ಒಂದು ಕೆ.ಜಿ. ಟೊಮ್ಯಾಟೋಗೆ ಎಂಬತ್ತು ರೂಪಾಯಿ ತೆರಬೇಕಾಗಿ ಬಂದಿತು. ಆಗ ಉಪ್ಪಿನಕಾಯಿ ಸಂಬಂಧವನ್ನು ನಾವಾಗಿಯೇ ತ್ಯಜಿಸ ಬೇಕಾಯಿತು. ಅಲ್ಲದೆ, ನಾವು ಮೊದಲಿದ್ದ ಮನೆಗಿಂತ ಈಗಿರುವ ಬಾಡಿಗೆ ಮನೆಗೆ ಯಾವ ಕಡೆಯಿಂದಲೂ ಬಿಸಿಲೇಬಾರದಂತೆ, ಮಾಲಿಕರು ಎಚ್ಚರವಹಿಸಿ ಕಟ್ಟಿರುವುದರಿಂದ ಉಪ್ಪಿನಕಾಯಿ ತಯಾರಿಕೆಯನ್ನು ಮರೆಯಲೇಬೇಕಾಯಿತು!

* * *

ಆದರೆ ನನ್ನ ಪಾಲಿಗೆ ಅದು ಊಟಕ್ಕಿಲ್ಲದ ಉಪ್ಪಿನಕಾಯಿ! ಊಟದಲ್ಲಿ ಉಪ್ಪು ಕಡಿಮೆ ಮಾಡಬೇಕೆಂದೂ, ಉಪ್ಪಿನಕಾಯಿ, ಬ್ರೆಡ್ಡು – ಮುಂತಾದುವನ್ನು




ಕನಸಿನಲ್ಲೂ ಕಾಣಬಾರದೆಂದೂ, ನಮ್ಮ ಡಾಕ್ಟರು ಅಪ್ಪಣೆ ಕೊಡಿಸಿಬಿಟ್ಟಿದ್ದಾರೆ. ಅದನ್ನು ನಾನು ಒಮ್ಮೊಮ್ಮೆ ಶಿರಸಾವಹಿಸಿ ಪಾಲಿಸುವುದಿಲ್ಲವೆನ್ನಿ!

ಶಾಂತಾ ನೀಲಗಿರಿಯಿಂದ ಹೊತ್ತು ತಂದಿದ್ದ ಗಜನಿಂಬೆ ಉಪ್ಪಿನಕಾಯಿ ತಯಾರಿಕೆಯ ಕೆಲಸದಲ್ಲಿ ತೊಡಗಿಕೊಂಡಳು. ನಿಂಬೆ, ಆಮಟೆ, ನೆಲ್ಲಿ, ಗಜನಿಂಬೆ, ಮಾವು, ಟೊಮ್ಯಾಟೋ – ಹೀಗೆ ಪ್ರತಿಯೊಂದರ ತಯಾರಿಕೆಯ ವಿಧಾನ ಬೇರೆ ಬೇರೆಯಾದರೂ, ತಯಾರಿಕೆಯಲ್ಲಿ ಏಕ ರೀತಿಯ ಶ್ರದ್ಧೆ. ಆಕೆಯ ಚಟುವಟಿಕೆಯನ್ನು ಬರಿದೆ ಗಮನಿಸಬಹುದಿತ್ತಷ್ಟೆ. ಆಕೆಗೆ ಸಲಹೆ ನೀಡುವಂಥ ಕೆಲಸಕ್ಕೆ ಪ್ರಯತ್ನಿಸುವಂತಿರಲಿಲ್ಲ.

ಈ ಮಧ್ಯೆ ಮನುಷ್ಯ ಉಪ್ಪನ್ನು ಶೋಧಿಸಿದ್ದು ಯಾವಾಗ? ಮೊದಲಿಗೆ ಉಪ್ಪಿನ ರುಚಿ ನಾಲಿಗೆಗೆ ತಾಗಿದಾಗ ಆತನ ಮುಖದಲ್ಲಿ ಎಂಥ ಸಂಭ್ರಮ ಕಾಣಿಸಿಕೊಂಡಿರಬಹುದು? – ಮುಂತಾದ 'ಮೂಲಭೂತ' ಪ್ರಶ್ನೆಗಳು ನನ್ನನ್ನು ಕಾಡಿಸತೊಡಗಿದವು. ಮನುಷ್ಯ ಆಹಾರ ಸಂಗ್ರಹಿಸಿಡುವುದನ್ನು ರೂಢಿಸಿಕೊಂಡಾಗಲೇ ಉಪ್ಪಿನಕಾಯಿಯ ಆವಿಷ್ಕಾರವಾಗಿರಬೇಕು – ಎನ್ನಿಸಿತು.

ಉಪ್ಪಿನಕಾಯಿಯ ಇತಿಹಾಸ ಹುಡುಕುವ ಪ್ರಯತ್ನ ಮಾಡಿದೆ. ಕ್ರಿ. ಪೂ. ೨೦೩೦ರಿಂದಲೇ ಉಪ್ಪಿನಕಾಯಿ ಬಳಕೆಯಲ್ಲಿತ್ತು. ಹಳೆಯ ಒಡಂಬಡಿಕೆಯಲ್ಲೇ ಉಪ್ಪಿನಕಾಯಿಯ ಪ್ರಸ್ತಾಪವಿತ್ತು. ನಮ್ಮ ವೇದಗಳಲ್ಲಿ ಉಪ್ಪಿನಕಾಯಿ ರುಚಿಯನ್ನು ವರ್ಣಿಸುವ ಶ್ಲೋಕಗಳು ಇರಲೇಬೇಕು! ಎಂದು ತೀರ್ಮಾನಕ್ಕೆ ಬರಬಹುದು! ಕ್ರಿ.ಪೂ.ದಲ್ಲಿ ಭಾರತದಿಂದ ತರುತ್ತಿದ್ದ ಸೌತೆಕಾಯಿಯಿಂದ ಉಪ್ಪಿನಕಾಯಿ ತಯಾರಿಸುವ ರೂಢಿ ಟೈಗ್ರಿಸ್ ಕಣಿವೆಯಲ್ಲಿ ಪ್ರಾರಂಭವಾಯಿತು. ಭಾರತಕ್ಕೆ ದಂಡೆತ್ತಿ ಬಂದಿದ್ದ ಅಲೆಗ್ಸಾಂಡರ್ ಉಪ್ಪಿನಕಾಯಿಯಲ್ಲಿರುವ ಔಷಧೀಯ ಗುಣವನ್ನು ಕಂಡುಕೊಂಡ. ಅಮೇರಿಕದ ಅಧ್ಯಕ್ಷನಾಗಿದ್ದ ಜಾರ್ಜ್ ವಾಷಿಂಗ್ಟನ್ನನ ಬಳಿ ೪೭೮ ಬಗೆಯ ಉಪ್ಪಿನಕಾಯಿಗಳ ಸಂಗ್ರಹವಿತ್ತು! ಅಬ್ಬಬ್ಬಾ! ಮುಖ್ಯ ಆಹಾರವಲ್ಲದ ಈ ಉಪ್ಪಿನಕಾಯಿಯದು ಎಂಥಾ ವರ್ಣರಂಜಿತ ಹಾಗೂ ೪೦೦೦ ವರ್ಷಗಳಷ್ಟು ದೀರ್ಘ ಇತಿಹಾಸ!



ಆದಿವಾಸಿಗಳಿಂದ ಹಿಡಿದು ಆಧುನಿಕ ಮನುಷ್ಯರವರೆಗೆ ಉಪ್ಪಿನಕಾಯಿ ಎಲ್ಲರ ಮನಸ್ಸುಗಳನ್ನು ಸೂರೆಗೊಂಡಿದೆ. ಉಪ್ಪಿನಕಾಯಿ ದೆಸೆಯಿಂದ ಒಂದೊಂದು ಸೀಮೆಗೂ ಖ್ಯಾತಿ ಬಂದಿದೆ. ಕರಾವಳಿಯ ಮಾವಿನಮಿಡಿ ಅಥವಾ ಆಂಧ್ರದ ಆವಕಾಯ ಇತ್ಯಾದಿ. ಉಪ್ಪಿನಕಾಯಿ ರುಚಿಯಿಂದ ಹೊರತಾದ ಯಾವ ದೇಶವೂ ಪ್ರಪಂಚದ ಭೂಪಟದಲ್ಲಿಲ್ಲ. ಬಗೆಬಗೆಯ ತರಕಾರಿಗಳು, ಹಣ್ಣುಗಳು, ಮಾಂಸ, ಮೀನು, ಸೀಗಡಿ – ಹೀಗೆ. ಕಪ್ಪೆ ಕಾಲಿನ ಉಪ್ಪಿನಕಾಯಿ ಬಳಕೆಯಲ್ಲಿದೆಯೆಂದು ಕೇಳಿದ್ದೇನೆ. ಅವರವರ ಅಭಿರುಚಿಗೆ ತಕ್ಕಂತೆ ಉಪ್ಪಿನಕಾಯಿ!

ಗೃಹಿಣಿಯಾಗಿ ಶಾಂತಾ ಉಪ್ಪಿನಕಾಯಿ ತಯಾರಿಸುವ ಕಲೆಯನ್ನು ಕರಗತಮಾಡಿಕೊಂಡಿದ್ದಳು. ಗಜನಿಂಬೆ ಉಪ್ಪಿನಕಾಯಿ ನಿರೀಕ್ಷೆಗಿಂತ ಉತ್ತಮ ಮಟ್ಟದ್ದಾಗಿತ್ತು. ಆದರೆ ಹೆಚ್ಚಿನ ಪ್ರಮಾಣದಲ್ಲಿದ್ದುದರಿಂದ ಅದನ್ನು ಖಾಲಿ ಮಾಡುವ ಪ್ರಶ್ನೆ ಎದುರಿಸಬೇಕಾಯಿತು. ಮನೆಗೆ ಬಂದವರಿಗೆ, ಸಮೀಪದ ಪರಿಚಿತರಿಗೆ ಹಂಚಿದ್ದಾಯಿತು. ಶಬರಿಮಲೆಗೆ ಹೊರಟಿದ್ದ ಅಯ್ಯಪ್ಪಗಳಿಗೆ ಒಂದು ದೊಡ್ಡ ಡಬ್ಬಿ ಸರಬರಾಜಾಯಿತು. ದಾರಿಯಲ್ಲಿ ಒಂದೇ ದಿನಕ್ಕೆ ಅದನ್ನು ಚಪ್ಪರಿಸಿ ಹಾಕಿದ್ದರು ಅಯ್ಯಪ್ಪಗಳು! ದೊಡ್ಡ ಪ್ರಮಾಣದಲ್ಲಿ ತಯಾರಿಸಿಕೊಟ್ಟರೆ ತಾವು ಮಾರಾಟ ಮಾಡಿಕೊಡುವುದಾಗಿ ಅಯ್ಯಪ್ಪಗಳಿಂದ ಸಲಹೆ ಬಂದಿತು! ನನ್ನಂತೆ ನನ್ನಾಕೆಯೂ ಅಂಜಿಕೆ ಸ್ವಭಾವದವಳು. ನಮಗ್ಯಾಕೆ ದೊಡ್ಡಮಟ್ಟದ ಉಸಾಬರಿ ಎಂದು ತೆಪ್ಪಗಾದೆವು.

ಸುಮಾರು ಒಂದು ತಿಂಗಳ ನಂತರ ಸಲ್ಲಿವನ್ ಕೇಂದ್ರದ ಗಾಯತ್ರಿ ಅವರಿಂದ ದೂರವಾಣಿ ಕರೆ ಬಂತು, ಮೇಡಂ ಜೊತೆಗೆ ತುರ್ತಾಗಿ ಮಾತಾಡಬೇಕೆಂದು.

ಗಾಯತ್ರಿ ಗಜನಿಂಬೆ ಉಪ್ಪಿನಕಾಯಿ ಹಾಕುವ ವಿಧಾನವನ್ನು ಟಿಪ್ಪಣಿ ಮಾಡಿಕೊಂಡಿದ್ದರಷ್ಟೆ. ಅದರಲ್ಲಿ ವಗ್ಗರಣೆ ವಿಭಾಗವನ್ನು ಮತ್ತೊಮ್ಮೆ ಖಚಿತಪಡಿಸಿಕೊಳ್ಳುವ ಸಲುವಾಗಿ ಕರೆ ಮಾಡಿದ್ದರು! ಬರಿಯ ಉಪ್ಪು, ಹುಳಿ, ಖಾರ ಸೇರಿಸಿಬಿಟ್ಟರೆ ಅಡುಗೆ ಆಗಲಾರದಷ್ಟೆ. ಅದಕ್ಕೊಂದು ವಿಧಾನ, ಒಂದು ಶಿಸ್ತು ಇರುತ್ತದೆ. ಅದನ್ನು ಅನುಸರಿಸಿದಾಗಲೇ ಉಪ್ಪಿನಕಾಯಿಗೂ ರುಚಿ!

ಶಾಂತಾ ಪ್ರತಿಯೊಂದನ್ನೂ ವಿವರಿಸಿ ಹೇಳುವಾಗ, ನನ್ನ ತಲೆಯಲ್ಲಿ ಸಲ್ಲಿವನ್ ಯಾವ ಬಗೆಯ ಉಪ್ಪಿನಕಾಯಿ ರುಚಿ ನೋಡಿರಬಹುದು ಎಂಬ ತಮಾಷೆಯ ವಿಷಯ ಸುಳಿದಾಡುತ್ತಿತ್ತು.

ಉಪ್ಪಿನಕಾಯಿ ಬಾಂಧವ್ಯದ ಜೊತೆಗೆ, ಶಾಂತಾ ಅಲ್ಲಿಂದ ತಂದಿದ್ದ ಗಿಡಗಳ ಪೈಕಿ ಕೆಲವು ಚಿಗುರಿರುವ ವಿಷಯವನ್ನು ಸಂತೋಷದಿಂದ ಹಂಚಿಕೊಂಡಳು. ಅರೆ! ಈ ಸ್ನೇಹ ಸಂಬಂಧಗಳು ಹೇಗೆಲ್ಲ ಮೊಳಕೆಯೊಡೆಯುತ್ತವೆ ಎಂಬ ವಿಷಯ ನನ್ನ ತಲೆಯಲ್ಲಿ ಸುಳಿದುಹೋಯಿತು. ಉಪ್ಪಿನಕಾಯಿ ರುಚಿ ಚಿರಾಯುವಾಗಲಿ ಎಂದುಕೊಂಡೆ. ನಾವಂತೂ ಮೊಸರನ್ನದ ಜೊತೆಗೆ ಉಪ್ಪಿನಕಾಯಿ ತಿನ್ನುವುದನ್ನು ರೂಢಿಸಿಕೊಂಡವರು. ಉಪ್ಪಿನಕಾಯಿಯನ್ನು ಯಾರು ಯಾರು ಹೇಗೆಲ್ಲ ಬಳಸುತ್ತಾರೆ ಎಂಬ ಬಗ್ಗೆ ಯಾರಾದರೂ ಸಂಶೋಧನೆ ನಡೆಸಬೇಕೆಂದು ಸಲಹೆ ಮಾಡಿದರಾಗಬಹುದು ಎನ್ನಿಸುತ್ತದೆ.

---

ಚಿತ್ರಲೇಖನ : **ಪರಂಜ್ಯೋತಿ**


ನಂ. ೧೦, ೧ನೇ ಮಹಡಿ, ಶ್ರೀರಾಮ ದೇವಾಲಯ ರಸ್ತೆ, ಈಜಿಪುರ, ವಿವೇಕನಗರ ಅಂಚೆ
ಬೆಂಗಳೂರು – ೫೬೦ ೦೪೭




ನಾನು ಓದಿದ ಪುಸ್ತಕ

| | | |
|---|---|---|
| ಕೃತಿ | : | **ಅಂಗಾರೆ** |
| ಲೇಖಕರು | : | **ಶಕೀಲ್ ಸಿದ್ದೀಕೀ** |
| ಪುಟ | : | ೧೧೨ |
| ಬೆಲೆ | : | ರೂ. ೬೦/– |
| ಪ್ರಕಾಶಕರು | : | **ಪರಿಮಳ್ ಪ್ರಕಾಶನ್**, ಇಲಹಾಬಾದ್ |

# ಪುರುಷಾಧಿಪತ್ಯ ಪ್ರಶ್ನಿಸುವ ಕಥಾ ಸಂಕಲನ 'ಅಂಗಾರೆ' ಕುರಿತು

೧೯೩೧ರಲ್ಲಿ ಪ್ರಕಟಗೊಂಡು ೧೯೩೩ರಲ್ಲಿ ನಿಷೇಧಗೊಂಡ ಕಥಾ ಸಂಕಲನ 'ಅಂಗಾರೆ' ಆ ಕಾಲದಲ್ಲಿ ಬ್ರಿಟಿಷ್ ಆಡಳಿತದ ಕೆಂಗಣ್ಣಿಗೆ ಗುರಿಯಾಯಿತು. ಇದರ ಸಂಪಾದಕರು ಸಜ್ಜಾದ್ ಜಾಹಿರ್. ಆಗಿನ್ನೂ ಅವರು ವಿದ್ಯಾರ್ಥಿ. ತಮ್ಮ ಇತರ ಕೆಲವು ಮಿತ್ರರ ಜೊತೆಗೂಡಿ ಅವರು ಈ ಕಥಾ ಸಂಕಲನವನ್ನು ಹೊರತಂದರು. ರಾಜಕೀಯ ಬಂಡಾಯ ಧ್ವನಿಗಿಂತ ಸಾಮಾಜಿಕ ಬಂಡಾಯದ ಧ್ವನಿ ಇದರಲ್ಲಿ ಗಾಢವಾಗಿದ್ದು ಈ ಕೃತಿಯು ನಿಷೇಧಗೊಳ್ಳಲು ಮುಖ್ಯ ಕಾರಣವಾಗಿದ್ದುದು ಗಮನಾರ್ಹ. ಬ್ರಿಟಿಷ್ ಆಡಳಿತ ಇದ್ದಾಗ, ರಾಷ್ಟ್ರೀಯವಾದಿ ದೃಷ್ಟಿಕೋನದಿಂದ ಬ್ರಿಟಿಷರ ವಿರುದ್ಧ ಪ್ರಕಟಗೊಂಡ ಕೃತಿಗಳನ್ನು ಬ್ರಿಟಿಷರು ನಿಷೇಧಿಸಿದ್ದು ಸಹಜವಾಗಿತ್ತು. ಆದರೆ, ತಮ್ಮ ಆಡಳಿತಕ್ಕೆ ನೇರವಾಗಿ ಯಾವುದೇ ಬಂಡುಕೋರ ಧ್ವನಿ ಪ್ರಕಟವಾಗಿಲ್ಲದಿದ್ದರೂ, ಅಂದಿನ ಸಾಮಾಜಿಕ ರೂಢಿಗಳ ವಿರುದ್ಧ ವ್ಯಕ್ತಗೊಂಡ ಧ್ವನಿಯನ್ನು ಒಳಗೊಂಡ ಕೃತಿಯಾಗಿದ್ದು, ನಿಷೇಧಗೊಂಡ ಕಾರಣಕ್ಕೆ 'ಅಂಗಾರೆ' ಪ್ರಾಮುಖ್ಯತೆ ಪಡೆದುಕೊಳ್ಳುತ್ತದೆ. ರಾಜ್ಯಾಡಳಿತ, ವ್ಯಾಪಾರ, ಲಾಭ ಇವು ಮುಖ್ಯ ಗುರಿಯಾಗಿದ್ದರೂ, ಬ್ರಿಟಿಷ್ ಆಡಳಿತಗಾರರು ಸಾಮಾಜಿಕವಾಗಿ ಭಾರತೀಯ ಸಮಾಜದಲ್ಲಿ ಬಂಡಾಯ ಸ್ಫೋಟಗೊಳ್ಳುವುದನ್ನು ಎಂದಿಗೂ ಬಯಸಿದವರಲ್ಲ. ಸಾಮಾಜಿಕ ಬಂಡಾಯವು ಸಮಾಜದಲ್ಲಿ ತಲ್ಲಣ ಸೃಷ್ಟಿಸಿ, ಆ ಪರಿಣಾಮವಾಗಿ ತನ್ನ ರಾಜ್ಯಾಡಳಿತ, ವ್ಯಾಪಾರ, ಲಾಭಕ್ಕೆ ಸಂಚಕಾರ ಬಂದಿತೇನೋ ಎಂದೆನಿಸಿದಾಗೆಲ್ಲ ಬ್ರಿಟಿಷ್ ಆಡಳಿತ ತನ್ನ ಗದಾಪ್ರಹಾರ ನಡೆಸಿರುವುದನ್ನು ಇತಿಹಾಸದ ಪುಟಗಳಲ್ಲಿ ಯಥೇಚ್ಛವಾಗಿ ಕಾಣಬಹುದು.

'ಅಂಗಾರೆ' ಕಥಾ ಸಂಕಲನದಲ್ಲಿ ಇರುವ ಕಥೆಗಳು ಸಮಾಜದಲ್ಲಿನ ಗೊಡ್ಡು ಸಂಪ್ರದಾಯಗಳ ವಿರುದ್ಧ ಆವೇಶಪೂರಿತ ಗಟ್ಟಿ ಧ್ವನಿ ಎತ್ತಿರುವುದನ್ನು ದಾಖಲಿಸಿವೆ. ಇವುಗಳಿಗೆ ನೆಲೆ ಒದಗಿಸಿದ ಧರ್ಮವನ್ನು ಇಲ್ಲಿನ ಕಥೆಗಳಲ್ಲಿ ಕಟಕಟೆಯಲ್ಲಿ ನಿಲ್ಲಿಸಲಾಗಿದೆ. ಧರ್ಮಗಳನ್ನು ದೇವರು ನಿರ್ಮಿಸಿರುವುದೇ ನಿಜವಾದಲ್ಲಿ, ದೇವರು ಕೂಡ ಪಾಟಿ ಸವಾಲಿಗೆ ಒಳಗಾಗಬೇಕಾಗುತ್ತದೆ ಎಂಬುದನ್ನು ಪ್ರತಿಪಾದಿಸಲಾಗಿದೆ. ವಿವಿಧ ನಮೂನೆಯ ಮೌಢ್ಯ, ಮಡಿವಂತಿಕೆ, ಬಡವ–ಬಲ್ಲಿದ ಎಂಬ ಭೇದಭಾವ, ಸನಾತನವಾದಿ ಆಚರಣೆಗಳು, ಕಪಟಾಚಾರ ಇತ್ಯಾದಿಗಳನ್ನು ಇಲ್ಲಿ ಒತ್ತಿ ಹೇಳಿ, ಕಟುವಾಗಿ ಟೀಕಿಸಲಾಗಿದೆ. ಪರಿಣಾಮವಾಗಿ, 'ಅಂಗಾರೆ' ಕಥಾ ಸಂಕಲನವು ಅಂದಿನ ಜಡ್ಡುಗಟ್ಟಿದ ಸಮಾಜದಲ್ಲಿ ಭಾರಿ ಸಂಚಲನವನ್ನು ಹುಟ್ಟುಹಾಕಿತು. ಪುರುಷ ಪ್ರಾಧಾನ್ಯದ ನೆಲೆಗಟ್ಟಿನ ಪೈಶಾಚಿಕತೆ, ಸ್ವಾರ್ಥ ಮನೋಭಾವಗಳನ್ನು ಕಟುವ್ಯಂಗ್ಯಕ್ಕೆ ಇಲ್ಲಿನ ಕಥೆಗಳಲ್ಲಿ ಗುರಿಪಡಿಸಲಾಗಿದೆ.

ಪ್ರಕೃತಿಯಲ್ಲಿ ಮನುಷ್ಯ ಇತರ ಸಹಸ್ರಾರು ಪಶು–ಪಕ್ಷಿಗಳಂತೆ ಒಬ್ಬ ಜೀವಿ. ಸಮಾಜದಲ್ಲಿ ಸುಸ್ಥಿರತೆ, ಸಾವಯವ ವ್ಯವಸ್ಥೆ, ಸಹಬಾಳ್ವೆಗೆ ಪೂರಕವಾಗಿ ಮನುಷ್ಯರಿಂದ ರೂಪಿಸಲ್ಪಡುವ ಕಟ್ಟುಕಟ್ಟಳೆಗಳನ್ನು ಒಪ್ಪಬಹುದು. ಇವುಗಳಲ್ಲೂ ಕಾಲ, ಸಂದರ್ಭಗಳಿಗೆ ತಕ್ಕಂತೆ ಪರಿವರ್ತನೆಯನ್ನು ತಂದುಕೊಳ್ಳುವುದು ವಿವೇಚನಾಶೀಲ ಮನಸ್ಸಿನ ಹೊಣೆಗಾರಿಕೆ, ಮನುಷ್ಯರು ದೇಹ ಮತ್ತು ಮನಸ್ಸು ಎರಡನ್ನೂ ಹೊಂದಿದವರಾಗಿರುವುದರಿಂದ, ಅವರು ಈ ಎರಡರ ಹಸಿವು–ಬಯಕೆಯನ್ನು ತೃಪ್ತಿಪಡಿಸಲು ಪ್ರಯತ್ನಿಸುವುದು ಸಹಜವೇ. ಇದು ವಿಶ್ವಾಸ, ಸಮಾನತೆ, ಸಹೃದಯತೆ ಇತ್ಯಾದಿಗಳ ಆಧಾರದಲ್ಲಿ ನಡೆಯುವುದನ್ನು ಧರ್ಮ ಬೆಂಬಲಿಸುವುದು ಅತ್ಯವಶ್ಯ. ಆದರೆ ತಮ್ಮ ದೇಹಕ್ಕೆ ಅಥವಾ ಮನಸ್ಸಿಗೆ ಘಾಸಿ ಉಂಟುಮಾಡುವಂಥ ಯಾವುದೇ ವಿದ್ಯಮಾನಗಳ ವಿರುದ್ಧ ಬಂಡಾಯದ ಧ್ವನಿ ಎತ್ತುವುದು ಮತ್ತು ಅಂಥ ವಿದ್ಯಮಾನಗಳನ್ನು ಧಿಕ್ಕರಿಸುವ ಕೃತ್ಯಗಳಿಗೆ ತೊಡಗುವುದು ಮನುಷ್ಯಸ್ವಭಾವದ ಸಹಜ ಗುಣ. ಇದನ್ನು ಧರ್ಮ ಅರ್ಥ ಮಾಡಿಕೊಳ್ಳದೆ ಹೋದರೆ, ಸಮಾಜ ವ್ಯವಸ್ಥೆಯಲ್ಲಿ ಆಕ್ರೋಶ ಮಡುಗಟ್ಟುತ್ತದೆ, ಬಂಡಾಯ ಸಹಜವಾಗಿ ಭುಗಿಲೇಳುತ್ತದೆ, ಅನಾಹುತ ಸಂಭವಿಸುತ್ತದೆ.

ದೇವರು ಮತ್ತು ಧರ್ಮದ ಹೆಸರಿನಲ್ಲಿ ಶತಮಾನಗಳಿಂದ ಆಚರಣೆಯಲ್ಲಿ ಇದ್ದ ಗೊಡ್ಡು ಸಾಮಾಜಿಕ, ಧಾರ್ಮಿಕ ನಂಬಿಕೆ–ಸಂಪ್ರದಾಯಗಳನ್ನು ಈ ಕಥಾ ಸಂಕಲನದ ಎಲ್ಲ ಕಥೆಗಾರರು ಧೈರ್ಯದಿಂದ ಪ್ರಶ್ನಿಸಿದ್ದಾರೆ, ಇವರೆಲ್ಲರೂ ಇಸ್ಲಾಂ ಧರ್ಮೀಯರಾಗಿರುವುದರಿಂದ ಸ್ವಾಭಾವಿಕವಾಗಿ ಇವರ ಕಥಾವಸ್ತು ಮುಸ್ಲಿಂ ಸಮಾಜಕ್ಕೆ ಸಂಬಂಧಿಸಿದ್ದಾಗಿದೆ. ಹಾಗಾಗಿ, ಇದು ಇನ್ನೂ ಸಹಜವಾಗಿ ಕ್ಷೋಭೆಯನ್ನು ಉಂಟುಮಾಡುವ ಗುಣ ಪಡೆದುಕೊಂಡಿತು.

ಇಲ್ಲಿನ ಮುಸ್ಲಿಂ ಕಥೆಗಾರರು ವಿದ್ಯಾಭ್ಯಾಸಕ್ಕಾಗಿ ವಿದೇಶಗಳಿಗೆ ಹೋಗುವಷ್ಟು ಆರ್ಥಿಕ ಹಿನ್ನೆಲೆಯಿದ್ದವರು. ಅಲ್ಲಿನ ಸಮಾಜ ವ್ಯವಸ್ಥೆಯನ್ನು ಕಂಡ ಇವರಿಗೆ, ತಮ್ಮ ದೇಶದಲ್ಲಿನ, ತಮ್ಮ ಸಮಾಜದಲ್ಲಿನ ರೂಢಿ, ಸಂಪ್ರದಾಯ, ನಂಬಿಕೆ, ಆಚರಣೆ ಇತ್ಯಾದಿಗಳನ್ನು ವಿಮರ್ಶೆಯ ನಿಕಷಕ್ಕೆ ಒಡ್ಡುವ ಅಪೇಕ್ಷೆ ಉಂಟಾದದ್ದು ಸಹಜವೇ. ಆ ಸಂದರ್ಭದಲ್ಲಿ ಕಂಡುಕೊಂಡ ಒಳನೋಟದಲ್ಲಿ, ತಮ್ಮ ಸಮಾಜದ ವ್ಯವಸ್ಥೆಯ ಒಟ್ಟಾರೆ ಸ್ವರೂಪದ ಬಗ್ಗೆ ಅವರಲ್ಲಿ ಗೊಂದಲ, ಆಕ್ರೋಶ, ವಿರೋಧ ಮೂಡಿದವು. ಈ ಯುವ ಕಥೆಗಾರರ ದೃಷ್ಟಿಯನ್ನು ಮುಖ್ಯವಾಗಿ ಆವರಿಸಿದ್ದು ತಮ್ಮ ಸಮಾಜದಲ್ಲಿ ಪುರುಷ–ಮಹಿಳೆ ನಡುವಣ ಅಪಮೌಲ್ಯಗಳ ಅದ್ವಾನ. ಇಸ್ಲಾಂ ಧರ್ಮವು ಯಾವ ಸಂದರ್ಭದಲ್ಲೂ ಲಿಂಗ ಅಸಮಾನತೆಯನ್ನು ಬೋಧಿಸಿಲ್ಲ. ಆದಾಗ್ಯೂ, ತಮ್ಮ ಸಮಾಜದಲ್ಲಿ ಈ ಬೃಹತ್ ಪ್ರಮಾಣದಲ್ಲಿ ಮತ್ತು ಈ ಅಮಾನುಷ ಮಟ್ಟದಲ್ಲಿ ಪುರುಷ–ಮಹಿಳೆಯರ ನಡುವೆ ಕಂದಕ ನಿರ್ಮಾಣವಾಗಿದ್ದು ಹೇಗೆ ? ಇದಕ್ಕೆ ಪುರುಷ ಪ್ರಧಾನ ಸಮಾಜವೇ ಕಾರಣ ಅಲ್ಲವೇ ? ಇಂಥ ಸಮಾಜದಲ್ಲಿ ಮಹಿಳೆಯರ ಪಾಡೇನು ? ಅವರ ಅಪೇಕ್ಷೆ, ಅನಿಸಿಕೆ, ಅಭಿಪ್ರಾಯ, ವಿಚಾರಗಳನ್ನು

**ಡಾ॥ ಷಾಕಿರಾ ಖಾನಂ**

ಕೇಳಿಸಿಕೊಳ್ಳಲು ಸಮಾಜ ಏಕೆ ತಿರಸ್ಕಾರ ಭಾವನೆ ತೋರುತ್ತಿದೆ? ಮುಸ್ಲಿಂ ಮಹಿಳೆಯರನ್ನು ನಯವಾದ ಮಾತು, ಬೋಧನೆಗಳಿಂದ ಮೂಲೆಗೆ ತಳ್ಳುವ ಕಪಟತನಕ್ಕೆ ಇಸ್ಲಾಂ ಧರ್ಮದ ಒತ್ತಾಸೆ ಇಲ್ಲವೇ? ಇಸ್ಲಾಂ ಧರ್ಮಕ್ಕೆ ಪುರುಷ ಧರ್ಮಗುರುಗಳಿಂದ ನೀಡಲಾಗಿರುವ ವ್ಯಾಖ್ಯಾನವು, ಧರ್ಮದ ಮೂಲಕ ಬೋಧನೆಯನ್ನೇ ವಿಕೃತಗೊಳಿಸುತ್ತದೆಯಲ್ಲ? ಇಂಥ ಸಮಾಜ ವ್ಯವಸ್ಥೆ ಇರುವುದು ಯಾರಿಗೆ ತಾನೇ ಹೆಮ್ಮೆಯ ವಿಷಯವಾಗಲು ಸಾಧ್ಯ? ನಮ್ಮ ಸಮಾಜದಲ್ಲಿನ ಹುಳುಕುಗಳನ್ನು ಎತ್ತಿ ತೋರಿಸುವುದು ನಮ್ಮ ಕರ್ತವ್ಯ ಅಲ್ಲವೆ? ಅವುಗಳ ಬಗ್ಗೆ ಪ್ರಾಮಾಣಿಕ ಚಿಂತನೆ ನಡೆಸಿ, ಅಗತ್ಯವಾದ ಬದಲಾವಣೆಗಳನ್ನು ತಂದುಕೊಳ್ಳುವುದು ನಮ್ಮ ಜವಾಬ್ದಾರಿ ಅಲ್ಲವೆ? – ಎಂಬಿತ್ಯಾದಿ ಪ್ರಶ್ನೆಗಳನ್ನು 'ಅಂಗಾರೆ' ಕಥಾ ಸಂಕಲನ ಎತ್ತಿತು.

ಇಸ್ಲಾಂ ಧರ್ಮವು ತನ್ನನ್ನು ಯಾರೂ ಅನುಸರಿಸಬಹುದಾಗಿದೆ ಎಂದೇ ಹೇಳುತ್ತದೆ. ಆದರೆ, ಅದನ್ನು ಅನುಸರಿಸದಿರುವವರೊಂದಿಗೆ ವಾದಿಸಲು, ಕಾದಾಡಲು ಅದು ಲೇಶಮಾತ್ರವೂ ಹೇಳುವುದಿಲ್ಲ, ತನ್ನನ್ನು ಅನುಸರಿಸುವ ಪುರುಷರು ಮತ್ತು ಮಹಿಳೆಯರಲ್ಲಿ ಯಾರಾದರೂ ಒಬ್ಬರು ಕೀಳು ಎಂದೂ, ಇನ್ನೊಬ್ಬರು ಮೇಲು ಎಂದೂ ಅದು ಪ್ರತಿಪಾದಿಸುವುದಿಲ್ಲ. ಆಸ್ತಿ ಹಕ್ಕು, ವಿದ್ಯಾಭ್ಯಾಸ ಪಡೆಯುವ ಹಕ್ಕು, ವ್ಯಾಪಾರ ಮಾಡುವ ಹಕ್ಕು ಗಂಡನನ್ನು ತಿರಸ್ಕರಿಸುವ ಹಕ್ಕು, ಸಮಾಜ ಸೇವೆ ಹಕ್ಕು, ಮಾನವ ಮೌಲ್ಯಗಳ ರಕ್ಷಿಸುವ ಹಕ್ಕು, ಆಡಳಿತ ನಡೆಸುವ ಹಕ್ಕು – ಹೀಗೆ ಎಲ್ಲಾ ಹಕ್ಕುಗಳು ಇಸ್ಲಾಂ ಧರ್ಮದ ಪ್ರಕಾರ ಪುರುಷರಿಗೆ ಮತ್ತು ಮಹಿಳೆಯರಿಗೆ ಸಮಾನವಾಗಿ ದೊರಕಿವೆ. ಆದರೆ ಇದೇ ಸಮಾಜದಲ್ಲಿ ಈ ಹಕ್ಕುಗಳನ್ನು ಮಹಿಳೆಯರು ಪಡೆದುಕೊಳ್ಳಲು ಕೆಲವಾರು ನಿಬಂಧನೆಗಳನ್ನು, ಕಟ್ಟುಪಾಡುಗಳನ್ನು ವಿಧಿಸಿದ್ದು ದುರಂತ. ಇವುಗಳನ್ನು ಪುರುಷರು ನಿಗದಿಪಡಿಸಿದ್ದು ಇನ್ನೂ ದೊಡ್ಡ ದುರಂತ. ಈ ನಿರ್ಬಂಧಗಳ ಮೂಲಕ ಮಹಿಳಾ ಸಂಕುಲವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳಲು ಪುರುಷರು ನಡೆಸಿರುವ ಹುನ್ನಾರ ನಿರ್ಲಜ್ಜವಾಗಿ ಕಾಣುತ್ತದೆ.



ಇದು ಅಜ್ಞಾನವಾಗಿ, ಅನ್ಯಾಯವಾಗಿ, ಅಧಿಕಾರ ಚಲಾವಣೆಗಾಗಿ, ಅವಿವೇಕವಾಗಿ ಕಾಣುತ್ತಿರುವ ವಾಸ್ತವಕ್ಕೆ ಪುರುಷರು ಮುಸ್ಲಿಂ ಸಮಾಜದ ಇತಿಹಾಸದಲ್ಲಿ ಮತ್ತು ವರ್ತಮಾನದಲ್ಲಿ ಕಣ್ಣು ಬಿಡಲು ಸಿದ್ಧರಿಲ್ಲದಿರುವುದು ಇನ್ನೂ ವ್ಯಥೆಯ ಸಂಗತಿ.

ಇಸ್ಲಾಂ ಎಂಬುದು ಎಲ್ಲ ಮುಸ್ಲಿಮರಿಗೂ ಪವಿತ್ರವಾದುದು. ಪ್ರವಾದಿಯವರು ಎಲ್ಲರಿಗೂ ಪೂಜ್ಯರು. ಅಲ್ಲಾಹ್ ಒಬ್ಬನೇ ಎಲ್ಲರಿಗೂ ದೇವರು. ಹಾಗೆಯೇ ಕಾಬಾ ಎಂಬುದು ಒಂದೆ. ಅದು ಪುರುಷರಿಗೂ ಮತ್ತು ಮಹಿಳೆಯರಿಗೂ ಸಮಾನವಾಗಿ ಪವಿತ್ರವಾದುದು. ಹೀಗಿರುವಾಗ, ಮುಸ್ಲಿಂ ಸಮಾಜದಲ್ಲೇ ಪುರುಷರು ಮತ್ತು ಮಹಿಳೆಯರು ಬೇರೆ ಬೇರೆ ರೂಢಿ, ಕಟ್ಟಪಾಡು, ನಿರ್ಬಂಧನೆಗಳನ್ನು ಏಕೆ ತಮ್ಮ ಮೇಲೆ ವಿಧಿಸಿಕೊಂಡಿದ್ದಾರೆ? ಹೀಗೆ ವಿಧಿಸಿಕೊಳ್ಳುವ ಅಗತ್ಯವನ್ನು ಮನಗಂಡು, ಅದನ್ನು ಜಾರಿಗೊಳಿಸುವ ಸಂದರ್ಭದಲ್ಲಿ ಮುಸ್ಲಿಂ ಸಮಾಜದಲ್ಲಿ ಯಾವತ್ತಾದರೂ, ಪ್ರಪಂಚದ ಯಾವ ಪ್ರದೇಶದಲ್ಲಾದರೂ ಮುಸ್ಲಿಂ ಮಹಿಳೆಯರೊಂದಿಗೆ ಸಮಾಲೋಚನೆ ನಡೆಸಲಾಗಿದೆಯೆ? ಇಸ್ಲಾಂ ಧರ್ಮ ಹೇಳುವುದೇ ಒಂದು, ಅದನ್ನು ಮುಸ್ಲಿಂ ಸಮಾಜದಲ್ಲಿ ಜಾರಿಗೊಳಿಸಲಾಗಿರುವುದೇ ಇನ್ನೊಂದು ಆಗಿದ್ದಲ್ಲಿ, ಇದು ಧರ್ಮದ ಬೋಧನೆಗೆ ಬಗೆಯುವ ದ್ರೋಹವೇ ಅಲ್ಲವೆ? – ಎಂಬಿತ್ಯಾದಿ ಪ್ರಶ್ನೆಗಳೂ 'ಅಂಗಾರೆ' ಕಥಾ ಸಂಕಲನ ಓದುವಾಗ ಮನಸ್ಸಿಗೆ ಮುತ್ತಿಗೆ ಹಾಕುತ್ತವೆ.

**ಕಥಾ ಸಂಕಲನದ ಕಥೆಗಳು**

'ಪರದೆಯ ಹಿಂದೆ' ಧರ್ಮದ ಹೆಸರಿನಲ್ಲಿ ನಡೆಯುತ್ತ ಬಂದಿರುವ ದಬ್ಬಾಳಿಕೆಯನ್ನು ಚಿತ್ರಿಸುವ ಕಥೆ. ಇದು ಅತಿ ತಣ್ಣನೆಯ ದನಿಯಲ್ಲಿ ನೋವನ್ನು ಬಿಚ್ಚಿಡುತ್ತದೆ. ಹೆಣ್ಣು ಚಂಚಲೆ ಎಂಬುದನ್ನು ಸಮಾಜದಲ್ಲಿ ಸ್ಥಾಯಿಮಾಡಿರುವ ವಾಸ್ತವದ ಪರಿಸ್ಥಿತಿಯಲ್ಲಿ ಪುರುಷನ ಚಂಚಲತೆಯನ್ನು ಧೈರ್ಯದಿಂದ ಇದು ಮಂಡಿಸುತ್ತದೆ. ತಾನು ಬಯಸಿದ್ದನ್ನೆಲ್ಲಾ ಪಡೆದುಕೊಳ್ಳಲು ಧರ್ಮವನ್ನು ಬಳಸಿಕೊಳ್ಳುವ ಪುರುಷ ಮನಸ್ಸಿನ ದುಷ್ಟತನವನ್ನು ಇದು ಬಯಲುಗೊಳಿಸುತ್ತದೆ. ಪತಿ ಮತ್ತು ಸಂಸಾರಕ್ಕಾಗಿ ಹೆಣ್ಣು ತನ್ನ ಸ್ವಂತಿಕೆಯನ್ನು ತ್ಯಜಿಸಬೇಕು; ಆಸೆ–ಆಕಾಂಕ್ಷೆಗಳನ್ನು ತ್ಯಾಗಮಾಡಬೇಕು; ಇದರಲ್ಲೇ ಸಮಾಜದ ಒಳಿತಿದೆ; ಇದರಿಂದಲೇ ಹೆಣ್ಣು ಜೀವದ ಸಾರ್ಥಕ್ಯವಿದೆ ಎಂಬ ಹುಸಿ ನಂಬಿಕೆಗಳನ್ನು ಬಿತ್ತಿರುವುದು ಅನ್ಯಾಯದ ಪರಾಕಾಷ್ಠೆಯಲ್ಲವೆ ಎಂಬ ಪ್ರಶ್ನೆಯನ್ನು ಎತ್ತುತ್ತದೆ ಈ ಕಥೆ. ತಾತ, ತಂದೆ, ಸೋದರ, ಪತಿ, ಮಾವ, ಮೈದುನ, ಭಾವ, ಕಡೆಗೆ ಮಗ, ಮೊಮ್ಮಗ ಹೀಗೆ ಎಲ್ಲರೂ ಹೆಣ್ಣಿನ ಮೇಲೆ ತಮಗೆ ಅಧಿಕಾರ ಇದೆ ಎಂಬುದನ್ನು ನಾಚಿಕೆಯಿಲ್ಲದೆ ಪ್ರದರ್ಶಿಸಿ, ಅದನ್ನು ಚಲಾಯಿಸುವ ದುರಹಂಕಾರವನ್ನು ತೋರುವವರೇ ಆಗಿದ್ದಾರಲ್ಲ? ಇದಕ್ಕೆ ದೇವರು ಮತ್ತು ಧರ್ಮದ ಬೆಂಬಲ ಇದೆ ಎಂದು ಕೂಡ ಹೇಳಿಕೊಳ್ಳುವವರಲ್ಲ? ಸ್ವರ್ಗ–ನರಕಗಳ ಭೀತಿಯನ್ನು ಹುಟ್ಟಿಸಿರುವುದು ತಮ್ಮ ಸ್ವಾರ್ಥವನ್ನು ಈಡೇರಿಸಿಕೊಳ್ಳಲಿಕ್ಕಾಗಿ, ಅಲ್ಲವೆ? ಈ ಮೂಲಕ ಇವರು ಕಾಲ ಮತ್ತು ಸಂದರ್ಭಕ್ಕೆ ಅನುಗುಣವಾಗಿ ತಮ್ಮ ಈಗೋ ತೃಪ್ತಿಪಡಿಸಿಕೊಳ್ಳುವರಲ್ಲ? ಹೆಣ್ಣಿನ ದೇಹ ಮತ್ತು ಮನಸ್ಸಿನ ಮೇಲೆ ನಿರಂತರವಾಗಿ ದಾಳಿ ನಡೆಸಿಕೊಂಡೇ ಬರುತ್ತಿರುವರಲ್ಲ, ತಮ್ಮ ತೃಷೆ–ಬಯಕೆಗಳನ್ನು ಈಡೇರಿಸಿಕೊಳ್ಳಲು ಯಾವ ಮಟ್ಟಕ್ಕೆ ಹೋಗಲೂ ಹೇಸದವರಲ್ಲ, ಎಂಬ ವ್ಯಥೆಯು ಇಡೀ ಕಥೆಯ ಮೂಲಕ ಹೊರಹೊಮ್ಮುತ್ತದೆ.

ಜೊತೆಗೆ, ಹೆಣ್ಣು ತನ್ನದೇ ಆದ ದೇಹ ಮತ್ತು ಮನಸ್ಸನ್ನು ಹೊಂದಿರುವವಳಲ್ಲವೆ? ಅವಳಿಗೂ ಆಸೆ–ಆಕಾಂಕ್ಷೆಗಳು ಇದ್ದಿರಬಹುದಲ್ಲವೆ? ಅವುಗಳಿಗೆ ಕಿವಿ, ಮನಸ್ಸು ಕೊಡುವುದು ತಮ್ಮ ಜವಾಬ್ದಾರಿಯಲ್ಲವೆ? ಅವಳ ಮೇಲೆ ತಮ್ಮ ಬೇಕು–ಬೇಡಗಳನ್ನು ಹೇರುವುದೆಂದರೆ, ಅವಳು ದೇಹ–ಮನಸ್ಸು ಇಲ್ಲದ ಯಂತ್ರವೆ? ಶೀಲ ಎಂಬುದು ಕೇವಲ ಹೆಣ್ಣಿಗೆ ಇರುವಂಥದ್ದೆ? ಅದನ್ನು ಹೆಣ್ಣಿಗೆ ಮಾತ್ರ ವಿಧಿಸಿ, ಅದನ್ನು ಸರಪಳಿಯಾಗಿಸಿ, ಹೆಣ್ಣಿನ ದೇಹ ಮತ್ತು ಆತ್ಮವನ್ನು ಬಂಧಿಸಿಟ್ಟುಕೊಂಡು ಬಂದಿರುವುದು ನಿಜಕ್ಕೂ ದೇವರ ಆದೇಶದ ಪ್ರಕಾರವೆ? ಅಥವಾ ಪುರುಷ ಸಮಾಜ ತನ್ನ ದುರುಳತನವನ್ನು ಮರೆಯಲಿಕ್ಕಾಗಿಯೇ? ಚಾರಿತ್ರ್ಯ ಪುರುಷರಿಗೂ

ಮುಖ್ಯವಲ್ಲವೆ? ಅನುಸರಿಸಿಕೊಂಡು ಹೋಗುವುದು ಕೇವಲ ಹೆಣ್ಣಿನ ಕರ್ತವ್ಯವೆ? ಹೆಣ್ಣು ಪುರುಷರಿಗೆ ಅಧೀನಳಾಗಿರಬೇಕೆ? ಪುರುಷರು ಮಾತ್ರ ಸ್ವೇಚ್ಛಾಚಾರಿ ಆಗಿರಬಹುದೆ? ಸರಿ–ತಪ್ಪುಗಳನ್ನು ತಮ್ಮ ಮೂಗಿನ ನೇರಕ್ಕೆ ನಿರ್ಧರಿಸಿ, ಶೀಲ ಮತ್ತು ಅಶ್ಲೀಲ ಎಂಬುದನ್ನು ತಾವೇ ನಿಖರಪಡಿಸಿ, ಅವುಗಳನ್ನು ಸಮಾಜದ ಮೇಲೆ ಹೇರುವುದು ಪುರುಷಾಧಿಪತ್ಯ ಅಲ್ಲವೆ? – ಹೀಗೆ ಪ್ರಶ್ನೆಗಳ ಮೇಲೆ ಪ್ರಶ್ನೆಗಳನ್ನು ಮನಸ್ಸಿನಲ್ಲಿ ಮೂಡಿಸುವ ಕಥೆ ಇದು.

'ನಿದ್ದೆ ಬಾರದು' ಎಂಬ ಕಥೆಯಲ್ಲಿ ದೇಶಕ್ಕೆ ಸ್ವಾತಂತ್ರ್ಯ ಪಡೆಯುವ ಬಯಕೆಯನ್ನು ವ್ಯಂಗ್ಯಕ್ಕೆ ಗುರಿಪಡಿಸಲಾಗಿದೆ. ಈ ಕಥೆ ಬ್ರಿಟಿಷ್ ಆಡಳಿತವನ್ನು ಕಿತ್ತು ಬಿಸಾಡಲು ಕಟಿಬದ್ಧರಾಗಿರುವ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಸಮಾಜದಲ್ಲಿ ಅರ್ಧದಷ್ಟು ಸಂಖ್ಯೆಯಲ್ಲಿ ಇರುವ ಮಹಿಳೆಯರ ಮೇಲೆ ಶತಮಾನಗಳಿಂದ ತಾವು ಎಂಥ ಹೊರೆಯನ್ನು ಹೊತ್ತುಕೊಳ್ಳಲು ಬಲಾತ್ಕರಿಸಿದ್ದೇವೆ ಎಂಬುದನ್ನು ಅರಿಯುತ್ತಿಲ್ಲ ಎಂಬುದರ ಬಗ್ಗೆ ಸೂಚನೆ ನೀಡುತ್ತದೆ. ಭಾರತೀಯರು ಬ್ರಿಟಿಷರಿಗೆ ಸ್ವದೇಶಿಯರಲ್ಲ; ತಮ್ಮ ಸಮಾಜದವರಲ್ಲ; ವಿಶಾಲ ಅರ್ಥದಲ್ಲಿ ಆಲೋಚಿಸಿದರೆ, ಅವರು ಮನುಷ್ಯರಂತೆ ಸಹಜೀವಿಗಳು, ಅಷ್ಟೆ. ಇಂಥವರು ತಮ್ಮ ದೇಹದ ಮೇಲೆ ಹಾಕಿರುವ ಗುಲಾಮಗಿರಿಯ ಸರಪಳಿಯಿಂದ ತಮ್ಮನ್ನು ಬಿಡಿಸಿಕೊಳ್ಳಲು ಭಾರತೀಯರು ಎಂಥ ಹೋರಾಟಗಳಿಗೂ ಸಿದ್ಧರಾದವರು. ಆದರೆ ತಾವು ಶತಮಾನಗಳಿಂದ ತಮ್ಮದೇ ಕುಟುಂಬದ ಬಂಧುಗಳ ಮೇಲೆ ಬೀಭತ್ಸ ಎನ್ನಬಹುದಾದ ನಿರ್ಬಂಧಗಳನ್ನು ಹೇರಿ, ಅವರ ಸ್ವಾತಂತ್ರ್ಯವನ್ನು ಕಿತ್ತುಕೊಂಡವರು ತಾವು ಎಂಬುದನ್ನು ಏಕೆ ಮನವರಿಕೆ ಮಾಡಿಕೊಳ್ಳುತ್ತಿಲ್ಲ? ದೇಶಕ್ಕೆ ಸ್ವಾತಂತ್ರ್ಯ ಬೇಕು ಎನ್ನುವವರು ಕುಟುಂಬದಲ್ಲೂ ಸ್ವಾತಂತ್ರ್ಯ ಇರಲಿ ಎಂಬ ನೈಜ ಉದಾರವಾದಿ ನಿಲುವನ್ನು ಏಕೆ ತಾಳುವುದಿಲ್ಲ?

ಪ್ರಕೃತಿಯಲ್ಲಿ ವಿಭಿನ್ನ ಜೀವಗಳಿವೆ; ಸಸ್ಯಗಳಿವೆ. ಅವುಗಳ ನಡುವೆ ತಾದಾತ್ಮ್ಯ ಇದೆ. ಪ್ರಕೃತಿಯ ಭಾಗವಾಗಿರುವ ಗಾಳಿ–ಬೆಳಕು, ಭೂಮಿ–ಬೆಟ್ಟ, ನದಿ–ಹೊಳೆ, ಬೆಂಕಿ–ಆಕಾಶ ಎಲ್ಲವನ್ನೂ ಮನುಷ್ಯರು ತಮ್ಮ ಅನುಕೂಲಕ್ಕಾಗಿ ಬಳಸಿಕೊಳ್ಳುವುದು ಸಹಜವೇ. ಆದರೆ ಅವುಗಳ ನಾಶಕ್ಕೆ ಮನುಷ್ಯರು ಕಾರಣರಾಗುವುದು ಖಂಡಿತಕ್ಕೂ ಸಲ್ಲದು. ಹೀಗೆಯೇ ಮನುಷ್ಯ ಸಮಾಜದಲ್ಲಿ ಕೂಡ ತಾದಾತ್ಮ್ಯವನ್ನು ಕಾಪಾಡಿಕೊಳ್ಳುವ ಗುರುತರ ಹೊಣೆಗಾರಿಕೆಯನ್ನು ಮನುಷ್ಯರೇ ತೋರಬೇಕು; ತಮ್ಮ ಸಹಜೀವಿಗಳ ಬಗ್ಗೆ ಇದನ್ನು ಮೊದಲು ಕಾಪಾಡಿಕೊಳ್ಳುವುದು ಮುಖ್ಯ. ಈ ಪ್ರಕ್ರಿಯೆಯಲ್ಲಿ ಪುರುಷರು ತಮಗೊಂದು ವಿಶೇಷ, ಪ್ರಮುಖ, ಎತ್ತರದ, ಪವಿತ್ರ, ಅಧಿಕಾರಯುತ ಸ್ಥಾನವನ್ನು ನಿರ್ಮಿಸಿಕೊಂಡು, ಸಹಜೀವಿಗಳಾದ ಮಹಿಳೆಯರನ್ನು ಸಾಮಾನ್ಯ, ಮಹತ್ವಹೀನ, ಅಪವಿತ್ರ, ಅಧಿಕಾರಹೀನ ಸ್ಥಾನಕ್ಕೆ ದೂಡುವುದು ನಿಜಕ್ಕೂ ಪ್ರಕೃತಿಗೂ, ದೇವರಿಗೂ, ಧರ್ಮಕ್ಕೂ ಅಪಚಾರ ಒಗೆಯುವ ರೀತಿ ಅಲ್ಲವೆ? ಮನುಷ್ಯರು ತಮಗಿರುವ ವಿಚಾರ ಶಕ್ತಿಯಿಂದ ತಮ್ಮ ಸಮಾಜದಲ್ಲಿ ಉತ್ತಮ, ಆದರ್ಶ, ಉದಾರ ಮತ್ತು ಅರ್ಥಪೂರ್ಣ ವ್ಯವಸ್ಥೆ ನಿರ್ಮಾಣಗೊಳ್ಳುವ ದಿಕ್ಕಿನಲ್ಲಿ ಹೆಚ್ಚಿನ ಮುತುವರ್ಜಿ ವಹಿಸಬೇಕಿರುವುದು ಅಪೇಕ್ಷಣೀಯ ಅಲ್ಲವೆ? ದೇವರು–ಧರ್ಮದ ಹೆಸರಿನಲ್ಲಿ ಸಂಕೋಲೆಗಳನ್ನು ನಿರ್ಮಿಸಿ, ಅವುಗಳನ್ನು ಕೇವಲ ಮಹಿಳೆಯರ ಮೇಲೆ ಹೇರುವುದು ಸಮರ್ಥನೀಯವೆ? ಧರ್ಮ–ದೇವರಿಗೆ ಅನಿಷ್ಟಗಳ ಹೊರೆಯನ್ನು ಹೊರಿಸುವುದು ಸರಿಯೆ? – ಎಂಬೆಲ್ಲ ಪ್ರಶ್ನೆಗಳಿಗೆ ಅವಕಾಶ ಒದಗಿಸುತ್ತದೆ ಈ ಕಥೆ.

'ಸ್ವರ್ಗ ಕುರಿತ ಊಹೆ' ಎಂಬುದು ಸಮಾಜದಲ್ಲಿನ ಸಂಪ್ರದಾಯಶೀಲ ಮನಸ್ಸುಗಳಿಗೆ ಸವಾಲು ಎಸೆಯುವ ಕಥೆ. ದೇವರು – ಧರ್ಮ ಎಂಬವುಗಳು ಪುರುಷರು–ಮಹಿಳೆಯರನ್ನು ಒಳಗೊಂಡಿರುವ ಈ ಸಮಾಜದಲ್ಲಿ ಯಾವ ಪಾತ್ರವನ್ನು ನಿರ್ವಹಿಸಲು ಅನುವು ದೊರಕಿದೆ? ಈ ಅನುವು ಒದಗಿಸಿದವರು ಪುರುಷರೇ ಅಲ್ಲವೆ? ಈ ವಿಷಯದಲ್ಲಿ ತಮ್ಮ

ಕಾವ್ಯಲೋಕ

# ನೋಯದವರಿಗೇನು ಗೊತ್ತು ನೊಂದವರಿಗಲ್ಲದೆ



ಬುಳುಬುಳನೆ ಗುದುಕುತ್ತ
ಹೊಟ್ಟೆಯನ್ನೆಲ್ಲ ಹಿಂಡಿ ಹಿಪ್ಪೆಯಾಗಿಸಿ
ತಿಂಗಳಿಗೊಮ್ಮೆ ಮೈಲಿಗೆಯಾಗಿಸುವ
ಮುಟ್ಟಿನ ನೋವ ಬಲ್ಲೆಯಾ ?

ಘಾಕಿನ ಪೊರೆ ಕಳಚಿ
ಸೀರೆಯ ಏಳೇಳು ನೆರಿಗೆಗಳು
ಕಾಲಿಗೆ ತೊಡರಿ ಹೆಡೆ ಮಡಚಿ–ಉಳುಕಿದ
ಹಿಮ್ಮಡಿಯ ನೋವ ಬಲ್ಲೆಯಾ ?

ಕಚಕಚನೆ ಕತ್ತರಿಸುವಾಗ
ಚರಕ್ಕನೆ ಕೈ ಬೆರಳು ಕತ್ತರಿಸಿ
ಅಬಗೊತ್ತಿ ಹಿಡಿದರೂ ರಕ್ತ
ಚಿಮ್ಮುವಾಗಿನ ನೋವ ಬಲ್ಲೆಯಾ ?

ರುಚಿಯ ಮೇರು ಬನಿಕೆಗೆ
ವಗ್ಗರಿಸುವಾಗ ಕಾದ ಕಾವಲಿಯಲ್ಲಿ
ಸಾಸಿವೆ ಸಿಡಿದು ಗುಂಬಳಿಸುವ
ಬೊಕ್ಕೆಯ ನೋವ ಬಲ್ಲೆಯಾ ?

ನರನರವನ್ನೆಲ್ಲ ತಿರುಪುತ್ತ
ಬ್ರಹ್ಮಾಂಡವನ್ನೇ ತೊರೆಯಿಸಿ ಹಣ್ಣು ನೀರಾಗಿಸಿ
ಒಡಲನ್ನೇ ಇಬ್ಭಾಗವಾಗಿಸುವ
ಹೆರಿಗೆಯ ನೋವ ಬಲ್ಲೆಯಾ ?

ಹಗಲೆಲ್ಲ ರಾತ್ರಿಯಾಗಿ ರಾತ್ರಿಯೆಲ್ಲ ಹಗಲಾಗಿ
ಚೀರುವ ಕಂದನ ತೊಟ್ಟಿಲ
ತೂಗಿ ತೂಗಿ ತೂಕಡಿಸಿ ಕನ್ನೆತ್ತರುಗೊಂಡ
ಬೆರಳುಗಳ ನೋವ ಬಲ್ಲೆಯಾ ?

ಹುಂಡು ಹಾಲು ಒಸರದಿರೆ ಹಸುಗೂಸು
ಬೇಸತ್ತು ಕಚ್ಚಿ–ಹರಿದು ರಕ್ತವಸರುವ
ಮೊಲೆ ತೊಟ್ಟ ನೋವ ಬಲ್ಲೆಯಾ ?

ಮತ್ತೆ
ಜಗದ ನೋವ ಹೇಗೆ
ಅಳೆಯಬಲ್ಲೆ ನೀನು ?!

**ಮಾಧವಿ ಭಂಡಾರಿ, ಕೆರೆಕೋಣ ಕೇರಾಫ್ ಡಾ|| ವಿಠ್ಠಲ ಭಂಡಾರಿ**
ಮುಖ್ಯಸ್ಥರು, ಕನ್ನಡ ವಿಭಾಗ, ಎಂ.ಜಿ.ಸಿ. ಕಾಲೇಜು, ಸಿದ್ದಾಪುರ – ೫೮೧ ೩೫೫

ಕರ್ತವ್ಯವನ್ನು ನಿರ್ವಹಿಸುವಾಗ ಈ ಪುರುಷರು ನ್ಯಾಯೋಚಿತವಾಗಿ ನಡೆದುಕೊಂಡಿರುವವರೆ ? – ಎಂಬ ಪ್ರಶ್ನೆಗಳನ್ನು ಈ ಕಥೆ ಮುಖ್ಯವಾಗಿ ಕೇಳುತ್ತದೆ.

ರಂಜ಼ಾನ್ ತಿಂಗಳು ಪವಿತ್ರವಾದದ್ದು ಎಂಬ ಗ್ರಹಿಕೆಯನ್ನು ಒಪ್ಪಿದಾಗ, ಇತರ ಹನ್ನೆರಡೂ ತಿಂಗಳು ಅಪವಿತ್ರ ಎಂಬ ಭಾವನೆಗೆ ಮನಸ್ಸು ಇಂಬುಕೊಡಬಾರದಲ್ಲವೆ ? ರಂಜ಼ಾನ್ ತಿಂಗಳಲ್ಲಿ ಒಳ್ಳೆಯ ಚಿಂತನೆ ಮಾಡಬೇಕು; ಒಳ್ಳೆಯ ಮಾತುಗಳನ್ನು ಆಡಬೇಕು; ಸಹನೆಯಿಂದ ನಡೆದುಕೊಳ್ಳಬೇಕು; ಕಡಿಮೆ ಮಾತನಾಡಬೇಕು ಇತ್ಯಾದಿ ಬೋಧನೆಗೆ ಕಿವಿಗೊಡುವುದು ಎಂದರೆ, ಇತರ ಹನ್ನೊಂದು ತಿಂಗಳಲ್ಲಿ ಕೆಟ್ಟ ಚಿಂತನೆ ಮಾಡಬಹುದು; ಕೆಟ್ಟ ಮಾತುಗಳನ್ನು ಆಡಬಹುದು; ಅಸಹನೆ ತೋರಬಹುದು; ಬಡಬಡಿಸುತ್ತಿರಬಹುದು ಎಂದೇನೂ ಅರ್ಥವಲ್ಲ, ಅಲ್ಲವೆ ? ಒಂದು ತಿಂಗಳು ದುಷ್ಟ ಚಟಗಳಿಗೆ, ದುಷ್ಟ ಭಾವನೆಗಳಿಗೆ ಕಡಿವಾಣ; ಹನ್ನೊಂದು ತಿಂಗಳಿಗೆ ಸ್ವೇಚ್ಛಾಚಾರ ಎಂದು ಧರ್ಮ ಖಂಡಿತ ಹೇಳಿಲ್ಲ ಎಂದು ಮನಸ್ಸಿಗೆ ನಾಟುವ ಸಂಗತಿಗಳಿಗೆ ಕತೆ ಕನ್ನಡಿ ಹಿಡಿಯುತ್ತದೆ.

ಮುಸ್ಲಿಂ ಸಮಾಜದಲ್ಲಿ ವಿವಾಹಕ್ಕೆ ಇರುವ ನಿರ್ಬಂಧನೆಗಳನ್ನು ಈ ಕಥೆಯಲ್ಲಿ ವಿಶೇಷವಾಗಿ ಚರ್ಚಿಸಲಾಗಿದೆ. ಪುರುಷ ಮತ್ತು ಮಹಿಳೆ ಜೀವನದಲ್ಲಿ ವಿವಾಹ ಎನ್ನುವುದು ಅತಿ ಮುಖ್ಯವಾದ ಘಟ್ಟ. ಆದರೆ, ಇದಕ್ಕೆ ಸಂಬಂಧಿಸಿ ಯಾವುದೇ ಸಮಾಜದಲ್ಲಿ ಏಕಪಕ್ಷೀಯ ಮತ್ತು ಸ್ವಾತಂತ್ರ್ಯಹರಣಕಾರಿ ನಿರ್ಬಂಧಗಳು ಇರುವುದು ಸಮರ್ಥನೀಯವಲ್ಲ. ವಯಸ್ಕ ಪುರುಷ ಮತ್ತು ಮಹಿಳೆ ತಮಗೆ ತಕ್ಕವರನ್ನು ಆಯ್ಕೆ ಮಾಡಿಕೊಳ್ಳಲು ಪೂರ್ಣ ಸ್ವಾತಂತ್ರ್ಯವು ಸಮಾಜದಲ್ಲಿ ಇರಬೇಕು; ವಯಸ್ಸಿನ ಅಂತರಕ್ಕೆ ಒಂದು ಮಿತಿ ಇರಬೇಕು; ವಿದ್ಯೆ, ಸಂಪತ್ತು ವಿಚಾರದಲ್ಲೂ ಪರಸ್ಪರರಿಗೆ ಹೊಂದಿಕೆ ಆಗುವಂತೆ ಇರಬೇಕು. ದೇಹದ ಅಪೇಕ್ಷೆಯನ್ನು ಈಡೇರಿಸಿಕೊಳ್ಳಲು ಪುರುಷ ಮತ್ತು ಮಹಿಳೆಯರಿಗೆ ಸಮಾನ ನಿರ್ಬಂಧಗಳು ಇರುವುದು ನ್ಯಾಯ. ಪುರುಷರಿಗೆ ಬೇರೆ ಮತ್ತು ಮಹಿಳೆಯರಿಗೆ ಬೇರೆ ವಿಧಿಗಳನ್ನು ರೂಪಿಸುವುದು ಶುದ್ಧ ಅನ್ಯಾಯ.

ಮನುಷ್ಯರು ನೇರವಾಗಿ ದೇವನೊಂದಿಗೆ ಸಂವಾದಿಸಲು, ಸಂಪರ್ಕ ಹೊಂದಲು ಸಮರ್ಥರಿದ್ದಾರೆ. ಇದಕ್ಕೆ ಧರ್ಮದ ಮಾನ್ಯತೆ ಇದೆ. ಆದರೆ ಮುಸ್ಲಿಂ ಸಮಾಜದಲ್ಲಿ ಇದನ್ನು ಒಂದು ರೂಢಿಯಾಗಿ ಬಳಕೆಯಲ್ಲಿ ತರಲಾಗಿಲ್ಲ. ಧಾರ್ಮಿಕ ಕ್ಷೇತ್ರದಲ್ಲಿರುವವರ ಮಧ್ಯಸ್ಥಿಕೆ ವಿನಾ ಮನುಷ್ಯರು ದೇವರ ಸಾನ್ನಿಧ್ಯವನ್ನು ಪಡೆಯಲು ಸಾಧ್ಯವಿಲ್ಲ ಎಂದೇ ಪ್ರಚಾರ ಮಾಡಲಾಗಿದೆ. ಒಟ್ಟಾರೆ, ಧರ್ಮದ ಹೆಸರಿನಲ್ಲಿ ಪುರುಷಶಾಹಿ ನಡೆಸಿಕೊಂಡು ಬಂದಿರುವ ದಬ್ಬಾಳಿಕೆಯನ್ನು ಪ್ರಖರವಾಗಿ ಈ ಕಥೆ ಬಯಲುಗೊಳಿಸುತ್ತದೆ.

ಪುರುಷರಾಗಲಿ, ಮಹಿಳೆಯರಾಗಲಿ ಪರಸ್ಪರರಿಂದ ಬಯಸುವುದು ಪ್ರೀತಿ–ನಂಬಿಕೆ–ವಿಶ್ವಾಸ ಇತ್ಯಾದಿಗಳನ್ನು ನಿಜದಲ್ಲಿ ಒಬ್ಬರು ಇನ್ನೊಬ್ಬರ ಮೇಲೆ ದಬ್ಬಾಳಿಕೆ ನಡೆಸಿದರೆ, ಪ್ರಶ್ನಿಸುವ – ತಿರುಗಿಬೀಳುವ ಪ್ರತಿಕ್ರಿಯೆ ನೀಡುವುದು ಸ್ವಾಭಾವಿಕ. ಹಾಗಾಗಿ, ಬಂಡಾಯ ಸಂಭವಿಸುವುದೇ ಅನ್ಯಾಯ ನಡೆದಾಗ. ಹಾಗಾಗಿ ನಮ್ಮ ಸಮಾಜದಲ್ಲಿ ಹೆಣ್ಣು ದುರ್ಬಲಳು, ಸ್ವಂತಿಕೆ ಇಲ್ಲದವಳು, ಮಾರ್ಗದರ್ಶನ ಬಯಸುವವಳು, ನಿರ್ದೇಶಿಸಲ್ಪಡಬೇಕಾದವಳು... ಇತ್ಯಾದಿ ಭಾವನೆಯನ್ನು ಸಮಾಜದಲ್ಲಿ ಗಾಢವಾಗಿ ಮೂಡಿಸಿರುವುದರ ಪರಿಣಾಮವಾಗಿ ಮಹಿಳೆಯರಲ್ಲಿ ಬಂಡುಕೋರ ಮನೋಭಾವ ಮೂಡುವುದು ಸ್ವಾಭಾವಿಕ. ಆಗ, ಮಾನವೀಯತೆಯನ್ನು ಉಳಿಸುವ ಸಾಧನವಾಗಿರುವ ಧರ್ಮವನ್ನೂ ಪುರುಷರು ತಮ್ಮ ಸ್ವಾರ್ಥಸಾಧನೆಗೆ ಬಳಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಮಹಿಳೆಯರು ಪುರುಷಪ್ರಾಧಾನ್ಯ ಸಮಾಜದ ವಿರುದ್ಧ ಸಿಡಿದೇಳುವುದು ಕೂಡ ಸ್ವಾಭಾವಿಕವೇ. ಇಂಥ ಪರಿಸ್ಥಿತಿಯಲ್ಲೇ ಕೆಲವೊಮ್ಮೆ ಘೋರ ಅನ್ಯಾಯಕ್ಕೆ ಸಾಧನವಾಗಿ ಪರಿಣಮಿಸುವ ಧರ್ಮದ ವಿರುದ್ಧ ಕೂಡ ಮಾತು ಮತ್ತು ಪ್ರತಿಭಟನೆಗಳು ಜರುಗಿಬಿಡುತ್ತವೆ.

ಹೀಗೆ 'ಅಂಗಾರೆ' ಸಂಕಲನದಲ್ಲಿರುವ 'ಜವಾಂ ಮರ್ದಿ', 'ದುವಾರಿ' ಕತೆಗಳು ಮುಸ್ಲಿಂ ಪುರುಷರ ಆಕ್ರಮಣಕಾರಿ ಸ್ವಭಾವ, ಮಹಿಳೆಯರ ಅಸಹಾಯಕತೆ ಕುರಿತ ವಾಸ್ತವಾಂಶಗಳನ್ನು ಮನಕರಗುವಂತೆ ತೆರೆದಿಡುತ್ತವೆ.

ಇಲ್ಲಿನ ಎಲ್ಲ ಕಥೆಗಳಿಗೆ ಮನೋವೈಜ್ಞಾನಿಕ ಲಕ್ಷಣಗಳಿವೆ. ಹೆಣ್ಣು ತನಗಿಂತ ಈಗಾಗಲೇ ಬಲ, ಹೆಚ್ಚಿನ ಸಾಮರ್ಥ್ಯ ಹೊಂದಿರುವುದನ್ನು ಮನಗಂಡಿರುವ ಪುರುಷಶಾಹಿಯು, ಈ ವಸ್ತುಸ್ಥಿತಿಯನ್ನು ಒಪ್ಪಿಕೊಳ್ಳಲು ಹಿಂದೇಟು ಹಾಕುವ ತನ್ನ ಮನಃಸ್ಥಿತಿಯಿಂದ, ಆಕ್ರಮಣಕಾರಿಯಾಗಿ ಅಭಿವ್ಯಕ್ತಗೊಳ್ಳುತ್ತಾ ಬಂದಿದೆ ಎಂಬ ಅಂಶವನ್ನೂ ಕೆಲವು ಕಥೆಗಳು ಸಂಕೇತಿಸುತ್ತವೆ. ಜೈವಿಕ ಭಿನ್ನತೆ ಇರುವುದರಿಂದಲೇ ಮನುಷ್ಯಕುಲದ ಬೆಳವಣಿಗೆ ಸುಲಲಿತವಾಗಿ ಮುಂದುವರಿದುಕೊಂಡು ಬಂದಿದೆ ಎಂಬ ಸರಳ ಅಂಶವನ್ನು ಅರ್ಥಮಾಡಿಕೊಳ್ಳುವ ಬದಲು, ಜೈವಿಕ ಭಿನ್ನತೆಯನ್ನೇ ತನ್ನ ಪಾಲಿಗೆ ಅಸ್ತ್ರವನ್ನಾಗಿಸಿಕೊಂಡು ಪುರುಷಶಾಹಿಯ ದುರುಳತನ ಮೆರೆಯುತ್ತಿದೆಯೆ ಎಂಬ ಪ್ರಶ್ನೆಯನ್ನೂ ಪರೋಕ್ಷವಾಗಿ ಕೆಲವು ಕಥೆಗಳು ಮುಂದಿಡುತ್ತವೆ. ಧರ್ಮ, ದೇವರು, ಸಂಪ್ರದಾಯ, ಆಚರಣೆಗಳು ಇತ್ಯಾದಿಗಳ ಮೂಲಕ ಮಹಿಳಾ ಸಂಕುಲವನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳುವ ಹೀನ ಮಟ್ಟಕ್ಕೆ ಪುರುಷಶಾಹಿಯು ಇಳಿಯುತ್ತಾ ಬಂದಿರುವುದನ್ನು ಎಲ್ಲ ಕಥೆಗಳು ಎತ್ತಿ ಹೇಳುತ್ತವೆ. ಈ ಹಿನ್ನೆಲೆಯಲ್ಲೇ, ಇಲ್ಲಿ ಧರ್ಮದ ಹೆಸರಿನಲ್ಲಿ ವಿಧಿಸಲಾಗಿರುವ ಸಂಕೋಲೆಗಳನ್ನು ಛಿದ್ರಗೊಳಿಸುವ ಆಕ್ರೋಶ ಕಾಣುತ್ತದೆ; ಕಟ್ಟುಪಾಡುಗಳು ಧೂಳೀಪಟವಾಗುವ ಸನ್ನಿವೇಶಗಳು ಇಲ್ಲಿನ ಕಥೆಗಳಲ್ಲಿ ನಿರ್ಮಾಣವಾಗಿವೆ. ಪುರುಷಶಾಹಿಯ ತೊತ್ತಳದುಳಿತದಲ್ಲಿ ಮಾನವತೆಯು ಆಕ್ರಂದನಗೈಯುತ್ತಿರುವ ಸಂದರ್ಭಗಳು ಮೂಡಿವೆ. ಕಥೆಗಳ ಮೂಲಕ ಸ್ಫೋಟಗೊಂಡಿರುವ ಇಲ್ಲಿನ ಆಕ್ರೋಶವು ಸಮಾಜದಲ್ಲೂ ಹತ್ತಿಕ್ಕಲ್ಪಟ್ಟಿರುವ ಆಕ್ರೋಶಕ್ಕೆ ಧ್ವನಿ ನೀಡುತ್ತದೆ.

ಇಂಥ ಕಥೆಗಳನ್ನು ಒಳಗೊಂಡಿರುವ ಸಂಕಲನವೊಂದು ಸಮಾಜದಲ್ಲಿ ಅಲ್ಲೋಲಕಲ್ಲೋಲ ನಿರ್ಮಿಸುವ ಭೀತಿ ಅಂದಿನ ಬ್ರಿಟಿಷ್ ಸರ್ಕಾರಕ್ಕೆ ಬಂದಿತ್ತೋ ಏನೋ; ಈ ಕಥಾ ಸಂಕಲನದ ವಿರುದ್ಧ ಪುರುಷಶಾಹಿಯ ಕರಿನೆರಳು ಬಿದ್ದು, ಅದು ಅಂದಿನ ಆಡಳಿತದ ಮೇಲೆ ತನ್ನ ಪೈಶಾಚಿಕ ಒತ್ತಡವನ್ನು ಹೇರಿತೋ ಏನೋ; ಧರ್ಮದ ಹೆಸರಿನಲ್ಲಿ ಸಮಾಜದಲ್ಲಿ ನಿರ್ಬಂಧ, ನಿಬಂಧನೆ ಹೇರಿದ ಧಾರ್ಮಿಕ ಕಾಂಟ್ರಾಕ್ಟರ್‌ಗಳ ಅವಕೃಪೆಗೆ ಒಳಗಾಗಲು, ತನ್ನ ಮುಂದೆ ಇನ್ನೊಂದು ಸವಾಲು ಎದ್ದು ನಿಂತೀತು ಎಂಬ ಭೀತಿಯಿಂದ ಬ್ರಿಟಿಷ್ ಆಡಳಿತ 'ಅಂಗಾರೆ' ಕಥಾ ಸಂಕಲನವನ್ನು ನಿಷೇಧಿಸುವ ನಿರ್ಣಯ ಕೈಗೊಂಡಿತು.

ಇಡೀ ಸಮಾಜದ ಸಂಕೀರ್ಣ ಸ್ಥಿತಿಯನ್ನು ಮಂಡಿಸುತ್ತಲೇ ಇಲ್ಲಿನ ಕಥೆಗಳು ಪುರುಷಶಾಹಿಯ ಒಳಮನಸ್ಸಿನಲ್ಲಿ ಕಪಟತನ ಎಷ್ಟೊಂದು ಗಾಢವಾಗಿ ಮನೆಮಾಡಿದೆ ಎಂಬುದನ್ನು ಪ್ರಕಟಿಸುತ್ತವೆ. ಪ್ರತಿಯೊಂದು ಕಥೆಯೂ ತನ್ನದೇ ಹೊಳಹಿನಲ್ಲಿ ಹರಿದುಬಂದು, ಮನುಷ್ಯ ಜೀವನದ ಅವಿಭಾಜ್ಯ ಅಂಶಗಳಾದ ಒಲುಮೆ, ಪ್ರೀತಿ, ಕಾಮದಿಂದ ಕೂಡಿದ ಸಂಬಂಧಗಳನ್ನು ಕಡೆಗಣಿಸಿ, ಭೀತಿ, ಬಲಾತ್ಕಾರ, ದರ್ಪ, ವಿಶ್ವಾಸದ್ರೋಹ ಇತ್ಯಾದಿಗಳ ಪೈಶಾಚಿಕ ಲೋಕವನ್ನು ಬಿಚ್ಚಿಡುತ್ತವೆ.


**ಡಾ॥ ಷಾಕಿರಾ ಖಾನಂ**
ನಂ. ೬೫೪, ೧೧ನೇ ಅಡ್ಡರಸ್ತೆ, ಜಯನಗರ ೭ನೇ ಬ್ಲಾಕ್
ಬೆಂಗಳೂರು – ೫೬೦ ೦೭೦


## ಹುಡುಕಾಟ

ಹುಡುಕುತಿಹರು ದೇವರ, ಭಕ್ತಿ ಭಾವ ಬೆರೆತು
ನಗಬೇಕೆನಿಸಿದೆ, ಅವರ ಅಜ್ಞಾನದ ಕುರಿತು
ಕಣ್ಣುಹಾಯಿಸುವ ಕಡೆಯಲ್ಲೆಲ್ಲ ಪ್ರತ್ಯಕ್ಷ
ಕಾಣುವ ಪ್ರಕೃತಿಯೇ ದೇವರೆಂಬುದು ಮರೆತು


**ಶ್ರೀನಿವಾಸ ಕುಂಡಂತಾಯ**
ಬೆಂಗಳೂರು – ೯೪

ನೆಲ್ಸನ್ ಮಂಡೇಲಾರ ಸಂದರ್ಶನ ಮಾಡಿದ ಮೊದಲ ಭಾರತೀಯ ಪತ್ರಕರ್ತರೆಂಬ ಖ್ಯಾತಿಗೆ ಪಾತ್ರರಾದ 'ಕಾಮರೂಪಿ' ಎಂಬ ಕಾವ್ಯನಾಮದ ಕನ್ನಡ ಬರಹಗಾರ ಡಾ॥ ಎಂ. ಎಸ್. ಪ್ರಭಾಕರ ಅವರನ್ನು ಹೊಸತು ಸಂಪಾದಕ ಮಂಡಳಿಯ ಡಾ॥ ಜಿ. ರಾಮಕೃಷ್ಣ ಮತ್ತು ಡಾ॥ ಎನ್. ಗಾಯತ್ರಿ ಅವರು ಇತ್ತೀಚೆಗೆ ಕೋಲಾರದ ಅವರ ಮನೆಯಲ್ಲಿ ಭೇಟಿ ಮಾಡಿ ಮಾತನಾಡಿಸಿದ್ದರು. ಅವರ ಮಾತುಕತೆಯ ಲೇಖನ ಇಲ್ಲಿದೆ.

ಸಂದರ್ಶಕರು : **ಡಾ॥ ಜಿ. ರಾಮಕೃಷ್ಣ ಮತ್ತು ಡಾ॥ ಎನ್. ಗಾಯತ್ರಿ**

ಚಿತ್ರಗಳು : **ಬಿ. ಮೈತ್ರಿ**




# ಕಾಮರೂಪಿಯವರೊಡನೆ ಒಂದು ಹರಟೆ

ನಮ್ಮ ಕಾಲೇಜಿನ ದಿನಗಳಲ್ಲಿ ಕಾಮರೂಪಿಯವರ 'ಕುದುರೆ ಮೊಟ್ಟೆ'ಯನ್ನು ಓದಿದ ನೆನಪು. ಪುಸ್ತಕದ ಶೀರ್ಷಿಕೆಯೇ ಒಂದು ವಿಚಿತ್ರ. ನವ್ಯ ಸಾಹಿತ್ಯದ ಭರಾಟೆಯಲ್ಲಿ ಇದೊಂದು ಸ್ವಲ್ಪ ಭಿನ್ನ, ಎಂತಲೂ ಆಗ ಅನ್ನಿಸಿದ್ದು ನಿಜ. ಆ ನಂತರ ಇ.ಪಿ.ಡಬ್ಲ್ಯು.ನಲ್ಲಿ ಬರೆಯುತ್ತಿದ್ದ ಲೇಖಕ ಡಾ॥ ಎಂ. ಎಸ್. ಪ್ರಭಾಕರ ಅವರು ಇವರೇ ಅಂತ ನನಗೆ ಗೊತ್ತಾದದ್ದು ಬಹಳ ತಡವಾಗಿ. ಅವರು ಗೌಹಾತಿ, ಮುಂಬೈ, ದಕ್ಷಿಣ ಆಫ್ರಿಕಾಗಳಲ್ಲಿದ್ದು ಕರ್ನಾಟಕಕ್ಕೆ ಹಿಂತಿರುಗಿದ ನಂತರ ಅವರ ಬಗ್ಗೆ ಕೇಳುವ, ನೋಡುವ ಅವಕಾಶ ಸಿಕ್ಕಿದ ನಂತರವೇ, ಅವರೂ ನಮ್ಮವರು ಎಂಬ ಭಾವ ನನ್ನಲ್ಲಿ ಹುಟ್ಟಿದ್ದು. ಡಾ॥ ಜಿ. ರಾಮಕೃಷ್ಣ ಅವರ ಮೂಲಕ ಪರಿಚಯವಾದ ಡಾ॥ ಎಂ. ಎಸ್. ಪ್ರಭಾಕರ ಅವರನ್ನು ಹಲವಾರು ಬಾರಿ ಭೇಟಿ ಮಾಡುವ ಅವಕಾಶ ಒದಗಿಸಿದ್ದು ನನ್ನ ವೃತ್ತಿ. ಕಳೆದ ಎರಡು ವರ್ಷಗಳಲ್ಲಿ ನನ್ನ ವೃತ್ತಿ ಜೀವನದ ಭಾಗವಾಗಿ ಕೋಲಾರಕ್ಕೆ ಪದೇ ಪದೇ ಹೋಗಬೇಕಾಗಿ ಬಂದು, ಹಾಗೆ ಹೋದಾಗಲೆಲ್ಲಾ ಜಿ. ಆರ್. ಅವರೊಡನೆ ಪ್ರಭಾಕರ ಅವರನ್ನು ಭೇಟಿಯಾದಾಗಲೆಲ್ಲಾ ಅವರ ಜ್ಞಾನ ಸಂಚಯದ ಅಗಾಧ ರಾಶಿಯನ್ನು ಕಂಡು ಬೆರಗಾಗಿದ್ದೆ. 'ಸರ್, ನಿಮ್ಮನ್ನು ಹೊಸತುಗೆಂದು ಸಂದರ್ಶಿಸಬೇಕು', ಎಂದಾಗಲೆಲ್ಲ, 'ಅದೆಲ್ಲಾ ಬೇಡೀಮ್ಮ. ಬನ್ನಿ, ಸುಮ್ಮನೆ ಹರಟೆ ಹೊಡೆಯೋಣ' ಎಂದು ನನ್ನ ಸಲಹೆಯನ್ನು ತಳ್ಳಿ ಹಾಕುತ್ತಿದ್ದರು.

ಪತ್ರಕರ್ತನನ್ನು ಸಂದರ್ಶಿಸುವುದೇ ? ಅದು ಅಷ್ಟು ಸುಲಭದ ಕೆಲಸವಲ್ಲ. ಯಾವುದೇ ಪ್ರಶಸ್ತಿ, ಬಿರುದು ಬಾವಲಿಗಳಿಗೆ ಹಂಬಲಿಸದೆ ತಮ್ಮಷ್ಟಕ್ಕೆ ಓದು, ಬರವಣಿಗೆಯಲ್ಲಿ ತೊಡಗಿಕೊಂಡ ಈ ನಿರಾಡಂಬರ ವ್ಯಕ್ತಿಯನ್ನು ಕುರಿತು ಹೊಸತುವಿನಲ್ಲಿ ಬರೆಯಬೇಕೆಂದು ಇತ್ತೀಚೆಗೆ ಅವರನ್ನು ಅವರ ಮನೆಯಲ್ಲಿ ಭೇಟಿ ಮಾಡಿದೆವು. ನನ್ನೊಡನೆ ಹೊಸತುವಿನ ಗೌರವ ಸಂಪಾದಕ ಡಾ॥ ಜಿ. ರಾಮಕೃಷ್ಣ, ಪತ್ರಕರ್ತೆ ಮೈತ್ರಿ ಕೂಡ ಇದ್ದರು. ಅವರನ್ನು ಭೇಟಿಯಾಗಲು ನಾವು ಬಯಸಿದ ದಿನ ಅವರಿಗೆ ಸ್ವಲ್ಪ ಜ್ವರ ಬಂದಿತ್ತು. ಮಂಕಾಗಿದ್ದರು; ಕೊಂಚ ನಿರುತ್ಸಾಹದಿಂದಲೇ ನಮ್ಮನ್ನು ಆಹ್ವಾನಿಸಿದ್ದರು. ನಮಗೂ ಅವರಿಗೆ ತೊಂದರೆಕೊಡುತ್ತಿದ್ದೇವೆಂದು ಮನಸ್ಸಿನಲ್ಲಿ ಸ್ವಲ್ಪ ಅಳುಕಿತ್ತು.

ಕೋಲಾರದ ಕಠಾರಿ ಪಾಳ್ಯದಲ್ಲಿಯ ಅವರ ಹಳೆಯ ಕಾಲದ ಮನೆ. ಪುಟ್ಟ ಕಾಂಪೌಂಡಿನಲ್ಲಿ ಬಲಗಡೆ ಕಲ್ಲಿನ ಬೆಂಚು. ಎಡಗಡೆ

ಕರಿಬೇವು ಮತ್ತು ಒಂದೆರಡು ಹೂವಿನ ಗಿಡಗಳು. ಬಾಗಿಲನ್ನು ನಾವೇ ತೆರೆದು ಒಳಗೆ ಪ್ರವೇಶಿಸಿದರೆ, ಊಟದ ಮೇಜಿನ ಮುಂದೆ ಆಗಷ್ಟೇ ಊಟ ಮುಗಿಸಿ ಕುಳಿತಿದ್ದ ಪ್ರಭಾಕರ ಅವರು ಜಿ. ಆರ್. ಅವರನ್ನು ಕಂಡೊಡನೆ, "ಬನ್ನಿ. ಬರ್ಕೊಳ್ಳಿ, ನನ್ನ ಅಬಿಚ್ಯೂಯರಿ, ಹೇಳ್ತೀನಿ" ಎಂದರು. "ಬೇಡಿ. ಅದಕ್ಕೆ ಇನ್ನು ಸಮಯ ಇದೆ," ಎಂದು ಬಂತು ಜಿ. ಆರ್. ಅವರ ಉತ್ತರ. "ನಿಮಗೆ ಗೊತ್ತಾ, ನಾನು ಹಿಂದೆಯೇ 'ಹಿಂದೂ' ಪತ್ರಿಕೆಗೆಂದು ನನ್ನ ಅಬಿಚ್ಯೂಯರಿಯನ್ನು ಬರೆದುಕೊಟ್ಟಿದ್ದೆ" ಎಂದರು. ಮನೆಯಲ್ಲಿ ಎಲ್ಲೆಲ್ಲಿ ನೋಡಿದರೂ ಪುಸ್ತಕಮಯ. ಅದನ್ನು ಮನೆ ಅನ್ನುವುದಕ್ಕಿಂತ ಒಂದು ದೊಡ್ಡ ಗ್ರಂಥಭಂಡಾರದೊಳಗೆ ಈ ವ್ಯಕ್ತಿ ವಾಸ ಮಾಡುತ್ತಿದ್ದಾರೇನೋ ಎಂದೆನಿಸಿತು.

ಊಟದ ಮನೆಯಿಂದ ಹೊರಕ್ಕೆ ಬಂದು, ನಮಗೆಲ್ಲಾ ತಿನ್ನಲು ಕಿತ್ತಳೆ ಹಣ್ಣು ಕೊಟ್ಟು ಮಾತಿಗಾರಂಭಿಸಿದರು. ಶ್ರೀ ಪ್ರಭಾಕರ ಅವರು ಸ್ವಲ್ಪ ಮೂಡಿ. "ನನಗಿನ್ನೂ ಜ್ವರವಿದೆಯೇ ನೋಡಿ" ಎಂದು ಕೇಳಿದರು. ಅಂದು ಸುಮಾರು ಹೊತ್ತು ಅವರ ಮಾತು 'ಸಾವು' ಕುರಿತೇ ಸಾಗಿತ್ತು. "ನನಗೆ ಅಸಾಧ್ಯ ಸಿಟ್ಟಿರುವುದು ಇಬ್ಬರ ಮೇಲೆ. ಒಂದು, ಈ ಆಸ್ಪತ್ರೆಗಳು, ಮತ್ತೊಂದು ಫಾರ್ಮಸಿಟಿಕಲ್ ಇಂಡಸ್ಟ್ರಿ. ಇವರ ಅಸ್ತಿತ್ವಕ್ಕಾಗಿ ನಾವು ಬದುಕಬೇಕಾಗಿದೆ. ನಮ್ಮ ಹುಟ್ಟನ್ನಂತೂ ನಾವು ನಿರ್ಧರಿಸಕ್ಕಾಗಲ್ಲ, ಆದರೆ ನಮ್ಮ ಸಾವನ್ನು ನಿರ್ಧರಿಸುವ ಸ್ವಾತಂತ್ರ್ಯವಾದರೂ ನಮಗಿರಬೇಕು" ಎಂದರು. ಸಾವಿನ ಚಿಂತನೆಯಲ್ಲೇ ಸುತ್ತುತ್ತಿದ್ದ ಚಿಂತನಾಲಹರಿಯಿಂದ ಅವರನ್ನು ಹೊರಗೆಳೆದು ಅವರ ಗೌಹಾತಿಯಲ್ಲಿದ್ದ ಜೀವನದ ಬಗ್ಗೆ ಮಾತನಾಡಲು ಕೇಳಿಕೊಂಡೆ. ನಿಧಾನವಾಗಿ ಗೌಹಾತಿಯ ದಿನಗಳನ್ನು ನೆನಪಿಸಿಕೊಂಡು ಆ ದಿನಗಳ ಸ್ಮರಣೆಗೆ ಜಾರಿದರು.

**ಪ್ರಭಾಕರ :** ನಾನು ೧೯೬೧ರ ಕೊನೆಯಲ್ಲಿ ಗೌಹಾತಿಯ ವಿಶ್ವವಿದ್ಯಾಲಯದ ಕಾಲೇಜಿನಲ್ಲಿ ಇಂಗ್ಲಿಷ್ ಲೆಕ್ಚರರ್ ಆಗಿ ಕೆಲಸ ಮಾಡುತ್ತಿದ್ದಾಗ ವಿಶ್ವವಿದ್ಯಾಲಯದ ಕ್ಯಾಂಪಸ್ಸಿನ ಕ್ವಾರ್ಟರ್ಸ್‌ನಲ್ಲಿ ವಾಸ ಮಾಡುತ್ತಿದ್ದೆ. ನನ್ನೊಂದಿಗೆ ನನ್ನ ಇನ್ನು ಇಬ್ಬರು ಸ್ನೇಹಿತರು ವಾಸ ಮಾಡುತ್ತಿದ್ದರು. ಒಬ್ಬ ನನ್ನಂತೆ ಇಂಗ್ಲಿಷ್ ಅಧ್ಯಾಪಕ, ಗೌನಪಲ್ಲಿ ರಾಜಾರಾಂ, ಮತ್ತೊಬ್ಬ ಫಿಲಾಸಫಿ ವಿಭಾಗದ ಪಂಪಾಪತಿ ರಾಯ. ಮೂವರೂ ಒಟ್ಟಿಗೆ ಇದ್ದೆವು. ನಾವು ಮೂವರು ಒಟ್ಟಿಗಿದ್ದ ಆ ದಿನಗಳ ಬಗ್ಗೆ ಹೇಳುವುದೆಂದರೆ ಅದೇ ಒಂದು ಪುಸ್ತಕ ಆಗಬಹುದು. ಅದರಲ್ಲೂ ನಮಗೆಲ್ಲಾ ಅಡುಗೆ ಮಾಡುತ್ತಿದ್ದ ಒಬ್ಬ ನೇಪಾಳಿ ಹುಡುಗನ ಕತೆಯನ್ನು ನೆನಪಿಸಿಕೊಂಡರೆ ಈಗಲೂ ನಗು ಬರುತ್ತದೆ. ಅವನು ನಮ್ಮ ಮನೆಯ ಹಿಂಭಾಗದಲ್ಲಿ ನಮಗ್ಯಾರಿಗೂ ತಿಳಿಯದಂತೆ ಒಬ್ಬ ಮುದುಕನ ಯುವ ಹೆಂಡತಿಯನ್ನು ಹಾರಿಸಿಕೊಂಡು ಬಂದು ಸಂಸಾರ ಮಾಡುತ್ತಿದ್ದ ಗುಟ್ಟು ಆ ಮುದುಕನಿಗೆ ಮತ್ತು ಅವನ ಇತರ ಸಂಬಂಧಿಗಳಿಗೆ ರಟ್ಟಾದಾಗ ಆದ ರಂಪ ರಾದ್ಧಾಂತ, ಹೊಡೆದಾಟ, ಕೊಲೆಯ ಬೆದರಿಕೆ ಮತ್ತು ಪ್ರಯತ್ನ – ಎಲ್ಲವೂ ಈಗ ಕಣ್ಣ ಮುಂದೆ ನಡೆದಂತಿದೆ.

ಕೂಡಲೇ ಮೈತ್ರಿಯನ್ನು ಉದ್ದೇಶಿಸಿ, "ಏನಮ್ಮಾ ಬೇಜಾರಾಯ್ತಾ ?" ಎಂದರು. ಅವಳು 'ಇಲ್ಲ', ಎಂದು ತಲೆಯಲ್ಲಾಡಿಸಿದಳು. "ನಿನಗೆ anecdotage ಎಂದರೆ ಗೊತ್ತಾ ?" ಅವಳು ಸ್ವಲ್ಪ ತಬ್ಬಿಬ್ಬಾದಳು.

ಇಂಗ್ಲಿಷಿನ anecdote ಮತ್ತು dotage ಇವುಗಳನ್ನು ಸೇರಿಸಿ ಮಾಡಿರುವ ಸಮಾಸ ಪದ ಇದು. ಇದೊಂದು ರೀತಿಯ ಚಟ. ಇದೊಂದು ರೀತಿಯ ಮುಪ್ಪಿನ ಅರುಳು ಮರುಳು ಹರಟೆಗಳು. ಕತೆ ಹೇಳುವವನಿಗೆ ತನ್ನ ನೆನಪಿನಲ್ಲಿ ಬಹಳ ರುಚಿಕರವಾದ ಕತೆ ಅನ್ನಿಸಿಕೊಳ್ಳುವುದು, ಅದನ್ನು ಕೇಳುವವರಿಗೆ ಅರ್ಥವಿಲ್ಲದ, ಅಸಂಬದ್ಧ ಪ್ರಲಾಪ ಎಂದೆನ್ನಿಸಬಹುದು.

**ಹೊಸತು :** ಸರ್, ನೀವು ಕನ್ನಡ ಮತ್ತು ಇಂಗ್ಲಿಷ್ ಎರಡರಲ್ಲೂ ಬರೆದವರು. ಇತ್ತೀಚೆಗೆ ಭಾಷೆಗೆ ಸಂಬಂಧಪಟ್ಟಂತೆ ಹಲವಾರು ಹೊಸ ಪ್ರಯೋಗಗಳಾಗುತ್ತಿವೆ. ಅದರ ಬಗ್ಗೆ ನಿಮಗೇನನ್ನಿಸುತ್ತೆ ?

**ಪ್ರಭಾಕರ :** ಏನು ಪ್ರಯೋಗ, ಬಾಂಗಲೋರ್‌ನ್ನು 'ಬೆಂಗಳೂರು' ಎಂದು ಬರೆಯುವುದು, ಬೊಂಬಾಯಿಯನ್ನು 'ಮುಂಬೈ' ಎಂದು ಬರೆಯುವುದು ಒಂದು ದೊಡ್ಡ ಪ್ರಯೋಗವೇ ? ಮದ್ರಾಸು ಹೋಗಿ 'ಚೆನ್ನೈ' ಆಗಿರುವುದೇನೋ ಸರಿ.

**ಹೊಸತು :** ಸರ್, ಹಾಗಲ್ಲ, ಅಲ್ಪಪ್ರಾಣ ಮತ್ತು ಮಹಾಪ್ರಾಣಗಳ ಬಳಕೆಯ ಬಗ್ಗೆ.

**ಪ್ರಭಾಕರ :** ಹೂಂ. ಅದೊಂದು ಹುಚ್ಚು. ಶಂಕರಭಟ್ಟರ ಪ್ರಯೋಗ. ಅಲ್ಲಾ, ನಾವೆಲ್ಲ ಮಹಾಪ್ರಾಣ ಕಲಿತು ಮಹಾ ಕಾವ್ಯಗಳನ್ನು ಓದಿ ಕಲಿತಾದ ಮೇಲೆ ಮುಂದಿನ ಪೀಳಿಗೆಯವರಿಗೆ ಅದು ಬೇಡ ಎಂದರೆ ಹೇಗೆ ? ಮಹಾಪ್ರಾಣವಿಲ್ಲದೆ ಭಾಷೆ ಬಳಸಲಿಕ್ಕೆ ಆಗಲ್ಲ, ಬಿಡಿ. ಇದೊಂದು ರೀತಿಯ ಬ್ರಾಹ್ಮಣ್ಯದ ಚಟ.





ಕೃಪೆ : ಸಾಹಿತ್ಯ ಅಕಾಡೆಮಿ

೧೯೩೬ರಲ್ಲಿ ಕೋಲಾರದಲ್ಲಿ ಜನಿಸಿದ ಮೋಟ್ನಹಳ್ಳಿ ಸೂರಪ್ಪ ಪ್ರಭಾಕರ ಕನ್ನಡ ನೆಲ ಕಂಡ ಅಪ್ರತಿಮ ಪತ್ರಕರ್ತರು. 'ಕಾಮರೂಪಿ' ಎಂಬ ಕಾವ್ಯನಾಮದಿಂದ ಕನ್ನಡ ಸಾಹಿತ್ಯ ಲೋಕಕ್ಕೆ ಪರಿಚಿತರು. ಗುವಾಹತಿ ವಿಶ್ವವಿದ್ಯಾಲಯದಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಸೇವೆ ಸಲ್ಲಿಸಿ, ನಂತರ ಮುಂಬೈನಲ್ಲಿ ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ ಪತ್ರಿಕೆಗಾಗಿ ಪತ್ರಕರ್ತರಾಗಿ ಕೆಲಸ ಮಾಡಿ, ನಂತರ ಗುವಾಹತಿಗೆ ಹಿಂತಿರುಗಿ, ಆಮೇಲೆ ಗುವಾಹತಿ ಮತ್ತು ದಕ್ಷಿಣ ಆಫ್ರಿಕಾದಲ್ಲಿ 'ದಿ ಹಿಂದು' ಮತ್ತು 'ಫ್ರಂಟ್ ಲೈನ್' ಪತ್ರಿಕೆಗಾಗಿ ಕಾರ್ಯ ನಿರ್ವಹಿಸಿದರು. ಈಶಾನ್ಯ ಪ್ರಾಂತ್ಯದ ಹಲವಾರು ಭಾಷೆಗಳನ್ನು ಬಲ್ಲ ಡಾ॥ ಪ್ರಭಾಕರ ಅಸ್ಸಾಮಿ ಭಾಷೆಯನ್ನು ಸುಲಲಿತವಾಗಿ ಮಾತನಾಡಬಲ್ಲರು. ಈ ಪ್ರದೇಶದ ಆಗುಹೋಗುಗಳ ಬಗ್ಗೆ ಅಧಿಕೃತವಾಗಿ ಬರೆಯಬಲ್ಲರು ಮತ್ತು ಮಾತನಾಡಬಲ್ಲರು. ಆದ್ದರಿಂದಲೇ ಆ ಜನರ ಜೀವನ ಮತ್ತು ಹೋರಾಟಗಳನ್ನು ಕುರಿತು ಬರೆದರು. ಅವರಿಗೆ ಅಸ್ಸಾಂ ಮತ್ತು ತ್ರಿಪುರದ ಕಮ್ಯುನಿಸ್ಟ್ ಸಂಗಾತಿಗಳ ಒಡನಾಟವಿತ್ತು. ಹಾಗೆಯೇ ದಕ್ಷಿಣ ಆಫ್ರಿಕಾದ ಕಮ್ಯುನಿಸ್ಟ್ ಸಂಗಾತಿಗಳ ಒಡನಾಟವೂ ಇತ್ತು. ನೆಲ್ಸನ್ ಮಂಡೆಲಾನ ಸಂದರ್ಶನ ಮಾಡಿದ ಮೊದಲ ಭಾರತೀಯ ಪತ್ರಕರ್ತ ಇವರಾಗಿದ್ದಾರೆ. ಅವರ ಬರವಣಿಗೆಯ ಗಾತ್ರ ಚಿಕ್ಕದು, ಮೌಲಿಕವಾಗಿ ದೊಡ್ಡದು. "ಸಮಗ್ರ ಕಾಮರೂಪಿ"ಯಲ್ಲಿ ಇವರ ಒಂದು ತೊಲ ಪುನುಗು ಮತ್ತು ಇತರ ಕಥೆಗಳು, ಕುದುರೆ ಮೊಟ್ಟೆ ಮತ್ತು ಅಂಜಿಕಿನ್ಯಾತಕಯ್ಯ (ಕಾದಂಬರಿ) ಬರಹಗಳಲ್ಲದೆ, ಅವರ ಬ್ಲಾಗ್‌ಗಳಲ್ಲಿನ ಬರಹಗಳು ಸೇರಿಕೊಂಡಿವೆ. ಇವರ ಲೇಖನಗಳ ಸಂಗ್ರಹ 'ವರ್ಡ್ಸ್ ಅಂಡ್ ಐಡಿಯಾಸ್' ಮತ್ತು ಈಶಾನ್ಯ ಭಾರತದ ಜನಾಂಗೀಯ ಮತ್ತು ದಂಗೆಯ ಸಮಸ್ಯೆಗಳನ್ನೊಳಗೊಂಡ 'ಲುಕಿಂಗ್ ಬ್ಯಾಕ್ ಇನ್ ಟು ಫ್ಯೂಚರ್' ಪುಸ್ತಕ ಅಕ್ಷರ ಲೋಕಕ್ಕೆ ಬಹು ಮಹತ್ವದ ಕೊಡುಗೆಗಳಾಗಿವೆ. ಇವರು ಕರ್ನಾಟಕ ಸಾಹಿತ್ಯ ಅಕಾಡೆಮಿ ಮತ್ತು ಮಾಧ್ಯಮ ಅಕಾಡೆಮಿಯ ಗೌರವ ಪ್ರಶಸ್ತಿಗೆ ಪಾತ್ರರಾಗಿರುವುದಲ್ಲದೆ, ಇವರ 'ಕುದುರೆ ಮೊಟ್ಟೆ' ಕಾದಂಬರಿಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಸುವರ್ಣ ಗ್ರಂಥಮಾಲೆ ಮಾಲಿಕೆಯಲ್ಲಿ ಪ್ರಕಟಿಸಿದೆ.

**ಹೊಸತು :** ಸರ್, ನೀವು ಹುಟ್ಟಿ, ಬೆಳೆದದ್ದೆಲ್ಲಾ ಈ ಕೋಲಾರದಲ್ಲಿಯಾ ?

**ಪ್ರಭಾಕರ :** ನಾನು ಹೈಸ್ಕೂಲಿನವರೆಗೂ ಓದಿದ್ದು ಕೋಲಾರದಲ್ಲಿ. ನಂತರ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷಿನಲ್ಲಿ ಬಿ. ಎ. (ಆನರ್ಸ್), ನಂತರ ಎಂ. ಎ. ಮಾಡಿದ್ದು. ಸ್ವಲ್ಪ ಕಾಲ ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಇಂಗ್ಲಿಷ್ ಅಧ್ಯಾಪಕನಾಗಿದ್ದೆ. ಆಮೇಲೆ, ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಅಧ್ಯಾಪಕ ವೃತ್ತಿ, ಅಲ್ಲಿಂದ ಗುವಾಹತಿ ವಿಶ್ವವಿದ್ಯಾಲಯಕ್ಕೆ ಪ್ರಯಾಣ. ಅಲ್ಲೇ ನಾನು ಹೆಚ್ಚು ಕಾಲ ಅಧ್ಯಾಪಕನಾಗಿ ಉಳಿದದ್ದು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಆರಂಭಿಸಿದ್ದ ನನ್ನ ಪಿಎಚ್.ಡಿ. ಮಹಾಪ್ರಬಂಧವನ್ನು ನಾನು ಗುವಾಹತಿಯಲ್ಲಿದ್ದಾಗಲೇ ಬರೆದು ಸಲ್ಲಿಸಿದ್ದು.

**ಹೊಸತು :** ನಿಮ್ಮನ್ನು ನೆಲ್ಸನ್ ಮಂಡೆಲಾನ ಸಂದರ್ಶಿಸಿದ ಭಾರತದ ಪ್ರಥಮ ಪತ್ರಕರ್ತ ಅಂತ ಹೇಳುತ್ತಾರೆ. ನಿಮ್ಮ ದಕ್ಷಿಣ ಆಫ್ರಿಕಾದ ಆ ನೆನಪುಗಳನ್ನು ಕುರಿತು ಸ್ವಲ್ಪ ಹೇಳಿ ಸರ್.

**ಪ್ರಭಾಕರ :** ಅದೊಂದು ಮರೆಯಲಾಗದ ಘಟನೆ. ಒಂದು ವಿಷಯ ಹೇಳಬೇಕೆಂದರೆ, ಆತ ಬಹಳ ಸರಳ ಮನುಷ್ಯ. ಅವರು ಜನಸಾಮಾನ್ಯರ ಜೊತೆ ಬೆರೆಯುವ ರೀತಿ ವಿಶಿಷ್ಟವಾದುದು. ನಾನು ಜೂನ್ ೧೯೯೮ರಿಂದ ಡಿಸೆಂಬರ್ ೨೦೦೧ರ ಅವಧಿಯಲ್ಲಿ ದಕ್ಷಿಣ ಆಫ್ರಿಕಾದಲ್ಲಿದ್ದು 'ದಿ ಹಿಂದು' ಪತ್ರಿಕೆಯ ವರದಿಗಾರನಾಗಿ ಕೆಲಸ ಮಾಡಿದೆ. ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ಸಿನ ಮುಖ್ಯ ಕಚೇರಿ ಪ್ಲೈನ್ ಸ್ಟ್ರೀಟ್‌ನ ಶೆಲ್ ಹೌಸಿನಲ್ಲಿತ್ತು. ಆ ಕಚೇರಿಯ ಕಾರಿಡಾರಿನಲ್ಲಿ ಅಡ್ಡಾಡುತ್ತಿದ್ದ ನೆಲ್ಸನ್ ಮಂಡೆಲಾರವರನ್ನು ನೋಡುತ್ತಿದ್ದೆ. ಆ ದಿನಗಳಲ್ಲಿ ಶುಕ್ರವಾರದ ಬೆಳಗಿನ ವೇಳೆಯಲ್ಲಿ ಕಾಮ್ರೇಡ್ ವಾಲ್ಟರ್ ಸಿಸ್ಲು ಅವರೊಂದಿಗೆ ಎ.ಎನ್.ಸಿ. ಕಚೇರಿಯಲ್ಲಿ ಅಡ್ಡಾಡುತ್ತಿರುತ್ತಿದ್ದರು. ಇಲ್ಲವೆ, ಅಲ್ಲಿಂದ ಸ್ವಲ್ಪ ದೂರ ನಡೆದು ಕೇಪ್ ಟೌನ್‌ನಲ್ಲಿದ್ದ ಪಾರ್ಲಿಮೆಂಟ್ ಕಾಂಪ್ಲೆಕ್ಸ್ ಕಚೇರಿಗೆ ನಡೆದು ಹೋಗುವುದು ಕಾಣುತ್ತಿತ್ತು. ಆಗ ಪಾರ್ಲಿಮೆಂಟ್ ಕಾಂಪ್ಲೆಕ್ಸಿನಲ್ಲಿ ಸೆಕ್ಯೂರಿಟಿ ಅಷ್ಟೊಂದು ಬಿಗಿಯಾಗಿರಲಿಲ್ಲ. ಎ.ಎನ್.ಸಿ. ಕಚೇರಿಯ ಲೈಬ್ರರಿಯಲ್ಲಿ ಅಧ್ಯಯನ ಮಾಡಲೆಂದು ಅನುಮತಿ ಪಡೆದುಕೊಂಡು ನಾನು ಅಲ್ಲಿಗೆ ತಪ್ಪದೆ ಹೋಗುತ್ತಿದ್ದೆ. ಅದರಲ್ಲಿ ನೆಲ್ಸನ್ ಮಂಡೆಲಾ ಅವರನ್ನು ಒಮ್ಮೆ ನೋಡಬಹುದೆಂಬ ಆಸೆಯೂ ಇತ್ತು.

ಈ ಅವಧಿಯಲ್ಲಿ ನಾನು ಜೊಹಾನ್ಸ್‌ಬರ್ಗ್‌ನ ಬೆರಿಯಾದಲ್ಲಿನ ಅಪಾರ್ಟ್‌ಮೆಂಟಿನಲ್ಲಿ ವಾಸಿಸುತ್ತಿದ್ದೆ. ಅದೇ ಕಟ್ಟಡದಲ್ಲಿ ವಾಸಿಸುತ್ತಿದ್ದ ರಿಕಾ ಹಡ್ಸನ್ ನನಗೆ ಸ್ನೇಹಿತರಾಗಿದ್ದರು. ವಾಲ್ಟರ್ ಸಿಸ್ಲುರವರ ಕಾರ್ಯದರ್ಶಿಯಾಗಿದ್ದ ರಿಕಾ ಹಡ್ಸನ್ ಆಫ್ರಿಕಾದ ಸ್ವಾತಂತ್ರ್ಯ ಚಳುವಳಿಯ ಹಿರಿಯ ನಾಯಕರೂ ಹೌದು. ಇವರಲ್ಲದೆ, ನನಗೆ ಮತ್ತಿಬ್ಬರು ಸ್ನೇಹಿತರಿದ್ದರು : ಪಾಲೋ ಜೋರ್ಡಾನ್, ಮಂಡೆಲಾ ಕ್ಯಾಬಿನೆಟ್‌ನಲ್ಲಿ ಸಚಿವರಾಗಿದ್ದರು. ಮತ್ತೊಬ್ಬರು ಮೂಸ ಮೂಲಾ. ಇವರು ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ಸಿನ ನಾಯಕರು ಮತ್ತು ಶೆಲ್ ಹೌಸ್‌ನಲ್ಲಿ ಕೆಲಸ ಮಾಡುತ್ತಿದ್ದರು. ಇವರೆಲ್ಲರ ಸಂಪರ್ಕದಿಂದ ನನಗೆ ಅಧ್ಯಕ್ಷ ಮಂಡೆಲಾ ಅವರ ಪ್ರತ್ಯೇಕ ಸಂದರ್ಶನ ಮಾಡುವ ಅವಕಾಶ ಸಿಕ್ಕಿತು. ಅದೊಂದು ಮರೆಯಲಾಗದ ಅನುಭವ. ಸಂದರ್ಶನದ ಸಮಯದಲ್ಲಿ ಅವರು ತುಂಬ ಪ್ರೀತಿಯಿಂದ, ಯಾವುದೇ ಪ್ರತಿಷ್ಠೆಯನ್ನು ತೋರಿಸದೆ ನನ್ನನ್ನು ತುಂಬ ಕಂಫರ್ಟಬಲ್ ಆಗಿರುವಂತೆ ನೋಡಿಕೊಂಡರು. ನಿಜವಾಗಿಯೂ ಸಂದರ್ಶನ ಒಂದು ರೀತಿಯ ಮಾತುಕತೆಯಂತಿತ್ತು. ಅವರ ಕಾರ್ಯದರ್ಶಿ ನನಗೆ ೪೫ ನಿಮಿಷಗಳನ್ನು ನಿಗದಿಪಡಿಸಿದ್ದರೂ, ಮಂಡೆಲಾ ಸುಮಾರು ೧ ಗಂಟೆ ೧೦ ನಿಮಿಷಗಳ ಕಾಲ ನನ್ನೊಡನೆ ಮಾತನಾಡಿದರು. ಈ ಸಂದರ್ಶನದಲ್ಲಿ ಹಲವಾರು ವಿಷಯಗಳನ್ನು ಚರ್ಚಿಸಿದೆವು. ಆದರೆ ಇಲ್ಲಿ ಹೇಳಬೇಕಾದ ಒಂದು ಮುಖ್ಯವಾದ ಅಂಶವೆಂದರೆ, ಅವರು ಗಾಂಧಿ ಮತ್ತು ನೆಹರೂರವರ ಬಗ್ಗೆ ವಿಶೇಷವಾಗಿ ಗೌರವವನ್ನು ವ್ಯಕ್ತಪಡಿಸಿದರು. ಅದರಲ್ಲೂ ನೆಹರೂರವರು ದಕ್ಷಿಣ ಆಫ್ರಿಕಾದ ಹೋರಾಟವನ್ನು ಅರ್ಥ ಮಾಡಿಕೊಂಡ ತಿಳುವಳಿಕೆಯನ್ನು ವಿಶೇಷವಾಗಿ ಪ್ರಶಂಸಿಸಿದರು.



ಚರ್ಚೆಯನ್ನು ಆರಂಭಿಸಿದರು. ಮೇಜಿನ ಮೇಲೆ ಪಂಪ ಭಾರತ, ದಕ್ಷಿಣ ಆಫ್ರಿಕಾದ ಕಥೆಗಳು ಮತ್ತು ಒಂಟಿಕೊಪ್ಪಲ್‌ನ ಪಂಚಾಂಗ, ಇನ್ನು ಕೆಲವು ಪುಸ್ತಕಗಳು ಇದ್ದವು. ಈ ಎಲ್ಲ ಪುಸ್ತಕಗಳ ಬಗೆಗೂ ಒಂದೊಂದಾಗಿ ವಿಶ್ಲೇಷಣೆಗೆ ತೊಡಗಿದರು. ಅವರು ಪಂಚಾಂಗವನ್ನು ಅದೆಷ್ಟು ಖುಷಿಯಿಂದ ಸಂಭ್ರಮಿಸಿಕೊಂಡು ಓದುತ್ತಿದ್ದರೆಂದರೆ, ಅದನ್ನು ಹೀಗೂ ಓದಬಹುದೇ? ಎಂದು ಆಶ್ಚರ್ಯ ವಾಯಿತು. ಪಂಪ ಭಾರತವನ್ನು ಕೈಗೆತ್ತಿಕೊಂಡು "ಅಬ್ಬಾ, ಇದೆಂತಹ ಮಹಾ ಕಾವ್ಯ! ಇದರ ಮುಂದೆ ನಮ್ಮದೇನು ಬರವಣಿಗೆ ಮಹಾ" ಎಂದರು.

ನಂತರ "ನೀವು ರಾಜರತ್ನಂ ಅವರ 'ಮಹಾ ಕವಿ ಪುರುಷ ಸರಸ್ವತಿ' ಪುಸ್ತಕವನ್ನು ಓದಿದ್ದೀರಾ?" ಎಂದು ಪ್ರಶ್ನಿಸಿದರು. ನಾವುಗಳು 'ಇಲ್ಲ' ಎಂದೊಡನೆ, "ಬನ್ನಿ, ನಿಮಗೆ ಓದಿ ತೋರಿಸುತ್ತೀನಿ" ಎಂದು ನಮ್ಮನ್ನು ಕರೆದುಕೊಂಡು ಅವರ ಓದುವ ಮೇಜಿಗೆ ಕರೆದೊಯ್ದರು. ಅಲ್ಲಿ ಜಿ.ಪಿ. ರಾಜರತ್ನಂ ರಚಿಸಿದ 'ಮಹಾಕವಿ ಪುರುಷ ಸರಸ್ವತಿ' ಪುಸ್ತಕದ ಸ್ವಾರಸ್ಯದ ಭಾಗಗಳನ್ನು ನಮಗೆ ಓದಿ ಹೇಳಿದರು. ಅದೊಂದು ಅಪರೂಪದ ಪುಸ್ತಕ. ೧೯೪೦ರಲ್ಲಿ ರಚಿತವಾದ ಈ ಪುಸ್ತಕಕ್ಕೆ ಶ್ರೀರಂಗ, ಶಿವರಾಮ ಕಾರಂತ, ವಿ.ಕೃ. ಗೋಕಾಕ್, ದ.ರಾ. ಬೇಂದ್ರೆ, ಗೋವಿಂದ ಪೈ ಮುಂತಾಗಿ ಏಳು ವಿದ್ವಾಂಸರು ಮುನ್ನುಡಿಯನ್ನು ಬರೆದಿದ್ದಾರೆ. ಅದರಲ್ಲಿನ ಕೆಲವು ಪಠ್ಯವನ್ನು ನಮಗೆ ಸ್ವಾರಸ್ಯವಾಗಿ ಓದಿ ಹೇಳಲಾರಂಭಿಸಿದರು. ಸಮಯ ಹೋದದ್ದೇ ಗೊತ್ತಾಗಲಿಲ್ಲ. ಮಧ್ಯಾಹ್ನ ಜ್ವರದ ತಾಪದಿಂದ ಮಂಕಾಗಿದ್ದ ಅವರ ಮುಖ ಸಂಜೆಯ ವೇಳೆಗೆ ಪೂರ್ತಿ ಗೆಲುವಾಗಿ ಪ್ರಜ್ವಲಿಸುತ್ತಿತ್ತು! ಅವರಿಗೆ ಇನ್ನೂ ಮಾತಾಡುವ ಹುಮ್ಮಸ್ಸಿತ್ತು. ಆದರೆ ನಮಗೆ ಬೆಂಗಳೂರಿಗೆ ಹಿಂತಿರುಗಲು ತಡವಾಗುತ್ತಿತ್ತು. ಆದ್ದರಿಂದ ವಿದಾಯ ಹೇಳಿ ಹೊರಡಲು ಸಿದ್ಧರಾದೆವು. ಅವರು ಮೆಲ್ಲನೆದ್ದು ನಮ್ಮನ್ನು ಬೀಳ್ಕೊಡಲು ಗೇಟಿನವರೆಗೂ ಬಂದರು. ಅಲ್ಲೇ ಇದ್ದ ಕರಿಬೇವಿನ ಗಿಡ ತೋರಿಸಿ, "ಈ ಸೊಪ್ಪು ತೊಗೊಂಡು ಹೋಗಿ, ಚಟ್ನಿಪುಡಿ ಮಾಡಿಕೊಳ್ಳ ಬಹುದು" ಎಂದರು. ಅವರ ಪ್ರೀತಿಯ ಒತ್ತಾಯಕ್ಕೆ ಮಣಿದು ಸ್ವಲ್ಪ ಕರಿಬೇವಿನ ಸೊಪ್ಪು ಕಿತ್ತುಕೊಂಡು ಅವರಿಗೆ ನಮಸ್ಕಾರ ಹೇಳಿ ಹೊರಟುಬಂದೆವು.

ಮೇಲ್ನೋಟಕ್ಕೆ ಅತ್ಯಂತ ನಾಚಿಕೆ ಸ್ವಭಾವದ ವ್ಯಕ್ತಿಯಾಗಿ ಕಾಣುವ ಈ ಲೇಖಕನ ವ್ಯಕ್ತಿತ್ವದಾಳದಲ್ಲಿ ಒಂದು ತೀವ್ರವಾದ ಸಾಮಾಜಿಕ, ರಾಜಕೀಯ ಬದ್ಧತೆಯ ಸೆಲೆಯಿದೆಯೆಂಬುದು ಅರ್ಥವಾಗುತ್ತದೆ. ಹಾಗೆಯೇ ಅವರನ್ನು ಅತಿ ಹತ್ತಿರದಿಂದ ಕಂಡಾಗ ಅನುಭವಕ್ಕೆ ಬರುವ ಮಾನವೀಯತೆಯ ಸ್ಪಂದನ ಆಹ್ಲಾದಕರವಾಗಿತ್ತು.

ಈ ಸಂದರ್ಶನವಲ್ಲದೆ, ಅವರು ಭಾಗವಹಿಸಿದ್ದ ಒಂದೆರಡು ಸಭೆಗಳಲ್ಲೂ ಭಾಗವಹಿಸಿ ವರದಿ ಮಾಡಿರುವೆ. ೧೯೯೭ರ ಡಿಸೆಂಬರ್‌ನಲ್ಲಿ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್ಸಿನ ೫೦ನೇ ಸಮ್ಮೇಳನ ನಡೆಯಿತು. ಈ ಸಭೆಗಳಿಗೆ ಬಂದಾಗ ನನ್ನನ್ನು ಗುರುತಿಸಿ, ಅವರು ಮಾತನಾಡಿಸಿದ್ದನ್ನು ನಾನು ಮರೆಯಲಾರೆ. ಅವರೊಬ್ಬ ನಿಜವಾದ ಜನನಾಯಕ.

**ಹೊಸತು :** ನೀವು ಜೀವನದ ಹೆಚ್ಚು ಭಾಗ ಕರ್ನಾಟಕದ ಹೊರಗಿದ್ದು ಬಂದವರು. ಬಂದ ನಂತರದ ಕರ್ನಾಟಕವನ್ನು ನೋಡಿ ನಿಮಗೇನನ್ನಿಸುತ್ತೆ?

**ಪ್ರಭಾಕರ :** ನಾನು ಹದಿನೇಳು ವರ್ಷಕ್ಕೆ ಕೋಲಾರ ಬಿಟ್ಟು ಹೊರ ನಡೆದವನು. ಇಪ್ಪತ್ತಾರು ವರ್ಷಕ್ಕೆ ಕರ್ನಾಟಕ ಬಿಟ್ಟು ಗುವಾಹತಿಗೆ ಲೆಕ್ಚರರ್ ಕೆಲಸಕ್ಕೆಂದು ಹೋದೆ. ಅಲ್ಲಿಂದ ಮುಂಬೈ, ದಕ್ಷಿಣ ಆಫ್ರಿಕಾ ಮತ್ತೆ ಗುವಾಹತಿಗೇ ಹಿಂತಿರುಗಿದೆ. ಈಗ ಆರು ವರ್ಷಗಳ ಹಿಂದೆಯಷ್ಟೇ ನಾನು ತಿರುಗಿ ನನ್ನ ಈ ಊರಿಗೆ ಬರಬೇಕಾಗಿ ಬಂತು. ಈ ಮನೆಗಿಂತ ನನಗೇ ಮೂರು ವರ್ಷ ಹೆಚ್ಚು ವಯಸ್ಸಾಗಿದೆ. ನನ್ನ ಅಣ್ಣನ ಮಗ ಅಕಾಲಿಕವಾಗಿ ತೀರಿಹೋದ. ಆದ್ದರಿಂದ ಬಂದೆ. ಇಲ್ಲದಿದ್ದರೆ ನಾನು ಇಲ್ಲಿಗೆ ಬರುತ್ತಲೇ ಇರಲಿಲ್ಲ. ಅದೇಕೋ ನನಗೆ ಈ ಸ್ಥಳಕ್ಕಿಂತ ಗುವಾಹತಿಯೇ ಹೆಚ್ಚು ಆಪ್ತ ಎನಿಸುತ್ತದೆ. ಅಲ್ಲಿ ನನ್ನ ಪುಟ್ಟ ಮನೆಯಿದೆ. ಅಲ್ಲಿನ ಜನರೊಡನೆ ವ್ಯವಹರಿಸುವುದು ನನಗೆ ಹೆಚ್ಚು ಸಲೀಸು ಎಂದೆನಿಸುತ್ತದೆ.

* * *

ಸುಮಾರು ಒಂದು ಗಂಟೆಗೂ ಹೆಚ್ಚು ಕಾಲ ಮಾತನಾಡುತ್ತಾ ಕುಳಿತಿದ್ದ ಪ್ರಭಾಕರ ಅವರಿಗೆ ಆರಂಭದಲ್ಲಿದ್ದ ಸುಸ್ತು ಕಡಿಮೆಯಾದಂತೆ ಕಾಣಿಸಿತು. ನಂತರ ಲವಲವಿಕೆಯಿಂದ "ಏನು ಕುಡಿಯುತ್ತೀರಾ?" ಎಂದು ಕೇಳಿದರು. "ಸರ್, ಏನೂ ಬೇಡ. ನಿಮಗೇನು ಬೇಕು ಹೇಳಿ, ನಾನೇ ಮಾಡಿಕೊಡುವೆ," ಎಂದೆ. ಎಂದೂ ಇದಕ್ಕೆ ಆಸ್ಪದ ಕೊಡದ ಅವರು, "ಬೇಡಿ. ನನ್ನ ಅಡಿಗೆ ಮನೆಯ ವ್ಯವಸ್ಥೆ ನನಗೆ ಮಾತ್ರ ಗೊತ್ತು. ಕಳೆದ ವಾರ ಗುವಾಹತಿಯಿಂದ ಬಂದ ನನ್ನ ಸ್ನೇಹಿತರು ಒಳ್ಳೆಯ ಚಹದ ಪುಡಿ ತಂದುಕೊಟ್ಟಿದ್ದಾರೆ. ಚಹ ಮಾಡಿ ಕೊಡುವೆ. ನೀವು ಅದರ ರುಚಿ ನೋಡಿರಿ", ಎಂದು ಸ್ವತಃ ತಾವೇ ಅಡಿಗೆ ಮನೆಗೆ ಚಹ ತಯಾರಿಸಲು ಹೊರಟರು. ನಾವು ಅವರೊಂದಿಗೆ ಹೋಗಿ ಅವರ ಚಹ ತಯಾರಿಯನ್ನು ನೋಡುತ್ತಾ ನಿಂತೆವು. ಅವರು ಸಂಭ್ರಮದಿಂದ ಅಸ್ಸಾಂನಲ್ಲಿ ಬೆಳೆಯುವ ವಿವಿಧ ಚಹದ ಗಿಡಗಳು, ಅವುಗಳ ವೈವಿಧ್ಯತೆಯನ್ನು ಕುರಿತು ತನ್ಮಯತೆಯಿಂದ ವಿವರಿಸುತ್ತಾ ಹೊರಟರು. ಆ ಗೆಳೆಯರು ತಂದುಕೊಟ್ಟಿದ್ದ ಚಹ ಪುಡಿಯೆಲ್ಲ ವನ್ನು ನನಗೇ ಕೊಟ್ಟುಬಿಟ್ಟರು.

ಅಸಾಧ್ಯ ಓದಿನ ಹುಚ್ಚಿನ ಈ ಮನುಷ್ಯನ ದಿನದ ಬಹುಪಾಲು ವೇಳೆ ಪುಸ್ತಕಗಳ ನಡುವೆಯೇ ಕಳೆಯುತ್ತದೆ. ಅದೆಷ್ಟು ವೈವಿಧ್ಯಮಯವಾದ ಪುಸ್ತಕಗಳು! ಅವರ ಅಭಿರುಚಿಯು ಅಷ್ಟೇ ಹಲವು ತೆರನಾದ್ದು. ಅವರ ಊಟದ ಮೇಜಿನ ಮೇಲೂ ಪುಸ್ತಕಗಳ ರಾಶಿ. ಚಹ ಕುಡಿಯುತ್ತ ಊಟದ ಮೇಜಿನ ಮುಂದೆ ಕುಳಿತೇ ಮತ್ತೆ ಸ್ವಾರಸ್ಯಕರವಾದ



ಕೃಪೆ : ಸಾಹಿತ್ಯ ಅಕಾಡೆಮಿ

ಸಂದರ್ಶನ ಸಿದ್ಧಪಡಿಸಿದವರು : **ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್'
ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವಿಪುರಂ,
ಬೆಂಗಳೂರು – ೫೬೦ ೦೧೯



"ಬಾಳೆಂಬ ಬಂಟನಿಗೆ ಗಂಡು ತ್ರಾಣವಾದರೆ ಹೆಣ್ಣು ಪ್ರಾಣ !" ಇದು ಅವರ ನಿಲುವು. ಈ ಬಗೆಯಲ್ಲಿ ಈ ಗ್ರಂಥ ಒಂದು ಜನಪರ ಸಂದೇಶವನ್ನು ಹೊತ್ತು ಬರೆದುದಾಗಿದೆ. 'ಹೆಣ್ಣು ಎಡ, ಗಂಡು ಬಲ' ಎನ್ನುವ ಜನಸಾಮಾನ್ಯರ ನಂಬಿಕೆಯನ್ನು ಛಿದ್ರಗೊಳಿಸುವ ಹಾಗೆ, 'ಬಲಗೈಯ ಬಲಕ್ಕೆ ಅವಶ್ಯವಾದ ರಕ್ತ ಎಡಗೈಯ ಧಮನಿಯೊಳಗಿಂದಲೇ ಪುಟಿದು ಹರಿಯುತ್ತದೆಯಲ್ಲವೇ ?' ಎಂಬೆಲ್ಲ ವಿಚಾರಗಳಿಗೆ ತಾವು ಕಂಡ ಉತ್ತರವನ್ನು ಇಟ್ಟು ವಿರಮಿಸುತ್ತಾರೆ.

# ಗೌರೀಶ ಕಾಯ್ಕಿಣಿಯವರ ಸಾಹಿತ್ಯದಲ್ಲಿ ಜನಪರ ಚಿಂತನೆಗಳು

**ವಿಷ್ಣು ನಾಯ್ಕ**

**ಸು**ಮಾರು ೬೦ ವರ್ಷಗಳ ಕಾಲದ ತಮ್ಮ ಬರವಣಿಗೆಯ ಬದುಕನ್ನು, ಅದೊಂದು ತಪಸ್ಸು ಎಂಬಂತೆ ನಿರ್ವಹಿಸಿದವರು ಡಾ॥ ಗೌರೀಶ ಕಾಯ್ಕಿಣಿ. ಉತ್ತರ ಕನ್ನಡ ಜಿಲ್ಲೆಯ ಗೋಕರ್ಣವೆಂಬ ಕಡಲತಡಿಯಲ್ಲಿ ಕುಳಿತು ಬರೆದೇ ಬರೆದ ಒಬ್ಬ ಅಪರೂಪದ ಜಿಜ್ಞಾಸು. ಅವರ ತಣಿಯದ ಜಿಜ್ಞಾಸೆ – ಅಲ್ಲಿ ಹುಟ್ಟಿಕೊಳ್ಳುವ ಪ್ರಶ್ನೆಗಳು ಮತ್ತು ಪ್ರಶ್ನೆಗಳ ಬೆನ್ನತ್ತಿ ನಡೆಸುವ ಹುಡುಕಾಟ ಇವೇ ಅವರ ಬರವಣಿಗೆಯ ನಿಜವಾದ ಶಕ್ತಿ ಎಂದು ನಾನಂದುಕೊಂಡಿದ್ದೇನೆ.

ಅಂಕೋಲೆಯ ರಾಘವೇಂದ್ರ ಪ್ರಕಾಶನ ಕಾಯ್ಕಿಣಿಯವರ ಸಮಗ್ರ ಸಾಹಿತ್ಯವನ್ನು ೧೦ ಸಂಪುಟಗಳಲ್ಲಿ (೧೯೯೩ರಿಂದ ೨೦೦೦) ಹೊರತರುವವರೆಗೆ ಗೌರೀಶ ಕಾಯ್ಕಿಣಿಯವರ ಸಾಹಿತ್ಯ ಮುಖ್ಯವಾಗಿ ಪತ್ರಿಕೆಗಳಲ್ಲಿ ಹರಡಿಹೋಗಿದ್ದವು. ೧೯೪೦ರಿಂದ ೬೦ರ ದಶಕದವರೆಗೆ ಪ್ರಕಟವಾಗಿದ್ದ ವಿಚಾರವಾದ, ಮಾರ್ಕ್ಸ್‌ವಾದ, ಪ್ರೀತಿ, ಬಾಳಿನಗುಟ್ಟು (ಜೀವನ ವಿಜ್ಞಾನ) ಮುಂತಾದ ಕೆಲವು ಕೃತಿಗಳು ಎರಡನೆಯ ಮುದ್ರಣ ಕಾಣದೆ ಕಣ್ಮರೆಯಾಗಿದ್ದವು. ಕರ್ನಾಟಕ ವಿಶ್ವವಿದ್ಯಾಲಯದ ಪ್ರಚಾರ ಉಪನ್ಯಾಸ ಮಾಲೆಯಲ್ಲಿ ಮೂಡಿಬಂದ ಗೌರೀಶರ 'ವಿಚಾರವಾದ' (೧೯೫೬) ಬರುವುದಕ್ಕಿಂತ ಮೊದಲು ಆ ವಿಷಯವಾಗಿ ಇಷ್ಟೊಂದು ಕೋನಗಳಿಂದ ಬರೆಯಬಹುದು ಎಂದು ಯೋಚಿಸಿದವರೂ ಕೂಡ ಇದ್ದಂತಿಲ್ಲ. ಅದಕ್ಕಿಂತ ಪೂರ್ವದಲ್ಲೇ ಕಾಯ್ಕಿಣಿಯವರ 'ಬಾಳಿನ ಗುಟ್ಟು' ಎಂಬ ಗ್ರಂಥ ಜೀವಜಿಜ್ಞಾಸುಗಳ ಮನಸ್ಸನ್ನು ಸೆಳೆದಿತ್ತು. ೧೯೪೮ರಲ್ಲಿ ಕಾಯ್ಕಿಣಿಯವರು 'ಗಂಡು–ಹೆಣ್ಣು' ಎಂಬ ಗ್ರಂಥವನ್ನು ಗೋಕರ್ಣದ ಪರ್ಣಕುಟಿ ಗ್ರಂಥಮಾಲೆಯ ಮೂಲಕ ಕೊಟ್ಟರು. ಅದಾದ ಒಂದೇ ವರ್ಷದಲ್ಲಿ (೧೯೪೯) 'ಮಾರ್ಕ್ಸ್‌ವಾದ' ಎಂಬ ಇನ್ನೊಂದು ಗ್ರಂಥವನ್ನು 'ಮಿಂಚಿನಬಳ್ಳಿ' ಪ್ರಕಾಶನದ ಮೂಲಕ ನಾಡಿಗೆ ಕೊಟ್ಟರು. ಪ್ರಾಯಶಃ 'ಮಾರ್ಕ್ಸ್‌ವಾದ' ಬಂದ ಮರುವರ್ಷವೇ ಧಾರವಾಡದ ಪರ್ಣಕುಟಿ ಗ್ರಂಥಮಾಲೆಯ ಮೂಲಕ 'ಪ್ರೀತಿ' ಎಂಬ ಬಹು ಮೌಲಿಕ ಗ್ರಂಥವೊಂದನ್ನು ಕಾಯ್ಕಿಣಿ ಕೊಡುತ್ತಾರೆ (೧೯೫೯).

ಸಮಗ್ರ ಸಾಹಿತ್ಯದ ಮೊದಲ ಸಂಪುಟಕ್ಕೆ ನಾಡಿನ ಹಿರಿಯ ಚಿಂತಕರೂ ಸಾಹಿತಿಗಳೂ ಆದ ಯಶವಂತ ಚಿತ್ತಾಲರು ಮೊದಲ ಮಾತನ್ನು ಬರೆಯುತ್ತಾರೆ. ಅಲ್ಲಿ ಅವರು ಹೇಳಿದ ಒಂದೆರಡು ಮುಖ್ಯ ವಿಚಾರಗಳನ್ನು ಅನಂತರದ ವರ್ಷಗಳಲ್ಲಿ ಅನೇಕ ವಿಮರ್ಶಕರು ಉದಾಹರಿಸುತ್ತಾ ಬಂದಿದ್ದಾರೆ. ಅದು ಇಂತಿದೆ : "ಮನುಷ್ಯನ ಆಸ್ಥೆಗೆ ಯೋಗ್ಯವಾದುದೆಲ್ಲವೂ, ಮನುಷ್ಯರಾಗಿ ಬೆಳೆಯಲು ನಮಗೆ ನೆರವಾಗಬಲ್ಲದೆಲ್ಲವೂ, ಗೌರೀಶ ಸಾಹಿತ್ಯಕ್ಕೆ ಮೂಲ ವಸ್ತುವಾಗಿವೆ. ಇಲ್ಲಿ ಕೆಲಸ ಮಾಡಿರುವುದು ಅಸಾಧಾರಣ ಧೀಶಕ್ತಿಯ ಸೃಜನಶೀಲ ಮನಸ್ಸೊಂದು ಬದುಕಿನ ಬಗೆಗೆ ತಳೆದ ಬೆರಗು ತುಂಬಿದ ಕುತೂಹಲವೇ ಹೊರತು ಶುಷ್ಕ ಪಾಂಡಿತ್ಯಪ್ರಿಯತೆ ಅಲ್ಲ. ಕೇವಲ ಬುದ್ಧಿಯಾಗಿದ್ದದ್ದು ಮನಸ್ಸಾಗಿ, ಮನಸ್ಸು ಕೊನೆಯಲ್ಲಿ ಪ್ರಜ್ಞೆಯಾಗಿ ವಿಕಾಸಗೊಳ್ಳಬೇಕು ಎನ್ನುವುದರ ಕಡೆಗೆ ಗೌರೀಶರ ಸಾಹಿತ್ಯದ ತುಡಿತವಿದೆ ಎನ್ನುವುದೇ ಅದರ ಹೆಚ್ಚುಗಾರಿಕೆಯಾಗಿದೆ... ಪ್ರಶ್ನೆಯೆಂಬುದು ಸ್ವತಃ ತಾನೇ ಪ್ರಜ್ಞೆಯಲ್ಲ, ಆದರೆ ಪ್ರಜ್ಞೆಯ ಸ್ಥಿತಿ ಮುಟ್ಟಿ ಬೆಳಕು ಕಾಣುವ – ತಾನೇ ಬೆಳಕಾಗುವ ಅಭೀಷ್ಟವುಳ್ಳದ್ದು. ಗೌರೀಶ ಸಾಹಿತ್ಯದ ಅಭೀಷ್ಟ ಚಿಂತನವೂ ಅದೇ. ಪ್ರಶ್ನೆಯಿಂದ ಆರಂಭವಾಗುವ ಅದರ ಗುಪ್ತ ಭೂಗತ ತಡಕಾಟ ಪ್ರಜ್ಞೆಯ ಹಂಬಲವಾಗುತ್ತ, ಬೆಳಕಿನ ಹಂಬಲವಾಗುತ್ತ ಉತ್ತರೋತ್ತರವಾಗಿದೆ. ವಿಚಾರವಾದಿಯೊಬ್ಬ ಶ್ರೇಷ್ಠ ಮಾನವತಾವಾದಿಯಾಗುವ ಈ ಅಂಥಾ ಬಗೆ ಕನ್ನಡದಲ್ಲಿ ಇನ್ನೊಂದಿಲ್ಲವೆಂದರೆ ಅತಿಶಯೋಕ್ತಿ ಆಗಲಾರದು."

ತಾತ್ಪರ್ಯವಿಷ್ಟೆ: ಇಡೀ ಜಗತ್ತನ್ನು ಡಾ॥ ಗೌರೀಶ ಕಾಯ್ಕಿಣಿಯವರು ಅಳೆಯುವಾಗ–ತಿಳಿಯುವಾಗ ಅಲ್ಲೊಂದು ಪ್ರಶ್ನೆ ಇದ್ದೇ ಇರುತ್ತದೆ. ಪ್ರಶ್ನೆಯ ಹೊರತಾಗಿ ಅವರು ಏನನ್ನೂ 'ಇದೇ ಪ್ರಸಾದ' ಎಂದು ಒಪ್ಪಿಕೊಳ್ಳುವುದಿಲ್ಲ. ಪ್ರಶ್ನೆ ಪ್ರಜ್ಞೆಯ ಸ್ಥರದಲ್ಲಿ ಹಿಗ್ಗಿ ಬೆಳಕಿನ ಹಂಬಲವಾಗುತ್ತ ಯಾವುದೇ ವಸ್ತುವನ್ನು ಗ್ರಹಿಸುವ ವ್ಯವಧಾನ ಡಾ॥ ಕಾಯ್ಕಿಣಿಯವರದಾಗಿದೆ.

ಅವರ 'ವಿಚಾರವಾದ' ಗ್ರಂಥದ ಆರಂಭವೇ ಬುದ್ಧಿವಂತನೋ ? ಬುದ್ಧಿವಾದಿಯೋ ? ಎಂಬ ಪ್ರಶ್ನೆಯೊಂದಿಗೆ ಸಾಗುತ್ತದೆ. ಆ ಗ್ರಂಥದಲ್ಲಿ ಅವರು ಬುದ್ಧಿವಾದದ ಅಗತ್ಯವನ್ನು ಇನ್ನಿಲ್ಲದಂತೆ ಪ್ರತಿಪಾದಿಸುತ್ತಾರೆ. "ಮಂಗಳ – ತಿಂಗಳ ಲೋಕಗಳು ನಮ್ಮ ಈ ಭೂಲೋಕದ ಅಂಗಳಕ್ಕೆ ಇಳಿದಂತೆ ಆಗಿವೆ. ಆದರೆ ವೈಜ್ಞಾನಿಕರು ಸಾಧಿಸಿದ ಜ್ಞಾನದ ಪ್ರಗತಿಯ ಎತ್ತರಕ್ಕೆ ಅದನ್ನು ಅನುಭವಿಸುವವರ ಬುದ್ಧಿಶಕ್ತಿಯು ಕೆಲಸ ಮಾಡುತ್ತಿಲ್ಲ.

ಆದ್ದರಿಂದ ಬುದ್ಧಿವಾದ, ಬುದ್ಧಿ ವಂತಿಕೆಗಿಂತ ಮಿಗಿಲಾದುದು" ಎಂಬ ನಿಲುವು ಕಾಯ್ಕಿಣಿಯವರದು. ಕೊನೆಯಲ್ಲಿ ಅವರು ಈ ಬುದ್ಧಿವಾದದ ವಿಚಾರಕ್ಕೆ ಮುಕ್ತಾಯ ಹೇಳುವುದು ಹೀಗೆ: 'ಶುದ್ಧ ವೈಚಾರಿಕ ಬುದ್ಧಿಯೊಂದೇ ಮನುಷ್ಯತ್ವದ ಸಾಮರ್ಥ್ಯ ಮತ್ತು ಅದರ ಕೃಷಿಯಿಂದಲೇ ಮಾನವ್ಯದ ಸಾರ್ಥಕ್ಯ.'

'ಗಂಡು-ಹೆಣ್ಣು ಮತ್ತು ಪ್ರೀತಿ' ಇವೆರಡು ಗೌರೀಶ ಕಾಯ್ಕಿಣಿಯವರದೇ ಆದ ವಿಶಿಷ್ಟ ಕೊಡುಗೆಯಾಗಿ ಕನ್ನಡಕ್ಕೆ ಸಂದಿವೆ. "ಗಂಡು – ಹೆಣ್ಣು" ಗ್ರಂಥ 'ಸ್ತ್ರೀ ವಾಙ್ಮಯದಲ್ಲಿ ರುಚಿ ಏಕೆ?' ಎಂಬ ಕುರಿತು ಚರ್ಚಿಸುತ್ತದೆ. 'ಗಂಡು – ಹೆಣ್ಣಿಗೆ, ಹೆಣ್ಣು ಕೊನೆಯ ಒಗಟು' ಎಂದೂ ಹೇಳುತ್ತದೆ. ಪ್ರಾಣಿ ಪ್ರಪಂಚದಲ್ಲಿ ಹೆಣ್ಣಿನ ಸ್ಥಾನದ ಕುರಿತು ಲವಲವಿಕೆಯಿಂದ ಮಾತನಾಡುತ್ತದೆ. 'ಹೆಣ್ಣಿಗೆ ಪ್ರಣಯ ಬೇಕೇ?' ಎಂಬ ಪ್ರಶ್ನೆಯನ್ನಿಟ್ಟು ಅವಳು ಈ ವಿಚಾರದಲ್ಲಿ ಅವನಿಗಿಂತ ಹೇಗೆ ಮತ್ತು ಯಾಕೆ ಚತುರಳು? ಎಂಬುದರ ಸಾರವತ್ತಾದ ವಿವರ ಈ ಗ್ರಂಥದಲ್ಲಿದೆ. ಉದಾಹರಣೆಗೆ, ಗಂಡು-ಹೆಣ್ಣಿನ ಪ್ರೀತಿಯ ರೀತಿಯ ಬಗ್ಗೆ ಬರೆಯುವ ಕಾಯ್ಕಿಣಿಯವರು 'ಹೆಣ್ಣಿನ ಕಾಮ' (ಪ್ರೇಮ) ಕಡಿಮೆ ತೀವ್ರ, ಹೆಚ್ಚು ಮಂದ ಎಂಬುದಾಗಿ ಭಾವಿಸಿದರೆ ಅದು ಅರ್ಧಸತ್ಯ ಮಾತ್ರ' ಎನ್ನುತ್ತಾರೆ. ಅದಕ್ಕೆ ಅವರು ಕೊಡುವ ಕಾರಣ "ಗಂಡಿನ ಪ್ರೀತಿಗೆ ರಭಸ ಹೆಚ್ಚು, ಆದರೆ ವ್ಯಾಪ್ತಿ ಅಷ್ಟೇ ಕಡಿಮೆ. ಆದರೆ ಹೆಣ್ಣಿನ ರೀತಿ ಬೇರೆ ಅನ್ನುತ್ತಾ, ಹೆಣ್ಣಿನ ಬಾಳಿನಲ್ಲಿ ಪ್ರೀತಿಯ ವ್ಯಾಪ್ತಿಯು ವಿಶಾಲವಾದದ್ದು; ಅವಳ ಸಂದು ಮೂಲೆಗಳನ್ನು ತುಂಬಿ ತುಳುಕಿ ಆಕೆಯ ಪ್ರೀತಿ ಹರಿಯುತ್ತದೆ. ಗಂಡು ಹೆಣ್ಣಿನ ಪ್ರೀತಿಯಿಲ್ಲದೆ ಬಾಳಬಲ್ಲ; ಆದರೆ ಹೆಣ್ಣು ಹಾಗಲ್ಲ ಅವಳ ನಿಜವಾದ ಬಾಳು ಪ್ರೀತಿಯಿಂದಲೇ ಆರಂಭವಾಗಿ ಗುರಿ ಮುಟ್ಟಿದಾಗಲೇ ಸಾರ್ಥಕತೆಯನ್ನು ಪಡೆಯುವಂಥದ್ದು" ಎನ್ನುತ್ತಾರೆ ಕಾಯ್ಕಿಣಿ.

ಈ ಗ್ರಂಥವು ಹತ್ತು ಹಲವು ಆಯಾಮಗಳನ್ನು ಪಡೆದುಕೊಳ್ಳುತ್ತ, ಹೆಣ್ಣಿನ ಅನಾದಿಯ ದಾಸ್ಯದಿಂದ ಹೆಣ್ಣಿನ ಹಠ ಗಂಡಿನ ಗಂಡಾಂತರದವರೆಗೂ ಅಬಲೆಯ ಬಲದವರೆಗೂ ಬೆಳೆಯುತ್ತದೆ. ಒಂದು ಹಂತದಲ್ಲಿ 'ಹೆಣ್ಣು ಬಾಳೆ; ಗಂಡು ತೇಗು' ಎಂಬ ಲೋಕರೂಢಿಯ ಮಾತನ್ನು ಮಥಿಸುತ್ತಾ ಕೊನೆಯಲ್ಲಿ





ಗೌರೀಶ ಕಾಯ್ಕಿಣಿ ಅದ್ಭುತವಾದ ಒಂದು ವಾಕ್ಯದೊಂದಿಗೆ ಗಂಡು-ಹೆಣ್ಣಿನ ಸ್ಥಾನಮಾನವನ್ನು ಓದುಗನ ಮನಸ್ಸಿಗೆ ಮುಟ್ಟಿಸುತ್ತಾರೆ. ಹೆಣ್ಣಿನ ಪ್ರಾಯ, ಋತುಮತಿಯ ಸಂಕಷ್ಟ, ಹೆಣ್ಣಿನ ಕ್ರಾಂತಿ, ಮಾತೃತ್ವದ ಬಯಕೆ ಇತ್ಯಾದಿ ವಿಚಾರಗಳ ಬಗ್ಗೆ ಚರ್ಚಿಸಿ, ಕೊನೆಯಲ್ಲಿ, ಅಂದರೆ ಮುಕ್ತಾಯಕ್ಕೆ ಮೊದಲು ಹೇಳುವುದು ಹೀಗೆ :

"ಬಾಳೆಂಬ ಬಂಟನಿಗೆ ಗಂಡು ತ್ರಾಣವಾದರೆ ಹೆಣ್ಣು ಪ್ರಾಣ!" ಇದು ಅವರ ನಿಲುವು. ಈ ಬಗೆಯಲ್ಲಿ ಈ ಗ್ರಂಥ ಒಂದು ಜನಪರ ಸಂದೇಶವನ್ನು ಹೊತ್ತು ಬರೆದುದಾಗಿದೆ. 'ಹೆಣ್ಣು ಎಡ, ಗಂಡು ಬಲ' ಎನ್ನುವ ಜನಸಾಮಾನ್ಯರ ನಂಬಿಕೆಯನ್ನು ಛಿದ್ರಗೊಳಿಸುವ ಹಾಗೆ, 'ಬಲಗೈಯ ಬಲಕ್ಕೆ ಅವಶ್ಯವಾದ ರಕ್ತ ಎಡಗೈಯ ಧಮನಿಯೊಳಗಿಂದಲೇ ಪುಟಿದು ಹರಿಯುತ್ತದೆಯಲ್ಲವೇ?' ಎಂಬೆಲ್ಲ ವಿಚಾರಗಳಿಗೆ ತಾವು ಕಂಡ ಉತ್ತರವನ್ನು ಇಟ್ಟು ವಿರಮಿಸುತ್ತಾರೆ.

'ಪ್ರೀತಿ' ಕಾಯ್ಕಿಣಿಯವರಿಗೆ ಲೋಕಪ್ರೀತಿಯನ್ನು ತಂದುಕೊಟ್ಟ ತುಂಬ ಅಪರೂಪದ ಕೃತಿ. ಡಾ॥ ಹಾ. ಮಾ. ನಾಯಕ ಅವರು ಈ ಗ್ರಂಥವನ್ನು ಕುರಿತು ಈ ಲೇಖಕನೊಡನೆ ಮಾತನಾಡುತ್ತಾ, ಈ ಗ್ರಂಥ ಅಥವಾ ಇದರ ಅನುವಾದದ ಪ್ರತಿಯನ್ನು ಜಗತ್ತಿನ ಯಾವುದೇ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಪಠ್ಯವಾಗಿಸಬಹುದಾದಂಥ ಹೊತ್ತಿಗೆ ಇದು ಎಂದು ಕೊಂಡಾಡಿದ್ದು ನೆನಪಿದೆ. ಕನ್ನಡ ಪುಸ್ತಕ ಪ್ರಾಧಿಕಾರದ ಅಂದಿನ ಅಧ್ಯಕ್ಷರ ಗಮನಕ್ಕೆ ತಂದು ಈ ಗ್ರಂಥ ಮರುಮುದ್ರಣಗೊಳ್ಳುವಂತೆ ನೋಡಿಕೊಂಡ ಶ್ರೇಯಸ್ಸೂ ಹಾ. ಮಾ. ನಾಯಕರದ್ದೇ ಆಗಿದೆ.

ಇಲ್ಲಿ ಬರುವ ಒಂದಷ್ಟು ಪ್ರಶ್ನೆಗಳನ್ನು ನೋಡಬೇಕು : ರತಿಗೆ ಋತು ಬೇಕೆ? ಪ್ರೀತಿಯ ಮೂಲ ಯಾವುದು? ಲಿಂಗಭೇದವೆಲ್ಲಿಂದ? ಪ್ರೀತಿಯ ಸೋಪಾನ ಯಾವುದು? ಪ್ರೀತಿಯ ಶೀಲದ ಬಗ್ಗೆ ಎಷ್ಟು ಗೊತ್ತು? ಪ್ರೀತಿಯ ಅವತಾರವೆಂದು? ಕಾಮದ ಕೆಸರಿನಿಂದ ಕಾವ್ಯದ ಕಮಲವೇ? ಪ್ರೀತಿಯ ಕೃಷ್ಣಾವತಾರದ ಬಗ್ಗೆ ಎಷ್ಟು ಗೊತ್ತು? ಪ್ರೀತಿಯ ಪೂರ್ಣತೆ ಹೇಗೆ? ಪ್ರೀತಿಯ ಬಗ್ಗೆ ತತ್ವಜ್ಞಾನಿ ಪ್ಲೇಟೋ ಏನೆನ್ನುತ್ತಾನೆ? – ಹೀಗೆ ಹತ್ತಾರು ಪ್ರಶ್ನೆಗಳನ್ನು ಇಟ್ಟು ವಿವರಣೆ ಕೊಡುವ ಮೂಲಕ ಪ್ರೀತಿಯ ವಿಶ್ವರೂಪವನ್ನು ಕಾಯ್ಕಿಣಿಯವರು ನಿದರ್ಶನಗಳ ಮೂಲಕ ಹೆಣೆದಿದ್ದಾರೆ. ಈ ಗ್ರಂಥದ ಆರಂಭದಲ್ಲಿಯೇ ಕಾಯ್ಕಿಣಿಯವರು ಅದರ 'ದಶಾವತಾರ'ದ ಸೂಕ್ಷ್ಮರೂಪವನ್ನು ಕಟ್ಟಿಕೊಡುವುದು ಹೇಗೆ?

"ಪ್ರೀತಿಗಾಗಿ ದುಡಿತ", "ಪ್ರೀತಿಗಾಗಿ ದುಃಖ", "ಪ್ರೀತಿಗಾಗಿ ದುರ್ಘಟನೆ", "ಮಹಾಕಾವ್ಯದಿಂದ ಹಳ್ಳಿಯ ಹಾಡಿನ ತನಕ ಪ್ರತಿಯೊಂದು ಕಥನ, ಪ್ರತಿಯೊಂದು ಕವನ, ಕಲ್ಪನೆಯಲ್ಲಿ ಕೆತ್ತಿರಲಿ, ಕಲ್ಪನೆಯಲ್ಲಿ ಕೊರೆದಿರಲಿ, – ಪ್ರೀತಿಯ ಅನಾದಿ ಅನಂತ ಲೇಖವು ಬೆವರು, ಕಣ್ಣೀರು ಮತ್ತು ನೆತ್ತರುಗಳಿಂದಲೇ ವಿಚಿತ್ರವಾಗಿ ಬರೆದುಬಂದಿದೆ. ಪ್ರೀತಿಗಾಗಿ ಪಟ್ಟಣಗಳು ಉರಿದಿವೆ. ದಂಡಯಾತ್ರೆಗಳು ನಡೆದಿವೆ; ಸಿಂಹಾಸನಗಳು ಉರುಳಿವೆ; ಯುದ್ಧಗಳು ಎಸಗಿವೆ; ಜಗತ್ತಿನ

ಇತಿಹಾಸ ಮಾನವ ಜೀವನದ ಮಹಾಭಾರತ – ಪ್ರೀತಿಯ ರಭಸದಲ್ಲಿಯೇ ಅದ್ದಿ ಅರಳಿದಂತಿದೆ.”

ಗೌರೀಶ ಕಾಯ್ಕಿಣಿಯವರು ದಿನಕರ ದೇಸಾಯಿ ಯವರ (ಅಂಕೋಲೆಯ) ಜನಸೇವಕ ಸಾಪ್ತಾಹಿಕಕ್ಕೆ 'ಅಡಿಗೆ ಭಟ್ಟ', 'ವೈಶ್ವಾನರ' ಮತ್ತು 'ಗೌರೀಶ ಕಾಯ್ಕಿಣಿ' ಎಂಬ ಮೂರು ಹೆಸರುಗಳಲ್ಲಿ ಹದಿನಾರು ವರ್ಷಗಳ ವರೆಗೆ ಅಂಕಣ ಬರಹಗಳನ್ನು ಬರೆದವರು. ಆ ಲೇಖನಗಳ ಸಂಖ್ಯೆಯೇ ೨೪೦೦ ದಾಟಿದ್ದವು ! ಬಹುಶಃ ಕನ್ನಡದಲ್ಲಿ ಯಾವ ಅಂಕಣಕಾರನೂ ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಬರೆದದ್ದಿಲ್ಲ. 'ಜನಸೇವಕ'ದ ಹೊರತಾಗಿ ಅವರು 'ಉದಯವಾಣಿ', 'ತುಷಾರ', 'ಸಂಯುಕ್ತ ಕರ್ನಾಟಕ', 'ಕಸ್ತೂರಿ', ಮುಂತಾದ ರಾಜ್ಯವ್ಯಾಪ್ತಿಯ ನಿಯತಕಾಲಿಕಗಳಿಗೂ, ಅಂತೆಯೇ ಜಿಲ್ಲಾ ಮಟ್ಟದ ಹಾಗೂ ತಾಲೂಕು ಮಟ್ಟದ ಚಿಕ್ಕ ಚಿಕ್ಕ ಪತ್ರಿಕೆಗಳಿಗೂ ವಿಶೇಷಾಂಕಗಳಿಗೂ ಬರೆದವರು. ಅವನ್ನೆಲ್ಲಾ ಲೆಕ್ಕಕ್ಕೆ ತೆಗೆದುಕೊಂಡಾಗ, ಸುಮಾರು ಐದು ಸಾವಿರ ಬಿಡಿ ಲೇಖನಗಳನ್ನಾದರೂ ಅವರು ಬರೆದಿರಬೇಕು ಅನಿಸುತ್ತದೆ. ಆ ಬಗ್ಗೆ ಅವರೊಡನೆ ಮಾತನಾಡಿದಾಗ 'ಅವುಗಳ ಲೆಕ್ಕ ನಾನೂ ಇಡಲಿಲ್ಲ, ಇಟ್ಟವರೂ ಇಲ್ಲ' ಎಂದುಬಿಟ್ಟರು. ಆದರೆ ಅವೆಲ್ಲವೂ ಅಪ್ಪಟ ಜನಪರವಾದ – ಜೀವಜಗತ್ತಿನ ಪರವಾದ ವಿಚಾರಗಳ ಚರ್ಚೆಯುಳ್ಳ ಲೇಖನಗಳಾಗಿವೆ. ನಾನು ಅವರ ಸಮಗ್ರ ಸಾಹಿತ್ಯವನ್ನು ಪ್ರಕಟಿಸುವ ಹೊತ್ತಿಗೆ ಕೊನೆಯ ಮೂರು ಸಂಪುಟಗಳು ಇಂಥ ಆಯ್ದ ಬಿಡಿ ಲೇಖನಗಳಿಗಾಗಿ ಮೀಸಲಿಟ್ಟಿದ್ದೆ. ಆ ಮೂರು ಸಂಪುಟಗಳು ಸುಮಾರು ೫೦೦ರಷ್ಟು ಲೇಖನಗಳನ್ನಷ್ಟೇ ಒಳಗೊಂಡಿವೆ.




ಇವುಗಳ ಹೊರತಾಗಿ ಕಾಯ್ಕಿಣಿಯವರ ಸಮಗ್ರ ಸಾಹಿತ್ಯದ ೭ನೇ ಸಂಪುಟ ಪೂರ್ತಿ ಅವರ ರೂಪಕ ಮತ್ತು ನಾಟಕಗಳಿಂದ ತುಂಬಿವೆ. ತಾತ್ಪರ್ಯ ಇಷ್ಟೆ: ಕಾಯ್ಕಿಣಿಯವರು ಮನುಷ್ಯನ ಬೌದ್ಧಿಕ ಆಸ್ಥೆಗೆ ಅಗತ್ಯವಿರುವ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೈಯಾಡಿಸಿದ್ದನ್ನು ಕಾಣುತ್ತೇವೆ. 'ಕಾವ್ಯ' ಎಂದರೇನು ?, 'ವಿಮರ್ಶೆಗೆ ಯಾವ ದಾರಿ ?', 'ಸಾಹಿತ್ಯದಲ್ಲಿ ಶೂದ್ರ–ಬ್ರಾಹ್ಮಣ ಸಂದರ್ಭ', 'ಕಾವ್ಯದಲ್ಲಿ ದಲಿತ ಪ್ರಜ್ಞೆ', 'ಮಾಸ್ತಿಯವರ ಸುಬ್ಬಣ್ಣ', 'ಭೈರಪ್ಪನವರ ಕಾದಂಬರಿಗಳಲ್ಲಿ ಧರ್ಮ', 'ದಿನಕರ ದೇಸಾಯಿ ಅವರ ಕಾವ್ಯ', 'ಸ್ವಾತಂತ್ರ್ಯೋತ್ತರ ವಿಚಾರ ಸಾಹಿತ್ಯ', 'ಶಂಬಾ ಅವರ ತತ್ವವಿಚಾರಗಳು', 'ಅನುಭವ ಮತ್ತು ಅಭಿವ್ಯಕ್ತಿ', 'ವಾಲ್ಮೀಕಿ ತೂಕಡಿಸಿದಾಗ' – ಹೀಗೆ ಅವರ ಕುತೂಹಲಕ್ಕೆ ಈಡಾಗದೇ ಇರುವ ಸಾಹಿತ್ಯವೇ ಇಲ್ಲ. ಹಿಂದಿಯಿಂದ, ಮರಾಠಿಯಿಂದ, ಕೊಂಕಣಿಯಿಂದ, ಇಂಗ್ಲಿಷಿನಿಂದ ಕನ್ನಡಕ್ಕೂ, ಕನ್ನಡದಿಂದ ಈ ಎಲ್ಲ ಭಾಷೆಗಳಿಗೂ ಅವರು ತರ್ಜುಮೆ ಮಾಡಿದ ಕಥೆಗಳಿವೆ, ಕಾದಂಬರಿಗಳಿವೆ. ವೈಚಾರಿಕ ಲೇಖನಗಳಿವೆ. 'ಲೋಕಾಯತ'ದಂತಹ ವೈಚಾರಿಕ ಪ್ರಜ್ಞೆಗೆ ಸವಾಲಾದ ಅದ್ಭುತ ಗ್ರಂಥವನ್ನು ಬರೆದುಕೊಟ್ಟವರವರು. ಮಹರ್ಷಿ ಅರವಿಂದರ ತತ್ವಜ್ಞಾನದ ಬಗ್ಗೆ ಕೂಡಬರೆದವರು.

ಒಟ್ಟಿನಲ್ಲಿ, ಜೀವಜಗತ್ತಿಗೆ ಬೇಕಾದ ಜನಮುಖೀ ಸಾಹಿತ್ಯ ಗೌರೀಶರ ದೊಡ್ಡ ಸಂಪತ್ತಾಗಿದೆ. ಈ ಹಿನ್ನೆಲೆಯಲ್ಲಿ ಡಾ॥ ಸಿ. ಎನ್. ರಾಮಚಂದ್ರನ್ ಅವರ ಮಾತಿನೊಂದಿಗೆ ಈ ಲೇಖನಕ್ಕೆ ಮುಕ್ತಾಯ ಹೇಳುವುದು ಸೂಕ್ತ ಎಂದುಕೊಂಡಿದ್ದೇನೆ: “ಗೌರೀಶ ಕಾಯ್ಕಿಣಿಯವರ ಕೃತಿಗಳನ್ನು ಓದುವುದೆಂದರೆ ಪ್ರಖರ ವೈಚಾರಿಕತೆಯ ಎದುರು ನಮ್ಮನ್ನು ಒಡ್ಡಿಕೊಂಡಂತೆ... ಆದರೆ ಪಂಡಿತರಿಗೂ ಸವಾಲಾಗುವ ಬಹುಶ್ರುತತ್ವ ಮತ್ತು ಯಾವ ಅಮೂರ್ತ ಜಟಿಲ ಪರಿಕಲ್ಪನೆಯನ್ನೂ ಸರಳ ದೃಷ್ಟಾಂತಗಳ ಮೂಲಕ ವಿವರಿಸುವ ವ್ಯವಧಾನ – ಇವುಗಳಿಂದಾಗಿ ವಿದ್ವಾಂಸರು, ಆಸಕ್ತರು, ಕುತೂಹಲಿಗಳು ಇವರೆಲ್ಲರಿಗೂ ಗೌರೀಶರ ಚಿಂತನೆ ಅತ್ಯಂತ ಪ್ರಸ್ತುತ.”

**ವಿಷ್ಣು ನಾಯ್ಕ**
'ಪರಿಮಳ', ಅಂಬಾರಕೊಡ್ಲ, ಅಂಕೋಲ – ೫೮೧ ೩೧೪, ಉತ್ತರ ಕನ್ನಡ ಜಿಲ್ಲೆ

ಕಾವ್ಯಲೋಕ

# ಬಾಯಾರಿದ ಭೂಮಿ

ಏಳು ದಶಕ ದಣಿದು
ಒಣಗಿ ನಿಂತ ಭೂಮಿ
ಒಡಲ ಕೆಂಡ ಎರಚಿ
ಗಗನ ಬಟ್ಟೆ ತೂತು

ಕೆಂಡದುಂಡೆ ಜ್ವಾಲೆ
ಸಸಿಯ ಬೇರ ಸುಟ್ಟು
ಕಳಚಿಬಿತ್ತು ಜೀವ
ಕರುಳ ಬಳ್ಳಿ ಬಿಟ್ಟು

ಬೋಳು ನೆತ್ತಿ ಸುಟ್ಟು
ಬಂಡೆಯಂತೆ ಕಾದು
ಎಳೆಯ ಕಂದ ಪಾದ
ಬೊಬ್ಬೆ ಬಂತು ಸೀದು

ನೀರ ಇಳಿಸಿ ಒಳಗೆ
ತಣಿಸಬೇಕು ತಾಯ
ಹರಿಯೊ ಜಲವ ನಿಲಿಸಿ
ಹಿಂಗಿಸಬೇಕು ಹನಿಯ

ನೆಲದ ಮಡಿಲು ತುಂಬಿ
ಉಕ್ಕಬೇಕು ಹಸಿರು
ಬಾಯಾರಿದ ಭೂಮಿ
ಆಡಬೇಕು ಉಸಿರು

*(ಏಳು ದಶಕ = ಸ್ವಾತಂತ್ರ್ಯಾನಂತರದ ಕಾಲ)*

**ಡಾ॥ ರಂಗಾರೆಡ್ಡಿ ಕೋಡಿರಾಂಪುರ**
'ಇರುವಂತೆ', ಸ್ವಾಮಿ ವಿವೇಕಾನಂದ ರಸ್ತೆ, ೧ನೇ ಮುಖ್ಯರಸ್ತೆ
ಪಾರ್ವತಿ ನಗರ, ಲಗ್ಗೆರೆ, ಬೆಂಗಳೂರು – ೫೬೦ ೦೫೮



# ಆಚ್ಛಾದನೆಯ ಆಕರ್ಷಣೆ

ತಿಂಗಳ ೯ರ ಸಂಜೆ ಚಂದ್ರನನ್ನು ಹುಡುಕಿ; ಅದು ಸುಲಭ. ಆದರೆ ಅದರ ಪಕ್ಕದಲ್ಲಿ ಅದರ ಹಿಂದೆ ಅಡಗಿಕೊಂಡಿರುವ ರೋಹಿಣಿಯನ್ನು ಹುಡುಕಬಲ್ಲಿರಾ ? ಪ್ರಯತ್ನಿಸಿ. ಇದೊಂದು ಆಚ್ಛಾದನೆ; ಸಂಜೆ ೦೬:೨೯ಕ್ಕೆ ಆರಂಭವಾಗುತ್ತದೆ. ಒಂದು ನಿಮಿಷ ತಡವಾದರೂ ರೋಹಿಣಿಯನ್ನು ಕಾಣಲಾಗುವುದಿಲ್ಲ. ಸುಮಾರು ಏಳು ಗಂಟೆಗೆ ಚಂದ್ರನ ಇನ್ನೊಂದು ಬದಿಯಿಂದ ರೋಹಿಣಿ ಕಾಣತೊಡಗುತ್ತದೆ. ಆ ಮುಂದೆ ಅವು ತೀರಾ ಸಮೀಪದಲ್ಲಿ ಇರುವಂತೆ ಕಾಣುತ್ತವೆ. ಒಂದೆರಡು ಗಂಟೆಗಳ ನಂತರ ದೂರ ದೂರ ಸರಿಯುವುದು ಸ್ಪಷ್ಟವಾಗುತ್ತದೆ.

ಈ ತಿಂಗಳಲ್ಲಿ ಶುಕ್ರ ಮತ್ತು ಮಂಗಳ ಗ್ರಹಗಳ ಸಂಗಮಗಳನ್ನು ನೋಡಲು ಒಳ್ಳೆಯ ಅವಕಾಶಗಳಿವೆ. ಇವು ಪರಸ್ಪರ ಸಮೀಪಿಸುವುವು. ದೂರದರ್ಶಕ, ದುರ್ಬೀನು, ಕ್ಯಾಮೆರಾ ಇರುವವರಿಗೆ ಇದು ಒಳ್ಳೆಯ ಅವಕಾಶ. ಮೊದಲನೆಯ ತಾರೀಖಿನಂದೇ ಸಂಜೆಯಲ್ಲಿ ಶುಕ್ರ ಮತ್ತು ಚಂದ್ರ ಒಟ್ಟುಗೂಡಿರುತ್ತವೆ. ೪ರಂದು ಮಂಗಳದ ಸಮೀಪಕ್ಕೆ ಚಂದ್ರ ಸರಿಯುತ್ತದೆ. (ಈ ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ) ಕ್ರಮೇಣ ಹತ್ತಿರ ಹತ್ತಿರ ಸರಿಯುವ ಶುಕ್ರ ಮತ್ತು ಮಂಗಳಗಳೊಡನೆ ೩೧ರ ಸಂಜೆ ಪುನಃ ಚಂದ್ರ ಸೇರುತ್ತದೆ.

ಮುಂಜಾವಿನಲ್ಲಿ ಶನಿ ಮತ್ತು ಬುಧ ಇವುಗಳ ಸಮಾಗಮ ನೋಡುವ ಅವಕಾಶವಿದೆ. ಜ್ಯೇಷ್ಠಾ ನಕ್ಷತ್ರದ ಸಮೀಪವೇ ಶನಿ ಗ್ರಹ ಇದೆ. ೨೫ರಂದು ಬುಧ ಮತ್ತು ಶನಿ ಇವೆರಡರ ಜೊತೆಗೆ ಚಂದ್ರನ ಸಮಾಗಮ.

ಬರಿಗಣ್ಣಿಗೆ ಕಾಣುವ ಇನ್ನೊಂದು ಗ್ರಹ ಗುರು ಮಧ್ಯರಾತ್ರಿಗೆ ಉದಯಿಸುತ್ತದೆ. ಚಿತ್ರಾ ನಕ್ಷತ್ರದ ಪಕ್ಕದಲ್ಲೇ ಇದೆ. ೧೯ರಂದು ಮುಂಜಾವಿನಲ್ಲಿ ಚಂದ್ರ ಕೂಡ ಇವೆರಡರ ಪಕ್ಕದಲ್ಲಿಯೇ ಕಾಣುತ್ತದೆ.






ಜನವರಿ ೩೧ರ ಮುಸ್ಸಂಜೆ
ಶುಕ್ರ – ಮಂಗಳ – ಚಂದ್ರ ಪುಟ್ಟ ಗುಂಪು

ಸಂಜೆಯ ಆಕಾಶದಲ್ಲಿ ನಕ್ಷತ್ರಪುಂಜಗಳ ಪರಿಚಯ ಮಾಡಿಕೊಳ್ಳಲು ಒಳ್ಳೆಯ ಅವಕಾಶವಿದೆ. ಪೂರ್ವದಲ್ಲಿ ಗೆರೆ ಎಳೆದಂತೆ ಕಾಣುವ ಮೂರು ಚುಕ್ಕೆಗಳು ಮಹಾವ್ಯಾಧದ (ಒರೈಯನ್) ನಡುವು. ಈ ಸೊಂಟಪಟ್ಟಿಯಲ್ಲೊಂದು ಖಡ್ಗವನ್ನು ಕಲ್ಪಿಸಿಕೊಳ್ಳಿ. ಆ ಸ್ಥಳದಲ್ಲಿದೆ ಒರೈಯನ್ ನೆಬ್ಯುಲಾ. ಇದನ್ನು ಬರಿಗಣ್ಣಿನಿಂದಲೇ ಗುರುತಿಸುವ ಪ್ರಯತ್ನ ಮಾಡಬಹುದು. ಮಹಾವ್ಯಾಧದ ಉತ್ತರಕ್ಕೆ ಇದೆ, ಪಂಚಕೋನ ಆಕೃತಿಯ ವಿಜಯಸಾರಥಿ (ಆರಿಗಾ) – ಅದರಲ್ಲಿಯ ಪ್ರಕಾಶಮಾನ ನಕ್ಷತ್ರ ಬ್ರಹ್ಮಹೃದಯ (ಕಪೆಲ್ಲಾ). ದಕ್ಷಿಣದಲ್ಲಿ ಕಾಣುವ ಏಕಾಂಗಿ ನಕ್ಷತ್ರ ವೈತರಣೀ ಮುಖ (ಆಚೆರ್ನಾರ್). ಮಹಾವ್ಯಾಧನ ಕಾಲಿನ ಬಳಿ ಆರಂಭವಾಗುವ ನದಿಯ ಕೊನೆಯ ನಕ್ಷತ್ರ. ಉತ್ತರದಲ್ಲಿ ಕುಂತಿ (ಕೆಸಿಯೋಪಿಯ) ನೆತ್ತಿಯಲ್ಲಿ ನಕುಲ (ಪೆಗಸಸ್) – ಇವೆರಡರ ನಡುವೆ ದ್ರೌಪದಿ (ಆಂಡ್ರೊಮಿಡಾ). ಈ ಭಾಗದಲ್ಲಿ ದುರ್ಬೀನಿನಿಂದ ಹುಡುಕಿದರೆ ಆಂಡ್ರೊಮಿಡಾ ಗೆಲಾಕ್ಸಿಯೂ ಕಾಣುವ ಸಾಧ್ಯತೆ ಇದೆ. ನೆತ್ತಿಯಿಂದ ಪೂರ್ವದಂಚಿನ ಭಾಗದಲ್ಲಿ ಮೇಷ, ವೃಷಭಗಳನ್ನು ಕಾಣಬಹುದು.

ತಿಂಗಳ ಮೊದಲ ವಾರದಲ್ಲಿ ಕ್ವಾಂಡ್ರಾಟಿಡ್ ಎಂಬ ಹೆಸರಿನ ಉಲ್ಕಾವೃಷ್ಟಿ ಇದೆ. ಅಷ್ಟೇನೂ ಪ್ರಕಾಶಮಾನ ವಾದದ್ದಲ್ಲ. ೫ರಂದು ಭೂಮಿ – ಸೂರ್ಯರ ದೂರ ಗರಿಷ್ಠ ವಾಗಿರುವುದು; ಹಾಗೆಂದ ಮಾತ್ರಕ್ಕೆ ಅದು ಬರಿಗಣ್ಣಿಗೇ ಚಿಕ್ಕದಾಗಿ ಕಾಣುತ್ತದೆ ಎಂದೇನೂ ಅರ್ಥವಲ್ಲ. ಇದು ಭೂಮಿಯ ಕಕ್ಷೆ ವೃತ್ತವಲ್ಲ. ದೀರ್ಘವೃತ್ತ ಎಂಬುದರ ನಿರೂಪಣೆ. (ಇಂದಿನ ಪಠ್ಯಪುಸ್ತಕಗಳಲ್ಲಿ ದೀರ್ಘವೃತ್ತ ಎಂಬ ಪದಕ್ಕೆ ಎಲಿಪ್ಸೀಯ ಎಂಬ ಪದ ಬಳಸ ತೊಡಗಿದ್ದಾರೆ; ಇದು ಸರಿಯೋ ತಪ್ಪೋ?)

**ಖಗೋಳ ದಿನಚರಿ**

ಜನವರಿ ೨ ಚಂದ್ರ – ಶುಕ್ರ ಜೋಡಿ*
೩ ಚಂದ್ರ – ಮಂಗಳ ಜೋಡಿ*
೪ ಭೂಮಿ – ಸೂರ್ಯ ನಡುವಿನ ದೂರ ಕನಿಷ್ಠ.
೫ ಚಾಂದ್ರಮಾಸದ ಮೊದಲ ಪಾದ
೯ (ಸಂಜೆ) ಚಂದ್ರ – ರೋಹಿಣಿ ಜೋಡಿ; ಆಚ್ಛಾದನೆ (ಸಂಜೆ ೬:೩೦ರಿಂದ ೭:೦೦)*
೧೦ ಚಂದ್ರ – ಭೂಮಿ ನಡುವಿನ ದೂರ ಕನಿಷ್ಠ ಅಂತರ
೧೨ ಹುಣ್ಣಿಮೆ; ಶುಕ್ರದ ಗರಿಷ್ಠ ಕೋನೋನ್ನತಿ
೧೫ ಮಘ – ಚಂದ್ರ ಜೋಡಿ; ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ
೧೯ ಚಂದ್ರ, ಚಿತ್ರಾ ಮತ್ತು ಗುರು – ಪುಟ್ಟ ಗುಂಪು; ಬುಧ ಗ್ರಹದ ಗರಿಷ್ಠ ಕೋನೋನ್ನತಿ
೨೦ ಚಾಂದ್ರಮಾಸದ ಕೊನೆಯ ಪಾದ.
೨೨ ಚಂದ್ರ – ಭೂಮಿ ನಡುವಿನ ದೂರ ಗರಿಷ್ಠ
೨೪ ಚಂದ್ರ – ಶನಿ ಸಮಾಗಮ*
೨೭ ಬುಧ – ಚಂದ್ರ ಸಮಾಗಮ
೨೮ ಅಮಾವಾಸ್ಯೆ
೩೧ ಶುಕ್ರ – ಮಂಗಳ – ಚಂದ್ರ ಪುಟ್ಟ ಗುಂಪು*

(* ಛಾಯಾಗ್ರಹಣಕ್ಕೆ ಸದವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

**ಎಸ್. ಮಂಜುನಾಥ**

**ನಾ**ನು ಮತ್ತು ನೀವು ಸೇರಿದಂತೆ ವಿಶ್ವದ ಬಹುತೇಕರು ಗ್ರಾಫೀನ್ ಜನ್ಮದಾತರಿದ್ದಂತೆ ! ಹೌದು, ನಿಮಗೆ ಆಶ್ಚರ್ಯವೆನ್ನಿಸಿದರೂ ಇದು ಸತ್ಯ. ಓದು ಬರಹ ಬಲ್ಲ ಯಾರೇ ಆಗಿರಲಿ ತಮ್ಮ ಕಲಿಕೆಯಲ್ಲಿ ಪೆನ್ಸಿಲ್ ಉಪಯೋಗಿಸಿ, ಗೆರೆ ಎಳೆದು ಚಿತ್ರಗಳನ್ನು ಮೂಡಿಸಿರುತ್ತಾರೆ. ಇದು ನಮಗರಿವಿಲ್ಲದೇ ಗ್ರಾಫೀನ್ ಪದರಗಳನ್ನು ಹಾಳೆಯ ಮೇಲೆ ಬಹುಶಃ ಅಂಟಿಸಿದಂತೆ. ಅಂದರೆ, ಗ್ರಾಫೀನ್ ಪದರಗಳನ್ನು ಸೃಷ್ಟಿಸಿದ ಹಾಗೆಯೇ ತಾನೇ ? ಗ್ರಾಫೀನ್ ಆಕರ್ಷಕ ನ್ಯಾನೊ ಸಾಮಗ್ರಿಯಾಗಿ, ನ್ಯಾನೊ ಜಗತ್ತಿನ ಅಚ್ಚರಿಯಾಗಿ ಸಾವಿರಾರು ಸಂಶೋಧಕರನ್ನು ತನ್ನತ್ತ ಸೆಳೆಯುವಂತೆ ಮಾಡಿದೆ. ಅಪರಿಮಿತ ಅನ್ವಯಿಕೆಗಳಿಂದ ಇಡೀ ಜಗತ್ತನ್ನೇ ಆಳಲು ಹೊರಟಿದೆ. ಈ ಅತ್ಯದ್ಭುತ ವಸ್ತುವಿನ ಕಿರು ಪರಿಚಯ ಇಲ್ಲಿದೆ ಓದಿ.

**ಆ**ಧುನಿಕ ಜಗತ್ತು ಹಿಂದೆಂದಿಗಿಂತಲೂ ವಿಜ್ಞಾನ–ತಂತ್ರಜ್ಞಾನ ಕ್ಷೇತ್ರದಿಂದಾಗಿ ಊಹಿಸಲಸಾಧ್ಯ ರೀತಿಯಲ್ಲಿ ಬೆರಗು–ಬಿನ್ನಾಣಗಳನ್ನು ಕಂಡುಂಡಿದೆ. ಸ್ಮಾರ್ಟ್ ಫೋನ್, ಫೇಸ್‌ಬುಕ್, ವಾಟ್ಸ್‌ಅಪ್, ಎಲ್‌ಇಡಿ ಪರದೆ, ಎಲ್‌ಇಡಿ ದೀಪ, ಅತಿವೇಗ ಗಣಕ, ಉಪಗ್ರಹ ತಯಾರಿಕೆ, ವ್ಯೋಮ ನೌಕೆಗಳ ವಿನ್ಯಾಸ, ವೈವಿಧ್ಯಮಯ ಸಂವೇದಕಗಳು – ಹೀಗೆ ಅನೇಕ ಪರಿಕರಗಳು ದಿನೇ ದಿನೇ ಬದಲಾಗತೊಡಗಿವೆ. ನಿತ್ಯಜೀವನದಲ್ಲಿ ನಾವು ಬಳಸುವ ವಸ್ತುಗಳು ಈ ಬಗೆಯ ವ್ಯಾಪಕ ರೂಪಾಂತರಗೊಳ್ಳಲು ಮುಖ್ಯ ಕಾರಣ, ವಸ್ತುವಿಜ್ಞಾನ ಕ್ಷೇತ್ರದಲ್ಲಾಗುತ್ತಿರುವ ಅತ್ಯಾಧುನಿಕ ಸಂಶೋಧನೆ. ವಸ್ತುವಿಜ್ಞಾನವೆಂಬುದು ಭೌತವಿಜ್ಞಾನ, ರಸಾಯನವಿಜ್ಞಾನಗಳ ಸಂಗಮ ಮತ್ತು ಸಂಕ್ರಮಣ ಜ್ಞಾನದ ವಿಶೇಷ ಶಾಖೆಯಾಗಿ ಜನಪ್ರಿಯಗೊಂಡಿದೆ. ಭೌತ ಮತ್ತು ರಸಾಯನ ವಿಜ್ಞಾನಗಳ ಜ್ಞಾನವನ್ನು ಬಳಸಿ, ಇದರಿಂದೊದಗುವ ಹಲವು ಅನ್ವಯಿಕೆಗಳನ್ನು ಆವಿಷ್ಕರಿಸುವುದಾಗಿದೆ. ಇಲ್ಲಿ ವಸ್ತುವಿನ ಗಾತ್ರ ಬದಲಾದಂತೆ; ಅಂದರೆ ಇಡೀ ಗಾತ್ರದಿಂದ ಮೈಕ್ರೊ ಗಾತ್ರ, ಮೈಕ್ರೊ ಗಾತ್ರದಿಂದ ನ್ಯಾನೊ ಗಾತ್ರಕ್ಕೆ ವಸ್ತುವು ಕಿರಿದಾದಂತೆ ಅದರ ಬಣ್ಣ, ದ್ರವನ ಬಿಂದು, ವಾಹಕತೆ, ಕಾಂತತೆ ಹೀಗೆ ವಿವಿಧ ಗುಣಗಳೂ ಬದಲಾಗ ತೊಡಗುವವು. ನ್ಯಾನೊ ಮೀಟರ್ (೧೦$^{-೯}$ ಮೀ.) ಗಾತ್ರದಲ್ಲಿ ವಸ್ತುಗಳ ಸಂರಚನೆಯನ್ನು ಆಧರಿಸಿಯೂ ಅವುಗಳ ಗುಣಸ್ವಭಾವಗಳು ನಿರ್ಧರಿಸಲ್ಪಟ್ಟಿರುತ್ತವೆ. ಉದಾಹರಣೆಗೆ ಕಾರ್ಬನ್ ಬಕಿಬಾಲ್ ಅಥವಾ ಫುಲರಿನ್ ಚೆಂಡು, ಕಾರ್ಬನ್ ನ್ಯಾನೊ ನಳಿಗೆ, ಗ್ರಾಫೈಟ್, ವಜ್ರ ಈ ಎಲ್ಲ ವಿಧಗಳ ಕಾರ್ಬನ್‌ನ ಬಹುರೂಪಿಗಳು ತಮ್ಮ ಗುಣಗಳಲ್ಲಿ ಅಸಾಧಾರಣ ಬದಲಾವಣೆಗಳನ್ನು ತೋರಿಸುತ್ತವೆ. ಇದಕ್ಕೆ ಪ್ರಮುಖ ಕಾರಣವೇ ಅವುಗಳ ಗಾತ್ರ ಮತ್ತು ಪರಮಾಣು ವಿನ್ಯಾಸ. ನ್ಯಾನೊ ಗಾತ್ರದಲ್ಲಿ ವಸ್ತುಗಳು ಒಂದು ರೀತಿಯಲ್ಲಿ ಜಾದೂಗೆ ಒಳಗಾದಂತೆ, ನಮ್ಮ ಎಣಿಕೆಯನ್ನೂ ಮೀರಿ ಆಶ್ಚರ್ಯಕರ ಸಂಗತಿಗಳನ್ನು ಹೊರಹಾಕುತ್ತಿವೆ. ಇದೇ ಕಾರಣಕ್ಕಾಗಿಯೇ ನ್ಯಾನೊ ಕ್ಷೇತ್ರ ವೈಜ್ಞಾನಿಕ ರಂಗದಲ್ಲಿ ಅತಿ ಪ್ರಖ್ಯಾತವಾಗಿದೆ. ಯುವ

# ನ್ಯಾನೊ ಜಗತ್ತಿನ ಅಚ್ಚರಿ ಗ್ರಾಫೀನ್





ಸಂಶೋಧಕರಿಗೆ ಅನೇಕ ಹೊಸ ಬಗೆಯ ಅವಕಾಶಗಳನ್ನು ಸೃಷ್ಟಿಸುತ್ತಿದೆ.

ವಸ್ತುವಿಜ್ಞಾನ ಕ್ಷೇತ್ರಕ್ಕೆ ನವನವೀನ ವಸ್ತುಗಳ ಪ್ರವೇಶ ಆಗಿಂದಾಗ್ಗೆ ನಡೆಯುತ್ತಲೇ ಇರುತ್ತದೆ. ಮೊದಮೊದಲಿಗೆ ಕಾರ್ಬನ್ ಫುಲರಿನ್ ಚೆಂಡನ್ನು ೧೯೮೫ರಲ್ಲಿ ರಿಚರ್ಡ್ ಸ್ಮಾಲೆ, ರಾಬರ್ಟ್ ಕರ್ಲ್ ಮತ್ತು ಕ್ರೋಟೋ ಆವಿಷ್ಕರಿಸಿದರು. ಈ ಕುರಿತ ಸಂಶೋಧನೆ ವಸ್ತು ವಿಜ್ಞಾನ ಕ್ಷೇತ್ರಕ್ಕೆ ಹೊಸ ಹುರುಪು ನೀಡಿತು. ಇದರ ವಿವಿಧ ಬಗೆಯ ಅನ್ವಯಿಕೆಗಳಿಗೆ ಸಂಶೋಧಕರು ಅನೇಕ ಮಾರ್ಗಗಳನ್ನು ಕಂಡುಕೊಂಡರು. ಈಗಾಗಲೇ ಫುಲರಿನ್ ಸಂಶೋಧನೆಯಿಂದ ಗಿಜಿಗಿಜಿ ಎನ್ನುತ್ತಿದ್ದ ಈ ಕ್ಷೇತ್ರ, ೫-೬ ವರ್ಷಗಳ ಅಂತರ ದಲ್ಲಿಯೇ ಮತ್ತೊಂದು ಹೊಸ ಪದಾರ್ಥದ ಪ್ರವೇಶಕ್ಕೆ ಅಣಿಯಾಯಿತು. ೧೯೯೧ರಲ್ಲಿ ಜಪಾನಿನ ವಿಜ್ಞಾನಿ ಸುಮಿಯೊ ಇಜಿಮಾ ಫುಲರಿನ್ ಅಧ್ಯಯನದ ತಮ್ಮ ಸಂಶೋಧನೆಗಳಲ್ಲಿ ನ್ಯಾನೊ ನಳಿಗೆ ಆಕಾರದ ಕಾರ್ಬನ್ ರಚನೆಗಳನ್ನು ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಪತ್ತೆಹಚ್ಚಿ ಹೊಸ ಸಂಚಲನ ಮೂಡಿಸಿದ್ದರು. ಕ್ರಮೇಣ ಈ ಪದಾರ್ಥವು ಕಾರ್ಬನ್ ನ್ಯಾನೊ ನಳಿಗೆಯಾಗಿ ಖ್ಯಾತಿ ಪಡೆದು, ಈ ನಿಟ್ಟಿನ ಸಂಶೋಧನೆಯ ಅವಕಾಶಗಳು ವ್ಯಾಪಕಗೊಂಡವು. ಏಕಭಿತ್ತಿಯ ನಳಿಗೆ (single-walled tube), ಅನೇಕ ಭಿತ್ತಿಯ ನಳಿಗೆ (multi-walled tube), ಆರ್ಮ್ ಚೇರ್ (ಆರಾಮ ಕುರ್ಚಿ), ಜಿಗ್‌ಜ್ಯಾಗ್ (ಅಡ್ಡಾದಿಡ್ಡಿ) ಮತ್ತು ಕೈರಲ್ (ಅಸಮಮಿತಿ) ಎಂಬ ವಿವಿಧ ಬಗೆಗಳ ನಳಿಗೆಗಳ ಅಧ್ಯಯನಕ್ಕೆ ಭರಪೂರ ಅವಕಾಶಗಳನ್ನು ಕಲ್ಪಿಸಿದವು. ಮುಚ್ಚಿರುವ ನಳಿಗೆಗಳ ತುದಿಯನ್ನು ತೆರೆದು ಅದರೊಳಕ್ಕೆ ಬೆಳ್ಳಿ, ಬಂಗಾರ, ಪ್ಲಾಟಿನಮ್‌ನಂತಹ ಲೋಹಗಳನ್ನು ತುಂಬಿ ಅವನ್ನು ಫಲನಗೊಳಿಸುವುದು (functionalizing) ಹೀಗೆ ಇನ್ನಿತರ ಬಗೆಯ ರಾಸಾಯನಿಕ ಕ್ರಿಯೆಗಳಿಂದ ಇವುಗಳ ಅನ್ವಯಿಕೆಗಳ ಬಗ್ಗೆ ಸಾಕಷ್ಟು ಸಂಶೋಧನೆಗಳು ನಡೆದವು. ಇಡೀ ಸಂಶೋಧನಾ ಜಗತ್ತೇ ಕಾರ್ಬನ್ ನ್ಯಾನೊ ನಳಿಗೆಗಳತ್ತ ತಿರುಗಿ ನೋಡುವಂತೆ ಮಾಡಿದವು !

ಎಲ್ಲೆಲ್ಲೂ ನಳಿಗೆಗಳ ಬಗ್ಗೆ ಮಾತುಕತೆ ಜೋರಾಗಿ ನಡೆಯುತ್ತಿರುವ ಸಮಯದಲ್ಲಿಯೇ ೨೦೦೪ರಲ್ಲಿ ವಿಶಿಷ್ಟ ಬಗೆಯ ಪ್ರಯೋಗನಿರತ ವಿಜ್ಞಾನಿ ಗಳಾದ ಆ್ಯಂಡ್ರೆ ಗೀಮ್ ಮತ್ತು ಕೊಸ್ಟ್ಯ ನೊವೊಸೆಲೊವ್ ಸಾಧಾರಣ ಸ್ಕಾಚ್‌ಟೇಪ್ (ಸೆಲ್ಲೊಟೇಪ್ ರೀತಿಯಲ್ಲಿಯೇ, ಆದರೆ ಸ್ವಲ್ಪ ಅದಕ್ಕಿಂತ ಭಿನ್ನ) ಬಳಸಿ ಉತ್ಕೃಷ್ಟ ಬಗೆಯ ಗ್ರಾಫೈಟ್‌ನಿಂದ ನಾಜೂಕಾಗಿ ಗ್ರಾಫೀನ್ ಹೊರ ತೆಗೆದಿದ್ದೇ ತಡ, ಸಂಶೋಧನಾ ಜಗತ್ತಿನ ಸುದೀರ್ಘ ಕಾಲದ ಕನಸೊಂದು ನನಸಾಯಿತು. ಅವರ ಪ್ರಬಂಧ "ಎಲೆಕ್ಟ್ರಿಕ್ ಫೀಲ್ಡ್ ಎಫೆಕ್ಟ್ ಇನ್ ಅಟೊಮಿಕಲಿ ಥಿನ್ ಕಾರ್ಬನ್ ಫಿಲ್ಮ್ಸ್" 'ಸೈನ್ಸ್' ಎಂಬ ವಿಶ್ವಖ್ಯಾತ ಪತ್ರಿಕೆಯಲ್ಲಿ ಮತ್ತು "ಟು-ಡೈಮೆನ್ಷನಲ್ ಗ್ಯಾಸ್ ಆಫ್ ಮಾಸ್ಲೆಸ್ ಡಿರ್‍ಯಾಕ್ ಫರ್ಮಿಯಾನ್ಸ್ ಇನ್ ಗ್ರಾಫೀನ್" ಸಂಶೋಧನಾ ಪ್ರಬಂಧವು 'ನೇಚರ್' ಎಂಬ ಮತ್ತೊಂದು ವಿಶ್ವ ಶ್ರೇಷ್ಠ ಸಂಶೋಧನಾ ಪತ್ರಿಕೆ ಯಲ್ಲಿ ಪ್ರಕಟಗೊಂಡವು. ಈ ಮೂಲಕ ಅವರ ಹೊಚ್ಚ ಹೊಸ ಪದಾರ್ಥ ಗ್ರಾಫೀನ್ ವಿಜ್ಞಾನೇತಿಹಾಸದಲ್ಲಿ ಹೊಸ ಅಲೆಯನ್ನು ಹುಟ್ಟುಹಾಕಿತು ! ಇಂದಿವರ ಈ ಪ್ರಬಂಧಗಳು, ಮೊದಲನೆಯದ್ದು ಸುಮಾರು ೬೨೦೦೦ಕ್ಕೂ ಹೆಚ್ಚು ಬಾರಿ ಮತ್ತು ಎರಡನೆಯದ್ದು ೧೩೦೦೦ಕ್ಕೂ ಹೆಚ್ಚು ಬಾರಿ ವೈಜ್ಞಾನಿಕ ಸಂಶೋಧನೆ ಗಳಲ್ಲಿ ಉಲ್ಲೇಖಗೊಂಡು ಒಂದು ರೀತಿಯ ದಾಖಲೆ ಯನ್ನೇ ನಿರ್ಮಿಸಿವೆ. ಇಲ್ಲಿಂದ ಗ್ರಾಫೀನ್ ಎಂಬ ಅದ್ಭುತ ವಸ್ತುವಿನ ಯಶೋಗಾಥೆ ಆರಂಭಗೊಂಡು; ಇಂದಿಗೆ ಇದರ ಬಗೆಗಿನ ಸಂಶೋಧನೆ ಸಾವಿರಾರು ಪ್ರಬಂಧಗಳು ಪ್ರಕಟಗೊಳ್ಳುವಂತೆ, ಲಕ್ಷಾಂತರ ಪುಟಗಳ ವಿಜ್ಞಾನ ಸಾಹಿತ್ಯವನ್ನು ಕೊಡುಗೆಯಾಗಿ ನೀಡಿ, ಹಲವು ಬಗೆಯ ಆಶ್ಚರ್ಯಕರ ಸಂಗತಿಗಳನ್ನು ಹೊರ ಚೆಲ್ಲಿದೆ. "ಗ್ರಾಫೀನ್ ಯಾಕಷ್ಟು ಮುಖ್ಯವೆಂದರೆ, ಅದು ಕೊಟ್ಟಿರುವ ಹೊಸ ಭೌತ ವಿಜ್ಞಾನ" ಎಂದು ಆ್ಯಂಡ್ರೆ ಗೀಮ್ ಪ್ರತಿಪಾದಿಸುತ್ತಾರೆ. ೨೦೧೦ರ ಭೌತ ವಿಜ್ಞಾನದ



*ನೊಬೆಲ್ ಪುರಸ್ಕೃತ ಆ್ಯಂಡ್ರೆ ಗೀಮ್, ಕೊಸ್ಟ್ಯ ನೊವೊಸೆಲೊವ್*

ನೊಬೆಲ್ ಪ್ರಶಸ್ತಿ ಹಂಚಿಕೊಂಡ ಈ ಇಬ್ಬರು ಮಹನೀಯರು ಹೊಸ ಬಗೆಯ ಸಂಶೋಧನೆಯ ಹರಿಕಾರರಾಗಿ, ಆಧುನಿಕ ವಿಜ್ಞಾನಕ್ಕೆ ಗ್ರಾಫೀನ್ ಎಂಬ ಚೆಂದದ ಚಿತ್ರ ಬಿಡಿಸಿ ಅದನ್ನು ಮತ್ತಷ್ಟು ಆಕರ್ಷಕಗೊಳಿಸಿದ್ದಾರೆ.

ಆಧುನಿಕ ಸಂಶೋಧನಾ ಜಗತ್ತಿನಲ್ಲಿ ಗ್ರಾಫೀನ್ ಯಾಕಷ್ಟು ಮನ್ನಣೆ ಗಳಿಸಿತು ಎಂಬ ನಿಮ್ಮ ಕುತೂಹಲ ಇದೀಗ ಹೆಚ್ಚಾಗಿರಬಹುದು. ಅದರ ತರಹೇವಾರಿ ವಿಶೇಷಣಗಳು ಇಲ್ಲಿವೆ ನೋಡಿ: ಸಂಶೋಧಕರ ಅಚ್ಚುಮೆಚ್ಚಿನ ವಸ್ತುವಾದ ಗ್ರಾಫೀನ್ ಅತ್ಯಂತ ಹಗುರ, ಆದರೆ ಅಷ್ಟೇ ಕಠಿಣ. ಸ್ಟೀಲ್ ಗಿಂತಲೂ ೨೦೦ ಪಟ್ಟು ಹೆಚ್ಚು ಶಕ್ತಿಶಾಲಿ, ಆದರೆ ರಬ್ಬರ್‌ನಂತೆ ಫ್ಲೆಕ್ಸಿಬಲ್. ತಾಮ್ರ ಮತ್ತು ಬೆಳ್ಳಿಗಿಂತ ಹೆಚ್ಚು ವಿದ್ಯುತ್‌ವಾಹಕ. ಆದರೆ ವಜ್ರಕ್ಕಿಂತಲೂ ಹೆಚ್ಚು ಉಷ್ಣವಾಹಕ. ಇವಷ್ಟೇ ಅಲ್ಲದೆ, ನಿಸರ್ಗದ ಅತ್ಯಂತ ತೆಳು ಪಾರದರ್ಶಕ ಪದರ ಕೂಡ ಹೌದು ! ಇಷ್ಟೆಲ್ಲಾ ವಿಶೇಷತೆ ಹೊಂದಿರುವ ಗ್ರಾಫೀನ್‌ನನ್ನು ನೋಡುತ್ತ ಸುಮ್ಮನೆ ಕೂಡಲು ವಿಜ್ಞಾನಿಗಳಿಗೆ ಮತ್ತು ತಂತ್ರಜ್ಞರಿಗೆ ಸಾಧ್ಯವೇ?

ಗ್ರಾಫೀನ್‌ನ ವಿಶೇಷ ಮತ್ತು ಅಸಾಧಾರಣವಾದ ಗುಣಗಳನ್ನು ತಿಳಿದುಕೊಂಡ ಮೇಲೆ ಅದರ ಬಗೆಗಿನ ಕುತೂಹಲ ನಿಮಗೆ ಜಾಸ್ತಿಯಾಗಿರಬೇಕಲ್ಲವೇ? ಗ್ರಾಫೀನ್ ರಚನೆಯಾದದ್ದು ಯಾವ ಧಾತುವಿನಿಂದ ? ಅದರ ವಿನ್ಯಾಸವಾದರೂ ಯಾವ ಬಗೆಯದ್ದು ? - ಎಂಬ ಪ್ರಶ್ನೆಗಳು ನಿಮ್ಮನ್ನು ಕಾಡದೇ ಇರಲಾರದು. ಗ್ರಾಫೀನ್ ಎನ್ನುವುದು ಒಂದು ಪರಮಾಣು; ದಪ್ಪನೆಯ, ಕಾರ್ಬನ್ ಪರಮಾಣುಗಳ, ಷಟ್ಕೋನಾಕೃತಿ ಜೋಡಣೆಯ (ಜೇನುಗೂಡಿನ ರಚನೆಯಂತೆ) ಎರಡು ಆಯಾಮವುಳ್ಳ ಪದರವಾಗಿದೆ. ಕಾರ್ಬನ್-ಕಾರ್ಬನ್ ಪರಮಾಣುಗಳ ಅಂತರ ೦.೧೪೨ ನ್ಯಾನೊ ಮೀಟರ್ ಅಥವಾ ೧.೪೨ ಆಂಗಸ್ಟ್ರಾಮ್. ಇಲ್ಲಿ ಕಾರ್ಬನ್ ಪರಮಾಣು ಗಳು $sp^2$ ರಾಸಾಯನಿಕ ಸಹವೇಲೆನ್ಸೀಯ ಸಂಕರ (ಹೈಬ್ರಿಡೈಸ್ಡ್ ಬಾಂಡ್) ಬಂಧಗಳಿಂದ ಜೋಡಿಸ ಲ್ಪಟ್ಟಿರುತ್ತವೆ. ಒಂದು ಕಾರ್ಬನ್ ಪರಮಾಣುವಿನ $s$, $p_x$ ಮತ್ತು $p_y$ ಕಕ್ಷಕಗಳು ತಮ್ಮ ಪಕ್ಕದಲ್ಲಿರುವ ಪರಮಾಣುವಿನೊಂದಿಗೆ ? σ-(ಸಿಗ್ಮ) ಸಹವೇಲೆನ್ಸೀಯ ಬಂಧವನ್ನು ಏರ್ಪಡಿಸಿಕೊಳ್ಳುತ್ತವೆ. ಈ σ-ಬಂಧ ಗಳಿಂದಾಗಿಯೇ ಗ್ರಾಫೀನ್‌ಗೆ ಅಸಾಧಾರಣ ಯಾಂತ್ರಿಕ ಸಾಮರ್ಥ್ಯ ಲಭಿಸಿರುವುದು ಕೂಡ. ಆದರೆ, $p_z$ ಕಕ್ಷಕ ತನ್ನ ಪಕ್ಕದ ಪರಮಾಣುವಿನ $p_z$ ಕಕ್ಷಕದೊಂದಿಗೆ π-ಬಂಧವನ್ನು ಏರ್ಪಾಡು ಮಾಡಿಕೊಳ್ಳುತ್ತದೆ. ಈ ಬಂಧವೇ π- ಬ್ಯಾಂಡ್ ಮತ್ತು π*- ಬ್ಯಾಂಡ್‌ಗಳನ್ನು ಸೃಷ್ಟಿಸಿ ಬಹುತೇಕ ಗ್ರಾಫೀನ್‌ನ ಎಲೆಕ್ಟ್ರಾನಿಕ್ ವಿನ್ಯಾಸಕ್ಕೆ ಕಾರಣವಾಗಿದೆ.




*ಗ್ರಾಫೀನ್‌ನಲ್ಲಿ ಕಾರ್ಬನ್ ಪರಮಾಣುಗಳು ಷಟ್ಕೋನದ ರೀತಿಯಲ್ಲಿ ಜೋಡಣೆಗೊಂಡು $sp^2$ ಸಂಕರ ಬಂಧಕ್ಕೆ (ಹೈಬ್ರಿಡೈಸ್ಡ್ ಬಾಂಡ್) ಒಳಪಟ್ಟಿರುವುದು*

ಗ್ರಾಫೀನ್ ಕಾರ್ಬನ್ ಧಾತುವಿನ ಹೊಸ ಬಹುರೂಪಿಯಾದರೂ ಅದರ ಎಲ್ಲ ಬಗೆಯ ಇನ್ನಿತರ ಬಹುರೂಪಿಗಳಿಗೆ ಮಾತೃಸ್ವರೂಪಿಯಾಗಿದೆ. ಅದರ

ಒಂದು ಪದರವನ್ನು ಗೋಲಾಕಾರವಾಗಿ ಮಡಚಿದಾಗ ಸೊನ್ನೆ ಆಯಾಮದ ಫುಲರಿನ್ ಚೆಂಡು, ಕೊಳವೆಯಂತೆ ಸುತ್ತಿದಾಗ ಒಂದು ಆಯಾಮದ ನ್ಯಾನೊ ನಳಿಗೆ, ಒಂದರ ಮೇಲೊಂದರಂತೆ ನೂರಾರು ಪದರ ಪೇರಿಸಿದಾಗ ಮೂರು ಆಯಾಮವುಳ್ಳ ಗ್ರಾಫೈಟ್ ದೊರೆಯುತ್ತದೆ. ಗ್ರಾಫೀನ್ ವಿಶಿಷ್ಟ ಬಗೆಯ ಅನೂಹ್ಯ ಸ್ವಭಾವಗಳ ಕಣಜವಾಗಿದೆ. ಸಾಮಾನ್ಯ ತಾಪದಲ್ಲಿ ಕ್ವಾಂಟಮ್ ಹಾಲ್ ಪರಿಣಾಮ (quantum hall effect), ದ್ವಿಧ್ರುವ ವಿದ್ಯುತ್ ಕ್ಷೇತ್ರ ಪರಿಣಾಮ (ambipolar electric field effect), ಖಂಡಾಂತರ ವಿದ್ಯುತ್ಪ್ರವಾಹ (ballistic electron transport), ಬದಲಾಯಿಸಬಹುದಾದ ಪಟ್ಟಂತರ (tunable band gap) ಮತ್ತು ಗರಿಷ್ಠ ಸ್ಥಿತಿಸ್ಥಾಪಕತೆ (high elasticity) – ಇಂಥ ಅಸಾಮಾನ್ಯ ಮತ್ತು ತೀವ್ರ ಆಸಕ್ತಿದಾಯಕ ಗುಣಗಳ ಗ್ರಾಫೀನ್ ವಸ್ತುವಿಜ್ಞಾನಿಗಳ ಬೇಡಿದ ವರ ನೀಡುವ ಕಲ್ಪವೃಕ್ಷವಾಗಿದೆ !

ಅನೇಕ ರೀತಿಯಲ್ಲಿ ಗ್ರಾಫೀನ್ ಉತ್ಪಾದಿಸಬಹುದು. ಯಾಂತ್ರಿಕ ಸುಲಿತ (mechanical exfoliation), ಯಾಂತ್ರಿಕ ಸೀಳುವಿಕೆ (mechanical cleavage), ಶಾಖ ವಿಘಟನೆ (thermal decomposition), ಅನೇಕಭಿತ್ತಿ ಕಾರ್ಬನ್ ನ್ಯಾನೊ ನಳಿಗೆಗಳ ಮಧ್ಯೆ ಲಿಥಿಯಮ್ ಒಳ ನುಸುಳುವಿಕೆ (lithium intercalation), ದ್ರವೋಷ್ಣೀಯ (solvothermal) ಪದ್ಧತಿ – ಹೀಗೆ ಮುಂತಾದ ವಿಧಾನಗಳನ್ನು ಬಳಸಿ ಏಕಪದರಿನ ಗ್ರಾಫೀನ್ ತಯಾರಿಸ ಲಾಗುತ್ತಿದೆ. ಇನ್ನೂ, ಕೆಲ–ಪದರಿನ ಗ್ರಾಫೀನ್‌ಗಳನ್ನು, ಗ್ರಾಫೈಟಿನ ರಾಸಾಯನಿಕ ಸುಲಿತ (chemical exfoliation), ರಾಸಾಯನಿಕ ಬಾಷ್ಪ ಇಡುಕೆ (chemical vapour deposition), ಸೂಕ್ಷ್ಮತರಂಗ ಪ್ಲಾಸ್ಮಾಧಾರಿತ ರಾಸಾಯನಿಕ ಬಾಷ್ಪ ಇಡುಕೆ, ಉತ್ಕೃಷ್ಟ ಬಗೆಯಲಿ ತಯಾರಿಸಿದ ಗ್ರಾಫೈಟಿನ ಸೂಕ್ಷ್ಮ ಸೀಳುವಿಕೆ (HOPG micro cleavage), ಗ್ರಾಫೈಟ್ ಎಲೆಕ್ಟ್ರೋಡ್‌ಗಳ ಛಾಪ ವಿಸರ್ಜನೆ (arc discharge) ಇವಷ್ಟೇ ಅಲ್ಲದೆ, ಮಿದು ರಸಾಯನವಿಜ್ಞಾನ ಪದ್ಧತಿ ಗಳಾದ ಗ್ರಾಫೈಟ್ ಆಕ್ಸೈಡಿಕರಣ, ಶ್ರವಣಾತೀತ ಸುಲಿತ (ultrasonic exfoliation) ಮುಂತಾದ ಬಗೆಗಳಲ್ಲಿ ಸಿದ್ಧಪಡಿಸುತ್ತಿದ್ದಾರೆ. ಇನ್ನೂ ದೊಡ್ಡ ಪ್ರಮಾಣದಲ್ಲಿ ಗ್ರಾಫೀನ್‌ನನ್ನು ಕರ್ಪೂರದ ರಾಸಾಯನಿಕ ಬಾಷ್ಪ ಇಡುಕೆ, ನ್ಯಾನೊ ವಜ್ರದ ಅನ್ನೀಲನ (annealing), ಗ್ರಾಫೈಟಿನ ಉಷ್ಣ ಸುಲಿತ ಇವೇ ಮುಂತಾದ ವಿಧಗಳಲ್ಲಿ ತಯಾರಿಸಬಹುದು. ರಸಾಯನ ವಸ್ತುವಿಜ್ಞಾನ ಕ್ಷೇತ್ರವು ವೈವಿಧ್ಯಮಯ ಮತ್ತು ಅತ್ಯಾಧುನಿಕ ವೈಜ್ಞಾನಿಕ ಪದ್ಧತಿಗಳನ್ನು ಅನುಸರಿಸುತ್ತ ಬಂದಿರುವದರಿಂದಲೇ ಖ್ಯಾತಿಯ ಉತ್ತುಂಗವನ್ನು ತಲುಪಿದೆ. ಇಂಥ ಬೆರಗು ಮತ್ತು ರೋಚಕ ಕ್ಷೇತ್ರದಲ್ಲಿ ಕೆಲಸ ಮಾಡುವುದು ಒಂದು ಅದ್ಭುತ ಅನುಭವವೂ ಹೌದು. ಇಂಥ ಅನುಭವ ಹೊಂದಿರುವ ಕಾರಣದಿಂದಲೊ ಏನೋ ನನ್ನಿಂದ ಈ ಲೇಖನ ಬರೆಯಲು ತುಸು ಸಾಧ್ಯವಾಯಿತು.

ರಾಮನ್ ರೋಹಿತ (Raman spectrum), ಪರಮಾಣು ಬಲ ಸೂಕ್ಷ್ಮದರ್ಶಕ (AFM), ಸಂವಹನ ಎಲೆಕ್ಟ್ರಾನ್ ಸೂಕ್ಷ್ಮದರ್ಶಕ (TEM), ಸ್ಕ್ಯಾನಿಂಗ್ ಟನಲಿಂಗ್ ಸೂಕ್ಷ್ಮದರ್ಶಕ (STM), ಎಕ್ಸ್–ಕಿರಣ ವಿವರ್ತನೆ (XRD), ಅಪಶೋಷಣ ರೋಹಿತ (absorption spectrum), ಉತ್ಸರ್ಜನ ರೋಹಿತ (emission spectrum) ಈ ರೀತಿಯ ಮುಂತಾದ ತಂತ್ರಗಳನ್ನು ಬಳಸಿ ಗ್ರಾಫೀನ್ ಅಸ್ತಿತ್ವವನ್ನು ಕಂಡುಹಿಡಿಯಲಾಗುತ್ತಿದೆ. ಇದರ ವಿಕಿರಣ ಉತ್ಸರ್ಜನೆ, ವಿಕಿರಣ ಅಪಶೋಷಣೆ, ಪಟ್ಟಂತರ (band gap) ಇನ್ನಿತರ ಗುಣಸ್ವಭಾವಗಳನ್ನು ಡೋಪಿಂಗ್ ಮೂಲಕ ಬದಲಾಯಿಸಬಹುದು ಎಂಬ ಗುಟ್ಟನ್ನು ಸಂಶೋಧಕರು ಕ್ರಮೇಣ ಹೊರಹಾಕಿದರು. ಇದರ ಪರಿಣಾಮವಾಗಿ ಈ ಬಗೆಯ ಸಂಶೋಧನೆಯಲ್ಲಿ ಮತ್ತಷ್ಟು ಆಸಕ್ತಿ ಕೆರಳಿಸುವಂತೆ ಮಾಡಿದರು. ವಿದ್ಯುತ್ ರಾಸಾಯನಿಕ (electrochemical) ಡೋಪಿಂಗ್, ಅಣ್ವಿಕ ಆವೇಶ ವರ್ಗಾವಣೆಯ (molecular charge transfer) ಡೋಪಿಂಗ್, ಬೊರಾನ್ ಮತ್ತು ನೈಟ್ರೊಜನ್ ಡೋಪಿಂಗ್ ಪದ್ಧತಿಗಳನ್ನು ಉಪಯೋಗಿಸಿ ಗ್ರಾಫೀನ್ ಪದರವನ್ನು ಪಿ–ತರಹ ಅಥವಾ ಎನ್–ತರಹ ಅರೆವಾಹಕವಾಗಿಸಲಾಗುವುದು. ಗ್ರಾಫೀನ್ ವಸ್ತುವಿನಲ್ಲಿ ನಮಗೆ ಬೇಕಾದ ಪಟ್ಟಂತರವನ್ನು ಸೃಷ್ಟಿಸಬಹು ದಾಗಿದೆ. ಈ ಮೂಲಕ ಅದನ್ನು ವಿವಿಧ ಎಲೆಕ್ಟ್ರಾನಿಕ್ ಉಪಕರಣಗಳ ಅನ್ವಯಿಕೆಗಳ ಸಾಧ್ಯಾಸಾಧ್ಯತೆಗಳನ್ನು ಪರೀಕ್ಷಿಸಲು ಸಹಾಯಕವಾಯಿತು. ಇದಷ್ಟೇ ಅಲ್ಲದೆ, ಗ್ರಾಫೀನ್ ಫಲನಗೊಳಿಸುವ ಕಾರ್ಯದಿಂದ ಶಿಸ್ತುಬದ್ಧ ವೈಜ್ಞಾನಿಕ ಅಧ್ಯಯನಕ್ಕೆ ಹಲವು ಅವಕಾಶಗಳನ್ನು ಕೂಡ ಒದಗಿಸಿಕೊಟ್ಟಿತು.

ಗ್ರಾಫೀನ್ ಕುರಿತಾದ ಸಂಶೋಧನೆಯಲ್ಲಿ ಜಾಗತಿಕ ಮಟ್ಟದಲ್ಲಿ ಚೀನಾ, ಅಮೆರಿಕ, ದಕ್ಷಿಣ ಕೊರಿಯಾ, ಜಪಾನ್, ಜರ್ಮನಿ, ಭಾರತ, ಸಿಂಗಪೂರ್, ಬ್ರಿಟನ್, ಸ್ಪೇನ್ ಮತ್ತು ಫ್ರಾನ್ಸ್ ಮೊದಲ ಹತ್ತು ಸ್ಥಾನ ಪಡೆದು ಮುಂಚೂಣಿ ಯಲ್ಲಿವೆ. ಗ್ರಾಫೀನ್ ಸಂಶೋಧನೆಯಲ್ಲಿ ಭಾರತವು ಟಾಪ್ ಟೆನ್ ದೇಶಗಳಲ್ಲಿ ಸ್ಥಾನ ಪಡೆದಿರುವುದು ಹೆಮ್ಮೆಪಡುವ ಸಂಗತಿಯಲ್ಲವೇ ? ಇಂಥದೊಂದು ಸಾಧನೆಯ ಹಿಂದೆ ನಮ್ಮ ದೇಶದ ವಿಶ್ವವಿಖ್ಯಾತ ವಿಜ್ಞಾನಿ ಭಾರತರತ್ನ ಪ್ರೊ॥ ಸಿ. ಎನ್. ಆರ್. ರಾವ್ ಶ್ರಮ ಈ ಸಂದರ್ಭದಲ್ಲಿ ಉಲ್ಲೇಖನೀಯ. ಕಳೆದೆರಡು ಅವಧಿಯ ಯು.ಪಿ.ಎ. ಸರಕಾರದಲ್ಲಿ, ಪ್ರೊ॥ ರಾವ್ ಪ್ರಧಾನಿ ಮನಮೋಹನ್ ಸಿಂಗ್‌ರ ವೈಜ್ಞಾನಿಕ ಸಲಹೆಗಾರರಾಗಿ ಮತ್ತು ರಾಷ್ಟ್ರೀಯ ನ್ಯಾನೊಮಿಷನ್ ಅಧ್ಯಕ್ಷರಾಗಿ ದೇಶದಲ್ಲಿ ನ್ಯಾನೊವಿಜ್ಞಾನ ಮತ್ತು ತಂತ್ರಜ್ಞಾನಕ್ಕೆ ಪ್ರಥಮ ಆದ್ಯತೆ ನೀಡಿದರು. ಮುಂದುವರಿದ ದೇಶಗಳಿಗಿಂತ ನಾವೇನು ಕಡಿಮೆಯಿಲ್ಲ ಎಂಬ ದಿಟ್ಟ ಉತ್ತರವನ್ನು ಜಗತ್ತಿಗೆ ರವಾನಿಸಿದರು ಕೂಡ !

### ೨೦೧೬ರ ರಸಾಯನವಿಜ್ಞಾನದ ನೊಬೆಲ್ ಪ್ರಶಸ್ತಿಗೆ ಪ್ರೊ ॥ ಸಿ. ಎನ್. ಆರ್. ರಾವ್ ?

ಹೌದು, ೨೦೧೬ರ ರಸಾಯನವಿಜ್ಞಾನದ ನೊಬೆಲ್ ಪ್ರಶಸ್ತಿಗೆ ಭಾರತರತ್ನ ವಿಜ್ಞಾನಿ ಪ್ರೊ ॥ ಸಿ. ಎನ್. ಆರ್. ರಾವ್ ಅವರನ್ನು ಆಯ್ಕೆ ಮಾಡಬೇಕೆಂದು ಜಗತ್ತಿನ ವೃತ್ತಿಪರ ಸಂಶೋಧಕರು ತಮ್ಮ ಮತ ಚಲಾಯಿಸಿದ್ದರು ! ಇದು ಆದದ್ದು ಹೀಗೆ. ವೈಲಿ ಗ್ರೂಪಿನ 'ಕೆಮಿಸ್ಟ್ರಿ ವೀವ್ಸ್', ಜರ್ಮನಿ ಮೂಲದ ಅಂತರರಾಷ್ಟ್ರೀಯ ವಿಜ್ಞಾನ ಪತ್ರಿಕೆ ಒಂದು ಸರ್ವೆ ನಡೆಸಿತ್ತು. ನೊಬೆಲ್ ಪ್ರಶಸ್ತಿ ಘೋಷಿಸುವ ಎರಡು ದಿನ ಮೊದಲು ಅಂದರೆ, ಡಿಸೆಂಬರ್ ೪, ೨೦೧೬ರಂದು ಈ ಪತ್ರಿಕೆಯು ಆಶ್ಚರ್ಯಕರ ಮಾಹಿತಿಯನ್ನು ಹೊರಹಾಕಿತ್ತು. ಪತ್ರಿಕೆಯು ಈ ಮುಂಚೆ ತನ್ನ ಓದುಗರು ಮತ್ತು ಜಗತ್ತಿನ ವಿವಿಧ ಭಾಗಗಳ ಸಂಶೋಧನಾನಿರತ ವಿಜ್ಞಾನಿಗಳನ್ನು ತಮ್ಮ ಅಚ್ಚುಮೆಚ್ಚಿನ ೨೦೧೬ರ ರಸಾಯನ ವಿಜ್ಞಾನದ ಸಂಭವನೀಯ ನೊಬೆಲ್ ಪುರಸ್ಕೃತರು ಯಾರಿರಬಹುದು / ಯಾರಿರಬೇಕು ತಿಳಿಸಿರೆಂದು ಮನವಿ ಮಾಡಿತ್ತು. ಇದಕ್ಕೆ ಸ್ಪಂದಿಸಿದ್ದ ರಸಾಯನವಿಜ್ಞಾನದ ಅಭಿಮಾನಿಗಳು, ಭಾರತೀಯ ವಿಜ್ಞಾನಿ ಪ್ರೊ ॥ ಸಿ. ಎನ್. ಆರ್. ರಾವ್ ಅವರಿಗೆ ಗರಿಷ್ಠ ಮತಗಳನ್ನು ನೀಡಿ ಸಂತಸದ ಅಲೆಯನ್ನೇ ಹುಟ್ಟುಹಾಕಿದ್ದರು. ಈ ಪಟ್ಟಿಯಲ್ಲಿ ಪ್ರೊ॥ ರಾವ್ ಗರಿಷ್ಠ ೧೩ ಅಂಕಗಳನ್ನು ಪಡೆದು ಪ್ರಥಮ ಸ್ಥಾನದಲ್ಲಿದ್ದರೆ, ಜೆನ್ನಿಫರ್ ದೌಡ್ನ, ರುಯಿ ರೈಯೊಂಗ್, ಸ್ಟೌರ್ಟ್ ಶ್ರೈಬರ್ ೬ ಅಂಕ ಗಳಿಸಿ ಎರಡನೇ ಸ್ಥಾನದಲ್ಲಿದ್ದರು. ಇನ್ನೂ, ೨೦೧೬ರ ರಸಾಯನವಿಜ್ಞಾನ ನೊಬೆಲ್ ಪ್ರಶಸ್ತಿಗೆ ಭಾಜನರಾಗಿರುವ ಫ್ರೇಸರ್ ಸ್ಟೊಡಾರ್ಟ್, ಜೀನ್ ಪಿಯರ್ ಸುವಾಜ್ ಕ್ರಮವಾಗಿ ೧ ಮತ್ತು ೨ ಅಂಕ ಗಳಿಸಿದರೆ, ಬೆನ್ ಫೆರಿಂಗಾ ಅವರು ಸ್ಪರ್ಧೆಯಲ್ಲೇ ಇರಲಿಲ್ಲ ! ಅದೇನೆ ಇರಲಿ, ಒಟ್ಟಾರೆಯಾಗಿ ಈ ವಿದ್ಯಮಾನವು ಜಾಗತಿಕ ಮಟ್ಟದಲ್ಲಿ ಪ್ರೊ ॥ ರಾವ್ ಗಳಿಸಿರುವ ಪ್ರಶಂಸೆ, ಮಾಡಿರುವ ಸಾಧನೆ ಮತ್ತವರ ವೈಜ್ಞಾನಿಕ ಸಂಶೋಧನೆಗಳಿಗೆ ಹಿಡಿದ ಕೈಗನ್ನಡಿಯಾಗಿದೆ.








***ಪ್ರೊ॥ ಸಿ. ಎನ್. ಆರ್. ರಾವ್ ಅವರ ಗ್ರಾಫೀನ್ ಪುಸ್ತಕ ಮತ್ತವರ ಅನ್ವೇಷಣೆಯ ಬೊರೊ ಕಾರ್ಬೋನೈಟ್ರೈಡ್***

ನ್ಯಾನೊಭೌತವಿಜ್ಞಾನ, ನ್ಯಾನೊರಸಾಯನವಿಜ್ಞಾನ, ನ್ಯಾನೊ ಎಲೆಕ್ಟ್ರಾನಿಕ್ಸ್, ನ್ಯಾನೊಜೈವಿಕತಂತ್ರಜ್ಞಾನ, ನ್ಯಾನೊಮೆಡಿಸಿನ್ ಕ್ಷೇತ್ರಗಳಿಗೆ ಸರಕಾರದಿಂದ ಅಪಾರ ಪ್ರಮಾಣದಲ್ಲಿ ಅನುದಾನ ಸಿಗುವಂಥ ವ್ಯವಸ್ಥೆಯನ್ನು ಹುಟ್ಟುಹಾಕಿದರು. ಈ ಮೂಲಕ ಗ್ರಾಫೀನ್ ಕುರಿತಾದ ಹಲವು ಬಗೆಯ ಸಂಶೋಧನೆಗಳಿಗೂ ಉತ್ತೇಜನ ನೀಡಿದರು.

ಪ್ರೊ॥ ಸಿ. ಎನ್. ಆರ್. ರಾವ್ ಸ್ವತಃ ಗ್ರಾಫೀನ್ ಸಂಶೋಧನೆಯಲ್ಲಿ ತೊಡಗಿಸಿ ಕೊಂಡು ನೂರಾರು ಆಸಕ್ತಿದಾಯಕ ಫಲಿತಾಂಶಗಳನ್ನು ನೀಡಿದ್ದಾರೆ. ಛಾಪ ವಿಸರ್ಜನೆಯ ಮೂಲಕ ಗ್ರಾಫೈಟ್ ಎಲೆಕ್ಟ್ರೋಡ್ ಬಳಸಿ ಗ್ರಾಫೀನ್ ಹೇಗೆ ತಯಾರಿಸ ಬಹುದೆಂದು ಸಂಶೋಧನಾ ಜಗತ್ತಿಗೆ ತಿಳಿಸಿಕೊಟ್ಟಿದ್ದಾರೆ. ಗ್ರಾಫೀನ್ ಮೇಲ್ಮೈ ಮತ್ತು ಅನಿಲ ಅಧಿಶೋಷಣೆ (adsorption), ಗ್ರಾಫೀನ್ ಫಲನೀಕರಣ (functionalization), ವೇಗವರ್ಧಕ ಅಧ್ಯಯನಗಳಿಗಾಗಿ ಲೋಹೀಯ ನ್ಯಾನೊಕಣಗಳಿಂದ ಗ್ರಾಫೀನ್ ಅಲಂಕಾರ, ಗ್ರಾಫೀನ್ ಡೋಪಿಂಗ್, ಅಣ್ವಿಕ ಆವೇಶ ವರ್ಗಾವಣೆ ಹೀಗೆ ವೈವಿಧ್ಯಮಯ ಸಂಶೋಧನೆಗಳನ್ನು ಕೈಗೊಂಡು ಗ್ರಾಫೀನ್ ಕ್ಷೇತ್ರಕ್ಕೆ ವಿಶಿಷ್ಟ ಕೊಡುಗೆ ನೀಡಿದ್ದಾರೆ. ಬೋರಾನ್ ಮತ್ತು ನೈಟ್ರೋಜನ್ ಧಾತುಗಳನ್ನು ಗ್ರಾಫೀನ್‌ಗೆ ಡೋಪ್ ಮಾಡಿ ಹೊಸ ಬಗೆಯ 'ಬೊರೊ ಕಾರ್ಬೋನೈಟ್ರೈಡ್' ಎಂಬ ಆಸಕ್ತಿದಾಯಕ ಮತ್ತು ಹಲವು ವಿಶೇಷ ಗುಣ ಹೊಂದಿರುವ ನ್ಯಾನೊ ವಸ್ತುವನ್ನು ಆವಿಷ್ಕರಿಸಿದ್ದಾರೆ. ಇವಷ್ಟೇ ಅಲ್ಲದೆ, ಗ್ರಾಫೀನ್ ರಚನೆ ಹೋಲುವಂಥ ಗ್ರಾಫೀನ್ ಅನಾಲಾಗ್‌ಗಳಾದ ಮಾಲ್ಬಿಡಿನಮ್ ಡೈಸಲ್ಫೈಡ್, ಟಂಗಸ್ಟನ್ ಡೈಸಲ್ಫೈಡ್, ಟೈಟಾನಿಯಮ್ ಡೈಸಲ್ಫೈಡ್, ಮಾಲ್ಬಿಡಿನಮ್ ಡೈಸೆಲೆನೈಡ್ ಹೀಗೆ ಹತ್ತು ಹಲವು ಬಗೆಯ ಅತ್ಯಾಧುನಿಕ ವೈಜ್ಞಾನಿಕ ಸಂಶೋಧನೆಯಲ್ಲಿ ಸಕ್ರಿಯರಾಗಿದ್ದಾರೆ. ಇಂದಿಗೂ ಅವರ ವೈಜ್ಞಾನಿಕ ಪ್ರಬಂಧಗಳು ಜಾಗತಿಕ ಸಂಶೋಧನಾ ವಲಯದಲ್ಲಿ ದೊಡ್ಡ ಮಟ್ಟದಲ್ಲಿ ಉಲ್ಲೇಖ ಗೊಳ್ಳುತ್ತಿವೆ. ಎಂಬತ್ತೆರಡರ ವಯಸ್ಸಿನಲ್ಲಿಯೂ ಯುವಕರು ನಿಬ್ಬೆರಗಾಗುವ ರೀತಿಯಲ್ಲಿ ಸ್ಫಟಿಕಶುದ್ಧವಾದ ತಮ್ಮ ವೈಜ್ಞಾನಿಕ ಆಲೋಚನೆಗಳನ್ನು ಸಂಶೋಧನೆಯಾಗಿ ಪರಿವರ್ತಿಸುವ ಕಲೆ ಅವರಿಗೆ ಸುಲಲಿತ ಕರಗತವಾಗಿದೆ.

ನಾಗರಿಕತೆಯ ಉದ್ದಕ್ಕೂ ಗಮನಿಸಿದರೆ, ಪದಾರ್ಥಗಳು ಜಗತ್ತನ್ನು ಆಳಿವೆ. ಶಿಲಾಯುಗ, ತಾಮ್ರಯುಗ, ಕಬ್ಬಿಣಯುಗ, ಪ್ಲಾಸ್ಟಿಕ್‌ಯುಗ ಎಂದು ಗುರುತಿ ಸುವಂತೆ, ಮುಂಬರುವ ದಿನಗಳನ್ನು ಗ್ರಾಫೀನ್‌ಯುಗವೆಂದು ಗುರುತಿಸಿದರೂ ಆಶ್ಚರ್ಯಪಡಬೇಕಿಲ್ಲ! ನಿತ್ಯಜೀವನದಲ್ಲಿ ಗ್ರಾಫೀನ್ ಅನ್ವಯಿಕೆಗಳು ಅಪಾರ. ಎಲೆಕ್ಟ್ರಾನಿಕ್ಸ್, ಶಕ್ತಿ, ಜೀವವೈದ್ಯಕೀಯ, ಕಾಂಪೋಸಿಟ್ಸ್ ಮತ್ತು ಸಂವೇದಕ ಹೀಗೆ ಪ್ರತಿ ಕ್ಷೇತ್ರದಲ್ಲಿಯೂ ಗ್ರಾಫೀನ್ ಬಳಕೆಗಳನ್ನು ಅಪೇಕ್ಷಿಸಬಹುದು. ಈಗಾಗಲೇ ಕೆಲ ಕ್ಷೇತ್ರಗಳಲ್ಲಿ ಗ್ರಾಫೀನ್ ಬಳಕೆಗಳನ್ನು ನೋಡಬಹುದು ಕೂಡ! ಕೆಲ ಉದಾಹರಣೆಗಳನ್ನು ಕೊಡುವುದಾದರೆ, ಪ್ಲಾಟಿನಮ್ ಇಲ್ಲದೆ ಹೈಡ್ರೋಜನ್ ಉತ್ಪಾದನೆ, ಹೈಡ್ರೋಜನ್ ಸಂಗ್ರಹಣೆ, ಕೆಲವು ನಿಮಿಷಗಳಲ್ಲಿಯೇ ಮೊಬೈಲ್ ಮತ್ತು ಕಾರ್ ಬ್ಯಾಟರಿಗಳನ್ನು ರೀಚಾರ್ಜ್ ಮಾಡುವುದು, ಕಡಿಮೆ ವೆಚ್ಚದಲ್ಲಿ ಮೊಬೈಲ್ ಪರದೆ ತಯಾರಿಕೆ, ಅತಿ ಹೆಚ್ಚು ಆವೇಶ (ಚಾರ್ಜ್) ಸಂಗ್ರಹಿಸುವ ಅಲ್ಟ್ರಾಕೆಪಾಸಿಟರ್ ಅಭಿವೃದ್ಧಿ, ಕಡಿಮೆ ಖರ್ಚಿನಲ್ಲಿ ಇಂಧನ ಕೋಶಗಳು ಮತ್ತು ಸೌರ ಕೋಶಗಳ ರಚನೆ, ಹಗುರವಾದ ನೈಸರ್ಗಿಕ ಅನಿಲ ಟ್ಯಾಂಕ್ ತಯಾರಿಕೆ, ಅತಿ ಹೆಚ್ಚು ಆವೃತ್ತಿಗಳಲ್ಲಿ ಕಾರ್ಯ ನಿರ್ವಹಿಸುವ ಟ್ರಾನ್ಸಿಸ್ಟರ್, ರೋಗ ಪತ್ತೆಹಚ್ಚುವ ಸಂವೇದಕಗಳ ವಿನ್ಯಾಸ, ಸ್ಫೋಟಕಗಳನ್ನು ಪತ್ತೆಹಚ್ಚುವ ರಾಸಾಯನಿಕ ಸಂವೇದಕಗಳ ತಯಾರಿಕೆ, ಕಡಿಮೆ ವೆಚ್ಚದಲ್ಲಿ ಉಪ್ಪು ನೀರನ್ನು ಶುದ್ಧ ನೀರಾಗಿಸುವುದು, ನೀರು ಶುದ್ಧೀಕರಣ, ವಿಶಿಷ್ಟ ಬಗೆಯ ಗ್ರಾಫೀನ್ ಮಿಶ್ರಿತ ಪೇಂಟ್ ಬಳಸಿ ಹಡಗು ಮತ್ತಿತರ ವಾಹನಗಳು ತುಕ್ಕು ಹಿಡಿಯುವುದನ್ನು ತಡೆಯುವುದು, ಜಗತ್ತಿನ ಅತಿ ಚಿಕ್ಕ ಟ್ರಾನ್ಸಿಸ್ಟರ್‌ಗಳ ತಯಾರಿಕೆ ಹೀಗೆ ಹೇರಳವಾಗಿ ವೈವಿಧ್ಯಮಯ ಉಪಯೋಗಗಳನ್ನು ಗ್ರಾಫೀನ್ ಒದಗಿಸುತ್ತಿದೆ.

ಜಾಗತಿಕವಾಗಿ ಮಾನವನ ಜನಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದೆ. ಭೂಮಿಯ ಮೇಲಿನ ಪ್ರಾಕೃತಿಕ ಸಂಪತ್ತುಗಳು ದಿನೇದಿನೇ ಬರಿದಾಗುತ್ತಾ ಸಾಗುತ್ತಿವೆ, ಕಾಡುಗಳ ಪ್ರಮಾಣ ಗಣನೀಯವಾಗಿ ಕುಸಿಯುತ್ತಿವೆ, ಬೆಲೆ ಏರಿಕೆ ಮತ್ತು ಹಣದುಬ್ಬರದಿಂದ ಬಡವ ಮತ್ತು ಮಧ್ಯಮ ವರ್ಗದವರ ಬದುಕು ದುಸ್ತರ ವಾಗುತ್ತಿದೆ. ಇಂಥ ವಿಷಮ ಸಂದರ್ಭದಲ್ಲಿ ಕಡಿಮೆ ಖರ್ಚಿನಲ್ಲಿ ನಿತ್ಯಜೀವನದ ಪರಿಕರಗಳು ಮಾರುಕಟ್ಟೆಯಲ್ಲಿ ಲಭ್ಯವಾದರೆ ಅದಕ್ಕಿಂತ ಖುಷಿಯ ವಿಚಾರ ಮತ್ತೇನಿದೆ ಹೇಳಿ? ಈ ನಿಟ್ಟಿನಲ್ಲಿ ಗ್ರಾಫೀನ್ ಒಂದು ಅದ್ಭುತ ನ್ಯಾನೊ ಪದಾರ್ಥವಾಗಿ, ಮನುಷ್ಯ ಕುಲದ ರೂಪಕವಾಗಿ ನಮ್ಮ ಬವಣೆಗಳನ್ನು ಸ್ವಲ್ಪವಾದರೂ ತೀರಿಸಬಹುದೆಂಬ ಸದಾಶಯ ನನ್ನದು.

**ಎಸ್. ಮಂಜುನಾಥ**
ಅಧ್ಯಕ್ಷರು, ಮೇಡಂಕ್ಯೂರಿ ವಿಜ್ಞಾನ ಅಕಾಡೆಮಿ
ನಂ. ೬೩, ವಾರ್ಡ್–೧೨, ರೆಡ್ಡಿ ಬೀದಿ, ಬಿ.ಎಂ.ಡಿ. ಶಾಲೆ ಹಿಂಭಾಗ, ಬಳ್ಳಾರಿ – ೫೮೩ ೧೦೧

***ಗ್ರಾಫಿನ್ ಬಳಸಿ ತಯಾರಿಸಬಹುದಾದ ತೆಳು ಮತ್ತು ಬಾಗುವ ಮೊಬೈಲ್, ಬಾಗುವ ಪಾರದರ್ಶಕ ಪರದೆ ಮತ್ತು ಕಣ್ಣಿನಲ್ಲಿ ಜೋಡಿಸಿರುವ ಕೃತಕ ಅಕ್ಷಿಪಟ (ರೆಟಿನ)***









ಒಂದೆಡೆ ಪಾಕಿಸ್ತಾನ, ಇರಾನ್, ಉತ್ತರ ಕೊರಿಯಾದಂಥ ಹೊಣೆರಹಿತ ರಾಷ್ಟ್ರಗಳು ಅಣ್ವಸ್ತ್ರವನ್ನು ಪೇರಿಸಿಕೊಂಡು ಕೂತಿವೆ. ಇತ್ತ ತನ್ನ ಹುಂಬತನದ ಮಾತುಗಳಿಂದಲೇ ರಾಷ್ಟ್ರಪತಿಯ ಪಟ್ಟಕ್ಕೇರಿದ ಡೊನಾಲ್ಡ್ ಟ್ರಂಪ್ ಕೈಗೆ ಪರಮಾಣು ಬಟನ್ ಬಂದಿದೆ. ಇಡೀ ಮನುಕುಲವೇ ಹಿಂದೆಂದೂ ಕಂಡಿರದಷ್ಟು ನಾಜೂಕಾದ ಸ್ಥಿತಿಗೆ ಬಂದಿದೆ. ಒಂದರ್ಧ ಕಿಲೊ ಯುರೇನಿಯಂ, ಒಂದರ್ಧ ಡಝನ್ ಎಡಬಿಡಂಗಿ ನಾಯಕರ ತೂಕ ತಪ್ಪಿದ ಮಾತುಗಳೇ ಸಾಕು ಭೂಮಿಯನ್ನು ಬೂದಿಗುಡ್ಡೆ ಮಾಡಲು.

# ಪರಮಾಣು ಯುದ್ಧವೆಂದರೆ ಭೂಮಿತೂಕದ ಬೂದಿಗುಡ್ಡೆ

**ನಾಗೇಶ ಹೆಗಡೆ**

೨೦೧೫ರ ಡಿಸೆಂಬರ್ ೧೭ರಂದು ಅಮೆರಿಕ ಸರಕಾರ ಭಾರತಕ್ಕೆ ಒಂದು ಎಚ್ಚರಿಕೆ ನೀಡಿತು : 'ಹುಷಾರಾಗಿರಿ, ನಿಮ್ಮಲ್ಲಿ ಪರಮಾಣು ದ್ರವ್ಯಗಳ ಚೌರ್ಯ ಪದೇ ಪದೇ ಆಗುತ್ತಿದೆ' ಎಂದು.

೨೦೧೬ರ ಡಿಸೆಂಬರ್ ೨೨ರಂದು ಪತ್ರಿಕೆಗಳಲ್ಲಿ ಚಿಕ್ಕದಾಗಿ ಬಂದ ವರದಿ ಇದು : ಮುಂಬೈ ಠಾಣೆ ಪೊಲೀಸರು ಕಿಶೋರ್ ಪ್ರಜಾಪತಿ ಮತ್ತು ಸಯೀಫುಲ್ಲಾ ಖಾನ್ ಎಂಬಿಬ್ಬರನ್ನು ಹಿಡಿದು ಅವರಲ್ಲಿದ್ದ ೯ ಕಿಲೊ ಯುರೇನಿಯಂ ಪ್ಯಾಕೆಟ್ಟನ್ನು ವಶಪಡಿಸಿಕೊಂಡಿದ್ದಾರೆ. ಕಳ್ಳಸಂತೆಯಲ್ಲಿ ಕಿಲೊಕ್ಕೆ ಮೂರು ಕೋಟಿ ಬೆಲೆಯುಳ್ಳ ಈ ಲೋಹವನ್ನು ಮಾರಾಟಮಾಡಲೆಂದು ಗಿರಾಕಿಗಳನ್ನು ಹುಡುಕುತ್ತಿರುವಾಗ ಇವರಿಬ್ಬರು ಸಿಕ್ಕಿಬಿದ್ದಿದ್ದಾರೆ.

ಯುರೇನಿಯಂ ಕಳ್ಳಸಾಗಣೆ ಇಂದು ನಿನ್ನೆಯದಲ್ಲ; ಗೂಗಲ್‌ನಲ್ಲಿ ಶೋಧ ಮಾಡಿದರೆ ಭಾರತದಲ್ಲಿ ಈ ದಂಧೆ ಸಾಕಷ್ಟು ಸಲೀಸಾಗಿ ನಡೆಯುತ್ತಿರುವುದು ಗೊತ್ತಾಗುತ್ತದೆ. ಮಿಝೊರಾಂನಿಂದ ಹಿಡಿದು, ಜಾದೂಗುಡದ ಬೆಟ್ಟಗುಡ್ಡಗಳಲ್ಲಿ ಗಣಿಗಾರಿಕೆ ನಡೆಯುವಲ್ಲೆಲ್ಲ ಕಳ್ಳತನ ನಡೆಯುತ್ತಲೇ ಇದೆ. ತಾರಾಪುರ, ಕೈಗಾ, ಕಲ್ಪಾಕ್ಕಂ ಮುಂತಾದ ಕಡೆ ರಿಯಾಕ್ಟರ್ ಇದ್ದಲ್ಲೂ ಚೌರ್ಯ ನಡೆದಿರಬಹುದು, ಸಿಕ್ಕಿಬಿದ್ದಿದ್ದು ವರದಿಯಾಗಿಲ್ಲ, ಅಷ್ಟೆ.

ಬರೀ ಅರ್ಧ ಕಿಲೊಗ್ರಾಮ್ ಯುರೇನಿಯಂ ಇದ್ದರೆ ಸಾಕು, ಅದನ್ನು ಬಾಂಬ್‌ನಂತೆ ಸಿಡಿಸಬಹುದು. ೧೯೪೫ರಲ್ಲಿ ಹಿರೊಶಿಮಾದಲ್ಲಿ ಬೀಳಿಸಲಾದ ಬಾಂಬ್‌ನಲ್ಲಿ ೬೪ ಕಿಲೊಗ್ರಾಮ್ ಯುರೇನಿಯಂ ಇತ್ತು, ನಿಜ. ಆದರೆ ಅದನ್ನು ಸಿಡಿಸಲು ಬೇಕಾದ ಟ್ರಿಗರ್‌ನಲ್ಲಿ ಕೇವಲ ಅರ್ಧ ಕಿಲೊ ಇತ್ತು. ಅಂಥ ಟ್ರಿಗರ್ ಸಿಡಿದಾಗ ಅದರ ಒತ್ತಡ ಮತ್ತು ಶಾಖಕ್ಕೆ ಪಕ್ಕದಲ್ಲಿದ್ದ ದೊಡ್ಡ ಮೊತ್ತದ ಯುರೇನಿಯಂ ಕೂಡ ಸಿಡಿದು ದೊಡ್ಡ ಪ್ರಮಾಣದ ಪ್ರಳಯವನ್ನು ಉಂಟುಮಾಡುತ್ತದೆ. ಹಿರೊಶಿಮಾದಲ್ಲಿ ನೆಲಕ್ಕೆ ತಲುಪುವ ಮುನ್ನ ಗಾಳಿಯಲ್ಲೇ ಬಾಂಬ್ ಸಿಡಿದಿದ್ದರಿಂದ ಹೆಚ್ಚೆಂದರೆ ಒಂದು ಕಿಲೊ ಯುರೇನಿಯಂ ಕಣಗಳು ನಗರದ ಮೇಲೆ ನೇರವಾಗಿ ಸುರಿದವು. ಇನ್ನುಳಿದ ಶೇ. ೯೯ ಭಾಗ ಗಾಳಿಯಲ್ಲಿ ಚದುರಿ, ಸುತ್ತು, ನಂತರ ಕರೀ ಮಳೆಯ ರೂಪದಲ್ಲಿ ಸಮುದ್ರಕ್ಕೆ, ನೆಲಕ್ಕೆ ನಿಧಾನಕ್ಕೆ ಸುರಿಯಿತು.

ಆ ಒಂದೂವರೆ ಕಿಲೊ ಯುರೇನಿಯಂ ಎಷ್ಟೆಲ್ಲ ಅನಾಹುತ ಮಾಡಿದೆ ಎಂಬುದು ನಮಗೆ ಗೊತ್ತೇ ಇದೆ. ಹಿರೊಶಿಮಾ ಮೇಲೆ ಯುರೇನಿಯಂ ಬಾಂಬ್ ಬಿದ್ದಾಗ ೧೨೦ ಸಾವಿರ ಜನರು ಪ್ರಾಣ ಕಳೆದುಕೊಂಡರು. ಮರುದಿನ ಅದೇ ಜಪಾನಿನ ನಾಗಾಸಾಕಿ ಪಟ್ಟಣದ ಮೇಲೆ ಪ್ಲುಟೊನಿಯಂ ಬಾಂಬ್ ಬಿದ್ದಾಗ ೮೦ ಸಾವಿರ ಜನರು ಆಹುತಿಯಾದರು. ಆಸ್ತಿಪಾಸ್ತಿ ನಷ್ಟ ಬೇರೆ. ಬದುಕುಳಿದವರ ಆರೋಗ್ಯ ನಷ್ಟ, ಸಂತಾನ ನಷ್ಟ ಬೇರೆ.

ಪರಮಾಣು ಬಾಂಬ್ ಸಿಡಿದಾಗ ಮೂರು ಬಗೆಯ ಅಲೆಗಳ ಮೂಲಕ ದುರಂತ ಸಂಭವಿಸುತ್ತದೆ. ಮೊದಲನೆಯದು, ಕೇವಲ ಆಘಾತದ ಅಲೆ. ಹಠಾತ್ ಚಂಡಮಾರುತ ಬೀಸಿದ ಹಾಗೆ ನಿಂತವರು, ನಿಂತಲ್ಲೇ ಕುಂತವರು ಕುಂತಲ್ಲೇ ಸಿಡಿದು ದೂರ ಹಾರಿ ಬೀಳುತ್ತೇವೆ. ಗೋಡೆಗೆ ಬಡಿಯಬಹುದು ಇಲ್ಲವೆ ಹಳ್ಳಕ್ಕೆ ಬೀಳಬಹುದು. ಬಸ್‌ನಲ್ಲಿ ಕೂತಿದ್ದರೆ ಇಡೀ ಬಸ್ ಮಗುಚಿಕೊಳ್ಳುತ್ತದೆ. ಸಿಡಿಲ ಕಂಬಗಳು, ಕಟ್ಟಡಗಳು, ಗಿಡಮರಗಳು ಬುಡ ಕಳಚಿ ಬೀಳುತ್ತವೆ. ಈ ಮೊದಲನೆಯ ಅಲೆಯಲ್ಲೇ ನಗರದ ಬಹುಭಾಗ ಧ್ವಂಸವಾಗುತ್ತದೆ.

**ಕರಾಳ ಜ್ವಾಲೆಯ ಬಿಳಿ ನೆರಳು**

ಆಘಾತದ ಅಲೆ ಅಪ್ಪಳಿಸಿದ ಒಂದರ್ಧ ನಿಮಿಷದಲ್ಲೇ ಬೆಂಕಿಜ್ವಾಲೆಯ ಎರಡನೆಯ ಅಲೆ ಅಪ್ಪಳಿಸುತ್ತದೆ. ಶಾಖ ತುಂಬ ತೀವ್ರವಾಗಿದ್ದು, ಎಲ್ಲ ಬಗೆಯ ದಹನಶೀಲ ವಸ್ತುಗಳೂ ಬೆಂಕಿಗೆ ಆಹುತಿಯಾಗುತ್ತವೆ. ಮೊದಲ ಅಲೆಯಲ್ಲಿ ನೆಗೆದು ಬಿದ್ದವರ ಬಟ್ಟೆಗೆ ಬೆಂಕಿ ಹೊತ್ತಿಕೊಳ್ಳುತ್ತದೆ. ಎಲ್ಲೆಡೆ ಜ್ವಾಲೆ ಹೊತ್ತಿ ಎಲ್ಲೆಡೆ ಅದು ಹಬ್ಬುತ್ತಿರುತ್ತದೆ. ಡಾಂಬರು ರಸ್ತೆಗಳು ಕರಗುತ್ತವೆ. ಸಿಮೆಂಟ್ ಕಾಂಕ್ರೀಟ್ ನೆಲ ಕೂಡ ಕರಕಲು ಆಗುತ್ತದೆ. ಹಿರೊಶಿಮಾ ನಗರದಲ್ಲಿ ಗಟ್ಟಿ ನಿಂತಿದ್ದ ಉಕ್ಕಿನ ಕಂಬಗಳ ಬಿಳೀ ನೆರಳನ್ನು ಅಲ್ಲಿನ ಕರಕಲು ಕಾಂಕ್ರೀಟ್ ರಸ್ತೆಯಲ್ಲಿ ಗುರುತಿಸಬಹುದು. ಮನುಷ್ಯರ ಹಾಗೂ ಇತರ ಪ್ರಾಣಿಗಳ ಮೈ ಕೈ ಎಲ್ಲ ಬೆಂದಿರುತ್ತದೆ. ಮುಖ ಏಕೆ ಉರಿಯುತ್ತಿದೆ ಎಂದು ಕೈಯಿಂದ ಹೀಗೆ ಮುಖವನ್ನು ಒರೆಸಿಕೊಂಡರೆ ಇಡೀ ಚರ್ಮವೇ ಕಿತ್ತುಬರುತ್ತದೆ.

ಮೂರನೆಯದು, ವಿಕಿರಣ ಅಲೆ. ಅದೂ ಜ್ವಾಲೆಯೊಂದಿಗೇ ಬಂದಿರುತ್ತದೆ; ಆ ಕ್ಷಣದಲ್ಲಿ ಗೊತ್ತಾಗುವುದಿಲ್ಲ. ಮನೆಯೊಳಗೇ ಕೂತಿದ್ದು ಅಥವಾ ನಗರದ ಉದ್ಯಾನದಲ್ಲೆಲ್ಲೋ ಜಾಗಿಂಗ್ ಮಾಡುತ್ತಿದ್ದು ಮೊದಲ ಎರಡು ಆಘಾತಗಳಿಗೆ ತುತ್ತಾಗದೆ ಉಳಿದವರಿಗೆ ಈ ಮೂರನೆಯ ಅಲೆ ತಟ್ಟುತ್ತದೆ. ಅದು ಗೋಡೆಯ ಮೂಲಕವೂ, ಗಿಡಮರಗಳ ಮೂಲಕವೂ ಹಾದುಬರುವ ಗ್ಯಾಮಾ ಕಿರಣ. ಅದು ಶರೀರದ ಒಳಕ್ಕೆ ಹೊಕ್ಕು ಅಂಗಾಂಗಗಳಲ್ಲಿ ತೂರಿಕೊಳ್ಳುತ್ತದೆ. ವಯಸ್ಕರ ಅಂಡಾಣು, ವೀರ್ಯಾಣುಗಳೂ ಘಾಸಿಗೊಳ್ಳುತ್ತವೆ. ಒಂದೆರಡು ದಿನಗಳ ನಂತರ ರಕ್ತಭೇದಿ, ವಾಂತಿ, ತಲೆಶೂಲೆಯ ಮೂಲಕ ವಿಭಿನ್ನ ಕಾಯಿಲೆಗಳು ಗೋಚರಿಸುತ್ತವೆ. ಕೂದಲು ಉದುರತೊಡಗುತ್ತವೆ. ಗರ್ಭಿಣಿಯರಿಗೆ ಬಸುರು ಇಳಿಯುತ್ತದೆ. ಈ ಮೂರನೆಯ ಆಘಾತದಿಂದ ಬದುಕಿ ಉಳಿದರೂ ಮುಂದೆ ಹುಟ್ಟುವ ಮಕ್ಕಳಲ್ಲಿ ನ್ಯೂನತೆ ಕಂಡುಬರುತ್ತದೆ.




ಹಿರೋಶಿಮಾ, ನಾಗಾಸಾಕಿಯ ನಂತರದ ಈ ೭೦ ವರ್ಷಗಳಲ್ಲಿ ಬೇರೆಡೆ ಎಲ್ಲೂ ಮನುಷ್ಯರ ಮೇಲೆ ಬಾಂಬ್ ದಾಳಿ ನಡೆದಿಲ್ಲ. ಅಣುಬಾಂಬ್‌ಗಳೆಲ್ಲ ಮುಗಿದ ಇತಿಹಾಸ ಎಂದು ನಾವು ಭಾವಿಸಿದ್ದೇವೆ. ಪ್ರಪಂಚ ಈಗೇನೋ ಶೀತಲ ಸಮರದ ಯುಗವನ್ನು ದಾಟಿ ಬಂದಿದೆ, ನಿಜ. ಅಮೆರಿಕದ ಬಣ ಮತ್ತು ಸೋವಿಯತ್ ಬಣ ಎಂಬುದು ಇಲ್ಲ. ಆದರೆ ಇವುಗಳ ಪರೋಕ್ಷ ಕುಮ್ಮಕ್ಕಿನಿಂದಾಗಿ ಭೂಮಿಯ ಒಂದಲ್ಲ ಒಂದು ಕಡೆ ಪ್ರತಿದಿನವೂ ದಾಳಿ-ಮರುದಾಳಿ, ಸ್ಫೋಟ, ವಿಧ್ವಂಸಕ ಕೃತ್ಯಗಳು ನಡೆಯುತ್ತಲೇ ಇವೆ. ಇಡೀ ಮನುಕುಲವೇ ಒಂದು ಮಹಾ ಸರಣಿಸ್ಫೋಟಕ್ಕಾಗಿ ತಾಲೀಮು ನಡೆಸುತ್ತಿರುವಂತೆ ಭಾಸವಾಗುತ್ತಿದೆ. ಹಿರೊಶಿಮಾ ದಾಳಿ ನಡೆದಾಗ ಅಮೆರಿಕದ ಬಳಿ ಮಾತ್ರ ಅಣುಬಾಂಬ್‌ಗಳು ಇದ್ದವು. ಈಗ ಪ್ರಪಂಚದ ೨೬ ದೇಶಗಳಲ್ಲಿ ಬಾಂಬ್‌ಗಳಿವೆ. ಹಿರೊಶಿಮಾ ಬಾಂಬ್‌ಗಿಂತ ನೂರು ಪಟ್ಟು, ಸಾವಿರ ಪಟ್ಟು ಸಾಮರ್ಥ್ಯದ ಅಣುಬಾಂಬ್‌ಗಳು ಸ್ಫೋಟಕ್ಕೆ ಸಿದ್ಧವಾಗಿ ನೆಲದೊಳಗಿನ ಗೂಡುಗಳಲ್ಲಿ, ಸಮುದ್ರದಾಳದ ಜಲಾಂತರ್ಗಾಮಿ ನೌಕೆಗಳಲ್ಲಿ, ನೆಗೆಯಲು ಸಜ್ಜಾಗಿರುವ ವಿಮಾನಗಳಲ್ಲಿ ಕೂತಿವೆ. ಬಟನ್ ಒತ್ತಿದರೆ ಬಾಹ್ಯಾಕಾಶಕ್ಕೂ ಚಿಮ್ಮಿ ಹೋಗಿ ಮತ್ತೆ ನಿಗದಿತ ಸ್ಥಳಕ್ಕೆ ಬಂದು ಬೀಳಬಲ್ಲ ಬಾಂಬ್‌ಗಳು ರಾಕೆಟ್‌ಗಳಲ್ಲಿ ಕೂತಿವೆ.

ಈಗ ಈ ಭೂಮಿಯ ಮೇಲಿರುವ ಒಟ್ಟೂ ಅಣುಬಾಂಬ್‌ಗಳ ಸಂಖ್ಯೆ ಎಷ್ಟಿವೆ ಗೊತ್ತೆ? ೨೩,೮೦೦. ಅಕಸ್ಮಾತ್ ಪರಮಾಣು ದಾಳಿಯ ಯುದ್ಧ ಸಂಭವಿಸಿದರೆ ಎಲ್ಲೋ ದೂರದಲ್ಲಿ ಸಂಭವಿಸುತದೆ, ಅಲ್ಲಿ ಬೀಳುವ ಬಾಂಬ್‌ನಿಂದಾಗಿ ಎಲ್ಲವೂ ಒಂದೇ ಏಟಿಗೆ ಮುಗಿದುಹೋಗುತ್ತದೆ ಎಂದು ನಾವು ಭಾವಿಸುತ್ತೇವೆ. ಅವೆರಡೂ ತಪ್ಪು ಭಾವನೆಗಳು. ಭೂಮಿಯ ಯಾವ ಭಾಗವೂ ಸುರಕ್ಷಿತ ಅಲ್ಲವೇ ಅಲ್ಲ. ಬಾಂಬ್ ಬಿದ್ದಲ್ಲಿ ಎಲ್ಲವೂ ಒಂದೇ ಏಟಿಗೆ ಮುಗಿದುಹೋಗುವುದಿಲ್ಲ. ಬಹಳಷ್ಟು ಜನರು ತಕ್ಷಣ ಸಾಯುವುದಿಲ್ಲ. ಎಪ್ಪತ್ತು ವರ್ಷಗಳ ಹಿಂದಿನ ಹಿರೊಶಿಮಾ ನಗರಕ್ಕೆ ಹೋಲಿಸಿದರೆ ಈಗೇನೋ ಸುಭದ್ರ ಕಾಂಕ್ರೀಟ್ ಕಟ್ಟಡಗಳನ್ನು, ಸೇತುವೆ-ಸುರಂಗಗಳನ್ನು ನಿರ್ಮಿಸಿಕೊಂಡಿದ್ದೇವೆ, ನಿಜ. ಹಾಗಾಗಿ ಕಟ್ಟಡಗಳ ಕುಸಿತದಿಂದ ಸಾಯುವವರ ಅನುಪಾತ ಕಡಿಮೆ ಇರಬಹುದು. ಆದರೆ ಈ ಅರ್ಧ ಶತಮಾನದಲ್ಲಿ ನಮ್ಮ ಎಲ್ಲ ನಗರಗಳಲ್ಲಿ ಹಿಂದಿಗಿಂತ ಸಾವಿರಾರು ಪಟ್ಟು ಅಪಾಯದ ಸೌಲಭ್ಯಗಳನ್ನು ಸೃಷ್ಟಿ ಮಾಡಿಕೊಂಡು ನಮ್ಮ ಸುತ್ತ ಹರಡಿಕೊಂಡಿದ್ದೇವೆ. ಸ್ಫೋಟಕಗಳಾಗಬಲ್ಲ ಪೆಟ್ರೋಲ್ ಬಂಕ್‌ಗಳು, ಲಕ್ಷೋಪಲಕ್ಷ ವಾಹನಗಳು, ಹೊಗೆ ಹೊಮ್ಮಿಸಬಲ್ಲ ನೈಲಾನ್, ಪ್ಲಾಸ್ಟಿಕ್, ಸ್ಟೈರೋಫೋಮ್ ಸಾಮಗ್ರಿಗಳು, ಅನಿಲ ತುಂಬಿದ ಸಿಲಿಂಡರ್‌ಗಳು - ಈ ಎಲ್ಲವೂ ಬದುಕುಳಿದ ಎಲ್ಲರನ್ನೂ ಅರೆಜೀವ ಮಾಡುತ್ತವೆ. ಸಾವೇ ಮೇಲು ಎನ್ನಿಸುವಷ್ಟಾಗುತ್ತದೆ.

**ಯಾರಿದ್ದರೇನು, ಯಾರೂ ಇಲ್ಲದಂತೆ**

ಬಾಂಬ್ ಬಿದ್ದರೆ ಯಾರೂ ಯಾರ ನೆರವಿಗೂ ಬರುವಂತಿಲ್ಲ. ಏಕೆಂದರೆ ರಸ್ತೆ ಸೇತುವೆಗಳು, ವಿದ್ಯುತ್ ತಂತಿಗಳು, ದೀಪದ ಕಂಬಗಳು, ಲಾರಿ, ಬಸ್‌ಗಳು ಎಲ್ಲೆಂದರಲ್ಲಿ ಪಲ್ಟಿ ಹೊಡೆದಿರುವಾಗ, ಅಗ್ನಿಶಾಮಕ ಸಿಬ್ಬಂದಿಯಲ್ಲಿ ಕೆಲವರು ಬದುಕಿದ್ದರೂ ಬೆಂಕಿ ಆರಿಸಬಲ್ಲ ವಾಹನಗಳನ್ನು ಎಲ್ಲಿಗೆ ಹೇಗೆ ಓಡಿಸುತ್ತೀರಿ? ರಸ್ತೆಗಳನ್ನು ತೆರವುಗೊಳಿಸಲು ಕ್ರೇನ್‌ಗಳನ್ನು ಹೇಗೆ ತರುತ್ತೀರಿ? ಆಸ್ಪತ್ರೆಗಳೇ ಕುಸಿದರೆ ಡಾಕ್ಟರ್‌ಗಳಾಗಲೀ ಆಂಬುಲೆನ್ಸ್ ಆಗಲೀ ಸುಸ್ಥಿತಿಯಲ್ಲಿ ಇದ್ದರೂ ಏನು ಪ್ರಯೋಜನ? ತಂತಮ್ಮ ಸುರಕ್ಷೆಯನ್ನೇ ನೋಡಿಕೊಳ್ಳಲಾಗದ ಪೊಲೀಸರು, ಹೋಮ್‌ಗಾರ್ಡ್‌ಗಳು, ನರ್ಸ್‌ಗಳು, ಮಿಲಿಟರಿ ಯೋಧರು ಯಾರ ನೆರವಿಗೆ ಓಡಲು ಸಾಧ್ಯ?

'ದಿ ಡೇ ಆಫ್ಟರ್' ಎಂಬ ಸಿನಿಮಾದಲ್ಲಿ ಅಮೆರಿಕದ ಕನ್ಸಾಸ್ ನಗರ ಹೀಗೆ ಅಣುಬಾಂಬ್ ದಾಳಿಗೆ ತುತ್ತಾಗಿರುವ ಭಯಾನಕ ದೃಶ್ಯಗಳನ್ನು ತೋರಿಸಿದ್ದಾರೆ. ಬದುಕುಳಿದ ಸಾವಿರಾರು ಜನರು ಬಂಕರ್‌ಗಳಿಂದ ವಾರಗಳ ನಂತರ ಹೊರಬಂದರೂ ಎಲ್ಲರೂ ಕಾಯಿಲೆ ಬಿದ್ದು, ಎಲ್ಲರ ಕೂದಲೂ ಕ್ರಮೇಣ ಉದುರುತ್ತ ಹೋಗಿ, ವ್ರಣಗಳಿಂದ ನರಳುವುದು, ಆಹಾರಕ್ಕಾಗಿ ಪರದಾಡುವುದು, ಕೊನೆಗೆ ಯಾರೊಬ್ಬನೂ ಉಳಿಯದೆ ಬರೀ ರೆಕಾರ್ಡಿಂಗ್ ಯಂತ್ರವೊಂದು 'ಯಾರಾದರೂ ಇದ್ದೀರಾ?' ಎಂಬ ಕ್ಷೀಣ ಸ್ವರ ಹೊಮ್ಮಿಸುವುದನ್ನು ತೋರಿಸಿದ್ದಾರೆ.

ಅಣುಬಾಂಬ್ ಬೀಳುವಂಥ ಸಂದರ್ಭಗಳಲ್ಲಿ ನಗರವಾಸಿಗಳಿಗಿಂತ ಹಳ್ಳಿಯವರೇ ಸುರಕ್ಷಿತ ಎಂದು ನಾವು ಅಂದುಕೊಳ್ಳಬಹುದು. ಅದೂ ಕ್ಷಣಿಕ, ಅಷ್ಟೆ. ನಮ್ಮ ನಾಗರಿಕತೆ ಅದೆಷ್ಟು ದೊಡ್ಡ ಪ್ರಮಾಣದಲ್ಲಿ ನಗರಗಳನ್ನು ಅವಲಂಬಿಸಿದೆ ಎಂದರೆ, ನಗರ ಇಲ್ಲವಾದಲ್ಲಿ ಹಳ್ಳಿಗಳ ಬದುಕೇ ಕ್ರಮೇಣ ಶೂನ್ಯವಾಗುತ್ತದೆ. ಪೆಟ್ರೋಲ್, ಡೀಸೆಲ್ ಪೂರೈಕೆ ವಾರಗಟ್ಟಲೆ ಇಲ್ಲವಾದಲ್ಲಿ ಬದುಕನ್ನು ಊಹಿಸಿಕೊಳ್ಳಿ, ಇನ್ನು ಕ್ಷಿಪಣಿ ಅಥವಾ ಯುದ್ಧವಿಮಾನಗಳ ಗುರಿತಪ್ಪಿ ಹಳ್ಳಿಗಳ ಮೇಲೆಯೇ ಬಾಂಬ್ ಬಿದ್ದರೆ? ಸಾವುನೋವಿನ ಸಂಖ್ಯೆ ಕಡಿಮೆ ಇರುತ್ತದೆ, ನಿಜ. ಆದರೆ ಯಾರೂ ಅತ್ತ ತುರ್ತು ನೆರವಿಗೆ ಹೆಲಿಕಾಪ್ಟರ್‌ಗಳಲ್ಲೂ ಹೋಗದ ಹಾಗೆ ಆ ಪ್ರದೇಶ ವಿಕಿರಣ ಮತ್ತು ದಟ್ಟ ಹೊಗೆಯಿಂದ ಕವಿದಿರುತ್ತದೆ. ರಸ್ತೆ, ಸೇತುವೆ, ವಿದ್ಯುತ್ ಕಂಬಗಳ ರಿಪೇರಿಯೂ ಸಾಧ್ಯವಾಗುವುದಿಲ್ಲ. ವಿಕಿರಣ ಪ್ರಮಾಣ ಜಾಸ್ತಿ ಇರುವುದರಿಂದ ವರ್ಷಗಟ್ಟಲೆ ಅತ್ತ ಯಾರೂ (ಲೂಟಿಕೋರರೂ) ಕಾಲಿಡದಂತೆ ದಿಗ್ಬಂಧನ ಹಾಕಬೇಕಾಗುತ್ತದೆ.

ಅರವತ್ತು, ಎಪ್ಪತ್ತರ ದಶಕದಲ್ಲಿ ಪರಮಾಣು ಬಾಂಬ್‌ಗಳನ್ನು ಪೇರಿಸಿಕೊಂಡ ಯೂರೋಪ್, ಅಮೆರಿಕ, ರಷ್ಯಗಳ ಪ್ರತಿ ನಗರದಲ್ಲೂ ಮನೆ ಕಟ್ಟುವಾಗ 'ನೆಲಮನೆ' (ಸೆಲ್ಲರ್) ನಿರ್ಮಾಣ ಮಾಡಿಕೊಳ್ಳುವುದು ಕಡ್ಡಾಯವಾಗಿತ್ತು. ನಗರದ ಅಲ್ಲಲ್ಲಿ ಸಾರ್ವಜನಿಕ ಸ್ಥಳಗಳಲ್ಲಿ ಭೂಗತ ಬಂಕರ್‌ಗಳನ್ನೂ ಕಟ್ಟುವುದು ಸಹಜವಾಗಿತ್ತು. ಯುದ್ಧದ ಸೂಚನೆ ಬಂದಾಗ, ಸಾಧ್ಯವಾದ ಅಗತ್ಯ ವಸ್ತುಗಳನ್ನೆಲ್ಲ ಅಂಥ ನೆಲಮಾಳಿಗೆಯಲ್ಲಿ ಶೇಖರಿಸಿ ಇಟ್ಟುಕೊಳ್ಳಬೇಕಾಗಿತ್ತು. ಎಂಥ ವಿಪರ್ಯಾಸ ನೋಡಿ. ಪರಮಾಣು ಬಾಂಬ್‌ಗಳನ್ನು ಹೊತ್ತಿರುವ ಸಿಡಿತಲೆ ಕ್ಷಿಪಣಿಗಳನ್ನು ಭೂಗತ ಸೈಲೊಗಳಲ್ಲಿ ಅವಿತಿಡುತ್ತಾರೆ. ಅಂಥ ಸೈಲೊ ಮೇಲೆಯೇ ವೈರಿಗಳು ನಿಗಾ ಇಟ್ಟಿರುತ್ತಾರೆ. ಅಲ್ಲಿಯೇ ಬಾಂಬ್‌ದಾಳಿಯ ಸಾಧ್ಯತೆಗಳು ಹೆಚ್ಚಿಗೆ ಇರುತ್ತವೆ. ಹಾಗಾಗಿ ಭೂಗತ ಕ್ಷಿಪಣಿಗಳು ಇರುವಲ್ಲೆಲ್ಲ ನಾಗರಿಕರು ನೆಲಮಾಳಿಗೆ ಕಟ್ಟಿಕೊಳ್ಳಬೇಕು. ಅಲ್ಲಾದರೂ ಬದುಕು ಸುರಕ್ಷಿತವೆ? ಏನಿಲ್ಲ, ಎಷ್ಟು ದಿನ ಅಲ್ಲಿರಲು ಸಾಧ್ಯ? ಅಳುವ ಮಕ್ಕಳನ್ನು, ನರಳುವ ಹಿರಿಯರನ್ನು ಎಷ್ಟು ದಿನ ಸಂಭಾಳಿಸಲು ಸಾಧ್ಯ?

**ಅಣು ಚಳಿಗಾಲ, ಅಡಗಲು ಸ್ಥಳವೆಲ್ಲಿ ?**

ಇಡೀ ಜಗತ್ತೇ ಒಂದು ಹಳ್ಳಿಯಂತಾಗಿದೆ ಎಂಬ ಮಾತನ್ನು ನಾವು ಆಗಾಗ ಕೇಳುತ್ತಿರುತ್ತೇವೆ. ಸಂಪರ್ಕದ ದೃಷ್ಟಿಯಿಂದ, ಪರಸ್ಪರ ಅವಲಂಬನೆಯ ದೃಷ್ಟಿಯಿಂದ ಅದು ನಿಜ. ಅದರ ಇನ್ನೊಂದು ಮುಖ ಏನು ಗೊತ್ತೆ? ಜಗತ್ತಿನ ಯಾವುದೇ ದೇಶದಲ್ಲಿ ದೊಡ್ಡ ಪರಮಾಣು ಯುದ್ಧ ನಡೆದರೆ ಎಲ್ಲ ರಾಷ್ಟ್ರಗಳ ಬಹುತೇಕ ಎಲ್ಲರೂ ನಾಶವಾಗುತ್ತಾರೆ. ತಕ್ಷಣ ಅಲ್ಲ, ಕ್ರಮೇಣ. ಏಕೆಂದರೆ ತಜ್ಞರ ವಿಶ್ಲೇಷಣೆಯ ಪ್ರಕಾರ, ಈಗಿರುವ ಅಣುಬಾಂಬ್‌ಗಳಲ್ಲಿ ಶೇಕಡ ಹತ್ತರಷ್ಟು ಬಾಂಬ್‌ಗಳು ಸಿಡಿದರೂ ಜಗತ್ತಿಗೆಲ್ಲ ದಟ್ಟ ಹೊಗೆ ಮತ್ತು ಕಪ್ಪು ಮಸಿ ನಿಧಾನಕ್ಕೆ ಆವರಿಸುತ್ತದೆ. ಸೂರ್ಯ ಮರೆಯಾಗುತ್ತಾನೆ. ಮೂರು ನಾಲ್ಕು ವರ್ಷಗಳ ಕಾಲ ಹೀಗೆ ಸೂರ್ಯನ ಬಿಸಿಲೇ ಬೀಳದಿದ್ದರೆ ಋತುಗಳೇ ಇಲ್ಲವಾಗುತ್ತವೆ. 'ಅಣು ಚಳಿಗಾಲ' ಬರುತ್ತದೆ.

ಅಣುಯುದ್ಧದಲ್ಲಿ ಭಾಗಿಯೇ ಆಗಿರದ ದೂರದ ಅಲಿಪ್ತ ದೇಶದ ನಾಗರಿಕರೂ ಬದುಕಿ ಉಳಿಯಲು ಹೋರಾಟ ಮಾಡಬೇಕಾಗುತ್ತದೆ. ಅವರಿಗೇನು ವಿಕಿರಣ ತಟ್ಟಿರುವುದಿಲ್ಲ. ರಸ್ತೆ, ಸೇತುವೆ, ಬಹುಮಹಡಿ ಮನೆಗಳೆಲ್ಲ ಸುರಕ್ಷಿತವಾಗಿಯೇ ಇರುತ್ತವೆ. ಒಟ್ಟಿನಮೇಲೆ, ಮೊದಲ ಮೂರು ನಾಲ್ಕು ತಿಂಗಳು ಎಲ್ಲವೂ ಸರಿಯಾಗಿಯೇ ಇರುತ್ತವೆ. ಆದರೆ ಅಣು ಚಳಿಗಾಲ ಅಲ್ಲಿಗೂ ಆವರಿಸುತ್ತದೆ. ದೇಶದ  ಬಲುದೊಡ್ಡ ಭಾಗ ಹಿಮದಿಂದ ತುಂಬಿರುತ್ತದೆ. ಕೆರೆ, ಸರೋವರ, ಜಲಾಶಯಗಳು ಹೆಪ್ಪುಗಟ್ಟುತ್ತವೆ. ಸೂರ್ಯನೇ ಮರೆಯಾದರೆ ಆಹಾರ ಉತ್ಪಾದನೆ ಹೇಗೆ ಸಾಧ್ಯ? ಬೆಳೆ ಬದುಕು, ಹಾಲು, ಹೈನು ಯಾವುದೂ ಇರುವುದಿಲ್ಲ. ಆಗ ನಾಗರಿಕತೆಗೆ ಅವಸಾನ ಕಾಲ ಬರುತ್ತದೆ. ವಾಣಿಜ್ಯ, ವಿಜ್ಞಾನ, ರಾಜಕಾರಣ, ಕಾನೂನು ಯಾವುದೂ ಕೆಲಸಕ್ಕೆ ಬರುವುದಿಲ್ಲ. ಎಲ್ಲರೂ ಹಳ್ಳಿಗಳಿಗೆ ಓಡಬೇಕು. ಅಲ್ಲಿ ಕೆಲವರು ಹೇಗೋ ಅಷ್ಟಿಷ್ಟು ದವಸಧಾನ್ಯ ಬೆಳೆದೊ ಅಥವಾ ಏಡಿ ಮೀನು ತಿಂದೊ ಕೆಲವು ದಿನ ನೂಕಬಹುದೇನೊ. ಆದರೆ ಎಲ್ಲ ಬಗೆಯ ಆಹಾರವಸ್ತುಗಳಿಗೆ ಅಪಾರ ಬೇಡಿಕೆ ಬರುವುದರಿಂದ ಲೂಟಿ, ದರೋಡೆ, ದಂಗೆ ಎಲ್ಲೆಡೆ ಹಾಸುಹೊಕ್ಕಾಗುತ್ತದೆ. ಕೃಷಿಭೂಮಿಯೇ ಯುದ್ಧಭೂಮಿ ಆಗುತ್ತದೆ. ಮಿಲಿಟರಿ ಬಲಪ್ರಯೋಗ ಅನಿವಾರ್ಯವಾಗುತ್ತದೆ. ಆದರೆ ಯಾರಿಗೂ ರಕ್ಷಣೆ ನೀಡುವುದಕ್ಕಲ್ಲ! ಮಿಲಿಟರಿ ತನ್ನ ಅಸ್ತಿತ್ವಕ್ಕಾಗಿ ಹೋರಾಟಕ್ಕೆ ಇಳಿಯುತ್ತದೆ. ಅದಕ್ಕೂ ಊಟ ಬೇಕಲ್ಲ? ಊಟ ಸಿಕ್ಕರೂ ತಾತ್ಕಾಲಿಕವೇ. ಏಕೆಂದರೆ ಸೂರ್ಯನ ಬೆಳಕನ್ನು ಮತ್ತೆ ಭೂಮಿಗೆ ತರಬಲ್ಲ ವಿದ್ಯೆ ಮಿಲಿಟರಿಗೆ ಗೊತ್ತಿಲ್ಲವಲ್ಲ.

ಎಲ್ಲೋ ಹತ್ತಿಪ್ಪತ್ತು ಕಿಲೊಗ್ರಾಮ್ ಯುರೇನಿಯಂ ಕಳ್ಳಸಾಗಣೆ ಆದ ಮಾತ್ರಕ್ಕೆ ಇಷ್ಟುದ್ದದ ಲೇಖನದಲ್ಲಿ ಇಷ್ಟೆಲ್ಲ ಭೀಕರ ಚಿತ್ರಣವನ್ನು ಮುಂದಿಡಬೇಕೆ? ಕಳೆದ ಆರೆಂಟು ತಿಂಗಳುಗಳಲ್ಲಿ ಭಾರತ ಉಪಖಂಡದ ವಿದ್ಯಮಾನಗಳು ಅಂಥ ಸಾಧ್ಯತೆಗಳನ್ನು ಹತ್ತಿರ ಹತ್ತಿರ ತರುತ್ತಿವೆ. ಉಗ್ರರನ್ನು ಮಟ್ಟ ಹಾಕಬೇಕೆಂಬ ಉತ್ಕಟ ಹುರುಪಿನಲ್ಲಿ ಭಾರತ ಕೈಗೊಂಡ ಕ್ರಮಗಳ ಬಗ್ಗೆ ನಮ್ಮ ದೇಶದಲ್ಲಿ ಜಯಘೋಷ ಹೆಚ್ಚುತ್ತಿದ್ದ ಹಾಗೆ ಪಾಕಿಸ್ತಾನದಲ್ಲಿ ಆಕ್ರೋಶ ಹೆಚ್ಚುತ್ತಿದೆ. ಮಾಧ್ಯಮಗಳು ಈ ಮಂದಜ್ವಾಲೆಗೆ ತೈಲ ಸುರಿಯುತ್ತ ಹೋದಂತೆಲ್ಲ ಯುದ್ಧಘೋಷ ಎರಡೂ ಕಡೆ ಮೊಳಗುತ್ತಿದೆ.

**ಸಡಿಲ ನಾಲಗೆಯಿಂದ ಬಿಗಿ ಬಿಕ್ಕಟ್ಟು**

ಎರಡೂ ದೇಶಗಳು ಪರಮಾಣು ಶಸ್ತ್ರಾಸ್ತ್ರಗಳನ್ನು ಇಟ್ಟುಕೊಂಡಿರುವಾಗ ಎರಡೂ ಕಡೆ ಹಿಂದೆಂದಿಗಿಂತ ಜಾಸ್ತಿ ಸಂಯಮ ಬೇಕಾಗುತ್ತದೆ. ಆದರೆ ನಮ್ಮಲ್ಲಿಯೇ ಸಡಿಲ ನಾಲಗೆಯ ಕೆಲವು ತೀವ್ರವಾದಿಗಳು ಮಾಧ್ಯಮಗಳ ಎದುರು ಅಣ್ವಸ್ತ್ರ ಪ್ರಯೋಗದ ಬಗ್ಗೆ ಮನಬಂದಂತೆ ಮಾತಾಡುತ್ತಾರೆ. ಅಣ್ವಸ್ತ್ರವೆಂದರೆ ಅದೇನೊ ಆಟವೆಂಬಂತೆ, ಹಬ್ಬದ ಪಟಾಕಿಯೆಂಬಂತೆ ಅದನ್ನೆತ್ತಿ ಪಾಕಿಸ್ತಾನದ, ಉಗ್ರರ ಶಾಶ್ವತ ದಮನ ಮಾಡಬೇಕೆಂಬ ಶಂಖನಾದದ ಚರ್ಚೆಗಳು ಸಾಮಾಜಿಕ ಮಾಧ್ಯಮಗಳಲ್ಲಿ ನಡೆಯುತ್ತಿವೆ. 'ನಮ್ಮ ಹತ್ತು ಕೋಟಿ ಜನರು ಪಾಕಿಸ್ತಾನದ ಅಣುಬಾಂಬ್‌ಗೆ ತಲೆಯೊಡ್ಡಿದರೆ ನಾವು ಇಡೀ ಪಾಕಿಸ್ತಾನವನ್ನು ಧೂಳೀಪಟ ಮಾಡಬಹುದು' ಎಂಬರ್ಥದ ಸುಬ್ರಹ್ಮಣ್ಯ ಸ್ವಾಮಿಯಂಥವರ ಹೇಳಿಕೆ ಲಂಗುಲಗಾಮಿಲ್ಲದೆ ಹರಿದಾಡುತ್ತದೆ.

ಭಾರತ–ಪಾಕಿಸ್ತಾನಗಳ ನಡುವೆ ಪರಮಾಣು ಯುದ್ಧ ಸಂಭವಿಸೀತೆ? ಭಾರತದ ಮಿಲಿಟರಿಯಂತೂ ತಾನು ಮೊದಲು ಬಟನ್ ಒತ್ತುವುದಿಲ್ಲವೆಂದು ಎಂದೋ ಘೋಷಿಸಿದೆ. ಜಗತ್ತಿನ ಎಲ್ಲ ರಾಷ್ಟ್ರಗಳೂ ಭಾರತದ ಈ ನೀತಿಗೆ 'ಭಲೆ' ಎಂದಿದ್ದವು. ಆದರೆ ಈಚೆಗೆ ರಕ್ಷಣಾ ಸಚಿವ ಮನೋಹರ್ ಪಾರಿಕ್ಕರ್, "ಅಗತ್ಯ ಬಿದ್ದರೆ ನಾವೇ ಮೊದಲು ಪರಮಾಣು ಬಾಂಬ್ ಹಾಕಲು ಹಿಂದೆ ಮುಂದೆ ನೋಡುವುದಿಲ್ಲ" ಎಂದು ಹೇಳಿ ಸಾಕಷ್ಟು ತುಮುಲ ಎಬ್ಬಿಸಿದ್ದಾರೆ. ಅದು ಉದ್ವೇಗದ ಹೇಳಿಕೆ ಎಂತಲೇ ನಂಬೋಣ. ನಾವು ಮೊದಲು ಬಾಂಬ್ ಪ್ರಯೋಗ ಮಾಡುವುದಿಲ್ಲ ಎಂತಲೇ ಅಂದುಕೊಳ್ಳೋಣ (ಪರಮಾಣು ಯುದ್ಧದ ವಿಷಯದಲ್ಲಿ ಇವೆಲ್ಲ ಅರ್ಥಶೂನ್ಯ ವಾದಗಳಾಗುತ್ತವೆ. ಏಕೆಂದರೆ ಯಾರು ಮೊದಲು ಬಾಂಬ್ ಹಾಕಿದರು ಎಂಬುದನ್ನು ಅಂತರರಾಷ್ಟ್ರೀಯ ನ್ಯಾಯಾಲಯಕ್ಕೆ ಹೋಗಿ ಸಮರ್ಥಿಸಿಕೊಳ್ಳುವಷ್ಟು ವ್ಯವಧಾನ ಆಗ ಇರುವುದಿಲ್ಲ).

ಪಾಕಿಸ್ತಾನದ ವಿರುದ್ಧ ಯುದ್ಧ ಸಾರಲೇಬೇಕೆಂದು ನಾಗರಿಕರು ಹಾಗೂ ಮಾಧ್ಯಮಗಳು ಚೀರುತ್ತ ಹೋದರೆ, ಭಾರತ ಸರಕಾರವೂ ಮತ್ತೆ ಸರ್ಜಿಕಲ್ ದಾಳಿ ಮಾಡಲೆಂದು ಪಾಕಿಸ್ತಾನದ ಗಡಿಯೊಳಕ್ಕೆ ಸೈನ್ಯವನ್ನು ನುಗ್ಗಿಸಿದರೆ ಪಾಕಿಸ್ತಾನ ತನ್ನ ಮೊದಲ ಅಣ್ವಸ್ತ್ರ ಪ್ರಯೋಗ ಮಾಡುತ್ತದೆಂದು ಅಲ್ಲಿನ ರಕ್ಷಣಾ ಸಚಿವ ಖ್ವಾಜಾ ಆಸಿಫ್ ಹೇಳಿದ್ದಾರೆ.

ಅಂಥ ಮೊದಲ ಅಸ್ತ್ರವಾಗಿ 'ನಾಸ್ರ್' ಕ್ಷಿಪಣಿ ಅಲ್ಲಿಂದ ಬಂದೀತು. ಅದು ಹೆಚ್ಚೆಂದರೆ ೬೦ ಕಿಲೊಮೀಟರ್ ದೂರ ಬರುತ್ತದೆ. ಅಂದರೆ ಪಾಕಿಸ್ತಾನದ ಕ್ಷಿಪಣಿ ತನ್ನದೇ ಗಡಿಯನ್ನೂ ದಾಟಿ ಬರಲಿಕ್ಕಿಲ್ಲ. ಆದರೂ ತನ್ನದೇ ಭೂಪ್ರದೇಶ ನಾಶವಾದರೂ ಚಿಂತೆಯಿಲ್ಲ, ಅಲ್ಲಿಗೆ ಬಂದ ಭಾರತೀಯ ಸೈನ್ಯವನ್ನು ಹೊಸಕಿಹಾಕಲು ಅದು ಯತ್ನಿಸಬಹುದು.

ಅಥವಾ ಒಂದೊಮ್ಮೆ ಪಾಕಿಸ್ತಾನ ಆಗಲೂ ಸಂಯಮವನ್ನು ಪ್ರದರ್ಶಿಸಿದರೆ, ಅಂದರೆ ಅಣ್ವಸ್ತ್ರ ಪ್ರಯೋಗ ಮಾಡದೇ ಇದ್ದರೂ, ಅಲ್ಲಿನ ಉಗ್ರರು ಕೈಕಟ್ಟಿ ಕೂರಲಿಕ್ಕಿಲ್ಲ. ವರದಿಗಳ ಪ್ರಕಾರ, ಈ ಹಿಂದೆ ನಾಲ್ಕು ಬಾರಿ ಉಗ್ರರು ಪಾಕಿಸ್ತಾನದ್ದೇ ಅಣ್ವಸ್ತ್ರ ತಯಾರಿಕೆಯ ನೆಲೆಗಳ ಮೇಲೆ ದಾಳಿ ಮಾಡಿದ್ದಾರೆ. ಬಾಂಬ್ ತಯಾರಿಕೆಗೆ ಬೇಕಿದ್ದ ದ್ರವ್ಯಗಳನ್ನು ಅವರು ಕದ್ದಿರಬಹುದು, ಬಾಂಬನ್ನೇ ಕದ್ದಿರಬಹುದು ಅಥವಾ ಬಾಂಬನ್ನು ಹೂಡಿಟ್ಟ



ಕ್ಷಿಪಣಿಯನ್ನೇ ಕದ್ದು ಸಾಗಿಸಿರಬಹುದು. ನಮ್ಮಲ್ಲಿರುವಷ್ಟು ಅಚ್ಚುಕಟ್ಟಾದ ಯುದ್ಧವ್ಯವಸ್ಥೆ ಪಾಕಿಸ್ತಾನದಲ್ಲಿಲ್ಲ. ಅಲ್ಲಿ ಸರಕಾರ ಮತ್ತು ಮಿಲಿಟರಿ ನಡುವೆ ಹೊಂದಾಣಿಕೆ ಕಮ್ಮಿ. ಈ ಮಧ್ಯೆ ಉಗ್ರರು ಎಲ್ಲೆಲ್ಲೋ ತೂರಿಕೊಂಡಿದ್ದಾರೆ. ಅವರಿಗೆ ಗಡಿ ಎಂಬುದೇ ಇಲ್ಲ. ವೈರಿಗಳು ಅಲ್ಲೂ ಇದ್ದಾರೆ ಇಲ್ಲೂ ಇದ್ದಾರೆ. ಆಶ್ರಯ ಕೊಡುವವರು ಅಲ್ಲೂ ಇದ್ದಾರೆ, ಇಲ್ಲೂ ಇದ್ದಾರೆ.

**ಯುರೇನಿಯಂ ಕಳ್ಳಸಾಗಣೆ ಮುಂಬೆಳಕಿಗೆ**

ನಮ್ಮಲ್ಲೂ ಆಗೊಮ್ಮೆ ಈಗೊಮ್ಮೆ ಕಳ್ಳಸಾಗಣೆ ಮೂಲಕ ಯುರೇನಿಯಂ ಇಂಧನವನ್ನು ಪೇರಿಸಿಕೊಂಡ ಸುಶಿಕ್ಷಿತ ಉಗ್ರರು ಬಾಂಬ್ ತಯಾರಿಸಲು ಹೋಗಿ ಅದೆಲ್ಲೋ ಢಮ್ ಎಂದರೆ ಅಣ್ವಸ್ತ್ರ ಪ್ರಯೋಗಗಳ ಚಕಮಕಿ ಆರಂಭವಾಗುವ ಸಾಧ್ಯತೆ ಇರುತ್ತದೆ. ಹೀಗಾಗಿ ಎರಡು ದೇಶಗಳ ನಡುವೆ ಚಿಕ್ಕದೊಂದು ಸಂಘರ್ಷವೂ ಅಣ್ವಸ್ತ್ರ ಪ್ರಯೋಗಕ್ಕೆ ಕಾರಣವಾಗಬಹುದು. ಈಗಾಗಲೇ ಮಾತಿನ ಚಕಮಕಿ ಸಾಕಷ್ಟು ನಡೆದಿದೆ. ಪಾಕಿಸ್ತಾನ ಉಗ್ರರನ್ನು ಮಟ್ಟ ಹಾಕದಿದ್ದರೆ ಅಲ್ಲಿಗೆ 'ಸಿಂಧೂ ನದಿಯ ನೀರನ್ನು ನಿಲ್ಲಿಸುವ ಅಥವಾ ನಿಯಂತ್ರಿಸುವ ಬಗ್ಗೆ ಯೋಚಿಸಬೇಕಾದೀತು' ಎಂದು ಇತ್ತ ನಮ್ಮ ಪ್ರಧಾನಿ ನರೇಂದ್ರ ಮೋದಿಯವರು ಹೇಳಿದ್ದಾರೆ. ಹಾಗೇನಾದರೂ ಮಾಡಿದರೆ 'ನಾವೇನೂ ಕೈಕಟ್ಟಿ ಕೂತಿರುವುದಿಲ್ಲ, ನಮ್ಮಲ್ಲಿ ಪರಮಾಣು ಅಸ್ತ್ರ ಇದೆ. ಹುಷಾರ್!' ಎಂದು ಪಾಕಿಸ್ತಾನದ ಮಾಜಿ ಅಧ್ಯಕ್ಷ ಪರ್ವೇಜ್ ಮುಷರ್ರಫ್ ಗುಡುಗಿದ್ದಾರೆ.

ಅಣುಬಾಂಬನ್ನು ಉಗ್ರರು ಸಿಡಿಸಲಿ ಅಥವಾ ಪಾಕಿಸ್ತಾನವೇ ಸಿಡಿಸಲಿ ಆಗ ನಿಜವಾದ ಉತ್ಪಾತ ಆರಂಭವಾಗುತ್ತದೆ. ಭಾರತ ಪ್ರತೀಕಾರ ಭಾವದಿಂದ ತನ್ನ ಅಣ್ವಸ್ತ್ರವನ್ನು ಚಿಮ್ಮಿಸಿದ್ದೇ ಆದರೆ ಪಾಕಿಸ್ತಾನದಿಂದ ಮಧ್ಯದೂರದ ಕ್ಷಿಪಣಿಗಳು ನಮ್ಮತ್ತ ತೂರಿಬರಬಹುದು. ಅದಕ್ಕೆ ಪ್ರತಿಯಾಗಿ ನಾವೂ ಠೇಂಕರಿಸಲೇಬೇಕು.

ಅಮೆರಿಕದ 'ಬುಲ್ಲೆಟಿನ್ ಆಫ್ ಅಟಾಮಿಕ್ ಸೈಂಟಿಸ್ಟ್ಸ್' ಪತ್ರಿಕೆಯ ೨೦೧೫ರ ವರದಿಯ ಪ್ರಕಾರ ಪಾಕಿಸ್ತಾನದ ಬಳಿ ಎಫ್-ಸಿಕ್ಸ್‌ಟೀನ್ ಮತ್ತು ಮಿರಾಜ್ ವಿಮಾನಗಳಲ್ಲಿ ೩೬ ಅಣುಬಾಂಬ್‌ಗಳಿವೆ; ಘಝ್ನವಿ, ಶಹೀನ್, ಘಾವ್ರಿ ಮತ್ತು ನಾಸ್ರ್ ಹೆಸರಿನ ಕ್ಷಿಪಣಿಗಳಲ್ಲಿ ೮೬ ಬಾಂಬ್‌ಗಳಿವೆ. ದೂರಗಾಮಿ ಬಾಬರ್ ಕ್ಷಿಪಣಿಯ ಮೇಲೆ ೮ ಬಾಂಬ್‌ಗಳು ಕೂತಿವೆ. ಬಾಬರ್ ಕ್ಷಿಪಣಿ ೧೩೦೦ ಕಿ.ಮೀ. ದೂರಕ್ಕೂ ಸಾಗಿ ಬರಬಹುದಾಗಿದ್ದು ಲುಧಿಯಾನಾ, ದಿಲ್ಲಿ, ಜಯಪುರ, ಭೋಪಾಲ, ಲಖ್ನೋ ಮತ್ತು ಅಹ್ಮದಾಬಾದ್‌ವರೆಗೆ ಬರಬಹುದು. ಕ್ಷಿಪಣಿಗಳಿಗಿಂತ ಬಾಂಬರ್ ವಿಮಾನಗಳು ಹೆಚ್ಚು ಅಪಾಯಕಾರಿ. ಸಮುದ್ರ ಪಾತಳಿಯಿಂದ ಕೇವಲ ಮೂರಡಿ ಎತ್ತರದಲ್ಲಿ ಹಾರುತ್ತ ರಡಾರ್‌ಗಳ ಕಣ್ತಪ್ಪಿಸಿ ಪಾಕಿಸ್ತಾನದ ಎಫ್-೧೬ ಮುಂಬೈ, ಕಾರವಾರ, ಕೈಗಾ, ಸೀಬರ್ಡ್‌ವರೆಗೂ ಬರಬಹುದು.

ಪಾಕಿಸ್ತಾನಕ್ಕೆ ಹೋಲಿಸಿದರೆ ಭಾರತದ ಅಣ್ವಸ್ತ್ರ ಶೇಖರಣೆ ತೀರ ಹೆಚ್ಚೇನಿಲ್ಲ. ಆದರೆ ಅವನ್ನು ಚಿಮ್ಮಿಸುವ ಸಾಧನಗಳು ಹೆಚ್ಚು ಪ್ರಬಲವಾಗಿವೆ. ಲಭ್ಯವಿರುವ ಮಾಹಿತಿಗಳ ಪ್ರಕಾರ ನಮ್ಮ ವಜ್ರ (ಮಿರಾಜ್) ಮತ್ತು ಶಮ್‌ಶೇರ್ (ಸುಧಾರಿತ ಜಾಗ್ವಾರ್) ವಿಮಾನಗಳಲ್ಲಿ ೪೮ ಅಣುಬಾಂಬ್‌ಗಳಿವೆ; ಪೃಥ್ವಿ ಕ್ಷಿಪಣಿ ಮತ್ತು ಬಹುದೂರಗಾಮಿ ಅಗ್ನಿ ಕ್ಷಿಪಣಿಗಳಲ್ಲಿ ೫೬ ಬಾಂಬ್‌ಗಳಿವೆ; ಹಡಗಿನ ಮೇಲಿನ ಧನುಷ್ ಮತ್ತು ಜಲಾಂತರ್ಗಾಮಿಯ ಸಾಗರಿಕಾ ಕ್ಷಿಪಣಿಗಳಲ್ಲಿ ೧೪ ಅಣುಬಾಂಬ್‌ಗಳಿವೆ. ಭಾರತದ ಒಟ್ಟಾರೆ ಮಿಲಿಟರಿ ತಾಕತ್ತಿಗೆ ಹೋಲಿಸಿದರೆ ಪಾಕಿಸ್ತಾನದ್ದು ತೀರ ದುರ್ಬಲವಾಗಿದ್ದು, ನಾವು ಸಾದಾ ದಾಳಿಯ ಮೂಲಕ ಶೆಲ್‌ಗಳ ಮಳೆಗರೆದರೆ ಅವರು ಸಲೀಸಾಗಿ ಅಣ್ವಸ್ತ್ರವನ್ನೇ ಚಿಮ್ಮಿಸುವ ಸಾಧ್ಯತೆ ಇರುತ್ತದೆ. ಅವರ ನೆಲದಲ್ಲೇ ಅದು ಸ್ಫೋಟಗೊಂಡರೆ ಭಾರತ ಆಗಲೂ ಅಣ್ವಸ್ತ್ರವನ್ನು ಬಳಸದೇ ಇರಬಹುದು. ಆದರೆ ನಮ್ಮ ಆಯಕಟ್ಟಿನ ಸ್ಥಳಗಳ ಮೇಲೆ ದಾಳಿ ನಡೆದರೆ? ಪ್ರತಿದಾಳಿ ಅನಿವಾರ್ಯವಾಗುತ್ತದೆ.

**ಚಲಿಸುವ ನಕ್ಷೆಯಲ್ಲಿ ನಿಶ್ಚಲ ಕಾರ್ಮೋಡ**

ಅಕಸ್ಮಾತ್ ಈ ಚಕಮಕಿಯಲ್ಲಿ ಹಿರೋಶಿಮಾ ಬಾಂಬ್ ಗಾತ್ರದ ಪುಟಾಣಿ ನೂರು ಅಣುಬಾಂಬ್‌ಗಳನ್ನು ಸ್ಫೋಟಿಸಿದರೂ ಸಾಕು, ಇಡೀ ಪ್ರಪಂಚ ತತ್ತರಿಸುತ್ತದೆ. ಕೊಲಂಬಿಯಾದ nucleardarkness.org ಎಂಬ ಜಾಲತಾಣದ ಚಲಿಸುವ ನಕ್ಷೆಯಲ್ಲಿ ಈ ದುರಂತದ ಚಿತ್ರಣವಿದೆ. ಹಾಗೇನಾದರೂ ಆದರೆ ಈ ಉಪಖಂಡದ ಸುಮಾರು ೨೧೦ ಲಕ್ಷ ಜನರು ನೇರವಾಗಿ ಸಾಯುತ್ತಾರೆ. ಎರಡೂ ದೇಶಗಳ ಇನ್ನೂರು ಕೋಟಿ ಜನರಲ್ಲಿ ಎರಡು ಕೋಟಿ ಜನರು ಸತ್ತರೆ ಅದೇನೂ ಮಹಾ ದೊಡ್ಡದಲ್ಲ 'ನಾವು ಭಾರತಮಾತೆಯ ರಕ್ಷಣೆಗಾಗಿ ಅಷ್ಟೂ ಬೆಲೆ ತೆರಲಾರೆವೆ' ಎಂದು ಕೆಲವರು ಈಗಲೂ ಸಾಮಾಜಿಕ ಮಾಧ್ಯಮಗಳಲ್ಲಿ ಹೂಂಕರಿಸುತ್ತಾರೆ.

ಹಿಂದೆ ಹೇಳಿದ್ದನ್ನು ಈಗ ನೆನಪಿಸಿಕೊಳ್ಳಿ. ಕರೀ ಹೊಗೆ ಆಕಾಶಕ್ಕೇರಿ ಪೂರ್ವ-ಪಶ್ಚಿಮಕ್ಕೆ ಪಸರಿಸುತ್ತ ಮೂರು ತಿಂಗಳುಗಳಲ್ಲಿ ಭೂಮಿಗೆ ಕಪ್ಪು ಚಾದರ ಆವರಿಸುತ್ತದೆ. ಭೂಮಿಗೆ ರಕ್ಷಾಕವಚ ಎನಿಸಿರುವ ಓಝೋನ್ ವಲಯ ಚಿಂದಿಯಾಗುತ್ತದೆ. ಮಳೆಮಾರುತಗಳೆಲ್ಲ ನಾಪತ್ತೆಯಾಗಿ, ಕೃಷಿ ಚಟುವಟಿಕೆ ಬಹುಪಾಲು ಸ್ಥಗಿತವಾಗುತ್ತದೆ. ಜಗತ್ತಿನ ಇನ್ನೂರು ಕೋಟಿ ಜನರು ಆಹಾರಕ್ಕಾಗಿ ಪರದಾಡುತ್ತ ಅಲ್ಲಲ್ಲಿ ದಂಗೆಗಳಿಗೆ, ಕಿರುಯುದ್ಧಗಳಿಗೆ ಕಾರಣರಾಗುತ್ತಾರೆ.

'ಜಗತ್ತೇ ಒಂದು ಹಳ್ಳಿಯಂತಾಗಿದೆ' ಎಂಬ ಮಾತು ಹೇಗೂ ಇರಲಿ. ಒಂದೆಡೆ ಪಾಕಿಸ್ತಾನ, ಇರಾನ್, ಉತ್ತರ ಕೊರಿಯಾದಂಥ ಹೊಣೆರಹಿತ ರಾಷ್ಟ್ರಗಳು ಅಣ್ವಸ್ತ್ರವನ್ನು ಪೇರಿಸಿಕೊಂಡು ಕೂತಿವೆ. ಇತ್ತ ತನ್ನ ಹುಂಬತನದ ಮಾತುಗಳಿಂದಲೇ ರಾಷ್ಟ್ರಪತಿಯ ಪಟ್ಟಕ್ಕೇರಿದ ಡೊನಾಲ್ಡ್ ಟ್ರಂಪ್ ಕೈಗೆ ಪರಮಾಣು ಬಟನ್ ಬಂದಿದೆ. ಇಡೀ ಮನುಕುಲವೇ ಹಿಂದೆಂದೂ ಕಂಡಿರದಷ್ಟು ನಾಜೂಕಾದ ಸ್ಥಿತಿಗೆ ಬಂದಿದೆ. ಒಂದರ್ಧ ಕಿಲೊ ಯುರೇನಿಯಂ, ಒಂದರ್ಧ ಡಝನ್ ಹುಂಬ ನಾಯಕರ ತೂಕತಪ್ಪಿದ ಮಾತುಗಳು, ಸಾಮಾಜಿಕ ತಾಣಗಳ ಮೂಲಕ ವೈರಲ್ ಆಗಬಹುದಾದ ಒಂದರ್ಧ ಪುಟದಷ್ಟು ವೀರಾವೇಶದ ಹೇಳಿಕೆಗಳು, ಚಾನೆಲ್‌ಗಳ ಮೈಕ್ ಎದುರು ರಕ್ಷಣಾ ಸಚಿವರ ತೂಕತಪ್ಪಿದ ಒಂದರ್ಧ ವಾಕ್ಯವೂ ಚಕಮಕಿ ಸಿಡಿಸಬಹುದು. ಹಾಗೇನಾದರೂ ಆದರೆ ಒಂದು ಚಿಕ್ಕ ಹಳ್ಳಿಯಲ್ಲೂ ನಾಗರಿಕತೆಯನ್ನು ಮುನ್ನಡೆಸುವ ಪಿಳ್ಳೆಗಳು ಉಳಿಯಲಿಕ್ಕಿಲ್ಲ.

**ನಾಗೇಶ ಹೆಗಡೆ**
ನಂ. ೧೫೯೧, ಆರ್. ಜೆ. ರೆಸಿಡೆನ್ಸಿ, ಸರ್ ಎಂ. ವಿ. ಬಡಾವಣೆ
ನಾಗದೇವನಹಳ್ಳಿ, ಜ್ಞಾನಭಾರತಿ ಅಂಚೆ, ಬೆಂಗಳೂರು – ೫೬೦ ೦೫೬





ಮೂಲ : **ಎಸ್. ಚಟರ್ಜಿ**
ಕನ್ನಡಕ್ಕೆ : **ವಾಣಿ ಚಟರ್ಜಿ**

# ಐದನೆಯ ಶಕ್ತಿ : ಎಲ್ಲಿದೆ ?

# ನಿಗೂಢ ಶಕ್ತಿಯ ಅಸ್ತಿತ್ವಕ್ಕೆ ಉತ್ತರ

### ಹಂಗೆರಿಯ ಎಲೆಕ್ಟ್ರಾನ್ ಪೊಸಿಟ್ರಾನ್ ಸ್ಪೆಕ್ಟ್ರೋಮೀಟರ್ ಇದು ಹೊಸ ಕಣದ ಪುರಾವೆಯನ್ನು ಒದಗಿಸಿದೆ ಎನ್ನಲಾಗಿದೆ

ಆಡುಭಾಷೆಯಲ್ಲಿ ಎನರ್ಜಿ, ಪವರ್, ಫೋರ್ಸ್, ಎಲ್ಲವನ್ನೂ 'ಶಕ್ತಿ' ಎನ್ನುತ್ತೇವೆ. ವಿಜ್ಞಾನಿ ನ್ಯೂಟನ್ ಶಾಸ್ತ್ರೀಯ ಯಂತ್ರಶಾಸ್ತ್ರದ ಮೂಲಗಳನ್ನು ತಿಳಿಸಿಕೊಟ್ಟಮೇಲೆ, ವಿಜ್ಞಾನದಲ್ಲಿ ಈ ಪದಗಳ ಅರ್ಥವೇ ಬೇರೆಯಾಯಿತು. ಯಂತ್ರಶಾಸ್ತ್ರದ ಪ್ರಕಾರ (೧) ತೂಕವಿರುವ ಯಾವುದೇ ವಸ್ತುವಿನ ವೇಗವು ಸಮಯಕ್ಕೆ ಅನುಗುಣವಾಗಿ ಬದಲಾಗುವುದು. ಇದನ್ನು 'ವೇಗವರ್ಧನೆ' ಎನ್ನುತ್ತಾರೆ. (೨) ಫೋರ್ಸ್‌ಗೆ ವಿರುದ್ಧ ದಿಕ್ಕಿನಲ್ಲಿ ಚಲನೆಯಿದ್ದರೆ, ಅದನ್ನು 'ಕಾರ್ಯ' ಎನ್ನುತ್ತಾರೆ. ಉದಾಹರಣೆಗೆ, ನಾವು ಬೆಟ್ಟವನ್ನು ಹತ್ತಬೇಕಾದರೆ, ಗುರುತ್ವಾಕರ್ಷಣೆಗೆ ವಿರುದ್ಧವಾಗಿ ಮುಂದೆ ಚಲಿಸುತ್ತೇವೆ. ಅಂದರೆ 'ಕೆಲಸ' ಮಾಡುತ್ತೇವೆ. ಈ ಶಕ್ತಿಯು ಯಾವಾಗಲೂ ಕೆಳಗಿನ ದಿಕ್ಕಿನಲ್ಲಿ ಇರುತ್ತದೆ. (೩) 'ಕೆಲಸ'ವನ್ನು ಮಾಡಲು ಎನರ್ಜಿ ಖರ್ಚಾಗುತ್ತದೆ ಮತ್ತು ಖರ್ಚಾದ ಈ ಎನರ್ಜಿಯು ಮಾಡಿದ 'ಕೆಲಸ'ಕ್ಕೆ ಸಮಾನವಾಗಿರುತ್ತದೆ. ನಾವು, ಫೋರ್ಸ್‌ನ ದಿಕ್ಕಿಗೆ ವಿರುದ್ಧವಾಗಿ ಚಲಿಸದೆ, ಅದರ ದಿಕ್ಕಿನಲ್ಲಿಯೇ ಚಲಿಸಿದರೆ, 'ಕೆಲಸ' ಮಾಡಬೇಕಾಗಿಲ್ಲ. ಉದಾಹರಣೆ : ನಾವು ಒಂದು ಕಲ್ಲನ್ನು ಬೆಟ್ಟದ ಮೇಲಿಂದ ಕೆಳಕ್ಕೆ ಹಾಕಿದರೆ, ಅದು ಗುರುತ್ವಾಕರ್ಷಣ ಶಕ್ತಿಯ ದಿಕ್ಕಿನಲ್ಲೇ ಚಲಿಸುತ್ತದೆ. ನೆಲವನ್ನು ತಲುಪುವಷ್ಟರಲ್ಲಿ ಅದರ ವೇಗವು ಅತೀ ಹೆಚ್ಚಾಗಿರುತ್ತದೆ. ಕಲ್ಲನ್ನು ಬೆಟ್ಟದ ಮೇಲೆ ತೆಗೆದುಕೊಂಡು ಹೋಗಲು ನಾವು ಮಾಡಿದ 'ಕೆಲಸ'ವೆಲ್ಲವೂ 'ಅಂತಸ್ಥ ಶಕ್ತಿ'ಯಾಗಿ ಇರುತ್ತದೆ. ಈ ಶಕ್ತಿ ಎಲ್ಲವೂ "ಚಲನ ಶಕ್ತಿ" ಆಗುತ್ತದೆ. ಇದರಿಂದ ಕಲ್ಲಿನ ವೇಗವು ಹೆಚ್ಚಾಗುತ್ತದೆ.

**ಈ**ಗೊಂದು ಪ್ರಶ್ನೆ. ನಾವು ಸೈಕಲ್ಲು ಪೆಡಲುಗಳನ್ನು ತುಳಿದರೆ ಅದು ಮುಂದೆ ಹೋಗುತ್ತದೆ. ಆದರೆ, ಕಾರಿನಲ್ಲಿ ಇದೇನನ್ನು ಮಾಡದಿದ್ದರೂ ಅದು ಚಲಿಸುತ್ತದೆ. ಈ ಶಕ್ತಿ ಎಲ್ಲಿಂದ ಬಂತು ? ಇದರ ಉತ್ತರವನ್ನು ಇಂಜಿನಿಯರುಗಳು ಮತ್ತು ರಾಸಾಯನಿಕ ವಿಜ್ಞಾನಿಗಳು ಕಳೆದ ಶತಮಾನದಲ್ಲಿಯೇ ಕೊಟ್ಟಿರುತ್ತಾರೆ. ವಸ್ತು, ಧಾತು ಅಥವಾ ಸಂಯುಕ್ತ, ರಾಸಾಯನಿಕ ಶಕ್ತಿಯಿಂದ ಕೂಡಿರುತ್ತದೆ. ಈ ಶಕ್ತಿ ಇಂಧನವನ್ನು ಸುಟ್ಟಾಗ ಶಾಖವಾಗಿ ಮಾರ್ಪಡುತ್ತದೆ. ಈ ಶಾಖ ಶಕ್ತಿಯೇ ಇಂಜಿನುಗಳನ್ನು ಮತ್ತು ನಮ್ಮ ಕಾರುಗಳನ್ನು ಚಲಿಸುವಂತೆ ಮಾಡುತ್ತದೆ. ಟರ್ಬೈನುಗಳನ್ನು ಚಲಿಸಿ, ಕೊನೆಗೆ ವಿದ್ಯುತ್ತನ್ನು ತಯಾರಿಸುತ್ತದೆ. ಕಲ್ಲಿದ್ದಲನ್ನು ಸುಟ್ಟಾಗ ಬಂದ ಶಾಖದಿಂದ ಟರ್ಬೈನನ್ನು ಚಲಿಸಿ, ಅದು ದೊಡ್ಡ ಅಯಸ್ಕಾಂತಗಳ ಮಧ್ಯೆ ಇರುವ ವಿದ್ಯುತ್ ಸುರುಳಿಗಳನ್ನು ಚಲಿಸಿ, ಕೊನೆಗೆ ವಿದ್ಯುತ್ ಶಕ್ತಿ ಉತ್ಪಾದನೆ ಆಗುತ್ತದೆ.

ಪ್ರಶ್ನೆಗಳು ಇಲ್ಲಿಗೇ ಮುಗಿಯುವುದಿಲ್ಲ. ಇನ್ನೂರು ವರ್ಷಗಳಿಂದಲೂ ಈ ಪ್ರಶ್ನೆ ಇದೆ. ಶಕ್ತಿಯ ವಿವಿಧ ರೂಪಗಳು ಒಂದಕ್ಕೊಂದು ಬದಲಾಯಿಸಿಕೊಳ್ಳ ಬಲ್ಲವು. ಈ ಶಕ್ತಿಗಳ ಏಕೀಕರಣ ಸಾಧ್ಯವೇ ?

೧೯ನೇ ಶತಮಾನದ ವಿಜ್ಞಾನ ಬೆಳವಣಿಗೆಯನ್ನು ಬೇರೆಯದೇ ವಿಷಯದಲ್ಲಿ ಗಮನಿಸಿದರೆ ಕಂಡುಬರುವುದು ಇದು. ಆ ಕಾಲದಲ್ಲಿ ನಡೆದ ಗಣನೀಯ

ಆವಿಷ್ಕಾರವೆಂದರೆ, ವಿದ್ಯುತ್ತಿಗೂ, ಕಾಂತೀಯತೆಗೂ ಇರುವ ಸಂಪರ್ಕ. ಆಂಪಿಯರ್, ಫ್ಯಾರಡೇ, ಆಯರ್ಸ್ಟೆಡ್ ಮತ್ತು ಹೆನ್ರೀ ಅವರ ಸಂಶೋಧನೆಯಿಂದ ನಮಗೆ ಗೊತ್ತಾಗಿದ್ದು ಇಷ್ಟು: ಚಲಿಸುವ ವಿದ್ಯುತ್ ಕಣಗಳು ಕಾಂತೀಯ ಪರಿಣಾಮಗಳನ್ನೂ, ಚಲಿಸುವ ಮ್ಯಾಗ್ನೆಟ್‌ಗಳು ವಿದ್ಯುತ್ ಶಕ್ತಿಯನ್ನು ಉತ್ಪಾದಿಸುವವೆಂದು. ವಿದ್ಯುತ್ ಮತ್ತು ಕಾಂತೀಯತೆಗೂ ಸಂಪರ್ಕವಿದೆಯೆಂಬುದು ಇದರಿಂದ ಸ್ಪಷ್ಟವಾಯಿತು. ಈ ಚಿತ್ರವನ್ನು ಪೂರ್ಣಗೊಳಿಸಿದ್ದು ಮ್ಯಾಕ್ಸ್‌ವೆಲ್ಲನ ವಿದ್ಯುತ್ಕಾಂತೀಯ ಸಮೀಕರಣಗಳು. ವಿದ್ಯುತ್ ಮತ್ತು ಕಾಂತೀಯತೆ ಜೊತೆಯಲ್ಲಿಯೇ ಇದ್ದು, ಶೂನ್ಯದಲ್ಲಿಯೂ ಚಲಿಸುವ ಸ್ವಭಾವವನ್ನು ಹೊಂದಿರುತ್ತವೆ. ಅವುಗಳ ವೇಗ c = ೩೦೦೦೦೦ ಕಿ.ಮೀ./ಸೆಕೆಂಡ್. ಆದನಂತರ, ಬೆಳಕು ತರಂಗಗಳ ವೇಗವನ್ನು ನಿರ್ಧರಿಸಿದಾಗ, ಅವುಗಳು ಇದೇ 'c' ಪ್ರಮಾಣದಲ್ಲಿ ಚಲಿಸುತ್ತವೆಂಬುದು ಗೊತ್ತಾಯಿತು. ಇದರಿಂದ ಬೆಳಕು ಸಹಿತ ಕಾಂತೀಯತೆಯ ತರಂಗಗಳ ಗುಂಪಿಗೆ ಸೇರಿದೆಯೆಂದು ಗೊತ್ತಾಯಿತು. ಇದಾದನಂತರ, ಇದನ್ನು ಸಮರ್ಥಿಸಿ ಅನೇಕ ಪುರಾವೆಗಳು ಬಂದವು. ಸಾಪೇಕ್ಷತೆ ಸಿದ್ಧಾಂತದ ಪ್ರಕಾರ ಯಾವ ವಸ್ತುವೂ ಈ 'c' ವೇಗಕ್ಕಿಂತ ಹೆಚ್ಚಿನ ವೇಗದಲ್ಲಿ ಚಲಿಸಲು ಸಾಧ್ಯವಿಲ್ಲ.

ಈ ಎಲ್ಲ ಸಂಶೋಧನೆಗಳ ಫಲಿತ, ಫ್ಯಾರಡೇಯ ಆವಿಷ್ಕಾರ 'ಕ್ಷೇತ್ರ' ಪರಿಕಲ್ಪನೆ. ಉದಾಹರಣೆ: ಒಂದು ಮ್ಯಾಗ್ನೆಟನ್ನು ಮೇಜಿನ ಮೇಲಿಟ್ಟು, ಇನ್ನೊಂದು ಮ್ಯಾಗ್ನೆಟನ್ನು ಅದರ ಹತ್ತಿರ ತಂದರೆ, ಒಂದು ಮ್ಯಾಗ್ನೆಟ್‌ನ ಉತ್ತರ ಧ್ರುವವು ಇನ್ನೊಂದರ ದಕ್ಷಿಣ ಧ್ರುವದ ಹತ್ತಿರ ಬರುವುದು. ಫ್ಯಾರಡೇನ ಪ್ರಶ್ನೆ: ಈ ಮ್ಯಾಗ್ನೆಟ್ಟುಗಳು ಪರಸ್ಪರ ಸಂಪರ್ಕದಲ್ಲಿ ಇರದಿದ್ದರೂ ಒಂದರ ಅಸ್ತಿತ್ವದ ಅರಿವು ಇನ್ನೊಂದಕ್ಕೆ ಇರುತ್ತದೆ. ಇದು ಹೇಗೆ ಸಾಧ್ಯ ? ಈ ಪ್ರಶ್ನೆಯ ಉತ್ತರವೇ 'ಕ್ಷೇತ್ರ' ಪರಿಕಲ್ಪನೆ. ಈ ಕ್ಷೇತ್ರವು ಎಲ್ಲ ದಿಕ್ಕಿನಲ್ಲಿಯೂ ಹರಡಿಕೊಂಡಿದ್ದು, ಅದರ ಅಸ್ತಿತ್ವದ ಸೂಚನೆ ತನಿಖಾ ಯಂತ್ರ ಅದರ ಸಮೀಪಕ್ಕೆ ಬಂದಾಗ ಆಗುತ್ತದೆ.

ಈ 'ಕ್ಷೇತ್ರ' ಎನ್ನುವುದು ಸರ್ವವ್ಯಾಪಿ. ಆದರೆ, ಅದನ್ನು 'ನೋಡ'ಬೇಕೆಂದರೆ, ಅಗತ್ಯವಾದ ಯಂತ್ರವು ತನಿಖೆಗೆ ಇರಲೇಬೇಕು. ಯಾವ ತರಹದ ಯಂತ್ರ ಬೇಕೆನ್ನುವುದು, ನಾವು ಎಂತಹ ಕ್ಷೇತ್ರವನ್ನು 'ನೋಡ'ಬಯಸುತ್ತೇವೆಂಬುದರ ಮೇಲೆ ಅವಲಂಬಿತವಾಗಿರುತ್ತದೆ. ಉದಾಹರಣೆಗೆ, ನಾವು ಮ್ಯಾಗ್ನೆಟ್ಟಿನ ಕ್ಷೇತ್ರವನ್ನು 'ನೋಡ'ಬೇಕೆಂದರೆ, ಒಂದು ಮರದ ತುಂಡು ಕೆಲಸಕ್ಕೆ ಬರುವುದಿಲ್ಲ. ಇದನ್ನು 'ನೋಡು'ವುದಕ್ಕೆ, ಬೇರೊಂದು ಮ್ಯಾಗ್ನೆಟ್ ಅಥವಾ ವಿದ್ಯುತ್ ಪ್ರಸರಿಸುವ ತಂತಿಯೇ ಬೇಕು. ಇದೇ ಸೂತ್ರವು ಬೇರೆ ಬೇರೆ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಈ ಕ್ಷೇತ್ರದ 'ಬಲ' ನಾವು ಆ ಮೂಲ ವಸ್ತುವಿನಿಂದ ದೂರ ಹೋದಷ್ಟೂ ಕ್ಷೀಣಿಸುತ್ತದೆ. ಆದರೆ ಎಷ್ಟೇ ದೂರ ಹೋದರೂ ಅದು 'ಸೊನ್ನೆ'ಯಾಗುವುದಿಲ್ಲ. ಇದನ್ನು 'long range forces' ಅಥವಾ 'ದೂರ ವ್ಯಾಪ್ತಿ ಶಕ್ತಿ' ಎನ್ನುತ್ತಾರೆ. ಕಾಂತೀಯ (magnetic) ಮತ್ತು ವಿದ್ಯುತ್ತಿನ ವ್ಯಾಪ್ತಿ ಅನಂತ. ಹಾಗೆಯೇ, ಗುರುತ್ವ ಶಕ್ತಿಯ ವ್ಯಾಪ್ತಿಯೂ ಅನಂತ. ಇಲ್ಲಿ ಒಂದು ಮುಖ್ಯವಾದ ವ್ಯತ್ಯಾಸವಿದೆ. ವಿದ್ಯುತ್‌ನಲ್ಲಿ ಎರಡು ಬಗೆಯ ಕಣಗಳಿವೆ : ಪಾಸಿಟಿವ್ ಮತ್ತು ನೆಗೆಟಿವ್. ಹಾಗೆಯೇ, ಕಾಂತೀಯತೆಯಲ್ಲಿ ಎರಡು ಧ್ರುವಗಳಿವೆ. ಉತ್ತರ ಮತ್ತು ದಕ್ಷಿಣ. ಒಂದೇ ತರಹದ ಕಣಗಳು ಅಥವಾ ಧ್ರುವಗಳು ದೂರ ಸರಿಯುತ್ತವೆ. ವಿರುದ್ಧ ಕಣಗಳು ಅಥವಾ ಧ್ರುವಗಳು ಆಕರ್ಷಣೆಗೊಳಗಾಗುತ್ತವೆ. ಆದರೆ ಗುರುತ್ವ ಶಕ್ತಿಯಲ್ಲಿ ಈ ತರಹದ ಎರಡು ವಿಧಗಳು ಇಲ್ಲವೇ ಇಲ್ಲ. ವಸ್ತುಗಳು ಯಾವಾಗಲೂ ಒಂದನ್ನೊಂದು ಆಕರ್ಷಿಸುತ್ತವೆ.

Short range forces ಅಥವಾ 'ಸಮೀಪ ವ್ಯಾಪ್ತಿ ಶಕ್ತಿಗಳು' ಪರಮಾಣು ಕೇಂದ್ರ ಅಥವಾ nucleusನಲ್ಲಿ ಕೆಲಸ ಮಾಡುತ್ತವೆ. ಪ್ರೋಟಾನ್–ಪ್ರೋಟಾನ್ ಇಲ್ಲವೇ ಪ್ರೋಟಾನ್–ನ್ಯೂಟ್ರಾನ್ ಜೋಡಿಯನ್ನು ಒಂದಾಗಿ ಇಡುವುದು ಈ ಶಕ್ತಿಗೆ ಸೇರಿದ್ದು. ನ್ಯೂಕ್ಲಿಯರ್ ಶಕ್ತಿಗಳು ಬರೀ nucleus ನೊಳಗೆ ಕೆಲಸ ಮಾಡುತ್ತವೆ. ನಮಗೇ ಗೊತ್ತಿರುವ ಹಾಗೆ ಪ್ರೋಟಾನ್ ಪಾಸಿಟಿವ್ ಆಗಿದ್ದು, ಅವು ಒಂದನ್ನೊಂದು ಹತ್ತಿರ ಸೇರಿಸುವುದಿಲ್ಲ. ಹಾಗಾದರೆ, nucleusನಲ್ಲಿ ಆಕರ್ಷಣೆ ಮಾಡುವ ಮತ್ತೊಂದು ಶಕ್ತಿ ಇರಲೇಬೇಕು. ಈ ಶಕ್ತಿಯ ಕಾರಣದಿಂದ nucleus ಒಳಗೆ ಪ್ರೋಟಾನ್ ಮತ್ತು ನ್ಯೂಟ್ರಾನ್ ಒಟ್ಟಾಗಿರಬೇಕು. ಆದರೆ, ಕ್ವಾಂಟಮ್ ಸಿದ್ಧಾಂತದ ಆವಿಷ್ಕಾರದಿಂದ ನಮಗೆ ಗೊತ್ತಾಗುವುದೇನೆಂದರೆ, ಹಳೆಯ ಸಿದ್ಧಾಂತಗಳು ಈ ಪ್ರಶ್ನೆಯನ್ನು ಉತ್ತರಿಸುವುದಕ್ಕೆ ಸಾಧ್ಯವಿಲ್ಲ ಎಂದು. ಈ ಸನ್ನಿವೇಶದಲ್ಲಿ,

‘ಅಂತರಗಳು’ ತುಂಬ ಕಡಿಮೆಯಾಗಿರುವುದು ಗಮನಿಸಬೇಕಾದ ವಿಷಯ. ಈ ಸನ್ನಿವೇಶವನ್ನು ವರ್ಣಿಸಲು, ಕ್ವಾಂಟಮ್ ಸಿದ್ಧಾಂತದ ಜೊತೆ ಸಾಪೇಕ್ಷತಾ ಸಿದ್ಧಾಂತವೂ ಬೇಕಾಗುತ್ತದೆ. ಇಲ್ಲಿ ಅರ್ಥ ಮಾಡಿಕೊಳ್ಳಬೇಕಾಗಿರುವುದು : ಪ್ರತಿಯೊಂದು ಕ್ಷೇತ್ರದ ಜೊತೆ ಒಂದು ‘ಕಣವು’ ಇರುತ್ತದೆ. ಉದಾಹರಣೆಗೆ : ವಿದ್ಯುತ್ಕಾಂತೀಯ ಕಣಗಳು “ಫ್ರೋಟಾನ್”.

ವಿದ್ಯುತ್ಕಾಂತೀಯತೆ ಮತ್ತು ಪರಮಾಣು ಶಕ್ತಿಗಳನ್ನು ಏಕೀಕರಣ ಮಾಡಲು ಬಹಳಷ್ಟು ಸಿದ್ಧಾಂತಗಳನ್ನು ಮಂಡಿಸಲಾಗಿದ್ದು, ಅದರ ಜೊತೆಯಿರುವ ಕಣವನ್ನೂ ಊಹಿಸಲಾಗಿದೆ. ಈ ಏಕೀಕರಣ ಸಿದ್ಧಾಂತಗಳ ನಿಜಸ್ವರೂಪವನ್ನು ತಿಳಿಯಬೇಕಾದರೆ, ಈ ಕಣಗಳ ಹಾಜರಿಯನ್ನು ತಿಳಿಯಬೇಕಾಗುತ್ತದೆ. ಈ ಸಿದ್ಧಾಂತಗಳನ್ನು ಈಗಿನ ಕಾಲದಲ್ಲಿ ‘ಸ್ಟ್ಯಾಂಡರ್ಡ್’ ಮಾಡೆಲ್ ಎನ್ನುತ್ತಾರೆ. ಪ್ರೋಟಾನ್, ನ್ಯೂಟ್ರಾನ್ ಅಥವಾ ಮೀಸಾನನ್ನು ಕಾಂತಿಯ ವೇಗ ‘c’ ಹತ್ತಿರಕ್ಕೆ ವೇಗವರ್ಧಿಸಿ, ಅವು ಬೇರೊಂದು ಪರಮಾಣು ಜೊತೆ ಡಿಕ್ಕಿ ಹೊಡೆದರೆ, ಈ ಕಣಗಳು (ವೇಗವು ‘c’ಗಿಂತ ಹೆಚ್ಚಾಗಿರಲು ಸಾಧ್ಯವೇ ಇಲ್ಲ) ಉತ್ಪನ್ನವಾಗಲೇಬೇಕು. ಈ ಕಣಗಳ ಅಸ್ತಿತ್ವವನ್ನು ಕಂಡುಹಿಡಿದರೆ, ಸಿದ್ಧಾಂತದ ಪುರಾವೆ ಸಿಗುತ್ತದೆ.

ಇಂಥದೇ ಒಂದು ಪ್ರಯೋಗವನ್ನು ಹಂಗೇರಿಯ ವಿಜ್ಞಾನಿಗಳ ಒಂದು ಗುಂಪು ೨೦೧೫ನೇ ಇಸವಿಯ ಏಪ್ರಿಲ್ ತಿಂಗಳಲ್ಲಿ ಮಾಡಿತು. ಈ ಗುಂಪಿನ ಮುಖಂಡ ಅಟಿಲಾ ಕ್ರಾಸ್ನಹೋರ್ಕೆ. ಈ ಪ್ರಯೋಗದಲ್ಲಿ ಪ್ರೋಟಾನ್‌ಗಳನ್ನು ತೆಳುವಾದ ಲಿಥಿಯಮ್–೭ರ ಮೇಲೆ ತುಂಬ ವೇಗದಿಂದ ಬಿಡಲಾಯಿತು. ಪರಿಣಾಮವಾಗಿ ಅಸ್ಥಿರವಾದ ಬೆರಿಲಿಯಮ್ ಉತ್ಪತ್ತಿಯಾಗಿ ತದನಂತರ ಎಲೆಕ್ಟ್ರಾನ್ ಪೊಸಿಟ್ರಾನ್ ಜೋಡಿಗಳು ಬಂದವು. ವಿಜ್ಞಾನಿಗಳು ಈ ಜೋಡಿ ಸಂಖ್ಯೆಯನ್ನು ಎಣಿಸಿ, ಅದನ್ನು ಅದು ಬಂದ ಕೋನದ ಜೊತೆ ಹೋಲಿಸುತ್ತಿದ್ದರು. ಕೋನದ ಬೆಲೆ ಹೆಚ್ಚಾದಂತೆ, ಈ ಜೋಡಿಗಳ ಸಂಖ್ಯೆ ಕಡಿಮೆಯಾಗಬೇಕು. ಆದರೆ, ಕೋನವು ೧೪೦ ಡಿಗ್ರಿ ಆದಾಗ, ಇದ್ದಕ್ಕಿದ್ದಂತೆ ಜೋಡಿಗಳ ಸಂಖ್ಯೆ ಹೆಚ್ಚಾಯಿತು. ಇದಾದನಂತರ, ಜೋಡಿಗಳ ಸಂಖ್ಯೆ ಮತ್ತೆ ಕಡಿಮೆಯಾಗಲು ಶುರುವಾಯಿತು.

ಹಂಗೇರಿ ಗುಂಪಿನ ಪ್ರಕಾರ, ಈ ವಿಧದ ಪರಿಣಾಮ ಸಾಧ್ಯವಾಗುವುದು ಐದನೆಯ ಶಕ್ತಿ ಇದ್ದರೆ ಮಾತ್ರ. ಅದರೊಂದಿಗೆ ಇರುವ ಕಣಕ್ಕೆ ಎಲೆಕ್ಟ್ರಾನ್‌ಗಿಂತ ೩೪ ಪಟ್ಟು ಹೆಚ್ಚು ತೂಕ ಇರಬೇಕು. ಇದನ್ನು ಅವರು ಡಾರ್ಕ್ ಫ್ರೋಟಾನ್ ಎಂದರು. ಹಂಗೇರಿ ಗುಂಪು ಮತ್ತೆ ಮತ್ತೆ ಪ್ರಯೋಗವನ್ನು ಮಾಡಿದರೂ ಇದೇ ಪರಿಣಾಮ ಸಿಕ್ಕಿತು. ಹಾಗಾಗಿ, ಅವರ ಪ್ರಯೋಗದಲ್ಲಿ ಯಾವ ಸಂಶಯವು ಇಲ್ಲದಿದ್ದರೂ, ಪರಿಣಾಮದ ವಿಶ್ಲೇಷಣೆಯಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡವು. ಉದಾಹರಣೆಗೆ, ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದ ನಿಲುವು ಬೇರೆಯದೇ ಆಗಿತ್ತು. ಈ ಪರಿಣಾಮವು 'photophobic X bosons' ಎಂಬುವ ವಸ್ತುವಿನಿಂದ ಆಗಿರಬಹುದೆಂದು ಅವರ ವಾದ. 'dark photon' ಮತ್ತು 'photophobic X bosons' ವಸ್ತುವಿಗೂ ಬೇರೆಯೇ ಗುಣಗಳಿವೆ.

ಈ ಎರಡು ಉತ್ತರಗಳಲ್ಲಿ ಯಾವುದು ಸರಿ ? ಇದಕ್ಕೆ ಉತ್ತರ ಬೇಕಾದರೆ, ನಾವು ಇನ್ನೂ ಕೆಲವು ಪ್ರಯೋಗಗಳನ್ನು ಮಾಡಲೇಬೇಕು. ಈ ಎರಡೂ ಕಣಗಳ ಬಗ್ಗೆ ಇನ್ನಷ್ಟು ತಿಳಿಯಬೇಕು. ವಿಶ್ವದಾದ್ಯಂತ ಇಂತಹ ಪ್ರಯೋಗಗಳ ಸಿದ್ಧತೆ ನಡೆಯುತ್ತಿದೆ.

ಇಷ್ಟೆಲ್ಲ ಕುತೂಹಲ ಏಕೆಂಬ ಪ್ರಶ್ನೆ. ಸರಳವಾದ ಉತ್ತರ, ಇಂತಹ ಪ್ರಶ್ನೆ ಅಸ್ತಿತ್ವಕ್ಕೆ ಬಂದಿದೆ ಎಂದು. ಇನ್ನೊಂದು ಕಾರಣವಿದೆ. ವಿಶ್ವದಲ್ಲಿನ ನಿಗೂಢ ಭೌತವಸ್ತುವಿನ ಮೂಲವನ್ನು ಅರ್ಥ ಮಾಡಿಕೊಳ್ಳಲು ಈ ಗೊಂದಲ ಸಹಕರಿಸುತ್ತದೆ. Dark matter ಅಥವಾ ನಿಗೂಢ ಭೌತವಸ್ತುವು, ವಿಶ್ವದಲ್ಲಿ ಅಸ್ತಿತ್ವದಲ್ಲಿದ್ದು, ಅದು ಕಾಂತಿಯನ್ನು ಪಸರಿಸುವುದೂ ಇಲ್ಲ ಮತ್ತು ಚದುರಿಸುವುದೂ ಇಲ್ಲ. ಇದು ನಮಗೆ ಅಗೋಚರ. ಹಾಗಾದರೆ, ಇದರ ಇರುವಿಕೆ ತಿಳಿಯುವುದು ಹೇಗೆ ? ಇದರ ಇರುವಿಕೆಯು, ನಕ್ಷತ್ರಪುಂಜಗಳ ಆವರ್ತನಾ ಚಲನೆಯಿಂದ (rotational motion) ತಿಳಿಯುತ್ತದೆ. ಭೂಮಿ ಮತ್ತು ಇತರ ಗ್ರಹಗಳು ಸೂರ್ಯನನ್ನು ಸುತ್ತುತ್ತಿವೆ ಎಂದು ನಮಗೆ ತಿಳಿದಿದೆ. ಅವು ಹಾಗೆ ಸುತ್ತದಿದ್ದರೆ, ಸೂರ್ಯನಲ್ಲಿ ಬಿದ್ದುಹೋಗುತ್ತಿದ್ದವು. ಇದಕ್ಕೆ ಕಾರಣ, ಸೂರ್ಯನ ಗುರುತ್ವಾಕರ್ಷಣೆ. ಇದೇ ರೀತಿ ನಕ್ಷತ್ರಪುಂಜಗಳು, ಅದರ ಕೇಂದ್ರವನ್ನು ಸುತ್ತದಿದ್ದರೆ, ಅದೇ ಕೇಂದ್ರಕ್ಕೆ ಕುಸಿಯುತ್ತವೆ. ಈಗ ಗಮನದಲ್ಲಿಡಬೇಕಾದದ್ದು, ಗುರುತ್ವ ಯಾವಾಗಲೂ ಆಕರ್ಷಿಸುತ್ತದೆ ಮತ್ತು ಇದು ದೂರವ್ಯಾಪ್ತಿ ಶಕ್ತಿ (long range force). ಅಂದರೆ ಎಷ್ಟೇ ದೂರ ಹೋದರೂ, ಅನಂತದವರೆಗೂ, ಎಷ್ಟು ಕ್ಷೀಣವಾದರೂ, ಈ ಶಕ್ತಿಯ ಪ್ರಭಾವ ಇದ್ದೇ ಇರುತ್ತದೆ. ಆದುದರಿಂದ, ಕೆಲವು ವಸ್ತುಗಳು ಅಗೋಚರವಾಗಿದ್ದರೂ, ಅದರ ತೂಕ ವಿಶ್ವದ ಗುರುತ್ವ ಶಕ್ತಿಯನ್ನು ಕೊಡುತ್ತವೆ. ಆವರ್ತನಾ ಚಲನೆಯಿಲ್ಲದಿದ್ದರೆ, ಇಡೀ ವಿಶ್ವವು ಕೇಂದ್ರಕ್ಕೆ ಕುಸಿಯುತ್ತಿದ್ದಿತು. ಭೌತವಸ್ತುಗಳ ಇರುವಿಕೆಗೆ ನಕ್ಷತ್ರಪುಂಜಗಳ ಚಲನೆ ಒಂದು ತನಿಖಾ ಯಂತ್ರವಾಗುತ್ತದೆ. ಖಗೋಳ ವಿಜ್ಞಾನಿಗಳು ನಕ್ಷತ್ರ ಪುಂಜಗಳ ಚಲನೆಯ ಬಗ್ಗೆ ನಿಖರವಾದ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ನಕ್ಷತ್ರಪುಂಜಗಳ ವೇಗ ಅಧಿಕವಾಗಿದ್ದು, ಬರೀ ಗೋಚರ ವಸ್ತುಗಳ ತೂಕದಿಂದ ಅದನ್ನು ವಿವರಿಸಲು ಸಾಧ್ಯವೇ ಇಲ್ಲ. ಇದರಿಂದ ಅಗೋಚರ ವಸ್ತುಗಳೂ ಇರಲೇಬೇಕೆಂದು ತೀರ್ಮಾನಿಸಲಾಗುತ್ತದೆ. ಈ ವಿಶ್ವದಲ್ಲಿನ ೮೦% ತೂಕ ಅಗೋಚರ.

ಈ dark matter ಅಥವಾ ನಿಗೂಢ ವಸ್ತು ಎಲ್ಲಿಂದ ಬಂತೆಂದು ನಮಗೆ ಗೊತ್ತಿಲ್ಲ. ವಿದ್ಯುತ್ಕಾಂತೀಯತೆಯನ್ನೂ ಪರಮಾಣು ಶಕ್ತಿಯನ್ನೂ ಏಕೀಕರಣಗೊಳಿಸಿದ standard model ಈ ಡಾರ್ಕ್ ಮ್ಯಾಟರ್ ಬಗ್ಗೆ ಏನನ್ನೂ ತಿಳಿಸುವುದಿಲ್ಲ. ಅನೇಕರು ಅದಕ್ಕೇ ಒಂದು ಐದನೆಯ ಶಕ್ತಿಯನ್ನು ಹುಟ್ಟು ಹಾಕಿದ್ದಾರೆ. ಇದು ಮಿಕ್ಕ ನಾಲ್ಕು ಶಕ್ತಿಗಳಾದ ವಿದ್ಯುತ್ಕಾಂತೀಯತೆ, ಗುರುತ್ವ, ದೂರವ್ಯಾಪ್ತಿ ಶಕ್ತಿ ಮತ್ತು ಸಮೀಪವ್ಯಾಪ್ತಿ ಶಕ್ತಿಗಳನ್ನು ಸೇರಿಕೊಳ್ಳುತ್ತದೆ. ಹಂಗೇರಿ ಪ್ರಯೋಗದಲ್ಲಿನ ಪ್ರಸ್ತುತ ಆಸಕ್ತಿಗೂ ಈ ನಿಗೂಢ ವಸ್ತುವಿನ ಬಗ್ಗೆ ತಿಳಿಯಬಹುದೆಂಬ ಆಸೆ.

ಮೂಲ : **ಎಸ್. ಚಟರ್ಜಿ**
ಕನ್ನಡಕ್ಕೆ : **ವಾಣಿ ಚಟರ್ಜಿ**
ನಿವೃತ್ತ ವಿಜ್ಞಾನಿ, ಖಭೌತ ವಿಜ್ಞಾನ ಮಂದಿರ, ಬೆಂಗಳೂರು ಮತ್ತು
ಅಧ್ಯಕ್ಷರು, ಅಖಿಲ ಭಾರತ ಜನವಿಜ್ಞಾನ ಜಾಲ, ಬೆಂಗಳೂರು

## ಗಝಲ್

ಹೂವಿನಲಿ ತೇಲಿಬಂದ ಗಂಧವಾಗಿಸಿ ಉಸಿರೊಳಗೆ ನಿನ್ನ ತುಂಬಿಕೊಳ್ಳುವೆನೀಗ
ಮುಗಿಲೆದುರು ಬೆಟ್ಟದಲಿ ಮರ ಕಾದು ನಿಂತಂತೆ ಹನಿಯೊಂದ ನಂಬಿಕೊಳ್ಳುವೆನೀಗ

ಪ್ರೀತಿಯಲಿ ಕರೆವ ಕಡಲಿಗೆ ಹರಿದು ಹೋಗುವವು ನೂರೆಂಟು ನದಿಗಳು
ದಡವಾಗಿ ನಿಂತು ಅಲೆಗಳನು ಸ್ಪರ್ಶಿಸುತ ನದಿಯೊಡನೆ ಸೇರಿಕೊಳ್ಳುವೆನೀಗ

ದಿನವೂ ಉರಿಯುವ ಸೂರ್ಯ ಅಳುವನೋ ನಗುವನೋ ದಿಟ್ಟೈಸಿ ನೋಡುವರಾರು ?
ಹಗಲೆಲ್ಲ ಅಲೆದಾಡಿ ಸುಟ್ಟ ಜೀವವನು ಇರುಳ ಬೆರಳಿನಲಿ ಸಂತೈಸಿಕೊಳ್ಳುವೆನೀಗ

ಜರುಗುವ ಎಲ್ಲ ಹುಟ್ಟು–ಸಾವುಗಳಾಚೆ ಉಳಿಯುವುದು ನಿಶ್ಶಬ್ದ ಮೌನ
ಮೈತುಂಬ ಮಾತುಗಳು ಗೀರಿದ ಗಾಯದ ನೋವುಗಳ ನುಂಗಿಕೊಳ್ಳುವೆನೀಗ

ಬೇಲಿ ಗೋಡೆ ಬಾಂಬು ಬಂದೂಕು ದ್ವೇಷಗಳ ಸರಪಳಿಯಲಿ ಬಂಧಿಯಾಗಿದೆ ಆತ್ಮ
ಬಂಧನಗಳ ಮುರಿದು ಮನದ ಬಯಲನು ತೆರೆದುಕೊಳ್ಳುವೆನೀಗ

ಬದುಕಿನೊಳಗಲ್ಲದೆ ಸಾವ ಬಳಿಯಲಿ ಜೀವಗಳ ಓಲೈಸಲಾಗದು ‘ಹೊಸ್ಮನೆ’
ಸಾವ ಜತೆ ಸರಸ–ಮುನಿಸನಾಡುತ ಜೀವನವ ಪಡೆದುಕೊಳ್ಳುವೆನೀಗ !

**ಗಣೇಶ ಹೊಸ್ಮನೆ,** ಜಾನ್ಮನೆ – ೫೮೧ ೩೧೫, ಶಿರಸಿ, ಉತ್ತರ ಕನ್ನಡ ಜಿಲ್ಲೆ

# ಎಸ್.ಎಂ.ವಿ. ಪ್ರಕಾಶನದ ಇತ್ತೀಚಿನ ಪುಸ್ತಕಗಳು

ಎಲ್ಲಾ ರೀತಿಯ ಸ್ಪರ್ಧಾತ್ಮಕ ಪರೀಕ್ಷೆಗಳ ಪುಸ್ತಕಗಳಿಗಾಗಿ


₹ 395



₹ 395



₹ 340



₹ 95



₹ 220



₹ 365



₹ 360



₹ 398



₹ 240


₹ 560



₹ 245



₹ 210



₹ 260



₹ 390



₹ 160


₹ 595



₹ 390



₹ 395


₹ 1500


₹ 1500

ಪ್ರತಿಗಳಿಗಾಗಿ ಸಂಪರ್ಕಿಸಿ

**ಪುಸ್ತಕ ಮಂಟಪ**
ಶ್ರೀರಾಮ ದೇವಸ್ಥಾನದ ರಸ್ತೆ
ಕೋಲಾರ – 563 101
ದೂರವಾಣಿ : 08152-220471




**ಎಸ್.ಎಂ.ವಿ. ಪ್ರಕಾಶನ**
ಸ್ಟೂಡೆಂಟ್ಸ್ ಕಾರ್ನರ್, ದೊಡ್ಡಪೇಟೆ
ಕೋಲಾರ – 563 101
ಮೊಬೈಲ್ : 9448181878



ರೂಪ ಹಾಸನ

# ಮಗುವೆಂಬೋ ಮೊಗ್ಗರಳಲು... ಮಣ್ಣು, ಗಾಳಿ, ನೀರು, ಬೆಳಕು...

**ಪ್ರತಿಯೊಂದು ಮಗುವಿಗೂ ಹಿರಿಯರಂತೆಯೇ ಅಥವಾ ಅದಕ್ಕಿಂತ ಸೂಕ್ಷ್ಮವೂ ಸಂವೇದನಾಶೀಲವೂ ಆದ ಎಲ್ಲ ಸನ್ನಿವೇಶಗಳಿಗೂ ಸ್ಪಂದಿಸಿ ಮೂಡುವ ಸಂವೇದನೆಗಳಿವೆ. ಅದನ್ನು ನಿರ್ಲಕ್ಷಿಸಿ ನಮ್ಮ ಅನಿಸಿಕೆ, ಅಭಿಪ್ರಾಯಗಳನ್ನೆಲ್ಲಾ ಮಗುವಿನ ಮೇಲೆ ಬಲವಂತವಾಗಿ ಹೇರುವುದರಿಂದ ಮಗುವಿನ ಸೂಕ್ಷ್ಮ ಸಂವೇದನೆಗಳು ಘಾಸಿಗೊಂಡು, ದೊಡ್ಡದಾದಂತೆಲ್ಲಾ ಸ್ವತಂತ್ರ ವ್ಯಕ್ತಿತ್ವ ಇಲ್ಲದೇ ಕೀಳರಿಮೆಯಿಂದ, ಮನೋವೇದನೆಯಿಂದ ನರಳುತ್ತವೆ ಎನ್ನುತ್ತಾರೆ ಮಕ್ಕಳ ಮಾನಸಿಕ ತಜ್ಞರು. ಇಂದಿನ ನಮ್ಮ ಮಕ್ಕಳು ಹಿಂದಿನ ಪೀಳಿಗೆಗೆ ಹೋಲಿಸಿದರೆ ಹೆಚ್ಚು ಬುದ್ಧಿವಂತರು, ಪ್ರತಿಭಾವಂತರು. ಆದರೆ ಇಂದಿನ ಶಿಕ್ಷಣದ ಹೆಸರಿನಲ್ಲಿ ಅವರನ್ನು ಹೆಚ್ಚು ನೆನಪಿಟ್ಟುಕೊಳ್ಳುವ, ಮಾಹಿತಿ ಸಂಗ್ರಹಿಸುವ, ತುಂಬಿಟ್ಟಿದ್ದನ್ನು ಹೊರಚೆಲ್ಲುವ 'ಮಿನಿ ಕಂಪ್ಯೂಟರ್'ಗಳಾಗಿ ಮಾತ್ರ ತಯಾರಿಸಲಾಗುತ್ತಾ ಇದೆ.**

**ಯಾ**ವುದೇ ದೇಶದ ಅಭಿವೃದ್ಧಿ ಎನ್ನುವಂಥದ್ದು ಆ ದೇಶದ ಮಕ್ಕಳನ್ನು ಕೇಂದ್ರೀಕರಿಸಿ ಆಗಬೇಕು ಎನ್ನುವುದು ಒಂದು ಆರೋಗ್ಯಕರ ಸಿದ್ಧಾಂತ. ಮಕ್ಕಳು ಪ್ರತಿಕ್ಷಣ ಬೆಳೆಯುವ ಚೈತನ್ಯಶಾಲಿಗಳಾಗಿ ಇರುವುದರಿಂದ ಅವರ ಸಮಗ್ರ ಸರ್ವತೋಮುಖ ಅಭಿವೃದ್ಧಿಯಾದರೆ ಇಡೀ ದೇಶವೇ ಅಭಿವೃದ್ಧಿಯಾಗುವುದರಲ್ಲಿ ಸಂದೇಹವಿಲ್ಲ. ಹೀಗಾಗಿ ಮಗುವೊಂದು ವೈಯಕ್ತಿಕ ಜವಾಬ್ದಾರಿಯ ಜೊತೆಗೇ ಸಾಮೂಹಿಕ ಹೊಣೆಗಾರಿಕೆಯೂ ಹೌದು ಎಂದು ನಾವು ಚಿಂತಿಸಿದಾಗ ಮಾತ್ರ ಪ್ರತಿ ಮಗುವನ್ನೂ ಅತ್ಯಂತ ಎಚ್ಚರಿಕೆಯಿಂದ, ಉತ್ತಮ ನಾಗರಿಕನಾಗುವ ನೆಲೆಯಲ್ಲಿ ಬೆಳೆಸುತ್ತಾ ಹೋಗುತ್ತೇವೆ. ಮಗುವನ್ನು ಕೇಂದ್ರದಲ್ಲಿಟ್ಟುಕೊಂಡು ವಿವರಿಸಿಕೊಳ್ಳುತ್ತಾ ಹೋದಾಗ ಮಗುವಿಗೆ ನಿಜವಾಗಿ ಏನು ಬೇಕು ? ಅದಕ್ಕೆ ನಾವೇನು ಮಾಡಬೇಕು ? ಮಗುವಿನ ಆರೋಗ್ಯಕರ ಬೆಳವಣಿಗೆಗೆ ನಾವೆಂಥಾ ಪರಿಸರ ರೂಪಿಸಬೇಕು ಎಂಬುದು ಅರಿವಿಗೆ ಬರುತ್ತಾ ಹೋಗುತ್ತದೆ. ಮಗುವೊಂದು ಪ್ರತಿ ಕ್ಷಣ ಹೊಸತಿಗೆ ಅಪ್‌ಡೇಟ್ ಆಗುತ್ತಿರುತ್ತದೆ. ನಾವು ಅದಕ್ಕೆ ಸ್ಪಂದಿಸದಿದ್ದರೆ ಪ್ರತಿ ಕ್ಷಣ ಔಟ್‌ಡೇಟೆಡ್ ಆಗುತ್ತಿರುತ್ತೇವೆ ! ಬಹುಶಃ ಇದೇ ನಾವು ಮಗುವನ್ನು ಅರ್ಥಮಾಡಿಕೊಳ್ಳಲು, ಬೆಳೆಸಲು ಇರುವ ನಿಜವಾದ ತಡೆಗೋಡೆ. ಮಗುವನ್ನು ಮನೋವೈಜ್ಞಾನಿಕ ನೆಲೆಯಲ್ಲಿ ಅರ್ಥ ಮಾಡಿಕೊಳ್ಳುತ್ತಾ ಹೋದರೆ ಮಾತ್ರ ಈ ಸಮಸ್ಯೆ ತಾನಾಗಿಯೇ ಪರಿಹಾರವಾಗುತ್ತದೆ.

'ಮಗುವಿಗೆ ಏನು ತಿಳಿಯುತ್ತದೆ ? ಅದು ನಾವು ಹೇಳಿಕೊಟ್ಟ ಹಾಗೆ ಕಲೀತಾ ಹೋಗುತ್ತೆ. ಅದಕ್ಕೆ ತನ್ನದೇ ಆದ ವ್ಯಕ್ತಿತ್ವ ಇರುವುದಿಲ್ಲ' ಎನ್ನುವುದು ನಮ್ಮ ಸಾಮಾನ್ಯ ಅಭಿಪ್ರಾಯ. ಆದರೆ ಬಹಳ ಸೂಕ್ಷ್ಮವಾಗಿ ಮಗುವೊಂದನ್ನು ಗಮನಿಸುತ್ತಿದ್ದರೆ ಈ ನಮ್ಮ ಅಭಿಪ್ರಾಯ ತಪ್ಪು ಎಂದು ಸಾಬೀತಾಗುತ್ತದೆ. ಮಕ್ಕಳ ಮನಸ್ಸು ಒಂದು ಕಪ್ಪು ಹಲಗೆ ಇದ್ದ ಹಾಗೆ, ಅಲ್ಲಿ ನಾವು ಏನನ್ನು ಬೇಕಾದರೂ ಬರೀಬಹುದು ಎಂದು ನಂಬಿದರೆ ಅದಕ್ಕಿಂತಾ ಪೆದ್ದುತನ ಇನ್ನೊಂದಿಲ್ಲ. ವೈದ್ಯಕೀಯ ಸಂಶೋಧನೆಗಳ ಪ್ರಕಾರ ಪ್ರತಿಯೊಂದು ಮಗುವೂ ಒಂದು ವ್ಯಕ್ತಿ. ಪ್ರತಿಯೊಂದು ಮಗುವಿನಲ್ಲೂ ಇರುವ ಮನಸ್ಸನ್ನು ಗೌರವಿಸಿ ವ್ಯಕ್ತಿ ಎಂದು ನಂಬಲಾಗುತ್ತದೆ.

ಹಸಿವಾದಾಗ ಅಳುವುದನ್ನು, ಹೊಸ ಆಟಿಕೆ ಕೈಗೆ ಸಿಕ್ಕಾಗ ಸಂತಸದಿಂದ ನಗುವುದನ್ನು, ತನ್ನ ತಾಯಿಯನ್ನ ಕಂಡ ತಕ್ಷಣ ಬೇರೆಯವರ ಕೈಯಿಂದ ಜಿಗಿದು ತಾಯಿಯನ್ನು ಅಪ್ಪಿಕೊಳ್ಳುವುದನ್ನು, ತನಗೆ ಬೇಕಾದ ವಸ್ತು ಸಿಗದಿದ್ದಾಗ ಸಿಟ್ಟುಗೊಳ್ಳುವುದನ್ನು, ಮೆರ್ರಿಗೋ ರೌಂಡ್ ತಿರುಗುವುದನ್ನು ನೋಡಿ ಕೈ ಕಾಲು ಬಡಿದು ಆಡುವುದನ್ನು ಮಗುವಿಗೆ ಹುಟ್ಟಿದ ತಕ್ಷಣ ಯಾರು ಕಲಿಸುತ್ತಾರೆ? ಮಗು ದೊಡ್ಡದಾಗುತ್ತಾ ಹೋದ ಹಾಗೆ, ನಾವು ಏನನ್ನೇ ಹೊರಗಿನಿಂದ ಕಲಿಸಿದರೂ, ಅದನ್ನ ಗ್ರಹಿಸುವ ಶಕ್ತಿ, ತಿಳಿದುಕೊಳ್ಳುವ, ಅರ್ಥೈಸಿಕೊಳ್ಳುವ ಮನಸ್ಸು ಸಾಮರ್ಥ್ಯ ಮಗುವಿನಲ್ಲಿ ಹುಟ್ಟಿನಿಂದಲೇ ಇರುತ್ತದೆ. ತಾನು ಬೆಳೆಯುತ್ತಾ ತನ್ನ ಸುತ್ತಲಿನ ಪರಿಸರವನ್ನು ಮಗು ತನ್ನ ದೃಷ್ಟಿಕೋನದಂತೆಯೇ ಅರ್ಥೈಸುತ್ತಾ ಹೋಗುತ್ತದೆ. ಪುಟ್ಟ ಮಗುವಿಗೆ ಸಹ ತನ್ನದೇ ಇಷ್ಟಾನಿಷ್ಟಗಳು, ನಿಲುವುಗಳು, ಸ್ವಭಾವ ಇರುವು ದನ್ನು ಗಮನಿಸಬಹುದು. ಕೆಲವು ಮಕ್ಕಳಿಗೆ ಸಿಹಿ ಇಷ್ಟ ಆದರೆ, ಕೆಲವಕ್ಕೆ ಉಪ್ಪಿನ ಪದಾರ್ಥ ಇಷ್ಟ. ಕೆಲವು ರಾಗಿ ಮಡ್ಡಿಯನ್ನ ಖುಷಿಯಿಂದ ತಿಂದರೆ, ಇನ್ನು ಕೆಲವು ಮುಖ ಸಿಂಡರಿಸುತ್ತವೆ. ಕೆಲವು ಕಂದಮ್ಮಗಳಿಗೆ ಬಿಸಿಬಿಸಿ ನೀರಲ್ಲಿ ಗಂಟೆಗಟ್ಟಲೆ ಸ್ನಾನ ಮಾಡಿಸಿದರೂ ಕಮಕ್–ಕಿಮಕ್ ಎನ್ನುವುದಿಲ್ಲ. ಇನ್ನು ಕೆಲವು ಮಕ್ಕಳು ಸ್ವಲ್ಪ ಬಿಸಿನೀರು ಮೈಮೇಲೆ ಬಿದ್ದಿದ್ದೇ ತಡ, ಏನೋ ಅನಾಹುತವೇ ಆಯ್ತು ಎಂಬಂತೆ ಕಿರಿಚಾಡುತ್ತವೆ. ಹೀಗೆ ಪ್ರತಿಯೊಂದು ಮಗುವೂ ತನ್ನದೇ ಆದ ವಿಶಿಷ್ಟತೆಯಿಂದ ಪ್ರತ್ಯೇಕ ವ್ಯಕ್ತಿಯೇ ಆಗಿರುತ್ತದೆ. ಪ್ರತಿ ಮಗುವೂ ವಿಭಿನ್ನ, ಅನನ್ಯ. ಅದನ್ನು ಗುರುತಿಸುವಂಥ ಗೌರವಿಸುವಂಥ ಮನೋಭಾವ ನಮ್ಮಲ್ಲಿ ಮೂಡಬೇಕಷ್ಟೆ.

ಪ್ರತಿಯೊಂದು ಮಗುವಿಗೂ ಹಿರಿಯರಂತೆಯೇ ಅಥವಾ ಅದಕ್ಕಿಂತ ಸೂಕ್ಷ್ಮವೂ ಸಂವೇದನಾಶೀಲವೂ ಆದ ಎಲ್ಲ ಸನ್ನಿವೇಶಗಳಿಗೂ ಸ್ಪಂದಿಸಿ ಮೂಡುವ ಸಂವೇದನೆಗಳಿವೆ. ಅದನ್ನು ನಿರ್ಲಕ್ಷಿಸಿ ನಮ್ಮ ಅನಿಸಿಕೆ, ಅಭಿಪ್ರಾಯಗಳನ್ನೆಲ್ಲಾ ಮಗುವಿನ ಮೇಲೆ ಬಲವಂತವಾಗಿ ಹೇರುವುದರಿಂದ ಮಗುವಿನ ಸೂಕ್ಷ್ಮ ಸಂವೇದನೆಗಳು ಘಾಸಿಗೊಂಡು, ದೊಡ್ಡ ದಾದಂತೆಲ್ಲಾ ಸ್ವತಂತ್ರ ವ್ಯಕ್ತಿತ್ವ ಇಲ್ಲದೇ ಕೀಳರಿಮೆಯಿಂದ, ಮನೋವೇದನೆಯಿಂದ ನರಳುತ್ತವೆ ಎನ್ನುತ್ತಾರೆ ಮಕ್ಕಳ ಮಾನಸಿಕ ತಜ್ಞರು. ಇಂದಿನ ನಮ್ಮ ಮಕ್ಕಳು ಹಿಂದಿನ ಪೀಳಿಗೆಗೆ ಹೋಲಿಸಿದರೆ ಹೆಚ್ಚು ಬುದ್ಧಿವಂತರು, ಪ್ರತಿಭಾವಂತರು. ಆದರೆ ಇಂದಿನ ಶಿಕ್ಷಣದ ಹೆಸರಿನಲ್ಲಿ ಅವರನ್ನು ಹೆಚ್ಚು ನೆನಪಿಟ್ಟುಕೊಳ್ಳುವ, ಮಾಹಿತಿ ಸಂಗ್ರಹಿಸುವ, ತುಂಬಿಟ್ಟಿದ್ದನ್ನು ಹೊರಚೆಲ್ಲುವ 'ಮಿನಿ ಕಂಪ್ಯೂಟರ್' ಗಳಾಗಿ ಮಾತ್ರ ತಯಾರಿಸಲಾಗುತ್ತಾ ಇದೆ. ಅವರಲ್ಲಿರುವ ಸಂಗೀತ, ನೃತ್ಯ, ಕಲೆ, ಕ್ರೀಡೆಯಂಥ ಪ್ರತಿಭೆಗಳಿಗೆ ಒಂದಿಷ್ಟು ಪ್ರೋತ್ಸಾಹ ದೊರಕಿದರೂ ಅವರ ಜಾಣತನ, ಸೃಜನಶೀಲತೆ, ವೈಚಾರಿಕತೆಗೆ ಮತ್ತಷ್ಟು ಮೆರುಗು ನೀಡುವ ಪ್ರಯತ್ನಗಳು ನಡೆಯುವುದು ಕಡಿಮೆ. ಅವರೊಳಗಿನ ಕುತೂಹಲದ ಪ್ರಶ್ನೆಗಳು ಹೆಚ್ಚಿನ ಬಾರಿ ಹೊರಬರದಂತೆ ನಾವೇ ತಡೆಯೊಡ್ಡುತ್ತೇವೆ. ಚಿಕ್ಕಮಕ್ಕಳಾಗಿದ್ದಾಗಿನ ಅವರ ಕುತೂಹಲವನ್ನು, ಅಪರಿಮಿತ ಪ್ರಶ್ನೆಗಳನ್ನು ಮೆಲ್ಲಗೆ ನಾವೇ ಮುರುಟಿ ಬಿಟ್ಟಿರುತ್ತೇವೆ. ಮಕ್ಕಳ ದೇಹಕ್ಕೆ 'ಯೂನಿಫಾರಂ' ತೊಡಿಸಿ ಏಕರೀತಿಯಲ್ಲಿ ಕಾಣುವ ಹಾಗೆ ಮಾಡಿದಂತೆಯೇ ಅವರ ಮನಸ್ಸು – ಬುದ್ಧಿಯನ್ನೂ ಯೂನಿಫಾರಂ ತೊಡಿಸಿ ಏಕರೀತಿ ಮಾಡುವುದಕ್ಕೆ ಹೊರಟುಬಿಟ್ಟಿದ್ದೇವೆ ನಾವು.

ಆದರೆ ಪ್ರತಿಯೊಂದು ಮಗುವಿಗೂ ಅದರದ್ದೇ ಮನಸ್ಸಿದೆ, ಭಾವನೆಗಳಿವೆ, ನೋವು–ನಲಿವುಗಳಿವೆ. ಮಗು ತನ್ನ ಸುತ್ತಮುತ್ತಲ ಘಟನೆ, ಅನುಭವಗಳನ್ನು




# ಎಷ್ಟೊಂದು ಸಾರಿ ಕೊಲ್ಲುತ್ತಿ ?



**ಸಾ**ಕು, ಸಾಕು
ಎಷ್ಟೊಂದು ಸಾರಿ ಕೊಲ್ಲುತ್ತಿ ನನ್ನನ್ನ ?
ನನ್ನನ್ನು ಲಂಕೆಯ ಬಂಧನದಿಂದ ಬಿಡಿಸಿದ್ದು
ಕೇವಲ ನಿನ್ನ ವಂಶದ ಅಪಕೀರ್ತಿ ತೊಡೆಯ
ಲೆಂದು ಗೊತ್ತಿರಲಿಲ್ಲ.
ಎಷ್ಟೊಂದು ಜನರೆದುರು ನನ್ನ ಅವಮಾನಿಸಿದೆ ರಾಮ
ಬೇಕಾದರೆ ಹೋಗು ವಿಭೀಷಣನಲ್ಲಿಗೆ
ಲಕ್ಷ್ಮಣನಲ್ಲಿಗೆ ಇಲ್ಲವೆ ಸುಗ್ರೀವನಲ್ಲಿಗೆ
ಅಂದವನು ನೀನಲ್ಲವೇ ?
ನನಗೆ ಬೇರಾವ ದಾರಿಯುಳಿದಿತ್ತು
ಉರಿವ ಬೆಂಕಿಯ ಹೋಗುವದಲ್ಲದೆ ?

ಭಾವನೆಗಳೇ ಇಲ್ಲದ ಬೊಂಬೆ ನೀನು
ಯಾರದೋ ಆಜ್ಞೆಗಳ ಪಾಲಿಸುತ್ತ
ನಿರಪರಾಧಿ ಜನರ ಕೊಲೆ ಮಾಡುತ್ತ ಬಂದವನು ನೀನು.
ನಾನು ಕೈ ಮುಗಿದು ಕೇಳುತ್ತಲೇ ಇದ್ದೆ
ಗೋಣಗುತ್ತಲೇ ಇದ್ದೆ ನನ್ನ ಪಾಡಿಗೆಂಬಂತೆ
ಸಾಕು ಈ ಶಸ್ತ್ರಗಳ ಸಹವಾಸ
ನಮಗಿರಲಿ ಕಾಡಿನ ನಿಯಮ ಎಂದು.
ನೀನು ಕೇಳಲೇ ಇಲ್ಲ
ನಡದೇ ಹೋಯಿತು ಏನೆಲ್ಲ ರಾಮಾಯಣ !

ಅಶೋಕ ವನದಲ್ಲಿ ನಿನ್ನದೇ ಧ್ಯಾನದಲ್ಲಿದ್ದೆ
ಈ ಚಿತ್ತದಲ್ಲಿ ನಿನ್ನ ವಿನಾ ಯಾವ ಅನ್ಯವೂ ಇರಲಿಲ್ಲ
ಹೇಗೆ ಹೇಳಲಿ ನಾನು ದೊರೆ
ಈ ಹೃದಯಕ್ಕೆ ಯಾವ ಪುರಾವೆ ತರಲಿ
ಇಲ್ಲ, ಇನ್ನು ಈ ಬದುಕು ಬೇಕಿರಲಿಲ್ಲ
ಸಾಕು ಈ ಅವಮಾನಗಳ ಶೂಲ
ಎಂದು ನನ್ನನ್ನೊಪ್ಪಿಸಿದೆ ಬೆಂಕಿಯ ನಾಲಗೆಗೆ
ಆದರೆ ನೀವು ಬಿಡಬೇಕಲ್ಲ
ನಿಮ್ಮ ಹಿಂಸೆಯ ಕಥೆ ಇನ್ನೂ ಮುಗಿದಿರಲಿಲ್ಲ
ಮತ್ತೆ ನನ್ನ ಬದುಕಿಸಿದಿರಲ್ಲ !

ಮತ್ತೆ ಮತ್ತದೇ ನೋವು ಅವಮಾನಗಳು
ನಿನ್ನ ಮಕ್ಕಳ ಹೊತ್ತ ನನ್ನ ಕಾಡಿಗಟ್ಟಿದಿರಿ
ಎಳೆಯ ಮಕ್ಕಳ ಮೇಲೆ ಯುದ್ಧ ಸಾರಿದಿರಿ
ಎಲ್ಲ ತಿಳಿಯಾಗಿ ಮತ್ತೆ ಕೂಡುವ ಸಮಯ
ಮತ್ತೆ ನಿಮ್ಮ ವಂಶಪ್ರಶ್ನೆ, ರಾಜನ ಅಹಂಕಾರ
ಶೀಲ ಪರೀಕ್ಷೆಯ ಆಟ ಮತ್ತೆ ಮತ್ತೆ
ಎಷ್ಟೊಂದು ಸಾರಿ ಕೊಲ್ಲುತ್ತೀರಿ ನನ್ನ ?

ಮಣ್ಣಲ್ಲಿ ಬಿದ್ದ ಅನಾಥ ಹೆಣ್ಣು ನಾನು
ನನ್ನ ಹಡೆದವ್ವ ಯಾರೋ ಗೊತ್ತಿಲ್ಲ
ಈ ಭೂಮಿ ನನ್ನವ್ವ, ನನ್ನವ್ವ ಈ ಭೂಮಿ
ತಾಯೇ ನಿನ್ನ ಮಡಿಲ ತೆರೆದು ಕರೆದುಕೋ ನನ್ನ
ರಕ್ಷಿಸು ಈ ರಾಮನಿಂದ
ರಕ್ಷಿಸು ಈ ರಾಮರಿಂದ.

**ರಮಾಕಾಂತ ಪುರಾಣಿಕ**
'ಅಭಿಜ್ಞಾ', ನಂ. ೨೧, ೨ನೇ ಮುಖ್ಯರಸ್ತೆ, ವಿವೇಕಾನಂದ ನಗರ
ಕತ್ರಿಗುಪ್ಪೆ ಮುಖ್ಯರಸ್ತೆ, ಬೆಂಗಳೂರು – ೫೬೦ ೦೮೫



ನಮಗಿಂತಲೂ ತೀವ್ರವಾಗಿ ಗಮನಿಸುತ್ತಿರುತ್ತದೆ. ಜೊತೆಗೆ ಅದಕ್ಕೆ ತನ್ನದೇ ಆದ ಅಭಿಪ್ರಾಯವೂ ಇದೆ ! ತನ್ನ ಮೇಲಾಗುವ ಒತ್ತಡ, ನೋವು, ಅವಮಾನ, ನಾವು ತೋರುವ ನಿರ್ಲಕ್ಷ್ಯದಿಂದ ಮಗುವಿನ ಮನಸ್ಸು ಮುದುಡಿಹೋಗುತ್ತದೆ. ಮತ್ತೆ ಅದನ್ನು ಅರಳಿಸುವುದು ಕಷ್ಟದ ಕೆಲಸ. ಮಗುವಿನ ಬಗ್ಗೆ ಒಂದು ಸಣ್ಣ ಗಮನಿಸುವಿಕೆ ಕೂಡ ಅದಕ್ಕೆ ಖುಷಿ ಕೊಡುತ್ತದೆ. ತನ್ಮೂಲಕ ಅದು ತನ್ನನ್ನೇ ಗೌರವಿಸಿಕೊಳ್ಳುತ್ತದೆ. ಆತ್ಮವಿಶ್ವಾಸ ಬೆಳೆಸಿಕೊಳ್ಳುತ್ತದೆ. ಹೀಗಾಗೇ ಮಗುವಿನ ಜೊತೆ ತೊಡಗಿಕೊಳ್ಳುವಾಗ ನಮ್ಮ ಮಾತು, ನಡವಳಿಕೆ ಎಲ್ಲವೂ ಗಾಜಿನ ಜೊತೆಗೆ ವ್ಯವಹರಿಸುವಷ್ಟೇ ಸೂಕ್ಷ್ಮವಾಗಿರಬೇಕು. ಗಾಜಿನ ಮೇಲೆ ನಾವಿಡುವ ಕೈಬೆರಳು ಕೂಡ ಗುರುತಾಗಿ ಉಳಿದುಬಿಡುತ್ತದೆ ಅಲ್ಲವೇ ?

ಹಿರಿಯರಾದ ನಾವು ಪ್ರತಿಯೊಂದು ಮಗುವೂ ತನ್ನ ಭಾವನೆಗಳಿಂದ ತನ್ನಂತೆ ತಾನೇ ವಿಕಸಿಸಿ ಅರಳುವುದಕ್ಕೆ, ಪರಿಮಳ ಸೂಸುವುದಕ್ಕೆ ಬಿಡಬೇಕು. ಅದಕ್ಕೆ ತಕ್ಕ ಪೂರಕ ಪರಿಸರವನ್ನಷ್ಟೇ ನಾವು ಒದಗಿಸಿಕೊಡಬೇಕು. ಮಗುವಿನ ಮನಸ್ಸು ವಿಶಾಲ ನದಿಯಂತೆ. ಅದು ತನಗೆ ಬೇಕೆಂದಂತೆ, ಬೇಕಾದ ಕಡೆಗೆ ಹರಿದು ಬೇಕೆನಿಸಿದ್ದನ್ನು ಪಡೆಯಬಲ್ಲದು. ಯಾವುದು ಸರಿಯಾದದ್ದು ? ಯಾವುದು ತಪ್ಪು ಎಂದು ಹೇಳಿಕೊಡುವುದಷ್ಟೇ ನಮ್ಮ ಕರ್ತವ್ಯ. ಅದನ್ನು ಪಡೆಯುವ ದಾರಿಗಳನ್ನ ಮಗು ತಾನೇ ತಿಳಿಯುತ್ತಾ ಹೋಗುತ್ತದೆ. ಹಾಗೇ ಮಗುವನ್ನು ನಮ್ಮ ಮಿತಿಯಲ್ಲಿ ಯಷ್ಟೇ ಅರ್ಥೈಸಿಕೊಂಡು ಅದಕ್ಕೆ ಸಂಕೋಲೆ ತೊಡಿಸುವ 'ರಿಂಗ್ ಮಾಸ್ಟರ್'ಗಳು ನಾವಾಗದಿರಬೇಕಷ್ಟೆ. ಅದನ್ನು ಅದು ಇರುವಂತೆ ಅರಿತುಕೊಳ್ಳುವ ಕಲೆಯೇ ನಾವು ಮಗುವಿನ ಘನತೆಗೆ ಕೊಡುವ ಬೆಲೆ ಎಂದು ನಾನು ಭಾವಿಸುತ್ತೇನೆ.

ಮಕ್ಕಳು ಎಂದರೆ ಅರಳಲು ಕಾದಿರುವ ಮೊಗ್ಗುಗಳು. ಒಂದು ಮೊಗ್ಗು ಪರಿಪೂರ್ಣವಾಗಿ ಅರಳಬೇಕೆಂದರೆ ನಾವು ಆ ಗಿಡಕ್ಕೆ ಸರಿಯಾದ ಗಾಳಿ, ಬೆಳಕು, ನೀರು, ಮಣ್ಣು, ಪೋಷಕಾಂಶವನ್ನು ಸಮರ್ಪಕವಾಗಿ ಸಮ ಪ್ರಮಾಣದಲ್ಲಿ ಕೊಟ್ಟಿರಬೇಕು. ಒಂದೇ ಒಂದು ಅಂಶ ಕಡಿಮೆಯಾದರೂ ಮಗುವಿನ ವ್ಯಕ್ತಿತ್ವ ಮುಕ್ಕಾಗುತ್ತದೆ. ಹೀಗಾಗೇ ಮಗುವಿಗೆ ನಾವು ರೂಪಿಸಿಕೊಡುವ ವಾತಾವರಣ ತುಂಬ ಮುಖ್ಯವಾದುದು. ಒಂದು ಗಿಡದಿಂದ ಒಂದು ಮೊಗ್ಗು ಕುಡಿಯೊಡೆದು ಬಂತೆಂದರೆ ಅದು ಸರಿಯಾಗಿ ವಿಕಸಿಸುವವರೆಗೆ ನಮ್ಮ ಜವಾಬ್ದಾರಿಯಿರುತ್ತದೆ. ಹೀಗಾಗೇ ಮಗುವೆಂದರೆ 'ಟೇಕನ್ ಫಾರ್ ಗ್ರ್ಯಾಂಟೆಡ್' ಆಗಬಾರದು. ಅದು ಒಂದು ಬಹು ದೊಡ್ಡ ಜವಾಬ್ದಾರಿಯಾಗಬೇಕು ಎಂದು ಮೊದಲಿಗೇ ನಾನು ಹೇಳಿದ್ದು.

'ನೀವು ನಿಮ್ಮ ಮಕ್ಕಳನ್ನ ಪ್ರೀತಿಸ್ತೀರಾ ?' ಎಂದು ಕೇಳಿದರೆ ಎಲ್ಲ ಪಾಲಕರೂ ಒಕ್ಕೊರಲಿನಿಂದ ಹೌದೆನ್ನುತ್ತಾರೆ. ಹಾಗಾದರೆ ಪ್ರೀತಿ ಎಂದರೇನು ? ಎಂದು ನಾವು ನಮ್ಮನ್ನು ಪ್ರಶ್ನಿಸಿಕೊಳ್ಳಬೇಕು. ಮಕ್ಕಳಿಗೆ ಪ್ರೀತಿ ಕೊಡುವುದು ಎಂದರೆ ಅವರು ಕೇಳಿದ್ದು ಕೊಡಿಸುವುದು, ಒಳ್ಳೆ ಶಾಲೆಗೆ ಕಳಿಸುವುದು, ಒಳ್ಳೆ ಬಟ್ಟೆ ಕೊಡಿಸುವುದು, ಒಳ್ಳೆ ತಿಂಡಿ ಕೊಡಿಸುವುದು ಎಂಬಷ್ಟಕ್ಕೆ ಮಾತ್ರ ಇಂದು ನಮ್ಮ ಪ್ರೀತಿ ಸೀಮಿತ ವಾಗಿದೆ. ಆದರೆ ನಿಜವಾದ ಪ್ರೀತಿಗಾಗಿ, ಮಕ್ಕಳು ನಮ್ಮಿಂದ ನಿರೀಕ್ಷಿಸುವುದೇನೆಂದರೆ ನಾವು ಅವರಿಗೆ ಕೊಡುವ ಗಮನ, ಕಾಳಜಿ ಮತ್ತು ಗುಣಾತ್ಮಕ ಸಮಯ.

ಮಹಾಭಾರತದಲ್ಲೊಬ್ಬ ಶಿಶುಪಾಲನೆಂಬ ಉಗ್ರ ಬರುತ್ತಾನೆ. ಅವನ ಕಥೆ ನಮಗೆ ಗೊತ್ತೇ ಇದೆ. ಆದರೆ ಈಗ, ಆಧುನಿಕ ಯುಗದಲ್ಲಿ ನಮ್ಮ ಮಕ್ಕಳ ಪಾಲಿಗೆ ಪಾಲಕರೇ ಉಗ್ರಗಾಮಿಗಳು ! ಇದು ನಾನು ಹೇಳುತ್ತಿರುವುದಲ್ಲ ನಮ್ಮ ಮನಶ್ಶಾಸ್ತ್ರಜ್ಞರು ಹೇಳುತ್ತಿರುವುದು. ಮಕ್ಕಳ ಶೇಕಡ ೯೦ಕ್ಕೂ ಹೆಚ್ಚಿನ ಸಮಸ್ಯೆಗಳಿಗೆ ಪಾಲಕರೇ ಕಾರಣವೆಂದು ಅವರು ಹೇಳುತ್ತಾರೆ. ಹಾಗೆಂದು ಎಲ್ಲರ ಕುರಿತೂ ಸಾರಾಸಗಟಾಗಿ ಈ ಮಾತನ್ನು ಹೇಳುತ್ತಿಲ್ಲ. ಈ ನಮ್ಮ ಶಿಶುಪಾಲಕರಲ್ಲಿ ಕೆಲವರು ತಮಗೇ ಅರಿವಿಲ್ಲದೇ, ತಮ್ಮ ಮಕ್ಕಳ ಮೇಲೆ ಹೇರುವ ಅತೀ ಒತ್ತಡದಿಂದಾಗಿ ಅವರನ್ನು ಖಿನ್ನತೆಗೆ ನೂಕುವ ಮನೋವ್ಯಾಕುಲಕ್ಕೀಡುಮಾಡುವ, ಅನಿವಾರ್ಯವಾಗಿ ಮಕ್ಕಳು ಆತ್ಮಹತ್ಯೆಯಂಥ ಋಣಾತ್ಮಕ ನಿರ್ಧಾರವನ್ನೂ ಕೈಗೊಳ್ಳುವಂತೆ ಮಾಡುವ ದುಷ್ಟರಾಗಿಬಿಡುತ್ತಾರೆಂಬುದನ್ನು ವಿಷಾದದಿಂದ ಹೇಳಲೇ ಬೇಕಿದೆ.

ತಮ್ಮ ಮಗುವಿನ ಬುದ್ಧಿಮತ್ತೆ, ಸಾಮರ್ಥ್ಯ, ತಿಳಿವಿನ ಮಿತಿಯೊಂದನ್ನೂ ಅರಿಯದೇ 'ನೀನು ಮೊದಲ ರ್‍ಯಾಂಕ್ ಬರಬೇಕು', 'ಇಷ್ಟೇ ಅಂಕ ತೆಗೆದುಕೊಳ್ಳಬೇಕು', 'ಇಂತಹದ್ದೇ ಕೋರ್ಸ್ ಓದಬೇಕು'...ಇತ್ಯಾದಿ ಹೇರುತ್ತಾ ಹೋದಾಗ ಮಕ್ಕಳು ಪಾಲಕರ ಬಯಕೆ ಪೂರೈಸಲು ಹೆಣಗುತ್ತಾ ಒತ್ತಡಕ್ಕೆ ಸಿಲುಕಿಕೊಳ್ಳುತ್ತಾರೆ. ಹೀಗೆಂದೇ ಇಂದು ಮಕ್ಕಳು ತಮ್ಮ ವಯಸ್ಸು ಹಾಗೂ ಮನಸ್ಸಿನ ಸಹಜತೆ ಕಳೆದುಕೊಂಡು ಕೃತಕವಾಗಿ ಬದುಕುತ್ತಿದ್ದಾರೆ. ಅವರ ಜೀವಂತಿಕೆ ಮತ್ತು ಸೃಜನಶೀಲತೆಗೆ ಒತ್ತು ನೀಡದೇ ನಾವೀಗ ಅವರನ್ನು ಮಾರುಕಟ್ಟೆಯ ಸರಕುಗಳಾಗಿ ಮಾತ್ರ ತಯಾರಿಸುತ್ತಿರುವುದರಿಂದ ಖಿನ್ನತೆಯನ್ನು ಅನುಭವಿಸುತ್ತಾ ತಾವಾಗಲಾರದ್ದನ್ನು ಆಗಲು ಪ್ರಯತ್ನಿಸಿ ಅದು ಸಾಧ್ಯವಿಲ್ಲವೆಂದು ಅರಿವಾದಾಗ ಕೀಳರಿಮೆಯಿಂದ ನೇತ್ಯಾತ್ಮಕ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಂತ ತಲುಪುತ್ತಿದ್ದಾರೆ.

ಇರುವ ಒಂದೋ ಎರಡೋ ಮಕ್ಕಳನ್ನು ಅತೀ ಮುದ್ದಿನಿಂದ ನಾಜೂಕು ಗೊಂಬೆಗಳಾಗಿಸಿ ಬದುಕಿನ ಸಣ್ಣ ಕಷ್ಟವೂ ಅವರಿಗೆ ತಾಕದಂತೆ ಬೆಳೆಸಿ, ಸಮಸ್ಯೆಗಳೆದುರಾದಾಗ ಅದನ್ನು ಎದುರಿಸುವ ಛಲ, ಆತ್ಮವಿಶ್ವಾಸಗಳನ್ನು ಕಲಿಸದ ಪಾಲಕರು ತಾವು ಕಲಿಯಲಾರದ್ದನ್ನೆಲ್ಲಾ ತಮ್ಮ ಮಕ್ಕಳು ಕಲಿಯಬೇಕು, ತಾವು ಸಾಧಿಸಲಾಗದ್ದನ್ನು ತಮ್ಮ ಮಕ್ಕಳು ಸಾಧಿಸಬೇಕೆನ್ನುವ ಮಹದಾಸೆಯಲ್ಲಿ, ತಮ್ಮ ಮಗು 'ಸೂಪರ್ ಚೈಲ್ಡ್' ಆಗಿಬಿಡಬೇಕೆಂಬ ಕನಸಿನಲ್ಲಿ ತಮಗರಿವಿಲ್ಲದೇ ಅವರ ಪಾಲಿನ ಉಗ್ರಗಾಮಿಗಳಾಗಿಬಿಡುತ್ತಾರೆ ! ಒಮ್ಮೆ ಯೋಚಿಸಿ ನಮ್ಮ ಮಕ್ಕಳನ್ನು ಅವರ ಗುಣಸ್ವಭಾವ ಸಾಮರ್ಥ್ಯಕ್ಕನು ಗುಣವಾಗಿ ಅವರಿರುವಂತೆ ನಾವು ಬೆಳೆಸುತ್ತಿದ್ದೇವೆಯೇ ? ಅದಕ್ಕೆ ಬೇಕಾದಂತಹ ಪೂರಕ ವಾತಾವರಣವನ್ನು ನಿರ್ಮಿಸಿಕೊಟ್ಟಿದ್ದೇವೆಯೇ ? ಅಥವಾ ನಮಗೆ ಬೇಕೆಂದಂತೆ ಅವರನ್ನು ಮೌಲ್ಡ್ ಮಾಡುತ್ತಿದ್ದೇವೆಯೇ ?

ಸಮಾಜದ ಅವಶ್ಯಕತೆಗಳು ಬದಲಾದಂತೆ ಅರ್ಥ ಸಂಸ್ಕೃತಿ–ಪ್ರದರ್ಶನ ಸಂಸ್ಕೃತಿಗಳೆಡೆಗಿನ ಸೆಳೆತಗಳು ಹೆಚ್ಚಾದಂತೆ ಅದರ ಒತ್ತಡ ನಮ್ಮ ಮಕ್ಕಳ ಮೇಲೆ ತೀವ್ರವಾಗಿ ಬೀಳುತ್ತಿದೆ. ಅದನ್ನು ಪೂರೈಸಲಾಗದೇ ಮಕ್ಕಳು ಖಿನ್ನತೆಗೊಳಗಾಗುವುದೂ ಸ್ವಾಭಾವಿಕ. ಹೀಗೆಂದೇ ಇಂದು 'ಉತ್ತಮ ಪಾಲಕತ್ವ' ಕೂಡ ಯೋಚಿಸಬೇಕಾದ ಮುಖ್ಯ ವಿಷಯಗಳಲ್ಲೊಂದು. ತಮ್ಮದೇ ನೂರೆಂಟು ಸಮಸ್ಯೆಗಳು, ಒತ್ತಡಗಳಲ್ಲಿ ತಮ್ಮ ಪ್ರಪಂಚದ 'ಬೇಕು'ಗಳ ಪೂರೈಕೆಯಲ್ಲಿ ಮುಳುಗಿಹೋಗಿರುವ ಹೆಚ್ಚಿನ ಪೋಷಕರಿಗೆ ತಮ್ಮ ಮಕ್ಕಳೊಂದಿಗೆ ಗುಣಾತ್ಮಕ ಸಮಯವನ್ನು ಕಳೆಯಲು, ಅವರನ್ನು ಅರ್ಥೈಸಿಕೊಳ್ಳಲು, ಅವರ ಬೇಕು–ಬೇಡ ಗಮನಿಸಲು ಸಮಯವಿಲ್ಲ. ಆದರೆ ಸಮಯ ಸಿಕ್ಕಾಗೆಲ್ಲಾ ಅವರ ಮೇಲೆ ಬಲವಂತವಾಗಿ ತಮ್ಮ ಅಭಿಲಾಷೆಗಳನ್ನು ಮಾತ್ರ ನಿರಂತರವಾಗಿ ಹೇರುತ್ತಲೇ ಇರುತ್ತಾರೆ !

ಮಕ್ಕಳನ್ನು ಅವರ ಇಚ್ಛೆ ಸಾಮರ್ಥ್ಯಕ್ಕನುಗುಣವಾಗಿ ಸಹಜವಾಗಿ, ಮುಕ್ತವಾಗಿ ಬೆಳೆಸಿ. ಬಂದುದೆಲ್ಲವನ್ನೂ ಆತ್ಮಸ್ಥೈರ್ಯದಿಂದ ಸ್ವೀಕರಿಸುವ ಮನೋಭಾವವನ್ನು ಕಲಿಸಬೇಕಿದೆ. ಅವರ ಇಷ್ಟಾನಿಷ್ಟ, ಗುಣ, ಸ್ವಭಾವ, ಅಭಿರುಚಿಗಳನ್ನು ನಿರಂತರವಾಗಿ ಅಭ್ಯಸಿಸಿ, ವ್ಯಕ್ತಿತ್ವ ದೋಷಗಳನ್ನು ಚಿಕ್ಕಂದಿನಲ್ಲೇ ಪ್ರೀತಿಯಿಂದ ಮುರುಟಿಹಾಕಬೇಕಿದೆ. ಎಲ್ಲಕ್ಕಿಂತ ಮುಖ್ಯವಾಗಿ ಪಾಲಕರು ಅವರೊಂದಿಗೆ ಹೆಚ್ಚು ಸಮಯ ಕಳೆಯಬೇಕು. ಅವರಿಗೆ ಪೋಷಕರ ಹಣಕ್ಕಿಂತ ಅದರ ಮೂಲಕ ಅವರಿಗೆ ಒದಗಿಸುವ ಸುಖದ ಸಾಧನಗಳಿಗಿಂತ ಅವರ ಪ್ರೀತಿ, ವಾತ್ಸಲ್ಯದ ನಿರೀಕ್ಷೆ ಹೆಚ್ಚಿಗಿರುತ್ತದೆ ಎಂಬುದನ್ನು ಮರೆಯಬಾರದು. ಅವರ ಇಚ್ಛೆಗೆ ವಿರುದ್ಧವಾಗಿ ಅವರಿಗೆ

ಒತ್ತಡ ಹೇರದೇ, ಅವರ ಅಭಿರುಚಿ–ಆಸೆಗೆ ತಕ್ಕಂತೆ ತಮ್ಮ ಭವಿಷ್ಯ ರೂಪಿಸಿಕೊಳ್ಳಲು ಪ್ರೇರಣೆ, ಸಹಕಾರ ನೀಡಬೇಕು.

ಮಕ್ಕಳೊಂದಿಗಿನ ನಿರಂತರ ಒಡನಾಟದಿಂದ, ನನ್ನ ಅನುಭವದಿಂದ ಕಂಡುಕೊಂಡಿರುವುದೆಂದರೆ ಇಂದಿನ ನಮ್ಮ ಮಕ್ಕಳ ಮುಗ್ಧತೆಯನ್ನು ನಮ್ಮ ದೃಶ್ಯ ಮಾಧ್ಯಮಗಳು ಭ್ರಷ್ಟಗೊಳಿಸುತ್ತಿವೆ ಎಂಬುದು. ಅದರಲ್ಲಿ ಬರುವ ಮಾತು, ಕೃತಿ, ಹಾವಭಾವಗಳನ್ನು ಅನುಕರಿಸಲು ಮಕ್ಕಳು ಪ್ರಯತ್ನಿಸುತ್ತಾ ಇದ್ದಾರೆ. ಕುತೂಹಲದಿಂದ ಪ್ರಯೋಗಿಸಲು ನೋಡುತ್ತಿದ್ದಾರೆ. ಹೀಗಾಗಿ ಪೋಷಕರು ಮಕ್ಕಳನ್ನು ಸಾಧ್ಯವಿದ್ದಷ್ಟೂ ಟಿ.ವಿ.ಯಿಂದ ದೂರವಿಡುವ ಪ್ರಯತ್ನ ಮಾಡಬೇಕು. ಆ ಸಮಯದಲ್ಲಿ ಅವರನ್ನು ಹಾಡು, ಆಟ, ಗಿಡ ನೆಡುವುದು, ಚಿತ್ರಕಲೆ ಬಿಡಿಸುವುದರಲ್ಲಿ, ಸಣ್ಣಪುಟ್ಟ ಮನೆಗೆಲಸದಲ್ಲಿ ತೊಡಗಿಸಬೇಕು. ನಾವೂ ಅವರೊಂದಿಗೆ ಈ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಬಿಡುವು ಮಾಡಿಕೊಳ್ಳಬೇಕು. ನಾವು ಮಾತ್ರ ಟಿ.ವಿ. ನೋಡುತ್ತಾ ಮಕ್ಕಳಿಗೆ ಬೇರೇನೋ ಕೆಲಸ ಹೇಳಿದರೆ ಖಂಡಿತಾ ಅವರದನ್ನು ಮಾಡುವುದಿಲ್ಲ. ಒಂದು ಮಾತು ನಾವೆಲ್ಲರೂ ನೆನಪಿಡಬೇಕಾದ್ದು, ಮಕ್ಕಳು ನಾವು ಹೇಳಿದ್ದನ್ನು ಕೇಳಿ ಏನನ್ನೂ ಕಲಿಯುವುದಿಲ್ಲ. ಅವರು ನಾವು ಮಾಡುವುದನ್ನು ನೋಡಿ ಕಲಿಯುತ್ತಾರೆ! ನಮ್ಮ ನಡವಳಿಕೆ, ಸ್ವಭಾವ, ಮಾತು, ಹಾವಭಾವಗಳು ಅವರ ಮೇಲೆ ತೀವ್ರ ಪ್ರಭಾವ ಬೀರುತ್ತಿರುತ್ತವೆ. ಆದ್ದರಿಂದ ನಾವು ಪ್ರತಿಕ್ಷಣ ಎಚ್ಚರಿಕೆಯಿಂದ ಇರಬೇಕು! ನಮ್ಮನ್ನು ನೋಡಿ ಅವರು ಕಲಿಯುತ್ತಿರುತ್ತಾರೆ!

ಪ್ರತಿದಿನ ಮಗು ಮನೆ ಬಿಟ್ಟಾಗಿನಿಂದ, ಶಾಲೆಯಿಂದ ಮನೆಗೆ ಬರುವವರೆಗೆ ಏನೇನಾಯ್ತೆಂದು ಸ್ನೇಹದಿಂದ ವಿಶ್ವಾಸಕ್ಕೆ ತೆಗೆದುಕೊಂಡು ಗೆಳೆಯರಂತೆ ವಿಚಾರಿಸಬೇಕು. ವಿಷಯ ಸಂಗ್ರಹಿಸಬೇಕು. ವಿನಾಕಾರಣ ಪ್ರತಿ ಮಾತಿಗೂ ಬೈಯ್ಯುವುದು, ಗದರುವುದು, ಹೊಡೆಯುವುದು ಮಾಡದೇ ಎದುರಿಗೆ ಮಗುವನ್ನು ಕುಳ್ಳಿರಿಸಿಕೊಂಡು ಕಣ್ಣಲ್ಲಿ ಕಣ್ಣಿಟ್ಟು ಮಾತನಾಡುವುದರಿಂದ ಮಗುವಿಗೆ ಸ್ನೇಹ ನಂಬಿಕೆ ಬರುತ್ತದೆ. ಆಗವರು ಎಲ್ಲವನ್ನೂ ಮುಕ್ತವಾಗಿ ಹಂಚಿಕೊಳ್ಳುತ್ತಾರೆ. ಮಕ್ಕಳಿಗೆ ಯಾರಿಂದಲಾದರೂ ಏನಾದರೂ ತೊಂದರೆಗಳಾಗುತ್ತಿರುವ ಸುಳಿವು ಸಿಕ್ಕರೆ ತಕ್ಷಣ ಎಚ್ಚೆತ್ತು ಅದರೆಡೆಗೆ ಗಮನ ಹರಿಸಬೇಕು.

ಇತ್ತೀಚಿನ ದಿನಗಳಲ್ಲಿ ಮಕ್ಕಳ ಮೇಲೆ ನಡೆಯುತ್ತಿರುವ ಲೈಂಗಿಕ ದೌರ್ಜನ್ಯದ ಹಿನ್ನೆಲೆಯಲ್ಲಿ ಹಲವಾರು ಮುನ್ನೆಚ್ಚರಿಕೆ ಕ್ರಮಗಳನ್ನು ಪಾಲಕರೂ ತೆಗೆದುಕೊಳ್ಳಬೇಕು ಮತ್ತು ಮಕ್ಕಳಿಗೂ ನೀಡಬೇಕು. ಮುಖ್ಯವಾಗಿ ಮಕ್ಕಳನ್ನು ಶಾಲೆಗೆ ಕೊಂಡೊಯ್ಯುವ ಆಟೋ, ವ್ಯಾನ್ ಇತ್ಯಾದಿ ವಾಹನ ಚಾಲಕರ/ಮಾಲೀಕರ ಸಂಪೂರ್ಣ ವಿವರಗಳನ್ನು ತಿಳಿದುಕೊಂಡಿರಬೇಕು ಮತ್ತು ಅವರ ದೂರವಾಣಿ ಸಂಖ್ಯೆಗಳನ್ನು ಪಡೆದಿರಬೇಕು. ಅವರ ನಡವಳಿಕೆಯು ಮಗುವಿನ ಜೊತೆಗೆ ಹೇಗಿದೆ ಎನ್ನುವುದನ್ನು ಕುರಿತು ಆಗಾಗ್ಗೆ ವಿಚಾರಿಸುತ್ತಿರಬೇಕು. ಅಪರಿಚಿತ ವ್ಯಕ್ತಿಗಳಿಂದ ಮಕ್ಕಳು ಆದಷ್ಟೂ ದೂರವಿರುವಂತೆ ಹಾಗೂ ಅವರಿಂದ ಯಾವುದೇ ವಸ್ತುಗಳನ್ನು ಸ್ವೀಕರಿಸದಂತೆ ತಿಳಿವಳಿಕೆ ನೀಡಬೇಕು. ಪರಿಚಿತ ವ್ಯಕ್ತಿಗಳೊಂದಿಗೆ ಕೂಡ ಆತ್ಮೀಯತೆಯಿಂದ ಇರುತ್ತಲೇ ಒಂದು ದೂರವನ್ನು ನಿರ್ವಹಿಸುವ ಕಲೆಯನ್ನು ಮಕ್ಕಳಿಗೆ ತಿಳಿಸಿ, ಕಲಿಸಿಕೊಡಬೇಕು. ಮಕ್ಕಳಿಗೆ ವೈಯಕ್ತಿಕ ಸುರಕ್ಷತೆ ಮತ್ತು ದೌರ್ಜನ್ಯಗಳ ಅರಿವು ಮೂಡಿಸುವುದು ಅತ್ಯಂತ ಮುಖ್ಯವಾದುದು. ಕತ್ತಲೆಯಾಗುವ ಮೊದಲೇ ಆದಷ್ಟೂ ಮಕ್ಕಳು ಮನೆ ಸೇರುವಂತೆ ನೋಡಿಕೊಳ್ಳಬೇಕು. ಮಕ್ಕಳು ಯಾವುದೇ ಕಾರಣಕ್ಕಾದರೂ ಅಸಹಜತೆಯಿಂದ ವರ್ತಿಸುತ್ತಿದ್ದರೆ ತಕ್ಷಣ ಅವರೊಂದಿಗೆ ಸಮಾಲೋಚಿಸಿ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನಿಸಬೇಕು. ಮಕ್ಕಳು ಮೊಬೈಲ್, ಫೋನ್, ಇಂಟರ್‌ನೆಟ್, ಫೇಸ್‌ಬುಕ್ ಮುಂತಾದ ಸಾಮಾಜಿಕ ಜಾಲತಾಣಗಳನ್ನು ಅನಾವಶ್ಯಕವಾಗಿ ಮತ್ತು ಹಿರಿಯರ ಅನುಪಸ್ಥಿತಿಯಲ್ಲಿ ಬಳಸುವುದನ್ನು ತಡೆಯಬೇಕು.

ಲೈಂಗಿಕ ದುರ್ಬಳಕೆ ಅಥವಾ ಶೋಷಣೆಯ ಕುರಿತು ಹೆಚ್ಚಿನಂಶ ಹೆತ್ತವರು ತಮ್ಮ ಮಕ್ಕಳೊಂದಿಗೆ ಮಾತನಾಡಲು ಹಿಂಜರಿಯುತ್ತಾರೆ. ಲೈಂಗಿಕ ವರ್ತನೆಗಳ ಬಗ್ಗೆ ತಮ್ಮ ಮಕ್ಕಳು ಕೇಳಬಹುದಾದ ಪ್ರಶ್ನೆಗಳಿಗೆ ಏನುತ್ತರಿಸಬೇಕೆಂದು ತಿಳಿಯದೇ ಮುಜುಗರಪಡುತ್ತಾರೆ. ಆದರೆ ಇಂದು ಮಕ್ಕಳೊಂದಿಗೆ ಲೈಂಗಿಕ ದುರ್ಬಳಕೆಯ ಬಗ್ಗೆ ಅವಶ್ಯಕವಾಗಿ ಮಾತಾಡಲೇಬೇಕಿದೆ. ಇಲ್ಲಿ ಸೆಕ್ಸ್ ಎಂಬುದಕ್ಕೆ ಒತ್ತು ಕೊಡದೇ ಸುರಕ್ಷತೆಯನ್ನು ಮುಖ್ಯವಾಗಿ ಪರಿಗಣಿಸಬೇಕಾಗುತ್ತದೆ. ಬೇರೆಲ್ಲಾ ಸುರಕ್ಷಿತತೆಯ ಬಗ್ಗೆ ಹೇಳುವಂತೆಯೇ ಸಹಜವಾಗಿ



ಅಸಭ್ಯ ಮತ್ತು ಅಸುರಕ್ಷಿತ ಸ್ಪರ್ಶದ ಕುರಿತೂ ಮಕ್ಕಳಿಗೆ ಹೇಳಿಕೊಡುವುದು ಅನಿವಾರ್ಯವಾಗಿದೆ. ಶೇಕಡ ೫೦ರಷ್ಟು ಮಕ್ಕಳು ತಾವು ಒಂದಲ್ಲಾ ಒಂದು ಬಗೆಯ ಲೈಂಗಿಕ ಕಿರುಕುಳ ಅನುಭವಿಸಿಯೇ ಇರುತ್ತಾರೆ. ಇದರಲ್ಲಿ ಗಂಡು–ಹೆಣ್ಣು ಯಾವ ಭೇದವೂ ಇಲ್ಲ. ಎರಡೂ ಲಿಂಗದ ಮಕ್ಕಳು ಸಮಪ್ರಮಾಣದಲ್ಲಿ ಶೋಷಣೆ ಅನುಭವಿಸುತ್ತಾರೆ. ಹೀಗಾಗಿ ಇಬ್ಬರಿಗೂ ತಿಳಿವಳಿಕೆ ನೀಡಬೇಕು. ಮುಖ್ಯವಾಗಿ, ಎಂಥದೇ ವಿಷಮ ಪರಿಸ್ಥಿತಿ ಎದುರಾದರೂ ನಿಮ್ಮನ್ನು ಕಾಪಾಡಲು ನಾವಿದ್ದೇವೆ ಎಂಬ ಧೈರ್ಯ ಮತ್ತು ನಂಬಿಕೆಯನ್ನು ಮಕ್ಕಳಿಗೆ ನೀಡಬೇಕು.

ನಾವೆಷ್ಟೇ ಆಧುನಿಕರು, ವಿದ್ಯಾವಂತರು ಎಂದುಕೊಂಡರೂ ಇಂದಿಗೂ ಗಂಡು–ಹೆಣ್ಣುಮಕ್ಕಳನ್ನು ತಾರತಮ್ಯದಿಂದ ನೋಡುವುದು, ನಮಗೇ ಅರಿವಿಲ್ಲದೆ ಗಂಡು ಮಕ್ಕಳಲ್ಲಿ ಶ್ರೇಷ್ಠತೆಯನ್ನು, ಹೆಣ್ಣುಮಕ್ಕಳು ಅವರಿಗಿಂತ ಕಡಿಮೆ ಎನ್ನುವಂತೆಯೇ ಬೆಳೆಸಲಾಗುತ್ತಿದೆ. ನಾವು ಮಕ್ಕಳಿಗೆ ಚಿಕ್ಕಂದಿನಲ್ಲೇ ಈ ಭಾವನೆ ಬರದಂತೆ ಅವರಿಬ್ಬರೂ ಸಮಾನರು, ಸಮಾನವಾಗಿ ಕೆಲಸಗಳನ್ನೂ, ಜವಾಬ್ದಾರಿಗಳನ್ನೂ ಹಂಚಿಕೊಂಡು ಮಾಡಬೇಕೆನ್ನುವುದನ್ನು ಕಲಿಸಬೇಕಾಗುತ್ತದೆ. ಆಗ ಮಾತ್ರ ದೊಡ್ಡವರಾದ ನಂತರ ಈ ಒತ್ತಡದ, ಗಂಡು–ಹೆಣ್ಣು ಇಬ್ಬರೂ ಹೊರಗೆ ಹೋಗಿ ದುಡಿಯಬೇಕಾಗಿರುವ ಈ ದಿನಗಳಲ್ಲಿ ಸಮಾನತೆಯಿಂದ ಸಂತೋಷದಿಂದ ಬದುಕಲು ಸಾಧ್ಯವಾಗುತ್ತದೆ.

ಮಗು ಹುಟ್ಟುತ್ತಲೇ ವಿಶ್ವಮಾನವನಾಗಿರುತ್ತದೆ. ಅದಕ್ಕೆ ಯಾವುದೇ ಕೊಳಕಿನ ಸೋಂಕಿರುವುದಿಲ್ಲ. ಆದರೆ ಬೆಳೆಯುತ್ತಾ ಹೋದಂತೆ ಮಕ್ಕಳಲ್ಲಿ ಜಾತಿ–ಧರ್ಮ, ಗಂಡು–ಹೆಣ್ಣು ತಾರತಮ್ಯ, ಮೇಲು–ಕೀಳಿನ ವ್ಯತ್ಯಾಸ, ಸಣ್ಣತನ, ಕೆಟ್ಟ ಭಾವನೆಗಳನ್ನು ನಾವೇ ಬಿತ್ತುತ್ತಾ ಹೋಗುತ್ತೇವೆ. ಆದರೆ ಮಗುವನ್ನು ಅದರ ಎಲ್ಲಾ ಮುಗ್ಧತೆಗಳೊಂದಿಗೆ ಯಾವುದೇ ಕಲ್ಮಶಗಳು ಸೋಕದಂತೆ ಆದರೂ ದುಷ್ಟರಿಂದ ಎಚ್ಚರಿಕೆಯಿಂದಿರುವಂತೆ ಕಲಿಸಬೇಕಿರುವುದೇ ನಿಜವಾದ ಪಾಲಕರ ಕರ್ತವ್ಯ.

ಮಕ್ಕಳಿಗೆ ತಾವು ಒಳಗೊಳ್ಳುವ ಅನುಭವ, ಕಷ್ಟಸಹಿಷ್ಣುತೆ, ಕೌಟುಂಬಿಕ ಜವಾಬ್ದಾರಿ, ಸಮಸ್ಯೆಗಳನ್ನು ಎದುರಿಸುವ ಛಲದಿಂದ ದೃಢತೆ ಉಂಟಾಗುತ್ತದೆ. ದಿಟ್ಟತೆ, ಸಹಜತೆ ಮತ್ತು ಮುಕ್ತತೆಗಳು ಅವರ ವ್ಯಕ್ತಿತ್ವದ ಭಾಗವಾಗಿಬಿಡುತ್ತವೆ. ಪ್ರಪಂಚ ಎಷ್ಟೊಂದು ವಿಶಾಲವಾಗಿದೆ, ಬದುಕಿಗೆಷ್ಟೊಂದು ಮಾರ್ಗಗಳಿವೆ, ಎಲ್ಲರೂ ಎಂತಹುದೇ ನಿಕೃಷ್ಟ ಸಂದರ್ಭದಲ್ಲಿಯೂ ಸ್ವಾಭಿಮಾನದಿಂದ ಬದುಕಲು ನೂರಾರು ದಾರಿಗಳಿವೆ. ಒಂದು ದಾರಿ ಮುಚ್ಚಿತೆಂದರೂ ಕಷ್ಟಪಡಲು ಸಿದ್ಧವಿರುವ ಚೈತನ್ಯಗಳಿಗೆ ಹಲವಾರು ಪರ್ಯಾಯಗಳಿವೆ ಎಂಬುದನ್ನು ಮಕ್ಕಳಿಗೆ ಸುತ್ತಲ ಸಮಾಜದ ಉದಾಹರಣೆಗಳಿಂದ ತೋರಿಸಿಕೊಡುತ್ತಿರಬೇಕು. ಪ್ರತಿ ಮಗುವೂ ಒಂದು ವ್ಯಕ್ತಿ ಅದನ್ನು ನಾವು ಗೌರವಿಸುವ ಮೂಲಕ ಆ ಮಗುವಿನಲ್ಲೂ ಇರುವ ವಿಶೇಷತೆಯನ್ನು ಗುರುತಿಸುವ ಕೆಲಸವನ್ನು ಮಾಡಿದರೆ ಖಂಡಿತಾ ನಮ್ಮ ಮಕ್ಕಳು ಋಣಾತ್ಮಕ ಆಲೋಚನೆಯಿಂದ ಸಮಸ್ಯೆಗಳಾಗದೇ, ಸಮಾಜದ ಧೀಮಂತ ವ್ಯಕ್ತಿಗಳಾಗುತ್ತಾರೆ. ಬನ್ನಿ ನಮ್ಮ ಮಕ್ಕಳನ್ನು ಪ್ರೀತಿಯಿಂದ ಸಹನೆಯಿಂದ ಅವರಿಚ್ಛೆಯಂತೆ ರೂಪಿಸೋಣ.

**ರೂಪ ಹಾಸನ**

'ಪ್ರೇರಣ', ಸೇಂಟ್ ಜೋಸೆಫ್ ಶಾಲೆ ರಸ್ತೆ, ಉತ್ತರ ಬಡಾವಣೆ

ಹಾಸನ – ೫೭೩ ೨೦೧




'ದೇಶಪ್ರೇಮ' ಎಂಬುದು ಮೇಲುನೋಟಕ್ಕೆ ಗೋಚರಿಸುವ ಅರ್ಥವನ್ನು ಹೊಂದಿಲ್ಲ. ಅದಕ್ಕೆ ಅಪಾರ ಆಯಾಮಗಳಿವೆ. ವಿಶ್ವಮಾನವತೆ ಮತ್ತು ದೇಶಪ್ರೇಮ ಒಂದಕ್ಕೊಂದು ಮುಖಾಮುಖಿಯಾಗಬೇಕಿಲ್ಲ. ಅವು ಒಂದಕ್ಕೊಂದು ಪೂರಕವಾದ ಆಚರಣೆಗಳು. 'ದೇಶಪ್ರೇಮ' ದ್ವೇಷ, ಪ್ರಚೋದನೆಗೆ ಬಳಕೆಯಾಗದೆ ಪ್ರೀತಿ ಮತ್ತು ಕಾಳಜಿಯ ಸಂಕೇತವಾಗಬೇಕು. ಇತ್ತೀಚಿನ ದಿನಗಳಲ್ಲಿ 'ದೇಶಪ್ರೇಮ' ಎನ್ನುವುದು ಶಬ್ದಗಳ ಉಚ್ಚಾರಣೆಗೆ ಸೀಮಿತಗೊಂಡು ಒಂದು ರಾಜಕೀಯ ಅಸ್ತ್ರವಾಗಿ, ಒಂದು ಗುಂಪಿನ ಹಿತಾಸಕ್ತಿಗೆ ಬಳಕೆಯಾಗುವ ಅಪಾಯಕ್ಕೊಳಗಾಗಿದೆ. ಇಂಥ ಸಂದರ್ಭದಲ್ಲಿ ಹೊಸತು ವಿಶೇಷ ಸಂಚಿಕೆಯ 'ಓದುಗರ ವೇದಿಕೆ'ಗೆ 'ದೇಶಪ್ರೇಮ'ದ ಕುರಿತು ಬರೆಯಲು ಓದುಗರಿಗೆ ವಿನಂತಿಸಲಾಗಿತ್ತು. ಪ್ರಜ್ಞಾವಂತ 'ಹೊಸತು' ಓದುಗರು ಸ್ಪಂದಿಸಿ ತಮ್ಮ ಅಭಿಪ್ರಾಯಗಳನ್ನು ಕಳಿಸಿದ್ದಾರೆ. ಪತ್ರಿಕೆಗೆ ನೂರಾರು ಲೇಖನಗಳು ಬಂದಿವೆ. ಎಲ್ಲವನ್ನೂ ಪ್ರಕಟಿಸಲು ಸ್ಥಳಾಭಾವವಿರುವುದರಿಂದ ಆಯ್ದ ಲೇಖನಗಳನ್ನು ಪ್ರಕಟಿಸಲಾಗಿದೆ. ನಮ್ಮ ಮನವಿಗೆ ಸ್ಪಂದಿಸಿ ಲೇಖನ ಕಳಿಸಿದ ಎಲ್ಲರಿಗೂ 'ಹೊಸತು' ಅಭಿನಂದನೆಗಳನ್ನು ಸಲ್ಲಿಸುತ್ತದೆ. ಎಲ್ಲ ಲೇಖಕರೂ ತಮ್ಮ ಜನಪರ, ಜೀವಪರ ಚಿಂತನೆಗಳನ್ನು 'ಹೊಸತು'ವಿನಲ್ಲಿ ಮುಂದೆಯೂ ಹಂಚಿಕೊಳ್ಳಬೇಕೆಂದು ವಿನಂತಿಸಿಕೊಳ್ಳುತ್ತೇವೆ.

ದೇಶವೆಂಬುದು ಕೇವಲ ಕಲ್ಲು ಮಣ್ಣುಗಳ ಭೌಗೋಳಿಕ ಪ್ರದೇಶವಲ್ಲ. ಕಲ್ಲು, ಮಣ್ಣು, ಗುಡ್ಡ, ನದಿ, ಬೆಟ್ಟ, ಸಾಗರಗಳ ಜೊತೆ ಬದುಕುವ ಮಾನವನನ್ನು ಸೇರಿ ಸಕಲ ಜೀವರಾಶಿಯನ್ನೂ ಒಳಗೊಂಡ ಒಂದು ಪ್ರದೇಶ. ಪ್ರೀತಿ, ಸಹನೆ, ಸಹಬಾಳ್ವೆ, ಸೌಹಾರ್ದತೆ, ಪ್ರಾಮಾಣಿಕತೆ, ತ್ಯಾಗ, ಸ್ವಾವಲಂಬನೆ ಇವೆಲ್ಲವೂ ದೇಶಪ್ರೇಮದ ಭಾಗವೇ. ಒಂದು ದೇಶದ ಪ್ರಜೆಯಾಗುತ್ತಲೇ ವಿಶ್ವಮಾನವನಾಗುವುದು ದೇಶಪ್ರೇಮದ ಅಂಶವೇ ಎಂದು 'ಹೊಸತು'ವಿನ ನೆಮ್ಮದಿಯ ನಾಳೆ ನಮ್ಮದು ಎಂಬ ಆಶಯಕ್ಕೆ ಪೂರಕವಾಗಿ ಸ್ಪಂದಿಸಿದ ಎಲ್ಲ ಲೇಖಕರಿಗೂ ವಂದನೆಗಳು.

–ಸಂ.

## ವೈವಿಧ್ಯವೇ ಜೀವನದ ರಹಸ್ಯ

'ದೇಶಪ್ರೇಮ' ಎನ್ನುವುದು ಮನುಷ್ಯನನ್ನು ಹೊರತುಪಡಿಸಿದರೆ ಸೃಷ್ಟಿಯ ಮತ್ತಾವ ಜೀವಿಗಳಿಗೂ ಗೊತ್ತಿರದ ವಿಚಾರ. ಅವು ಎಲ್ಲ ಗಡಿಗಳನ್ನೂ ಮೀರಿ ನಿಸರ್ಗತತ್ತ್ವಕ್ಕೆ ಅನುಗುಣವಾಗಿ ಹೊಂದಿಕೊಂಡು ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುತ್ತವೆ.

ವಿಶ್ವದ ಇತರ ರಾಷ್ಟ್ರಗಳಿಗೆ ಹೋಲಿಸಿದರೆ ಭಾರತದ ಸಂವಿಧಾನ ಸರ್ವೋತ್ಕೃಷ್ಟವಾದುದು ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಏಕೆಂದರೆ ಅದು ಯಾವುದೇ ಒಂದು ಧರ್ಮವನ್ನು ರಾಷ್ಟ್ರೀಯ ಧರ್ಮವನ್ನಾಗಿ ಘೋಷಿಸಿಲ್ಲ. ಬದಲಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ಪ್ರಜೆಯ ಮೂಲಭೂತ ಹಕ್ಕು ಎಂದು ಪರಿಗಣಿಸಿದೆ. ಭಾರತ ದೇಶದ ಪ್ರಜೆ ತಾನು ಹುಟ್ಟಿದ ಧರ್ಮವನ್ನು ಆಚರಿಸುವ ಮೂಲಭೂತ ಹಕ್ಕನ್ನು ಹೊಂದಿರುವಂತೆ ಬೇಕೆಂದರೆ ಅನ್ಯಮತವನ್ನು ಸ್ವೀಕರಿಸುವ ಸ್ವಾತಂತ್ರ್ಯವನ್ನೂ ಹೊಂದಿರುತ್ತಾನೆ. ಅಲ್ಲದೆ ಯಾವುದೇ ಧರ್ಮವನ್ನು ನಂಬದವನು (ನಾಸ್ತಿಕ) ಕೂಡ ತನ್ನಿಚ್ಛೆಯಂತೆ ಬದುಕುವ ಮೂಲಭೂತ ಹಕ್ಕನ್ನು ಹೊಂದಿರುತ್ತಾನೆ. ಬಹುತ್ವದಲ್ಲಿ ಏಕತ್ವವನ್ನು ಸಾಧಿಸಿ ಆದರ್ಶವಾಗಿರುವ ದೇಶ ನಮ್ಮ ಭಾರತ.

ಭಾರತವನ್ನು ಏಕ ಧರ್ಮದ ರಾಷ್ಟ್ರವನ್ನಾಗಿಸುವ ಹುನ್ನಾರ ಹಿಂದಿನಿಂದಲೂ ನಡೆಯುತ್ತಲೇ ಬಂದಿದೆ. ಅದರ ಅಂತರಂಗ ಸ್ವಾರ್ಥ, ಇಂದಿಗೂ ಅದರ ನಾಡಿಯ ಮಿಡಿತ ನಿಂತಿಲ್ಲ. ಸ್ವಾಮಿ ವಿವೇಕಾನಂದರು "ಯಾವುದೋ ಒಂದು ಧರ್ಮ ಪ್ರಪಂಚಕ್ಕೆ ಅನ್ವಯಿಸುವ ಧರ್ಮವಾದರೆ ಅದು ಬಹಳ ಅಪಾಯಕರ. ಅದು ಮಾನವನನ್ನು ಅಧೋಗತಿಗೆ ತರುವುದು. ವೈವಿಧ್ಯವೇ ಜೀವನದ ರಹಸ್ಯ. ಇದು ಪೂರ್ಣ






ನಾಶವಾದರೆ ಸೃಷ್ಟಿಯೇ ನಾಶವಾಗುವುದು. ಪ್ರತಿಯೊಬ್ಬರೂ ಒಂದೇ ಧರ್ಮಕ್ಕೆ ಸೇರಿ ಒಂದೇ ಮಾರ್ಗವನ್ನು ಅನುಸರಿಸುವ ದುರ್ದಿನ ಪ್ರಪಂಚಕ್ಕೆ ಬಾರದಿರಲಿ. ಆಗ ಧರ್ಮ ಮತ್ತು ಆಧ್ಯಾತ್ಮಿಕ ಭಾವನೆ ನಾಶವಾಗುವುದು" ಎಂದಿದ್ದಾರೆ.

ಈ 'ದೇಶಪ್ರೇಮ'ವೆಂಬ ನಕಾರಾತ್ಮಕ ದೃಷ್ಟಿಯಿಂದಾಗಿ ಜೀವಸಂಕುಲವನ್ನೇ ನಾಶಮಾಡುವ ಆಟಂಬಾಂಬುಗಳು ತಯಾರಾಗಿವೆ, ಆಗುತ್ತಿವೆ. ಇದರ ಬದಲಿಗೆ ಸಕಾರಾತ್ಮಕವಾದ ವಿಶ್ವಮಾನವತ್ವ ಹಾಗೂ ವಿಶ್ವ ಸರ್ಕಾರ ಸಾಕಾರಗೊಳ್ಳಬೇಕು.

❑ **ಜ. ಹೊ. ನಾರಾಯಣಸ್ವಾಮಿ,** ಹಾಸನ

* * *

## ವಿವಿಧ ಪುಷ್ಪಗಳ ಬೃಂದಾವನ

**ಹಿಂ**ದೂಸ್ತಾನವೆಂದರೆ, ಕೇವಲ ಒಂದು ಕುಲ, ಗೋತ್ರಕ್ಕೆ ಸೀಮಿತವಾದ ಭಾಗವಲ್ಲ, ಅದು ನೈತಿಕ ಮೌಲ್ಯಗಳ ಮಾನವೀಯ ನೆಲೆಗಳ ಅಸೀಮ, ಅನಂತವಾದ, ಅಗಣಿತ ಭಾವನೆಗಳನ್ನು ತುಂಬಿಕೊಂಡಿರುವ ಮಹಾಲಯ ವಾಗಿದೆ. ನೂರಾರು ಧರ್ಮ ಭಾಷೆಗಳ, ಸಾವಿರಾರು ಸಂಪನ್ಮೂಲಗಳ ಸಿರಿಸಂಪತ್ತುಗಳ, ಅತ್ಯುನ್ನತ ಸಂಸ್ಕೃತಿ ಸಂಸ್ಕಾರಗಳ ಆದರ್ಶ ದೇಶವಾಗಿದೆ. ವಿವಿಧತೆಯಲ್ಲಿ ಏಕತೆಯ ಪುಷ್ಪಗಳನ್ನು ಅರಳಿಸುವ ವಿಶಾಲ ಬೃಂದಾವನ ವಾಗಿದೆ. ಪ್ರಜೆಗಳೇ ಇದರ ಸುಂದರ ಪುಷ್ಪಗಳು, ಪ್ರಗತಿ ಉನ್ನತಿ, ಜ್ಞಾನ, ವಿಜ್ಞಾನ, ತಂತ್ರಜ್ಞಾನ, ಸಿದ್ಧಿ, ಸಾಧನೆ, ಸಮತೆ, ಸ್ಮೈರಣೆ, ವಿಶ್ವಮಾನವತೆಯ ಬೆಳಕನ್ನು ಚೆಲ್ಲುವ ಅನರ್ಘ್ಯ ರತ್ನಗಳು. ವೀರಪುರುಷರು, ವೀರಾಗ್ರಣಿಗಳು, ವೀರಯೋಧರು, ವೀರರಾಜರು, ತಮ್ಮ ತ್ಯಾಗ ಬಲಿದಾನಗಳಿಂದ, ರಕ್ತಸಿಂಚನದಿಂದ ಈ ಭೂಮಿಯನ್ನು ಪಾವನಗೊಳಿಸಿದ್ದಾರೆ. ಲಕ್ಷೋಪಲಕ್ಷ ಪ್ರಜೆಗಳು ಚಿತ್ರವಿಚಿತ್ರ ಹಿಂಸೆಗಳನ್ನು ಸಹಿಸಿ ವೀರ ಹುತಾತ್ಮರಾಗಿ ಭಾರತವನ್ನು ವೈರಿಗಳಿಂದ ರಕ್ಷಿಸಿದ್ದಾರೆ, ಅವರ ಹೋರಾಟದ ಫಲದಿಂದ ಈ ದೇಶವು ಸ್ವಾತಂತ್ರ್ಯ ಪಡೆದಿದೆ. ಇಂಥ ಹೆಮ್ಮೆಯ ಹಿಂದೂಸ್ತಾನದ ರಕ್ಷಣೆಯ ಹೊಣೆಯು ಈಗ ನಮ್ಮ ಮೇಲಿದೆ. ಕ್ಷುಲ್ಲಕ ವಿಷಯಗಳಲ್ಲಿ ಕಚ್ಚಾಡುವ ಬದಲು ಸಂಕುಚಿತ ಬುದ್ಧಿಯಿಂದ ಹೊರಬಂದು ಒಳಜಗಳಗಳನ್ನು ಬಿಟ್ಟು ಭಾರತಾಂಬೆಯ ಹೆಮ್ಮೆಯ ಮಕ್ಕಳಾಗಿ ದೇಶದ ಸರ್ವತೋಮುಖ ಪ್ರಗತಿಗಾಗಿ ಏಕೋದರ ಸಹೋದರರಂತೆ ಬಾಳೋಣ.

ಅಂತರಂಗದಲ್ಲಿ ಹಗೆತನದ ಅಸುರರನ್ನು ಬೆಳೆಸಿ, ಬಹಿರಂಗದಲ್ಲಿ ದೇಶಭಕ್ತರೆನಿಸಿಕೊಳ್ಳಲು, ಉದ್ದುದ್ದ ಭಾಷಣಗಳನ್ನು ಬಿಗಿದು, ಜಯಘೋಷ ಗಳನ್ನು ಕೂಗಿ ಪ್ರಜೆಗಳನ್ನು ಭ್ರಮೆಗಳಲ್ಲಿಟ್ಟು ಮನಮಸ್ತಕಗಳಲ್ಲಿ ದ್ವೇಷಾಸೂಯೆ, ಅಸಹಿಷ್ಣುತೆಗಳನ್ನು ಭುಗಿಲೇಳಿಸಿ ಅಧಿಕಾರದಾಸೆಗಾಗಿ ಬೆಸೆದ ಹೃದಯಗಳನ್ನು ಛಿದ್ರಗೊಳಿಸಿ, ದೇಶದ ಏಕತೆಯನ್ನು ಮುರಿದು ಕೋಮು ದಳ್ಳುರಿಗಳನ್ನು ಹರಡಿಸಿದರೆ, ನಾವೇ ಹಚ್ಚಿದ ಕೋಮಾಗ್ನಿಯಲ್ಲಿ ಉರಿದು ಭಸ್ಮವಾಗುತ್ತೇವೆ. ಬೆಂಕಿಯು ಸೌದೆಯನ್ನು ಸುಡುವಂತೆ, ದ್ವೇಷಾಗ್ನಿಯು ನಮ್ಮನ್ನೇ ಸುಡುತ್ತದೆ. ನಮ್ಮ ಅಂಗಾಂಗಗಳಲ್ಲಿ ನಾವೇ ಸಾಕಿಕೊಂಡಿರುವ, ಜಾತೀಯತೆಯ ವಿಷಜಂತುಗಳನ್ನು ಕಿತ್ತೊಗೆಯದಿದ್ದರೆ ಅವುಗಳು ನಮ್ಮನ್ನೇ ಕಚ್ಚಿ ಕಚ್ಚಿ ಶರೀರವೆಲ್ಲಾ ವಿಷವಾಗಿಸಿ ನರಕಯಾತನೆಗಳನ್ನು ಕೊಟ್ಟು ಸಾಯಿಸಿಬಿಡುತ್ತವೆ. ನಾವೇ ತೋಡಿದ ಗುಂಡಿಗಳು ನಮಗೇ ಗೋರಿಗಳಾಗಬಹುದು, ನಾವೇ ದಹಿಸಿದ ಬೆಂಕಿಯು ನಮ್ಮ ಮನೆಗಳನ್ನೇ ಭಸ್ಮವಾಗಿಸಬಹುದು. ಪರಿಸ್ಥಿತಿ ಗಂಭೀರವಾಗುವ ಮುನ್ನ ಎಚ್ಚೆತ್ತುಕೊಳ್ಳೋಣ. ಸರ್ವಧರ್ಮ ಭಾಷೆಗಳನ್ನು ಅಂತರಾಳದಿಂದ ಗೌರವಿಸುವ ಸದ್ಗುಣಗಳನ್ನು ಬೆಳೆಸಿಕೊಳ್ಳೋಣ. ನಮ್ಮ ಭಾಷೆಗಳ ಜೊತೆಜೊತೆಗೆ ತಾಯ್ನಾಡಿನ ಧರ್ಮ, ಭಾಷೆ, ಸಂಸ್ಕೃತಿ, ಸಂಸ್ಕಾರಗಳನ್ನು ಉಳಿಸಿ, ಬೆಳೆಸಿ, ರಕ್ಷಿಸಿ, ಪ್ರೀತಿಸುವ ಮಾನವೀಯ ಮೌಲ್ಯಗಳಿಂದ, ನಮ್ಮ ಹೃದಯಗಳನ್ನು ಅರಿವಿನ ವಜ್ರಗಳಾಗಿಸೋಣ.

ಪ್ರಜೆಗಳು ನಿತ್ಯದ ವ್ಯಾಪಾರ ವಹಿವಾಟು, ಕೂಲಿ ಕಾಯಕಗಳಲ್ಲಿ, ಸಭೆ ಸಮಾರಂಭಗಳಲ್ಲಿ, ಸರ್ಕಾರಿ ಹುದ್ದೆಗಳಲ್ಲಿ, ಕಂಪನಿ ಕೆಲಸಗಳಲ್ಲಿ, ಸಂಘ ಸಂಸ್ಥೆಗಳ ಕಾರ್ಯಗಳಲ್ಲಿ, ಮದುವೆ ಹಬ್ಬಗಳಂತಹ ಸಡಗರ ಗಳಲ್ಲಿ ಮಗ್ನರಾಗಿರುವಾಗ ಧೀರ ಸೈನಿಕರು ಐಷಾರಾಮಿ ಜೀವನ ವನ್ನು ತೊರೆದು ತಂದೆ, ತಾಯಿ, ಮಡದಿ, ಮಕ್ಕಳು, ಅಣ್ಣ, ತಂಗಿ, ಬಂಧು, ಬಳಗಗಳಿಂದ ಸಾವಿರಾರು ಮೈಲಿಗಳ ದೂರದಲ್ಲಿದ್ದು ದೇಶದ ಗಡಿಗಳನ್ನು ಕಾಯುತ್ತ ಭಯೋತ್ಪಾದಕರನ್ನು, ದೇಶದ್ರೋಹಿಗಳನ್ನು ಒಳನುಸುಳಕೋರರನ್ನು ಸದೆ ಬಡಿಯುವ ರಾಷ್ಟ್ರ ರಕ್ಷಣೆಯ ಮಹಾನ್ ಕಾಯಕದಲ್ಲಿ ಮಗ್ನರಾಗಿರುತ್ತಾರೆ. ಮಾತೃಭೂಮಿಯನ್ನು ರಕ್ಷಿಸುತ್ತಲೇ ರಣರಂಗದಲ್ಲಿ ಹೋರಾಡುತ್ತಾ ಬಾಂಬ್, ಬಂದೂಕುಗಳಿಗೆ ಎದೆಯೊಡ್ಡಿ ತಮ್ಮ ದೇಹಗಳೆಲ್ಲಾ ಛಿದ್ರವಾದರೂ, ದೇಹದಲ್ಲಿ ರಕ್ತದ ಹನಿಹನಿಯೂ ದೇಶ ರಕ್ಷಣೆಗಾಗಿ ಅರ್ಪಿಸಿ ವೀರಮರಣವನ್ನು ಅಪ್ಪಿಕೊಳ್ಳುತ್ತಾರೆ. ಹೆಮ್ಮೆಯ ವೀರಪುತ್ರರಾಗಿ ನಿಜ ನಾಯಕರಾಗಿ ವೀರ ಹುತಾತ್ಮರಾಗಿ ನೈಜ ದೇಶಭಕ್ತರಾಗಿ ಜನಮಾನಸಗಳಲ್ಲಿ ಅಮರವಾಗಿರುತ್ತಾರೆ. ಧೈರ್ಯ, ಶೌರ್ಯ, ಸಾಹಸ ಮತ್ತು ದೇಶಪ್ರೇಮಗಳ ಕಲ್ಪವೃಕ್ಷಗಳನ್ನು ಬೆಳೆಸಿ ದೇಶವನ್ನು ಉಳಿಸಿ ಹೋಗಿರುವ ಇಂತಹ ಧೀರಕಲಿಗಳ ವೀರಹುಲಿಗಳ ಪವಿತ್ರಪಾವನವಾದ ತ್ಯಾಗಬಲಿದಾನವನ್ನು ನಾವೆಷ್ಟು ಸ್ಮರಿಸುತ್ತಿದ್ದೇವೆ, ನಾವು ಎಷ್ಟು ಗೌರವಿಸುತ್ತಿದ್ದೇವೆ ಎಂದು ಆತ್ಮಾವಲೋಕನ ಮಾಡಬೇಕಿದೆ.

❑ **ಯು. ಸಿರಾಜ್ ಅಹಮದ್ ಸೊರಬ,** ನೆಲಮಂಗಲ

* * *

## ಯಾವುದು ದೇಶಪ್ರೇಮ ?

**ಚಿ**ತ್ರಮಂದಿರಗಳಲ್ಲಿ ರಾಷ್ಟ್ರಗೀತೆ ಹಾಡುವುದೆ ? ನಿತ್ಯ ಪಂಚಾಯತಿಗಳ ಮೇಲೆ ಧ್ವಜಾರೋಹಣ ಮಾಡುವುದೆ ? ಭಾರತ ಮಾತಾಕಿ ಜೈ ಅನ್ನುವುದೆ ? ಬಿ.ಜೆ.ಪಿ./ಎ.ಬಿ.ವಿ.ಪಿ./ಆರ್.ಎಸ್.ಎಸ್. ಮುಂತಾದ ಕೆಲ ಸಂಘಟನೆಗಳಲ್ಲಿ ಮಾತ್ರ ಸದಸ್ಯರಾಗಿರುವುದೆ? ಮುಸ್ಲಿಂರನ್ನು ಹಾಗೂ ನಾಸ್ತಿಕರನ್ನು ವಿರೋಧಿಸುವುದೆ? ಗೋಹತ್ಯೆ ನಿಷೇಧದ ಪರ ವಕಾಲತ್ತು ವಹಿಸುವುದೆ ? ಮೌಢ್ಯ ನಿಷೇಧ ಕಾಯ್ದೆಯನ್ನು ವಿರೋಧಿಸುವುದೆ ? ಹೆಂಡತಿಯ ಮೇಲೆ ಅನುಮಾನಪಟ್ಟು ಕಾಡಿಗಟ್ಟಿದ ಆ ರಾಮನ ಹೆಸರನ್ನು ಜಪಿಸುವುದೆ ? ಗಾಂಧೀಜಿಯವರನ್ನು ಕೊಂದ ಗೋಡ್ಸೆ ನಿಲುವನ್ನು ಒಳಗೊಳಗೆ ಸಮರ್ಥಿಸಿ ಕೊಳ್ಳುವುದೆ ? ಜಾತಿ, ಧರ್ಮ, ದೇವರ ಹೆಸರಲ್ಲಿ ರಾಜಕೀಯ ಮಾಡುವುದೆ ? ಬೇರೆಯವರ ಮಕ್ಕಳನ್ನು ನೀರಿಗೆ ತಳ್ಳಿ ಆಳ ನೋಡುವವರಂತೆ, ಗಡಿಯಲ್ಲಿ ವೈರಿಗಳ ಗುಂಡಿಗೆ ಬಲಿಯಾಗುವ ಬಡಸೈನಿಕರ ವಿಷಯವನ್ನಿಟ್ಟುಕೊಂಡು ಭರಪೂರ ಭಾಷಣ ಬಿಗಿಯುವುದೆ ? ವಿಚಾರಿಸದೆ ಅಥವಾ ಪ್ರಶ್ನಿಸದೆ, ತರ್ಕಿಸದೆ, ವೈಚಾರಿಕತೆಗೆ ತೆರೆದುಕೊಳ್ಳದಿರುವುದು ದೇಶಪ್ರೇಮವೆ ? ಹಿಂಡದೆ, ಹೆಂಡಿ ಬಳಿಯದೆ ತುಪ್ಪ ತಿಂದು ತೆಪ್ಪಗೆ ಒಂದು ಕುರ್ಚಿ ಹಿಡಿದು ಕುಳಿತುಕೊಳ್ಳುವುದೆ ?

ನಿಜಕ್ಕೂ ಯಾವುದು ದೇಶಪ್ರೇಮ, ಯಾವುದು ದೇಶದ್ರೋಹ ಎಲ್ಲವೂ ಕಲಸುಮೇಲೋಗರವಾಗಿದೆ. ಇಂದಿನ ಯುವಕರಿಗಂತೂ ಸತ್ಯ ಮಿಥ್ಯವಾಗಿದೆ. ಮಿಥ್ಯವೇ ಸತ್ಯವಾಗಿದೆ. ಸುಳ್ಳು ಕೊಡುವಷ್ಟು ಸುಖ ಸತ್ಯ ಯಾವತ್ತೂ ಕೊಡದು. ಎಲ್ಲರೂ ಇಂದು ಭ್ರಮೆ ಹುಟ್ಟಿಸುವ ಭ್ರಷ್ಟರಿಗೆ ಮತ, ಮಣೆ ಹಾಕಿ ಬೆಂಬಲಿಸುತ್ತಿದ್ದಾರೆ. 'ಸತ್ಯ ಕಹಿಯಾಗಿರುತ್ತದೆ ಮತ್ತು ಅಪ್ರಿಯವಾಗಿರುತ್ತದೆ' ಅನ್ನೊ ಅನುಭವಿಕರ ನುಡಿಯನ್ನು ನಮ್ಮ ಯುವಜನಾಂಗ ಅರ್ಥೈಸಿಕೊಳ್ಳ ದಿರುವುದು ದೊಡ್ಡ ದುರಂತ. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್, ಪೆರಿಯಾರ್, ಜ್ಯೋತಿ ಬಾ ಫುಲೆ ಮುಂತಾದವರ ಬದುಕು–ಬರಹವನ್ನು ಓದಿದರೆ ಮಾತ್ರ ನಿಜವಾದ ದೇಶಪ್ರೇಮ ಯಾವುದು ಅನ್ನೋದು ಮನದಟ್ಟಾಗುತ್ತದೆ. ಆದರೆ ಈ ಕುರಿತು ಬಹುಪಾಲು ವಿದ್ಯಾರ್ಥಿಗಳು




ಓದುವುದೇ ಇಲ್ಲ. ಬಾವಿಕಪ್ಪೆಗಳು ಹೇಳುವುದಷ್ಟೆ ಮತ್ತು ಬರೆಯುವುದಷ್ಟೆ ಸತ್ಯವಲ್ಲ, ಅದರಾಚೆಗೂ ಒಂದು ವಿಶಾಲವಾದ ಸರೋವರ ಇದೆ ಅನ್ನೊ ಕನಿಷ್ಠ ಕಲ್ಪನೆಯಾದರೂ ಇರಲಿ. ಎಲ್ಲವನ್ನೂ ಒಂದು ತಕ್ಕಡಿಯಲ್ಲಿಟ್ಟು ತೂಗಿ ನೋಡಿದಾಗ ಮಾತ್ರ ಸತ್ಯ ಗೊತ್ತಾಗುತ್ತದೆ.

ಎಲ್ಲಿಯವರೆಗೆ ಟೋಪಿ ಹಾಕಿಸಿಕೊಳ್ಳುವವರು ಇರುತ್ತಾರೋ, ಅಲ್ಲಿಯ ವರೆಗೆ ಹಾಕುವವರು ಇದ್ದೇ ಇರುತ್ತಾರೆ. ದೇಶಪ್ರೇಮದ ಹೆಸರಿನಲ್ಲಿಯೇ ತಮ್ಮ ಬೇಳೆ ಬೇಯಿಸಿಕೊಳ್ಳುವವರು ಇಂದು ಸಾಕಷ್ಟಿದ್ದಾರೆ. ಜಾತಿ ಮತ ಪಂಥ ಪಂಗಡಗಳನ್ನು ಬದಿಗಿಟ್ಟು ನಮ್ಮ ಸಮಾಜದ ಕಟ್ಟಕಡೆಯ ವ್ಯಕ್ತಿಗೆ ಸಮಪಾಲು– ಸಮಬಾಳು ಸಿಗುವಂತಾಗಲು ಶ್ರಮಿಸುವುದೆ ನಿಜವಾದ ದೇಶಪ್ರೇಮ.

❑ **ಕೆ. ಬಿ. ವೀರಲಿಂಗನಗೌಡ್ರ**, ಸಿದ್ಧಾಪುರ

* * *

## ಸಂಕೇತಗಳ ಅತಿ ಭಾವುಕತೆ ದೇಶಪ್ರೇಮವಲ್ಲ

ಇದೇನಿದು ? ದೇಶಪ್ರೇಮ, ನಾಡಭಕ್ತಿ ಎಂದೆಲ್ಲಾ ಆಡುವ ಮಾತುಗಳು ಈಗಲೂ ಪ್ರಸ್ತುತವೇ ? ಅಗತ್ಯವೇ ಎಂದು ಯಾರಿಗಾದರೂ ಅನಿಸಬಹುದು. ವರ್ಷಗಳ ಹಿಂದೆ ಶಾಲೆಗಳಲ್ಲಿ ಪ್ರಬಂಧ ಸ್ಪರ್ಧೆಗಳಿಗೆ ಸೂಚಿತವಾಗುತ್ತಿದ್ದ ಈ ವಿಷಯಗಳು ಏಕಮುಖವಾಗಿ ಭಾವುಕತೆಯ ಪರಾಕಾಷ್ಠೆಯಿಂದ ವರ್ಣರಂಜಿತವಾಗಿ ಬಿಂಬಿಸಲ್ಪಡುತ್ತಿದ್ದವು. ಹಾಗೆ ನೋಡಿದರೆ ಈಗ ನಾವೆಲ್ಲ ಸ್ವಲ್ಪ ಮಟ್ಟಿಗಾದರೂ ಸಾವಧಾನದಿಂದ ವಸ್ತುನಿಷ್ಠವಾಗಿ ಅಭಿಪ್ರಾಯಗಳನ್ನು ವಿನಿಮಯ ಮಾಡಿಕೊಳ್ಳುವಂತಹ ಅವಕಾಶ ಸಿಕ್ಕಿದೆ.

ದೇಶಪ್ರೇಮ ಒಂದು ಮೌಲ್ಯವಾಗಿ ವಿವಾದಾತೀತ ನಿಜ. ಆದರೆ ಯಾವುದು ದೇಶಪ್ರೇಮ ಎನ್ನುವುದೇ ಜಟಿಲವಾಗಿಬಿಟ್ಟಿದೆ. ಸತ್ಯ, ಅಹಿಂಸೆ, ಸಹಿಷ್ಣುತೆ ಮುಂತಾದ ಮಾನವೀಯ ಎನ್ನಬಹುದಾದ ಮೌಲ್ಯಗಳನ್ನು ಆದರ್ಶವಾಗಿ ಹೊಂದಿರುವ ಒಂದು ಮನೋಭಾವ, ದೇಶಪ್ರೇಮ ಎಂಬ ಒಂದೇ ಲಹರಿಯೊಂದಿಗೆ ಸಮಾನ ವೇದಿಕೆಯನ್ನು ಹೊಂದಲು ಸಾಧ್ಯವೇ ? ಉದಾಹರಣೆಗೆ ಒಬ್ಬ 'ದೇಶಪ್ರೇಮಿ' ಸುಳ್ಳುಗಾರನಾಗಿ, ಕೊಲೆಗಡುಕನಾಗಿ, ಮೋಸಗಾರನಾಗಿ ಇರಲು ಆಗುತ್ತದೆಯೇ ?

ದೇಶ ಎನ್ನುವುದು ಆಡಳಿತದ ಹಾಗೂ ರಾಜಕೀಯ ಕಾರಣಗಳಿಂದ ಉಂಟಾಗಿರುವ ಒಂದು ಭೌತಿಕ ವ್ಯವಸ್ಥೆ. ಹೀಗಿರುವಾಗ ವಿಶ್ವಮಾನವತ್ವವನ್ನು ಸಾರಿದ ನಮ್ಮ ಅನೇಕ ಹಿರಿಯರು ದೇಶಪ್ರೇಮಿಗಳಲ್ಲವೇ ?

ನಮ್ಮ ಇತಿಹಾಸವನ್ನೇ ನೋಡೋಣ. ಅನೇಕಾನೇಕ ಪ್ರಾಂತ್ಯಗಳಲ್ಲಿ ತಕ್ಕಮಟ್ಟಿಗೆ ಬಲಶಾಲಿಗಳೇ ಆಗಿದ್ದ ರಾಜಾಧಿರಾಜರಿಗೆ ಅವರು ಆಳುತ್ತಿದ್ದ ಪ್ರಾಂತ್ಯಗಳೇ ದೇಶಗಳಾಗಿದ್ದವು. ಪಕ್ಕದ ಊರಿನ ಆಡಳಿತಗಾರನೂ ಶತ್ರುವೇ ಆಗಿದ್ದನು. ಈಗಿನ ನಮ್ಮ ದೇಶವನ್ನೇ ನೋಡಿದರೂ ಇದು ವ್ಯಕ್ತ. ಪಾಕಿಸ್ತಾನ, ಬಾಂಗ್ಲಾ ಮುಂತಾದ ನೆರೆಯ ದೇಶಗಳು ಹಿಂದೆ ಭಾರತದ ಒಂದು ಭಾಗವೇ ಆಗಿದ್ದವು. ಅಂದು ಭಾರತದಲ್ಲಿನ ಜನ ಈಗ ಪಕ್ಕದ ದೇಶಗಳಲ್ಲಿ ವಾಸಿಸಬೇಕಿರುವುದರಿಂದ ಅವರು ತಾಂತ್ರಿಕವಾಗಿ ನಮ್ಮ 'ದೇಶಭಕ್ತ'ರಾಗಿರಲು ಸಾಧ್ಯವಿಲ್ಲ. ಯಾವುದೋ ಕ್ರೀಡೆ ನಡೆದರೆ ಯಾವುದೋ ತಂಡಕ್ಕೆ ಅಥವಾ ದೇಶದ ತಂಡಕ್ಕೆ ಜಯಕಾರ ಹಾಕಿದರೆ ಅದು ಭಾರಿ ಅಪರಾಧವೆಂದಾದರೆ, ಲಕ್ಷಾಂತರ ಸಂಖ್ಯೆಯಲ್ಲಿ ಅಮೆರಿಕ, ಆಸ್ಟ್ರೇಲಿಯ, ಯೂರೋಪಿನಲ್ಲಿ ನೆಲೆಸಿರುವ 'ದೇಶಪ್ರೇಮಿ' ಭಾರತೀಯರು ಯಾರನ್ನು ಬೆಂಬಲಿಸುತ್ತಾರೆ ? ನೈತಿಕವಾಗಿ ಅವರು ಯಾರ ಪರ ?

ನನ್ನ ಪ್ರಕಾರ ದೇಶಪ್ರೇಮ ಎನ್ನುವುದು ಅತಿಭಾವುಕತೆಯ, ಪ್ರದರ್ಶನಪ್ರೀತಿಯ ಅತಿರಂಜಕತೆಯ ವಿಷಯವಲ್ಲ. ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸಾಮರಸ್ಯವನ್ನು ಹೊಂದಿದ ಎಲ್ಲ ಬೆಳವಣಿಗೆಗಳನ್ನೂ ಆರೋಗ್ಯಕರವಾಗಿ ಮುಕ್ತಮನಸ್ಸಿನಿಂದ ನೋಡುವ ಒಂದು ಮನಸ್ಥಿತಿ. ಜನಪರ ಹೋರಾಟಗಳು, ಚರ್ಚೆಗಳು, ಸಂವಾದಗಳು, ಸಭೆಗಳು ಎಲ್ಲವೂ ದೇಶಪ್ರೇಮವನ್ನು ಅಭಿವ್ಯಕ್ತಗೊಳಿಸುವಂತಹ ಪ್ರಕ್ರಿಯೆಗಳೆ. ಈ ಅರ್ಥದಲ್ಲಿ ಯೋಧರು ಮಾತ್ರ ವಲ್ಲದೆ ಕೋಟ್ಯಂತರ ಶ್ರಮಜೀವಿ ಗಳು, ಜನಸಾಮಾನ್ಯರು ಅಷ್ಟೇ ಏಕೆ ನಮ್ಮ ವ್ಯವಸ್ಥೆಯನ್ನು ನಿರ್ವಹಿಸುವ ರಾಜಕಾರಣಿಗಳು, ಅಧಿಕಾರಿಗಳು ಸಹ ದೇಶಪ್ರೇಮಿಗಳೇ ತಾನೆ ?

ಹೊಣೆಗಾರಿಕೆ ತೋರದೆ ವಿರಾಮಾಸನಗಳಲ್ಲಿ ಕುಳಿತು ಭಾವನೆಗಳನ್ನು ಉದ್ದೀಪನಗೊಳಿಸಿ 'ಸ್ವಲ್ಪ ಕಲಿತ' ಮಧ್ಯಮವರ್ಗವೇ ದೇಶಸೇವೆಯನ್ನು ಮಾಡದೆ ಇರುವವರು. ತೆರಿಗೆ ವಂಚಕರು, ಕಾಳಧನದ ಧನಿಕರು, ಭಯೋತ್ಪಾದಕರು ನಮಗೆ ನೇರವಾಗಿ ಕಾಣುವ ದೇಶದ್ರೋಹಿಗಳಾದರೆ ನಯವಂಚಕರು, ಆಷಾಢಭೂತಿಗಳು ಜನರ ಭಾವನೆಗಳೊಂದಿಗೆ ಚೆಲ್ಲಾಟವಾಡುವವರು – ಇವರೆಲ್ಲ ಪರದೆಯ ಹಿಂದಿನ ಹೆಚ್ಚು ಅಪಾಯಕಾರಿ ಶಕ್ತಿಗಳು. ಇಂಥವರನ್ನು ಬಯಲಿಗೆಳೆಯುವುದೂ ದೇಶಪ್ರೇಮವೇ ಅಲ್ಲವೆ ?

ಸಂಕೇತಗಳಾದ ರಾಷ್ಟ್ರಗೀತೆ, ರಾಷ್ಟ್ರಧ್ವಜ ಮೊದಲಾದವುಗಳನ್ನು ಅತಿ ಭಾವುಕತೆಯಿಂದ ನೋಡದೆ ನಮ್ಮನ್ನೆಲ್ಲ ಕಾಡುವ ನೆಲ–ಜಲಗಳ ಬಗ್ಗೆ ಗಂಭೀರವಾದ ಚರ್ಚೆ, ಸಂವಾದಗಳ ಮೂಲಕ ಒಂದು ಸುಂದರ ಸಮಾಜದ ನಿರ್ಮಾಣದೆಡೆ ಬಾಲ ಹೆಜ್ಜೆಗಳನ್ನಾದರೂ ಇಡುವ ಪ್ರಾಮಾಣಿಕ ಪ್ರಯತ್ನವೇ ನಿಜವಾದ ದೇಶಪ್ರೇಮ ಎನ್ನುವುದು ನನ್ನ ಭಾವನೆ.

❑ **ಎಚ್. ವಿ. ನಟರಾಜ,** ಬೆಂಗಳೂರು

* * *

## ಸರಕಾರದ ನೀತಿ ಬೆಂಬಲಿಸುವುದೇ ದೇಶಪ್ರೇಮವಲ್ಲ

'ದೇಶಪ್ರೇಮ' ಎಂಬ ಪದ ಇತ್ತೀಚಿನ ದಿನಗಳಲ್ಲಿ ಸಾಕಷ್ಟು ಚರ್ಚೆಗೆ ಒಳಗಾಗಿದೆ. 'ದೇಶಪ್ರೇಮ'ವನ್ನು ಚರ್ಚಿಸುವ ಮೊದಲು 'ದೇಶ' ಎಂದರೇನು ಎಂಬುದರ ಬಗ್ಗೆ ಸ್ಪಷ್ಟ ಅರಿವನ್ನು ಪಡೆಯಬೇಕಾಗಿದೆ. 'ದೇಶ' ಎಂದರೆ ನಿರ್ದಿಷ್ಟ ಭೌಗೋಳಿಕ ಪರಿಮಿತಿಯಲ್ಲಿನ ಭೂಪ್ರದೇಶ ಮಾತ್ರವಲ್ಲ, 'ದೇಶ' ಎಂಬ ಪದಕ್ಕೆ ವಿಶಾಲ ವ್ಯಾಪ್ತಿಯ ಅರ್ಥವಿದೆ. 'ದೇಶ' ಎಂದರೆ ಒಂದು ನಿರ್ದಿಷ್ಟ ಚೌಕಟ್ಟಿನ ಭೂಭಾಗದ ನೆಲ, ಜಲ, ಭಾಷೆಗಳು ಮತ್ತು ನೈಸರ್ಗಿಕ ಸಂಪತ್ತಿನೊಂದಿಗೆ ಅನೇಕ ಜನಾಂಗೀಯ ಸಾಂಸ್ಕೃತಿಕ ವೈವಿಧ್ಯತೆಯನ್ನೂ ಒಳಗೊಂಡಿದೆ.

ಓರ್ವ ವ್ಯಕ್ತಿಯಾಗಲೀ ಅಥವಾ ಒಂದು ಸಮುದಾಯವಾಗಲೀ, 'ದೇಶಪ್ರೇಮ' ವನ್ನು ಯಾವುದೇ ರಾಜಕೀಯ ಪಕ್ಷ ಅಥವಾ ಸಂಘಟನೆಯು ಸೂಚಿಸುವ, ನಿರ್ದೇಶಿಸುವ ರೀತಿಯಲ್ಲಿ ವ್ಯಕ್ತಪಡಿಸಬೇಕಾಗಿಲ್ಲ. ದೇಶದಲ್ಲಿ, ಹಲವು ಸಾಮಾಜಿಕ ಸ್ತರಗಳಲ್ಲಿ ವಾಸಿಸುವ ಪ್ರಜೆಗಳು ತಮ್ಮದೇ ಆದ ರೀತಿಯಲ್ಲಿ 'ದೇಶಪ್ರೇಮ'ವನ್ನು ಪ್ರಕಟಿಸಬಹುದು. ಪ್ರತಿಯೋರ್ವ ಪ್ರಜೆಯು ದೇಶದ ಸೇನಾಪಡೆಗೆ ದಾಖಲಾಗಿ ದೇಶಸೇವೆಯನ್ನು ಮಾಡಲು ಸಾಧ್ಯವಿಲ್ಲ. ಅದರ ಅಗತ್ಯವೂ ಇಲ್ಲ ಎನ್ನುವುದು ನನ್ನ ಭಾವನೆ. ನಮ್ಮ ದೇಶದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಅನಕ್ಷರಸ್ಥರಿದ್ದಾರೆ. ವಿದ್ಯಾವಂತರು ಅನಕ್ಷರಸ್ಥರಿಗೆ ವಿದ್ಯೆಯನ್ನು ಕಲಿಸಿದರೆ, ಅದೂ 'ದೇಶಪ್ರೇಮ'ದ ಸಂಕೇತವಾಗುತ್ತದೆ. ದಶಕಗಳಿಂದ ನಮ್ಮ ಸಮಾಜ, ಅನೇಕ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿದೆ. ಅವುಗಳಲ್ಲಿ ಪ್ರಮುಖವಾಗಿ ಬಡತನ, ನಿರುದ್ಯೋಗ, ಆರ್ಥಿಕ ಮತ್ತು ಸಾಮಾಜಿಕ ಅಸಮಾನತೆ, ಪರಿಸರ ಮಾಲಿನ್ಯ, ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಮುಂತಾದವುಗಳನ್ನು ಪರಿಗಣಿಸಬಹುದು. ಇಂತಹ ಯಾವುದೇ ಸಮಸ್ಯೆಯ ಪರಿಹಾರಕ್ಕೆ ಶ್ರಮಿಸಿದರೆ, ಅದು 'ದೇಶಪ್ರೇಮ'ದ ದ್ಯೋತಕವಾಗುತ್ತದೆ. 'ದೇಶಪ್ರೇಮ' ತ್ಯಾಗ ಮತ್ತು ಸೇವೆಗೆ ಪ್ರೇರಣೆ ನೀಡುತ್ತದೆ.

ಅನೇಕ ಮಹನೀಯರು ಯಾವುದೇ ಪ್ರಚಾರ ಪ್ರಶಸ್ತಿಗಳ ಪ್ರಲೋಭನೆಗೆ ಒಳಗಾಗದೆ ನಿರಂತರವಾಗಿ ಅನೇಕ ಕ್ಷೇತ್ರಗಳಲ್ಲಿ ಶ್ರಮಿಸುತ್ತಿದ್ದಾರೆ. ಅವರೆಲ್ಲರೂ ದೇಶಪ್ರೇಮಿಗಳೇ ಆಗಿದ್ದಾರೆ. ಚುನಾಯಿತ ಸರ್ಕಾರಗಳು, ಕೇಂದ್ರ ಮತ್ತು ರಾಜ್ಯಮಟ್ಟದಲ್ಲಿ, ಅನೇಕ ಜನವಿರೋಧಿ ನೀತಿಗಳನ್ನು ಮತ್ತು ಕ್ರಮಗಳನ್ನು ಜಾರಿಗೆ ತಂದಾಗ ಜನತೆ ಪ್ರತಿಭಟಿಸುವ ಮುಖಾಂತರ 'ದೇಶಪ್ರೇಮ'ವನ್ನು ವ್ಯಕ್ತಪಡಿಸಬಹುದು. ದೇಶದ ಕೆಲವು ಸಂಘಟನೆಗಳ ಪ್ರಕಾರ 'ದೇಶಪ್ರೇಮ'ವೆಂದರೆ

ನಮ್ಮ ನೆರೆ ರಾಷ್ಟ್ರವಾದ ಪಾಕಿಸ್ತಾನವನ್ನು ದ್ವೇಷಿಸುವುದು ಮತ್ತು ಅಲ್ಪಸಂಖ್ಯಾತರ ವಿರುದ್ಧ ಅಸಹನೆ, ಅಸಡ್ಡೆಯ ಪ್ರದರ್ಶನ ಎಂದು ಅರ್ಥೈಸಲಾಗುತ್ತಿದೆ.

ಕೇಂದ್ರಸರ್ಕಾರ, ಜಮ್ಮು ಮತ್ತು ಕಾಶ್ಮೀರದಲ್ಲಿ ಅನುಸರಿಸುತ್ತಿರುವ ನೀತಿಯನ್ನು ಪ್ರಶ್ನಿಸಿದರೆ, ವಿರೋಧಿಸಿದರೆ ಅದು 'ದೇಶದ್ರೋಹ' ಎಂದು ಬಿಂಬಿಸಲಾಗುತ್ತದೆ. 'ದೇಶಪ್ರೇಮ' ಎಂದರೆ ಕೇಂದ್ರ ಸರ್ಕಾರದ ನೀತಿ, ಧೋರಣೆಗಳನ್ನು, ಕ್ರಮಗಳನ್ನು ಸಮರ್ಥಿಸುವುದು ಎಂದಾಗಬಾರದು. 'ದೇಶಪ್ರೇಮ'ವನ್ನು ಬಲಪ್ರಯೋಗದಿಂದ ಹುಟ್ಟುಹಾಕಲು ಸಾಧ್ಯವಿಲ್ಲ. ಅದು ಪ್ರಜೆಗಳ ಅಂತರಾಳದಲ್ಲಿ ಚಿಮ್ಮುವಂತಹ ವಾತಾವರಣವನ್ನು ಸೃಷ್ಟಿಸಬೇಕು.

❑ **ಶಂಕರನಾರಾಯಣ,** ಬೆಂಗಳೂರು

* * *

## ನೀವು ದೇಶಭಕ್ತರೆನಿಸಿಕೊಳ್ಳಬೇಕೇ ? ಇಷ್ಟು ಮಾಡಿ:

೧. ಪಾಕಿಸ್ತಾನ, ಚೀನಾ ದೇಶಗಳನ್ನು ದ್ವೇಷಿಸಿ. ಆ ದ್ವೇಷವನ್ನು ಯಾವುದಾದರೂ ಒಂದು ರೀತಿಯಲ್ಲಿ ಪ್ರದರ್ಶಿಸಿ.

೨. ನಮ್ಮದೇ ದೇಶವಾಸಿಗಳಾದ ಮುಸ್ಲಿಮರನ್ನು ಅತಿಯಾಗಿಯೂ, ಕ್ರೈಸ್ತರನ್ನು ಮಿತವಾಗಿಯೂ ದ್ವೇಷಿಸಿ. ನಿಮಗೆ ಕೊಲೆ, ಹಲ್ಲೆ ಮಾಡಲಾಗದಿದ್ದರೆ ಅವರನ್ನು ಅಪಹಾಸ್ಯ ಮಾಡಿ ನಿಂದಿಸಿ.

೩. ದಲಿತರನ್ನು ಮುಸ್ಲಿಮರು, ಕ್ರೈಸ್ತರ ವಿರುದ್ಧ ಪ್ರಚೋದಿಸಿ.

೪. ನೆಹರೂ ಕುಟುಂಬವನ್ನು, ಕಮ್ಯುನಿಸ್ಟರನ್ನು, ಜಾತ್ಯತೀತರು, ಪ್ರಗತಿಪರರನ್ನು ಹೀನಾಮಾನಾ ಬಯ್ಯುವ ಚಟ ರೂಢಿಸಿಕೊಳ್ಳಿ. ಉಗಿಯಲು ಅಂತರ್ಜಾಲದ ಅಂಗಳ ಉಂಟಲ್ಲವೊ.

೫. ಪೂಜೆ, ಹಬ್ಬ, ಯಜ್ಞ, ಯಾಗಗಳನ್ನು ಸಾಲಮಾಡಿಯಾದರೂ ಆಡಂಬರದಿಂದ ಆಚರಿಸಿ. ಜ್ಯೋತಿಷಿಗಳ ಮೈಮೇಲಿನ ಬಂಗಾರ ಹೆಚ್ಚಿಸಿ.

೬. ಸಮಾನತೆ, ಸೌಹಾರ್ದತೆ, ವೈಜ್ಞಾನಿಕ ಮನೋಭಾವ, ಪರಿಸರ ರಕ್ಷಣೆಯಂಥವನ್ನು ಮರೆತುಬಿಡಿ.

೭. ಹಿಂದೂ ಸ್ವಾಮೀಜಿಗಳನ್ನು ಕಂಡು ನಿಮಗೆಷ್ಟು ಭಯವಾದರೂ ಅವರ ಕಾಲುಗಳಿಗೆ ಬಿದ್ದು ಕಾಲ್ತೊಳೆದ ನೀರು ಕುಡಿಯಬೇಕು.

೮. ಗೋವುಗಳಿಗೆ ನೀವೇನೂ ಸೇವೆ ಮಾಡೋದು ಬೇಡ. ಹತ್ತು ಜನಕ್ಕೆ ಕಾಣುವಂತೆ ದನ ಕಂಡಾಗಲೆಲ್ಲ ಮುಟ್ಟಿ ಕಣ್ಣಿಗೊತ್ತಿಕೊಳ್ಳಿ.

೯. ಸಂದರ್ಭ ಸಿಕ್ಕಾಗಲೆಲ್ಲ 'ವಂದೇ ಮಾತರಂ', 'ಭಾರತ್ ಮಾತಾ ಕಿ ಜೈ' ಎಂದು ಗಂಟಲು ಹರಿದುಕೊಳ್ಳಿ, ಯುದ್ಧ, ರಕ್ತ, ಯುದ್ಧ, ರಕ್ತ ಎಂದು ಬಡಬಡಿಸುತ್ತಾ ಹಲ್ಲು ಮಸೆಯಿರಿ.

೧೦. ಒಂದು ಕಡೆ ಭಿಕಾರಿಗಳನ್ನು ಇನ್ನೊಂದು ಕಡೆ ಹುಂಬ ಶ್ರೀಮಂತರನ್ನು ಸೃಷ್ಟಿಸಿ ದಾನಧರ್ಮಗಳಿಗೆ ಅವಕಾಶ ಮಾಡಿಕೊಡುವ ರಾಜಕೀಯ ಪಕ್ಷವನ್ನು ಆರಿಸಿ.

೧೧. ಪತಂಜಲಿ ಉತ್ಪನ್ನಗಳನ್ನು ತಿಂದು, ಕುಡಿದು, ಮೆತ್ತಿಕೊಂಡು, ಆರ್ಟ್ ಆಫ್ ಲಿವಿಂಗಿಗೆ ಹೋಗಿ.

೧೨. 'ಹೊಸತು'ವಿನಂಥ ಪತ್ರಿಕೆಗಳನ್ನು ಓದಬೇಡಿ.

ಮೇಲ್ಕಂಡ ದೇಶಭಕ್ತಿ ಕೈಂಕರ್ಯಗಳಲ್ಲಿ ಯಾವುದೊಂದನ್ನು ಕೈಬಿಟ್ಟರೂ ನೀವೊಬ್ಬ ದೇಶದ್ರೋಹಿ ಎನಿಸಿಕೊಳ್ಳುವುದು ಖಂಡಿತ.

❑ **ಕೆ. ವಿ. ಚಂದ್ರಜ್ಯೋತಿ,** ತುಮಕೂರು

* * *

## ದೇಶಪ್ರೇಮದ ವಾರಸುದಾರರು

**ಯಾ**ವುದು ದೇಶದ್ರೋಹ, ಯಾವುದು ದೇಶಪ್ರೇಮ ಎಂಬುದೇ ಈ ದೇಶದಲ್ಲಿ ಜಿಜ್ಞಾಸೆಯಾಗಿದೆ. ಇಲ್ಲಿ ಏನೇ ಘಟಿಸಲಿ ದೇಶವಾಸಿಗಳು, ರಾಜಕೀಯ ಪಕ್ಷಗಳು, ಧಾರ್ಮಿಕ ಸಂಘಟನೆಗಳು ತಮ್ಮದೇ ಆದ ನೆಲೆಯಲ್ಲಿ ಅರ್ಥೈಸು ತ್ತಿರುವುದು ವಿಷಾದನೀಯ. ನಮ್ಮೀ ದೇಶ ವಿಶ್ವದ ಇತರ ದೇಶಗಳ ದೃಷ್ಟಿಯಲ್ಲಿ ಆದರ್ಶವೆನಿಸಿಕೊಳ್ಳ ಬೇಕೆಂದರೆ ಬಹಿರಂಗ ಮತ್ತು




ಅಂತರಂಗದಲ್ಲಿಯೂ ಶುದ್ಧವಾಗಿರಬೇಕು. ಪ್ರಸ್ತುತ ಭಾರತದಲ್ಲಿ ದೇಶಭಕ್ತಿ ಅಭಿವ್ಯಕ್ತಿಸುವಲ್ಲಿ ಒಂದು ಸಂಘಟನೆಯವರೇ ವಾರಸುದಾರರೆಂಬಂತೆ ತೋರಿಸಿಕೊಳ್ಳುತ್ತಿದ್ದಾರೆ. ಅವರು ಏನೇ ಮಾಡಿದರೂ ಅದು ದೇಶಭಕ್ತಿ. ಆದರೆ, ಬೇರೆಯವರು ಏನೇ ಮಾಡಿದರೂ ಅದು ದೇಶದ್ರೋಹದಡಿ ಗುರುತಿಸಿ ದೂಷಣೆಗೊಳಗಾಗುತ್ತದೆ. ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆಯಾಗುತ್ತಲಿದೆ. ಆರೋಗ್ಯಪೂರ್ಣ ವಿಚಾರ ವಿನಿಮಯ, ಚರ್ಚೆಗೆ ಅವಕಾಶವೇ ಇಲ್ಲ. ಪಟ್ಟಭದ್ರ ಹಿತಾಸಕ್ತಿ, ಸ್ಥಾಪಿತ ಚಿಂತನೆಗಳು, ಮೂಲಭೂತವಾದಗಳಿಗೆ ಜೋತುಬಿದ್ದಿರುವ ದ್ವೀಪಗಳಂಥ ಮನಸ್ಸುಗಳಿಂದ ಆವೃತವಾಗಿರುವ ದೇಶ ಕುಬ್ಜವಾಗಿದೆ. ಭಾರತದ ಅದ್ಭುತ ವೈಚಾರಿಕತೆಯ ಆಂತರ್ಯ ವಿಶ್ವಮಟ್ಟದಲ್ಲಿ ಬಯಲಾಗಿ ಬೆಳಕಾಗುತ್ತಿಲ್ಲ.

ಈ ದೇಶವಾಸಿಗಳಿಗೆ ತಮ್ಮ ತಮ್ಮ ಧಾರ್ಮಿಕ ಭಾವನೆಯನ್ನೂ ಮೀರಿದ್ದು ನಮ್ಮ ದೇಶದ ಸಂವಿಧಾನ. ಅದುವೇ ದೇಶದಲ್ಲಿರುವ ಸಕಲರ ಬದುಕಿಗೆ ಆಧಾರ, ಪಥ. ಅಭಿವೃದ್ಧಿಯಾಗಲೀ, ಐಕ್ಯತೆಯಾಗಲೀ ಒಟ್ಟಾರೆ ಸಮಗ್ರ ಪ್ರಗತಿಗೆ ದೇಶದಲ್ಲಿರುವವರೆಲ್ಲರೂ ತಮ್ಮ ತಮ್ಮ ಭಾವನೆಗಳೊಂದಿಗೆ ಈ ದೇಶದ ಕಾನೂನಿನ ಚೌಕಟ್ಟಿನೊಳಗೇ ಗೂಡು ಕಟ್ಟಿಕೊಂಡು ನೆಮ್ಮದಿಯಿಂದ ಬದುಕ ಬೇಕಿದೆ. ಈ ದೇಶದಲ್ಲಿರುವ ಯಾವುದೇ ಧರ್ಮ-ಜಾತಿಗೆ ಸೇರಿದವರಾಗಿದ್ದರೂ ಎಲ್ಲರೂ ಈ ದೇಶದ ವಾಸಿಗಳ ಧಾರ್ಮಿಕಾಚರಣೆ, ಆಹಾರಕ್ರಮ, ಬದುಕಿನ ಕ್ರಮಗಳನ್ನೆಲ್ಲ ಪರಸ್ಪರರು ಗೌರವಿಸಬೇಕು. ಹಾಗಾದಾಗಲೇ ಪ್ರತಿಯೊಬ್ಬರಿಗೂ ಸಮಾನತೆಯ ಸ್ವಾತಂತ್ರ್ಯ ಲಭಿಸಿದಂತಾಗಿ ದೇಶದ ಸಮಗ್ರತೆಗೆ ಪಥವಾಗುತ್ತದೆ. ಅವರಲ್ಲಿ ಯಾರೊಬ್ಬರೂ ದೇಶವೆಂಬ ಗೂಡಿನಿಂದಾಚೆಯ ಬದುಕನ್ನು ಯೋಚಿಸುವುದಕ್ಕಿಂತ ಆಚೆಗಿರುವವರೊಂದಿಗೆ ಸಹಬಾಳ್ವೆಯಿಂದಿರುವತ್ತ ಯೋಚಿಸಿ, ಯೋಜಿಸಬೇಕು. ನಮ್ಮಲ್ಲಿ ಕೆಲವು ವಿಕೃತ ಮನಸ್ಸುಗಳಿವೆ. ತಾವು ಮಾತ್ರ ದೇಶಪ್ರೇಮಿಗಳೆಂದು ಗುರುತಿಸಿಕೊಳ್ಳುವ ಭರದಲ್ಲಿ ಸಂಬಂಧವಿಲ್ಲದವರಿಗೆ ದೇಶದ್ರೋಹಿ ಎಂಬ ಪಟ್ಟ ಕಟ್ಟುತ್ತಿದ್ದಾರೆ. ಇದು ದೇಶದ ಸಮಗ್ರತೆ ದೃಷ್ಟಿಯಿಂದ ಮಾರಕ. ತಾವಿರುವ ನೆಲದ ಸಕಲ ಸೌಲಭ್ಯಗಳನ್ನೂ ಬಳಸಿಕೊಂಡು ಈ ನೆಲದ ಕಾನೂನಿಗೆ ಬದ್ಧರಾಗಿರದವರನ್ನು ಕಂಡಾಗ ಖೇದವಾಗುತ್ತದೆ.

❑ **ವೆಂಕಟೇಶ ಕೆ. ಜನಾದ್ರಿ,** ಕನಕಗಿರಿ

* * *

## ಸನ್ನಡತೆಯಿಂದ ನಡೆದುಕೊಳ್ಳುವುದೇ ದೇಶಪ್ರೇಮ

**ದೇ**ಶವೆಂದರೆ ನಿರ್ದಿಷ್ಟ ಪ್ರದೇಶ, ಸರ್ಕಾರ, ಜನತೆ ಮತ್ತು ಪರಮಾಧಿಕಾರವನ್ನು ಒಳಗೊಂಡದ್ದೇ ದೇಶವಾಗುತ್ತದೆ. ಇದೇ ರಾಜ್ಯಕ್ಕೂ ಕೊಡುವ ವ್ಯಾಖ್ಯಾನವಾಗಿದೆ. ದೇಶವಾಸಿಗಳಾದ ಜನತೆ ಅಲ್ಲಿನ ಪರಮಾಧಿಕಾರಕ್ಕೆ ಹಾಗೂ ಸರ್ಕಾರದ ಪದ್ಧತಿಗೆ ಅನುಗುಣವಾಗಿ ಜೀವಿಸಬೇಕಾಗುತ್ತದೆ. ಪ್ರಸ್ತುತ ಭಾರತದಲ್ಲಿ ಪ್ರಜಾಪ್ರಭುತ್ವವಿದೆ. ಇಲ್ಲಿ ಪ್ರಜೆಗಳೇ ಪ್ರಭುಗಳು. ಇವರು ದೇಶಕ್ಕೆ ಅನ್ವಯಿಸುವಂತಹ ಸಂವಿಧಾನವನ್ನು ರಚಿಸಿಕೊಂಡು ಅದರ ಪ್ರಕಾರ ಜನತೆ ಮತ್ತು ಸರ್ಕಾರ ನಡೆಯುತ್ತದೆ. ಇಲ್ಲಿನ ಜನತೆ ಸ್ವಾತಂತ್ರ್ಯ, ಸಮಾನತೆ, ಭ್ರಾತೃಭಾವನೆಯಿಂದ ಬದುಕಲು ಅವಕಾಶವಿದೆ. ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಸ್ವಾತಂತ್ರ್ಯದ ಜೊತೆಗೆ ಸಮಾನತೆಯೂ ಇದೆ. ಸಂವಿಧಾನದ ಆಶಯದಂತೆ ಬಾಳಿ-ಬದುಕುವುದೇ ಇವರ ಧರ್ಮ.

'ದೇಶಪ್ರೇಮ' ಎಂದರೆ: ಜನತೆ ತನ್ನ ದೇಶದ ಬಗೆಗೆ ಹೆಮ್ಮೆಪಡುವುದು, ತನ್ನ ದೇಶದ ಸತ್ ಸಂಪ್ರದಾಯ ಗಳನ್ನು ಗೌರವಿಸುವುದು, ತನ್ನ ದೇಶದ




ನೆಲ–ಜಲದ ಬಗ್ಗೆ ಗೌರವಯುತವಾಗಿ ನಡೆದುಕೊಳ್ಳುವುದು, ಎಲ್ಲಾ ಪ್ರಾಂತಗಳ ಭಾಷೆಗಳಿಗೆ ಮಾನ್ಯತೆ ಕೊಡುವುದು ಹಾಗೂ ಆಯಾ ಪ್ರಾಂತಗಳ ಸಂಸ್ಕೃತಿ, ಆಹಾರ, ಬಟ್ಟೆ, ಸಂಪ್ರದಾಯ ಹಾಗೂ ದೇವರುಗಳನ್ನು ಗೌರವಿಸುವುದು. ದೇಶದ ಅಭಿವೃದ್ಧಿ ದುಡಿಮೆಯ ಮೇಲೆ ನಿಂತಿದೆ. ಆದ್ದರಿಂದ ದುಡಿದು (ಕಾಯಕ) ಬದುಕುವುದು. ತನ್ನ ದೇಶದ ಅಥವಾ ಸಮಾಜದ ಕಷ್ಟ–ಸುಖ ಗಳಲ್ಲಿ ಭಾಗಿಯಾಗುವುದು. ತನ್ನ ದೇಶಕ್ಕೆ ನಿಯಮಾನುಸಾರ ಸಲ್ಲಬೇಕಾದ ತೆರಿಗೆಯನ್ನು ಪ್ರಾಮಾಣಿಕವಾಗಿ ಕಟ್ಟುವುದು ಹಾಗೂ ಪ್ರಾಮಾಣಿಕವಾಗಿ ಜೀವನ ಸಾಗಿಸುವುದು. ದೇಶಕ್ಕೆ ಗಂಡಾಂತರ ಪರಿಸ್ಥಿತಿ ಬಂದಾಗ ಐಕ್ಯಮತ್ಯದಿಂದ ಎದುರಿಸುವುದು. ಅಗತ್ಯಬಿದ್ದಾಗ ಮಿಲಿಟರಿ ಸೇವೆಗೂ ಹಾಗೂ ನಾಗರಿಕ ಸೇವೆಗೂ ಸಿದ್ಧರಾಗುವುದು.

ದೇಶವೆಂದರೆ ಭೌಗೋಲಿಕ ವ್ಯಾಪ್ತಿ ಮಾತ್ರ ಬರುವುದಿಲ್ಲ. ಅಲ್ಲಿರುವ ಜನತೆಯೂ ಸೇರುತ್ತದೆ. ಇದರ ಜೊತೆಗೆ ಸಕಲ ಸಸ್ಯವರ್ಗ, ಪ್ರಾಣಿವರ್ಗ ಹಾಗೂ ಬೆಟ್ಟ ಗುಡ್ಡ, ಪರ್ವತ, ನದಿ, ಸರೋವರ, ಸಾಗರ ಮತ್ತು ಆ ಭೂಭಾಗದಲ್ಲಿನ ಸರ್ವರೀತಿಯ ಸ್ಥಿರ–ಚರ ಸಂಪತ್ತು ಸೇರುತ್ತದೆ.

"ಕೇವಲ ಭಾರತ ಮಾತಾಕಿ ಜೈ" ಎಂದ ಮಾತ್ರಕ್ಕೆ ದೇಶಪ್ರೇಮ ವಾಗುವುದಿಲ್ಲ. ಬಾಹ್ಯವಾಗಿ ಘೋಷಣೆ ಕೂಗಿ, ಆಂತರಿಕವಾಗಿ ಕಾನೂನು ಮುರಿಯುವವರು, ಕೃಷ್ಣನ ಲೆಕ್ಕದಲ್ಲಿ ತೆರಿಗೆ ಸಲ್ಲಿಸುವವರು, ಚುನಾವಣೆಗಳಲ್ಲಿ ಭ್ರಷ್ಟಾಚಾರದಿಂದ ಗೆದ್ದುಬರುವವರು, ಜನಸೇವಕರಾಗುವ ಬದಲು ದರ್ಪದಿಂದ ವರ್ತಿಸುವ ಲಂಚಕೋರ ಅಧಿಕಾರಿಗಳು, ಕಾಳಸಂತೆಕೋರರು, ಅಕ್ರಮವಾಗಿ ಆಸ್ತಿ ಸಂಪಾದಿಸುವವರು, ಜಾತಿಭೇದ, ಮತಭೇದ, ವರ್ಗಭೇದ ಮಾಡುವವರು ಹೊರ ನೋಟಕ್ಕೆ ಗೌರವಾನ್ವಿತ ಸಭ್ಯರಂತೆ, ಮಹಾ ಸಮಾಜಸೇವಕರಂತೆ ತೋರ್ಪಡಿಸಿಕೊಂಡು ಗೋಮುಖ ವ್ಯಾಘ್ರದಂತೆ ನಡೆಯುವವರು ದೇಶಪ್ರೇಮಿಗಳಲ್ಲ, ದೇಶದ್ರೋಹಿಗಳು.

ಧರ್ಮಾಂಧತೆಯನ್ನು ದೂರಮಾಡಿ, ವೈಜ್ಞಾನಿಕ ಚಿಂತನೆಗಳಿಂದ, ವೈಚಾರಿಕ ಮಾರ್ಗದಲ್ಲಿ ಸನ್ನಡತೆಯಿಂದ ನಡೆದುಕೊಳ್ಳುವುದೇ ದೇಶಪ್ರೇಮ.

❑ **ಎಸ್. ಸಿ. ರಂಗನಾಥ್,** ತುಮಕೂರು

* * *

## ಒಂದು ಪಂಗಡ ರೂಪಿಸಿದ ಮಾದರಿ

ರಾಷ್ಟ್ರೀಯತೆಯನ್ನು ಆದರ್ಶವಾಗಿ ಬೆಳೆಸಿದ್ದು ಐರೋಪ್ಯರ ಕ್ರಾಂತಿಗಳು, ನವೋತ್ಥಾನಗಳು, ವಸಾಹತುಶಾಹಿ ಪ್ರಭುತ್ವಗಳೆಂಬುದು ಚಾರಿತ್ರಿಕ ಘಟನೆ ಗಳಿಂದ ಮನವರಿಕೆಯಾಗುತ್ತದೆ. ನಿದರ್ಶನಕ್ಕೆ ವಸಾಹತುಶಾಹಿ ಪ್ರಭುತ್ವಗಳಿಂದ ವಿಮೋಚನೆಗಾಗಿ ನಡೆದ ಭಾರತೀಯ ಸ್ವಾತಂತ್ರ್ಯ ಕ್ರಾಂತಿ ೨೦ನೇ ಶತಮಾನದ ಹೊಸದೊಂದು ರಾಷ್ಟ್ರೀಯತೆಯನ್ನು ಪಡೆದುಕೊಳ್ಳುವ ಸಂಕಲ್ಪದಿಂದ ಕೂಡಿತ್ತು. ಆದರೆ ವೈವಿಧ್ಯಮಯ ಸಂಸ್ಕೃತಿ, ಆಚಾರ–ವಿಚಾರಗಳಿರುವ ಭಾರತದಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆಯಡಿಯಲ್ಲಿ ಬ್ರಿಟಿಷರು ಬಿಡಿಸಿ ಕೊಟ್ಟ ಗಡಿಭಾಗಗಳ ಆಧಾರದ ಮೇಲೆ ಹಲವು ಧರ್ಮೀಯರು ಒಂದೇ ದೇಶದಲ್ಲಿ ವಿಲೀನವಾಗಿರುವುದು ಅದ್ಭುತವೆನಿಸಿಕೊಳ್ಳುತ್ತಿದ್ದರೂ, ಅದು ಅನಿವಾರ್ಯವೂ ಆಗಿತ್ತು. ಆದರೆ ವಿಕಸಿತಗೊಳ್ಳುತ್ತಿರುವ ಆಧುನಿಕ ಭಾರತದ ರಾಷ್ಟ್ರೀಯತೆಯ ದೇಶಪ್ರೇಮ ಹಿಂಸೆಯಿಂದಲೂ, ಬಲವಂತಿಕೆ ಯಿಂದಲೂ, ಕ್ರೂರತೆಯಿಂದಲೂ ಕೂಡಿರುವುದಾಗುತ್ತಿದೆ. ಭಾರತಕ್ಕೆ ಜೈಕಾರ ಹಾಕುವಾಗಲೆಲ್ಲಾ ಭಾರತವನ್ನು 'ತಾಯಿ' ಯಾಗಿ ಪರಿಗಣಿಸಬೇಕೆಂದೂ, ಭಾರತವನ್ನು 'ಪುಣ್ಯಭೂಮಿ', 'ಪಿತೃಭೂಮಿ' ಎಂದೆಲ್ಲಾ ಅಂಗೀಕರಿಸದವರು ಭಾರತದ ಪ್ರಜೆಗಳಲ್ಲವೆಂಬುದರಲ್ಲಿದೆ ಭಾರತದ ದೇಶಪ್ರೇಮ. ಹಾಗೆಯೇ 'ಗೋವು' ಎಂಬ ಮೂಕಪ್ರಾಣಿಯನ್ನು ದೇವರೆಂದು ಸಂಕಲ್ಪಿಸಬೇಕೆಂದೂ ಅದನ್ನು ಹಿಂಸೆಗೊಳಪಡಿಸಿದವರು ದೇಶದ್ರೋಹಿಗಳಾಗಿರುವುದರಲ್ಲಿಯೂ ಹಾಗೂ ಕೇವಲ ಒಂದು ಧರ್ಮದ ಅಭ್ಯಾಸ ಕ್ರಿಯೆಯಾಗಿದ್ದ 'ಯೋಗ'ದಂತಹವುಗಳನ್ನು ವೈವಿಧ್ಯಮಯ ಜನಾಂಗಗಳಿರುವ ಭಾರತದಲ್ಲಿ ಪ್ರತಿಯೊಬ್ಬರೂ ಆಚರಿಸ ಬೇಕು ಎಂಬುದರಲ್ಲಡಗಿದೆ ಭಾರತದ ನೈಜ ದೇಶಪ್ರೇಮ. ಮೊತ್ತದಲ್ಲಿ ಬಹುಸಂಖ್ಯಾತರಾಗಿರುವ ಹಿಂದೂಗಳ 'ಹಿಂದುತ್ವ'ದ ಎಲ್ಲಾ ತತ್ವಗಳನ್ನು ಆದರ್ಶವಾಗಿ ಅಂಗೀಕರಿಸಬೇಕು. ಇಲ್ಲದಿದ್ದವರು ಭಾರತವೆಂಬ 'ರಾಷ್ಟ್ರ' ಕಲ್ಪನೆಯಿಂದ ಹೊರಗುಳಿಯುತ್ತಾರೆ ಎಂಬಷ್ಟರಮಟ್ಟಿಗೆ ಮೃಗೀಯವಾಗಿದೆ ಜಾತ್ಯತೀತ ಭಾರತದ ದೇಶಪ್ರೇಮ. ಹೀಗೆ ರಾಷ್ಟ್ರೀಯತೆಯ ಪರಿಕಲ್ಪನೆ ಜಾತ್ಯತೀತ ದೃಷ್ಟಿಕೋನದಿಂದ ಬದಲಾಗಿ ಒಂದು ಪಂಗಡಕ್ಕೆ ಮಾತ್ರ ಸೀಮಿತವಾಗುವಲ್ಲಿಗೆ ಬದಲಾಗತೊಡಗಿದೆ.

❑ **ನವಾಜ್ ಇಸ್ಮಾಯಿಲ್,** ಕತ್ತಲೆಕಾಡು, ಮಡಿಕೇರಿ

* * *

**ಹಾಯ್ಕುಗಳು**

ಸಕ್ಕರೆಯನ್ನು ನೀಡಿ

ನಿದ್ದೆಯನ್ನು ಕಸಿದುಕೊಂಡಿತು

ಮುಪ್ಪು !

ಡಾ॥ ವಿ. ಪುಗಳೇಂದಿ

ಸಿರಗೊಪ್ಪ, ಬಳ್ಳಾರಿ

## ಭಾವೈಕ್ಯತೆಯೇ ದೇಶಪ್ರೇಮ

ಇತ್ತೀಚೆಗೆ ದೇಶಪ್ರೇಮದ ಬಗ್ಗೆ ನಡೆಯುತ್ತಿರುವ ಚರ್ಚೆಯಲ್ಲಿನ ಅಪಾರ್ಥಗಳು ಅನರ್ಥಕ್ಕೆ ಕಾರಣವಾಗುತ್ತಲಿವೆ. ನಮಗೆ ಆಗದವರ ಮೇಲೆ ದೇಶದ್ರೋಹದ ಆರೋಪ ಹೊರಿಸುವುದು ದೇಶಪ್ರೇಮ ಆಗಬಾರದು. ಈಗ ದೇಶಪ್ರೇಮವು ಸಹ ಪಕ್ಷ, ಧರ್ಮವನ್ನು ಅವಲಂಬಿಸಿದೆ.

ನಮ್ಮ ದೇಶದಲ್ಲಿ ಎಲ್ಲರಿಗೂ ಸಮಾನವಾದ ಹಕ್ಕುಗಳಿವೆ. ಸಾರ್ವಜನಿಕ ಜೀವನದಲ್ಲಿ ಪಾಲಿಸಬೇಕಾದ ಸಮಾನ ಕಾನೂನುಗಳಿವೆ. ಆದರೆ ಮದುವೆ, ವಿಚ್ಛೇದನ, ಮಕ್ಕಳ ಪೋಷಣೆ, ವಂಶಪರಂಪರೆ, ಆಸ್ತಿಹಂಚಿಕೆ, ವಾರಸುದಾರಿಕೆ ಮುಂತಾದ ವೈಯಕ್ತಿಕ ವಿಷಯಗಳಿಗೆ ಸಂಬಂಧಪಟ್ಟಂತೆ ಆಯಾ ಧಾರ್ಮಿಕ ಕಟ್ಟುಪಾಡು ಮತ್ತು ನೀತಿಯಂತೆ ಬೇರೆ ಬೇರೆ ವೈಯಕ್ತಿಕ ಕಾನೂನುಗಳಿವೆ. ಹೀಗೆ ಪ್ರತ್ಯೇಕ ಧರ್ಮ ನಂಬಿಕೆಗೆ ಅನುಗುಣವಾಗಿ ಇರುವ ಕಾನೂನುಗಳಲ್ಲಿ ಕೆಲವು ವಿಷಯಗಳಲ್ಲಿ ದೇಶದ ಸಾಂವಿಧಾನಿಕ ಹಕ್ಕುಗಳಿಗೆ ವಿರುದ್ಧವಾಗಿವೆ. ಈ ಹಿನ್ನೆಲೆಯಲ್ಲಿ ದೇಶದೊಳಗಿನ ಎಲ್ಲ ನಾಗರಿಕರಿಗೆ ಅವರ ಧರ್ಮ, ನಂಬಿಕೆಗಳನ್ನು ಹೊರತುಪಡಿಸಿದ ಸಮಾನವಾದ ಕಾನೂನುಗಳು ಇರಬೇಕು ಎಂಬ ಆಶಯದ ಪರಿಕಲ್ಪನೆಯೇ ಏಕರೂಪದ ನಾಗರಿಕ ಸಂಹಿತೆ.

ದೇಶದ ಅಲ್ಪಸಂಖ್ಯಾತರಿಗೆ ತಮ್ಮದೇ ಆದ ಧರ್ಮ, ಸಂಸ್ಕೃತಿ, ಸಂಪ್ರದಾಯಪಾಲನೆಗೆ ಅವಕಾಶ ನೀಡುವ ಸಂವಿಧಾನದ ೨೫–೨೮ನೇ ವಿಧಿ ಅನುಸಾರ ಧರ್ಮಾಧಾರಿತ ವೈಯಕ್ತಿಕ ಕಾನೂನುಗಳು ಅಸ್ತಿತ್ವಕ್ಕೆ ಬಂದಿವೆ. ಸಂವಿಧಾನ ರಚನೆ ಸಂದರ್ಭದಲ್ಲಿ ಸಾಕಷ್ಟು ಚರ್ಚೆಯಾಗಿ ವಿಶೇಷ ಧಾರ್ಮಿಕ ಅವಕಾಶವಾಗಿ ಈ ವಿಧಿಗಳನ್ನು ಅಳವಡಿಸಲಾಯಿತು. ಆದರೆ ಕಾಲ ಸರಿದಂತೆ, ಮಾನವ ಹಕ್ಕುಗಳು, ಮಹಿಳಾ ಹಕ್ಕುಗಳು ವಿಕಾಸ ಹೊಂದಿದ್ದು ಬದಲಾದ ಕಾನೂನು ಮತ್ತು ನಿಯಮಗಳು ಸಾಂಪ್ರದಾಯಿಕ ಧಾರ್ಮಿಕ ಕಾನೂನು ಮತ್ತು ನಂಬಿಕೆಗಳಿಗೆ ತದ್ವಿರುದ್ಧವಾಗಿವೆ. ಈ ಹಿನ್ನೆಲೆಯಲ್ಲಿ ವೈಯಕ್ತಿಕವಾಗಿ ಸಂವಿಧಾನ ನೀಡಿರುವ ಧರ್ಮಪಾಲನೆ, ಆಚರಣೆ, ಆರಾಧನೆಯ ಅವಕಾಶವನ್ನು ಹೊರತು ಪಡಿಸಿ ಮದುವೆ, ಆಸ್ತಿ, ವಿಚ್ಛೇದನ, ಮಕ್ಕಳ ಪೋಷಣೆ, ಉತ್ತರದಾಯಿತ್ವ ಮುಂತಾದ ವಿಷಯಗಳಲ್ಲಿ ದೇಶದಲ್ಲಿ ಎಲ್ಲರಿಗೂ ಸಮಾನ ಕಾನೂನು ಮತ್ತು ಹಕ್ಕುಗಳು ಬೇಕು ಎಂಬ ಧ್ವನಿ ಗಟ್ಟಿಯಾಗತೊಡಗಿದೆ. ದೇಶಪ್ರೇಮವು ಭಾವೈಕ್ಯತೆಯ ಹಿನ್ನೆಲೆಯಲ್ಲಿ ಬೆಳೆಯುತ್ತದೆ.

❑ **ಯು. ಎನ್. ಸಂಗನಾಳಮಠ,** ಹೊನ್ನಾಳಿ, ದಾವಣಗೆರೆ

* * *

## ಸಮಯಪ್ರಜ್ಞೆ, ಸಾಮಾಜಿಕಪ್ರಜ್ಞೆ ಅವಶ್ಯ

**ಮ**ಹಾಭಾರತ ನಡೆದ ಕಾಲ, ದ್ವಾಪರದ ಅಂತ್ಯವಾಗುತ್ತ ಕಲಿಯುಗದ ಆರಂಭವಾದ ಸಮಯ ಎಂದು ನಂಬಲಾಗಿದೆ. ಅಂದರೆ ಸುಮಾರು ಮೂರು ಸಾವಿರ ವರ್ಷಗಳ ಹಿಂದೆಯೇ ಮಾತೃಭಾಷೆ, ಮಾತೃಭೂಮಿಯ ಬಗ್ಗೆ ಅಭಿಮಾನವಿರುವ ವಿಷಯ ತಿಳಿದುಬರುತ್ತದೆ. ಬಹುಶಃ ಉಪನಿಷತ್ ಕಾಲದಲ್ಲಿಯೂ ಅಂದರೆ ಮಹಾಭಾರತ ಕಾಲಘಟ್ಟಕ್ಕಿಂತ ಮೊದಲೇ ಉಪನಿಷತ್ತಿನಲ್ಲಿ ಮಾತೃಭಾಷೆ, ಮಾತೃಭೂಮಿಯ ಬಗ್ಗೆ ಸಾಹಿತ್ಯವಿರಬಹುದು. ಆದರೆ ಅದು ನನಗೆ ತಿಳಿಯದು. ಆದರೆ ಪ್ರಾಚೀನ ಇತಿಹಾಸ ಕಾಲದಲ್ಲಿ, ಅಂದರೆ ರೋಮನ ಸಂಸ್ಕೃತಿ, ಗ್ರೀಕ್ ಸಂಸ್ಕೃತಿ, ಈಜಿಪ್ಟ್ ಸಂಸ್ಕೃತಿ, ಹಾಗೆ ಸಿಂಧೂ ಸಂಸ್ಕೃತಿಗೆ ಸಂಬಂಧಿಸಿದ ಸಾಹಿತ್ಯದಲ್ಲಿ ಮಾತೃಭಾಷೆ, ಮಾತೃಭೂಮಿಯ ಬಗ್ಗೆ ಅದರ ಅಭಿಮಾನದ ಬಗ್ಗೆ ಸಾಕಷ್ಟು ವರ್ಣನೆಗಳಿವೆ. ಆದ್ದರಿಂದ ತನ್ನ ತಾಯಿಭಾಷೆ, ತಾಯಿಭೂಮಿ ಬಗ್ಗೆ ಅಭಿಮಾನ ಮಾನವ ಸಹಜ ಗುಣವೆಂದು ತಿಳಿಯಬಹುದು.

ಇನ್ನು ದೇಶಪ್ರೇಮದ ವ್ಯಾಖ್ಯೆಯನ್ನು ನನ್ನ ಅನುಭವದ ಹಿನ್ನೆಲೆಯಲ್ಲಿ ವಿವರಿಸುವೆ. ನಾನು ಭಾರತ ಸ್ವತಂತ್ರವಾಗುವ ಮೊದಲೇ ಮುಂಬಯಿ ಪ್ರಾಂತದ ಕನ್ನಡ ಸೀಮೆಯಲ್ಲಿ ಹುಟ್ಟಿದವನು. ಮನೆಮಾತು ಕನ್ನಡವಾಗಿದ್ದರೂ ಮುಂಬಯಿ ಪ್ರಾಂತದ ಭಾಗವಾಗಿತ್ತು. ಅಲ್ಲಿ ಸವಣೂರ ಎಂಬ ಸಣ್ಣ ಸಂಸ್ಥಾನ. ಸಂಸ್ಥಾನಾಧಿಪತಿ ಮುಸ್ಲಿಮ್. ಆವಾಗ ನನ್ನ ನಾಡು ಸವಣೂರ ಸಂಸ್ಥಾನವಾಗಿತ್ತು. ಮುಂದೆ ದೇಶ ಸ್ವತಂತ್ರವಾಗಿ, ಭಾಷಾವಾರು ರಚನೆಯಾಗುವ ಮೊದಲು, ಈ ಭಾಗದಲ್ಲಿ ಕರ್ನಾಟಕ ಏಕೀಕರಣದ ಹೋರಾಟ ತೀವ್ರವಾಗಿತ್ತು. ಈ ಹಿನ್ನೆಲೆಯಲ್ಲಿ ಬಾಲ್ಯ ಕಳೆಯಿತು. ಮೊದಲಿನ ೨೦ ವರ್ಷ ಕನ್ನಡ ನಾಡಿನಲ್ಲಿ, ಧಾರವಾಡ ನಗರದಲ್ಲಿ ಬೆಳೆದೆ. ಕನ್ನಡ ಭಾಷೆಯೇ ಶ್ರೇಷ್ಠ ಭಾಷೆ ಅದಕ್ಕೆ ಸರಿಸಮನಾದ ಸಾಹಿತ್ಯ ಬೇರೊಂದಿಲ್ಲ ಎಂದು ತಿಳಿದೆ ಮುಂಬಯಿಗೆ ಬಂದೆ.

ಮುಂಬಯಿಯಲ್ಲಿ ನೌಕರಿ, ಜೊತೆ ಜೊತೆಗೆ ಕನ್ನಡ ಸೇವೆ; ಡೊಂಬಿವಿಲಿಯಲ್ಲಿ ಕನ್ನಡ ಶಾಲೆಯ ಸ್ಥಾಪನೆ, ಕನ್ನಡ ಸಂಘದ ಮೂಲಕ ನಾಡಹಬ್ಬದ ಆಚರಣೆ ಇವೆಲ್ಲವನ್ನೂ ಮಾಡುತ್ತಿರುವಾಗ ನಾನು ನನ್ನ ನಾಡಸೇವೆಯನ್ನು ಭಕ್ತಿಯಿಂದ ಮಾಡುತ್ತಿರುವೆ ಎಂಬ ಭಾವನೆ. ಇದೇ ಸಮಯದಲ್ಲಿ ಉಳಿದ ಭಾಷಿಕರು, ಪ್ರದೇಶದವರು ತಮ್ಮ ನಾಡಿನ ಭಾಷೆಯ ಸಂಸ್ಕೃತಿಯ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾಗ ಅವರನ್ನು ಗೌರವದಿಂದ ಕಾಣಬೇಕು ಎಂಬ ಮನಸ್ಸೇ ನನ್ನದಾಗಿರಲಿಲ್ಲ.

ಮುಂದೆ ಕಾರ್ಮಿಕ ಸಂಘದ ಸದಸ್ಯನಾಗಿ ನನ್ನ ದೇಶದ ಸಮೃದ್ಧಿ, ಏಳಿಗೆ ಸಮಾಜವಾದದಿಂದಲೇ ಎಂದು ನಂಬಿ ಹೋರಾಡಿದೆ. ನನಗೀಗ ೭೫ ವರ್ಷ. ಈ ಜೀವನದ ಸಂಜೆಯಲ್ಲಿ ನನಗೆ ತೋರಿದ್ದು ಹೀಗಿದೆ. ದೇಶಾಭಿಮಾನ, ರಾಷ್ಟ್ರಭಕ್ತಿ ಮುಂತಾದ ಶಬ್ದಗಳು ಅರ್ಥವಿಲ್ಲದ ಕೇವಲ ಕೆಲವು ಸ್ವಾರ್ಥಿಗಳು ತಮ್ಮ ಸ್ವಂತ ಲಾಭಕ್ಕಾಗಿ ಬಳಸುತ್ತಿರುವ ಪದಗಳು. ಸಮಾಜದ ಎಲ್ಲ ಸ್ತರಗಳಲ್ಲಿ, ಎಲ್ಲ ಕ್ಷೇತ್ರಗಳಲ್ಲಿ ಎಲ್ಲರೂ ಈ ಪದಗಳನ್ನು ಬಳಸುತ್ತಿರುವುದರಿಂದ ಈ ಪದಗಳು / ಶಬ್ದಗಳು ಅರ್ಥವನ್ನು ಕಳೆದುಕೊಂಡ ಸವಕಳಿ ನಾಣ್ಯವಾಗಿವೆ.

ರಾಜಕೀಯ ಕ್ಷೇತ್ರದಲ್ಲಿ ಈ ಪದಗಳ ದುರ್ಬಳಕೆ ಹೆಚ್ಚಾಗಿದೆ. ಹೆಚ್ಚಾಗುತ್ತದೆ. ಇದು ಸಮೃದ್ಧ ಸಮಾಜ ದೇಶ ಕಟ್ಟಲು, ಸಹಾಯಕವಾಗಲಾರದು. ಈಗ ನಮಗೆ 'ಬೇಕಿರುವುದು' ಸಮಯಪ್ರಜ್ಞೆ ಹಾಗೂ ಸಾಮಾಜಿಕ ಪ್ರಜ್ಞೆ. ಯಾವುದೇ ಅತಿರೇಕ ಸರಿಯಲ್ಲ. ಅವಶ್ಯಕತೆಗಿಂತ ಹೆಚ್ಚು ಸೇವಿಸಿದ ಆಹಾರವೂ ವಿಷವಾಗುತ್ತದೆ. ಇದು ದೇಶಪ್ರೇಮಕ್ಕೂ ಅನ್ವಯಿಸುತ್ತದೆ.

❑ **ಹ. ಶ್ರೀ. ಆಡೂರ,** ಮುಂಬಯಿ

* * *




## ನನ್ನ ರಾಷ್ಟ್ರಪ್ರೇಮದ ಪರಿ...

**ಯಾ**ವುದೇ ಪ್ರದೇಶವನ್ನು ವ್ಯಾಪ್ತಿಯಾಗಿಯೇ ನೋಡುತ್ತೇವೆ. ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯವಾಗಿಯೂ ಗುರುತಿಸುತ್ತೇವೆ. ಊರುಬಿಟ್ಟು ಪಟ್ಟಣಕ್ಕೆ ಬಂದಾಗ ಊರನ್ನು, ನಗರಕ್ಕೆ ಬಂದಾಗ ತಾಲೂಕನ್ನು ಅಂತರಜಿಲ್ಲೆಗೆ ಬಂದಾಗ ಜಿಲ್ಲೆಯನ್ನು ರಾಜ್ಯಕ್ಕೆ ವಲಸೆಹೋದಾಗ ಪ್ರಾದೇಶಿಕ ನಾಡನ್ನು ಹೇಳುತ್ತೇವೆ. ನನ್ನ ಅಸ್ತಿತ್ವವೇ ದೊಡ್ಡದು. ನನ್ನ ಜಾಗವೇ ಗುರುತರವಾದದ್ದು. ಭಾಷೆ, ಉಡುಪು, ಆಚರಣೆ ಯಾವುದೇ ಆಗಿರಲಿ ಅಲ್ಲಿನ ವೈಶಿಷ್ಟ್ಯತೆಯೇ ಜೀವಾಳ. ನನ್ನ ನಾಡು, ನನ್ನ ದೇಶ ಮೊದಲು. ನಂತರದ್ದು ದೇಶವಾಸಿಯ ವಿಚಾರ. ನನಗೆ ಜೀವಕೊಟ್ಟ ಜಾಗ, ನನಗೆ ಬದುಕು ನೀಡಿದ ತಾಣ, ನನಗೆ ಭವಿಷ್ಯದ ವ್ಯಾಪ್ತಿಯೂ ಇದೇ ಆಗಿದ್ದರಿಂದ ಮೊದಲ ಪ್ರಾಶಸ್ತ್ಯ ನನ್ನ ರಾಷ್ಟ್ರದ್ದು. ಹೀಗಾಗಿ ಸಹಜ ಸ್ವರೂಪ ರಾಷ್ಟ್ರಪ್ರೇಮವೇ ಆಗಿದೆ. ಪ್ರಜಾಪ್ರಭುತ್ವದ ದೇಶ ನಮ್ಮದಾಗಿದ್ದರಿಂದ ಬದಲಾವಣೆಯ, ಅಭಿವೃದ್ಧಿಯ, ಸುಧಾರಣೆಯ, ಆಕರ್ಷಣೀಯ ಒಲವನ್ನು ಇಟ್ಟುಕೊಳ್ಳುವುದು ಭಾರತೀಯನಾದ ನನಗೆ ಆಸಕ್ತಿಯ ವಿಚಾರ.

ಈಗಂತೂ ಶಿಕ್ಷಣದ ಹರವು ಹೆಚ್ಚಾಗಿರುವುದರಿಂದ ಓದುವ ಸೌಲಭ್ಯಗಳು ದೂರವಾಗಿರುವುದರಿಂದ ಅದರ ಬೆನ್ನಟ್ಟಿ ವಿಶ್ವದಲ್ಲೆಲ್ಲ ಸಂಚಾರ ಮಾಡಿದರೂ ವಿದೇಶದಲ್ಲೂ ಉದ್ಯೋಗ ಪಡೆದಿದ್ದೇನೆಂದರೆ ಅದಕ್ಕೆ ಮೂಲ ಬೇರೆ ಭಾರತ. ಅಲ್ಲಿ ನಾವು ನೀಡಬೇಕಾದ ದಾಖಲೆಯೂ ಭಾರತೀಯತೆ. ನಮ್ಮ ಗುರುತಿನ ಮಹತ್ವದ ದಾಖಲೆ ನೋಡಿಯೇ ಅಲ್ಲವೇ ಅಲ್ಲಿನವರಿಗೆ ನಮ್ಮ ಬಗ್ಗೆ ವಿಶ್ವಾಸ, ಅಭಿಮಾನ ಬರುವುದು. ಹೀಗಾಗಿ ನಾ ಎಲ್ಲೇ ಇರಲಿ ದೇಶವಾಸಿಯಾಗಿದ್ದರೂ ಸಹ ಭಾರತೀಯನೇ. ಪ್ರಜಾಪ್ರಭುತ್ವದ ಆಡಳಿತಕ್ಕೂ ನಮ್ಮದೇ ಬೆಂಬಲ, ಸಹಕಾರ, ಸಹಮತ. ಅದು ಇಲ್ಲದೇ ಹೋದರೆ ಯಾವುದೇ ಸ್ಥಾನ, ಮಾನ, ಉದ್ಯೋಗ, ಗೌರವ, ಸಿಗಲಿಕ್ಕೆ ಸಾಧ್ಯವಾಗದು.

ಇಂದು ದೇಶ ವಿದೇಶ ಎಲ್ಲೇ ಸುತ್ತಿದ್ದರೂ ಅದರ ಮೂಲ ಭಾರತೀಯತೆಯೇ ಆಗಿದೆ. ವೈದ್ಯವಿಜ್ಞಾನಿ, ಇಂಜಿನಿಯರ್, ತಜ್ಞ, ಪರಿಸರಜ್ಞಾನಿ, ಕಲೆ, ಸಾಹಿತ್ಯ, ಸಂಗೀತ, ಕ್ರೀಡೆ, ರಾಜಕೀಯ, ಸಮಾಜ, ಕಾಳಜಿ ಯಾವುದೇ ಮಹತ್ತರ ವಾದುದನ್ನು ಸಾಧಿಸಿದ್ದರೂ ಅದರ ಹಿರಿಮೆ ಗರಿಮೆ ನಾಡನ್ನೂ ದಾಟಿ ವಿಶ್ವವನ್ನು ತಲುಪಬಲ್ಲದು. ನಾನು ಇಲ್ಲಿ ಕೂಲಿ, ಕಾರ್ಮಿಕ, ವ್ಯಾಪಾರಿ, ಅಧಿಕಾರಿ, ನೌಕರ, ಏನೇ ಇದ್ದರೂ ಸಹ ನನ್ನ ದೇಶವೇ ಆಗಿದೆ. ಅದು ಭಾರತೀಯನೆಂಬ ಹೆಮ್ಮೆಯಿಂದ. ಈ ದೇಶಕ್ಕೆ ಯಾರೋ ಎಲ್ಲಿಂದಲೋ ಬಂದಿದ್ದರೂ ಇಲ್ಲಿನ ಅನ್ನ, ನೀರು, ಗಾಳಿ, ವಸತಿ ಭಾರತದ್ದೆಂಬ ಅರಿವು ಅವರಲ್ಲಿರಬೇಕು.

ಈ ದೇಶದಲ್ಲಿ ಇರಬೇಕಾದಷ್ಟು ಅವಧಿಯೂ ಭಾರತೀಯನಾಗಿಯೇ ಬದುಕುವುದು ಆತನ/ಆಕೆಯ ಕರ್ತವ್ಯ ಆಗಿದೆ. ನಾವು ಏನನ್ನೇ ದ್ವೇಷಿಸಿದರೂ ಅಸ್ತಿತ್ವವನ್ನು ನಿರಾಕರಿಸುವಂತಿಲ್ಲ. ಅಲ್ಲಿ ಮೂಲವಿದೆ. ಹುಟ್ಟಿನ ಹೆಮ್ಮೆಯಿದೆ. ಬೆಳೆದ ಪರಿಸರದ ಸಂತಸವಿದೆ. ಹಾರೈಕೆ ನೀಡಿದ ಹಿರಿಯರ ಪಡೆಯಿದೆ. ದೇಶಕ್ಕೆ ಕೊಡುಗೆ ನೀಡಿದ ಮಹಾನುಭಾವರಿದ್ದಾರೆ. ನಿತ್ಯವೂ ಸ್ಫೂರ್ತಿ ನೀಡುವ ತಾಣಗಳಿವೆ. ಮಹನೀಯರುಗಳು ಇದ್ದಾರೆ. ನಾನು ಇಲ್ಲಿ ತಿರಸ್ಕರಿಸಬೇಕಾದ್ದು ದ್ವೇಷ, ಅಸೂಯೆ, ಆಮಿಷೆ, ಕಷ್ಟ, ನೋವುಗಳನ್ನು. ಬದುಕಿಗೆ ಸಿಕ್ಕ ಅವಕಾಶಗಳ ಪಡೆದುಕೊಂಡು ಧನ್ಯತೆ ಒಡಮೂಡುವುದು ನಾನು ಕೃತಜ್ಞತೆಯಿಂದ ಬಾಳಬೇಕಾದ್ದು. ಇದು ನನ್ನ ದೇಶ.

❑ **ಅಕ್ಬರ್ ಸಿ. ಕಾಲಿಮಿರ್ಚಿ,** ಭಾಗ್ಯನಗರ, ಕೊಪ್ಪಳ ■

